# ವೀರ ಮಾತೆ

ಸಂಪುಟ ೮ ] ಜೂನ-ಜುಲೈ ೧೯೫೯ [ ಸಂಚಿಕೆ ೧-೨

## 'VEERAMATE' WOMEN'S VOICE

The Largest Circulated

KANNADA MONTHLY

---

ರಜಿಸ್ಟ್ರೇಶನ್ ಆಫ್ ನ್ಯೂಜ ಪೇಪರ್ಸ (ಸೆಂಟ್ರಲ್) ರೂಲ್ಸ ೧೯೫೬ರ ೮ನೇ ನಿಯಮಕ್ಕೆ ಸಂಬಂಧಿಸಿದಂತೆ "ವೀರಮಾತೆ" ಮಾಸಪತ್ರಿಕೆಯ ಸ್ವಾಮಿತ್ವ ಮತ್ತು ಇತರ ವಿಷಯಗಳ ಬಾಬತ ವಿವರ: —

| | |
|---|---|
| ೧. ಪ್ರಕಾಶನ ಸ್ಥಳ— | ವನಿತಾ ಸೇವಾ ಸಮಾಜ ಧಾರವಾಡ. |
| ೨. ನಿಯಮಿತ ಕಾಲಿಕತೆ— | ಮಾಸಪತ್ರಿಕೆ |
| ೩. ಮುದ್ರಕರ ಹೆಸರು— | ರಾಮರಾವ ಕುಲಕರ್ಣಿ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವೀರಮಾತೆ ಕಾರ್ಯಾಲಯ ಧಾರವಾಡ |
| ೪. ಪ್ರಕಾಶಕರ ಹೆಸರು— | ಲ. ರಂ. ಪುರಾಣೀಕ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವನಿತಾ ಸೇವಾ ಸಮಾಜ ಧಾರವಾಡ |
| ೫. ಸಂಪಾದಕರ ಹೆಸರು— | ಸರೋಜನಿ ಮಹಿಷಿ ಎಮ್. ಎ. ಎಲ್ಎಲ್. ಬಿ. |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ಲೈನಬಝಾರ ಧಾರವಾಡ |
| ೬. ಪತ್ರಿಕಾ ಸ್ವಾಮಿತ್ವ ವಿಳಾಸ— | ಕಾರ್ಯಕಾರಿ ಮಂಡಳ |
| ಮತ್ತು ಬಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ— | ವನಿತಾ ಸೇವಾ ಸಮಾಜ ಧಾರವಾಡ |

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣೀಕನಾದ ನಾನು ಮೇಲಿನ ವಿವರಗಳಲ್ಲಿಯ ಎಲ್ಲ ವಿಷಯಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣೀಕ.

---

# ಪರಿವಿಡಿ

# ಸಾರ್ವಜನಿಕ ಸೊತ್ತಿನ ದುರ್ವಿನಿಯೋಗ

( ಬರೆದು ಬಂದುದು )

ನಮ್ಮ ದೇಶದಲ್ಲಿ ನೀತಿಯು ನೆಲೆಗಟ್ಟು ಉಚ್ಚವುಟ್ಟ ದ್ದಿರದೆ ಸಾರ್ವಜನಿಕನಾದ ಸೊತ್ತಿನ ಅಪಹಾರ ಇಲ್ಲವೆ ದುರ್ವಿನಿಯೋಗವಾಗುತ್ತಿರುವದನ್ನು ನಾವು ನಮ್ಮ ದೇಶದಲ್ಲಿ ಪ್ರತಿನಿತ್ಯ ಕಾಣುತ್ತಲಿದ್ದೇವೆ. ಇದನ್ನು ತಡೆಗಟ್ಟುವದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ. ನಾಗರಿಕರ ಮುಖವಾಗಿರುವ ಪತ್ರಿಕೆಗಳವರಿಗೆ ಇದು ಆದ್ಯ ಕರ್ತವ್ಯವೇ ಆಗಿದೆ. ನಮ್ಮ ಕೇಳಿಕೆಯಲ್ಲಿ ಬಂದ ಇಂತಹ ದುರ್ವಿನಿಯೋಗ ನಡೆವುತ್ತಿರುವದರ ಬಗ್ಗೆ ನಾವಿಲ್ಲಿ ಸಾರ್ವಜನಿಕರ ಹಾಗೂ ಸರಕಾರದ ಲಕ್ಷ್ಯವನ್ನು ಸೆಳೆಯ ಬಯಸುತ್ತೇವೆ.

ಉತ್ತರ ಕರ್ನಾಟಕದಲ್ಲಿ ರಾಜ್ಯ ಪುನರ್ವಿಂಗಡನೆಯ ಪೂರ್ವದಲ್ಲಿ ಶಿಕ್ಷಣ ಶಾಖೆಯ ಮೇಲಾಧಿಕಾರಿಗಳಾಗಿದ್ದ ದಿವಂಗತ ಮಹಿಳೆ ಶ್ರೀಮತಿ ಕಮಲಾಬಾಯಿ ಜಮಖಂಡಿ ಅವರು "ಸಮಾಜದಿಂದು ಬೀಗಳೆದಿರುವಹೆಂಣುಮಕ್ಕಳ ಬಗೆಗೆ ನೊಂದು ಅವರ ಏಳ್ಗೆಯ ಸಲುವಾಗಿ ತಮ್ಮ ಆಸ್ತಿಯನ್ನೆಲ್ಲ (ಇದು ಸುಮಾರು ಇಪ್ಪತ್ತೈದು ಸಾವಿರ ರೂಪಾಯಿ ಬೆಲೆ ಬಾಳುವದು) ವಿನಿಯೋಗಿಸುವ"ದೆಂದು ತಾವು ಸಾಯುವ ಪೂರ್ವದಲ್ಲಿ ಮೃತ್ಯು ಪತ್ರವನ್ನು ಬರೆದಿಟ್ಟಿರುವರು. ಆದರೆ ಮೃತ್ಯುಪತ್ರದಲ್ಲಿ ದಿವಂಗತ ಮಹಿಳೆಯಿಂದ ಸೂಚಿತವಾದ ಘನೋದ್ದೇಶಕ್ಕಾಗಿ ಮೃತ್ಯುಪತ್ರದ ಸೊತ್ತಿನ ವಿನಿಯೋಗವಾಗುತ್ತಿರದೆ ವ್ಯಕ್ತಿಗತವಾಧ ಉಪಯೋಗಕ್ಕೆಳೆಸುವದರತ್ತ ಸರಕಾರವಾಗಲಿ ಸಾರ್ವಜನಿಕರಾಗಲಿ ಗಮನವನ್ನೀಯದಿರುವದು ವಿವಂಚನೀಯವಾಗಿದೆ.

ಮೃತ್ಯುಪತ್ರಕರ್ತಳಾದ ದಿವಂಗತ ಮಹಿಳೆ ಶ್ರೀಮತಿ ಕಮಲಾಬಾಯಿ ಜಮಖಂಡಿ ಅವರು ತಮ್ಮ ಒಬ್ಬಳೇ ಒಬ್ಬ ಸಂಬಂಧಿಕಳಾದ ತಾಯಿ ಶ್ರೀಮತಿ ಯಮುನಾಬಾಯಿ ವೆಂಕಟರಾವ ಕುಕನೂರ ಅವರ ಉದರ ನಿರ್ವಹಣೆಗಾಗಿ ತಮ್ಮ ಆಸ್ತಿಯ ಉತ್ಪನ್ನದ ಕೆಲ ಅಂಶವನ್ನು ಮಾತ್ರ ನಿರ್ದೇಶಿಸಿ ಉಳಿದೆಲ್ಲವನ್ನು ಹೆಣ್ಣುಮಕ್ಕಳ ಏಳ್ಗೆಗಾಗಿ ಪರಿಶ್ರಮಿಸುತ್ತಲಿರುವ ಇಲ್ಲಿಯ ಸಂಸ್ಥೆಯೊಂದಕ್ಕೆ ಕೊಡಮಾಡುವದೆಂದು ನಿರ್ದಿಷ್ಟಪಡಿಸಿರುವರು. ಆದರೆ ಸ್ವಾರ್ಥ ಲೋಲುಪತೆಯಿಂದ ತಾಯಿಯು ಮೃತ್ಯುಪತ್ರಕಳಾದ ತನ್ನ ಮಗಳ ಆಸ್ತಿಯನ್ನೆಲ್ಲ ಮೃತ್ಯುಪತ್ರಾಧಿಕಾರಿಗಳ ಪುಸಲಾವಣೆಯಿಂದ ತಾನೇ ಉಪಭೋಗಿಸುತ್ತಿರುವಳೆಂದು ಕೇಳುತ್ತೇವೆ. ಮೃತ್ಯುಪತ್ರದ ಸೊತ್ತಿನಲ್ಲಿ ಈಗಾಗಲೆ ಕೆಲವೊಂದನ್ನು ಬೇರೆಯವರಿಗೆ ಮಾರಾಟ ಮಾಡಿದ್ದು ಉಳಿದುದನ್ನೂ ಮಾರುವ ಹವಣಿಕೆಯಲ್ಲಿ ಇದ್ದಾರೆ ಎಂದೂ ಕೇಳಿದ್ದೇವೆ. ಇದು ನಿಜಕ್ಕೂ ನಾಡಿನ ಹೆಣ್ಣುಮಕ್ಕಳ ಹಿತಕ್ಕೆ ವಿಷಘಾತುಕವಾಗಿದೆ. ಹೆಣ್ಣುಮಕ್ಕಳ ಏಳ್ಗೆಯ ಬಗೆಗೆ ಮಗಳಿಗಿದ್ದ ವಿಶಾಲವಾದ ಹೃದಯ ತಾಯಿಗಿಲ್ಲದೆ ಸಂಕುಚಿತವಾಗಿ ವರ್ತಿಸುತ್ತಿರುವದು ಸೋಜಿಗದ್ದಾಗಿದೆ. ಮಗಳ ಮೇಲ್ಪಂಕ್ತಿಯನ್ನು ತಾಯಿ ಶ್ರೀಮತಿ ಯಮುನಾಬಾಯಿ ಇನ್ನಾದರೂ ಅನುಸರಿಸುವಂತೆ ಸಾರ್ವಜನಿಕರು ಅವರನ್ನು ಒತ್ತಾಯಿಸಬೇಕೆಂದು ಬಯುಸುವದಲ್ಲದೆ ಮೃತ್ಯುಪತ್ರದ ಆಸ್ತಿಯ ಮಾರಾಟ ಮುಂತಾದ ಬಗೆಯ ವಿಲೇವಾಟೆಗೆ ಸಹಾಯಕರಾದವರನ್ನು ಹಾನಿಗೊಳಗಾಗುವಿರೆಂದು ಈ ಮೂಲಕ ಎಚ್ಚರಿಸಬಯಸುತ್ತೇವೆ. ಸಾರ್ವಜನಿಕ ಸೊತ್ತಿನಾಶೆಗೆ ಒಳಗಾದವರು ಇಂದಿಲ್ಲ ನಾಳೆಯಾದರೂ ಹಾನಿಗೀಡಾಗದಿರರು.

ದಿವಂಗತ ಮಹಿಳೆಯಿಂದ ಮೃತ್ಯುಪತ್ರದಲ್ಲಿ ಉಲ್ಲೇಖಿತವಾದ ಉದ್ದೇಶ ಹೆಣ್ಣುಮಕ್ಕಳೇಳ್ಗೆಯ ಸಲುವಾಗಿ ದುಡಿವುತ್ತಿರುವ ಸಂಸ್ಥೆಗಳು ಧಾರವಾಡದಲ್ಲಿ ಹಲವಾರು ಇವೆ. ಈ ಘನೋದ್ದೇಶದ ಸಿದ್ಧಿಗಾಗಿಯೇ ಇಲ್ಲಿ ವನಿತಾ ಸೇವಾ ಸಮಾಜವು ೩೦ ವರುಷಗಳ ಹಿಂದೆಯೆ ಸ್ಥಾಪಿತವಾಗಿ ಪ್ರಶಂಸನಾರ್ಹವಾದ ಪ್ರಗತಿಯನ್ನು ಸಾಧಿಸಿರುವದು ನಾಡಿನಲ್ಲಿ ಎಲ್ಲರಿಗೂ ವಿದಿತವಾಗಿದೆ. ಜಾತಿ-ಮತ-ಪಂಥ ಮುಂತಾದ ಕುರುಡು ಭೇದಗಳನ್ನು ಕಡೆಗಣಿಸಿ ಹೆಣ್ಣುಮಕ್ಕಳೆಲ್ಲರ ಅದರಲ್ಲೂ ಬಡವರ ಏಳ್ಗೆಯನ್ನೆ ಗುರಿಯಾಗಿಸಿ ಶ್ರಮಿಸುವ ಸಂಸ್ಥೆ ಇದಾಗಿದೆ. ಮೃತ್ಯುಪತ್ರದಲ್ಲಿ ಕಾಣಿಸಲಾದ ಬಗೆಗಳ ಹೆಣ್ಣುಮಕ್ಕಳೂ ಈ ಸಂಸ್ಥೆಯಲ್ಲಿ (ವನಿತಾ ಸೇವಾ ಸಮಾಜದಲ್ಲಿ) ಇರುವರು. ಆದ್ದರಿಂದ ದಿವಂಗತ ಮಹಿಳೆಯ ಸದುದ್ದೇಶವು ಈಡೇರುವಂತೆ ಮೃತ್ಯುಪತ್ರದ ಸೊತ್ತೆಲ್ಲವು ಕರಾರುವಾಕ್ಕಾಗಿ ಈ ವನಿತಾ ಸೇವಾ ಸಮಾಜಕ್ಕೆಯೇ ಸಲ್ಲುವಂತೆ ಸಾರ್ವಜನಿಕರು ಸರಕಾರವನ್ನು ಒತ್ತಾಯಿಸಬೇಕು. ಸರಕಾರವು ಯೋಗ್ಯ ತನಿಖೆ ನಡೆಯಿಸಿ ಸಾರ್ವಜನಿಕ ಸೊತ್ತಿನೊಂದರ ದುರ್ವಿನಿಯೋಗವಾಗುತ್ತಿರುವದನ್ನು ಕೂಡಲೆ ತಡೆಯಬೇಕು. (೨೫-೫-೫೯ರ "ತ್ರಿಶೂಲ"ದಿಂದ)

# ವೀರಮಾತೆ







ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಾದ
ಕನ್ನಡ ಮಾಸಪತ್ರಿಕೆ

ಸಂಪುಟ ೮ | ಜೂನ-ಜುಲೈ ೧೯೫೯ | ಸಂಚಿಕೆ ೧-೨



## ಸಂಪಾದಕೀಯ



'ಸರಲಾ ಬಿ. ಎ. ಆಗಿ ಮನೆಯಲ್ಲಿಯೇ ಕೂತಿದ್ದಾಳೆ. ಹುಡುಗನಿಗಾದರೂ ಕಲಿಸಿದ್ದರೆ ಬೇರೆ ಕಡೆಗೆ ಹೋಗಿ ನೌಕರಿ ಮಾತಾಡುತ್ತಿದ್ದ. ಈ ಹುಡಿಗೆಯರಿಗೆ ಕಲಿಸಿದರೆ ಏನು ಬಂತು'? ಇನ್ನೂ ಮಧ್ಯಮವರ್ಗದ ಕುಟುಂಬದಲ್ಲಿ ಈ ಮಾತು ಸಾಮಾನ್ಯವಾಗಿ ಕೇಳಬರುತ್ತದೆ. ಕಲಿತ ಹುಡಿಗೆ ಎಲ್ಲಿ ಬೇಕಾದರೂ ಹೋಗಿ ಕೆಲಸ ಮಾಡಲಿ ಅನ್ನುವಷ್ಟು ನಮ್ಮ ಸಮಾಜವಿನ್ನೂ ಮುಂದುವರಿದಿಲ್ಲ. ಹುಡಿಗೆಯರನ್ನು ಕಳಿಸುವ ಸಮಾಜ, ಅವರನ್ನು ಸ್ವಾಗತಿಸುವ ಸಮಾಜ ಎರಡೂ! ಏನೂ ಅರಿಯದ ಮಹಿಳೆಯಂತೆ ಶ್ರಮಪಟ್ಟು ಓದಿದ ಮಹಿಳೆಯೂ ಪುನಃ ಶ್ರಮವಹಿಸಿ ದುಡಿಯಲು ಮೂಗು ಮುರಿದರೆ, ಸಮಾಜದ ಮೇಲೆ ಅದರ ಪ್ರತಿಕ್ರಿಯೆ ಏನಾದೀತು!

ಸ್ತ್ರೀಯೇ ಶಕ್ತಿ ಎಂದು ಪೂಜೆಗೊಳ್ಳುತ್ತಿರುವ ಕಾಲ ಒಂದಿತ್ತು ಹಿಂದೂ ಸಂಸ್ಕೃತಿಯಲ್ಲಿ! ಎಷ್ಟೋ ಜನ ಪುರುಷರೂ ನಿರುದ್ಯೋಗಿಗಳಾಗಿರುವಾಗ ಸ್ತ್ರೀಯರಿಗೆಂತು ಉದ್ಯೋಗವನ್ನು ಕಲ್ಪಿಸಿ ಕೊಡುವದು ಇದೊಂದು ಸಮಸ್ಯೆ ಈಗಲೂ ಕೂಡ. ಸ್ತ್ರೀಯರು ಅನೇಕ ಉದ್ಯೋಗಗಳಲ್ಲಿ ತೊಡಗಿ ಪುರುಷರನ್ನು ನಿರುದ್ಯೋಗಿಗಳನ್ನಾಗಿ ಮಾಡುತ್ತಾರೆ ಎಂಬ ದೂರು ಬೇರೆ. ಪತ್ನಿ ಯಾವುದೊಂದು ಉದ್ಯೋಗದಲ್ಲಿದ್ದರೆ ನಿರುದ್ಯೋಗಿಯಾದ ಪತಿ,ಪತ್ನಿಯು ದುಡಿಯುವದು ತನ್ನ ಗೌರವಕ್ಕೆ ಕುಂದೆಂದು ತಿಳಿದು, ಆ ಉದ್ಯೋಗವನ್ನು ಕೂಡಲೆ ಬಿಡುವಂತೆ ಪತ್ನಿಗೆ ಆಜ್ಞೆ ಮಾಡುವದೂ ಇದೆ. ಮನೆಯ ಹೊರಗೂ ಒಳಗೂ ಅವಳೇ ಉದ್ಯೋಗವನ್ನು ಮಾಡಲಿ ಎಂದು ಪತ್ನಿಗೆ ಸ್ವಾತಂತ್ರ್ಯ ಕೊಡುವವರೂ ಇದ್ದಾರೆ!

ದೇಶದ ಜನಬಲದ ಉಪಯೋಗವನ್ನೆಲ್ಲ ಮಾಡಿಕೊಳ್ಳುವಷ್ಟು ಶಕ್ತಿ ರಾಷ್ಟ್ರಕ್ಕಿರಬೇಕು. ಜನಬಲವಿದ್ದಾಗಲೇ ಇನ್ನುಳಿದ ಬಲದ ಉಪಯೋಗವಾದೀತು! ರಾಷ್ಟ್ರವು ಕೈಕೊಳ್ಳಲಿರುವ ವಿವಿಧ ಯೋಜನೆಗಳ ಲೆಕ್ಕ ಹಾಕಿದಾಗ, ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಶಿಕ್ಷಣ,

ಆರೋಗ್ಯ, ಸಮಾಜ ಸೇವೆ ಎಲ್ಲ ಕ್ಷೇತ್ರಗಳಲ್ಲೂ ಶಿಕ್ಷಣ ಪಡೆದ ಮಹಿಳೆಯರ ಕೊರತೆ ಬಹು ದೊಡ್ಡ ಪ್ರಮಾಣದಲ್ಲಿ ಕಂಡು ಬರುತ್ತದೆ. ಆರೋಗ್ಯದ ಕ್ಷೇತ್ರದಲ್ಲಿ ೫೯೦೦೦ ಮಹಿಳೆಯರ ಕೊರತೆ ಕಾಣು ಬಂದಿದೆ. ಅದೇ ರೀತಿ ಪ್ರಾಥಮಿಕ ಶಿಕ್ಷಣ ದಲ್ಲಿ ೬-೧೧ ವರ್ಷದ ವರೆಗಿನ ಮಕ್ಕಳೆಲ್ಲ ಶಾಲೆಗೆ ಹೋಗಲು ಪ್ರಾರಂಭಿಸಿದರೆ ೧೭೦,೦೦೦ ತರಬೇತಿ ಹೊಂದಿದ ಶಿಕ್ಷಿಕೆಯರ ಕೊರತೆಯಾಗುತ್ತಿದೆ. ಆದರೆ ಅದಕ್ಕೂ ಮೊದಲು ೬-೧೧ ವರ್ಷದ ವರೆಗಿನ ಮಕ್ಕಳೆಲ್ಲ ಶಾಲೆಗೆ ಹೋಗಬೇಕಲ್ಲ ಎಂಬ ಪ್ರಶ್ನೆ ಏಳುತ್ತದೆ. ಜನತೆಯ ಮನಸ್ಸಿನಲ್ಲಿ ಶಿಕ್ಷಣ, ಆರೋಗ್ಯ ಗಳ ಬಗ್ಗೆ ಯೋಗ್ಯ ತಿಳುವಳಿಕೆಯನ್ನುಂಟು ಮಾಡಲು, ಅವರ ಜೀವನಕ್ರಮದಲ್ಲಿ ಪರಿವರ್ತನೆಯಾಗುವಂತೆ ನೋಡಿ ಕೊಳ್ಳಲು ಸಾಮಾಜಿಕ ಕ್ರಾಂತಿಯಾಗಬೇಕು. ಸಾಮಾಜಿಕ ರಂಗದಲ್ಲಿ ವಿವಿಧ ಕಲ್ಯಾಣ ಯೋಜನೆಗಳಲ್ಲಿ ಕಾರ್ಯ ಮಾಡುವ ಮಹಿಳೆಯರ ಕೊರತೆ ಇನ್ನೂ ತುಂಬ ಇದೆ. ಮೂರನೆಯ ಪಂಚವಾರ್ಷಿಕ ಯೋಜನೆಗಳಲ್ಲಿ ಕಾರ್ಯ ಮಾಡುವ ಮಹಿಳೆಯರ ಕೊರತೆ ಇನ್ನೂ ತುಂಬ ಇದೆ. ಮೂರನೆಯ ಪಂಚವಾರ್ಷಿಕ ಯೋಜನೆಯಲ್ಲಿ ೧೦೨,೦೦೦ ಸಾಮಾಜಿಕ ಕಾರ್ಯಕರ್ತ್ರಿಯರ ಅವಶ್ಯಕತೆಯಿದೆ.

ಅದೇ ರೀತಿ ಗ್ರಾಮೀಣ ಕೈಗಾರಿಕೆ ಕ್ಷೇತ್ರದಲ್ಲಿ ದೊರೆವ ಕಚ್ಚಾ ಮಾಲಿನ ಸದುಪಯೋಗ ಮಾಡಿಕೊಂಡು ಹಳ್ಳಿಗರ ಕುಟುಂಬದ ಆರ್ಥಿಕ ಸ್ಥಿತಿಯನ್ನು ಸುಧಾರಿಸಲು ದುಡಿವ ಮಹಿಳೆಯರ ಸಂಖ್ಯೆ ೬೦,೦೦೦ ಕ್ಕೆ ಮಿಕ್ಕಿ ಬೇಕಾಗಿದೆ.

ತರಬೇತಿ ಪಡೆದವರು ಬೇಕಾಗಿದ್ದಾರೆ ಎಂಬ ಕೂಗು ಒಂದೆಡೆ, ತರಬೇತಿ ಪಡೆದು ಮನೆಯಲ್ಲಿ ಕುಳಿತಿದ್ದಾರೆ, ಉದ್ಯೋಗವೇ ಇಲ್ಲ ಎಂಬ ಮಾತು ಇನ್ನೊಂದೆಡೆ, ಯೋಗ್ಯ ಸಂಘಟನೆ ಪ್ರಾಮಾಣಿಕತೆಗಳಿಲ್ಲದೆ, ಯಾವ ಕಾರ್ಯವಾದರೂ ಯಶಸ್ವಿಯಾಗದು. ಸಮಾಜದಲ್ಲಿ ಬಹುಸಂಖ್ಯಾಕರಾದ ಮಧ್ಯಮವರ್ಗದ ಮಹಿಳೆಯರಾದರೂ ಎಚ್ಚತ್ತರೆ ಸಂಘಟನೆ ಯಾದೀತು !

---

# ಜಗತ್ ಪ್ರಸಿದ್ಧ ಕವಿವರ್ಯ ರವೀಂದ್ರನಾಥ ಟಾಗೋರರವರ ಗೀತಾಂಜಲಿಯ ಅನುವಾದ

( ಸಂಗ್ರಹ )

ಇದೇ ಬರಲಿರುವ ಆಗಸ್ಟ ೭ ರಂದು ಜಗತ್ ಪ್ರಸಿದ್ಧ ಕವಿವರ್ಯ ರವೀಂದ್ರನಾಥರ ದಿನಾಚರಣೆ ಅವರ ನೆನಪಿನ ಕುರುಹಾಗಿ ನೋಬೆಲ್ ಬಹುಮಾನ ಪಡೆದ ಅವರ ಕೃತಿ ಗೀತಾಂಜಲಿಯ ಕೆಲವು ಪದ್ಯಗಳ ಅನುವಾದವನ್ನಿಲ್ಲಿ ಕೊಡಲಾಗಿದೆ. ಅನುವಾದಗಳ ಹಿಂದೆ ಹಾಕಿದ ಅಂಕೆಯು ಗೀತಾಂಜಲಿಯೊಳಗಿನ ಪದ್ಯಗಳ ಅಂಕೆ ಕೆಲವು ಪದ್ಯಗಳ ಅನುವಾದಗಳನ್ನು ಈ ಮೊದಲೇ ವೀರಮಾತೆಯ ಬೇರೆ ಬೇರೆ ಸಂಚಿಕೆಗಳಲ್ಲಿ ಪ್ರಸಿದ್ಧಿಸಲಾಗಿದೆ.

ಸ. ಸಂ.



೧. ನೀನು ನನ್ನನ್ನು ಅಂತವಿಲ್ಲದನಾಗಿ ಮಾಡಿರುವಿ, ಇದು ನಿನ್ನ ಲೀಲೆ. ಈ ಬಳಿಕಾಣುವ ಪಾತ್ರೆಯನ್ನು ಪುನಃ ಪುನಃ ಬರಿದು ಮಾಡಿ ಯಾವಾಗಲೂ ಹೊಸ ಚೈತನ್ಯದಿಂದ ತುಂಬುವಿ.

ಗಲಗಿನಿಂದ ಮಾಡಿದ ಈ ಸಣ್ಣಸಣ್ಣ ಕೊಳಲನ್ನು ಗಿರಿಕಂದರದೊಳಗೊಯ್ದು, ಅದರೊಳಗಿಂದ ಯಾವಾಗಲೂ ಹೊಸ ಹೊಸ ರಾಗಗಳನ್ನು ಹೊರಡಿಸುವಿ.

ನಿನ್ನ ಕೈಗಳ ದಿವ್ಯಸ್ಪರ್ಶದಿಂದ ನನ್ನ ಸಣ್ಣ ಹೃದಯದಲ್ಲಿ ಆನಂದವು ಮಿತಿಮೀರಿ ತುಂಬಿತುಳುಕಿ, ಮಂಜುಳ ಗೀತರೂಪದಿಂದ ಹೊರಬೀಳುವದು.

ನಿನ್ನ ಅಗಣಿತ ಪ್ರಸಾದಗಳೆಲ್ಲ ಈ ನನ್ನ ಅತಿ ಸಣ್ಣ ಕೈಗಳಲ್ಲಿಯೇ ಬರುವವು. ಎಷ್ಟೋ ವರ್ಷಗಳು ಸಾಗಿ ಹೋದರೂ ನೀನು ಒಂದೇಸವನೇ ಸುರಿಯುತ್ತಿರುವಿ. ಅದಾಗ್ಯೂ ತುಂಬಲಿಕ್ಕೆ ಇನ್ನೂ ಸ್ಥಳವಿದೆ.

೨. ನೀನು ನನಗೆ ಹಾಡಲಿಕ್ಕೆ ಅಪ್ಪಣೆಕೊಟ್ಟಾಗ್ಗೆ ನನ್ನ ಹೃದಯವು ಅಭಿಮಾನದಿಂದ ಉಬ್ಬಿ ಒಡೆಯುವದೋ ಎಂಬ ಭೀತಿ ನನಗೆ. ನಿನ್ನ ಮೋರೆಯ ಕಡೆಗೆ ನೋಡಿದ ಕೂಡಲೇ ಕಣ್ಣುಗಳಲ್ಲಿ ನೀರು ತುಂಬುವವು.

ನನ್ನ ಜೀವನದೊಳಗಿನ ಎಲ್ಲ ಕಾಠಿಣ್ಯವೂ, ವಿರೋಧಭಾವವೂ ಕರಗಿ ಮಧುರವಾದ ಸಮರಸವಾಗುವದು. ಮತ್ತು ನನ್ನ ಪ್ರಣಾಮವು ಸಮುದ್ರದ ಮೇಲೆ ಹಾರುವ ಸಂತೋಷಭರಿತವಾದ ಪಕ್ಷಿಯ ರೆಕ್ಕೆಯಂತೆ ಪಸರಿಸುವದು.

ನನ್ನ ಹಾಡಿನಿಂದ ನಿನಗೆ ಸಂತೋಷವಾಗುವದೆಂಬದು ನನಗೆ ಗೊತ್ತಿದೆ. ನಾನು ನಿನ್ನೆದುರಿಗೆ ಗಾಯಕನೆಂದೇ ಬರುತ್ತೇನೆಂಬದೂ ನನಗೆ ಗೊತ್ತಿದೆ. ಎಂದೆಂದಿಗೂ ಮುಟ್ಟಲಸಾಧ್ಯವಾದ ನಿನ್ನ ಪಾದದ ಸ್ಪರ್ಶವು, ನನ್ನ ಹಾಡಿನ ಬಹು ದೂರ ಪಸರಿಸುವ ರೆಕ್ಕೆಗಳಿಂದ ನನಗೆ ದೊರಕುತ್ತದೆ.

ಗಾಯನದ ಆನಂದ ಸಂಭ್ರಮದಿಂದ ಮೈಮರೆತು, ನಾನು ಒಡೆಯನಾದ ನಿನ್ನನ್ನು ಗೆಳೆಯನೆಂದು ಕರೆಯುತ್ತೇನೆ.

೩. ನನ್ನ ದೊರೆಯೇ! ನೀನು ಹಾಡುವದು ಹ್ಯಾಗೆಂಬದು ನಾನರಿಯೆ. ಆದರೆ ಆಶ್ಚರ್ಯದಿಂದ ಮುಗ್ಧನಾಗಿ ಯಾವಾಗಲೂ ಕಿವಿಗೊಟ್ಟು ಲಾಲಿಸುವೆನು ಮಾತ್ರ.

ನಿನ್ನ ಗಾನದ ಬೆಳಕು ಈ ಜಗತ್ತನ್ನೇ ಬೆಳಗುವದು. ನಿನ್ನ ಗಾನದ ಉಸಿರು ಗಗನದಿಂದ ಗಗನಕ್ಕೆ ಹರಿಯುವದು. ನಿನ್ನ ಗಾನದ ಪವಿತ್ರವಾದ ಪ್ರವಾಹವು, ಅಡ್ಡ ಬರುವ ಯಾವತ್ತೂ ಕಲ್ಲುಬಂಡೆಗಳನ್ನು ಒಡೆದು

ಮುಂದಕ್ಕೆ ಭರದಿಂದ ಸಾಗುವದು.

ನಿನ್ನ ಗಾನದಲ್ಲಿ ಧ್ವನೆಗೂಡಿಸಬೇಕೆಂದು ನನ್ನಹೃದಯವು ಹಾತೊರೆಯುತ್ತದೆ. ಆದರೆ ಧ್ವನಿಯೇ ಬರಲೊಲ್ಲದು. ಶಬ್ದಗಳು ಹೊರಡುತ್ತವೆ, ಆದರೆ ಆ ಶಬ್ದಗಳು ಹಾಡಿನಲ್ಲಿ ಪರಿಣಮಿಸುವದಿಲ್ಲ. ಆದ್ದರಿಂದ ಉಪಾಯಗಾಣದೆ ಅಳಹತ್ತುತ್ತೇನೆ, ನನ್ನೊಡೆಯನೇ! ನಿನ್ನ ಗಾಯನದ ಪಾರುಗಾಣದ ಜಾಲದಲ್ಲಿ ನನ್ನಹೃದಯವನ್ನು ಸಂಪೂರ್ಣವಾಗಿ ಬಂಧಿಸಿರುವಿ.

೪. ಎಲೈ ನನ್ನ ಜೀವನದ ಜೀವಾಳವೇ! ನನ್ನ ಎಲ್ಲ ಅವಯವಗಳಿಗೂ ನಿನ್ನ ಪ್ರತ್ಯಕ್ಷ ಸಂಬಂಧವಿರುವದೆಂದು ನಾನು ಬಲ್ಲೆನಾದ್ದರಿಂದ ನನ್ನ ದೇಹವನ್ನು ಯಾವಾಗಲೂ ಶುದ್ಧವಾಗಿಡಲು ಪ್ರಯತ್ನಿಸುವೆನು.

ನನ್ನ ಆತ್ಮನಲ್ಲಿ ಬುದ್ಧಿಪ್ರಕಾಶವನ್ನಿತ್ತ ಸತ್ಯಸ್ವರೂಪನು ನೀನೇ ಎಂಬದನ್ನು ನಾನು ಬಲ್ಲೆನಾದ್ದರಿಂದ, ನನ್ನ ವಿಚಾರಗಳೊಳಗೆ ಯಾವ ಅಸತ್ಯಗಳೂ ಬಾರದಂತೆ ಯಾವಾಗಲೂ ಪ್ರಯತ್ನಿಸುವೆನು.

ನನ್ನ ಹೃದಯದೊಳಗಿನ ಮುಖ್ಯ ಮಂದಿರವೇ ನಿನ್ನ ವಾಸಸ್ಥಳವೆಂದು ನಾನು ಬಲ್ಲೆನಾದ್ದರಿಂದ ನನ್ನ ಹೃದಯದೊಳಗಿನ ಎಲ್ಲ ಪಾಪಗಳನ್ನು ಹೊಡೆದೋಡಿಸಲಿಕ್ಕೂ ಮತ್ತು ಭಕ್ತಿಯು ಯಾವಾಗಲೂ ಜಾಗೃತನಾಗಿರುವಂತೆಯೂ ಪ್ರಯತ್ನಿಸುವೆನು.

ನಾನು ಕೆಲಸಮಾಡುವ ಶಕ್ತಿಯು ನಿನ್ನ ಶಕ್ತಿಯಿಂದಲೇ ಬರುವದೆಂದು ಬಲ್ಲೆನಾದ್ದರಿಂದ ನನ್ನ ಎಲ್ಲ ಕಾರ್ಯಗಳಲ್ಲಿಯೂ ನೀನೇ ಕಾಣಿಸುವಂತೆ ಪ್ರಯತ್ನಿಸುವೆನು.

೬. ಈ ಸಣ್ಣ ಹೂವನ್ನು ಕೊಯ್ದು ತೆಗೆದುಕೊ ತಡಮಾಡಬೇಡ. ತಡಮಾಡಿದರೆ ಅದು ಬಾಡಿ ಉದುರಿ, ಮಣ್ಣಿನಲ್ಲಿ ಬಿದ್ದುಹೋಗಬಹುದೆಂಬ ಹೆದರಿಕೆ ನನಗೆ.

ಅದಕ್ಕೆ ಕೊರಳೊಳಗಿನ ಮಾಲೆಯಲ್ಲಿ ಸ್ಥಳ ದೊರಕಲಿಲ್ಲ. ಆದರೆ ನಿನ್ನ ಕೈಯಿಂದ ಕೊಯ್ಯುವಾಗ ಆಗುವ ನೋವಿನ ಸ್ಪರ್ಶದಿಂದ ಅದನ್ನು ಗೌರವಿಸಿ ಕೊಯ್ದುಕೊ. ಇಲ್ಲವಾದರೆ, ನನಗೆ ಗೊತ್ತಾಗದೆ ಸಂಜೆಯಾಗಿ, ಸಮರ್ಪಣದ ವೇಳೆಯು ಮೀರಬಹುದೆಂಬ ಹೆದರಿಕೆ ನನಗೆ.

ಈ ಹೂವಿನಬಣ್ಣವು ಮನೋಹರವಾಗಿರದಿದ್ದರೂ, ಅದರ ವಾಸನೆಯು ಅಲ್ಪವಿದ್ದರೂ ಅದನ್ನು ನಿನ್ನ ಸೇವೆಗಾಗಿ ಉಪಯೋಗಮಾಡಿಕೊ. ಇನ್ನು ಸಮಯವಿರುವಾಗಲೇ ಕೊಯ್ದುಕೊ.

೭. ನನ್ನ ಕವಿತಾದೇವಿಯು ತನ್ನ ಅಭರಣಗಳನ್ನೆಲ್ಲಾ ತೆಗೆದುಹಾಕಿದ್ದಾಳೆ. ಅವಳಿಗೆ ಅರಿವೆ ಅಲಂಕಾರಗಳ ಅಭಿಮಾನವಿಲ್ಲ. ಆಭರಣಗಳು ನಮ್ಮ ಏಕಾಂತವನ್ನು ಕೆಡಿಸುವವು. ಅವು ನನ್ನ, ನಿನ್ನ ನಡುವೆ ಬರುವವು. ಅವುಗಳ ನಾದದಲ್ಲಿ ನಿನ್ನ ಕಿವಿಮಾತುಗಳು ನನಗೆ ಕೇಳಿಸಲಾರವು.

ನಿನ್ನ ದರ್ಶನದಿಂದ, ನಾನು ಕವಿಯೆಂಬ ಅಹಂಕಾರವು, ನಾಚಿಕೆಯಿಂದ ನಾಶವಾಯಿತು. ಎಲೈ ಕವಿಶ್ರೇಷ್ಠನೇ, ನಿನ್ನ ಪಾದದ ಬಳಿ ಕುಳಿತಿರುವೆನು. ನಿನಗೆ ಮಂಜುಳ ಗಾಯನವನ್ನು ಹೊರಡಿಸಲಿಕ್ಕೆ ನನ್ನ ಜೀವನವನ್ನು, ಬಿದಿರಿನಿಂದ ಮಾಡಿದ ಕೊಳಲಿನಂತೆ, ನಿರಭಿಮಾನಿಯಾಗಿಯೂ, ಸರಳವಾಗಿಯೂ ಇರುವಂತೆ ಕರುಣಿಸು.

೯. ಎಲೈ ಮೂರ್ಖನೇ, ನಿನ್ನನ್ನು ನೀನೇ ನಿನ್ನ ಹೆಗಲ ಮೇಲೆಯೇ ಹೊರಲು ಪ್ರಯತ್ನಮಾಡುವಿ. ಎಲೆ ಭಿಕ್ಷುಕನೇ, ನಿನ್ನ ಬಾಗಿಲಿಗೇ ಬಂದು ಭಿಕ್ಷೆ ಬೇಡುತ್ತಿ. ನಿನ್ನ ಭಾರಗಳನ್ನೆಲ್ಲವನ್ನೂ, ಎಲ್ಲವನ್ನು ಹೊರಲು ಸಮರ್ಥನಾದವನ ಕೈಯಲ್ಲಿ ಕೊಟ್ಟುಬಿಡು. ಪಶ್ಚಾತ್ತಾಪದಿಂದ ಹಿಂತಿರುಗಿ ಎಂದೂ ನೋಡಬೇಡ.

೧೨. ನಾನು ಹಾಡಬೇಕೆಂದು ಬಂದಿದ್ದ ಕವನವು ಇನ್ನೂ ಹಾಡಲಿಕ್ಕೆ ಆಗೇ ಇಲ್ಲ.

ನನ್ನ ತಂಬೂರಿಯ ತಂತಿಗಳನ್ನು ಸರಿಪಡಿಸುವದರಲ್ಲಿಯೇ ನನ್ನ ದಿವಸಗಳೆಲ್ಲವನ್ನೂ ಕಳೆದುಬಿಟ್ಟೆನು.

ನನ್ನ ಕವನದ ತಾಳ ಇನ್ನೂ ಕೂಡಿಲ್ಲ ಶಬ್ದಗಳ ಪ್ರಾಸವೂ ಕೂಡಿಲ್ಲ. ಆದರೆ ಮನಸ್ಸಿನಲ್ಲಿ, ಹಾಡಬೇಕೆಂಬ ತಳಮಳವು ಮಾತ್ರ ಹಾಗೇ ಇರುವದು.

ಮೊಗ್ಗೆಯು ಇನ್ನೂ ಅರಳಿಲ್ಲ. ಮಂದಮಾರುತನು ಮಾತ್ರ ಸುಳಿದಾಡುತ್ತಾನೆ.

ನಾನಿನ್ನೂ ಅವನ ಮೋರೆಯನ್ನು ಕಂಡಿಲ್ಲ. ಅವನ ಧ್ವನಿಯನ್ನೂ ಇನ್ನೂ ಕೇಳಿಲ್ಲ. ಆದರೆ ನಮ್ಮ ಮನೆಯ

ಮುಂದಿನ ಹಾದಿಯಿಂದ ಹೋಗುವಾಗ ಆಗುವ ಅವನ ಮಂದವಾದ ಕಾಲು ಸಪ್ಪಳ ಮಾತ್ರ ನನ್ನ ಕಿವಿಗೆ ಬಿದ್ದಿದೆ.

ಅವನ ಬಗ್ಗೆ ನೆಲದ ಮೇಲೆ ಆಸನವನ್ನು ಸಿದ್ಧ ಮಾಡುವದರಲ್ಲಿಯೇ ಇಡೀ ದಿವಸವೆಲ್ಲ ಕಳೆದು ಹೋದಿತು. ಆದರೆ ದೀಪವನ್ನು ಇನ್ನೂ ಹಚ್ಚಿಲ್ಲ. ಅದ್ದರಿಂದ ಇನ್ನೂ ನನ್ನ ಮನೆಯೊಳಗೆ ಕರೆಯಲಾರೆ.

ನಾನು ಅವನನ್ನು ಕಾಣುವ ಆಶೆಯಿಂದಲೇ ಬದುಕಿರುವೆನು. ಆದರೆ ಇನ್ನೂ ಅವನನ್ನು ಕಂಡಿಲ್ಲ

೧೪. ನನ್ನ ಮನೋರಥಗಳು ಬಹಳ. ಮತ್ತು ನಾನು ಬೇಡಿಕೊಳ್ಳುವ ಧ್ವನಿಯಾದರೂ ಹೃದಯ ದ್ರಾವಕ. ಆದರೆ ನೀನು ಅವುಗಳನ್ನೆಲ್ಲ ಗಟ್ಟಿಮನಸ್ಸಿನಿಂದ ನಿರಾಕರಿಸಿ, ನನ್ನನ್ನುಳಿಸಿರುವಿ. ಈ ನಿನ್ನ ಬಲವಾದ ಕರುಣೆಯೇ ನನ್ನ ಜೀವನದೊಳಗೆಲ್ಲ ಎಲ್ಲೆಲ್ಲಿಯೂ ತುಂಬಿಕೊಂಡಿರುವದು.

ಅತಿ ಮನೋರಥಗಳ ಗಂಡಾಂತರಗಳಿಂದ ಕಾಯ್ದು ಈ ಆಕಾಶ, ಈ ಪ್ರಕಾಶ, ಈ ದೇಹ, ಈ ಜೀವ, ಈ ಮನಸ್ಸು ಮೊದಲಾದ ಮಹತ್ತರವಾದ ಮಹಾ ಪ್ರಸಾದಗಳನ್ನು ನಾನು ಬೇಡದಲೇ ದಯಪಾಲಿಸಿ, ಅವುಗಳನ್ನು ಸ್ವೀಕರಿಸಲಿಕ್ಕೆ, ದಿನದಿನಕ್ಕೆ ನಾನು ಪಾತ್ರನಾಗುವಂತೆ ಮಾಡುತ್ತಿರುವಿ.

ನಿನ್ನನ್ನು ಹುಡುಕುವ ಕೆಲವು ಕಾಲ ಮನಸ್ಸಿನ ದೌರ್ಬಲ್ಯದಿಂದ ಉಳಿದುಹೋಗುವದು. ಮತ್ತೆ ಕೆಲವು ಕಾಲ ನಾನು ಎಚ್ಚತ್ತು ಒಳ್ಳೇ ಭರದಿಂದ ಆ ಕೆಲಸವನ್ನು ಸಾಗಿಸುತ್ತೇನೆ. ಆದರೆ ನೀನು ಮಾತ್ರ ನಿರ್ದಯತನದಿಂದ ನನಗೆ ಸಿಗದ ಹಾಗೆ ಅಡಗಿಕೊಳ್ಳುತ್ತಿ.

ಮೇಲಿಂದಮೇಲೆ ನಾನು ಬೇಡಿದ್ದನ್ನು ಕೊಡದೆ, ದುರ್ಬಲವಾದ ಮತ್ತು ಚಂಚಲ ಕಾಮನೆಗಳ ಕೆಟ್ಟಪರಿಣಾಮಗಳಿಂದ ನನ್ನನ್ನು ಕಾಯ್ದು, ದಿನದಿನಕ್ಕೆ ನಿನ್ನ ಪೂರ್ಣ ಅನುಗ್ರಹಕ್ಕೆ ಪಾತ್ರನಾಗುವಂತೆ ಮಾಡುವಿ.

# ವನಿತಾ ಸೇವಾ ಸಮಾಜದಲ್ಲಿ

## ಲೋಕಮಾನ್ಯ ಬಾಲ ಗಂಗಾಧರ ತಿಲಕರ ಪುಣ್ಯತಿಥಿಯ ಆಚರಣೆ

ಹೆಣ್ಣುಮಕ್ಕಳಲ್ಲಿ ಜಾಗೃತಿಯುಂಟಾಗಲೆಂದು ವನಿತಾ ಸೇವಾ ಸಮಾಜವು ಬಹುತರ ಎಲ್ಲ ಮಹಾಪುರುಷರ ಹಾಗೂ ರಾಷ್ಟ್ರನಾಯಕರ ಪುಣ್ಯದಿನವನ್ನಾಚರಿಸುವ ಸಂಪ್ರದಾಯವನ್ನು ಪಾಲಿಸುತ್ತಿದೆ. ಆದ್ದರಿಂದ ಇಂದು ಆಗಸ್ಟು ೧ರಂದು, ಭಾರತೀಯ ಸ್ವಾತಂತ್ರ್ಯ ಬೀಜಾರೋಪಣ ಮಾಡಿದ ಲೋಕಮಾನ್ಯ ಬಾಲಗಂಗಾಧರ ತಿಲಕರು ದಿವಂಗತರಾದ ದಿನವಂದು, ಅವರ ಪುಣ್ಯತಿಥಿಯನ್ನು ವನಿತಾ ಸೇವಾ ಸಮಾಜದಲ್ಲಿ ಶ್ರದ್ಧೆಯಿಂದಲೂ ಭಕ್ತಿಪೂರ್ವಕವಾಗಿಯೂ ಆಚರಿಸಲಾಯಿತು.

ಇಂದಿನ ಪುಣ್ಯದಿನಾಚರಣೆಯ ನಿಮಿತ್ತವಾಗಿ ವನಿತಾ ಸೇವಾ ಸಮಾಜದ ಪ್ರಾರ್ಥನಾ ಮಂದಿರದಲ್ಲಿ ಲೋಕಮಾನ್ಯ ಬಾಲ ಗಂಗಾಧರ ತಿಲಕರ ಪ್ರತಿಮೆಯನ್ನಲಂಕರಿಸಿ ಪೂಜಿಸಲಾಯಿತು. ನಂತರ ಸಾಯಂಕಾಲ ೩-೪೫ ಗಂಟೆಗೆ ಪುಣ್ಯತಿಥಿಯ ನಿಮಿತ್ತ ಸಭೆ ನೆರೆದಿದ್ದಿತು. ಸಭೆಯು ವನಿತಾ ಸೇವಾ ಸಮಾಜದ ವಿದ್ಯಾರ್ಥಿನಿಯರು ಶಿಕ್ಷಕ-ಶಿಕ್ಷಿಕೆಯರು ಹಾಗೂ ಕಾರ್ಯಕರ್ತರಿಂದ ಕಿಕ್ಕಿರಿದು ತುಂಬಿದ್ದಿತು. ಕನ್ನಡ ನಾಡಿನ ಹಿರಿಯ ಕವಿಗಳಲ್ಲೊಬ್ಬರೂ ತಿಲಕ ಗಾಂಧಿ ಅವರಿಂದ ಪ್ರಭಾವಿತರಾದವರೂ ಅಧ್ಯಾತ್ಮಚಿಂತನಪರರೂ ಆದ ಶ್ರೀಮಾನ್ ಸಾಲಿ ರಾಮಚಂದ್ರರಾಯರು ಇಂದಿನ ಪುಣ್ಯದಿನಾಚರಣೆಗೆ ಹಿರಿಯರಾಗಿ ದೊರೆದುದು ಒಂದು ವಿಶೇಷ. ಇನ್ನೊಂದು ವಿಶೇಷವೆಂದರೆ ವನಿತಾ ಸೇವಾ ಸಮಾಜದ ವಿದ್ಯಾಸಂಸ್ಥೆಗಳ ವಿದ್ಯಾರ್ಥಿನಿಯರು ಲೋಕಮಾನ್ಯ ತಿಲಕರ ಜೀವನದ ಬಗೆಗೆ ತಮ್ಮ ವಿಚಾರಗಳನ್ನರುಹಲು ಯತ್ನಿಸಿದುದಾಗಿದೆ. ವನಿತಾ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿನಿ ಶ್ರೀ ಪ್ರೇಮಾ ಮಂಗಳೂರು ಆಶುಭಾಷಣವನ್ನು ಮಾಡಿ ಲೋಕಮಾನ್ಯರ ಬಗೆಗೆ ತಾನೆ ರಚಿಸಿದ್ದ ಕವನವೊಂದನ್ನು (ಇದು 'ವೀರಮಾತೆ' ಯ

೧೯೫೫ನೆಯ ಫೆಬ್ರುವರಿ-ಮಾರ್ಚ್ ತಿಂಗಳುಗಳ ಸಂಚಿಕೆ – ವನಿತಾ ವಿದ್ಯಾಸಂಸ್ಥೆಗಳ ಸಂಚಿಕೆ ಅಲ್ಲಿ ಪ್ರಕಟವಾಗಿದೆ) ಸುಶ್ರಾವ್ಯವಾಗಿ ಹಾಡಿದಳು.

ಆ ನಂತರ ಮುಖ್ಯಾತಿಥಿಗಳಾದ ಶ್ರೀಮಾನ್ ಸಾಲಿ ರಾಮಚಂದ್ರರಾಯರು ವಯಸ್ಸಿನಿಂದ ಬಳಲಿದವರಾದ್ದರಿಂದ ಕುಳಿತಿಯೇ ಮಾತನಾಡಲು ಅವರನ್ನು ಬಿನ್ನವಿಸಲಾಯಿತು. ಶ್ರೀ ಸಾಲಿ ರಾಮಚಂದ್ರರಾಯರು ಭಾಷಣಕಾರರಲ್ಲದಿದ್ದರೂ ಹೃದಯ ಪರಿಷ್ಕಾರದಿಂದ ವೇದ್ಯವಾಗಿ ಮಾತನಾಡುತ್ತ ಹೀಗೆ ಅಪ್ಪಣೆಕೊಡಿಸಿದರು.

ನಮ್ಮೀ ಭಾರತವು ಪುಣ್ಯಪುರುಷರ ನೆಲೆವೀಡಾಗಿದೆ. ಗ್ಲಾನಿಯುಂಟಾದಾಗ್ಗೆಲ್ಲ ಮಹಾಪುರುಷರು ಭಾರತದಲ್ಲಿ ಉದಯಿಸಿಯೇ ಇರುವರು. ಹೀಗೆ ಉಜ್ವಲ ಪರಂಪರೆಯುಳ್ಳ ಭಾರತವು ಪರದಾಸ್ಯಕ್ಕೀಡಾಗಿ ಭಾರತೀಯ ಜನರು ಕುರಿಗಳಂತೆ ಹೇಡಿಗಳಾಗಿರುವದನ್ನು ಕಂಡು ಅವರಲ್ಲಿಯ ಸುಪ್ತ ಶಕ್ತಿಯು ಚೇತರಿಸುವಂತೆ ಯತ್ನ ಹೂಡಿದವರಲ್ಲಿ ದಿವಂಗತ ಲೋಕಮಾನ್ಯ ಬಾಲ ಗಂಗಾಧರ ತಿಲಕರು ಮೊದಲಿಗರಾಗಿದ್ದಾರೆ. ಭಾರತೀಯರ ಜಾಗೃತಿ ಅವರ ಜೀವನದ ಗುರಿಯಾಗಿದ್ದಿತು. ಅವರು ತಮ್ಮ ಸ್ವಭಾವಶಕ್ತಿಯಿಂದ ಲೋಕಮಾನ್ಯರಾದರು. ಮೊದಲಿಗೆ ಅವರು ಶೈಕ್ಷಣಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ದುಡಿದರು. ಆದರೆ ಭಾರತೀಯರ ನೆಮ್ಮದಿಗೆ, ಭಾರತೀಯ ಸಂಸ್ಕೃತಿಯ ಪುನರುತ್ಥಾನಕೆ ಪರದಾಸ್ಯದ ಸಂಕೋಲೆಗಳನ್ನು ಹರಿದೊಗೆವುದೊಂದೇ ತರುಣೋಪಾಯವೆಂಬುದನ್ನವರು ಮನಗಂಡು ಸ್ವರಾಜ್ಯವು ನನ್ನ ಜನ್ಮಸಿದ್ಧವಾದ ಹಕ್ಕು ಎಂದುಸುರಿ ಸ್ವರಾಜ್ಯ ಚಳುವಳಿ ಹೊಳುಹನ್ನು ಹಾಕಿದರು. ಕಾಂಗ್ರೆಸ್ಸಿನಲ್ಲಿ ಧೀರದಾರಿಗ(extremist) ರಾಗಿದ್ದರು. ದೇಶವನ್ನೆಲ್ಲ ಸಂಚರಿಸಿ ಜನತೆಯನ್ನೆಚ್ಚರಿಸಿದರು. 'ಕೇಸರಿ' ಯಿಂದ ಕೇಸರಿಯಂತೆ ಗರ್ಜಿಸಿ ಜನತೆಯನ್ನು ನಿದ್ರೆಯಿಂದ ಎಬ್ಬಿಸಿದರು. ಭಾರತದ ಬಂಜರು ಭೂಮಿಯನ್ನು ಹಸನುಗೊಳಿಸಿದರು. ಲೋಕಮಾನ್ಯ ತಿಲಕರು ಬಿತ್ತಿದ ಸ್ವರಾಜ್ಯದ ಬೀಜವೇ ಮುಂದೆ ಮಹಾತ್ಮಾ ಗಾಂಧಿಯವರು ಸ್ವಾತಂತ್ರ್ಯಾಂದೋಲನವನ್ನು ಯಶಸ್ವಿಯಾಗಿಸುವದಕ್ಕೆ ತುಂಬ ನೆರವಾಯಿತು. ಇಂತಹ ಮಹಾಪುರುಷರು ಮಾಡಿದ ಮಹತ್ಕಾರ್ಯವನ್ನು ಈಗ ಶ್ರೀ ಜವಾಹರಲಾಲ ನೆಹರು ಅಂತಹ ಮಹಾನಾಯಕರೂ ಶ್ರೀವಿನೋಬಾ ಭಾವೆ ಅಂತಹ ಸತ್‌ಪುರುಷರೂ ಮುಂದುವರಿಸುತ್ತಿದ್ದಾರೆ.

ಶ್ರೀ ರಾಮಕೃಷ್ಣ ಪರಮಹಂಸ ಶ್ರೀಸ್ವಾಮಿ ವಿವೇಕಾನಂದ, ಶ್ರೀ ರವೀಂದ್ರನಾಥಠಾಕೂರ, ಶ್ರೀ ಅರವಿಂದಘೋಷ, ಶ್ರೀ ರಮಣ ಮಹರ್ಷಿ ಮೊದಲಾದ ಮಹಾ ವಿಭೂತಿಗಳು ಭಾರತದಲ್ಲಿ ಕಳೆದ ಶತಕದಲ್ಲಿ ಉದಯಿಸಿದ್ದಾರೆ. ಹೀಗೆ ನಮ್ಮ ಭಾರತದಲ್ಲಿ ಪುಣ್ಯಪುರುಷರ ಹಾಗೂ ಮಹಾವಿಭೂತಿಗಳ ಪರಂಪರೆ ಇದ್ದೇ ಇದೆ. ಇಂತಹ ಪರಂಪರೆಯುಳ್ಳ ಭಾರತವು ಪುಣ್ಯ ಭೂಮಿಯೇ ಆಗಿದೆ.

ಲೋಕಮಾನ್ಯ ತಿಲಕರು ಬಹುಮುಖ ಪಂಡಿತರಾಗಿಯೇ ಇದ್ದರು. ರಾಜಕೀಯ ಜಂಜಡಕ್ಕಿಳಿಯದಿದ್ದರೆ ಅವರಿಂದ ನಾವು ಇನ್ನೂ ಹೆಚ್ಚಾದ ಅದ್ಭುತಗಳನ್ನು ಕಾಣಬಹುದಾಗಿದ್ದಿತು. ರಾಜಕೀಯ ದ್ರೋಹ(?)ಕ್ಕಾಗಿ ಮಂದಾಲೆಯ ಸೆರೆಯಲ್ಲಿದ್ದಾಗ್ಗೆ ಭಗವದ್ಗೀತೆಯ ಬಗ್ಗೆ ಅವರು ರಚಿಸಿದ್ದ ಉದ್ಗ್ರಂಥವಾದ 'ಗೀತಾ ರಹಸ್ಯ'ವೂ ಮತ್ತು ಅವರ ಓರೈನ್ (History of the Orien) ಗ್ರಂಥವೂ ಅವರ ಅಗಾಧವಾದ ಪಾಂಡಿತ್ಯದ ಪ್ರತೀಕಗಳಾಗಿವೆ. ಲೋಕಮಾನ್ಯ ತಿಲಕರು ಕರ್ಮಯೋಗಿಗಳಾಗಿದ್ದರು. ಎಂತಲೇ ಅವರು ಪ್ರತಿಹತರಾಗಿದ್ದ ಭಾರತೀಯ ಜನತೆಯನ್ನು ಕಾರ್ಯೋನ್ಮುಖವಾಗಿಸಿದರು.

ದಿವಂಗತ ಲೋಕಮಾನ್ಯ ತಿಲಕರ ಸ್ಥೈರ್ಯಧೈರ್ಯ ಸರಲ ಸ್ವಭಾವ ಏಕಾಗ್ರಚಿತ್ತತೆಗಳನ್ನು ತುಸುವಾದರೂ ಅನುಕರಿಸಲು ಅರಗಿಸಿಕೊಳ್ಳಲು ಯತ್ನಿಸಿದರೆ ಅವರ ಪುಣ್ಯತಿಥಿಯನ್ನು ನಾವು ನಿಜವಾಗಿಯೂ ಆಚರಿಸಿದಂತಾಗುವದು. ಜೀವಕೋಟಿಗಳಲ್ಲಿ ಮಾನವ ಜನುಮವು ಹಿರಿದು ಆಗಿದೆ. ಏಕೆಂದರೆ ಅಂತರಾಳದಲ್ಲಿ ಹುದುಗಿರುವ ಅನಂತ-ತ್ವವನ್ನುಮಾನವನೊಬ್ಬನೇ ಕಾಣಬಲ್ಲವನಾಗಿದ್ದಾನೆ. ಆದ್ದರಿಂದ ಮಾನವರಾದ ನಾವು ಪಶುಪಕ್ಷಿ ಕ್ರಿಮಿಕೀಟಕ ಗಳಂತೆಯೆ ಜೀವಿಸದೆ ಮಹಾ ವಿಭೂತಿಗಳು ನಡೆದಿದ್ದ ಮಾರ್ಗದಲ್ಲಿ ನಮ್ಮ ಹಿರಿಯರು ತೋರಿದ್ದ ದಾರಿಯಲ್ಲಿ ನಡೆಯಲೆತ್ನಿಸಿದಲ್ಲಿ ಪ್ರಪಂಚದಲ್ಲಿಯ ಕಲುಷಿ ದಿಂದಿನ ವಾತಾವರಣವು ತಿಳಿಯಾಗಿ ಸುಖಶಾಂತಿ ನೆಲೆಸದಿರದು ಎಂದು ನುಡಿದು ತಮ್ಮ ಮಾತನ್ನು ಕೊನೆಗೊಳಿಸಿದರು.

ವನಿತಾ ಸೇವಾ ಸಮಾಜದ ಸಂಸ್ಥಾಪಿಕೆಯರಾದ ಶ್ರೀಮತಿ ಭಾಗೀರಥೀಬಾಯಿ ಪುರಾಣಿಕರಿಂದ ಅತಿಥಿಗಳ ಹಾರ್ದಿಕವಾದ ಅಭಿನಂದನೆಯಾದ ನಂತರ 'ವಂದೇಮಾತರಂ' ಗೀತೆಯೊಂದಿಗೆ ಲೋಕಮಾನ್ಯ ತಿಲಕರ ಪುಣ್ಯತಿಥಿಯ ಆಚರಣೆಯ ಕಾರ್ಯಕ್ರಮವು ಕೊನೆಗೊಂಡಿತು.

# ಭೇರಿ

ಬರೆದವರು:— ರತ್ನಾ ಶಾಸ್ತ್ರಿ.

**ಸಮಯ:—** ವೆಂಕಟರಮಣನ ಮಂದಿರದಲ್ಲಿ ಮಂಗಲವಾದ್ಯಗಳು ಮೊಳಗುತ್ತಿವೆ. ನರಗುಂದಾಧಿಪತಿಯಾದ ಬಾಬಾ ಸಾಹೇಬ ಶೂನ್ಯ ಮನಸ್ಥಿತಿಯುಳ್ಳವನಾಗಿ—ತನ್ನ ಕಿರುಮನೆಯಲ್ಲಿ ಅಡಿಯಾಡುತ್ತಿದ್ದಾನೆ. ಮಂಗಲವಾದ್ಯಗಳು ಮೊಳಗುತ್ತಿದ್ದಂತೆಯೆ—

೧೮೫೭ (ಜಾಂಗಟೆಯ ಸದ್ದು....) ಪ್ರತಿಯೊಬ್ಬ ಭಾರತೀಯನ ಹೃದಯದ ಅಂತರಾಳದಲ್ಲಿ ಹುಗಿದುಕೊಂಡಿರುವ ಸ್ವಾತಂತ್ರ್ಯವೃತ್ತಿಯು ಚೇತರಿಸಿದ ಕಾಲ! ಬ್ರಿಟಿಷರು ಅವ್ಯಾಹತವಾಗಿ ಮಾಡುತ್ತ ಬಂದ ಪಾಪದ ಕೊಡವು ತುಂಬುತ್ತ ಬಂದ ಕಾಲ! ಭಾರತೀಯರು ತಮ್ಮ ಧರ್ಮ-ಸಂಸ್ಕೃತಿಯ ರಕ್ಷಣಾರ್ಥವಾಗಿ ಕಟಿಬದ್ಧರಾದ ಕಾಲ! ಭಾರತದಲ್ಲೆಲ್ಲ ಅಸಂತೋಷ, ಜುಗುಪ್ಸೆ, ಅಸಮಾಧಾನ ಮತ್ತು ದ್ವೇಷ ತಾಂಡವನೃತ್ಯವನ್ನಾಡುವ ಕಾಲ! ಬ್ರಿಟಿಷರನ್ನು ಭಾರತದಲ್ಲಿಂದ ಹೊರದೂಡುವದಕ್ಕಾಗಿ ಅನೇಕ ಪ್ರಯತ್ನ ಯೋಜನೆಗಳು ನಡೆದ ಕಾಲ! ಇಂಥ ಪರಿಸ್ಥಿತಿಯಲ್ಲಿ.... ಬ್ರಿಟಿಷರು ತಮ್ಮ ಅಧಿಕಾರದ ದರ್ಪದಿಂದ ಭಾರತೀಯರನ್ನು ಹತ್ತಿಕ್ಕಿ ರಾಜ್ಯವಾಳುತ್ತಿದ್ದರು. ಭಾರತೀಯರ ಧರ್ಮ-ಸಂಸ್ಕೃತಿಯ ಹೋಮವನ್ನು ನಡಿಯಿಸಿದ್ದರು. ಜನತೆಯ ಅಸಂತೋಷವೆಲ್ಲ ಭಾರತೀಯ ಸ್ವಾತಂತ್ರ್ಯದಲ್ಲಿ ಲೀನವಾಗಿ ಕ್ರಾಂತಿಯನ್ನೆಬ್ಬಿಸಿತು. ದಿಲ್ಲಿ, ಝಾಂಸಿ, ಬರಾಕಪುರ, ಬರೇಲಿ ಮತ್ತು ಮೀರತ ಮೊದಲಾದ ಸ್ಥಳಗಳಲ್ಲಿ ಕ್ರಾಂತಿಯ ಕಿಡಿಗಳು ಹಾರಿದವು. ಝಾಂಸಿಯ ಲಕ್ಷ್ಮೀಬಾಯಿ, ನಾನಾಸಾಹೇಬ, ತಾತ್ಯಾಟೋಪಿ ಮತ್ತು ಬಹಾದೂರ ಶಹ ಇವರು ಕ್ರಾಂತಿವೀರರ ಮುಖಂಡರಾಗಿ ಬ್ರಿಟಿಷರಿಗೆ ಸಾಕುಬೇಕು ಮಾಡಿದರು. ಈ ಸಮಯದಲ್ಲಿ ನರಗುಂದದ ದೊರೆ ಬಾಬಾಸಾಹೇಬ, ದತ್ತಕ ತೆಗೆದುಕೊಳ್ಳುವದಕ್ಕೆ ಅಪ್ಪಣೆ ದೊರೆಯುವ ಕುರಿತು ಕಂಪನಿ ಸರಕಾರದಲ್ಲಿ ಅರ್ಜಿಯನ್ನು ಸಲ್ಲಿಸಿದ್ದನು. ಅದರ ದಾರಿಯನ್ನೇ ನೋಡುತ್ತಿದ್ದ ಒಂದು ದಿನ—

(ಮಂಗಲವಾದ್ಯಗಳು ಎಂಟು ಹತ್ತು ಸೆಕಂದು ಕೇಳಿದ ನಂತರ ಸಿತಾರು ವಾದನದ ಮಿಡಿತದಿಂದ...)

ಬಾಬಾಸಾಹೇಬ— ದೇವಿ, ಸತ್ವ ಪರೀಕ್ಷೆಗಳ ಪ್ರಸಂಗಗಳಲ್ಲಿ ಮಾನವನ....ಸ್ವರೂಪ ದರ್ಶನವಾಗುವದೆಂಬ ಮಾತು ಸುಳ್ಳಲ್ಲ ನೋಡು....!

ಸಾವಿತ್ರಿ— ಏನು ಮಾತು ಪ್ರಭು.... ?

ಬಾಬಾಸಾಹೇಬ— ಈ ದತ್ತಕ ಪ್ರಕರಣವು ಪರ್ಯಾಯದಿಂದ ನಮ್ಮ ಸತ್ವ ಪರೀಕ್ಷೆಯನ್ನೇ ಮಾಡುತ್ತಿರುವದು. ಹದ್ದು ಎರಗುವಂದದಿ ಒಂದೊಂದಾಗಿ ಸಂಕಟಗಳು ನಮ್ಮ ರಾಜ್ಯದ ಮೇಲೆ ಎರಗುತ್ತಿರುವವು. ಒಂದನ್ನು ಎದುರಿಸುವಷ್ಟರಲ್ಲಿಯೆ ಇನ್ನೊಂದು....ತನ್ನ ಕರಾಳ ಹಸ್ತದ ಕಪ್ಪು ಛಾಯೆಯನ್ನು ನಮ್ಮ ರಾಜ್ಯದ ಮೇಲೆ ಕೆಡವುತ್ತಿರುವದು. ಘಟನೆ ಮತ್ತು ಪರಿಸ್ಥಿತಿಗಳ ಜೋಡನೆಯಾಗದ್ದರಿಂದ ಕೈಕಾಲು ಹೋದಲ್ಲಿ ಅಪಯಶದ ಅಂಜಿಕೆ ನಮಗೆ ಕಾಣಿಸುತ್ತಿರುವದು.

ಸಾವಿತ್ರಿ— ಸ್ವಾಮಿ, ಇದಕ್ಕೆ ತಾವು ಇಷ್ಟೊಂದು ಹೆದರಿರುವಿರೇಕೆ ? ನೊಂದುಕೊಂಡಿರುವಿರೇಕೆ ?

ಬಾಬಾಸಾಹೇಬ— ದೇವಿ, ಎಂತಹ ಮಾತು ಆಡುತ್ತಿದ್ದೀಯೆ ? ಶತ್ರುಗಳು ಎಲ್ಲೆಡೆಯಲ್ಲಿ ಹೊಂಚು ಹಾಕಿಕೊಂಡು ಕುಳಿತುಕೊಂಡಿದ್ದಾರೆ. ಯಾವಾಗ ಏನಾದೀತೆಂಬುದನ್ನು ನಿಶ್ಚಿತ ರೂಪದಲ್ಲಿ ಯಾರಿಂದಲೂ ಹೇಳಲಿಕ್ಕೆ ಬರದಂತಾಗಿರುವದು. ನಾನಾಸಾಹೇಬ ಪೇಶವೆ ಇವರಿಂದಲೂ ಸುದ್ದಿ-ಸೂಚನೆಗಳು ಬರದಂತಾಗಿವೆ. ನಮ್ಮ ಪೂರ್ವಜರ ರಕ್ತಮಾಂಸದಿಂದ ಬೆಳೆದ ಸಂತಾನವೆ ಈಗ ಭರತಖಂಡದ

ಹೆಸರನ್ನು ಒರಿಸುವದಕ್ಕೆ ಸಿದ್ಧವಾಗಿರುವದು. ಆ ಹೇಡಿ ಮೆನ್‌ಸನ್ ಇವನಿಗೆ ಎಲ್ಲ ಬಗೆಯಿಂದ ಸಹಾಯ ಮಾಡಿ, ತಮ್ಮ ನಾಶವನ್ನು ತಾವೇ ಮಾಡಿಕೊಳ್ಳುತ್ತಿರುವುದರ ಅರಿವು ಅವರಿಗಿಲ್ಲವಾಗಿದೆ. ಕೊಡಲಿಯ ಕಾವೇ ಕುಲಕ್ಕೆಲ್ಲಿ ಮೂಲ ವಾಗುವದೋ....ಎಂಬ ಅಂಜಿಕೆ ನನಗೆ ನೋಡು !

ಸಾವಿತ್ರಿ— ರಾಜನೆನ್ನುವವನು ಸಂಕಟಗಳನ್ನು ಸದಾ ಎದುರಿಸಲೇಬೇಕು ! ಅಂಜಿ ನಡೆದರೆ ಹೇಗೆ ? ತಮ್ಮದು ನನ್ನಲ್ಲಿ ನಿಜವಾದ ಪ್ರೀತಿಯಿದ್ದರೆ....ವಿಶ್ವಾಸವಿದ್ದರೆ....ನಾನು ಹೇಳುವಂತೆ ಮಾಡಿರಿ ! ಅಂದರೆ ಸುಲಭವಾಗಿ ಈ ಸಂಕಟ ದಲ್ಲಿಂದ ಪಾರಾಗಬಹುದು.

ಬಾಬಾಸಾಹೇಬ— ಅದೇನು ಮಾತು ದೇವಿ....?

ಸಾವಿತ್ರಿ— ಏನೂ ಇಲ್ಲ ದೊರೆ ! ಅತ್ತೆಯವರು ಹೇಳು ವಂತೆ ಮಾಡಿರಿ.

ಬಾಬಾಸಾಹೇಬ— ಅಂದರೆ....

ಸಾವಿತ್ರಿ— ದತ್ತು ತೆಗೆದುಕೊಳ್ಳುವುದಕ್ಕೆಂದು........ ಬ್ರಿಟಿಷರಿಗೆ ದುಂಬಾಲ ಬೀಳುವದಕ್ಕಿಂತ........

ಬಾಬಾಸಾಹೇಬ— ಎರಡನೆಯ ಮದುವೆಯನ್ನು ಮಾಡಿಕೊಳ್ಳಲೆ ?

ಸಾವಿತ್ರಿ— ಹೌದು.

ಬಾಬಾಸಾಹೇಬ— ಇದೇನು ಮಾತು ದೇವಿ ? ಇದಕ್ಕೆ ಪ್ರತಿಯಾಗಿ ಏನನ್ನೂ.... ಮಾಡಲು ಬರುವಂತಿಲ್ಲವೆ ?

ಸಾವಿತ್ರಿ— ಪ್ರಭು, ಈ ಸಂಕಟದಲ್ಲಿಂದ ಪಾರಾಗುವ ದಕ್ಕೆ ಇದೊಂದೇ ದಾರಿ ಇರುವದು.

ಬಾಬಾಸಾಹೇಬ— ಸಾವಿತ್ರಿ, ರಾಜ್ಯಕ್ಕಾಗಿ ಸಂತಾನ ಕ್ಕಾಗಿ ನಿನ್ನನ್ನು ತೊರೆಯಲೆ ? ಇಲ್ಲ....ಇಲ್ಲ... ದೇವಿ, ಇವೆರ ಡರ ಪ್ರಾಪ್ತಿಯಾಗದಿದ್ದರೂ ಚಿಂತೆಯಿಲ್ಲ........! ನಿನ್ನನು ನಾನು ತೊರೆಯಲಾರೆ....!

ಸಾವಿತ್ರಿ— ಸಿಂಹಾಸನದ ಎದುರಿನಲ್ಲಿ ಪ್ರತಿಯೊಂದು ವ್ಯಕ್ತಿಯ ಬಾಳು ಕೀಳೆಂದು ನನಗೆ ಅನಿಸುವದು. ರಾಜ್ಯದ ಸಂರಕ್ಷಣೆಗಾಗಿ ನಾವಿಂದು ಎಂತಹ ತ್ಯಾಗವನ್ನು ಮಾಡುವ ದಕ್ಕೆ ಸಿದ್ಧರಾಗಲು ಬೇಡವೆ ? ಇಲ್ಲಿ ವ್ಯಕ್ತಿಗೌಣ ! ರಾಜ ಗದ್ದುಗೆ ಮುಖ್ಯ ! ಆದ್ದರಿಂದ....

ಬಾಬಾಸಾಹೇಬ— ಎರಡನೆಯ ಮದುವೆಯನ್ನು ಮಾಡಿಕೊಳ್ಳಲೆ ?

ಸಾವಿತ್ರಿ— ಹೌದು ಪ್ರಭು....! ನಿಮ್ಮ ಮನಸ್ಸಿನಲ್ಲಿ ಮದುವೆಯನ್ನು ಮಾಡಿಕೊಳ್ಳುವುದು ಇರದಿದ್ದರೂ....ಮನ ಸ್ಸಿನ ವಿರುದ್ಧವಾಗಿ ಏಕಾಗಲೊಲ್ಲದು....ಮಾಡಿಕೊಳ್ಳುವುದು ಕ್ರಮಪ್ರಾಪ್ತವಾಗಿರುವದು.

ಬಾಬಾಸಾಹೇಬ— ಎರಡನೆಯ ಮದುವೆಯನ್ನು ಮಾಡಿಕೊಂಡು ಪ್ರಯೋಜನವಿಲ್ಲ....ದೇವಿ !

ಸಾವಿತ್ರಿ— ಅದೇಕೆ ?

ಬಾಬಾಸಾಹೇಬ— ಶತ್ರುಗಳು ಮನೆಯ ಮುಂಬಾ ಗಿಲಿನಲ್ಲಿ ಬಂದು ಕುಳಿತುಕೊಂಡಿದ್ದಾರೆ. ಅವರ ಎದುರಿನಲ್ಲಿ ಮದುವೆಯನ್ನು ಮಾಡಿಕೊಳ್ಳಲೆ ? ಮಂಗಲವಾದ್ಯಗಳು ಮೊಳಗುವದರ ಬದಲು....ರಣವಾದ್ಯಗಳು ಮೊಳಗುವ ಕಾಲ ಬಂದಿರುವದು ! ಸಾತಾರೆಯಿಂದ ರಂಗೋ ಬಾಪೂಜಿ........ ಇವರು ಬರೆದ ಪತ್ರದ ಸುದ್ದಿಯು ನಿನಗೆ ಗೊತ್ತೇಯಿರುವದು. ಶತ್ರುಗಳು ಮನೆಯ ಬಾಗಿಲಿಗೆ ಬಂದು ನಿಂತಾಗ ನರಗುಂದದ ದೊರೆ....ಎರಡನೆಯ ಮದುವೆಯನ್ನು ಮಾಡಿಕೊಂಡನೆಂದು ಇತಿಹಾಸದಲ್ಲಿ ಬರೆಯಲ್ಪಡಬಾರದೆಂದು ನನ್ನ ಅಪೇಕ್ಷೆ. ಅದಕ್ಕೆ ನೀನಾಗಲಿ....ನಾನಾಗಲಿ ಅಷ್ಟೇ ಜಬಾಬ್ದಾರರು. ಅದಕ್ಕಾಗಿ ನಾನು ಮದುವೆಯನ್ನು ಮಾಡಿಕೊಳ್ಳಬಾರದೆಂಬ ಸಂಕಲ್ಪವನ್ನೇ ಮಾಡಿದ್ದೇನೆ.

ಸಾವಿತ್ರಿ— ಸ್ವಾಮಿ....ಸ್ವಾಮಿ...ಇದನ್ನೇನು ನೀವು ಮಾಡಿದಿರಿ ! ನರಗುಂದದ....ರಾಜ್ಯದ ಭದ್ರತೆಗಾಗಿ ಕಲ್ಯಾಣ ಕ್ಕಾಗಿ ನೀವು ನಿಮ್ಮ ಸಂಕಲ್ಪದಿಂದ........

ಬಾಬಾಸಾಹೇಬ— ತಿಲಮಾತ್ರವೂ ಹಿಂಜರಿಯಲಾರೆ.

ಸಾವಿತ್ರಿ— (ಕಂಬನಿ ಮಿಡಿಯುತ್ತ) ಪ್ರಭು....ಪ್ರಭು ರಾಜ್ಯದ ಲೋಭಕ್ಕಾಗಿ ಅಲ್ಲ. ರಾಜ್ಯದ ಸಂರಕ್ಷಣೆ ಸಂವ ರ್ಧನೆಗಳಿಗಾಗಿ ನೀವಿಂದು ಎರಡನೆಯ ಮದುವೆಯನ್ನು ಮಾಡಿಕೊಳ್ಳಬೇಕು.

ಬಾಬಾಸಾಹೇಬ— ಇದರಿಂದ ರಾಜ್ಯದ ಸಂರಕ್ಷಣೆ ಯಾಗದು....!

ಸಾವಿತ್ರಿ— ಆಗುವುದು.

ಬಾಬಾಸಾಹೇಬ— ರಾಜ್ಯದ ಮೇಲೆ ಬಂದ ಸಂಕಟದ ಕಲ್ಪನೆ ಇಲ್ಲದ್ದರಿಂದಲೆ ನೀನು ಹೀಗೆ ಮಾತಾಡುತ್ತಿರುವಿ.

ಸಾವಿತ್ರಿ— ರಾಜ್ಯದ ಮೇಲೆ ಬಂದ ಸಂಕಟ ಕಲ್ಪನೆ ಯಿರದಷ್ಟು ನಾನು ಅಪ್ರಬುದ್ಧಳಲ್ಲ. ನರಗುಂದದ ಮಹಾ ರಾಣಿಯಿದ್ದೇನೆ........ರಾಜ್ಯವನ್ನು ಉಳಿಸುವ ಹೊಣೆಯಲ್ಲಿ ನನ್ನದೂ ಅರ್ಧಪಾಲು ಇರುವದು. ಅದನ್ನು ಸಿರವೇರಿಸದೆ ಹೋದರೆ....ಪ್ರಜೆಗಳೇನೆಂದಾರು ? ಕೃತಘ್ನಳಾಗಿ ಬದುಕು ವುದು ನನಗೆ ಬೇಡವಾಗಿರುವದು. \

ಬಾಬಾಸಾಹೇಬ— ಇಂತಹ ಕಠಿಣ ಪ್ರಸಂಗದಲ್ಲಿ ಮದುವೆಯನ್ನು ಮಾಡಿಕೊಳ್ಳುವುದಕ್ಕೆ ನನ್ನ ಮನಸ್ಸು ಸಿದ್ಧವಿಲ್ಲ. ಮದುವೆ ಮಾಡಿಕೊಂಡು ಐಷಾರಾಮದಲ್ಲಿ....ದಿನಗಳನ್ನು ಕಳೆಯುವ ಸಮಯವಲ್ಲಿದು—

ಸಾವಿತ್ರಿ— ಪ್ರಭು, ಪ್ರಸಂಗದ ಸಂಪೂರ್ಣ ಕಲ್ಪನೆ ನನಗಿರುವದು ನಿಮ್ಮಂಥ ರಾಜಕಾರಣ ಧುರಂಧರರ ಪತ್ನಿಯಾಗುವ ಭಾಗ್ಯ ನನಗೆ ಪ್ರಾಪ್ತವಾದುದು ನನ್ನ ಸುಕೃತದ ಫಲವೆಂದು ನಾನು ತಿಳಿಯುತ್ತೇನೆ.

ಬಾಬಾಸಾಹೇಬ—ರಾಣಿಯೋರ್ವಳೆ ವೀರ ಮಹಿಳೆಯಾಗಿ ಈಗ ನಡೆಯುವಂತಿಲ್ಲ ! ಪ್ರತಿ ಯೋರ್ವ ಹಿಂದೂ ಮಹಿಳೆ.... ಝಾಂಸೀ ಲಕ್ಷ್ಮೀಬಾಯಿಯಾಗಬೇಕಾಗಿದೆ....! ವೀರಮಹಿಳೆಯರ ತೇಜಸ್ಸಿನಿಂದ ಫಿರಂಗಿಗಳು ನಿಶ್ಚಯವಾಗಿ ಕಾಲ್ಕಿಗೆಯುವರು. ಫಿರಂಗಿಗಳು ಎಲ್ಲ ಬದಿಯಿಂದಲೂ ಮುತ್ತಿದ್ದಾರೆ ! ಎಲ್ಲ ರಾಜ್ಯಗಳನ್ನು ನುಂಗಿ ನೀರು ಕುಡಿದಂತೆ........ನಮ್ಮ ರಾಜ್ಯವನ್ನೂ ಹಾಳು ಮಾಡುವ ಹವಣಿಕೆಯಲ್ಲಿದ್ದಾರೆ. ಹೇಳು ದೇವಿ....ಇಂತಹ ಪ್ರಸಂಗದಲ್ಲಿ ಮದುವೆಯನ್ನು ಮಾಡಿಕೊಳ್ಳಲೆ ? ಎಲ್ಲರ ಹೊಣೆಯನ್ನು ಹೊತ್ತು ನಿಂತ ನಾನೇ ಈ ರೀತಿಯಾಗಿ ವರ್ತಿಸಿದರೆ..........ಎರಡನೆಯವರ ಪಾಡೇನು ?

ಸಾವಿತ್ರಿ— ಪ್ರಭು....

ಬಾಬಾಸಾಹೇಬ— ಹೌದು ದೇವಿ, ಈಗಿನ ಕಠಿಣ ಪರಿಸ್ಥಿತಿಯು ಕಲ್ಪನೆಯು ಆಗುವುದು ಕಠಿಣ. ಯಾವ ಸಂಗತಿಯನ್ನು ಯಾರಿಗೆ ಯಾವ ರೀತಿಯಲ್ಲಿ.... ತಿಳಿಸಿ ಹೇಳಬೇಕೆಂಬುದೇ ನನಗೆ ತಿಳಿಯುದು! ವಿಚಾರ ಮಾಡಿ ಮಾಡಿ, ಬುದ್ಧಿಯು ಕೆಲಸಕ್ಕೆ ಬಾರದಂತಾಗಿದೆ....

ಸಾವಿತ್ರಿ— ನೀವೊಬ್ಬರೆ ಹಗಲು ರಾತ್ರಿ ವಿಚಾರ ಮಾಡಿ ಪ್ರಯೋಜನವೇನು ? ಪರಿಸ್ಥಿತಿಯು ಕಲ್ಪನೆಯನ್ನು ನಾಡಿನ ಜನರಿಗೆ ಮಾಡಿ ಕೊಡಿರಿ ! ಅವರಿಗೆ ತಿಳಿಸಿ ಹೇಳಿರಿ !

ಬಾಬಾಸಾಹೇಬ— ಎಲ್ಲ ಪ್ರಯತ್ನಗಳೂ ನಡೆದಿರುವವು ! ನಮ್ಮ ಪರಿಯಿಂದ ನಡೆಯಬೇಕಾದ ಎಲ್ಲ ಪ್ರಯತ್ನ ಯೋಜನೆಗಳನ್ನು ನಡಿಸಿರುತ್ತೇನೆ.

ಸಾವಿತ್ರಿ— ನಮ್ಮ ಪರಿಯಿಂದ ನಾವೂ ಸಿದ್ಧರಿದ್ದೇವೆ. ನರಗುಂದದ ಮಹಿಳೆಯರು....ಫಿರಂಗಿಗಳಿಗೊಮ್ಮೆ ಕೈಯನ್ನು ತೋರಿಸಿಯೇ ತೀರುತ್ತೇವೆ. ಇಂದೇ ಆ ರೀತಿಯ ಆಜ್ಞೆಯನ್ನು ಹೊರಡಿಸುತ್ತೇನೆ.

ಬಾಬಾಸಾಹೇಬ— ಸಿದ್ಧರಿದ್ದರೆ ತೀರದು. ಪ್ರಸಂಗೋಪಾತ್ ಅಗ್ನಿಗೆ ಆಲಿಂಗನ ಕೊಡುವ ಪ್ರಸಂಗ ಬಂದರೂ ಹಿಂಜರಿಯ ಕೂಡದು.

ಸಾವಿತ್ರಿ— ಪ್ರಭು, ನೀವು ನಿಶ್ಚಿಂತರಾಗಿರಿ. ಪರಿಸ್ಥಿತಿಯ ಸಂಪೂರ್ಣ ಕಲ್ಪನೆ ನನಗಿರುವದು. ನೀವು ಹೇಳದ ಮುನ್ನವೆ ಎಲ್ಲ ಸಿದ್ಧತೆಯಲ್ಲಿದ್ದೇವೆ. ಸದ್ಯದ ಪರಿಸ್ಥಿತಿಯು ಕಲ್ಪನೆ ನಮಗೆ ಸಂಪೂರ್ಣವಾಗಿರುವದು.

ಬಾಬಾಸಾಹೇಬ— ದೇವಿ, ಧನ-ದೌಲತ್ತಿಗಾಗಿ ಅಧಿಕಾರ ಲಾಲಸೆಗಾಗಿ ಬಾಂಧವರ ರುಂಡಗಳನ್ನು ಚೆಂಡಾಡಿಬಿಡುವ ದ್ರೋಹಿಗಳು ನಮ್ಮ ರಾಜ್ಯದಲ್ಲಿದ್ದಾರೆ. ಪಂಜಾಬ ಪ್ರಾಂತವು ಇದಕ್ಕೆ ಉದಾಹರಣೆಯಾಗಿದೆ. ದೇಶದ್ರೋಹಿಗಳು ಮನೆಮನೆಯಲ್ಲಿ ಅಡಗಿಕೊಂಡು ಕುಳಿತುಕೊಂಡಿದ್ದಾರೆ....! ಈ ದೇಶದ್ರೋಹಿಗಳಿಗಾಗಿ ನಾವು ಅಂಜಬೇಕಾಗಿರುವದು. ಈ ಫಿರಂಗಿಗಳಿಗೆ ನಾವೆಂದಿಗೂ ಅಂಜಿಲ್ಲ........! ಎಂದಿಗೂ ಅಂಜುವುದಿಲ್ಲ....! ತಕ್ಕಡಿಯನ್ನು ಹಿಡಿದುಕೊಂಡು ಬಂದ ವ್ಯಾಪಾರಿಗಳವರು ! ತಿರುಗಿ ತಮ್ಮ ದೇಶಕ್ಕೆ ಇಂದಿಲ್ಲ ನಾಳೆ ಅವರು ಹೋಗಲೆ ಬೇಕು. ಇವರೇನು ಬಲ್ಲರು ಯುದ್ಧ....?

ಸಾವಿತ್ರಿ— ಈಗ ಅವರ ಕೈಯಲ್ಲಿ ತಕ್ಕಡಿಯಿಲ್ಲ ! ಖಡ್ಗವಿದೆ !

ಬಾಬಾಸಾಹೇಬ— ಅವರ ಕೈಯಲ್ಲಿ ಖಡ್ಗವನ್ನು ಕೊಟ್ಟವರು ನಾವು ! ನಾವು ಕೊಟ್ಟ ಖಡ್ಗದಿಂದಲೆ ನಮ್ಮ ದೇಶಬಾಂಧವರ ರುಂಡಗಳನ್ನು ಚಂಡಾಡುತ್ತಿದ್ದಾರೆ ! ಭಾರತೀಯರ ವಿಶಾಲ ಅಂತಃಕರಣ ಪರೋಪಕಾರ ಗುಣ.... ಈ ನರಪಶುಗಳಿಗೆ ತಿಳಿಯುವದು ಕಠಿಣ. ಎಂದಿಗೂ ತಿಳಿಯದು !

ಸಾವಿತ್ರಿ— ತಿಳಿಯದಿದ್ದರೆ ಮಾಡಿ ಕೊಡಬೇಕು.

ಬಾಬಾಸಾಹೇಬ— ಮಾಡಿಕೊಡುವ ಪ್ರಸಂಗವೆ ಬಂದಿರುವದು. ಆದರೆ ಯಾರ ಬಲದ ಮೇಲೆ....

ಸಾವಿತ್ರಿ— ಯಾರ ಬಲದ ಮೇಲೆ ಅಂದರೆ....ನಮ್ಮ ನಾಡಿನ ಜನರ ಬಲದ ಮೇಲೆ....

ಬಾಬಾಸಾಹೇಬ— ಆ ಬಲವೀಗ ನಮ್ಮ ಬಲವಾಗಿ ಉಳಿದಿಲ್ಲ. ಅವರದಾಗಿ ಪರಿಣಮಿಸಿರುವದು. ಶತ್ರುಗಳಾರು? ಮಿತ್ರರಾರು ? ಎಂಬುವುದನ್ನು ಊಹಿಸುವುದೇ ಕಠಿಣವಾಗಿ ಪರಿಣಮಿಸುವದು. ಮಿತ್ರರೇ ಈಗ ಕಂಟಕ ಪ್ರಾಯರಾಗಿದ್ದಾರೆ !

ಸಾವಿತ್ರಿ— ಇಂತಹ ದ್ರೋಹಿಗಳ ಚಂಡುಗಳನ್ನು ಅವರ ದೇಹಗಳನ್ನು ಹದ್ದು ಕಾಗೆಗಳಿಗೆ ಮಿಷ್ಟಾನ್ನವಾಗಿ ಕೊಡಿರಿ !

ಬಾಬಾಸಾಹೇಬ— ಒಮ್ಮೆಲೆ ಹಾಗೆ ಮಾಡುವುದಕ್ಕೂ ಬರದು ! ಪರಿಸ್ಥಿತಿಯು ಬಹಳ ನಾಜೂಕಾಗಿರುವದು.

ಸಾವಿತ್ರಿ— ಇಂತಹ ಕಠಿಣತಮ ಪರಿಸ್ಥಿತಿಯಲ್ಲಿಂದ ಪಾರಾಗುವದಕ್ಕೆ ಏನಾದರೂ ಮಾರ್ಗವನ್ನು ಹುಡುಕಲು ಬೇಡವೇ ?

ಬಾಬಾಸಾಹೇಬ— ವಿಚಾರ ವಿನಿಮಯಕ್ಕೆಂದೆ ಕೆಲ ವೊಂದು ವಿಶ್ವಾಸಿಕ ಜನರನ್ನು ಇಂದು ವಾಡೆಯಲ್ಲಿ ಕರೆಕಳಿಸಿದ್ದೇನೆ. ಅವರ ಸಲಹೆ ಸೂಚನೆಗಳನ್ನು ತಿಳಿದುಕೊಂಡು ಮುಂದೆ ಮಾಡಬೇಕಾದ....ಸಂಗತಿಯ ನಿರ್ಧಾರವನ್ನು ನನಗೆ ಮಾಡಬೇಕಾಗಿದೆ. ಅಲ್ಲದೆ ಹೊರಗಣ ಪರಿಸ್ಥಿತಿಯ ಕಲ್ಪನೆಯನ್ನೂ ಮಾಡಿಕೊಳ್ಳಬೇಕು. ಅದೋ........ಅಮಾತ್ಯರು ಬಂದರು. ನೀನಿನ್ನು ಒಳಗೆ ಹೋಗು—

ಸಾವಿತ್ರಿ—ಒಳ್ಳೇದು. (ಸಾವಿತ್ರಿ ಒಳಗೆ ಹೋಗುವಳು)

( ಸಂಮಿಶ್ರವಾದ್ಯದ ಮೊಳಗು ಸ್ವಲ್ಪ ಸಮಯದ ನಂತರ )

ರಾಮರಾಯ— ಮಹಾರಾಜರಿಗೆ ಶುಭವಾಗಲಿ........

ಬಾಬಾಸಾಹೇಬ— ಬನ್ನಿರಿ....ಬನ್ನಿರಿ....ನಿಮಗಾಗಿಯೆ ಕಾದುಕೊಂಡು ಕುಳಿತುಕೊಂಡಿದ್ದೆ....ನಾನು ! ವಿಷ್ಣು ಇತ್ತ ಕಡೆಗೆ ಬಾ.... !

ರಾಮರಾಯ—ಪ್ರಭು....

ಬಾಬಾಸಾಹೇಬ— ಅಮಾತ್ಯರೆ—ಮಂದಿರದಲ್ಲಿ ಆರತಿಯನ್ನು ತೆಗೆದುಕೊಳ್ಳುವಾಗ ಅದು ಶಾಂತವಾದ್ದರಿಂದ.... ಅದೇಕೋ ನನ್ನ ಮನಸ್ಸಿಗೆ ಶಾಂತಿಯಿಲ್ಲವಾಗಿರುವದು.

ರಾಮರಾಯ— ಅಕಸ್ಮಾತ್ತಾಗಿ ಗಾಳಿಯ ತೆರೆಯು ಜೋರನೆ ಬೀರಿದುದರಿಂದ....ಮಂಗಲಾರತಿಯೂ ಆರಿತೇವಿನಾ ನಿಮಗೆ ಯಾವುದೇ ಅವಶಕುನವಾಗಲಾರದು !

ಬಾಬಾಸಾಹೇಬ— ನೀವು ಹೇಳುವುದು ಮನಸ್ಸಿಗೆ ಶಾಂತಿಯನ್ನು ಹಚ್ಚಿಕೊಳ್ಳುವುದಕ್ಕೊಂದು ಉಪಾಯ ಮಾತ್ರ! ಆದರೆ ಅದು....ಅದು....ಅಪಶಕುನವೆಂದೇ ನನ್ನ....ಮನಸ್ಸಿನ ಖಾತ್ರಿಯಾಗಿ ಬಿಟ್ಟಿರುವದು. ನಮ್ಮ ದತ್ತಕ ಪ್ರಕರಣದ ವಿಷಯದಲ್ಲಿ....

ರಾಮರಾಯ— ಕಂಪನಿ ಸರಕಾರದಿಂದ ಒಂದೆರಡು ದಿನಗಳಲ್ಲಿ ಉತ್ತರ ಬರಬಹುದು. ಮೊನ್ನೆಯೆ ತಮ್ಮ ಸಲಹೆ-ಸೂಚನೆಗಳ ಮೇರೆಗೆ ಒಂದೋಲೆಯನ್ನು....ಬರೆದಿದ್ದೇನೆ. ಒಂದೆರಡು ದಿನಗಳಲ್ಲಿ ಉತ್ತರವೂ ಬರಬಹುದು.

ಬಾಬಾಸಾಹೇಬ— ಅಶಕ್ಯ ಕೋಟಿಯಲ್ಲಿಯ ಸಂಗತಿಯಿದು ಪ್ರಧಾನಿಗಳೆ.... ! ಮೆನ್‌ಸನ್‌ನಂತೂ ದತ್ತಕ ತೆಗೆದುಕೊಳ್ಳುವುದಕ್ಕೆ ಒಪ್ಪಿಗೆಯನ್ನು ಕೊಡುವುದಿಲ್ಲವೆಂದು.. ಬಹಿರಂಗವಾಗಿ ಹೇಳುವನು. ಅದಕ್ಕಾಗಿ ಹಗಲಿರುಳು ಆತನ ಪ್ರಯತ್ನ ನಡೆದಿದೆ! ನಮ್ಮ ಬೇಹುಗರನ್ನು ಪರ್ಯಾಯದಿಂದ ಆತನು ಬಂಧಿಸುತ್ತಿದ್ದಾನೆ ಅಜ್ಞರ ಸಹಾಯವನ್ನು ಪಡೆದುಕೊಂಡು ನಮ್ಮ ರಾಜ್ಯದಲ್ಲಿ ಕುಹಕರ.....ಲೋಭಿ ಮತ್ತು ಸ್ವಾರ್ಥಿ ಜನರ ತಂಡಗಳನ್ನು ನಿರ್ಮಿಸಹತ್ತಿದ್ದಾನೆ. ಅವರೆಲ್ಲರ ಸಹಾಯದಿಂದ ತನಗೆ ಸಾಧಿಸಬೇಕಾದ ಕಾರ್ಯಭಾಗವನ್ನು ಸಾಧಿಸುತ್ತಿದ್ದಾನೆ...... ! ವಿಷ್ಣು....ನೀನಿದ್ದೆಯಲ್ಲವೆ ಆ ದಿವಸ ?

ವಿಷ್ಣು— ಹೌದು ಮಹಾರಾಜ ! ಆತನ ಉನ್ಮತ್ತತನ, ಅಹಂಭಾವಗಳನ್ನು ಕಂಡು....ನನಗಂತೂ ತುಂಬ ಕೋಪ ಬಂದಿದ್ದಿತು.

ಬಾಬಾಸಾಹೇಬ— ಅದರ ಕಲ್ಪನೆ ನನಗಿದ್ದುದರಿಂದಲೆ ಸುಮ್ಮನಿರಲು ಕಣ್ಸನ್ನೆ ಮಾಡಿದೆ. ವಿದ್ದು, ಆ ಮೆನ್ಸನ್ನನ ಹಿಂದೆ ನೀನು ಯಾವಾಗಲೂ ಇರು ! ಯಾಕಂದರೆ ಅವನು ಯಾವಾಗ ನಮ್ಮ ರಾಜ್ಯದ ಮೇಲೆ ಮುಳ್ಳೇರಿಸಿ ಬಿಡಬಹುದೆಂಬುದು....ತಿಳಿಯದಂತಾಗಿರುವದು.

ವಿಷ್ಣು— ಮಹಾರಾಜ....ನೀವು ಹೇಳದ ಮುನ್ನವೆ ಆ ಕಾರ್ಯವನ್ನು ನಾನು....ಮಾಡುತ್ತಿದ್ದೇನೆ. ಆತನ ಚಲನವಲನಗಳು ತಿಳಿಯುವಂತೆ ಆತನ....ಛಾವಣಿಯಲ್ಲಿ ಒಬ್ಬನನ್ನು ಇರಿಸಿದ್ದೇನೆ. ಸಕಾಲಕ್ಕೆ ಆತನಿಂದ ಸುದ್ದಿಗಳು....ಬರುವವು.

ಬಾಬಾಸಾಹೇಬ — ವಿಷ್ಣು, ರಾಮರಾಯರಂತಹ ಮತ್ತು ನಿನ್ನಂತಹ ಜನರಿದ್ದುದರಿಂದಲೆ ನರಗುಂದದ ಸಿಂಹಾಸನ ಇದು ವರೆಗೆ ಬಾಳಿಕೊಂಡು ಬಂದಿರುವದು. ಮುಂದಾದರೂ ಬದುಕುವದೆಂಬ ಭರವಸೆ ನನಗಿರುವದು. ಅವರೆ ಉತ್ತರದಲ್ಲಿಯವರಂತೆ....ನಮ್ಮಲ್ಲಿಯೂ ಗಡಿಬಿಡಿ, ಸ್ವಾರ್ಥಿಗಳ ಚಲ್ಲಾಟ ನಡೆದು ಹೋಗದಂತೆ ನಾವು....ನೋಡಿಕೊಳ್ಳಬೇಕು.

ವಿಷ್ಣು—ಪ್ರಭು, ಮೆನ್‌ಸನ್ನನಂತೂ ದಿನದಿನಕ್ಕೆ ನಮ್ಮ ಜನರದೇ ಹೆಚ್ಚು ಸೈನ್ಯವನ್ನು ಕೂಡ್ರಿಸುತ್ತಿದ್ದಾನೆಂದು.... ಬೇಹುಗರಿಂದ ಸುದ್ದಿ ಬಂದಿರುವದು.

ಬಾಬಾಸಾಹೇಬ—ಅದು ನನ್ನ ಕಿವಿಯ ವರೆಗೂ ಬಂದು ಮುಟ್ಟಿರುವದು.

ರಾಮರಾಯ— ಶೀಘ್ರದಲ್ಲಿಯೆ ಆತನು ನಮ್ಮ ಮೇಲೆ ದಾಳಿ ಕೂಡ ಮಾಡಬಹುದು.

ಬಾಬಾಸಾಹೇಬ— ಅಲ್ಲಿಯ ವರೆಗೆ ನಾವು........ ಕೈಕಟ್ಟಿಕೊಂಡು ಕುಳಿತು ಪ್ರಯೋಜನವಿಲ್ಲ. ನಾವೂ ಸೈನ್ಯವನ್ನು ಬೆಳೆಯಿಸಿಕೊಳ್ಳಬೇಕು. ಕೋಟೆಯನ್ನು ಭದ್ರವಾಗಿರಿಸಿಕೊಳ್ಳಬೇಕು....! ಮದ್ದು-ಗುಂಡು ಸಂಗ್ರಹಿಸ

ಬೇಕು.... ಯಾವ ಹೊತ್ತಿನಲ್ಲಿ ಎಂತಹ ಪ್ರಸಂಗ ಬಂದೀತೆಂಬು ದನ್ನು ಹೇಳಲಿಕ್ಕಾಗುವುದಿಲ್ಲ. ಅಮಾತ್ಯರೆ.......ಇಂದಿನಿಂದ ತೆರೆದ ಕಣ್ಣಿನಿಂದ ಪ್ರತಿಯೊಂದು ಸಂಗತಿಯ ಕಡೆಗೆ ನಮಗೆ.... ನೋಡಬೇಕು.

ರಾಮರಾಯ— ಮಹಾರಾಜ, ಪ್ರಕೃತ ಹೊರಗಿನ ಶತ್ರುಗಳಿಗಿಂತ ಸ್ವಜನದ್ರೋಹಿಗಳಿಗೇ ಹೆಚ್ಚು ಅಂಜಬೇಕಾಗಿ ರುವದು. ದ್ರೋಹಿಗಳು ಕ್ಷಣಕ್ಕೊಬ್ಬರಂತೆ ನಮ್ಮ ರಾಜ್ಯದಲ್ಲಿ ಬೆಳೆಯುತ್ತಿದ್ದಾರೆ. ಉತ್ತರ ಭಾರತದ ಪುನರಾವೃತ್ತಿ ನಮ್ಮ ರಾಜ್ಯದಲ್ಲಿಯೂ....ಎಲ್ಲಿ ಆಗುವದೋ....ಎಂದು ಅಂಜುತ್ತಿ ದ್ದೇನೆ.

ಬಾಬಾಸಾಹೇಬ— ಅಮಾತ್ಯರೆ....

ರಾಮರಾಯ— ಹೌದು ಪ್ರಭು, ಸತ್ಯವಾದುದನ್ನೆ ಆಡುತ್ತಿದ್ದೇನೆ. ಹೊರಗಿನ........ಶತ್ರುಗಳನ್ನು ತಡೆಯುವದು ಕಠಿಣವಿಲ್ಲ. ನಿಮ್ಮ ಸರ್ವಸ್ವವನ್ನು ಪಣಕ್ಕೆ ಹಚ್ಚಿ ಅವರೊಡನೆ ನಾವು ಯುದ್ಧವನ್ನು ಮಾಡಬಹುದು. ಆದರೆ ಸ್ವಜನ ದ್ರೋಹವನ್ನು ತಡೆಯುವದು ಕಠಿಣವಾಗಿರುವದು. ಆದ್ದರಿಂದ ಸ್ವಜನ ದ್ರೋಹಕ್ಕೆಂದು ಅಂಜಲೇಬೇಕಾಗಿರುವದು.

ವಿಷ್ಣು—(ಖಡ್ಗದ ಸದ್ದು—) ಪ್ರಧಾನಿಗಳೆ ಅಂತ ಹದು ಆಗಿರುವದಾದರೂ ಏನು ? ಅದನ್ನಾದರೂ ಹೇಳಿರಿ ಈ ಜನರನ್ನು ನಾನೊಂದು ಕೈನೋಡಿಬಿಡುತ್ತೇನೆ.

ರಾಮರಾಯ—ವಿಷ್ಣು, ರಾಜಕಾರಣದಲ್ಲಿ ದುಡುಕಿ ನಡೆದು ಪ್ರಯೋಜನವಿಲ್ಲ. ಬಿಸಿರಕ್ತವು ರಾಜಕಾರಣಲ್ಲಿ ಉಪ ಯೋಗಕ್ಕೆ ಬೀಳುವದಿಲ್ಲ. ಈಗಿನ ಕಠಿಣ ಪ್ರಸಂಗದಲ್ಲಿ ಒಮ್ಮೆಲೆ ದುಡುಕುವದಕ್ಕಿಂತಲೂ ಸಾವಧಾನತೆಯಿಂದ ಎಲ್ಲ ಕಾರ್ಯಗಳನ್ನು ನಡೆಯಿಸಿಕೊಂಡು ಹೋಗಬೇಕಾಗಿರುವದು. ಗೋಡೆಗಳಿಗೂ ಕಿವಿಗಳಿರುವವೆಂದು ಹಿರಿಯರು ಹೇಳಿದ ಮಾತು ಸಾವಿರ ಸಲಕ್ಕೂ....ಸತ್ಯವೆಂದು ನನಗೆ ಅನಿಸುತ್ತಿರುವದು.

ಬಾಬಾಸಾಹೇಬ— ಅಂದರೆ....

ರಾಮರಾಯ— ಸ್ಪಷ್ಟವಾಗಿ ಮಾತಾಡುವ ಪ್ರಸಂಗ ಬಂದಿರುವದರಿಂದ......

ಬಾಬಾಸಾಹೇಬ— ನಾವು ಕೋಪಗೊಳ್ಳುವುದಿಲ್ಲ. ನಿಮಗೆ ಹೇಳಬೇಕಾದ್ದನ್ನು....ಸ್ಪಷ್ಟವಾಗಿ ಹೇಳಿರಿ.

ರಾಮರಾಯ—ಅಂದರೆ....ಅಂದರೆ....

ವಿಷ್ಣು — ಅಮಾತ್ಯರೆ....ಅಂದರೆ....ಅಂದರೆ....ಅಂದ ರೇನು ? ಸ್ಪಷ್ಟವಾಗಿ ...ಹೇಳಬೇಕಾದ್ದನ್ನು ಹೇಳಿರಿ.

ರಾಮರಾಯ— ಒಟ್ಟಿನಲ್ಲಿ ಕೋಟೆಯನ್ನು ಭದ್ರವಾಗಿ ಡುವುದುಚಿತವು.... !

ಬಾಬಾಸಾಹೇಬ— ಅದಕ್ಕಾರು ಬೇಡವೆನ್ನುತ್ತಿದ್ದಾರೆ ? ಪಹರೆಯವರಿಗೆ—ಚೌಕೀದಾರರಿಗೆ ಇದೀಗ ರಾಜಾಜ್ಞೆಯನ್ನು ಕಳುಹಿಸಿರಿ.

ರಾಮರಾಯ— ಆದರೆ ಪ್ರಭು,

ವಿಷ್ಣು— ಒಂದು ಬದಿಯಿಂದ ನಿಮ್ಮಾಜ್ಞೆಯನ್ನು ಮೀರುವುದು ಕೂಡ ನಮಗೆ ಕ್ರಮಪ್ರಾಪ್ತವಾಗಿರುವದು.

ಬಾಬಾಸಾಹೇಬ — (ಸಿಟ್ಟಿನಿಂದ) ವಿಷ್ಣು,

ರಾಮರಾಯ— ಹೌದು ಪ್ರಭು, ವಿಷ್ಣು ಸರಿಯಾದು ದನ್ನೆ ಆಡುತ್ತಿದ್ದಾನೆ.

ಬಾಬಾಸಾಹೇಬ — ಅಮಾತ್ಯರೆ, ಇಂದಿನ ನಿಮ್ಮ ರೀತಿಯೆ ಬೇರೆಯಾಗಿರುವದು.

ರಾಮರಾಯ—ಹೌದು ಪ್ರಭು.... ! ಅದನ್ನು ನಾನೂ ಬಲ್ಲೆ.... ! ಕೋಟೆಯ ಭದ್ರತೆಗೆಂದು....

ಬಾಬಾಸಾಹೇಬ :— ಮದ್ದಿನುಗ್ರಾಣದ ಅಧಿಕಾರಿ ಗಳಾದ ಕೃಷ್ಣಾಜಿಪಂತ ಇವರಿಗೆ....ಹೆಚ್ಚು ಜನರನ್ನು ನಿಯ ಮಿಸಿಕೊಳ್ಳುವುದಕ್ಕೆ ಹೇಳಿದ್ದೇನೆ. ಅವರು ಆ ಕೆಲಸವನ್ನು ಸರಿಯಾಗಿ ಮಾಡುತ್ತಿದ್ದಾರೆ. ಕೋಟೆಯ ಮೇಲೆ ಇವಾಗಲೆ ಕೆಲಸ ಆರಂಭವಾಗಿರುವದು.

ರಾಮರಾಯ— ತೆರಪಿಲ್ಲದೆ ಜನರು ಬಂದು ಹೋಗು ತ್ತಿದ್ದಾರೆ. ಅವರನ್ನು ಕೇಳುಗರೆ ಇಲ್ಲ !

ಬಾಬಾಸಾಹೇಬ— ಬಂದರೇನಾಯಿತು ? ಪಹರೆಯ ವರು ಕಣ್ಣಿನಲ್ಲಿ ಎಣ್ಣೆ ಹಾಕಿಕೊಂಡು....ಪಹರೆಮಾಡುವಂತೆ ಆಜ್ಞೆಯನ್ನು ಹೊರಡಿಸಿರಿ.

ರಾಮರಾಯ— (ಅಂಜಿಕೆ ಮಿಶ್ರಿತ ಸ್ವರದಲ್ಲಿ) ಆಜ್ಞೆ ಹೊರಡಿಸಿದರೆ ಆಜ್ಞೆಯು ಅವಹೇಳನೆ ಮಾತ್ರ ಆದೀತು. ಜಾರಿ ಯಲ್ಲಿ ಎಂದಿಗೂ ಬರಲಾರದು !

ಬಾಬಾಸಾಹೇಬ— (ಕೋಪದಿಂದ) ಪ್ರಧಾನಿಗಳೆ ಏನನ್ನು ಮಾತಾಡುತ್ತಿರುವಿರಿ ?

ರಾಮರಾಯ— ಸತ್ಯ ಪರಿಸ್ಥಿತಿಯ ಅರವಿರದೆ ನಿಮಗೆ ಅದರ ಕಲ್ಪನೆಯನ್ನು ಮಾಡಿಕೊಡುವ ಪ್ರಯತ್ನವನ್ನು ಮಾಡುತ್ತಿದ್ದೇನೆ. ಅದನ್ನು ಯಾವ ರೀತಿಯಲ್ಲಿ ಮಾಡಿಕೊಡ ಬೇಕೆಂಬುದು ತಿಳಿಯದೆ ಹೋಗಿ ನಾನೂ ಗೊಂದಲಪಟ್ಟಿ ದ್ದೇನೆ.

ಬಾಬಾಸಾಹೇಬ — ತಮ್ಮಂಥವರು ಗೊಂದಲಪಟ್ಟ

ಬೀಳುವ....ಘಟನೆಯಾದರೂ....ಯಾವುದು ?

ವಿಷ್ಣು— ಆದನ್ನು ನಾನು ಹೇಳುತ್ತೇನೆ ಮಹಾರಾಜ ! ಕೃಷ್ಣಾಜಿಪಂತ ಮತ್ತು ಬನ್ಯಾಬಾಪು ಇವರಿಬ್ಬರು ಕೂಡಿ.... ಲೆಕ್ಕವಿಲ್ಲದಷ್ಟು ಜನರನ್ನು....ಕೋಟೆಯ ಮೇಲೆ....ಪ್ರತಿನಿತ್ಯ ಕರೆತರುತ್ತಿದ್ದಾರೆ....! ಏನಾಗುವದೆಂಬ ಅರಿವೇ ಈ ಜನರಿಗಿಲ್ಲ. ಪಹರೆಯವರು ಏನಾದರೂ ಕೇಳಿದರೆ — ರಾಜಾಜ್ಞೆಯಿದೆಯೆಂದು ಅವರಿಗೆ ಹೇಳಿ ಅವರನ್ನು ಸುಮ್ಮನೆ ಕೂಡ್ರಿಸಿ ಬಿಡುತ್ತಾರೆ. ಇಂಥ ಜನರಲ್ಲಿಯೆ....ಫಿತೂರಿಯ ಬೀಜವು ಬಿತ್ತಲ್ಪಡಬಾರದು. ಕೃಷ್ಣಾಜಿಪಂತ ಮತ್ತು ಬನ್ಯಾಬಾಪು ಫಿ....

ಬಾಬಾಸಾಹೇಬ— ವಿಷ್ಣು, ಒಮ್ಮೆಲೆ ಹಾಗೆ ಸಂಶಯವನ್ನು ತಾಳುವುದು ತಪ್ಪು. ಅವರೂ ರಾಜ್ಯದ ಆಧಾರಸ್ತಂಭರಾಗಿದ್ದಾರೆ. ರಾಜ್ಯದ ಪ್ರಮುಖ ಘಟಕಗಳ ಮೇಲೆ.... ವಿಶ್ವಾಸವಿಲ್ಲದೆ ಹೋದರೆ....ರಾಜ್ಯವಾಳುವದೂ ಕಠಿಣವಾದೀತು. ನೀನು ಏನಾದರೂ ತಪ್ಪು ಕಲ್ಪನೆ ಮಾಡಿಕೊಂಡಿರುವಿ.

ರಾಮರಾಯ— ಇಲ್ಲ ಪ್ರಭು, ವಿಷ್ಣು ಮಾಡಿದ ಮಾತು ಬಹು ಅಂಶದಲ್ಲಿ ಸತ್ಯವಾಗಿದೆ.... !

ಬಾಬಾಸಾಹೇಬ— ಅಂದರೆ....ಕೃಷ್ಣಾಜಿಪಂತ ಮತ್ತು ಬನ್ಯಾಬಾಪು ಇವರು ಫಿತೂರಿಯ ಸಂಚು ಹಾಕುತ್ತಿರುವರೆಂದು ನಿಮ್ಮ ಅಭಿಪ್ರಾಯವೆ ?

ರಾಮರಾಯ— ಹಾಗೆಂದು ಬಾಯಿಂದ ಆಡುವುದೂ ಕಠಿಣವಾಗಿರುವದು.

ಬಾಬಾಸಾಹೇಬ— ಅಮಾತ್ಯರೆ, ಅಧಿಕಾರದ ಕಿಚ್ಚು, ಇಷ್ಟೊಂದು ಸಡಿಲಾಗಿ ಹೋಗಿರುವದೇ ? ಆದರೆ ಫಿತೂರಿಯ ಸಂಶಯ ಬಂದರೆ ಸಾಕು....ಅದಕ್ಕೆ ಸಂಬಂಧಪಟ್ಟ....ಜನರ ರುಂಡಗಳನ್ನು ಚೆಂಡಾಡಿಸಿ ಬಿಡಿರಿ ! ಕೈಕಾಲು ಕತ್ತರಿಸಿ ಕತ್ತಲೆಯ ಕೋಣೆಯಲ್ಲಿ ಬೀಸಾಡಿಸಿ ಬಿಡಿರಿ! ಕಿಲ್ಲೆಯ ಗೋಡೆಯ ಮೇಲಿಂದ ಕೆಳಗೆ ನೂಕಿಸಿ ಬಿಡಿರಿ. ಅಂಥ ಕೃತ್ಯವೆಸಗಿದ ಜನರ ಮನೆ ಮಾರು ಸುಟ್ಟು....ಹಾಳು ಮಾಡಿರಿ.... ! ಅಮಾತ್ಯರೆ....ಇದಕ್ಕಿಂತಲೂ ಕಠಿಣತಮ ಶಿಕ್ಷೆಯನ್ನು ನಿಮ್ಮಿಂದ ಕೊಡುವುದಕ್ಕೆ ಸಾಧ್ಯವಾದರೆ ಅವಶ್ಯವಾಗಿ ಕೊಡಿರಿ.

ವಿಷ್ಣು— ಪ್ರಭು, ಇದರ ವಿಚಾರ ವಿನಿಮಯ ಶೀಘ್ರವಾಗಿ ಆಗಬೇಕು.

ಬಾಬಾಸಾಹೇಬ— ಅದಕ್ಕಾಗಿಯೆ ನಿಮ್ಮೆಲ್ಲರನ್ನು ಕರೆಕಳಿಸಿದ್ದೇನೆ. ಅಧಿಕಾರಿಗಳೂ ಈಗ ಬರಬಹುದು. ಆದರೆ ರಾಜ್ಯಕ್ಕೆ ದ್ರೋಹವನ್ನು ಬಗೆಯಲು ಹೊರಟವರಿಗೆ....ಕಠಿಣತಮ ಶಿಕ್ಷೆಯೂ ವಿಧಿಸಲ್ಪಡಬೇಕು.

ವಿಷ್ಣು— (ಬನ್ಯಾಬಾಪು, ಕೃಷ್ಣಾಜಿಪಂತಾದಿಗಳು ಬಂದರು.

ಬಾಬಾಸಾಹೇಬ— ವಿಷ್ಣು, ವ್ಯವಧಾನತೆಯಿಂದ ಚರ್ಚೆ ನಡೆಯಲಿ....

( ಸಮ್ಮಿಶ್ರವಾದ್ಯದ ಮೊಳಗು....ತದನಂತರ.... )

ಕೃಷ್ಣಾಜಿಪಂತ<br>ಬನ್ಯಾಬಾಪು } ಮಹಾರಾಜರಿಗೆ ಜಯವಾಗಲಿ.......

ಬಾಬಾಸಾಹೇಬ— ಸಮಯಕ್ಕೆ ಸರಿಯಾಗಿ ಎಲ್ಲರೂ ಬಂದಿರಿ ! ವೆಂಕಟರಮಣ ನಮ್ಮ ಕಡೆಗೆ ಇದ್ದಾನೆಂದೇ ಹೇಳಬಹುದು. ಕುಳಿತುಕೊಳ್ಳಿರಿ....ಕುಳಿತುಕೊಳ್ಳಿರಿ....ಅಮಾತ್ಯರೆ ಸಭೆಯ ಕಾರ್ಯ ಸಾಂಗವಾಗಲಿ....

ರಾಮರಾಯ— ನರಗುಂದಾಧಿಪತಿಗಳೆ ಮತ್ತು ಸನ್ಮಾನ್ಯ ಅಧಿಕಾರಿಗಳೆ....ಇಂದು ನಾವು....ಮಹತ್ವದ ಸಂಗತಿ ಕುರಿತು....ವಿಚಾರ ಮಾಡುವುದಕ್ಕೆಂದು ಇಲ್ಲಿ ಕೂಡಿದ್ದೇವೆ. ನಾಡಿನಲ್ಲಿ ವಿಚಿತ್ರ ಪರಿಸ್ಥಿತಿಯುಂಟಾಗಿರುವದು ತಮ್ಮೆಲ್ಲರಿಗೆ ಗೊತ್ತಿದ್ದ ವಿಷಯವೆ ಆಗಿರುವದು. ಇದಾಗಲೆ ಉತ್ತರ ಭಾರತದ ಕೆಲವು ಸ್ಥಳಗಳಲ್ಲಿ ಸ್ವಾತಂತ್ರ್ಯ ಸಮರವು ಆರಂಭವಾಗಿ ಶಾಂತವೂ ಆಗಿರುವದು. ಈ ಪ್ರಸಂಗದಲ್ಲಿ ನಮ್ಮ ಸಂಸ್ಥಾನವನ್ನು ಉಳಿಸಿಕೊಳ್ಳುವುದರ ಜೊತೆಯಲ್ಲಿ ಸ್ವದೇಶ ಮತ್ತು ಸ್ವಧರ್ಮದ ರಕ್ಷಣೆಯ ಭಾರವೂ....ಪರ್ಯಾಯದಿಂದ ನಮ್ಮ ಮೇಲೆ....ಬಂದಿರುವದು. ಆದ್ದರಿಂದ ಸಂಪೂರ್ಣ ವಿಚಾರದ ನಂತರವೆ ಒಂದು ನಿರ್ಧಾರಕ್ಕೆ ನಮಗೆ ಬರಬೇಕಾಗಿರುವದು. ನಿಮ್ಮ ನಿಮ್ಮ ವಿಚಾರಗಳನ್ನು ಬಹಿರಂಗವಾಗಿ ಮುಂಡಿಸುವದಕ್ಕೆ ಯಾವುದೂ ಆತಂಕವಿಲ್ಲ. ಮಹಾರಾಜರು ಇದೇ ಸಂಗತಿ ಮತ್ತಿಷ್ಟು ಸ್ಪಷ್ಟಗೊಳಿಸಬೇಕೆಂದು ಬಿನ್ನವಿಸಿಕೊಳ್ಳುತ್ತೇನೆ.

ಬಾಬಾಸಾಹೇಬ— ಮಾನ್ಯ ಅಧಿಕಾರಿಗಳೆ, ಮಂತ್ರಿವರ್ಯರು ಇವಾಗಲೆ ಎಲ್ಲವನ್ನೂ ಸ್ಪಷ್ಟವಾದ ರೀತಿಯಲ್ಲಿ ಹೇಳಿದ್ದಾರೆ. ಕನ್ನಡಿಗರ ತಾಳ್ಮೆಯ ಮತ್ತು....ಸಹನಶೀಲತೆಯ ಲಾಭವನ್ನು ಈ ಫಿರಂಗಿಗಳು ಚೆನ್ನಾಗಿಯೆ ಮಾಡಿಕೊಂಡಿದ್ದಾರೆ. ರಾಜನೆಂದರೆ ಉಪಭೋಗಶೂನ್ಯ ಸ್ವಾಮಿಯನಿ! ರಾಜ ಪ್ರಮುಖನಲ್ಲ ! ರಾಜಗದ್ದುಗೆ ಮುಖ್ಯ ! ಇಂಥ ಗದ್ದುಗೆಯನ್ನು ಸ್ಥಾಪಿಸುವದಕ್ಕಾಗಿ....ಸಾವಿರಾರು ವೀರರು ರಣರಂಗದಲ್ಲಿ ರಕ್ತದ ಮಳೆಯನ್ನು ಸುರಿಸಿ, ತಮ್ಮ ದೇಹಗಳ ಗೊಬ್ಬರ ಹಾಕಿ ಗದ್ದುಗೆಯೆಂಬ ವೃಕ್ಷವನ್ನು ಬೆಳೆಯಿಸಿಕೊಂಡು ಬಂದಿದ್ದಾರೆ. ಅಂಥ ವೃಕ್ಷವನ್ನು ಸಂರಕ್ಷಿಸುವ ಭಾರವು ಪರ್ಯಾಯದಿಂದ ಇಂದು ನಮ್ಮ ಮೇಲೆ ಬಂದಿರುವದು. ಆದ್ದರಿಂದ ವೈಯಕ್ತಿಕ ದ್ವೇಷಾಸೂಯೆಗಳನ್ನು ಬದಿಗಿರಿಸಿ, ಜಾತಿ–ಕುಲ–ಬಂಧುಗಳನ್ನು ಮರೆತು, ರಾಜ್ಯದ ಸಂರಕ್ಷಣೆಯನ್ನು ನಾವೆಲ್ಲರು

ಮಾಡಬೇಕಾಗಿರುವದು. ರಾಮದುರ್ಗದ ಅಧಿಪತಿಗಳು ನಮ್ಮ ರಕ್ತ-ಮಾಂಸದಿಂದ ಕೂಡಿದವರಾಗಿದ್ದರೂ........ಅವರಿಂದು ನಮಗೆ ಸಹಾಯವನ್ನು ಮಾಡದೆ—ಫಿರಂಗಿಗಳಿಗೆ ಬಹಿರಂಗವಾಗಿ ಸಹಾಯವನ್ನು ಮಾಡುತ್ತಿದ್ದಾರೆ. ಇದು ನಮ್ಮ ದೇಶದ ದುರ್ದೈವದ ಸಂಗತಿ! ರಾಜ್ಯದ ಲೋಭಕ್ಕಾಗಿ ನರಗುಂದಾಧಿಪತಿಯು ಫಿರಂಗಿಗಳೊಡನೆ ಹೋರಾಡಿದನೆಂದು....ಇತಿಹಾಸಕಾರರು ಬರೆದಿಡಬಾರದೆಂದು ನನ್ನ ಇಚ್ಛೆ! ರಾಜ್ಯಕ್ಕಿಂತಲೂ ಸ್ವದೇಶ-ಸ್ವಧರ್ಮದ ರಕ್ಷಣೆಗಾಗಿ ಫಿರಂಗಿಗಳೊಡನೆ ಕಡೆಗೆ ಮಾಡಬೇಕಾಗಿದೆ. ರಾಜ್ಯದ ಮೇಲೆ ಬಂದ ಗಂಡಾಂತರ ಮೊದಲು ದೂರಾಗಲಿ ಆಮೇಲೆ....ನಮ್ಮ ಒಳಜಗಳವನು ನೋಡಿಕೊಳ್ಳೋಣ....। ರಾಜ್ಯದ ಉತ್ತರಾಧಿಕಾರಿಗಳನ್ನು ನಿರ್ಧರಿಸೋಣ!

ರಾಮರಾಯ—ಪ್ರಕೃತ ಈ ಪ್ರಶ್ನೆ ಎಲ್ಲರ ಎದುರು ಪ್ರಮುಖವಾಗಿದ್ದರೂ ದತ್ತಕ ತೆಗೆದುಕೊಳ್ಳದೆಯೆ ನಮ್ಮ ರಾಜ್ಯದ ಸಂರಕ್ಷಣೆಯಿಂದು ಆಗಬೇಕಾಗಿರುವದು ಫಿರಂಗಿಗಳು ನಿಯಮ-ನೋಂಪಿಗಳನ್ನು ಮುಂದೊಡ್ಡಿ....ಒಂದೊಂದೇ ರಾಜ್ಯಗಳನ್ನು ಹಾಳುಮಾಡುತ್ತಿದ್ದಾರೆ. ಝಾಂಸಿ, ಸಾತಾರಾ ರಾಜ್ಯಗಳ ಭಗ್ನಚಿತ್ರಗಳನ್ನು ದೃಷ್ಟಿಯಿಂದ ದೂರುಮಾಡಿ ನಡೆಯುವಂತಿಲ್ಲ. ನಮ್ಮ ನಮ್ಮಲ್ಲಿಯ ಅಧಿಕಾರಲಾಲಸೆ, ಕಲಹಗಳ ರುದ್ರ ಚಿತ್ರಗಳನ್ನು ದೃಷ್ಟಿಯಿಂದ ದೂರುಮಾಡಿ ನಡೆಯುವಂತಿಲ್ಲ—! ಇದರ ಜೊತೆಯಲ್ಲಿಯೆ ಫಿರಂಗಿಗಳ ಅತ್ಯಾಚಾರ. ಕುಹಕತನ ಮತ್ತು ರಾಜ್ಯಲಾಲಸೆ ಇವುಗಳನ್ನು ನಾವು ತೆರೆದ ದೃಷ್ಟಿಯಿಂದ ನೋಡುತ್ತ ಮುಂದ್ಹೆಜ್ಜೆ ಇಡಬೇಕಾಗಿರುವದು. ಶಾಸವೂರು, ಬರೇಲಿ ಈ ಊರುಗಳಲ್ಲಿ ಬ್ರಿಟಿಷರು ಮಾಡಿದ ಅತ್ಯಾಚಾರ ಎಂದಿಗೂ ಮರೆಯದಂತಹದಿರುವದು.

ಕೃಷ್ಣಾಜಿಪಂತ—ಪ್ರಸ್ತುತ ಪ್ರಸಂಗಕ್ಕೆ ಅಮಾತ್ಯರ ಮಾತು ಅಸಂಜಸವಾಗಿ ತೋರುವದು. ದತ್ತಕ ತೆಗೆದುಕೊಳ್ಳುವುದರ ಸಲುವಾಗಿಯೆ ಈ ಪರಿಸ್ಥಿತಿ ಪ್ರಾಪ್ತವಾದಾಗ ಅದರ ನಿರ್ಧಾರ ಮೊದಲು ಆಗುವುದು ಒಳಿತು.

ರಾಮರಾವ— ಮೊದಲು ರಾಜ್ಯ ಸಂರಕ್ಷಣೆಗೆ ಮುಖ್ಯ! ಆಮೇಲೆ ಉತ್ತರಾಧಿಕಾರಿಗಳನ್ನು ನಿರ್ಧರಿಸೋಣವಂತೆ!

ಬನ್ಯಾಬಾಪು— ಅಮಾತ್ಯರು ಕ್ಷಮಿಸಬೇಕು. ಉತ್ತರಾಧಿಕಾರಿಗಳನ್ನು ನಾವು ನಿರ್ಧರಿಸಿದರೂ ಅದನ್ನು ಕೊನೆಗೆ ನಿರ್ಧರಿಸುವರು....ಕಂಪನಿ ಸರಕಾರವಲ್ಲವೇ? ಅವರ ನಿರ್ಧಾರವೆ ಕೊನೆಯ ನಿರ್ಧಾರ! ಅಂದಮೇಲೆ....

ಬಾಬಾಸಾಹೇಬ— (ಉದ್ವೇಗ ಪೂರ್ಣವಾಗಿ)ಮದ್ದಿನುಗ್ರಾಣದ ಅಧಿಕಾರಿಗಳೆ ಇದನ್ನಾರು ನಿಮಗೆ ಹೇಳಿದರು? ನಾವು ನಮ್ಮ ಸರ್ವಸ್ವವನ್ನು ಬ್ರಿಟಿಷರ ಸ್ವಾಧೀನ ಮಾಡಿಲ್ಲ. ದತ್ತಕ ತೆಗೆದುಕೊಳ್ಳುವದರ ಇಲ್ಲವೆ ಬಿಡುವ ನಿರ್ಧಾರ ಈ ಮೊದಲೇ ಆಗಿರುವದು. ಕೇವಲ ತೋರಿಕೆಗೆಂದು ಕಂಪನಿ ಸರಕಾರದಲ್ಲಿ ಅರ್ಜಿಯನ್ನು ಮಾಡಿಕೊಂಡದ್ದಾಗಿದೆ. ಮೇಲಾಗಿ ಕೃಷ್ಣಾಜಿಪಂತ ಮತ್ತು ನೀವು ದತ್ತಕ ಪ್ರಕರಣದಲ್ಲಿ ವಹಿಸಿದ ಆಸ್ಥೆಯನ್ನು ಕಂಡು ನಮಗೆ ಆಶ್ಚರ್ಯವೆನಿಸುವದು. ಇದೂ ಅಲ್ಲದೆ ಕಂಪನಿ ಸರಕಾರದ ಬಾಲ ಬಡಿಯುವ ನಿಮ್ಮ ವೃತ್ತಿಯನ್ನು ಕಂಡು ಖೇದವೆನಿಸುವದು.

ಕೃಷ್ಣಾಜಿಪಂತ— ಮಹಾರಾಜರು ನನ್ನ ಮಾತುಗಳನ್ನು....

ಬಾಬಾಸಾಹೇಬ— ವಿಪರೀತವಾಗಿ ಭಾವಿಸಿಲ್ಲ—

ಬನ್ಯಾಬಾಪು— ರಾಜ್ಯದ ಸಂರಕ್ಷಣೆಯ ದೃಷ್ಟಿಕೋನದಲ್ಲಿಂದಲೆ ಈ ಮಾತುಗಳನ್ನು ಆಡಿದ್ದೇವೆ.

ಬಾಬಾಸಾಹೇಬ— ಅಧಿಕಾರಿಗಳೆ, ಪಟ್ಟಾಧಿಕಾರಿಗಳಿಗೆ ಪಟ್ಟ ದೊರೆಯಬೇಕೆಂದು ಎಲ್ಲಿಯೂ ಹೇಳಿಲ್ಲ. ರಾಜ್ಯಕ್ಕೆ ಬರುವ ಅಧಿಕಾರಿಯಲ್ಲಿ ಗದ್ದಿಗೆಯನ್ನೇರುವುದಕ್ಕೆ ಇರಬೇಕಾದ ಗುಣಗಳಿದ್ದರಾಯಿತು. ಕೃಷ್ಣಾಜಿಪಂತ ರಾಜ್ಯಕ್ಕಾಗಿ ಪಟ್ಟಾಧಿಕಾರಿಗಳು; ಪಟ್ಟಾಧಿಕಾರಿಗಳಿಗಾಗಿ ರಾಜ್ಯವಲ್ಲ—! ಆದ್ದರಿಂದ ಮೊದಲು ರಾಜ್ಯವನ್ನು ಕಾಯ್ದುಕೊಳ್ಳುವುದು ನಮ್ಮೆಲ್ಲರ ಕರ್ತವ್ಯವಾಗಿರುವದು. ಬನ್ಯಾಬಾಪು, ಹೀಗೇಕೆ ಕುತೂಹಲಗಳಾಗಿ ನೋಡುತ್ತಿದ್ದೀರಿ. ನಿಮಗೇನಾದರೂ ಹೇಳಬೇಕಾಗಿರುವದೆ?

ಬನ್ಯಾಬಾಪು— ಮಹಾರಾಜ ಬಗಲಲ್ಲಿ ಮಗುವನ್ನಿಟ್ಟುಕೊಂಡು ಮನೆಮನೆ ಮಗುವಿಗಾಗಿ ತಿರುಗುವ ಮಾತೆಯಂತೆ ನಮ್ಮ ಪರಿಸ್ಥಿತಿಯಾಗಿರುವದೆಂದು ನನಗೆ.... ಅನಿಸುವದು.

ಬಾಬಾಸಾಹೇಬ— ಅಂದರೆ....

ಬನ್ಯಾಬಾಪು— ಉತ್ತರಾಧಿಕಾರಿಗಳನ್ನು ಹುಡುಕುವ ಪ್ರಶ್ನೆಯೆ ಉದ್ಭವಿಸುವದಿಲ್ಲ. ಯಾಕಂದರೆ ಮದ್ದಿನುಗ್ರಾಣದ ಅಧಿಕಾರಿಗಳ ಮಗ.... ಸರ್ವ ದೃಷ್ಟಿಯಿಂದಲೂ ಅರ್ಹನಿದ್ದಾನೆಂದು ನನ್ನ ಅಭಿಪ್ರಾಯ. ಶೂರ-ಧೀರನಿರುವದು ಸನ್ನಿಧಿಗೆ ವಿದಿತವಾದ ಸಂಗತಿಯೆ ಆಗಿರುವದು.

ಬಾಬಾಸಾಹೇಬ— ಯಾರು? ಕೃಷ್ಣಾಜಿಪಂತನ ಮಗನ ವಿಷಯವಾಗಿ ಮಾತಾಡುತ್ತಿರುವಿರೇನು?

ಬನ್ಯಾಬಾಪು— ಹೌದು ಪ್ರಭು....!

ಕೃಷ್ಣಾಜಿಪಂತ— ಅನೇಕ ಸಾರೆ ನಿಮ್ಮ ಜೊತೆಯಲ್ಲಿ ಯುದ್ಧಕ್ಕೂ ಆತ ಬಂದಿದ್ದಾನೆ.

ರಾಮರಾಯ— ಕೃಷ್ಣಾಜಿಪಂತರೆ, ಪಟ್ಟವೇರುವುದಕ್ಕೆ ಶೂರತನವೊಂದಿದ್ದರೆ ಸಾಲದು. ಅದರೊಂದಿಗೆ ಯೋಗ್ಯತೆ ಬೇಕು. ಧೈರ್ಯ-ಸಾಹಸಗಳು ಬೇಕು ! ರಾಜ್ಯವನ್ನಾಳುವ ಕುಶಲ-ಜಾಣತನಗಳು ಬೇಕು. ಈ ಗುಣಗಳ ಅಭಾವ ಮದ್ದಿನುಗ್ರಾಣದ....ಅಧಿಕಾರಿಗಳ ಮಗನಲ್ಲಿರುವದು ತಾವ ರಿತ ಸಂಗತಿಯೆ ಆಗಿರುವದು.

ಕೃಷ್ಣಾಜಿಪಂತ— ಮಹಾರಾಜರ ಸನ್ನಿಧಿಯಲ್ಲಿ........ ಬನ್ಯಾಬಾಪು ತನ್ನ ವಿಚಾರಗಳನ್ನು ಮಂಡಿಸುತ್ತಿದ್ದನು. ಯಾರು ಅಧಿಕಾರಿಗಳಾಗಿ ಬಂದರೇನು ನಿಷ್ಠೆಯಿಂದ ಸೇವೆ ಮಾಡುವದು ನಮ್ಮಗಳ ಕರ್ತವ್ಯ !

ಬನ್ಯಾಬಾಪು—ಅಮಾತ್ಯರು ಹೀಗೆ ಒಮ್ಮೆಲೆ ಮಾತಾಡಿ ಅಸಂತೋಷದ ಜನಕರಾಗಬಾರದು.

ಬಾಬಾಸಾಹೇಬ—ಅಧಿಕಾರಿಗಳೆ.... ಜಗಳಾಡಬೇಡಿರಿ! ಜಗಳಾಡಿ ಮನಸ್ತಾಪ ಮಾಡಿಕೊಳ್ಳಬೇಡಿರಿ.

ರಾಮರಾಯ— ಬನ್ಯಾಬಾಪು, ನನಗೆ ಬುದ್ಧಿ ಕಲಿಸುವ ವಿಚಾರವನ್ನು ತಲೆಯಲ್ಲಿಂದ ತೆಗೆದು ಹಾಕಿರಿ. ಮದ್ದಿನುಗ್ರಾಣದ ಅಧಿಕಾರಿಗಳ ಮಗನ ಬಗ್ಗೆ ನೀವೇಕೆ ಇಷ್ಟೊಂದು ಆಸ್ಥೆ ವಹಿಸಿದ್ದೀರಿ. ರಾಜ್ಯದ ಸಂರಕ್ಷಣೆಯ ದೃಷ್ಟಿಯನ್ನಿಟ್ಟುಕೊಂಡು ಏನಾದರೂ ಮಾತಾಡಿರಿ. ಅದಕ್ಕಾಗಿ ಮಹಾರಾಜರು ನಿಮ್ಮನ್ನು ಇಲ್ಲಿ ಕರೆಕಳುಹಿದ್ದಾರೆ.

ಬನ್ಯಾಬಾಪು— ಅಮಾತ್ಯರು ನನ್ನ ಮಾತುಗಳನ್ನು....

ರಾಮರಾಯ— ವಿಪರೀತವಾಗಿ ತಿಳಿದುಕೊಂಡಿಲ್ಲ. ಹಾಗೆ ತಾವು ತಿಳಿದುಕೊಳ್ಳಬಾರದು.

ಕೃಷ್ಣಾಜಿಪಂತ— ಅಮಾತ್ಯರು.... ಸಣ್ಣ ಸಂಗತಿಗಾಗಿ ಇಷ್ಟೊಂದು ಕೋಪಗೊಳ್ಳಬಾರದು. ಬನ್ಯಾಬಾಪು... ತನ್ನ ವಿಚಾರವನ್ನು ಹೇಳಿದ ಇಷ್ಟೇ ! ಅದಕ್ಕಾಗಿ ಆತನನ್ನು ಖಡ್ಗದ ಧಾರೆಯ ಮೇಲೆ ಹಿಡಿದಂತೆ ಮಾಡಿ—ಮಾತಾಡುವದು ಸಮಂಜಸವೆಂದು....ನನಗಂತೂ ಅನಿಸುವದಿಲ್ಲ.

ರಾಮರಾಯ— ಕೃಷ್ಣಾಜಿಪಂತ ನಾನು ಮಾತಾಡುವದನ್ನು ಸಂಪೂರ್ಣ ವಿಚಾರದ ನಂತರವೆ ಮಾತಾಡುತ್ತೇನೆ. ನಿನ್ನ ಮಗನ ವಿಷಯದಲ್ಲಿ ನಾನು ಹೀಗೆ ಮಾತಾಡಿದ್ದುದರಿಂದ ನೀವು ಸಹ ಕೋಪಗೊಂಡಿರಬಹುದು. ಆದರೆ ಪರಿಸ್ಥಿತಿಯೆ ಹಾಗಿರುವದರಿಂದ ಮಾತಾಡುವದು ಕ್ರಮಪ್ರಾಪ್ತವಾಗಿರುವದು.

ಬಾಬಾಸಾಹೇಬ— ಜಗಳಾಡಬೇಡಿರಿ ! ಜಗಳಾಡುವದಕ್ಕಾಗಿ ನಾವಿಲ್ಲಿ ಒಂದೆಡೆಗೆ ಬಂದಿಲ್ಲ. ಕುಲಸ್ವಾಮಿನಿಯಾದ ವೆಂಕಟೇಶನು ಎಲ್ಲರಿಗೂ ಸದ್ಬುದ್ಧಿಯನು ದಯಪಾಲಿಸಲಿ. ದತ್ತಕ ತೆಗೆದುಕೊಳ್ಳುವ ಕುರಿತು ಹಿಂದಿನಿಂದ ವಿಚಾರ ಮಾಡೋಣ....!

ರಾಮರಾಯ— ಮಹಾರಾಜ....ದತ್ತಕ ತೆಗೆದುಕೊಳ್ಳುವುದಕ್ಕೆ ತಾವು ಗಡಬಡಿಯನ್ನು ಮಾಡಬಾರದು. ಯಾಕಂದರೆ ಪರಿಸ್ಥಿತಿಯು ಬಹಳ ನಾಜೂಕಾಗಿರುವದು. ಒಂದೆಡೆಗೆ ಕ್ರಾಂತಿಯು ಬೇಗೆಯು ಭುಗಿಲೆಂದು ಧುಮುಕ್ಕಿಕ್ಕಿದರೆ ಮತ್ತೊಂದೆಡೆಗೆ ನಮ್ಮ ಪೂರ್ವಜರು ಇದುವರೆಗೆ ಬೆಳೆಯಿಸಿಕೊಂಡು ಬಂದ ಸಾಮ್ರಾಜ್ಯ ವೃಕ್ಷಕ್ಕೆ....ನಮ್ಮ ಕಾಲವೀಗ ಕೊಡಲಿಯನ್ನೆತ್ತಿಕೊಂಡು ನಿಂತಂತಾಗಿರುವದು. ದತ್ತಕ ತೆಗೆದುಕೊಳ್ಳುವರ ಕುಲಗೋತ್ರ ಒಳ್ಳೆಯವಾಗಿರಬೇಕು. ಶೌರ್ಯ-ಧೈರ್ಯದ ಮೇಲೆ ದತ್ತಕ ತೆಗೆದುಕೊಳ್ಳುವ ನಿರ್ಧಾರವನ್ನು ಮಾಡಬಾರದೆಂದು ಈ ಸೇವಕನ ನಮ್ರ ವಿನಂತಿಯಿದೆ.

ಬನ್ಯಾಬಾಪು— ಮಹಾಪ್ರಭು ಅಮಾತ್ಯರು ರಾಜಗದ್ದುಗೆಯ ಎದುರಿನಲ್ಲಿ ರಾಜನಿಷ್ಠ ಮತ್ತು ರಾಜ್ಯನಿಷ್ಠ ಸೇವಕೋರ್ವನ ಅಪಮಾನವನ್ನು ಈ ರೀತಿಯಾಗಿ ಮಾಡಬಾರದು.

ರಾಮರಾಯ— ಬನ್ಯಾಬಾಪು ರಾಜಕಾರಣದಲ್ಲಿ ನಿಮ್ಮ ಬುದ್ಧಿಯು ಚುರುಕಾಗಿರುವದನ್ನು ಕಂಡು ನನಗೆ ಮಹಾನಂದವಾಗುತ್ತಿರುವದು. ಆದರೆ ಈ ಬುದ್ಧಿಯ ಚುರುಕು, ಸಾಮ್ರಾಜ್ಯ ಸಂರಕ್ಷಣೆಗಾಗಿ ಆಗಲಿ....ಅಂದರಾಯಿತು.

ಕೃಷ್ಣಾಜಿಪಂತ— ಅಮಾತ್ಯರು ಓರ್ವ ಅಧಿಕಾರಿಗಳ ಅಪಮಾನವನ್ನು ಮಾಡುವದರ ಜೊತೆಯಲ್ಲಿ ನಾಡಿನ ಜನರ ವಿಷಯದಲ್ಲಿಯೂ ತಮ್ಮ ಸಂದೇಹವನ್ನು ವ್ಯಕ್ತಗೊಳಿಸಿದ್ದಾರೆ. ಇದರಿಂದ......

ಬಾಬಾಸಾಹೇಬ — (ಕ್ರೋಧದಿಂದ) ಕೃಷ್ಣಾಜಿಪಂತ, ಅಮಾತ್ಯರು ಸ್ವಾರ್ಥದಿಂದ ಪ್ರೇರಿತರಾಗಿ ಇಲ್ಲವೆ ಅಧಿಕಾರದ ಲಾಲಸೆಯಿಂದ ಕೂಡಿದವರಾಗಿ ಈ ಮಾತುಗಳನ್ನು ಆಡಿಲ್ಲವೆಂದು ನಮ್ಮ ಮನಸ್ಸಿಗೆ ಖಾತ್ರಿಯಿದೆ. ಅವರ ದೃಷ್ಟಿಯೆದುರು....ರಾಜ್ಯದ ಕಲ್ಯಾಣವೊಂದೇ ಇರುವದು. ಇದನ್ನು ತಿಳಿದುಕೊಳ್ಳದೆ....ಬನ್ಯಾಬಾಪು ಮತ್ತು ಕೃಷ್ಣಾಜಿಪಂತರು ಹೀಗೆ ಮಾತಾಡುವದು ತಪ್ಪೆಂದು ನಮಗೆ ಅನಿಸುವದು. ನಮ್ಮಂತೆಯೆ ಉಳಿದ ಅಧಿಕಾರಿ ವರ್ಗಕ್ಕೂ ಅನಿಸುವದೆಂದು

ನಮ್ಮ ಮನಸ್ಸಿನ ಖಾತ್ರಿಯಿರುವದು. ಅಧಿಕಾರಿಗಳೇ, ನೀವೆ ಹೀಗೆ ಜಗಳಾಡುವುದಕ್ಕೆ ಆರಂಭಿಸಿದರೆ ಶತ್ರುಗಳ ಜೊತೆಯಲ್ಲಿ ನಾವು ಯುದ್ಧವನ್ನು ಮಾಡುವ ಬಗೆಯೆಂತು ? ಶತ್ರುಗಳು ನಮ್ಮ ಮನೆಯ ಬಾಗಿಲಿಗೆ ಬಂದು ಕುಳಿತುಕೊಂಡಿದ್ದಾರೆ. ಇದರ ಅರಿವು ಕೆಲವೊಂದು ಅಧಿಕಾರಿಗಳಿಗೆ ಇಲ್ಲವಾಗಿ ತೋರುವದು. ಒಂದೇ ದೇಶದಲ್ಲಿ ಹುಟ್ಟಿ ಒಂದೇ ತಾಯಿಯ ಮೊಲೆಯುಂಡು ಬೆಳೆದ ನಾವು....ಈ ರೀತಿಯಾಗಿ ಜಗಳಾಡುವದು ಒಳಿತಲ್ಲ ! ನಮ್ಮ ದೇಶದ ಜನರಲ್ಲಿದ್ದ........ ಅವಗುಣದ ಆಧಾರದ ಮೇಲಿಂದ.... ಫಿರಂಗಿಗಳು ನಮ್ಮ ದೇಶದಲ್ಲಿ ರಾಜ್ಯವಾಳುತ್ತಿದ್ದಾರೆ. ಧರ್ಮ-ಧರ್ಮದಲ್ಲಿ ಜಗಳ ಜಾತಿ-ಜಾತಿಯಲ್ಲಿ ಮತ್ಸರ, ಅಧಿಕಾರ ಲಾಲಸೆ ಉಚ್ಚ-ನೀಚಗಳ ಪ್ರಭೇದಗಳ ಬಲೆಯಲ್ಲಿ ಭಾರತೀಯರನ್ನು ಅವರು........ ಸೆರೆ ಹಿಡಿದಿದ್ದಾರೆ. ಆದ್ದರಿಂದ ಹುಲಿಯಂತಿದ್ದ ಭಾರತೀಯರಿಂದು ಇಲಿಯಾಗಿದ್ದಾರೆ.

ಬನ್ಯಾಬಾಪು – ಮಹಾರಾಜರು ನನ್ನನ್ನು ಕ್ಷಮಿಸಬೇಕು. ಸೇವಕನ ಸಂಶಯ....ಪರಿಹಾರ ಮಾಡಿದ್ದಕ್ಕಾಗಿ ಕೃತಜ್ಞನಾಗಿದ್ದೇನೆ.

ಬಾಬಾಸಾಹೇಬ— ಕೃತಜ್ಞರಾಗುವ ಕಾರಣವಿಲ್ಲ ಬನ್ಯಾಬಾಪು ! ನನ್ನ ಕರ್ತವ್ಯವನ್ನು....ನಾನು ಮಾಡಿದ್ದೇನೆ !

ಕೃಷ್ಣಾಜಿಪಂತ— ಮಹಾರಾಜ, ಸಮಯದ ಮಹತ್ವವನ್ನರಿತು ಅಮಾತ್ಯ ಸರಿಯಾಗಿ ಮಾತಾಡಬೇಕೆಂದು ನನ್ನ ಅಭಿಪ್ರಾಯ....

ಬಾಬಾಸಾಹೇಬ— ( ಸಿಟ್ಟಿನಿಂದ ) ಕೃಷ್ಣಾಜಿಪಂತ ಅಮಾತ್ಯರು ಯಾವ ಅರ್ಥದಲ್ಲಿ ಮಾತಾಡಿದ್ದಾರೆಂಬುದನ್ನು ನೀವು ತಪ್ಪು ಭಾವಿಸಿರುವಿರಿ. ನೀವೂ ರಾಜ್ಯದ ಪ್ರಮುಖ ಆಧಾರಸ್ತಂಭರಾಗಿರುವಿರಿ. ಆದ್ದರಿಂದ ಇಂತಹ ಸೂಕ್ಷ್ಮ ಕಾಲದಲ್ಲಿ ಎಲ್ಲರಂತೆ ನೀವೂ ಎಚ್ಚರಾಗಿರುವದುಚಿತವು. ರಾಜ್ಯದ ಸ್ಥಿರತೆಗೆ.... ಯೋಗ್ಯವಾದ ಸಹಾಯ ನಿಮ್ಮಿಂದ ಆಗಬೇಕಾಗಿರುವದು. ಇದಲ್ಲದೆ ಕೋಟೆಯಲ್ಲಿ ಬರಹೋಗುವ ಜನರ ವಿಷಯದಲ್ಲಿ ನೀವು ತುಂಬ ಎಚ್ಚರ ವಹಿಸಬೇಕು. ಎಲ್ಲ ಹೊಣೆಗಾರಿಕೆ ನಿಮ್ಮ ಮೇಲಿರುವದು.

ಕೃಷ್ಣಾಜಿಪಂತ— ಇದು ವರೆಗೆ ಕಾರ್ಯದಲ್ಲಿ ತಿಲಮಾತ್ರವೂ ಕಡಿಮೆ ಬೀಳದಂತೆ ನಡೆದುಕೊಂಡಿದ್ದೇನೆ. ನನ್ನ ರಾಜನಿಷ್ಠೆಯ ವಿಷಯದಲ್ಲಿ....

ಬಾಬಾಸಾಹೇಬ— ನಮಗೆ ಎಳ್ಳಷ್ಟೂ ಸಂಶಯವಿಲ್ಲ! ಸಂಶಯವನ್ನು ತಾಳುವುದೂ ತಪ್ಪು ! ಸಂಶಯ ಬಂದರೆ ಒಂದು ಹೊಡೆತ ಎರಡು ತುಂಡು ! ಕೃಷ್ಣಾಜಿಪಂತ, ಅರಸೊತ್ತಿಗೆ ರಾಜನೊಬ್ಬನ ಸೊತ್ತಲ್ಲ ! ಎಲ್ಲ ಪ್ರಜೆಗಳ ಸೊತ್ತದು....! ಅದು ಹಾಳಾಗದಂತೆ ನೋಡಿಕೊಳ್ಳುವದು ಪ್ರತಿಯೊಬ್ಬನ ಕರ್ತವ್ಯವಾಗಿರುವದು. ಅದಕ್ಕಾಗಿ ನಾವು ಮತ್ತು ನೀವು ಕೂಡಿಯೆ ಪ್ರಯತ್ನಿಸಬೇಕಾಗಿರುವದು. ಇದಲ್ಲದೆ ನಿಮ್ಮಂತಹ ಸ್ವಾಮಿನಿಷ್ಠರ ನಿಷ್ಠೆಯೆ ನರಗುಂದದ ಸಿಂಹಾಸನದ ತಳಹದಿಯಾಗಿರುವದು. ಆದ್ದರಿಂದ ನಾವು ಯಾರಿಗೂ ಹೆದರುವಂತಿಲ್ಲ.

ರಾಮರಾಯ— ಮಹಾರಾಜ, ಅಧಿಕಾರದ ಆಡಂಬರಕ್ಕಿಂತಲೂ ರಾಜ್ಯವನ್ನು ಸಂರಕ್ಷಿಸುವ ಹೊಣೆಯಲ್ಲಿಂದ ನನ್ನನ್ನು ಪಾರು ಮಾಡಿರಿ....! ಮೊದಲಿನ ಮಹಾರಾಜರು ನನ್ನಲ್ಲಿಯ ಯಾವ ಗುಣವನ್ನು ಮೆಚ್ಚಿ, ನನ್ನನ್ನು ಮಂತ್ರಿಯನ್ನಾಗಿ ಮಾಡಿಕೊಂಡರೊ ಇದೇ ತಿಳಿಯದಂತಾಗಿರುವದು. ಹೊಣೆಗಾರಿಕೆಯನ್ನು ಹೊತ್ತು ಹೊತ್ತು ನನಗೆ ಸಾಕಾಗಿರುವದು.

ಬಾಬಾಸಾಹೇಬ— ನಿಮ್ಮಂತಹ ಜನರಿಂದಲೆ ಈ ರಾಜ್ಯ ಇದು ವರೆಗೆ ಉಳಿದುಕೊಂಡು ಬಂದಿರುವದು. ಆಧಾರಸ್ತಂಭಗಳೆ ಒಂದೊಂದಾಗಿ ಕಳಚಿಕೊಂಡು ಬೀಳುವದಕ್ಕೆ ಆರಂಭಿಸಿದರೆ ರಾಜ್ಯದ ಪರಿಸ್ಥಿತಿಯೇನಾದೀತು ? ನರಗುಂದದ ಸಿಂಹಾಸನಕ್ಕಾಗಿ ಗಂಧದ ಕೊರಡಿನಂತೆ ನೀವು ನಿಮ್ಮ ದೇಹವನ್ನು ಸವಿಸಿದುದರ ಕಲ್ಪನೆ ಇನ್ನಿತರಿಗೆ ಇರದಿದ್ದರೂ ನಮಗೆ ಸಂಪೂರ್ಣವಾಗಿರುವದು. ಹ್ಞಂ....ಇದೇನು.... ದೂತನೇಕೆ ಇತ್ತಕಡೆಗೆ ಲಗುಬಗೆಯಿಂದ ಬರುತ್ತಿದ್ದಾನೆ ?

( ನಡುವೆ ಸೇವಕ ಪ್ರವೇಶಿಸಿ )

ಸೇವಕ— ಮಹಾರಾಜರಿಗೆ ಜಯವಾಗಲಿ. ಕಂಪನಿ ಸರಕಾರದಿಂದ ಒಬ್ಬ ದೂತ ಬಂದಿದ್ದಾನೆ.

ಬಾಬಾಸಾಹೇಬ— ಆತನನ್ನು ಬೇಗನೆ ಒಳಕ್ಕೆ ಕಳಿಸಿಕೊಡು (ಸೇವಕ ಹೋಗುವನು) ಅಮಾತ್ಯರೆ....

ರಾಮರಾಯ— ಪ್ರಭು....

ಬಾಬಾಸಾಹೇಬ— ಅಧಿಕಾರಿಗಳೆ.... ರಾಜ್ಯದ ಉತ್ತರಾಧಿಕಾರಿಗಳ ಸಮಸ್ಯೆಯೊಂದು....ಪ್ರಕೃತ ಬಗೆಹರಿದಂತಾಯಿತು. ಹ್ಞಂ....ಇದೇನು....? ಕೆಂಪು.... ಸಾಹೇಬನೆ ದೂತನಾಗಿ ಬಂದಿದ್ದಾನಲ್ಲ.... ?

( ದೂತ ಪ್ರವೇಶಿಸಿ )

ದೂತ— ನಮಸ್ಕಾರ....ಬಾಬಾಸಾಹೇಬರಿಗೆ ನಮಸ್ಕಾರ....(ಇಂಗ್ಲೀಷರು ಕನ್ನಡ ಮಾತಾಡುವಂತೆ—)

ಬಾಬಾಸಾಹೇಬ— ನೀನು ಎಲ್ಲಿಂದ ಬಂದೆ ?

ದೂತ— ಕುರುಂಡವಾಡದಿಂದ....

ರಾಮರಾಯ— ಕುರುಂದವಾಡದಿಂದಲೆ....

ದೂತ— ಹೌದು.

ಬಾಬಾಸಾಹೇಬ— ಮೆನ್‌ಸನ್ ದೊರೆಗಳು ಕ್ಷೇಮವಾಗಿದ್ದಾರೆಯೆ ?

ದೂತ— ಇದಾರೆ.... ಇದಾರೆ....

ಬಾಬಾಸಾಹೇಬ— ಈಗ ಯಾವ ಊರಿನಲ್ಲಿದ್ದಾರೆ ?

ದೂತ— ಕುರುಂಡವಾಡದಲ್ಲಿ....ಆಮೇಲೆ....ಮಿರಜಿಗೆ ಹೋಗಲೇಕು ಅಂತಾ.... ಅಂತಿದ್ದರು. ಮದು ಈ ಕಾಗದ ನಿಮಗೆ ಕೊಟ್ಟದಾರೆ....

ಬಾಬಾಸಾಹೇಬ—ವಿಷ್ಣು,ದೂತನು ದಣಿದು ಬಂದಂತೆ ತೋರುವದು. ಆತನ ಊಟದ ವ್ಯವಸ್ಥೆಯನ್ನು ಮಾಡು ! (ದೂತ ಮತ್ತು ವಿಷ್ಣು ಹೋಗುವರು) ಅಮಾತ್ಯರೆ, ಕಟ್ಟೋಲೆಯನ್ನು ಆದಷ್ಟು ಬೇಗ ಓದಿರಿ.

ರಾಮರಾಯ— ನರಗುಂದಾಧಿ ಪತಿಗಳಾದ ಶ್ರೀ ಭಾಸ್ಕರಪಂತ ಉರ್ಫ ಬಾಬಾಸಾಹೇಬ ಇವರಿಗೆ— ಹಿಂದುಸ್ಥಾನದ ಗವ್ಹರ್ನರ ಜನರಲ್ಲರಾದ ಡಲ್ಲಹೌಸಿ ಇವರ ಓಲೆಗನುಸಾರವಾಗಿ ನಿಮಗೆ ಕಾಯ್ದೆಶೀರ ದತ್ತಕ ತೆಗೆದುಕೊಳ್ಳಲಿಕ್ಕೆ ಬರುವುದಿಲ್ಲವೆಂದು ತಿಳಿಸುವದಕ್ಕೆ ವಿಷಾದವೆನಿಸುವದು. ಝಾಂಸಿ, ಸಾತಾರಾ ರಾಜ್ಯಗಳ ವಿಷಯದಲ್ಲಿ ಸರಕಾರ ತಾಳಿದ ಅಭಿಪ್ರಾಯವನ್ನು ನಿಮ್ಮ ರಾಜ್ಯದ ವಿಷಯದಲ್ಲಿಯೂ ತಾಳಿದೆ. ನಿಮ್ಮ ಮೇಜರ್ ರೆಸಿಡೆಂಟ್ ಮೆನ್‌ಸನ್.

ಬಾಬಾಸಾಹೇಬ— (ಖಡ್ಗದ ಸದ್ದು) ಹರಾಮಖೋರ ದಗಲ್‌ಬಾಜ ! ಕೊನೆಗೆ ವಿಶ್ವಾಸಘಾತ ಮಾಡಿದೆಯಲ್ಲವೆ ? ನರಗುಂದದ ಬಾಬಾಸಾಹೇಬನ—ಕೃತಘ್ನನಾಗಿ ವರ್ತಿಸಿದೆಯಲ್ಲವೆ?

ರಾಮರಾಯ— ಪ್ರಭುಗಳು ಶಾಂತರಾಗಬೇಕು. ಮೆನ್‌ಸನ್‌ನಿಂದ ಈ ರೀತಿಯಲ್ಲಿ ಓಲೆ ಬರುವುದು ಸಹಜವಿದೆ.

ಬಾಬಾಸಾಹೇಬ— ಕಂಪನಿ ಸರಕಾರದಲ್ಲಿ ನ್ಯಾಯವಿದೆಯೆಂದು ಇದುವರೆಗೆ ನಾನು ಭಾವಿಸಿದ್ದೆ.

ರಾಮರಾಯ— ಅದನ್ನೆ ತಪ್ಪು ಭಾವಿಸಿದ್ದಿರಿ. ಸಮಯ ಇನ್ನೂ ಮಿಂಚಿ ಹೋಗಿಲ್ಲ. ಶಾಂತತೆಯಿಂದ ಎಲ್ಲವನ್ನೂ ಮುಂದೊರೆಯಿಸಬೇಕಾಗಿದೆ—

ವಿಷ್ಣು— ಶಾಂತಿಯಂತೆ ಶಾಂತಿ ! ಇನ್ನೆಲ್ಲಿಯ ಶಾಂತಿ ಅಮಾತ್ಯರೆ ? ಏಳು ಸಾವಿರ ಮೈಲು ದೂರವಿರುವ ದೇಶದಿಂದ ಬಂದ ಈ ಫಿರಂಗಿಗಳಿಗೆ ಅಂಜಿ ನಡೆದು ಪ್ರಯೋಜನವಿಲ್ಲ. ಭಾರತೀಯರ ಖಡ್ಗದ ಮಿಂಚನ್ನೊಮ್ಮೆ ಈ ದ್ರೋಹಿ ಮೆನ್‌ಸನ್‌ನಿಗೆ ತೋರಿಸೋಣ.

ರಾಮರಾಯ— ಸಾವಧಾನತೆಯಿಂದ ಎಲ್ಲ ಕಾರ್ಯವನ್ನು ಮುಂದೊರೆಯಿಸಬೇಕಾಗಿರುವದು. ಒಮ್ಮೆಲೆ ದುಡುಕಿದರೆ ಹಾನಿಯೆ ಹೆಚ್ಚು....!

ಬನ್ಯಾಬಾಪು— ಅಮಾತ್ಯರ ಮಾತು ಸತ್ಯ....

ಕೃಷ್ಣಾಜಿಪಂತ— ನಾವು ಎಂತಹ ನಿರ್ಧಾರವನ್ನು ಮಾಡಿದರೂ ಶತ್ರು ಪಕ್ಷವು ಬಲಿಷ್ಠವಿದೆಯೆಂಬುದನ್ನು ಮರೆತು ನಡೆಯುವಂತಿಲ್ಲ.

ಬಾಬಾಸಾಹೇಬ— ಕೃಷ್ಣಾಜಿಪಂತರೆ, ಶತ್ರು ಪಕ್ಷವು ಬಲಿಷ್ಠವಿದೆಯೆಂದು ನಾವು ಕೈಕಾಲು ಕಳೆದುಕೊಂಡು ಕೂಳಿತುಕೊಳ್ಳುವ ಕಾರಣವಿಲ್ಲ. ಅಮಾತ್ಯರೆ, ಈ ಮೊದಲೆ ನಿರ್ಧರಿಸಿದಂತೆ ನಾವು ದತ್ತಕ ತೆಗೆದುಕೊಂಡೇ ತೀರುವರೆಂದು ಆ ದ್ರೋಹಿ ಮೆನ್‌ಸನ್‌ನಿಗೆ ತಿಳಿಸಿರಿ ! ಪ್ರಸಂಗೋಪಾತ್ ಒರೆಯಿಂದ ಖಡ್ಗ ಹಿರಿಯುವದಕ್ಕೂ ನಮ್ಮ ಜನರು ಸಿದ್ಧರಿದ್ದಾರೆಂದು ಆದರಲ್ಲಿ ನಿಮೂದಿಸಿರಿ.

ರಾಮರಾಯ— ಆಗಲಿ ಪ್ರಭು, ಆದರೆ ಡಲ್‌ಹೌಸಿಯ ಆಜ್ಞೆಯು ಕೊನೆಯ ಆಜ್ಞೆಯೆಂದಿಗೂ ಆಗಲಾರದು. ಕೋರ್ಟ ಆಫ್ ಡಾಯರೆಕ್ಟರ್ಸ ಇವರ ಎದುರಿನಲ್ಲಿ ಈ ಸಂಗತಿಯನ್ನು ಇಡೋಣ....

ಬಾಬಾಸಾಹೇಬ— ಅದರಿಂದ ಏನೂ ಪ್ರಯೋಜನವಿಲ್ಲ. ನಾನಾಸಾಹೇಬರ ಪೆನ್‌ಶನ್‌ದ ವಿಷಯದಲ್ಲಿ ಸಾತಾರೆಯ ಗದ್ದುಗೆಯ ವಿಷಯದಲ್ಲಿ ಕೋರ್ಟ ಆಫ್ ಡಾಯರೆಕ್ಟರರು ತಾಳಿದ ಅಭಿಪ್ರಾಯವು ನಿಮಗೆ ಗೊತ್ತೇ ಇರುವದು. ಅಜಮುಲ್ಲಾಖಾನ, ರಂಗೋಬಾಪೂಜಿ ಇವರು ಇಂಗ್ಲಂಡಿಗೆ ಹೋಗಿ ಬರಿಗೈಯಿಂದ ಹಿಂದಿರುಗಬೇಕಾದುದು ನಿಮಗೆ ಅರಿಯದ ಸಂಗತಿಯಲ್ಲ....! ಆದ್ದರಿಂದ ಸೇನಾಪತಿಗಳೇ........ ದಳವಾಯಿಗಳೆ....ಪ್ರತಿಯೊಬ್ಬರು ತಮ್ಮ ತಮ್ಮ ಕೆಲಸವನ್ನು ಜಾಗರೂಕತದಿಂದ ಮಾಡಿ....! ಅಮಾತ್ಯರೆ ಆಯಕಟ್ಟಿನ ಸ್ಥಳಗಳಲ್ಲಿ ಸೈನ್ಯವನ್ನಿಡಿರಿ ! ಬೇಹಿಗರ ತಂಡಗಳನ್ನು ದಶದಿಕ್ಕುಗಳಿಗೆ ಕಳಿಸಿರಿ ! ಮದ್ದು ಗುಂಡುಗಳ ಸಂಗ್ರಹವನ್ನು.... ಹೇರಳವಾಗಿ ಮಾಡಿರಿ ! ತೋಫುಗಳನ್ನು ಆಯಕಟ್ಟಿನ ಸ್ಥಳಗಳಲ್ಲಿ ಇಡಿರಿ ! ರಣ ವಾದ್ಯಗಳು ಮೊಳಗಲಿಕ್ಕಾರಂಭಿಸಲಿ ! (ನಗಾರೆ, ನೌಬತ್ತು, ಕಹಳೆಗಳ ಸದ್ದು) ಇಷ್ಟೆಲ್ಲ ಸಿದ್ಧತೆಯಾದ ಬಳಿಕ ಮಾರಿಗೆ ಔತಣವನ್ನು ಕಳಿಸಿರಿ. ಇಂದು ನಮ್ಮ ಸ್ವಾತಂತ್ರ್ಯ ಯುದ್ಧವು ಆರಂಭವಾಯಿತು. ನಮ್ಮ ನಾಡೆಲ್ಲ ಸಮರ ಭೂಮಿಯಾಗಲಿ. ಜೈ ವೆಂಕಟೇಶ ! ಹರಹರ ಮಹಾದೇವ....! (ನಗಾರೆ, ನೌಬತ್ತು ಮತ್ತು ಕಹಳೆಗಳ ಸದ್ದು ಜೋರಿನಿಂದ ಕೇಳಿಸುವದು—)

ಒಂದು ಹರಟೆ

# " ನಮಸ್ಕಾರ ! "

ಹರಟಿದವರು :

ಮು. ಚ. ಮುಂಡಾಸನ.

ಏನು ನೀವು ಒಬ್ಬರ ಉಪಕಾರ (ಉಪ್ಪು-ಕಾರ ವಲ್ಲ ಮತ್ತೆ) ಸ್ಮರಿಸಬೇಕಾಗಿದೆಯೇ ? ಹಿರಿಯರಿಗೆ ವಿನಯ ತೋರಬೇಕಾಗಿದೆಯೇ ? ಬನ್ನಿ, ಹಾಗಾದರೆ ನನ್ನನ್ನು ಆಶ್ರಯಿಸಿಕೊಳ್ಳಿ ಮೊದಲು ! ನನ್ನ ಆಶ್ರಯ ನಿಮಗಿದ್ದಲ್ಲಿ ನೀವು ಎಂತೆಂತಹ ಕೆಲಸಗಳನ್ನೂ ಸುಲಭ ದಲ್ಲಿ ಸಾಧಿಸಿಕೊಳ್ಳಬಲ್ಲಿರಿ. ಇದಕ್ಕೆ ಸಾಕ್ಷಿ " ಕಾಲು ಬಿದ್ದು ಕಾಲುಂಗುರವನ್ನೂ ಬಿಚ್ಚಿಕೊಳ್ಳಬಹುದು " ಎನ್ನುವ ಮಾತೇ ! ನಾನು ನಮಸ್ಕಾರ ನನ್ನ ಪ್ರಭಾವ ಶಕ್ತಿ ಅಪಾರ ಹಾಗು ಅಪ್ರತಿಮ. ನನ್ನ ನಾಮ ನಿಮ್ಮ ಬಾಯಿಯಿಂದ ಹೊರಡುತ್ತಲೆ ಎಲ್ಲಿಯೂ ಬಾಗದಿದ್ದ ನಿಮ್ಮ ಜಂಭದ ತಲೆ ತಾನೇ ತಾನಾಗಿ ಬಾಗುತ್ತದೆ.

ಶಿರಸಾಸ್ಟಾಂಗ, ದೀರ್ಘ ದಂಡ ಪ್ರಣಾಮ, ಕೈಜೋಡಿಸುವಿಕೆ ಇವೆಲ್ಲ ನನ್ನ ಮೂಲ ರೂಪಗಳು. ವಿನಯವೇ ನನ್ನ ಪಡಿನೆಳಲು. ನನ್ನ ಒಂದೊಂದು ಮೂಲರೂಪಗಳಲ್ಲೂ ಒಂದೊಂದು ವಿಧದ ವಿನಯ ಧಾರೆ ಅಡಗಿದೆ. ಉದಾಹರಣೆಗಾಗಿ ಶಿರಸಾಷ್ಟಾಂಗ ವೆಂದರೆ— ಶಿರ ಮೊದಲ್ಗೊಂಡು ಶರೀರದ ಇತರ ಅಷ್ಟಾಂಗಗಳೂ ಮಣಿದು ಭೂಮಿಗೆ ಹೊಂದಿಕೊಳ್ಳು ವಂತ ನಮಸ್ಕಾರ.

ಒಂದು ಕಾಲಕ್ಕೆ ಇಷ್ಟೆಲ್ಲ ಶಕ್ತಿ ಹಾಗು ಮಹತ್ತು ಗಳು ನನಗಿದ್ದವು. ಆದರಿಂದು ನನ್ನ ಸ್ಥಿತಿ ಹಾಗಿಲ್ಲ. ನಾನೇ ನಿಮ್ಮ ಕೈಗೊಂಬೆಯಾಗಿ ಕುಣಿಯುವ ದುರ್ದೈವ ನನ್ನದಾಗಿದೆ. ಇಂದು ನನಗೊದಗಿದ ನವರೂಪಗಳನ್ನು ಕಂಡು ನನಗೇ ಜಿಗುಪ್ಸೆ ಹುಟ್ಟಿಕೊಂಡಿದೆ. ಜಂಭದ ಜನರು (ನೀವು ಮಾತ್ರ ಈ ಪದಕ್ಕೆ ಒಳಗಾಗಿಲ್ಲವಲ್ಲ ಮತ್ತೆ) ನನಗೂ ಹೊಸ ರೂಪಗಳನ್ನು ಕಲ್ಪಿಸಿ ಕೊಟ್ಟು ನನ್ನನ್ನು ಹೇಗೆ ಬೇಕೋ ಹಾಗೆ ಉಪಯೋಗಿಸಿಕೊಳ್ಳುತ್ತ ನನ್ನನ್ನೂ ಒಂದು ವಿಧದ ' ಫ್ಯಾಶನ್ 'ಗೆ ತಂದು ನಿಲ್ಲಿಸಿ ಬಿಟ್ಟಿದ್ದಾರೆ. ' ನಮಸ್ಕಾರ ' ಎನ್ನುವ ನನ್ನ ಮಹತ್ವ ಪೂರ್ಣ ಹೆಸರೀಗ ನನ್ನಿಂದ ದೂರವಾಗಿ ಒಂದು ಚಮ ತ್ಕಾರವೇ ಎನ್ನುವ ಕೀಳುಮಟ್ಟಕ್ಕೆ ನನ್ನನ್ನು ಎಳೆದಿ ದ್ದಾರೆ. ಇಂತಹ ಅವಮಾನವನ್ನೂ ಕಷ್ಟವನ್ನೂ ತಾಳಿ ಕೊಂಡು ಬಾಳಲು ನನಗಿಷ್ಟವಿಲ್ಲ. ನನ್ನ ಜೀವ ರೋಸಿ ಹೋಗಿದೆ. ಸಾಯಬೇಕು ಎನ್ನುವ ಯೋಚನೆಯಲ್ಲಿರು ವೆನು. ಆದರೆ ಸಾಯುವ ಪೂರ್ವದಲ್ಲಿ ಒಮ್ಮೆ ನಿಮ್ಮೆ ದುರು ನನ್ನ ಹೀನ ಸ್ಥಿತಿಯನ್ನು ಹೇಳಿಕೊಂಡು ಕೃತಾರ್ಥ ನಾಗಬೇಕೆಂದಿರುವೆನು.

ಪರಿಚಯಸ್ಥರಾಗಲಿ, ಸಭ್ಯಗೃಹಸ್ಥರಾಗಲಿ ಭೆಟ್ಟಿ ಯಾದಾಗ್ಗೆ ಸ್ನೇಹಪೂರ್ಣ ನಗೆಮುಖ ಬೀರಿ ಎರಡೂ ಕೈಗಳನ್ನು ಎದೆಗೆ ಸರಿಯಾಗಿ ಜೋಡಿಸಿ, ತಲೆಬಾಗು ವದು ನನ್ನ ಮೊದಲಿನ ರೂಪವಾಗಿತ್ತು. ಆದರೀಗ ಅಪಾಯವನ್ನು ಸೂಚಿಸುವ ರೆಡ್‌ಸಿಗ್ನಲ್ಲಿನಂತೆ ವೇಗ ವಾಗಿ ಬಂಟಗೈ ಮೇಲೆತ್ತಿ ಒಮ್ಮೆ ಬೀಸಿಬಿಟ್ಟರೆ ತೀರಿತು ಅದೇ ಇಂದಿನ ಒಂದು ನವರೂಪದ ನಮಸ್ಕಾರ ! ಅದರಲ್ಲಿ ವಿನಯವಿಲ್ಲ; ಸ್ನೇಹಪೂರ್ಣತೆಯಿಲ್ಲ, ಬರಿ ನಿಮಿತ್ತ ಮಾತ್ರದ ಸಂಕೇತ.

ಗುರುಹಿರಿಯರ ಪಾದಕ್ಕೆ ತಲೆಹಚ್ಚಿ ನಮಸ್ಕರಿ ಸುವದೊಂದು ನನ್ನ ಮೂಲರೂಪ. ಆದರೀಗ ಬಹು ಜನ ಹೀಗೆ ಮಾಡಲು ನಾಚಿಕೆ ಪಡುತ್ತಾರೆ. ಒಂದು ಕೈಯನ್ನು ಮಾತ್ರ ಗುರು ಹಿರಿಯರೆದುರು ನೆಲಕ್ಕೆ ಮುಟ್ಟಿಸಿ ಅದೇ ಕೈಯನ್ನು ತಮ್ಮ ಹಣೆಗೊಯ್ದು ಮುಟ್ಟಿಸಿಕೊಂಡರೆಂದರೆ ಆಯಿತು ನಮಸ್ಕಾರ ! ಮಂತ್ರ ಗಾರರಂತೆ ಮಾಡುವ ಈ ಮೂಕ ಸಂಜ್ಞೆ ನಮಸ್ಕಾರವೇ?

ಇನ್ನು ದೇವರೆದುರಿನಲ್ಲಾದರೂ ಅಷ್ಟೇ ! ಒಂದು ಕೈಯಿಂದ ತಮ್ಮ ಹಣೆಯನ್ನೊಮ್ಮೆ ಹಾಗು ಎದೆಯ ನ್ನೊಮ್ಮೆ ಮುಟ್ಟಿಕೊಂಡರೆಂದರೆ ಆಯಿತು ದೇವರಿಗೆ

ನಮಸ್ಕಾರ! ಇದೇನು ದೇವರಿಗೆ ನಮಸ್ಕಾರವೊ, ಇಲ್ಲವೆ "ನನಗೆ ಒಳ್ಳೆಯದನ್ನು ಮಾಡದಿದ್ದರೆ ಆಗ ನಿನ್ನನ್ನು ನೋಡಿಕೊಳ್ಳುತ್ತೇನೆ" ಎನ್ನುವ ಭಾವವೊ? ಇಂತಹ ವಿಕಾರ ರೂಪದ ನಮಸ್ಕಾರ ದೇವರಿಗೆ ಅದೆಂತು ಮುಟ್ಟಬೇಕು?

ಆಂಗ್ಲ ಜನರ ಅನುಕರಣೆಯ ನಮಸ್ಕಾರವೊಂದು ಗಂಟಾಗಿದೆ ನೋಡಿ! ನಾಲ್ಕು ಅಕ್ಷರ ಇಂಗ್ರೇಜಿ ಕಲಿತವರಲ್ಲಿ ಇದರ ಪ್ರಭಾವ ಹೆಚ್ಚಾಗಿದೆ. ಒಬ್ಬರ ಕೈಯಲ್ಲೊಬ್ಬರು ಕೈಕೊಟ್ಟು ಕರುಣೆ ಇಲ್ಲದೆ ಹಿಸುಕಿ ಬಿಟ್ಟರೆ, ಹಾಗು ಹಿಸುಕಿಸಿಕೊಂಡರೆ ನಮಸ್ಕಾರವಾಯಿತೇನು? ನಮ್ಮ ಮೂಲ ರೂಢಿಯಲ್ಲಿ ನೋಡಿದರೆ ಇದು ತೀರ ಹಾಸ್ಯಾಸ್ಪದವೆನಿಸೀತು; ಅಲ್ಲದೆ ಪ್ರಣಯ ಜೀವಿಗಳೂ ಗುಟ್ಟಾಗಿ ಮಾಡುವ ಕಾರ್ಯವೆಂದನ್ನಬೇಕಾದೀತು. ಸಿಕ್ಕ ಸಿಕ್ಕವರ ಕೈಯಲ್ಲಿ ಏನೊಂದೂ ಯೋಚಿಸದೆ ಕೈ ಕೊಟ್ಟರೆ "ಇಂದು ಕೈ ಕೊಟ್ಟವನು ನಾಳೆ ಏನು ಬೇಕಾದರೂ ಮಾಡಿಯಾನು" ಎನ್ನುವ ಮಾತಿನಂತಾದೀತು. ಆಂಗ್ಲ ಜನರೇ ನಮ್ಮ ದೇಶ ಬಿಟ್ಟು ಓಡಿರುವಾಗ ಈ ಅಪದ್ಧ ನಮಸ್ಕಾರದ ಪದ್ಧತಿ ನಿಮ್ಮಲ್ಲೇಕೆ ಉಳಿಯಿತೋ ತಿಳಿಯದು. ವಿದೇಶಿಯರಿಂದ ನಮ್ಮಲ್ಲಿ ಬೇರೂರಿರುವ ಇಂತಹ ಅನೇಕ ರೂಢಿಗಳನ್ನು ನಿರ್ಮೂಲನೆಗೊಳಿಸಲು ಸರಕಾರವೇಕೆ ಉಗ್ರ ಕಾಯ್ದೆ ಮಾಡಿ ಕ್ರಮ ತಕ್ಕೊಳ್ಳಬಾರದು ಎನ್ನುತ್ತೇನೆ. ಹೋಗಲಿ ಬಿಡಿ, ಸರಕಾರವನ್ನೇ ಕೆಣಕುವ ಬುದ್ಧಿ ಬಡಪಾಯಿಯಾದ ನನಗೇಕೆ?

ನನ್ನ ಪ್ರಭಾವದ ಹಿನ್ನೆಲೆಯಲ್ಲಿಯೇ ಎಂತೆಂತಹ ಕೆಲಸ ಕಾರ್ಯಗಳೂ ತೀರ ಸುಲಭದಲ್ಲಿ ಸಾಧಿಸಬಲ್ಲವು. ಇದನ್ನು ನೀವೂ ಬಲ್ಲಿರಿ. ಒಂದೇ ಒಂದು ನಮಸ್ಕಾರದಿಂದ ಅದೆಷ್ಟು ಜನ ಎಂತೆಂತಹ ಕೆಲಸಗಳನ್ನೂ ಸಾಧಿಸಿಕೊಂಡು ಪ್ರಸಿದ್ಧರಾಗಿಲ್ಲ? ವಿನಯವಿದ್ದಲ್ಲಿ ನಾನು; ನಾನಿದ್ದಲ್ಲಿ ವಿದ್ಯೆ! ವಿದ್ಯೆಯಿಂದ ಸಕಲವೂ ಉಂಟು. ಎಂದ ಮೇಲೆ ನನ್ನ ಆಶ್ರಯ ಜನ ಕೋಟಿಗೆಲ್ಲ ಎಷ್ಟರ ಮಟ್ಟಿಗೆ ಅಗತ್ಯ ನೀವೇ ವಿಚಾರಿಸಿಕೊಳ್ಳಿರಿ. ಹೀಗಿರುವಾಗ ನಾನಿಂದು ಇಂತಹ ಕೀಳು ಸ್ಥಿತಿಗೆ ಸಿಲುಕಿ ಕೊರಗುತ್ತಿರುವಾಗ ನೀವು ಕಣ್ಣು, ಕಿವಿ, ಜ್ಞಾನವುಳ್ಳವರಾಗಿಯೂ ಸುಮ್ಮನೇ ಇರುವಿರಾ? ಇದು ನ್ಯಾಯವೇ? ನಾನು ಆತ್ಮಹತ್ಯಮಾಡಿಕೊಳ್ಳಬೇಕೆಂದು ಯೋಚಿಸುತ್ತಿದ್ದರೂ ನೀವು ನನ್ನನ್ನುಳಿಸಿಕೊಂಡು, ನನ್ನ ಕಳೆದು ಹೋದ ಮರ್ಯಾದೆಯನ್ನು ದೊರಕಿಸಿ ಕೊಡಲು ಪ್ರಯತ್ನಿಸದೆ ಕುಳಿತಿರುವದು ಧರ್ಮವೇ? ನನ್ನ ಸ್ಥಿತಿ ನಿಮಗೇ ಒದಗಿ ನಿಮ್ಮ ಮಾನ ಹೋಗುವ ಪ್ರಸಂಗ ಬಂದಿದ್ದರೆ ಆಗ ನೀವು ಹೀಗೆ ಸುಮ್ಮನೇ ಇರುತ್ತಿದ್ದಿರಾ? ಇಲ್ಲ ಎಂದಿಗೂ ಇಲ್ಲ. ನನಗೆಲ್ಲ ಗೊತ್ತು. ಅಂತೆಯೇ ಏಳಿರೀಗ; ನನ್ನ ಗೌರವವನ್ನು ಕಾಯಲು ಧೀರ ಪಣ ತೊಟ್ಟು ಮುಂದಾಗಿರಿ ನನಗಾಗಿ ಹಾಗು ನನ್ನ ಮರ್ಯಾದೆಗಾಗಿ!

ನನಗೆ ಸಾಯಬೇಕೆಂಬುದರ ಜೊತೆಗೆ ಬದುಕಬೇಕೆಂಬಾಶೆಯೂ ಬಲವಾಗಿದೆ. ಅದಕ್ಕಾಗಿ ನನ್ನನ್ನುಳಿಸಿಕೊಂಡು ನನ್ನ ಮಹತ್ತನ್ನೂ ಅವಶ್ಯಕತೆಯನ್ನೂ ಅರಿತು, ಇತರರಿಗೂ ತಿಳಿಸಿ ನಿಮ್ಮ ಬಾಳಿನ ಹಿತವನ್ನೂ ಬೇಕಾದರೆ ಸ್ವಾರ್ಥವನ್ನೂ ಸಾಧಿಸಿಕೊಳ್ಳಿರಿ! ಹಾಗೆ ಮಾಡಿ ನನ್ನನ್ನು ನನ್ನ ಮೂಲ ರೂಪದಲ್ಲಿಯೇ ಉಪಯೋಗಿಸಿಕೊಳ್ಳುವಿರಲ್ಲವೇ? ಅಷ್ಟು ಮಾಡಿರಿ; ನಾನಿನ್ನು ಬರುವೆ ನಮಸ್ಕಾರ!

# ಜ್ಞಾನದೇವಿ ಶಾರದೆಯೆ!

೧

ಸಕಲ ವಿದ್ಯೆಗಳ ನಿಧಿ ಶಾರದೆಯೆ,
ನಮಿಸುವೆನು ನಿನ್ನಯ ಪೂಜ್ಯಪದಕೆ
ಅನುದಿನವು ಬಿಡದೆನ್ನನು ಪೊರೆಯೆ
ಜ್ಞಾನದೈಸಿರಿಯ ನೀಡೆನ್ನ ಮನಕೆ

೨

ಕರಗಳಲಿ ವೀಣೆ ವಹಿಗಳ ಪಿಡಿದು
ಶೋಭಿಸುವ ಮಂಗಳ ರೂಪಿಣಿಯೆ
ಜ್ಞಾನ ನೀಡಿ ಜಗವ ಬೆಳಗುವ
ನಿನ್ನಯ ಕೀರುತಿಗಾರು ಸರಿಯೆ ?

೩

ಪರರಿಗೊಳಿತು ಬಯಸುವ ಸದ್ಬುದ್ಧಿಯ
ನೀಡೆನ್ನ ಮನದ ತಿಳುವಿಗೆ
ಸತ್‌ಪಥದ ಆದರ್ಶಗುರಿಯ
ತೋರೆನ್ನ ಅಜ್ಞಾನ ಬಾಳಿಗೆ
ಸತ್ಕಾರ್ಯ ತತ್ಪರತೆಯೊಳ್
ಸಂತತವು ಲೀನವಾಗಿ ನಿಲುವ,
ಒಲವು ತೋರುತ ನೀನೆ
ಸನ್ಮಾರ್ಗವಿಡಿಸೆನ್ನ ಮನವ!

೪

ಜ್ಞಾನವಿಲ್ಲದ ನಾಡೇನಿದ್ದರೂನು
ಕತ್ತಲೆಯ ಹಾಳು ಬೀಡು
ಜ್ಞಾನದ ಹಿರಿಮೆಯನರಿತನಾಡು
ನಿತ್ಯ ಸಂತಸದ ಬೀಡು

೫

ರವಿಯುದಯವಿಲ್ಲದಲೆ
ಜಗಬೆಳಗುವುದದೆಂತು ?
ಅಂತೆ ನಿನ್ನಯ ಕೃಪೆಯಿಲ್ಲದಲೆ
ಮನದ ಜ್ಞಾನ ಕಳೆವುದೆಂತು ?

೬

ಜ್ಞಾನ ದೇವತೆಯೆ, ಸರಸ್ವತಿಯೆ
ನಮಿಸುವೆನು ನಿನ್ನಡಿಗಳಿಗೆ
ಅನುದಿನವು ಬಿಡದೆನ್ನನು ಪೊರೆಯೆ
ಜ್ಞಾನದೈಸಿರಿಯ ನೀಡೆನ್ನ ಬಾಳಿಗೆ !

**—ಮು. ಚ. ಮುಂಡಾಸದ ಹುಬ್ಬಳ್ಳಿ**

# ದೇಶದೇಳಿಗೆಯಲ್ಲಿ ಮಹಿಳೆಯರ ಪಾತ್ರ

ಲೇಖಕಿ:— ಎ. ಬಿ. ಮುಖಾಂಬಿಕೆ.

ಯಾವುದೇ ದೇಶವಾದರು ಅದು ಏಳಿಗೆ ಪಡೆಯು ಬೇಕಾದರೆ ಅಲ್ಲಿಯ ಖನಿಜ ಸಂಪತ್ತು, ವಾಯುಗುಣ ಭೂಮಿಗುಣ ಹಾಗೂ ಮಾರ್ಗಸೌಕರ್ಯಗಳು ಎಷ್ಟು ಅದತ್ಯಕತೆಯೋ ಅದಕ್ಕಿಂತಲೂ ಹೆಚ್ಚಾಗಿ ದೇಶವು ಏಳಿಗೆ ಪಡೆಯಬೇಕಾದರೆ ಅಲ್ಲಿಯ ಪ್ರಜೆಗಳು ವಿದ್ಯಾವಂತರಾಗಿರಬೇಕು. ಪ್ರಜೆಗಳೆಂದರೆ ಕೇವಲ ಗಂಡಸರೆಂದು ಭಾವಿಸಬಾರದು. ದೇಶದಲ್ಲಿರುವ ಪ್ರತಿಯೊಬ್ಬ ಸ್ತ್ರೀಯರು, ಪುರುಷರು ಮಕ್ಕಳು ಎಲ್ಲರೂ ಸಮಾನ ಪ್ರಜೆಗಳಾಗಿರುವರು. ಆದ ಕಾರಣ ದೇಶದ ಏಳಿಗೆಗೆ ಗಂಡಸರ ಪಾತ್ರ ಎಷ್ಟು ಪ್ರಮುಖವೋ, ಅಷ್ಟೇ ಹೆಂಗಸರಿಗೂ ದೇಶದ ಏಳಿಗೆಯ ಪಾತ್ರದಲ್ಲಿ ಹೊಣೆಯಿದೆ. ಪಾಶವೀ ಬಲದ ದೃಷ್ಟಿಯಿಂದ ಗಂಡಸು ಹೆಚ್ಚು ಶಕ್ತಿವಂತರಾಗಿರಬಹುದು. ಆದರೆ ಸ್ವಾರ್ಥತ್ಯಾಗ, ಕಷ್ಟಗಳನ್ನು ನೋವುಗಳನ್ನು ಸಹಿಸಿಕೊಳ್ಳುವ ಶಕ್ತಿ ಇವುಗಳಿಂದ ಅಳೆದರೆ ಮಹಿಳೆಯರು ಪುರುಷರಿಗಿಂತ ಬಲಶಾಲಿಯೆಂಬುದು ಎಲ್ಲರಿಗೂ ಗೋಚರಿಸುತ್ತದೆ.

ಹೆಂಗಸು ಮಕ್ಕಳನ್ನು ಹೊರುವ ಬರಿಯ ಯಂತ್ರವಲ್ಲ! ಆಟದ ಗೊಂಬೆಯಲ್ಲ! ಆಕೆಗೂ ಆತ್ಮವಿದೆ. ಆಕೆ ಪತಿಯ ಗುಲಾಮಳಲ್ಲ! ಆತನ ಸಹಧರ್ಮಿಣಿ ಎಂದು ತಿಳಿದು ನಡೆದುಕೊಳ್ಳಬೇಕಾದ್ದು ಗಂಡಸ ಸಭ್ಯತೆ ಸಂಸ್ಕೃತಿಗಳಿಗೆ ಭೂಷಣ.

ಮಹಿಳೆಯರು ಕೂಡ ತಮ್ಮ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಬೇಕು. ತಮ್ಮ ಕರ್ತವ್ಯವನ್ನು ಚೆನ್ನಾಗಿ ತಿಳಿದುಕೊಂಡಿರಬೇಕು. ಪೂಜ್ಯ ಮಹಾಮಾತೆಯರಾದ ಸಾವಿತ್ರಿ, ಸೀತೆಯವರು ಹೋದ ದಾರಿಯನ್ನೇ ಅನುಸರಿಸಬೇಕು. ತಮ್ಮ ಪಾತಿವ್ರತ್ಯಕ್ಕೆ ಭಂಗ ಬರುವ ಯಾವ ಕಾರ್ಯವನ್ನೂ ಆಚರಿಸಕೂಡದು. ಪತಿಸೇವೆಯೇ ಪರಶಿವನ ಸೇವೆ. ಪತಿಯೇ ಪ್ರತ್ಯಕ್ಷ ದೇವ ಎಂದು ತಿಳಿದು ಆತನ ಸೇವೆಯಿಂದಲೂ ವಿಧೇಯತೆಯಿಂದಲೂ ಆತನ ದೇವತಾ ಪೂಜೆಗಳಲ್ಲಿ ಭಾಗಿಯಾಗಿ ಸತಿಗೆ ಪತಿಯೇ ದೈವ. ಪತಿಯೇ ಎಂದು ತಿಳಿದು ನಡೆದು ಇಹದಲ್ಲಿಯೂ ಪರದಲ್ಲಿಯೂ ಶಾಶ್ವತ ಸುಖವನ್ನು ಅನುಭವಿಸಲು ಯತ್ನಿಸಬೇಕು. ಹಾಗೂ—"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ" ಎಂಬುದನ್ನು ಉಳಿಸಿಕೊಳ್ಳಲು ಪ್ರತಿಯೊಬ್ಬ ಸ್ತ್ರೀಯೂ ಯತ್ನಿಸಬೇಕು.

ಹಿಂದೆ ಸೀತೆ, ದ್ರೌಪತಿ, ಅಹಲ್ಯೆ, ಸಾವಿತ್ರಿ ಮತ್ತು ಮಂಡೋದರಿ ಮೊದಲಾದ ಸಾಧ್ವೀಮಣಿಗಳು ಹಾಗೆ ತಿಳಿದುಕೊಂಡಿದ್ದರು. ಮಹಾ ಬಲಶಾಲಿಯೂ ಶತ್ರು ಭಯಂಕರನೂ ಆದ ಭೀಮನು ದ್ರೌಪತಿಯ ಮುಂದೆ ಶಾಂತನಾಗಿ ನಿಲ್ಲುತ್ತಿದ್ದನಲ್ಲ! ಮೂರು ಲೋಕವನ್ನು ಜಯಿಸಿದ ರಾವಣಾಸುರನು ಸೀತೆಯ ಪಾತಿವ್ರತ್ಯಕ್ಕೆ ಸೋತುಹೋದನಲ್ಲವೆ? ಸಾವಿತ್ರಿಯ ದೃಢವ್ರತಕ್ಕೆ ಮೆಚ್ಚಿ ಯಮದೇವನು ಅವಳ ಮಾಂಗಲ್ಯವನ್ನು ಉಳಿಸಿಕೊಡಲಿಲ್ಲವೆ? ಕನ್ನಗಿಯ ಪತಿಭಕ್ತಿಗೆ ಮೆಚ್ಚಿ ಊರ ದೇವತೆ ಅವಳನ್ನು ಅವಳ ಪತಿ ಕೋವಲನ ಬಳಿಗೆ ಕಳುಹಿಸಲಿಲ್ಲವೆ? ಇವರುಗಳು ಇದ್ದರೋ ಇಲ್ಲವೋ? ಅವರು ಪೂಜೆಗೆ ಅರ್ಹರೋ ಅಲ್ಲವೋ ಎಂಬ ಸಂಶಯ ಹಿಂದಿನ ಸಂಗತಿಗಳಾದ ಕಾರಣ ನಿಮಗೆ ಬರಬಹುದು. ಆ ಪೂಜ್ಯ ಮಹಾಮಾತೆಯರನ್ನು ನಂಬದಿದ್ದರೆ ಬೇಡ ಭಾರತಾಂಬೆಯ ರತ್ನಪುತ್ರಿಯರಾದ—ವೀರರಾಣಿ ಝಾಂಸಿ ರಾಣಿ ಲಕ್ಷ್ಮೀಬಾಯಿ, ಸ್ವಾತಂತ್ರಪ್ರೇಮಿ ಸರೋಜನಿ ನಾಯ್ಡು, ಪ್ರಜಾಪ್ರೇಮಿ ಅಹಲ್ಯಾಬಾಯಿ, ದೇವಭಕ್ತೆ ಅಕ್ಕಮಹಾದೇವಿ, ಕನ್ನಡ ಕವಿತ್ರಿ ಕಂತಿ, ಕಾವ್ಯಪ್ರೇಮಿ ಹೊನ್ನಮ್ಮ, ಕಷ್ಟಸಹಿಷ್ಣೆ ಮೈಸೂರು ರಾಣಿ ಲಕ್ಷ್ಮಮ್ಮಣ್ಣಿ ಇವರುಗಳನ್ನು ನಂಬೇನಂಬುವಿರಲ್ಲವೇ?

ಅಸಹಕಾರ ಚಳುವಳಿಯಲ್ಲಿ ಭಾರತದ ಸ್ತ್ರೀಯರು ತೋರಿಸಿದ ಅಸಮಸಹಾಸ,ಅಹಿಂಸೆ ಮತ್ತು ತ್ಯಾಗಗಳಿಂದ ಪ್ರಬಲರಾದ ಬ್ರಿಟಿಷರು ಪರಾಜಿತರಾಗಲಿಲ್ಲವೆ? ರಾಷ್ಟ್ರದ ಕರೆ ಬಂದಾಗ ಸ್ವಗೃಹಗಳನ್ನು ತ್ಯಜಿಸಿ ಪತಿಪುತ್ರರನ್ನು ಬಿಟ್ಟು ಸ್ತ್ರೀಯರೂ ಕಾರಾಗೃಹಗಳನ್ನು ಅಲಂಕರಿಸಲಿಲ್ಲವೇ? ವಿದೇಶಿ ಬಟ್ಟೆ ಅಂಗಡಿಗಳ ಮುಂದೆ ಹಗಲೆನ್ನದೆ ರಾತ್ರಿಯೆನ್ನದೆ ಶಾಂತರೀತಿಯಿಂದ ತಡೆ ಕಾವಲು ನಿಲ್ಲಲಿಲ್ಲವೆ? ಕಡೆಗೆ ತಮ್ಮ ಕೋಮಲ ದೇಹಗಳನ್ನು ಕಠಿಣವಾದ ಲಾಠಿ ಪೆಟ್ಟುಗಳಿಗೂ ಈಡುಮಾಡಲಿಲ್ಲವೆ?

ಇಂಗ್ಲಿಷರೆ ತಮ್ಮ ದಬ್ಬಾಳಿಕೆಗೆ ನಾಚಿ ತಲೆತಗ್ಗಿಸಿದ್ದು ನಿಮಗೆ ಗೋಚರಿಸಿದಿಯೇ ?

"ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೆ ।
ಪುತ್ರೋ ರಕ್ಷತಿ ವಾರ್ಧಿಕ್ಯೇನಸ್ತ್ರೀಸ್ವಾತಂತ್ರ್ಯಮರ್ಹತಿ"

ಎಂಬುದು ೧೦೦ಕ್ಕೆ ೧೦೦ ಭಾಗ ನಿಜ. ಮಹಿಳೆಯರಿಗೆ ಜನನದಿಂದ ಮರಣದ ವರೆಗೂ ಸ್ವಾತಂತ್ರ್ಯವಿಲ್ಲ. ಮತ್ತು ಎಷ್ಟೋ ಮಂದಿ ವಿದ್ಯಾವತಿಯರಾದ ಸ್ತ್ರೀಯರು ತಮ್ಮ ಬುದ್ಧಿಸಾಮರ್ಥ್ಯವನ್ನು ತಮಗೆ ಸ್ವಾತಂತ್ರ್ಯವಿಲ್ಲದೇಇರುವದರಿಂದ ಪ್ರಕಾಶಕ್ಕೆ ತರಲು ಸಾಧ್ಯವಾಗದೆ ಕೊರಗುವವರು ನಮ್ಮ ದೇಶದಲ್ಲಿ ಬಹು ಮಂದಿ ಇದ್ದಾರೆ.

"ತೊಟ್ಟಿಲು ತೂಗುವವಳ ಕೈ
ಜಗವ ತೂಗುವುದು"

ಎಂಬುದು ಸತ್ಯವಾದ ಸಂಗತಿ. ಆದ ಕಾರಣ ತೊಟ್ಟಿಲು ತೂಗುವವಳು ಅಂದರೆ ಕುಟುಂಬದ ಯಜಮಾನಿಯ ಪಾತ್ರ ದೇಶದೇಳಿಗೆಯಲ್ಲಿ ಪ್ರಥಮವಾದುದು ಎಂದರೆ ತಪ್ಪಾಗಲಾರದು. ಪ್ರತಿಯೊಂದು ಸಂಸಾರದಲ್ಲಿಯೂ ತಾಯಿಯಾದವಳೇ ಇದನ್ನು ತಿಳಿದುಕೊಂಡಿರಲೇಬೇಕು. ಆಗಲೇ ದೇಶವು ಉನ್ನತಮಟ್ಟಕ್ಕೇರಲು ಸಹಾಯವಾಗುವುದು.

ಮಕ್ಕಳ ವಿದ್ಯಾಭ್ಯಾಸದ ಪ್ರಮುಖ ಪ್ರಥಮ ಪಾಠಶಾಲೆ ನಡೆಯುವುದು ಮನೆಯಲ್ಲಿ. ಮಾತ್ರವೋ ಮಕ್ಕಳ ಮೊದಲನೆ ಉಪಾಧ್ಯಾಯಿನಿ, ಆದಕಾರಣ ಆ ಉಪಾಧ್ಯಾಯಿನಿ ಹಾಕಿಕೊಡುವ ಅಡಿಪಾಯ ಬಲವಾಗಿ ಚೆನ್ನಾಗಿರಬೇಕು. ಹಾಗಿದ್ದರೆ ತಾನೆ ಮುಂದೆ ದೊಡ್ಡ ವಿದ್ಯಾವಂತರಾಗಲು ಕಾರಣವಾಗುವುದು. ಆ ವಿದ್ಯಾವಂತರಾದ ಮಕ್ಕಳೆ ಮುಂದಿನ ಸುಪ್ರಜೆಗಳಾಗಿ ದೇಶವು ಉನ್ನತ ಮಟ್ಟಕ್ಕೇರಲು ಶ್ರಮಿಸುತ್ತಾರೆ. ಇಂದಿನ ಮಕ್ಕಳೆ ಮುಂದಿನ ಸುಪ್ರಜೆಗಳು ಎಂಬುದು ತಾಯಂದಿರಿಗೆ ತಿಳಿಯಬೇಕಾದ ಅಂಶ.

ಅಭಿಮನ್ಯುವಿನ ಆಯುಧಗಳ ಆಸೆ, ಶೌರ್ಯೋತ್ಸಾಹಗಳ ಹುಟ್ಟುಗುಣಕ್ಕೆ ಅವನ ತಾಯಿ ಸುಭದ್ರೆಯೇ ಕಾರಣ. ಸುಭದ್ರೆ ಗರ್ಭಿಣಿಯಾದಾಗ ಯಾವುದನ್ನು ಕೇಳುತ್ತಿದ್ದಳೋ ಅದೇ ಗರ್ಭದಲ್ಲಿದ್ದ ಶಿಶುವಿನ ಗುಣದಲ್ಲಿ ಸಹಜವಾಗಿ ಬೆಳೆದು ಹೊರಹೊಮ್ಮಿತು.

ಶಿವಾಜಿ,ಮಹಾರಾಷ್ಟ್ರ ಚಕ್ರಾಧಿಪತ್ಯವನ್ನು ಕಟ್ಟಲು ಅವನ ತಾಯಿ ಜೀಜಾಬಾಯಿ ಮಹಾಭಾರತದಲ್ಲಿ ಬರುವ ಅಭಿಮನ್ಯುವಿನ ಪಾತ್ರವನ್ನು ಹೇಳುತಿದ್ದದ್ದೇ ಕಾರಣ.

ಮಹಾದೇವಿ ಅಕ್ಕಮಹಾದೇವಿಯಲ್ಲಿ ಈಶ್ವರನಲ್ಲಿ ಭಕ್ತಿ ಬೇರೂರಲು ಅವಳ ತಂದೆತಾಯಿಗಳಾದ ಸುಮತಿ ನಿರ್ಮಲರೇ ಕಾರಣ. ಆದಕಾರಣ ಗರ್ಭಿಣಿಯಾದ ಸ್ತ್ರೀಯರು ಯಾವಾಗಲೂ ಒಳ್ಳೆಯದ್ದೇ ಮಾಡುತ್ತಾ, ಒಳ್ಳೆಯದನ್ನೇ ಕೇಳುತ್ತಾ, ಒಳ್ಳೆಯದನ್ನೇ ಯೋಚಿಸುತ್ತಾ ಇದ್ದರೆ ಹುಟ್ಟುವ ಮಕ್ಕಳು ಒಳ್ಳೆಯ ಗುಣವುಳ್ಳವರು ಹುಟ್ಟಿ ಮಾತಾಪಿತೃಗಳಿಗೆ ಮತ್ತು ದೇಶಕ್ಕೆ ಒಳ್ಳೆಯ ಹೆಸರು ತರುತ್ತಾರೆ.

ತಾಯಿಯಂತೆ ಮಕ್ಕಳು—ದಾರಂತೆ ಸೀರೆ.

ಮಾತೃವಿನ ಶೀಲ,ನಡತೆ ಹೇಗಿರುತ್ತದೆಯೋ ಅದೇ ಮಕ್ಕಳಿಗೆ ಬರುವುದು ಸಹಜವಲ್ಲವೆ ?

ತಾಯಿಯಾದವಳಿಗೆ ತಾಳ್ಮೆ ಹೆಚ್ಚಿರಬೇಕು. ಮಕ್ಕಳು ಯಾವುದಾದರು ಸಿನೀಮಾಕ್ಕೆ ಹೋಗಿ ಅಥವಾ ಯಾರಾದರೂ ಹೇಳುವ ಹಾಡನ್ನು ಕೇಳಿ ಅದರಂತೆ ಹೇಳಲು ಹೋಗಿ ಅಪಸ್ವರದಿಂದ ಕಿರಚಿಕೊಳ್ಳುತ್ತಿರಬಹುದು. ಆಗ ಮಗುವಿನ ಮಾತೃ ಕೋಪಿಸಿಕೊಳ್ಳದೆ ಮೃದು ಮಾತಿನಿಂದ ಸರಿಯಾಗಿ ತಿದ್ದಿ ಹೇಳಬೇಕು; ಹಾಗೂ ಪ್ರೋತ್ಸಾಹ ಕೊಡಬೇಕು. ಆ ಮಗು ಮುಂದೆ ಬೆಳೆದು ದೊಡ್ಡವನಾದ ಮೇಲೆ ಪ್ರಖ್ಯಾತ ಸಂಗೀತಗಾರನಾಗಬಹುದು.

ಸೀಮೆ ಸುಣ್ಣವನ್ನೋ; ಇದ್ದಲಿಯನ್ನೋ ತೆಗೆದುಕೊಂಡು ಗೋಡೆಯ ಮೇಲೆಲ್ಲಾ, ನೆಲದ ಮೇಲೆಲ್ಲಾ ಆನೆ ಮೊದಲಾದುವೆಂದು ಹೇಳಿ ಗೀಚಬಹುದು. ಆಗ ತಾಯಿಯಾದವಳು ಸಿಡುಕದೆ ಮಗುವಿಗೆ ಸ್ಲೇಟನ್ನು ಕೊಟ್ಟು ಅದರಲ್ಲೇ ಬರೆಯಲು ಹೇಳಬೇಕು. ಮತ್ತು ಆನೆ ಮೊದಲಾದುವೆಂದು ಹೇಳಿ ಹಾಗಲಕಾಯಿ ಹಾಕಿ ಬರೆದಿದ್ದರೂ ಚೆನ್ನಾಗಿದೆ ಎಂದು ಹೇಳಿ ಪ್ರೋತ್ಸಾಹಿಸಬೇಕು. ಆ ಮಗು ದಿನದಿನಕ್ಕೂ ಚೆನ್ನಾಗಿ ಅಭ್ಯಸಿಸಿ ಭವಿಷ್ಯದಲ್ಲಿ ದೊಡ್ಡ ಚಿತ್ರಗಾರನಾಗಬಹುದು. ಅಷ್ಟೇ ಅಲ್ಲ ಗುರುವಾದ ತಾಯಿಯ ಪಾತ್ರ ಮುಖ್ಯವಾದುದು. ತಾಯಿಯಾದವಳು, ಮಕ್ಕಳ ಮನಸ್ಸಿನಲ್ಲಿ ದೇವಭಕ್ತಿ; ಗುರುಹಿರಿಯರಲ್ಲಿ ಗೌರವ, ಶುಚಿತ್ವದಿಂದಾಗುವ ಉಪಯೋಗಹಸೆಬರೆಯುವದು,ಚರಕದಿಂದ ನೂಲುತೆಗೆಯುವುದುಹೊಲಿಗೆಇತ್ಯಾದಿಇತ್ಯಾದಿಗಳನ್ನುಹೇಳಿಕೊಡಬೇಕು.

"ಮಾತೃ ದೇವೋ ಭವ" ಎಂದರೆ ತಾಯಿಯೇ ದೇವರು ಎಂಬುದಾಗಿ ಹೇಳುವ ಪುರಾತನ ವಾಕ್ಯವನ್ನು ಸತ್ಯಪಡಿಸಲು ಮಾತೆಯಾದವಳು ಹೃತ್ಪೂರಕವಾಗಿ ಪ್ರಯತ್ನಿಸಬೇಕು.

ಹೆಂಗಸರು ಹೆಚ್ಚು ಓದಿದರೆ ಅವರ ಮೇಲೆ ಕೆಟ್ಟ ಅಭಿಪ್ರಾಯ ಹೊಂದಿ ಅನೇಕ ಮಂದಿ ಯುವಕರು ಕೈಹಿಡಿಯಲು ಹಿಂಜರಿಯುತ್ತಾರೆ. ಸ್ತ್ರೀಯರು ಶೀಲಕ್ಕೂ ವಿದ್ಯಾಭ್ಯಾಸಕ್ಕೂ ಯಾವುದೇ ಬಗೆಯ ಸಂಬಂಧವಿಲ್ಲವೆಂಬುದನ್ನು ನಾಗರೀಕ ಯುವಕರು ತಿಳಿದುಕೊಳ್ಳಬೇಕು.

ನಮ್ಮ ನಾಡಿನಲ್ಲಿ ಧರ್ಮಪ್ರಚಾರ ಮಾಡಿದ ವಚನಕಾರರಲ್ಲಿ ಸಿದ್ಧರಾಮನು—

" ತಾ ಮಾಡಿದ ಹೆಣ್ಣು ತನ್ನ ತಲೆಯ ನೇರಿತ್ತು,
ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು;
ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯನ್ನೇರಿತ್ತು
ತಾ ಮಾಡಿದ ಹೆಣ್ಣು ನಾರಾಯಣನ ಎದೆಯನ್ನೇರಿತ್ತು
ಅದು ಕಾರಣ ಹೆಣ್ಣು ಹೆಣ್ಣಲ್ಲ ! ಹೆಣ್ಣು ರಾಕ್ಷಸಿಯಲ್ಲ!
ಹೆಣ್ಣು ಪ್ರತ್ಯಕ್ಷ ಕಪಿಲ ಸಿದ್ಧ ಮಲ್ಲಿಕಾರ್ಜುನ ನೋಡಾ"

ಎಂದು ಹೇಳಿ ಸ್ತ್ರೀಯರಿಗೆ ಸಲ್ಲ ಬೇಕಾದ ಗೌರವ ಸ್ಥಾನವನ್ನು ಸೂಚಿಸಿರುವನು. ನೂತನ ಸಮಾಜದಲ್ಲಿ ದೊರೆತ ಈ ಪ್ರೋತ್ಸಾಹದಿಂದ ಅನೇಕ ಮಂದಿ ಮಹಿಳೆಯರು ಮುಂದೆ ಬಂದು ಸಮಾಜ ಸುಧಾರಣೆ ಕಾರ್ಯವನ್ನು ಕೈಕೊಂಡು ತಮ್ಮ ಸೇವೆ ಸಲ್ಲಿಸಿದರು.

ಭೂ ಪ್ರದಕ್ಷಿಣ ಷಟ್ಕೇನ ಕಾಶಿಯಾತ್ರಾ ಯುಕೇನ ಚ ||
ಸೇತು ಸ್ನಾನ ಕದೈರ್ಸಶ್ಚ ಕಿತ್ಫಲಂ ಮಾತೃವಂದನೆ ||

ಆರುಸಾರಿ ಭೂಪ್ರದಕ್ಷಣೆ ಮಾಡುವುದರಿಂದ ಯಾವ ಫಲ ಉಂಟಾಗುವುದೋ; ಹತ್ತು ಸಾವಿರ ಸಾರಿ ಕಾಶಿ ಯಾತ್ರೆ ಮಾಡುವುದರಿಂದ ಯಾವ ಫಲ ಉಂಟಾಗುವುದೋ ನೂರುಸಾರಿ ಸೇತು ಸ್ನಾನ ಮಾಡುವುದರಿಂದ ಯಾವ ಫಲವುಂಟಾಗುವುದೋ ಅವೆಲ್ಲಾ ಒಂದು ಸಾರಿ ತಾಯಿಗ ಪ್ರದಕ್ಷಣ ನಮಸ್ಕಾರ ಮಾಡುವುದರಿಂದ ಉಂಟಾಗುತ್ತದೆ ಎಂದು ಸ್ತ್ರೀಯರ ಯೋಗ್ಯತೆ ತಿಳಿದು ಹಿಂದಿನ ವಿದ್ವಾಂಸರು ಹೇಳಿದ್ದಾರೆ.

ಈಗೀಗ ಸರ್ಕಾರವೂ ಮಹಿಳೆಯರಿಗೂ ಸ್ಥಾನಮಾನಗಳನ್ನು ಕೊಡುತ್ತಿದೆ. ಪೌರಸಭೆಯ ಸದಸ್ಯರಲ್ಲಿ ಕಾರ್ಪರೇಷನ್ ಸದಸ್ಯರಲ್ಲಿ ವಿಧಾನ ಸಭೆಯ ಸದಸ್ಯರಲ್ಲಿ ಮಂತ್ರಿ ಮಂಡಳದಲ್ಲಿ ಸ್ತ್ರೀಯರಿದ್ದಾರೆ.

ನವಮೈಸೂರಿನ ಉಪಮಂತ್ರಿಗಳಲ್ಲಿ ಶ್ರೀಮತಿ ಲೀಲಾವತಿ ಮಾಗಡಿಯವರು ಗ್ರೇಸ್ ಟಕ್ಕರ್‌ರವರು ಇರುವುದು ದೇಶದ ಕಾಂಗ್ರೆಸ ಅಧ್ಯಕ್ಷತೆ ಸ್ಥಾನದಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರು ಇರುವುದು ನಮಗೆಲ್ಲಾ ಹೆಮ್ಮೆಯ ವಿಷಯ.

ಶೇಕಡಾ ಐವತ್ತರಷ್ಟು ಮಂಧಿ ಸ್ತ್ರೀಯರು ಎಲ್ಲಾ ಸರ್ಕಾರಿ ಕೆಲಸಗಳಲ್ಲಿ ಇರುವಂತೆ ಸರ್ಕಾರ ಮಾಡಿದರೆ ದೇಶವು ಬಹುಬೇಗ ಉನ್ನತ ಮಟ್ಟಕ್ಕೇರುವುದರಲ್ಲಿ ಸಂಶಯವಿಲ್ಲ. ಆಗ ಸ್ತ್ರೀಯರು ಅಬಲೆಯರೆಲ್ಲ ಸಬಲೆಯರು ಎಂಬುದು ಎಲ್ಲರಿಗೂ ಗೋಚರಿಸುತ್ತದೆ.

---

( ದಿನಾಂಕ ೧೦-೫-೬೯ರಂದು ಮಾಡಿದ ಭಾಷಣದ ಸಾರಾಂಶ )

# ನಿಮ್ಮ ಮಕ್ಕಳಿಗೆ ಮನೆಯ ವಿಷಯವನ್ನು ಹೊರಗಡೆ ಹೇಳದಿರಲು ಕಲಿಸಿರಿ

ಬರೆದವರು— ಎಸ್. ಜಿ. ಉಳಿಗೆರೆ.

ಸಾಮಾನ್ಯವಾಗಿ ಎಲ್ಲಾ ತಾಯಂದಿರು ತಮ್ಮ ಮಕ್ಕಳನ್ನು ಸುಶಿಕ್ಷಿತ ನಾಗರೀಕರನ್ನಾಗಿ ಮಾಡಲು ಪ್ರಯತ್ನಿಸುತ್ತಾರೆ. ಆದರೆ ಎಲ್ಲಾ ತಾಯಂದಿರೂ ಆ ಮಕ್ಕಳಿಗೆ ಮನೆಯ ಯಾವ ವಿಷಯವನ್ನೂ ಹೊರಗಡೆಯವರಲ್ಲಿ ಹೇಳದಿರುವಂತೆ ಕಲಿಸಲು ಮರೆತಿರುತ್ತಾರೆ. ಇದರಿಂದ ಒಂದೊಂದು ಸಲ ಅಪಾರ ಅಪಮಾನ ಅನರ್ಥಗಳನ್ನು ಎದುರಿಸಬೇಕಾಗಿ ಬರುತ್ತದೆ. ಈ ವಿಷಯವನ್ನು ಮಕ್ಕಳಿಗೆ ಸ್ಕೂಲಿನಲ್ಲಿ ಕಲಿಸಬರುವುದಿಲ್ಲ. ಪುಸ್ತಕಗಳ ಮುಖೇನವೂ ಕಲಿಸಬರುವುದಿಲ್ಲ. ತಾಯಂದಿರೇ ಮಕ್ಕಳಿಗೆ ಕಲಿಸಬೇಕು. ಮಕ್ಕಳು ಮನೆಯ ಬೀಗದ ಕೈ ಇದ್ದಂತೆ. ನಾವು ನಮ್ಮ ಮನೆಯ ವಿಷಯವನ್ನು ಎಷ್ಟು ಗೌಪ್ಯವಾಗಿ ಇಟ್ಟುಕೊಳ್ಳಲು ಸಮರ್ಥರೋ ಅಷ್ಟು ಗೌರವದ ಬಾಳ್ವೆಯನ್ನು ಮಾಡಲು ಸಾಧ್ಯ. ಒಂದೊಂದು ಸಲ ನಮ್ಮ ಮಕ್ಕಳೇ ನಮ್ಮ ಮನೆಯ ವಿಷಯಗಳನ್ನು ಬೇರೆಯವರಲ್ಲಿ ಹೇಳಿಬಿಟ್ಟು ನಮ್ಮ ಗೌರವಕ್ಕೆ ಕುಂದು ತರುವದುಂಟು. ಅದಕ್ಕಾಗಿ ನಮ್ಮ ಮಕ್ಕಳಿಗೆ ಮನೆಯ ಯಾವ ವಿಷಯವನ್ನೂ ಬೇರೆಯವರಲ್ಲಿ ಹೇಳದಿರಲು ಕಲಿಸಬೇಕು. "ಮಕ್ಕಳೇ ನಮ್ಮ ಮನೆಯ ಯಾವ ವಿಷಯವನ್ನೂ ಬೇರೆಯವರಲ್ಲಿ ಹೇಳಬಾರದು. ಅದರಿಂದ ನಮ್ಮ ಗೌರವ ಘನತೆಗೆ ಕುಂದು ಬರುತ್ತದೆ. ಮನೆಯ ವಿಷಯವನ್ನು ಬೇರೆಯವರಲ್ಲಿ ಹೇಳುವವರನ್ನು ದೇವರು ಮೆಚ್ಚುವುದಿಲ್ಲ"ವೆಂದು ಮಕ್ಕಳಿಗೆ ಉಪದೇಶ ಕೊಡುತ್ತಿರಬೇಕು. ಮಕ್ಕಳಿರುವಾಗಲೇ ಈ ಬಗೆಯ ಸಣ್ಣಪುಟ್ಟ ವಿಷಯಗಳನ್ನು ಕಲಿಸದಿದ್ದರೆ ಮುಂದೆ ದೊಡ್ಡವರಾದ ಮೇಲೆ ಕಲಿಸಲಾಗುವುದಿಲ್ಲ. ಮಕ್ಕಳಿಂದ ಅವಮಾನವನ್ನೂ ಎದುರಿಸಬೇಕಾಗಿ ಬಂದ ಎರಡು ಸ್ವಾನುಭವ ಉದಾಹರಣೆಗಳು ಇಂತಿವೆ.

ನನ್ನ ಅಕ್ಕನೊಬ್ಬಳ ಪತಿ ತುಂಬಾ ಜೂಜಾಡುತ್ತಿದ್ದ. ಅದರಿಂದ ಸಾಕಷ್ಟು ಹಣವನ್ನೂ ಕಳೆದುಕೊಂಡಿದ್ದ. ಒಂದು ದಿನ ಅವರು ಜೂಜಾಡುತ್ತಿರುವಾಗ ಪೋಲೀಸರು ಬಂದು ಹಿಡಿದು ಬಿಟ್ಟರು. ಅವರ ಈ ಒಂದು ಚಟ ಬಿಟ್ಟರೆ ಉಳಿದೆಲ್ಲಾ ವಿಷಯಗಳಲ್ಲಿ ತುಂಬಾ ಸಂಭಾವಿತರು. ಅಕ್ಕನವರಾದರೂ ತುಂಬಾ ಸುಗುಣಾನ್ವಿತಳು ಆಗಿದ್ದಳು. ಮರುದಿನ ಅವರ ಪಕ್ಕದ ಮನೆಯವರೊಬ್ಬರನ್ನು ಕಾಣಲು ಹೋಗಿದ್ದೆ. ಆಕಸ್ಮಾತ್ ಅಕ್ಕನೂ ಅವಳ ಮಗನೂ ಅಲ್ಲಿಗೆ ಬಂದಿದ್ದರು. ನಾನು ಸ್ವಾಭಾವಿಕವಾಗಿ ಹುಡುಗನ ಹತ್ತಿರ "ಅಪ್ಪ ಮನೆಯಲ್ಲಿದ್ದಾರೆಯೋ ?" ಎಂದು ಕೇಳಿದೆ. ಹುಡುಗ ಹಿಂದಿನ ದಿನದ ಎಲ್ಲಾ ವಿಷಯಗಳನ್ನೂ ಸರಾಗವಾಗಿ ಹೇಳಿಬಿಟ್ಟ. ಪಾಪ, ಅಕ್ಕನಿಗೆ ಮುಖ ಎತ್ತಲಾಗಲಿಲ್ಲ. ಅವಳು ಹಾಗೆಯೇ ಮನೆ ದಾರಿ ಹಿಡಿದಳು. ಅಕ್ಕನಿಗೆ ಆ ಪುಟ್ಟ ಕಂದನ ಮಾತಿನಿಂದಾದ ನೋವನ್ನು ವಾಚಕರೇ ಊಹಿಸಬೇಕು. ಇದೇ ಬಗೆಯ ಇನ್ನೊಂದು ಉದಾಹರಣೆ--

ಒಂದು ದಿನ ನನ್ನ ಮಿತ್ರನೊಬ್ಬನ ಮನೆಗೆ ಹೋಗಿದ್ದೆ. ಮಿತ್ರ ಮನೆಯಲ್ಲಿರಲಿಲ್ಲ. ಅವನ ತಂದೆಯೂ ಇರಲಿಲ್ಲ. ಮಿತ್ರನ ಕಿರಿಯ ತಮ್ಮ ಹೊರ ಜಗುಲಿಯಲ್ಲಿ ಕೇರಂಬೋರ್ಡ ಆಡುತ್ತಿದ್ದ. ನಾನು ಆ ಹುಡುಗನೊಡನೆ— "ಅಣ್ಣ ಇಲ್ವೆನೋ" ಅಂದೆ. ಅದಕ್ಕವನು ಇಲ್ಲ ಎಂದ. ಅಪ್ಪ ಇಲ್ವೇನೋ ಎಂದೆ. ಸರಿ ಹುಡುಗ ಶುರು ಮಾಡಿಬಿಟ್ಟ. "ಸೀಮೆ ಎಣ್ಣೆ ಇರಲಿಲ್ಲ. ಅಕ್ಕಿ ಇರಲಿಲ್ಲ. ಅಮ್ಮ ಎರಡು ದಿನಗಳಿಂದ ಹೇಳ್ತಾ ಇದ್ದಳು. ಅಪ್ಪ ತರಲೇ ಇಲ್ಲ. ಅದಕ್ಕಾಗಿ ಅಮ್ಮ ನಿನ್ನೆ ಅಪ್ಪನಿಗೆ ಜೋರು ಮಾಡಿದಳು. ಅದಕ್ಕಾಗಿ ನಿನ್ನೆ ಹೋದವನು ಇನ್ನೂ ಬರಲಿಲ್ಲ" ಎಂದನು. ಅವನ ತಾಯಿ ಈ ಮಾತುಗಳನ್ನು ಒಳಗಿನಿಂದಲೇ ಕೇಳಿರಬೇಕು. ನಾನು ತಕ್ಷಣ ಹೊರಟುಬಿಟ್ಟೆ. ತಾಯಿ ಹುಡುಗನನ್ನು ಈ ವಿಷಯಕ್ಕಾಗಿ ಚೆನ್ನಾಗಿ ಥಳಿಸಿದಳೆಂದು ಹಿಂದಿನಿಂದ ನನಗೆ ಗೊತ್ತಾಯಿತು. ಪಾಪ, ಇಲ್ಲಿ ಯಾರದು ತಪ್ಪು

ಎಂದು ನಮಗೆ ಕಾಣುತ್ತದೆ. ಹುಡುಗ ನೈಸರ್ಗಿಕವಾಗಿ ನಡೆದದ್ದನ್ನು ಹೇಳಿದ. ಅದು ಅವನ ತಪ್ಪಲ್ಲ. ತಾಯಿ ಹುಡುಗನಿಗೆ ಮೊದಲಿನಿಂದಲೂ ಮನೆಯ ವಿಷಯವನ್ನು ಬೇರೆಯವರಲ್ಲಿ ಹೇಳಬಾರದೆಂದು ಕಲಿಸಿದ್ದರೆ, ಅವನು ಬೇರಾವುದೋ ಕಾರಣ ಕೊಟ್ಟು ಜಾರಿಕೊಳ್ಳುತ್ತಿದ್ದ. ಏಕೆಂದರೆ ಅವನಿಗೆ ವಿವೇಚಿಸುವ ಬುದ್ಧಿ ಇರುತ್ತಿತ್ತು. ಅದರಲ್ಲಿರುವ ಗೌರವದ ಪ್ರಶ್ನೆ ಅವನಿಗೆ ತಿಳಿಯುತ್ತಿತ್ತು.

"ಮನೆಯ ವಿಷಯವನ್ನು ಮಕ್ಕಳ ಹತ್ತಿರ ಕೇಳು ಊರ ವಿಷಯ ದಾಸಪ್ಪನ ಹತ್ತಿರ ಕೇಳು" ಎನ್ನುವ ಗಾದೆ ಮಾತು ಬಹುಶಃ ಇದಕ್ಕಾಗಿಯೇ ಇರಬೇಕು. ಮಕ್ಕಳಿಂದ ಮನೆಯ ವಸ್ತು ಒಡವೆ ಹಣಗಳ ಚೋರಿಯಾದ ಉದಾಹರಣೆಗಳೂ ಉಂಟು. ಕಳ್ಳರಿಗೆ ಮಕ್ಕಳೂ ಒಂದು ಬಗೆಯ ಸಹಾಯಕರು. ನಿನ್ನ ತಂದೆಯವರು ಯಾವಾಗ್ಗೆ ಮನೆಗೆ ಬರುತ್ತಾರೆ. ಎಲ್ಲಿಗೆ ಹೋಗಿದ್ದಾರೆ, ಬೀಗದ ಕೈಗಳನ್ನು ಎಲ್ಲಿಡುತ್ತಾರೆ. ಮುಂತಾದ ವಿಷಯಗಳನ್ನು ತಿಳಿದುಕೊಂಡು ಸುಲಭವಾಗಿ ಕಳವು ಮಾಡುತ್ತಾರೆ. ಸಣ್ಣಪುಟ್ಟ ವಿಷಯಗಳಂತೂ ಬೇಕಾದಷ್ಟು ನಡೆಯುತ್ತಿರುತ್ತವೆ. ಅಪ್ಪ ನನ್ನ ತಾಯಿಯನ್ನುಹೊಡೆದನು, ತಾಯಿ ಸಿನೀಮಾಕ್ಕೆ ಹೋಗೋಣವೆಂದಾಗ ಅಪ್ಪ ಹಣವಿಲ್ಲ ಎಂದ, ನಮ್ಮ ಮನೆಯಲ್ಲಿ ಕಾಫಿ ಇಲ್ಲದೆ ಎರಡು ದಿನವಾಯಿತು, ಮುಂತಾದ ಸಣ್ಣಪುಟ್ಟ ವಿಷಯಗಳನ್ನು ಮಕ್ಕಳು ಹರಿಬಿಡುತ್ತಾರೆ. ನೋಡುವುದಕ್ಕೆ ಇವು ಚಿಕ್ಕ ವಿಷಯಗಳಾದರೂ ಇದರಲ್ಲಿ ಗೌರವಕ್ಕೆ ಕುಂದು ಇದೆ. ಈ ಬಗೆಯ ಚಿಕ್ಕ ಚಿಕ್ಕ ಘಟನೆಗಳು ಪ್ರತಿಯೊಂದು ಸಂಸಾರದಲ್ಲಿಯೂ ನಡೆಯುವದೆಂದು ಆ ಮಕ್ಕಳಿಗೇನುಗೊತ್ತು.

ಬಾಲ್ಯದಲ್ಲಿ ಮಕ್ಕಳ ಈ ಒಂದು ನಡಕೆಯನ್ನು ತಿದ್ದದಿದ್ದರೆ, ಅವರಲ್ಲಿ ಅದೇ ಅಭ್ಯಾಸ ನಿಂತುಬಿಡುತ್ತದೆ. ಇಂದಿನ ಮಕ್ಕಳೇ ಮುಂದಿನ ನಾಗರಿಕರು. ಅವರನ್ನು ಸುಶಿಕ್ಷಿತ ನಾಗರಿಕರನ್ನಾಗಿ ಮಾಡುವುದರಲ್ಲಿ ಯಾವ ತಾಯಂದಿರೂ ಹಿಂದುಳಿಯಬಾರದು. ಅಲ್ಲದೆ ಈ ಬಗೆಯ ಸಣ್ಣ ಪುಟ್ಟ ವಿಷಯಗಳಲ್ಲಿ ಏನಿದೆ? ಎಂದುಬಿಟ್ಟರೆ ಆ ಮಕ್ಕಳು ಮುಂದೆ ಗೌರವದ ಜೀವನ ನಡೆಸುವಲ್ಲಿ ಜಾರಿಬೀಳುವುದುಂಟು. ಅವರು ಇಂದು ಮನೆಯ ವಿಷಯವನ್ನು ಬೇರೆಯವರಲ್ಲಿ ಹೇಳುತ್ತಾರೆ. ನಾಳೆ ರಾಷ್ಟ್ರದ ಗಹನ ವಿಚಾರವನ್ನು ಪರರಾಷ್ಟ್ರದವರಿಗೆ ಹೇಳಬಹುದು. ಏಕೆಂದರೆ ಹುಟ್ಟುಗುಣ ಘಟ್ಟಹತ್ತಿದರೂ ಬಿಡದು. ಮಿತ್ರನ ವಿಷಯವನ್ನು ಬೇರೆ ಅವನಿಗೆ ಆಗದವನಲ್ಲಿ ಹೇಳಿ ಇಬ್ಬರಲ್ಲಿಯೂ ವೈರ ಇಮ್ಮಡಿಯಾಗುವಂತೆ ಮಾಡುತ್ತಾರೆ. ಒಬ್ಬನಿಂದ ಒಬ್ಬನಿಗೆ ಚಾಡಿಹೇಳಿ ನಿಮ್ಮ ಮಕ್ಕಳು ಒಬ್ಬನಿಂದ ಲಾಭ ಹೊಡೆದುಕೊಂಡು ಮತ್ತೊಬ್ಬನಿಗೆ ಶತ್ರುವಾಗಬಹುದು. ಸಮಾಜ ಈ ಬಗೆಯ ಒಂದೆರಡು ಘಟನೆಗಳನ್ನು ಮನ್ನಿಸಬಹುದು. ಕೊನೆಗಂಥವರನ್ನು ಚಾಡಿಕೋರ, ದಗಾಕೋರ, ಎಂದು ವಿಶಿಷ್ಟವಾಗಿ ಕಾಣುತ್ತದೆ. ಸಮಾಜದಿಂದ ವಿಕೃಷ್ಟ ಹೊಂದಿದವರಿಗೆ ತಮ್ಮ ವಿಷಯದಲ್ಲಿ ದೀನಭಾವ ಹುಟ್ಟುತ್ತದೆ. ತನ್ನತನದಲ್ಲಿ ಹೀನತೆ ಕಂಡವನ ಜೀವನ ಅಂಥ ಜೀವನದತ್ತ ಸಾಗುತ್ತದೆ. ದೀನಭಾವ ಪೀಡಿತರು ಕೋಟೆಗಟ್ಟಲೆ ಅಪರಾಧ ಮಾಡಬಹುದು. ಸಣ್ಣಪುಟ್ಟ ವಿಷಯಗಳಲ್ಲಿ ನಾವು ನಮ್ಮ ಮಕ್ಕಳನ್ನು ತಿದ್ದದೆ ಹೋದರೆ, ಮಕ್ಕಳು ಸುಶೀಲಸಂಪನ್ನರಾಗುವುದು ಶಕ್ಯವಿಲ್ಲ. ಅದಕ್ಕಾಗಿ ಅಕ್ಕಂದಿರೇ — ನಮ್ಮ ಮಕ್ಕಳು ರಾಷ್ಟ್ರದ ಸುಶಿಕ್ಷಿತ ನಾಗರೀಕರಾಗಿ ಬಾಳಲು, ಸಭ್ಯ ಸರಲ ಸಹನಶೀಲರಾಗಲು, ಗೌರವದ ರಾಜರುಜು ಬಾಳುವೆಯನ್ನು ಸಾಗಿಸಲು, ದಿನದಲ್ಲಿ ಒಂದರ್ಧತಾಸು ನಮ್ಮ ಮಕ್ಕಳ ಸಾಮಾಜಿಕ ಶಿಕ್ಷಣದ ಬಗ್ಗೆ ಪ್ರಯತ್ನಿಸುವುದು ಪ್ರತಿಯೊಬ್ಬ ತಾಯಂದಿರ ಕರ್ತವ್ಯ.



# ಭಾವನೆಯುನಳಿದಾಗ



ಅ. ಶ. ಬೆಳಬಂಗಿ.

೧

ಜೊಂಡು ನೀರಿನ ಹೊಂಡ ಹಸಿರು ಹುಲ್ಲನು ಕಂಡು
ಹಸಿವು ನೀರಡಿಕೆ ಎಂದೆ !
ಹಸಿರು ಹುಲ್ಲನು ತಿಂದೆ ಜೊಂಡು ನೀರನೆ ಕುಡಿದೆ
"ಅಮೃತವು" ಎಂದೆ ಓ ! ನನ್ನ ತಂದೆ !
ಎಮ್ಮೆ ಆಕಳು ತಿನ್ನಲೆಂದು ಬಂದವು ಹಸುರು
ಒಂದಕ್ಕೂ ಬಿಡಲಿಲ್ಲ 'ನನ್ನ'ದೆಂದೆ !
ಬೆಂದ ಹೃದಯಗಳೆಷ್ಟೋ 'ತ್ರಾಹಿ ತ್ರಾಹಿ'ಯುಸುರೆ !
ಆದರೆಂ 'ಗಂಡ' ನನ ಮಾತು ಒಂದೆ !

ನೀಲಿ ಆಗಸದಲ್ಲಿ ಸೇರುತ್ತಿದ್ದ ತಾಯೊಡಲು ರವಿ
ಬಂದಿತಾಗ ಹೆಣ್ಣು ಹಸುವೊಂದು ಹುಲ್ಲು ಮೇಯಲೆಂದು
ಕಣ್ಣಲ್ಲಿ ಕಣ್ಣಿಟ್ಟು ನೋಡಿದೆ ಮನ ತಣಿಯಲಿಲ್ಲ !
ಅವಳ ಸುಂದರತೆಗೆ ಮೈ ಮರೆತ್ಹೋಯಿತು !
ಅವಳ ಇಂಪಾದ ಖುರನಾದಕೆ ಶರಣಾದೆ !
'ಇದು ನನ್ನ ಹೊಲ' ಎಂಬುದನು ಮರೆತೆ !
ಆದರೆಂ 'ತಾಯ' ಭಾವ ಇರಲಿಲ್ಲ !
ಏನೋ ಇಚ್ಛೆ ! ಬಾ ರಮಣಿ ಮೆಯ್ಯಿ ಇಲ್ಲಿ ಎಂದೆ !

೨

ತಿಂದು ತೇಗಿತು ಹಸು ಹಸುರು ಹುಲ್ಲನು !
'ಹೋಗಿ ಬರುವೆನಣ್ಣಾ !' ಎಂದಳು ಕೃತಜ್ಞತೆಯ ಧ್ವನಿಯಲ್ಲಿ
"ನಿಲ್ಲು ನಲ್ಲೆ ! ಹೋಗುವದು ಎಲ್ಲಿಗೆ ? ನಾನಿಲ್ಲೆ ಇಲ್ಲಿ ?"
"ಇಲ್ಲೇ ಇರುವಣ್ಣ ! ನಾಳೆ ಬರುವೆ. ತಾಯ್
ದಾರಿ ನೋಡುವಳು ತಂದೆ ಅನ್ನ ಮುಟ್ಟುವದಿಲ್ಲ,
ಏಕಾಂಕಿ ಮಗಳು ಲಗ್ನವಾಯಿತು ಮೊನ್ನೆ !
ಗಂಡ ಬರುವವನಿದ್ದ ಬಂದಿರಬಹುದು ಇಂದು !
ಹೋಗಿ ಬರುವೆ, ಬರುವೆನಣ್ಣಾ ! ನಾಳೆ ಬರುವೆ !

ನನ್ನ ಅನ್ನಕೆ ಕೃತಜ್ಞತೆ ! ನಿತ್ಯ ನಿತ್ಯವು ಬರುವೆ
ಒಪ್ಪಿಗೆಯೆ ಅಣ್ಣ ?"
ಒಪ್ಪಿಗೆಯನಿತ್ತೆ ಅಡ್ಡದಾರಿಗೆ ನಿಂತೆ
ನನ್ನವಳು ಇಂದೊಂದು ದಿನ ಎಂದೆ।
ಅನ್ನದಾನಕೆ ಪ್ರತಿಫಲವೆ ಅಣ್ಣ !
ಏನಾದರಾಗಲಿ ಬಿಡಲಾರೆ ನಾನು
ಆಜ್ಞೆಯು ಸಿಡಿಲಿತ್ತು ಎನ್ನ ದನಿಯಲ್ಲಿ
ಸಿಡಿಲಿನೇಟಿಗೆ ಕಣ್ಣೀರು ಉಕ್ಕಿದವು ಬಾಲೆಗೆ
ಸೌಂದರ್ಯ ಹೆಚ್ಚಿತು, ಸು ಕುಸುಮವಾದಳು।
ತುಂಬಿ ಯಾದೆ ನಾ। ಹಿಂಡಿದೆ ಮಧುರಸ।
ಹೊರಟು ಹೋದಳು ಬಾಲೆ ಕಣ್ಣೀರು ಸುರಿಸುತ್ತ।
ನೆನೆಸುತ್ತಿದ್ದಳು ಏನೋ ಮೆಲಕು ಹಾಕುತ್ತ।
ಮುಂದು ಮುಂದಕೆ ಹೋದಳು ನನ್ನತ್ತ ನೋಡುತ್ತ।
ವಿಷವಲ್ಲ ಕನಿಕರದ ದೃಷ್ಟಿಯನ್ನು ಬೀರುತ್ತ।
ಹೋದಳ್ಹೋದಳು ಬಾಲೆ ಕಣ್ಮರೆಯು ಆಗುತ್ತ।

೩

ದಿನಗಳುರುಳಿದವು ವರ್ಷಗಳೆನಿತೊ ಹೋದವು।
ಹಸಿರು ಹುಲ್ಲೆಲ್ಲ ಒಣಗಿ ಹೋಯಿತು ನೀರೆಲ್ಲ ಬತ್ತಿಹೋದವು
ಹಸಿವು ನೀರಡಿಕೆ ಎಂದೆ ನುತ್ತೆ ನಾ ಕತ್ತೆ।
ಅಲೆದೆ ಎಲ್ಲೆಡೆಗು ಅಂಗಲಾಚಿದೆ ಎಲ್ಲರಗು।
ಸ್ವಾರ್ಥಿ ದ್ರೋಹಿ ವಂಚಕ ಎನಗೆ ದೊರೆತ ಇನಾಮು।
ಕಾಲು ಜೋಡುಗಳಿಂದ ಆದವು ಎನಗೆ ಸಲಾಮು।
ಕೆಳಗೆ ಇಳಿಯಿತು ಪಿತ್ತ ದೂರ ನೋಡಿದೆ ಕರೆಯುತಿತ್ತು।
ಅಣಕ ಅದರಲ್ಲಿಲ್ಲ, ಸಹಾನುಭೂತಿಯ ಅನುಕಂಪವಿತ್ತು।
ಬಾ ಮಗುವೆ! ಆದದ್ದು ಆಗ್ಹೋಯಿತು ಎಂದಿತು।

೪

ಪೂರ್ವ ಸುರಬಾಲೆ ಕೂಗಿ ಕರೆದಿರೆ ರವಿಯ।
ಇರುಳು ಕತ್ತಲ ಕಪ್ಪು ಕವಿಯುತಿರೆ ಇಳೆಯ।
ಕಣ್ಣು ಕಾಣದ ಮುದುಕ ಕುಂಟುತ್ತ ಬಂದೆ ಗದ್ದೆಯೆಡೆಗೆ।

ನೋಡಿ ಬೆರಗಾದೆ ಶಿರ ಕೆಳಗೆ ಮಾಡಿದೆ।
ಅದೇ ಹೆಣ್ಣು ಹಸು ಕರೆಯುತಿದೆ ಇಂದು ಮುಂದೆ ಬಂದು।
ಏನಣ್ಣ! ಇಲ್ಲಿಗೇಕೆ? ಏನಾದರೂ ಬೇಕೆ?
ಕಣ್ಣೀರದೇಕೆ? ಮೊದಲಿನಾ ಪಾಪಕೆ?
ಮರೆತು ಬಿಡು ಅದಣ್ಣ! ಹಾಲು ಜೇನುಂಡು
ಈ ಜಗದಿ ವಿಷವೂ ಉಂಟು।
ವಿಷವು ಉಂಡುದುದಾಯಿತು ಹಾಲು ಜೇನುಣ್ಣು ಇನ್ನು
ಕಣ್ಣೊಳಗಿರುವ ಮಣ್ಣು ಹೊರಹೋಯಿತು।
ತಿಳಿಗಣ್ಣಿನಿಂದೀಕ್ಷಿಸಿದೆ ತಾಯಾಗಿ ಕಂಡಳವಳು।
ಮಗುವಾಗಿ ಯಾಚಿಸಿದೆ! ತಾಯೆ ಬಂದಿಹೆ ನಾನು
ಮಗುವಾಗಿ
ದಾರಿ ತಪ್ಪಿದ ನಾನು ನಿನ್ನ ಕಂದ! ಎದೆ ತೆರೆದು ಕರೆದುಕೋ
ಕೈಯ ಬಿಡಬೇಡಮ್ಮ ಶಾಂತಮ್ಮ, ಶಿವಮ್ಮ, ಸುಂದರಮ್ಮ





# ವಿಧವೆ ( ನೀಳ್ಗತೆ )

ಲೇಖಕ: **ಕೃ. ನಾರಾಯಣರಾವ್,** ಅಧ್ಯಾಪಕ, ಬಾಲಮಂದಿರ,
ಬೇಸಿಕ್ ಟ್ರೇನಿಂಗ ಕಾಲೇಜ, ದೊಡ್ಡ ಬಳ್ಳಾಪುರ
( ಮೇ ಸಂಚಿಕೆಯಿಂದ ಮುಂದುವರಿದುದು )

೪

ಪಾರ್ವತಿಯ ಆಗಮನದಿಂದ ಪಿತ್ರಾರ್ಜಿತವೆನಿಸಿದ್ದ ದೀನದಯಾಲನ ಬಡತನದ ಮನೆಯು ಸುವರ್ಣ ಗೃಹವೆನಿಸಿತು. ಅವನ ಬಾಲಕನು, ಯಾರು ದಾರಿದ್ರ್ಯದ ದೆಸೆಯಿಂದ ಅಶಿಕ್ಷಕನಾಗಿದ್ದನೋ, ಪಾತತ್ತೆಯ ಕಾರಣದಿಂದ ಓದತೊಡಗಿದನು. ಹಿರಿಯ ಮಗಳಾದ ಶಾಂತಿಯು ಪಾತತ್ತೆಯಿಂದ ಓದುಬರೆಹದ ಜೊತೆಗೆ ಕಸೂತಿ ಕೆಲಸವನ್ನೂ ಕಲಿಯತೊಡಗಿದಳು. ಕೆಲವು ದಿನಗಳಲ್ಲಿಯೇ ಪಾರ್ವತಿ ಮತ್ತು ಶಾಂತಿಯ ಕಸೂತಿ ಕಲೆಯ ಪ್ರಭಾವವು ದಿನಪ್ರತಿ ಎರಡು ರೂಪಾಯಿಗಳಷ್ಟು ಸಂಪಾದನೆಯನ್ನೂ ಒದಗಿಸಿಕೊಡುತ್ತಿತ್ತು. ಪಾರ್ವತಿಯ ಮಾತಿನಂತೆ ದೀನದಯಾಲನು ಒಂದು ಹಸುವನ್ನು ಕೊಂಡನು. ಈಗ ಅವನ ಮನೆಯಲ್ಲಿ ಸರ್ವವೂ ತುಂಬಿದಂತಾಯಿತು. ವಿದ್ಯೆ ಇತ್ತು, ಹಣವಿತ್ತು, ಹಾಲಿತ್ತು. ದೀನದಯಾಲನ ಹೆಂಡತಿಯಾದ ದೇವಕಿಯು,ಪಾರ್ವತಿಯು ತನ್ನ ಸರ್ವಸ್ವ ಸಮೃದ್ಧಿಗೂ ಕಾರಣಳೆಂದು ಭಾವಿಸಿದಳು. ಪ್ರಾತಃಕಾಲವೆದ್ದು ಅವಳ ಪಾದಗಳನ್ನು ಮುಟ್ಟಿ ನಮಸ್ಕರಿಸುತ್ತಿದ್ದಳು. ಮನೆಯ ಪ್ರತಿಕಾರ್ಯವನ್ನೂ ಅವಳ ಅಪ್ಪಣೆ ಪಡೆದು ಮಾಡುತ್ತಿದ್ದಳು.

ಒಂದು ವರ್ಷ ಉರುಳಿತು. ಪಾರ್ವತಿಯು ಈಗ ಮಿಡಲ್‌ಸ್ಕೂಲಿನ ಅಧ್ಯಾಪಕೆಯಾಗಿದ್ದಾಳೆ. ಐವತ್ತು ರೂಪಾಯಿಯ ಮಾಸಿಕ ವೇತನವೂ ದೊರೆಯುತ್ತಿದೆ. ಈಗ ದೀನದಯಾಲನ ಬಾಲಕನು ಪೋಲಿಯಂತೆ ಅಲೆಯದೆ ಶುಭ್ರಬಟ್ಟೆಗಳನ್ನು ಧರಿಸಿ ಒಳ್ಳೆಯ ಬಾಲಕರಂತೆ ಶಾಲೆಗೆ ಕ್ರಮವಾಗಿ ಹೋಗುತ್ತಿದ್ದಾನೆ. ಶಾಂತಿಯು ಪಾರ್ವತಿಯ ಜೊತೆಯಲ್ಲಿ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದಾಳೆ. ತನ್ನ ಸೋದರಿಯ ಸೌಭಾಗ್ಯವನ್ನು ಕಂಡು ದೀನದಯಾಲನು ಹಿರಿಹಿರಿ ಹಿಗ್ಗುತ್ತಿದ್ದಾನೆ. ಕ್ರಮೇಣ ತನ್ನ ನೌಕರಿಯನ್ನು ಬಿಟ್ಟು ಮನೆಯಲ್ಲಿಯೇ ಒಂದು ಚಿಲ್ಲರೆ ಅಂಗಡಿಯನ್ನಿಟ್ಟಿದ್ದಾನೆ. ಅವನ ಮನೆಯೂ ಸಹ ಈಗ ಒಂದು ಪುಟ್ಟ ಬಾಲಿಕಾ ಪಾಠಶಾಲೆಯಂತಾಗಿದೆ. ಆ ಊರಿನ ಶಾಲೆಯ ಹೆಣ್ಣುಮಕ್ಕಳೂ ಶಾಲೆಯಿಂದ ಹಿಂತಿರುಗುವಾಗ ಕಸೂತಿಯನ್ನು ಕಲಿಯಲು ಅಲ್ಲಿಗೆ ಬರುತ್ತಿದ್ದರು. ವಿದ್ಯಾದಾನದ ಮುಖೇಣ ಪಾರ್ವತಿಯ ಪ್ರತಿಭೆಯು ಪುರದಲ್ಲೆಲ್ಲಾ ಪ್ರಕಾಶಿಸಲಾರಂಭಿಸಿತು.

*  *  *  *

ನಾಲ್ಕು ವರ್ಷಗಳು ಮತ್ತೆ ಉರುಳಿದವು. ಪಾರ್ವತಿಯು ಪ್ರೈವೇಟ್‌ನಲ್ಲಿಯೇ ಪ್ರಥಮ ದರ್ಜೆಯಲ್ಲಿ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದಳು. ಕಾಲೇಜಿನ ಪ್ರಧಾನಾಧ್ಯಾಪಕಿಯವರೇ ತಮ್ಮ ಸ್ವಹಸ್ತದಿಂದ ಪಾರ್ವತಿಯ ಶ್ವೇತ ಸೀರೆಯ ಮೇಲೆ ಪ್ರತಿಷ್ಠಾ-ಸೂಚಕ ಮೆಡಲ್ ಒಂದನ್ನು ಅಲಂಕರಿಸಿದರು. ಅಲ್ಲದೆ ಅವಳನ್ನೂ ಅಂದಿನಿಂದ ತಮ್ಮ ಕಾಲೇಜಿನ ಸಹಾಧ್ಯಾಪಕೆಯಾಗಿ ನೇಮಿಸಿಕೊಂಡರು. ಕ್ರಮೇಣ ಪಾರ್ವತಿಯೇ ಆ ಕಾಲೇಜಿನ ಪ್ರಧಾನಾಧ್ಯಾಪಕೆಯ ಹುದ್ದೆಯನ್ನೂ ವಹಿಸಿಕೊಂಡಳು. ವೇತನವೂ ಸಹ ೨೫೦ ರೂಪಾಯಿಗಳಿಗೇರಿತು.

೫

ಭಾನುವಾರದ ದಿನ ಕಾಲೇಜಿನ ಸಭಾಭುವನದಲ್ಲಿ ಪ್ರಧಾನ ಕಾರಿಣಿ ಸಮಿತಿಯ ಸಭ್ಯರ ಅಂತರಂಗ ಸಭೆಸೇರಿತ್ತು. ಮಹಿಳಾ ಸದಸ್ಯರೆಲ್ಲರೂ ಸೇರಿದ್ದರು. ಕಾಲೇಜಿನ ಗೌರವಕಾರ್ಯದರ್ಶಿಗಳಾಗಿದ್ದ ರಾವ್‌ಬಹದ್ದೂರರ ಪತ್ನಿ ಪ್ರೇಮಾವತಿಯವರೂ ಹಾಜರಿದ್ದರು. ಅವರು ಕಾಲೇಜಿಗೆ ಸಂಬಂಧಿಸಿದ ಹಲವಾರು ವಿಷಯಗಳನ್ನು ಚರ್ಚೆಗೆ ತರುತ್ತಿದ್ದರು ಅವರೇ ಪ್ರಸ್ತಾಪಿಸಿದರು—"ಈ ದಿನ ನಾನು ಇಂದಿನ ಸಭೆಯಲ್ಲಿ ಕಾಲೇಜಿಗೆ ಸಂಬಂಧಿಸಿದ ಕೊನೆಯ ವಿಷಯವಾದ ಜವಾನರ ಬಗ್ಗೆ ಚರ್ಚಿಸಲು ನಿಮ್ಮ ಮುಂದೆ ಇಡುತ್ತೇನೆ. ನನ್ನ ಅಭಿಪ್ರಾಯದಲ್ಲಿ ಯಾವ ಜವಾನನ್ನೂ ಸ್ವಂತ ಪರಿಗಣಿಸದೆ ಕೆಲಸಕ್ಕೆ ತೆಗೆದುಕೊಳ್ಳುವುದು ಅನುಚಿತವೆನಿಸುತ್ತಿದೆ. ಜವಾನನು ವೃದ್ಧನಿರಬಹುದು. ಅದರ ಜೊತೆಗೆ ಕಲಹಪ್ರಿಯನೂ ಕಾರ್ಯವಂಚಕನೂ ಆಗಿರಬಾರದು. ಈ ಬಗ್ಗೆ ನಾವು ಮನಗಂಡ ಹೊರತು

...ನೂ ಮಾಡಲಾಗದು. ಈಗ ನಾನು ನೀವೆಲ್ಲರೂ ಹಾಗೂ ಅಕ್ಕನವರು (Lady Principal) ಹೇಗೆ ಸಮ್ಮತಿಸುವಿರೋ ಹಾಗೆ ಮಾಡಲು ಇಚ್ಛಿಸುವೆನು.

ಹಾಜರಿದ್ದ ಇತರ ಮೂವರು ಮಹಿಳೆಯರೂ ಒಂದೇ ಕಂಠದಿಂದ ಹೇಳಿದರು—"ಈ ವಿಷಯದಲ್ಲಿ ಅಕ್ಕನವರ ಅಪ್ಪಣೆಯನ್ನು ಕಾಯುವುದು ಸೂಕ್ತವೆನಿಸುತ್ತಿದೆ. ಏಕೆಂದರೆ ಜವಾನರನ್ನು ನಿಯಮಿಸಿಕೊಳ್ಳುವುದು ಅವರ ಆಡಳಿತ ಅನುಕೂಲಕ್ಕೇ ಆಗಿದೆ.

ಪಾರ್ವತಿಯು ತನ್ನ ಪ್ರಶಾಂತ ಹಾಗೂ ಪ್ರಭಾಪೂರ್ಣ ಮುಖಕಮಲವನ್ನು ಅರಳಿಸುತ್ತಾ ಹೀಗೆಂದಳು—"ನಾನು ರಾಯ್ ಬಹದ್ದೂರರ ಪತ್ನಿಯವರ ಅಭಿಪ್ರಾಯವನ್ನು ಅನುಮೋದಿಸುತ್ತೇನೆ. ಯಾವ ಜವಾನನನ್ನೂ ಪರೀಕ್ಷಿಸಿಯೇ ನಿಯಮಿಸಿಕೊಳ್ಳುವುದು ಸೂಕ್ತ ಸಲಹೆಯಾಗಿದೆ. ಮನುಷ್ಯನನ್ನು ನೋಡಿಯೇ ನಾವು ಅವನ ಹಲವಾರು ಗುಣದೋಷಗಳನ್ನು ಅವಲೋಕಿಸಬಹುದು. ಆ ದಿನ "ರೈಶನಲ್ ಥಾಟ್" ನಲ್ಲಿ ಅರಂಡೇಲ್‌ರವರ ವಿಷಯವನ್ನು ನೀವು ಓದಲಿಲ್ಲವೇ?

ರಾಯ್‌ಬಹದ್ದೂರರ ಪತ್ನಿ ಹೇಳಿದರು—"ಓದೇನೋ ಇದ್ದೆ, ಆದರೆ ತಿಳಿದಿರುವುದು ಅತಿ ಕಡಿಮೆ. ಇತ್ತೀಚೆಗೆ ತಮ್ಮ ಪೂರ್ತಿ ಸಮಯ ಮತ್ತು ಶಕ್ತಿಯು ವಿಧವಾಶ್ರಮದ ಸ್ಥಾಪನೆಯಲ್ಲಿಯೇ ವಿನಿಯೋಗವಾಗುತ್ತಿದೆ. ಈ ರೀತಿಯಲ್ಲಿ ತಾವು ದೇಶಕ್ಕೆ ಹೆಚ್ಚಿನ ಸೇವೆ ಸಲ್ಲಿಸುತ್ತಿದ್ದೀರಿ. ತಮಗೆ ಸ್ವಲ್ಪವಾದರೂ ವಿರಾಮ ದೊರೆತಲ್ಲಿ ತಮ್ಮೊಂದಿಗೆ ಆಂಗ್ಲ-ಇತಿಹಾಸದ ಬಗ್ಗೆ ಅಧ್ಯಯನಮಾಡಿ ನನ್ನಲ್ಲಿರುವ ಈ ಕುಂದನ್ನೂ ಹೋಗಲಾಡಿಸಿಕೊಳ್ಳಲು ಯತ್ನಿಸುತ್ತೇನೆ.

ಪಾರ್ವತಿಯು ನಸುನಗುತ್ತಾ ಹೇಳಿದಳು—"ಧನ್ಯವಾದಗಳು, ತಮ್ಮ ಸಹಾಯ ಮತ್ತು ಈಶ್ವರನ ಕೃಪೆಯಿಂದ ಈ ಕಾರ್ಯವು ಪೂರ್ತಿಯಾಗುವುದು. ನಮ್ಮ ಪ್ರಜಾನುರಾಗಿಗಳಾದ ಭಾಸ್ಕರಾಚಾರ್ಯರು ಹದಿನೈದು ಎಕರೆಯ ಭೂಮಿಯನ್ನು ದಾನವಾಗಿ ಕೊಟ್ಟಿದ್ದಾರೆ. ಚಂದಾಹಣವೂ ಒಂದು ಲಕ್ಷದಷ್ಟು ಆಗಿದೆ. ಈಶ್ವರನ ಕೃಪೆಯಾದರೆ ಈಗ ಈ ಕಾರ್ಯವು ಶೀಘ್ರದಲ್ಲಿಯೇ ಪೂರ್ಣವಾಗುವುದು.

ಸತ್ಯವತಿಯುವರು ಹರ್ಷೋದ್ಗಾರದಿಂದ ಹೇಳಿದರು—ಈಗ ಕಾರ್ಯವು ಪೂರ್ಣವಾಗಲು ಯಾವ ಸಂದೇಹವೂ ಇಲ್ಲ. ಯಾವ ದಿನ ತಾವು ಈ ಕಾರ್ಯಕ್ಕಾಗಿ ತಮ್ಮ ಜೀವನವನ್ನೇ ತ್ಯಾಗಮಾಡಲು ಹಣತೊಟ್ಟಿರೋ ಅಂದೇ ದೇಶದ ಎಲ್ಲಾ ದುಃಖಿಗಳಿಗೂ ತಮ್ಮ ಹಿರಿಯಾಸೆಯು ಪೂರ್ಣವಾಗಿ ಈಡೇರಬಹುದೆಂಬ ಭರವಸೆಯ ಆಭಯವುಂಟಾಯಿತು.

ಪಾರ್ವತಿಯು ಸರಳ ಭಾವದಿಂದ ಹೇಳಿದಳು—"ಸಹೋದರಿಯರೇ, ಧನ್ಯವಾದ, ಹೌದು ನಿಮ್ಮ ಆಂಗ್ಲ ಸಾಹಿತ್ಯದ ಅಧ್ಯಯನ ವಿಷಯವು ಹಾಗೆಯೇ ಉಳಿದಿರುತ್ತದೆ. ಆ ವಿಷಯದಲ್ಲಿ ನಿವೇದನೆಯನ್ನು ನಮ್ಮ ಸತ್ಯವತಿಯರಿಂದ ತಿಳಿಯಿರಿ. ಸ್ತ್ರೀಯರಿಗಾಗಿ ಪತಿಗಿಂತಲೂ ಮಿಗಿಲಾದ ಶಿಕ್ಷಕರು ಯಾರೂ ಇಲ್ಲ. ಬಾಲಕರಿಗೆ ತಾಯಿ ತಂದೆ, ಅಥವಾ ಶಿಕ್ಷಕರು ಓದಿಸುತ್ತಾರೆ. ಆದರೆ ಪ್ರೌಢಸ್ತ್ರೀಯರ ಪರಮಗುರು ಮತ್ತು ಶಿಕ್ಷಕರು ಪತಿಯೇ ಆಗಿರುತ್ತಾರೆ. ನನ್ನನ್ನು ಈ ಒಂದು ವಿಷಯದಲ್ಲಿ ಅಡ್ಡಬಂದುದಕ್ಕಾಗಿ ಕ್ಷಮಿಸುವಿರೆಂದು ನಂಬಿದ್ದೇನೆ.

ಸತ್ಯವತಿಯು ಸೌಜನ್ಯವನ್ನು ಸೂಚಿಸುತ್ತಾ ಪಾರ್ವತಿಗೆ ಧನ್ಯವಾದಗಳನ್ನರ್ಪಿಸಿ ಅಂದಿನ ಸಭೆಯ ಕಾರ್ಯಕಲಾಪಗಳನ್ನು ಪೂರೈಸಿದಳು.

೬

ದಿಕ್ಕೆಟ್ಟ ಭಾರತದ ಕಲ್ಪಿತ ವಿಭೂತಿಯನ್ನು ಕಂಡು ಈಗಲೂ ಅನೇಕ ಪರದೇಶೀಯರು ಬೆಕ್ಕಸ ಬೆರಗಾಗುತ್ತಿದ್ದಾರೆ. ಆದರೆ ಯಾರು ಭಾರತದ ಹಳ್ಳಿಗಳ ಸ್ಥಿತಿಗತಿಗಳನ್ನು ಕಣ್ಣಾರೆ ಕಂಡಿದ್ದಾರೋ, ಒಂಟಿ ವಸ್ತ್ರವನ್ನುಟ್ಟ ಕೃಶಕಾಯರಾದ ಭಾರತ ಬಡ ರೈತರನ್ನು ನೋಡಿದ್ದಾರೋ ಅವರು ಭಾರತ ವಿಭೂತಿಯನ್ನು ಚೆನ್ನಾಗಿ ಅರಿತಿರುತ್ತಾರೆ.

ಕಾಲೇಜಿನಲ್ಲಿ ಕೇವಲ ಇಪ್ಪತ್ತೆರಡು ರೂಪಾಯಿಗಳ ಕಾವಲುಗಾರನ ಕೆಲಸಕ್ಕೆ ಇಷ್ಟೊಂದು ಮಂದಿ ಬರುವರೆಂದು ಯಾರೂ ಎಣಿಸಿರಲಿಲ್ಲ. ಅನೇಕ ವೃದ್ಧರು ಸಾಲುಗಟ್ಟಿಕೊಂಡು ನಿಂತಿದ್ದಾರೆ. ರಾಯಬಹದ್ದೂರರ ಪತ್ನಿ ಸತ್ಯವತಿ ಮತ್ತು ಸಹಾಯಾಧ್ಯಾಪಕಿ ಸುಶೀಲಾದೇವಿಯವರು ಆ ಗುಂಪಿನಿಂದ ನಾಲ್ಕು ಮಂದಿಯನ್ನು ಆರಿಸಿ ತಂದರು. ಈ ನಾಲ್ಕು ಮಂದಿಯಲ್ಲೊಬ್ಬರನ್ನು ಪ್ರಧಾನಾಧ್ಯಾಪಕಿಯವರು ಆರಿಸುವರು. ಹಿಂದೂ ಗರ್ಲ್ಸ ಕಾಲೇಜಿನಲ್ಲಿ ಪರದೆ ಮತ್ತು ಸದಾಚಾರದ ಕಡೆ ವಿಶೇಷ ಧ್ಯಾನವನ್ನು ನೀಡಲಾಗುವುದು. ಕಾಲೇಜಿನ ರಕ್ಷಣೆಗೆ ಕೆಲವರು ಗಂಡಾಳುಗಳನ್ನು ತೆಗೆದುಕೊಂಡರೂ ಮಿಕ್ಕೆಲ್ಲ ಆಡಳಿತ ಸಹಕಾರಕ್ಕೂ ಹೆಂಗಸರನ್ನೇ ಆರಿಸಿಕೊಳ್ಳುತ್ತಿದ್ದರು.

ಕಾಲೇಜಿನ ಗೋಪುರದ ಗಡಿಯಾರವು ಹತ್ತು ಘಂಟೆ ಹೊಡೆಯುವ ವೇಳೆಗೆ ಸರಿಯಾಗಿ ಪ್ರಧಾನಾಧ್ಯಾಪಕಿಯವರು ಗಾಡಿಯಿಂದ ಇಳಿದು ಕಾಲೇಜಿನ ಪೋರ್ಟಿಕೋವನ್ನು ಸೇರಿದರು. ವಿಭಿನ್ನ ವರ್ಗದ ವಿಭಿನ್ನ ಸಾಲುಗಳಲ್ಲಿ ನಿಂತಿದ್ದ

ಕುಮಾರಿಯರು ಶ್ರದ್ಧೆಯಿಂದ ಪ್ರಧಾನಾಧ್ಯಾಪಕಿಯವರಿಗೆ ನಮಸ್ಕಾರ ಮಾಡಿದವರು. ಪೋರ್ಟಿಕೋನಿಂದ ನೇರವಾಗಿ ಅವರು ಆಫೀಸು ಸೇರಿದರು. ರಾಯಬಹದ್ದೂರರ ಪತ್ನಿ ಸತ್ಯವತಿಯವರು ಮೊದಲೇ ಆಫೀಸಿನಲ್ಲಿ ಹಾಜರಿದ್ದರು. ಪ್ರಾಧಾನಾಧ್ಯಾಪಕಿಯರ ಆಜ್ಞೆಯಂತೆ ಪರಿಚಾರಿಕೆಯು ಸರದಿಯಂತೆ ನಾಲ್ಕು ಜನರನ್ನೂ ಕರೆತಂದಳು.

ಮೊದಲನೆಯ ಮನುಷ್ಯನನ್ನು ನೋಡುತ್ತಲೇ ಪಾರ್ವತಿಯು ವಿಸ್ಮಯ ಪೂರ್ಣಳಾದಳು. ಅವನು ಮತ್ಯಾರೂ ಆಗಿರಲಿಲ್ಲ. ನಿರ್ಭಾಗ್ಯನಾದ ಮಹಾಪತಿ, ಅವನನ್ನು ಕಂಡು ಪಂಡಿತೆ ಪಾರ್ವತಿಯ ಹೃದಯದಲ್ಲಿ ಕ್ಷಣಕಾಲ ಲಜ್ಜೆ ಅಂಕುರಿಸಿತು, ಕೂಡಲೇ ತನ್ನ ಮನಸ್ಸನ್ನು ಬಿಗಿ ಹಿಡಿದಳು.

ನೂರು ಮೈಲಿನ ದೂರದಿಂದ ಇಪ್ಪತ್ತೆರಡು ರೂಪಾಯಿಯ ಕಾವಲುಗಾರನ ಕೆಲಸಕ್ಕೆ ಇವನೇಕೆ ಬಂದ ? ಇವನ ಮನೆ ಮಠಗಳೇನಾದುವು ? ಇವನ ಮಲಿನ ಮುಖವನ್ನು ಕಂಡ ಕೂಡಲೇ ಕರುಣ ಹೃದಯ ಪಾರ್ವತಿಯ ಮನದ ಅಂತಸ್ಥಳವೂ ಅಲ್ಲಾಡ ತೊಡಗಿತು. ಬೇರೆಯ ಕಡೆ ಮುಖತಿರುಗಿಸಿ ಅನ್ಯಮನಸ್ಕಳಂತೆ ಕೇಳಿದಳು.—

" ತಮ್ಮ ಹೆಸರು ?"

" ಮಹಾಪತಿ ಮೈತ್ರೇಯ "

" ಮನೆ ?"

" ಪಾಂಡವಪುರ "

" ಇಷ್ಟು ದೂರ ನೌಕರಿಗಾಗಿ ಏಕೆ ಬಂದಿರಿ ?"

" ಉದರ ಪೋಷಣೆಗಾಗಿ "

" ಊರಿನಲ್ಲಿ ಹೊಲ ಗದ್ದೆ ಏನೂ ಇಲ್ಲವೇ ?"

" ತಾಯಿ, ಎಲ್ಲವೂ ಇತ್ತು, ಹೊಲವೇ ಏನು, ಜಮೀನದಾರಿಯೇ ಇತ್ತು."

" ಅದೇನಾಯಿತು ?"

" ಅದನ್ನು ಸಾಲಕ್ಕಾಗಿ ಕೊಟ್ಟಾಯಿತು."

" ಸಾಲ ಏಕೆ ಮಾಡಿದ್ದಿರಿ ?"

" ತಾಯಿ, ಅದೊಂದು ದುಃಖದ ಕಥೆ ಅದನ್ನು ಬಿಟ್ಟು ಬಿಡಿ.''

" ಇರಲಿ, ಹೇಳಿ ನೋಡೋಣ.''

" ನನ್ನ ಅಣ್ಣನ ಮಗನ ವ್ಯಾಸಂಗಕ್ಕೋಸ್ಕರ.''

" ಇನ್ನೇತಕ್ಕಾಗಿ "

" ಇನ್ನೇತಕ್ಕೂ ಇಲ್ಲ.''

" ಮಗಳ ಮದುವೆಗೇನೂ ಖರ್ಚಾಗಲಿಲ್ಲವೇ ?"

ಮುದುಕನ ಮುಖಕಾಂತಿಯು ಇನ್ನೂ ಕುಂದಿತು. ಅವನು ಪಾರ್ವತಿಯ ಮುಖದತ್ತ ಈ ವರೆವಿಗೂ ಸರಿಯಾಗಿ ಈಕ್ಷಿಸಿರಲಿಲ್ಲ. ಈಗಾದರೋ ವಿದ್ಯೆ, ಮಾನ, ಅಧಿಕಾರ ಮತ್ತು ಇತರ ಎಲ್ಲಾ ದೀಪ್ತಿಗಳೂ ಪೂರ್ಣವಾಗಿ ಅವಳನ್ನು ಬದಲಾಯಿಸಿವೆ. ಸತ್ಯವತಿಯೂ ಈ ಪ್ರಶ್ನೋತ್ತರಗಳ ಕಾಲದಲ್ಲಿ ಅಲ್ಲಿಯೇ ಇದ್ದಳು.

'' ಅಮ್ಮಾ, ನೀವು ಸಾಕ್ಷಾತ್ ದೇವತೆ, ನಿಜವಾಗಿಯೂ ನನ್ನ ಮಗಳ ಮದುವೆಗೆ ಹಣವೆಲ್ಲಾ ಖರ್ಚಾಯಿತು.

" ಹಾಗಾದರೆ ನಿಮ್ಮ ಅಣ್ಣನ ಮಗನ ವ್ಯಾಸಂಗಕ್ಕೂ ಸ್ವಲ್ಪ ಹಣ ಖರ್ಚಾಗಿರಬೇಕಲ್ಲವೇ ?''

" ಹೌದಮ್ಮಾ , ಕೇವಲ ನೂರೈವತ್ತು ರೂಪಾಯಿಗಳು.'

ಹೇಳುತ್ತಿದ್ದಂತೆಯೇ ಅವನ ಕಂಠವು ಗದ್ಗದಿತವಾಯಿತು ಕಣ್ಣುಗಳಲ್ಲಿ ಅಶ್ರುಧಾರೆಯು ಹರಿಯಿತು.

" ಒಳ್ಳೇಯದು, ತಾವು ಹೊರಗೆ ಕುಳಿತುಕೊಳ್ಳಿ.''

'' ಮಿಕ್ಕ ಮೂರು ಜನರಲ್ಲಿ ಒಬ್ಬರನ್ನು ಆರಿಸಲಾಯಿತು. ಮುದುಕನಾದ ಮಹಾಪತಿಯನ್ನು ಪಾರ್ವತಿಯ ಮನೆಗೆ ರವಾನಿಸಲಾಯಿತು.

ಕಾವಲುಗಾರನ ಹುದ್ದೆಗೆಂದು ಬಂದ ಮಹಾಪತಿಯನ್ನು ಮನೆಯ ನೌಕರರು ಆದೇ ಮನೆಯ ಯಜಮಾನನಂತೆ ಗೌರವಿಸುತ್ತಿರುವುದನ್ನು ಕಂಡು ಅವನಿಗೆ ಆಶ್ಚರ್ಯವಾಯಿತು.

ಸಂಜೆ ಊಟದನಂತರ ಪಾರ್ವತಿ ಕೇಳಿದಳು—ತಾವು ನನ್ನನ್ನು ಗುರುತಿಸಬಲ್ಲಿರಾ ?"

" ಅಮ್ಮಾ ತಾವು ಕಾಲೇಜಿನ ಪ್ರಾಧಾನಾಧ್ಯಾಪಕೆ."

" ನಾನು ತಮ್ಮ ಅಣ್ಣನ ಮಗನ ಅಭಾಗಿನಿಯಾದ ಪತ್ನಿ, ಪಾರ್ವತಿ. "

ಮುದುಕನ ನಿದ್ರಾವಸ್ಥೆಯು ಮುಗಿಯಿತು. ಕಣ್ಣರಳಿ ಹಾಗೆಯೇ ಮೂರ್ಛೆ ಬಂದಂತಾಯಿತು. ಎಲ್ಲರೂ ಮುದುಕನನ್ನು ಸಮಾಧಾನ ಪಡಿಸಿದರು.

ಪಾರ್ವತಿಯು ತನ್ನ ಮಾವನನ್ನು ಅಲ್ಲಿಯೇ ಇರಲು ಬಹುವಾಗಿ ತಿಳಿಸಿದಳು. ಆದರೆ ಅವನು ಒಪ್ಪಲಿಲ್ಲ. ಆತ್ಮಗ್ಲಾನಿಯ ತೀವ್ರಾಗ್ನಿಯಿಂದ ಅವನು ಅಂತರಂಗದಲ್ಲೇ ದಹಿಸುತ್ತಿದ್ದನು. ಕೊನೆಗೆ ಹೋಗುವಾಗ ಪಾರ್ವತಿಯು ಅವನಿಗೆ ಒಂದೊಂದು ಸಾವಿರದ ಎರಡು ನೋಟುಗಳನ್ನು ಕವರಿನಲ್ಲಿಟ್ಟು ಮಾವನ ಕೈಗೆ ಕೊಟ್ಟು ಹೇಳಿದಳು—'' ಈ ಕವರನ್ನು ಅತ್ತೆಯವರಿಗೆ ಕೊಡಿ. ಅಲ್ಲದೆ ಮತ್ತೊಮ್ಮೆ ಬರುವಾಗ್ಗೆ ಅವರನ್ನೂ ಕರೆತನ್ನಿ.''

( ಹಿಂದಿ ಕಥೆಯ ಆಧಾರ )

# ವಧೂವರ ಪರೀಕ್ಷೆ

( ನಗೆ-ಹನಿ )

ಲೇಖಕ : ಉಮಾಬಾಯಿ ಕುಲಕರ್ಣಿ, ನವಲಗುಂದ

ಬೆಳಗಿನ ಯಾಮ, ನಿತ್ಯದಂತೆ ನಾನು ದೇವರ ಮನೆಗೆ ಕಾಕಡಾರತಿಗೆಂದು ಹೋದೆನು. ಆರತಿ ಎತ್ತಿದರು. ಗಣಪತಿಗೆ ಗಡ್ಡ ಬಂದಂತೆ ಕಂಡೆ. ನಾನು, ಏನೋ ಗಣಪಾ ಅಂತ ಅಂದೆ. ಅವನು ಬಹು ಬುದ್ಧಿವಂತನು. ಚಕ್ಕನೆ "ಲಗ್ನವಾಗಲು ಬಿಟ್ಟಿರುವೆನು" ಅಂದ. ಉತ್ತರಕೊಟ್ಟ ಮರದಿನವೇ ಭಕ್ತ ತುಂಗವ್ವಾ ಗಣಪನಿಗೆ ಕನ್ಯಾ ತಂದೇ ಬಿಟ್ಟಳು. ಮೊದಲನೇದವಳು "ಮಾಲತಿ" ಬಲು ಚೆಲುವೆ. ಮಾತನ್ನು ಕೂಡಾ ಆಡದೆ ಮೋತಿಯನ್ನು ತಿರುವಿ ನೋಡಿ ಹೊರಟುಹೋದಳು. ಮತ್ತೆ ಎರಡನೇ ಕನ್ಯಾ "ಯಶೋದೆ" ಬಂದಳು. ಕಾಲೇಜದ ಹುಡುಗಿ. ಝೋಕು ಹೊಡೆಯುತ್ತ ಕಾಲಲ್ಲಿ ಬೂಟ್ಸ, ಬಲಗೈಯಲ್ಲಿ ಪರ್ಸ ಎಡಗೈಯಲ್ಲಿ ಕೊಡೆ, ಒಳಗೆ ಲುಂಗಿಯನ್ನು ಹಾಕಿ ಅಲ್ಲಲ್ಲಿ ಪಿನ್ನುಗಳಿಂದ ಹೆಣೆಯಲ್ಪಟ್ಟು ಆರು ಮೊಳದ ಶೀರೆಯನ್ನು ಮೇಲೆ ಉಟ್ಟಿದ್ದಳು. ಲೆಕ್ಕಮಾಡಲಿಕ್ಕೆ ಹೇಳಿದ ನಮ್ಮ ಗಣಿತಜ್ಞ ಗಣಪಾ. ಅದಕ್ಕೆ ಉತ್ತರ ಕೊಡಲಾರದೇ ನಕ್ಕು ನಡೆದುಬಿಟ್ಟಳು ಯಶೋದಾ. ಮೂರನೇ ದಿನದ ಕನ್ಯಾ ಅರುಂಧತಿ.ಗುಣವಂತಿ,ಮನೆ ಕೆಲಸದಲ್ಲಿ ನಿಪುಣೆ. ನೀರಲುಹಣ್ಣಿನಂತೆ ಬಣ್ಣ, ಹಳೆಯ ಪದ್ಧತಿಯ ಉಡುಪು. ಬಾಲರವಿಯಂತೆ ಕಾಣಿಸುತ್ತಿತ್ತು ಆಕೆಯ ಕುಂಕುಮ. ಮೋತಿಯ ಮೇಲೆ ನೀತಿಯ ಕಳೆಯು ತುಂಬಿ ಸೂಸುತ್ತಿತ್ತು. ತಾಯಿಮಕ್ಕಳು ಜೋಡೀಲೆ ಬಂದರು. ನೋಡಿದೊಡನೆ ಒಲ್ಲೆಂದು ಓಡಿಹೋದನು ಗಣಪಾ. ನಾಲ್ಕನೇ ಕನ್ಯಾ ನಲಿನಿ, ನಲಿದಾಡುತ್ತ ಗೆಳತಿಯರೊಡನೆ ಬಂದಳು. ಗಣಪ್ಪನಿಗೆ ನಾಚಡೆ ನಲಿನೀ ಪ್ರಶ್ನೆ ಮಾಡಿದಳು. ಗಣಪ್ಪಾ ಗಾಬರಿಯಾಗಿ ಒಳಗೆ ಎದ್ದು ಹೋದನು. ನಲಿನಿ ನಡದೇಬಿಟ್ಟಳು. ಐದನೇ ಕನ್ಯಾ ಬಂಬುಜಾಕ್ಷಿ ತುಂಬಿದ ತೋಳಿನವಳು. ಬಹು ಚೆಲುವೆ. ಒಕ್ಕಲತನ ಕೆಲಸದಲ್ಲಿ ಬಹು ಮೇಲು. ಆದರೂ ಒಲ್ಲೆನಂದ ನಮ್ಮ ಗಣಪಾ. ಆರನೇ ಕನ್ಯಾ ವನಜಾ, ವರವನ್ನು ನೋಡುತ್ತೇನೆ ಅಂದಳು. ಮನಸ್ಸು ಬಾರದೆ ಮರಳಿ ಹೋದಳು ಮನೆಗೆ. ಏಳನೇದವಳು "ಯಲ್ಲು" ಯಲ್ಲರಿಗೂ ಬೇಕಾದ ಹುಡುಗಿ. ಕನ್ನಡ ಕಲಿತು ಹಿಂದೀ ಓದಿ ಗಾಯನದಲ್ಲಿ ಪರೀಕ್ಷೆ ಕೊಟ್ಟು ನಂಬರು ಪಡೆದ ಹುಡುಗಿ. ನಾಲ್ಕು ಜನರೊಂದಿಗೆ ಬಂದಳು. ಕನ್ನಡಕ ಕಣ್ಣಿಗಿಟ್ಟ ಅವರಲ್ಲಿ ಒಬ್ಬಳು ನಮ್ಮ ಗಣಪನಿಗೆ ಕಿವಿ ಹೀಗ್ಯಾಕೆ ಆಗಿರುವವೋ ಗಣಪಾ ಎಂದು ಕೇಳಿದಳು. ಗಣಪಾ ಉತ್ತರಕೊಟ್ಟ ನಮ್ಮ ಮಾಸ್ತರರು ನಾನು ತಪ್ಪಿದ ಸರ್ತಿಗೊಮ್ಮೆ ಜಗ್ಗಿರುವರು ಅಂದಾ. ಎಲ್ಲರನ್ನೂ ಅಲ್ಲಿಯೇ ಬಿಟ್ಟು "ಎಲ್ಲೂ" ಯದ್ದು ಹೋಗಿಬಿಟ್ಟಳು. ಎಂಟನೇ ಕನ್ಯಾ ಪಂಟಿನ ಪ್ರಮೀಲಾ ಪರಕಾರ ಕಾಣಿಸುವಂಥ ಪತ್ತಲವನ್ನು ಉಟ್ಟುಕೊಂಡು ಪ್ರಶ್ನೆ ಕೇಳಿದಳು "ಪರೀಕ್ಷೆ ಏನು ಆಗಿರುವದೆಂದು" ಸೊಂಡಿಲೆತ್ತಿ ಗಣಪಾನನ್ನು ಕಂಡು ನಕ್ಕಳು. ನಗನಗುತ್ತ ನಡೆದುಬಿಟ್ಟಳು. ಒಂಬತ್ತನೇ ಕನ್ಯಾ ತಂದಳು ತುಂಗವ್ವಾ. ಇದು ಒಂಬತ್ತನೇದಂದು ವತ್ತಿವದರಿದಳು. ಹೆತ್ತ ಕರುಳು ಕರಿಗಿ ಆರತಿ ಬೆಳಗಿ ಅಪ್ಪಣೆ ಕೊಟ್ಟಳು ಗೌರವ್ವ. ಪಾಕಿಸ್ತಾನಕ್ಕೆ ಪಲಾಯನ ಮಾಡಿದಾ ನಮ್ಮ ಗಣಪಾ. ಅದಕ್ಕೆ "ಗಣಪಾನ ಮದುವೆ ನಾಳೆ ಅನ್ನುವ ರೂಢಿ"

# " ಉಡುಗೊರೆ "

ಲೇಖಕಿ:— ಮಾಲತಿ.

— ಪಾತ್ರ ಪರಿಚಯ —

ಮಾಧವ — ಶ್ರೀನಿವಾಸರಾಯರ ಅಳಿಯದೇವರು.
ಕೃಷ್ಣ — ಮಾಧವನ ಸ್ನೇಹಿತ.
ಕೇಶವ — ರೋಹಿಣಿಯ ಸಹೋದರ
ಶ್ರೀನಿವಾಸರಾಯರು — ರೋಹಿಣಿಯ ತಂದೆ, ಮಾಧವನ ಮಾವ
ರೋಹಿಣಿ — ಮಾಧವರಾಯರ ಅರ್ಧಾಂಗಿ
ಕಮಲಮ್ಮ — ಶ್ರೀನಿವಾಸರಾಯರ ಹೆಂಡತಿ ಮತ್ತು ಮಾಧವನ ಅಕ್ಕ

[ ಶ್ರೀನಿವಾಸರಾಯರ ಮನೆ, ರಾಯರೂ ಕಮಲಮ್ಮನವರೂ ಮಾತನಾಡುತ್ತಾ ಇದ್ದಾರೆ. ]

ಶ್ರೀನಿವಾಸರಾಯರು—ನೋಡು, ಇನ್ನು ೧೫ ದಿನಕ್ಕೇನೇ ದೀಪಾವಳಿ ಬರುವದು. ನೆನಪಿದೆಯಲ್ಲವೆ ?

ಕಮಲಮ್ಮ—ನನಗೆ ನೆನಪು ಇಲ್ಲದಿದ್ದರೂ, ಅದೆಲ್ಲಿ ಬಿಡತದ, ತಾನೇ ನೆನಪು ಮಾಡಿಕೊಡುತದ.

ರಾಯರು—ಅದಿರಲಿ. ಈಸಲ ಬರೋದು ಪ್ರಥಮ ದೀಪಾವಳಿ, ನಿನಗಲ್ಲ ಮತ್ತೆ. ನನ್ನ ವ ನಿನ್ನ ಅಳಿಯದೇವರಿಗೆ.

ಕಮಲಮ್ಮ—ಹೌದು. ಅಂದ ಹಾಗೆ ಈ ಸಲ ಮಾಧವನನ್ನು ಮತ್ತು ರೋಹಿಣಿಯನ್ನು ಇಲ್ಲಿಗೆ ಕರೆಯಿಸಲೇಬೇಕು. ಹೇಗಾದ್ರು ದೀಪಾವಳೀ ಬಂದಿದೆ ಅವರಿಗೆ ಒಂದು ಪತ್ರ ಹಾಕ್ರಿ. ಪಾಪ ! ಹಾದೀ ಕಾಯತಿರತಾರ.

ರಾಯರು—ಕಾಯದs ಏನು ಮಾಡ್ತಾರ. ಖರೇ ಅಂದ್ರ ಈ ದೀಪಾವಳೀ ಒಳಗ, ಆ ಮಾತು " ಜಾಮಾತೋ ದಶಮ ಗೃಹ. " ಅನ್ನೋದು ಸಿದ್ಧ ಆಗೋದದ.

ಕಮಲಮ್ಮ—ಸಾಕು ಬಿಡ್ರಿ, ಬರೇ ಇದsಮಾತು ಆತು. ಹೊಸತಾಗೀ ಮದುವೆ ಮಾಡೀರಿ. ದೀಪಾವಳಿಗೆ ಕರೆಯಿಸಲಿಲ್ಲಾ ಅಂದ್ರ ಜನರು ಏನಂದಾರು ?

ರಾಯರು—ಅಂದ್ರ ಆ ಮಾತಿಗೆ ಜನರ ಸಾಕ್ಷಿ ಬ್ಯಾರೆ ಬೇಕೇನು ?

ಕಮಲಮ್ಮ—ಸಾಕ್ಷಿ-ಗೀಕ್ಷಿ ನನಗ ಗೊತ್ತಾಗೂದಿಲ್ಲ. ಸುಮ್ಮನ ಹೆಚ್ಚಿಗೆ ಮಾತಾಡಲಿಕ್ಕೆ ವೇಳೆ ಇಲ್ಲ. ಮನೀ ಕೆಲಸs ಒಟ್ಟೇದ.

ರಾಯರು—ಅಳಿಯದೇವರ ಆಗಮನ ಅಂದಮ್ಯಾಲೆ ಮತ್ತಷ್ಟು ಹೆಚ್ಚಾಗಿರಬೇಕಲ್ಲs ! ಆದರ ಏನು ಮಾಡೋದುs? ಮೂಲ ನನ್ನ ಅದೃಷ್ಟ. ಅಳಿಯ ಇಲ್ಲಿಗೆ ಬರೋದರೊಳಗ ನಾನು ನನ್ನ ಮಾವನ ಮನಿಗೆ ಹೋಗ್ತಿದ್ದೆ. ಆದರ ಇಬ್ಬರೂ ಅಳಿಯಂದಿರು ನಿಮ್ಮಪ್ಪನ ಮನೆಗೆ ಹೋಗೋದು ಬ್ಯಾಡಾ ಅಂತ ಬಿಟ್ಟೇನಿ. " ಅಳಿಯನಿಗೂ, ಅಳಿಯನ ಅಳಿಯನಿಗೂ ಸ್ವಾಗತ" ಅಂತ ಅಂದ್ರ ಏನು ಮಾಡೋದು ? ಹಾಂಗೇನೂ ಅನ್ನಲಿಕ್ಕಿಲ್ಲs. ಆದರೂ ಹೇಳಿದ.

ಕಮಲಮ್ಮ....ಅದೆಲ್ಲs ಇರಲೀ. ಅಳಿಯಗೆ ಏನು ಕೊಡಬೇಕಂತ ಮಾಡಿರಿ ? ಮೊದಲನೆ ದೀಪಾವಳೀ. ಅದಕ್ಕ ಹೇಳಿದೆ.

ರಾಯರು—ಅಲ್ಲs ನೀನs ಸಿದ್ಧಮಾಡಲಿಕ್ಕೆ ನಿಂತೆಲ್ಲ,ಆ ಮಾತು ?

ಕಮಲಮ್ಮ—ನಾಯೇನು ಸಿದ್ಧಮಾಡ್ತೇನಿ ? ಅದೆಲ್ಲ ನನಗೊತ್ತಿಲ್ಲ. ಮುಂಚೈಗೆ ಒಂದು ಪತ್ರಾ ಹಾಕ್ರಿ, ರೋಹಿಣೀನ್ನ ಮೊದಲು ಕಳಿಸಿಕೊಡಲಿ.

ರಾಯರು—ಅಳಿಯನ ಮೇಲೆ ಎಷ್ಟು ಪ್ರೀತೀ ಅಂತೀನಿ! ರೋಹಿಣೀನ್ನ ಒಲ್ಲೆ ಅಂತ ಪಟ್ಟುಹಿಡಿದು ಬಿಟ್ಟ, ಇಷ್ಟs ಅಲ್ಲ ಹಾಂಗಂತ ಖಡಾಖಡಿ ಪತ್ರಾನೂ ಬರಿದs.

ಕಮಲಮ್ಮ—ಹಿಂದಾಗಡೆ ಹೂಂ ಅನ್ನಲಿಲ್ಲೇನು?

ರಾಯರು—ಹೂಂ ಏನೋ ಅಂದ್ರು. ಯಾಕ ಗೊತ್ತೇನು? ನಿನ್ನ ಮಗಳು ಮ್ಯಾಟ್ರಿಕ್ ಪಾಸಾದಳು ನೋಡೂs. ಅದಕ್ಕ ಆ " ಮ್ಯಾಟ್ರಿಕ್ ಹುಡಿಗೆ " ಅಂದ್ರ ಏನಂತ ತಿಳಕೊಂಡಿರೋ ಏನೋ !

ಕಮಲಮ್ಮ—ಹೌದು; ಬರೇ ನಿಮಗೇನು ಗೊತ್ತು? ಅಂವ ಒಲ್ಲೆ ಅಂತ ಹಟಾ ಹಿಡಿದಿದ್ರ ಗೊತ್ತಾಗ್ತಿತ್ತು, ವರ ಹುಡುಕೋದ ತ್ರಾಸ.

ರಾಯರು—ನೀ ನೋಡಬೇಕಾಗಿತ್ತು ಆವಾಗ.

ಕಮಲಮ್ಮ—ಎಲ್ಲಾ ಗೊತ್ತದs "ಆಸ್ತಿವಂತ ಹುಡುಗನ್ನ ನೋಡಿದಾಗ ಕೇಶವ ಏನ ಅಂದಾ. ಕೇಳಿದಿರಿಲ್ಲೋ" ಆಸ್ತಿಗೇನs ಆಕೀನ್ನ ಮದಿವಿ ಮಾಡಿದ್ದು ಅಂದಿದ್ದ.

ರಾಯರು—ಹೋಗಲಿ, ಬಿಡು. ಇಲ್ಲದ್ದs ಯಾಕ ಹಳೇ ಪುರಾಣಾ ಬಿಚ್ಚತಿ?

ಕಮಲಮ್ಮ—ನಾ ಯಾಕ ಬಿಚ್ಚಲಿ? ನೀವಾಗಿ ಕೆದರಿ ಕೇರು ಹಾಕಿಸಿಕೊಂಡ್ರಿ. ಸುಳ್ಳs ಅನಬಾರದು. ಮಾಧವ ಒಳ್ಳೇ ಹುಡುಗ.

ರಾಯರು—ನನಗ ಗೊತ್ತs ಅದ. ಆತ ನಿನ್ನ ತಮ್ಮ ಅಂತ.

ಕಮಲಮ್ಮ—ಯಾಕ ಸುಮ್ಮನs ಮಾತಾಡೋದು. ಪತ್ರ ಹಾಕ್ರಿ, ರೋಹಿಣೀನ್ನ ಕಳಿಸಿಕೊಡಲಿ.

(ಕಮಲಮ್ಮ ಹೋಗುವಳು)

ರಾಯರು—ಕೇಶವಾs ನಿಂದನಪಾs ಎಲ್ಲಾ ಕಾರಸ್ಥಾನ!

ಕೇಶವ—ಏನು ನನ್ನನ್ನು ಕರೆದ್ರಾ (ಎಂದು ಬರುವನು).

ರಾಯರು—ಹೌದು. ದೇವರು ಬಂದಂಗ ಬಂದೀದಿ ಬಾ. ನಿನ್ನ ಭಾವಗ ಒಂದು ಪತ್ರ ಹಾಕು. ರೋಹಿಣೀನ್ನ ಕಳಿಸಿ ಕೊಡ್ಲಿ.

ಕೇಶವ—ಒಳ್ಳೇದು ಇವತ್ತs ನ ಬರೀತೀನಿ.

ರಾಯರು—ಮರೀಬ್ಯಾಡ ಮತ್ತ, ಇದು ನಾs ಹೇಳಿದ್ದಿಲ್ಲs ಕೇಂದ್ರ ಸರಕಾರದಿಂದ ಬಂದ ಸರ್ಕ್ಯೂಲರ.

ಕೇಶವ—ಅದನ್ನ ಅಮಲಿನೊಳಗs ತರಲಿಕ್ಕೆ ಬೇಕು ಹೆಂಗಾರ.

ರಾಯರು—ಮರೆತರ ನಡೆಯೂದಿಲ್ಲ. ತಡ ಆದ್ರ ಮತ್ತ "ಪತ್ರ" ಇದ್ದದ್ದು "ತಾರಿ"ನ ರೂಪದೊಳಗ ಬರತದ.

ಕೇಶವ—ಜರೂರ ಜರೂರ ಕಳಸ್ತೇನಿ (ಹೋಗುವನು).

ರಾಯರು—(ಸ್ವಗತ).

ಏನೋ ಏನೋ. ಎಲ್ಲಾ ರಾಣೀಸರ್ಕಾರದ ಅಪ್ಪಣೆ ವಿರೋಧಿ ಪಕ್ಷದ ಗಂಧಾ ಸುದ್ಧಾ ಇಲ್ಲ. ರಶಿಯಾದ ಚುನಾವಣೆ ಆಗೇದ. ಹೇ ಕೃಷ್ಣಾ ನೀನೇ ಎಲ್ಲವನ್ನು ಕಾಯುವವಾ ನಾಥ! ನೀನಾದರೂ ಏನು ಮಾಡ್ತಿ! ನೀನೂ ಹೆಂಡ್ತಿಕೈಯಾಗನs ಇರಾಂವಾ. ಅದೂ ಹದಿನಾರು ಸಾವಿರ ಮಂದಿ. ಅಂತೂ ಈ ಸಾರೀ ದೀಪಾವಳಿ ಖಡಕ ಆದs.

೨

(ಮುಂಬಯಿಯಲ್ಲಿ ಮಾಧವನ ಮನೆ)

ಮಾಧವ—ರೋಹಿಣೀ ನನ್ನಣ್ಣನ ಪತ್ರ ಬಂದದ ನೋಡು.

ರೋಹಿಣಿ—ಬಂದದs. ದೀಪಾವಳಿ ಪತ್ರ ಬಂದಿದ್ದೀತು. ಅದಕ್ಯಾಕಿಷ್ಟು ಒದರುವದು!

ಮಾಧವ—ಯಾಕೆ ಅಷ್ಟೊಂದು ತಿರಸ್ಕಾರವೋ ಅಥವಾ ಉದಾಸೀನತೆಯೋ?

ರೋಹಿಣಿ—ಯಾಕೇನು? ದೀಪಾವಳಿಗೆ ಬರ್ರಿ ಅಂತ ಬಂದಿದ್ದೀತು. ತಿರುಗಿ ಮುರಗಿ ಅದನ್ನು ಹೇಳೋದುರೊಳಗೆ ಏನು ಅರ್ಥ ಅದ?

ಮಾಧವ—ನನsಗ! ದೀಪಾವಳಿಗೆ! ಅದೂ ಬಾs ಅಂತ. ಮ್ಯಾಟ್ರಿಕ್ ಪರೀಕ್ಷೆ ಪಾಸಾಗಿಯಲ್ಲ ಅದರ ಉಪಯೋಗ ತಗೊಂಡು ಓದಿಕೋ. ಬರೀ ನಿನ್ನ ಕಳಿಸಿಕೊಡು ಅಂತ ಪತ್ರಬಂದದ.

ರೋಹಿಣಿ—ನನ್ನ ಕಳಸಬೇಕಾದ್ರ ನೀವ್ಯಾಕ ಇಷ್ಟು ಸಿಟ್ಟಿಗೆದ್ದಿರಿ?

ಮಾಧವ—ಹಾಂಗೇನಿಲ್ಲ. ನಾ ಯಾಕ ಸಿಟ್ಟಿಗೇಳಲಿ; ನನಗ ಸಂತೋಷ ಆಗೇದ. ನೀನಂತೂ ಧಾರವಾಡಕ್ಕೆ ಹೊಂಟೆ ಆತು! ಮೊದಲನೇ ದೀಪಾವಳಿ ಉಡುಗೊರೆ ನೀನೇ ಇಸಕೊಂಡು ಬಾ.

ರೋಹಿಣಿ— ನೀವಿಲ್ಲದ ಹೆಂಗ ಕೊಡ್ತಾರ? ಹೋಗಲಿ ಬಿಡ್ರಿ. ಯಾಕ ಅಷ್ಟು ಮನಸ್ಸಿಗೆ ಹಚ್ಚಿಕೊಂಡಿರಿ!

ಮಾಧವ— ಹೌದು! ನಾನೇ ಮನಸ್ಸಿಗೆ ಹಚ್ಚಿಕೊಂಡೇನಿ! ಮೂಲ ನನ್ನ ತಪ್ಪs ಅದs ಮನೀ ವಳಗಿನ ಹೆಣ್ಣು ಮಾಡಿಕೋಬಾರದಾಗಿತ್ತು.

ರೋಹಿಣಿ— ನಿಮಗ್ಯಾರು ಲಗ್ನ ಆಗಂದ್ರು? "ಒಲ್ಲೆ" ಅಂತ ಹಟ ಹಿಡಿದಿದ್ರಿ ಅಲ್ಲದs ಅಪ್ಪಗ ಖಡಾಖಡೀ ಪತ್ರ ಸುಧಾ ಹಾಕಿದಿರಿ.

ಮಾಧವ— ಮತ್ತ "ನೀ ಮದುವೆಯನ್ನೆ ಒಲ್ಲೆರ ಅಂತ ಅಡ್ಯಾಡ್ತಿದ್ದಂತs ಅದಕ್ಕೆ ಹಾಂಗ ಬರೀಬೇಕಾತು.

ರೋಹಿಣಿ— ಅದರs ಮುಂದ ಒಂದs ವಾರದಾಗ ನನ್ನ ಪತ್ರೆ ಧಾರವಾಡ ಮಾಳಮಡ್ಡಿಯಿಂದ ಮುಂಬೈ ವಿಲೇಪಾರ್ಲೆಕ್ಕ ಬಂತಲ್ಲ.

ಮಾಧವ— ಲಗ್ನದ ಮಹಿಮಾ ಅಂದ್ರ ಹಂಗ ಅದs.

ರೋಹಿಣಿ— ಅದಕ್ಕs ನೀವs ಕಾರಣ.

ಮಾಧವ— ಅರ್ಧದಷ್ಟು ಮಾತ್ರ. ಉಳಿದರ್ಧ ನೀನೇ ಕಾರಣ.

ರೋಹಿಣಿ— ಉಳಿದರ್ಧ ನಾನೇ ಕಾರಣ ಆಗಲಿಕ್ಕೂ ನೀವೇ ಕಾರಣ.

ಮಾಧವ— ಕಾರಣ ನೀ ೨ ಧಾರವಾಡಕ್ಕೆ ದೀಪಾವಳೀ ಸಲುವಾಗಿ ಹೋಗಬಹುದೂ ಅಂತ ನನ್ನ ಅಪ್ಪಣೆ.

ರೋಹಿಣಿ— ಯಾವದೇ ಅಪ್ಪಣೆಯಲ್ಲಿ "ಬಹುದು" ಶಬ್ದ ಬರುವದಿಲ್ಲ. ಅಪ್ಪಣೆಯ ಹಿಂದೆ ಅದಕ್ಕೆ ಬೇಕಾಗುವ ಸಾಮರ್ಥ್ಯ ಬೇಕಾಗ್ತದ.

ಮಾಧವ— ಅದು ಇಲ್ಲವೆಂದು ನಿನಗೆನಿಸಿದರೆ ಅದೆ ಅಂತ ತಿಳಕೋಬೇಕು.

ರೋಹಿಣಿ— ಹಾವಿನ ಹೆಡೆ ಇಳೀತs ಒಮ್ಮೆ.

ಮಾಧವ— ಪುಂಗಿಯ ಮಧುರ ನಿನಾದದ ಎದುರಿಗೆ ಇಳೀಲಿಕ್ಕೆಬೇಕಲ್ಲ.

ರೋಹಿಣಿ— ನಾ ಹೋದ ಕೂಡ್ಲೆ ನಿಮಗ ತಾರು ಮಾಡ್ತಿನಿ. ಬಹುಶೀಕ ಗಡಿಬಿಡಿಯೊಳಗ ಅಂವ ಮರೆತಿರ ಬೇಕು. ಹೋಗಲಿ ನನ್ನ ಮ್ಯಾಲರ ವಿಶ್ವಾಸ ಅದನೋ ಇಲ್ಲೋ ?

ಮಾಧವ— ಏನೇನು ಮಾಡ್ತಿ ಮಾಡು. ನಿಮ್ಮಣ್ಣ ಕೇಶವಗೆರ ತಿಳೀಬಾರದs ದೀಪಾವಳಿಗೆ ಯಾವ ರೀತಿ ಪತ್ರ ಹಾಕಬೇಕು ಅನ್ನೋದು!

ರೋಹಿಣಿ— ಬಿಡ್ರಿ ಆವನಿಗೇನು ತಿಳಿತದs ?

ಮಾಧವ— ಅವನಿಗೆ ಅಂತೀಯೇನು ನೀನು! ಸೇರಿಗೆ ಸವ್ವಾಸೇರು, ಅಂತಾರಲ್ಲs ಹಾಂಗ ಇದ್ದಾನ ಆಂವ ಸುಮ್ಮ ಸುಮ್ಮನೆ ಯಾವ ಮಾತೂ ಆಡುವದಿಲ್ಲ. ನಾs ಅಂತ ಹೆಂಗೋ ಇದ್ದೀನಿ.

ರೋಹಿಣಿ— ಆಂವ ನಿಮ್ಮನ್ನ ನೀವು ಅವನ್ನ ಆಡ ಕೊಂಬೋದರೊಳಗನs ವ್ಯಾಳ್ಯಾ ಹೋತು!

ಮಾಧವ— ಇದ್ದದ್ದನ್ನ ಇದ್ದ ಹಾಗೆ ಹೇಳಿನಿ. ಖರೇ ಅಂದ್ರ ನಿಮ್ಮವ್ವನ್ನ ನೋಡಿದ್ರ ಎಲ್ಲಾ ತರಹದ ಅಳಿಯತನ ಮಾಡಿಸಕೋಬೇಕು ಅನಸ್ತದ. ಆದರ ನಿಮ್ಮಪ್ಪನ ಮೋರೆ ನೋಡಿ ಸುಮ್ಮನಿದ್ದೀನಿ.

ರೋಹಿಣಿ— ನಮ್ಮವ್ವs ಅಂದರ ನಿಮಗ ಅಕ್ಕ ಆಗ ಲಿಲ್ಲೇನರೇ ?

ಮಾಧವ— ಆದ್ರ ಈಗ ಅತ್ತಿ ಆಗ್ಯಾಳ. ಅತ್ತಿ ಅಂದ ಮ್ಯಾಲೆ ಪ್ರಥಮ ದೀಪಾವಳಿಗೆ ಅಳಿಯನಿಗೆ ದೊಡ್ಡ ಉಡು ಗೊರೆ ಕೊಡಿಸಬೇಕು.

ರೋಹಿಣಿ—ನಮ್ಮವ್ವ ಅಳಿಯನಿಗೆ ಅತ್ತಿ ಆದರೂ ತಮ್ಮ ನಿಗೆ ಅಕ್ಕ ಅಲ್ಲೇನು? ಆತು ನಾ ಹೋಗಿ ಬರ್ತೇನಿ. ಎಲ್ಲಾ ವ್ಯಾಳ್ಯಾ ಇಲ್ಲೇ ಹೋತು. ಹೋದ ಕೂಡಲೇ ನೋಡಿ ತಾರು ಮಾಡ್ತೀನಿ.

ಮಾಧವ— ಯಾರು ಮಾಡಬೇಕಿತ್ತು ಅವರs ಮಾಡಿಲ್ಲ ಅಂದ ಮ್ಯಾಲ ನೀ ಯಾಕ ಮಾಡತೀ ಬಿಡು. ನನಗೇನು ಬ್ಯಾಡಾ.

ರೋಹಿಣಿ—ನಿಮಗ ಬ್ಯಾಡಾದರೂ ನನಗೇ ಬೇಕಲ್ಲ (ಹೋಗುವಳು).

ಮಾಧವ—(ಸ್ವಯಂ) ಇದಕ್ಕ ನಾ ಮನಿ ಒಳಗಿನ ಹೆಣ್ಣು ಮಾಡಿಕೋಬಾರ್ದು ಅನ್ನೋದು. "ಹೋಗಲೇನು?" ಅಂತ ಕೇಳೋದು ಬಿಟ್ಟು ಹೋಗಿ ಬರ್ತೀನಿ ಅಂತಾಳ. ನನ್ನ ನೆತ್ತೀ ಮ್ಯಾಲ ಸಾಸಿವೆ ಅರೀತಾಳ ದೀಪಾವಳೀ ಬಂದsದಂತ ತಾರು ಮಾಡೋದು ಬಿಟ್ಟು ಪತ್ರ ಹಾಕ್ಯಾರ. ಆದೂ ಆಕೀನ್ನ ಕಳಿಸಿಕೊಡೂ ಅಂತ ನಾ ಅಂದ್ರ ಅವರಪ್ಪನ ಮನೆ ಆಳಂತ ತಿಳಕೊಂಡಾರ. ತಾರ ಬರದs ಹೋಗೋದನs ಇಲ್ಲ. ನಾನೂ ನನ್ನ ಹಟ ತೋರಿಸತೇನಿ. ಏನೋಂತ ತಿಳಕೊಂಡಿದ್ದಾರೋ ನನ್ನ.

* * * *

( ಮಾಧವ ಮನೆಯಲ್ಲಿ ಅತ್ತಿಂದಿತ್ತ ಓಡಾಡುತ್ತಾ)

ಮಾಧವ—ಇವರು ಪೂರ್ಣ ನನ್ನ ತಲೀ ಕೆಡಿಸಬೇಕಂತ ಮಾಡ್ಯಾರ ಕಾಣತsದ.

( ಕೃಷ್ಣರಾಯ ಪ್ರವೇಶಿಸುತ್ತಾ )

ಕೃಷ್ಣರಾಯ—ನಿನಗೇನಾತೀಗ ಅಂತೀನಿ.

ಮಾಧವ—ನನಗೇನಾತಂತ ಕೇಳತೀಯಲ್ಲ ಇನ್ನೂ. ಅಳಿಯದೇವರಂದ್ರ ಮನಿ ಆಳು ಅಂತ ತಿಳಕೊಂಡಾರ ಕಾಣ ಸ್ತದ.

ಕೃಷ್ಣರಾಯ—ಆದದ್ದಾದರೂ ಏನು ?

ಮಾಧವ—ಏನಾಗೋದು ಆತು. ಮೂಲ ನನ್ನ ಹಣೆ ಬರಹ ನೆಟ್ಟಗಿಲ್ಲ.

ಕೃ.ರಾಯ—ನೆಟ್ಟಗೆ ಹೇಳು. ಯಾಕ ಒಂದsಸವನೆ ಆರಚಲಿಕ್ಕೆ ಹತ್ತೀದಿ?

ಮಾಧವ—ಹೌದು. ನಾನs ಒದರತೇನಿ. ಅಲ್ಲಿ ಇಷ್ಟು ಸುಧಾ ತಿಳೀಬಾರದs ಇವರಿಗೆ?

ಕೃ.ರಾಯ—ಏನು? ಯಾರಿಗೆ? ಏನು ಕಥಿ?

ಮಾಧವ— ಮತ್ತೇನು ಆಗೊಂದು ತಾರ ಬಂದದ.

ಕೃ.ರಾಯ— ಹಾಂ ಎಲ್ಲಿಂದ?

ಮಾಧವ—ಎಲ್ಲಿಂದ ಬರ್ತದ! ಧಾರವಾಡದಿಂದ ಬಂದದ.

ಕೃ.ರಾಯ—ಯಾತಕ್ಕ ಬಂದದಪ್ಪಾ ಮತ್ತ.

ಮಾಧವ—ದೀಪಾವಳೀ ಸಂಬಂಧ.

ಕೃ.ರಾಯ—(ನಕ್ಕು) ಇಷ್ಟ ಹೌದಲ್ಲೋ ನಾ ಮತ್ತ ಏನೋ ತಿಳಕೊಂಡಿದ್ದೆ. ಅಳಿಯನಿಗೆ ಮಾವನಿಂದ ತಾರು ಬಂದsದ?

ಮಾಧವ—ಹೌದು.

ಕೃ.ರಾಯ-ಇದಕ್ಯಾಕ ಸಿಟ್ಟು ಮಹಾರಾಯಾ ನಕ್ಕೋತ ಇರಬೇಕು.

ಮಾಧವ—ನಗಬೇಕೂ ಅಂತೀಯೇನು ನೀನು ?

ಕೃ.ರಾಯ—ಸ್ವಲ್ಪ ನನ್ನ ಮಾತರ ಕೇಳತೀಯೇನು ?

ಮಾಧವ—ಯಾತರ ಮಾತೂ ಕೇಳೋದಿಲ್ಲ ಈಗ.

ಕೃ.ರಾಯ— ಹೀಂಗ್ಯಾಕ ಮಾಡಲಿಕ್ಕೆ ಹತ್ತೀದಿ?

ಮಾಧವ—ಹೌದು. ನಾನೇ ಮಾಡಲಿಕ್ಕೆ ಹತ್ತೀನಿ.

ಕೃ.ರಾಯ—ಏನಾತೀಗ? ಸ್ಪಷ್ಟ ಹೇಳಲ್ಲ

ಮಾಧವ—ಏನೂ ಆಗಿಲ್ಲ! ಕೈಕೊಟ್ಟಲ್ಲ ಕಡೀಕೂ ಸಹಿತ.

ಕೃ.ರಾಯ—ನಿನಗೆ ಕೈ ಕೊಟ್ಟರೇ?

ಮಾಧವ—ಹೂಂನಪಾ!

ಕೃ.ರಾಯ—ಆದ್ಯಾರಿಗೆಪ್ಪಾ ಅಂಥಾ ಧೈರ್ಯ, ನಿನಗ ಕೈ ಕೊಡೋರು?

ಮಾಧವ—ರೋಹಿಣಿ ಹೀಗೆ ಮಾಡುವಳೆಂದು ನಾನು ಬಗೆದಿರಲಿಲ್ಲ.

ಕೃ.ರಾಯ— ರೋಹಿಣೀ ಅತ್ತಿಗೆ ಕೈಕೊಟ್ಟರೆ? ಬಹುತರ ವಾಗಿ ಕೈಹಿಡಿದ್ದಿ ಡಿದು ಬೇಸರ ಬಂದಿರಬೇಕು. ನಾ ಯಾರೋ ಅಂದಿದ್ದೆ.

ಮಾಧವ -ಮತ್ತಾರೆಂದುಕೊಂಡಿದ್ದೆ ?

ಕೃ.ರಾಯ—ಏನಪ್ಪ ನಿನ್ನ ಗಾದೇಮಾತು ಗೊತ್ತಾಗ ಲಿಲ್ಲ. ಅತ್ತಿಗೆ ಕೈಕೊಡುವಂತಹದನ್ನು ನೀನೇನು ಮಾಡಿದ್ದೆ ?

ಮಾಧವ—ಅವಳನ್ನು ವಿವಾಹವಾದೆ.

ಕೃ.ರಾಯ—ಮುಂದೇನಾಯಿತು ?

ಮಾಧವ—ನಿಮ್ಮ ಕೈ ಎಂದಿಗೂ ಬಿಡುವದಿಲ್ಲ ಎಂದಿದ್ದಳು.

ಕೃ.ರಾಯ—ಯಾವಾಗ ಅಂದಿದ್ರು ?

ಮಾಧವ—ಧಾರವಾಡಕ್ಕೆ ಹೋಗುವ ಮುಂದೆ.

ಕೃ.ರಾಯ—ನಿನ್ನ ಮಾತೇ ಅರ್ಥ ಆಗಲೊಲ್ಲದು. ನೆಟ್ಟಗೆ ಹೇಳು.

ಮಾಧವ—ಧಾರವಾಡಕ್ಕೆ ಹೋಗುವ ಮುಂದೆ ಹೋದ ಕೂಡ್ಲೆ ತಾರು ಮಾಡ್ತೀನಿ "ನನ್ನ ಮ್ಯಾಲೆ ವಿಶ್ವಾಸ ಆದನೋ ಇಲ್ಲೋ" ಅಂತ ಏನೇನೋ ಅಂದಿದ್ದಳು.

ಕೃ.ರಾಯ—ಅಂದಿರಬಹುದು ಮುಂದೆ ?

ಮಾಧವ—ಹಾಂಗ ಅಂದು ಧಾರವಾಡಕ್ಕೆ ಹೋದಳು.

ಕೃ.ರಾಯ—ಆದರ ಹೇಳಿದಂಗ ತಾರು ಕೊಟ್ಟಾರಲ್ಲ!

ಮಾಧವ—ಕೊಡದೆ ಇದ್ದರೆ ಚೆನ್ನಾಗಿತ್ತು. ಕೊಟ್ಟ ಹಾಗೆಯೇ ? ಇದೆಲ್ಲ ?

ಕೃ.ರಾಯ—ಯಾಕೆ ತಿಕೇಟು ಸಾಕಷ್ಟು ಹಚ್ಚಿಲ್ಲವೇ?

ಮಾಧವ— Extra ಚಾರ್ಜು ಬಿದ್ದರೂ ಹೆದರುತ್ತಿದ್ದಿಲ್ಲ !

ಕೃ.ರಾಯ--ಮತ್ತೇನಾತೀಗ ?

ಮಾಧವ—ತಾರು ಆಕೀ ಕಡೆಯಿಂದ ಬಂದಿಲ್ಲ. ಕೇಶವನ ಕಡೆಯಿಂದ ಮಾಡಿಸ್ಯಾಳ.

ಕೃ.ರಾಯ—ಅದಕ್ಕs ಸಿಟ್ಟೋ?

ಮಾಧವ—ಹಾಗಲ್ಲ. ಅದಕ್ಕೇನೂ ಅನಿಸಿಲ್ಲ!

ಕೃ.ರಾಯ—ಹಾಗಾದರೆ ಅನಿಸಿದ್ದಾದರೂ ಏನು?

ಮಾಧವ—ತಾರೇನೋ ಬಂದದs ಆದರ....

ಕೃ.ರಾಯ— ಆದರ ಏನು ?

ಮಾಧವ—"Dont come Divali" ಅಂತ ಅದ.

( ಶ್ರೀನಿವಾಸರಾಯರ ಮನೆ )

ಕೇಶವ—ಭಾವನಿಗೆ ಉಡುಗೊರೆ ಭಾಳ ಕಾಣಿತಾವ.

ಮಾಧವ—ಬ್ಯಾಡ ಅಂತ ಬರದ್ರೂ ಬಂದಾನಲ್ಲ ಅತ ಹೀಂಗ.

ಕೇಶವ—(ನಕ್ಕು) Express ಬರಬ್ಯಾಡಂತ ತಾರು ಬಿಟ್ಟದ್ರೂ ಬರತಿದ್ದಿ. ಮೊದಲು ೧೫ ದಿನ ರಜಾ ತಗೊಂಡು ಬಂದೀದಿ; ನೀ ಬಂದೇ ತೀರುವಿ ಎಂದು ಗೊತ್ತಿತ್ತು.

ಮಾಧವ—ಅದ್ಹೆಂಗಪ್ಪಾ ?

ಕೇಶವ—ರೋಹಿಣೀನ ಮೊದಲ ಕರೆಸಿದ್ದು ಯಾತಕ್ಕಂತ ತಿಳಕೊಂಡಿ ಮಾತ್ತ ?

ಮಾಧವ—ಅಂತೂ ನಿಂದೂ ದೊಡ್ಡ ಧೈರ್ಯ?

ಕೇಶವ—ಕಳ್ಳನ ಹೆಜ್ಜೆ ಕಳ್ಳನೇ ಬಲ್ಲ, ಇರಲಿ ಇದು ಪ್ರಥಮ ದೀಪಾವಳಿ ಅಲ್ಲಪಾ?

ಮಾಧವ—ಹೌದಪ್ಪಾ!

ಕೇಶವ—ನಮ್ಮ ಕಡೆಯಿಂದ ಏನಾದರೂ ತಪ್ಪಾಗಿದ್ದರೆ ಕ್ಷಮಿಸಿರಿ.

ಮಾಧವ—ಹಾಗೇನಾಗಿಲ್ಲವಲ್ಲ!

ಕೇಶವ—ಅಂದ ಹಾಗೆ ಇದು ನನ್ನ ವೈಯಕ್ತಿಕ ಉಡುಗೊರೆ, ತೆಗೆದುಕೋ.

ಮಾಧವ—ಇದೇನೋ ಪೆಟ್ಟಿಗೆ ಇದೆಯಲ್ಲ!

ಕೇಶವ—ಬಟ್ಟೆ ನೋಡು.

ಮಾಧವ—(ಬಿಚ್ಚಹತ್ತುವನು).

ಕೇಶವ—(ಎಲ್ಲರೂ ಬನ್ನಿರಿ ಎಂದು ಸನ್ನೆಮಾಡುವನು)

ರೋಹಿಣಿ—ಇವೇನಣ್ಣಾ ಬರೀ ಕಾಗದ ಸುರಳೀನs ಅವ ಅಲ್ಲಾ!

ಕಮಲಮ್ಮ—ಇದೇನೋ ಕೇಶಿ ಬರೀ ಹತ್ತಿಯನ್ನೇ ತುಂಬಿರುವೆಯಲ್ಲ.

(ಮಾಧವ ಪೂರ್ಣವಾಗಿ ಬಿಚ್ಚುವನು. ಉಡುಗೊರೆ ನೋಡಿದವನೇ ಮುಚ್ಚಿಟ್ಟುಕೊಳ್ಳುವನು. ಹೀಗಾಗಿ ಉಡುಗೊರೆಯು ಕಾರ್ಯಕ್ರಮ ಮುಕ್ತಾಯ. ಎಲ್ಲರೂ ಹೋದಾಗ ಮಾಧವನೂ ರೋಹಿಣಿಯೂ ಉಳಿಯುವರು.)

ರೋಹಿಣಿ—ಅದೇನು ಹಾಂಗ ಮುಚ್ಚಿ ಇಟ್ಟುಕೊಂಡ್ರಿ?

ಮಾಧವ—ಅದು ನಿಮ್ಮಣ್ಣನ ವೈಯಕ್ತಿಕ ಉಡುಗೊರೆ.

ರೋಹಿಣಿ—ಅದು ನನಗ ಗೊತ್ತದs ಅದರ ಹೆಸರೇನು?

ಮಾಧವ—ಹೆಸರು ತಗೊಂಡು ನೀ ಯೇನು ಮಾಡ್ತಿ? ಇಷ್ಟು ಮಾತ್ರ ಖರೆ,ವಿಚಾರ ಮಾಡಿ ಮಾಡಿ ಆ ಉಡುಗೊರೆ ಕೊಟ್ಟಾನ.

ರೋಹಿಣಿ—ಇದೇನಿದು? ಮುದ್ದಣ-ಮನೋರಮೆ ಕಥೆ ಆಯ್ತಲ್ಲ.

ಮಾಧವ—ಅದಕ್ಕಿಂತಲೂ ಒಂದು ಹೆಜ್ಜೆ ಮುಂದು?

ರೋಹಿಣಿ—ಅದೇನು ಹಾಗಾದರೆ.

ಮಾಧವ—ಅದನ್ನು ನೋಡಲೇಬೇಕೆ?

ರೋಹಿಣಿ—ಅಹುದು.

ಮಾಧವ ಈಗಲೇ ನೋಡುವಿಯಾ?

ರೋಹಿಣಿ—ಹೂಂ.

ಮಾಧವ—ಹಾಗೆ ಬೇಡ. ಏಕೆಂದರೆ ಅದು ಅವನ ನನ್ನ ಮೈತ್ರಿಯ ದ್ಯೋತಕ ಆದ್ದರಿಂದ ನೀನು ಉಡುಗರೆಹೆಸರು ಹೇಳಿಕೋತ ಬಾ!

ರೋಹಿಣಿ—ಬಂಗಾರ ಚೈನೆ?

ಮಾಧವ—ಅಲ್ಲ.

ರೋಹಿಣಿ—ಗಡಿಯಾರವೇ?

ಮಾಧವ—ಅಲ್ಲ.

ರೋಹಿಣಿ—ನನಗ-ಹೆಚ್ಚಿಗೆ (ಕಾದು ಕಾದು)ಗೊತ್ತಿಲ್ಲ.

ಮಾಧವ—ನಿನ್ನ ತಾಳ್ಮೆಪರೀಕ್ಷೆ ಮುಕ್ತಾಯವಾಯಿತು.

ರೋಹಿಣಿ—ಆತು, ನಾನು ಸೋತೆ. ಈಗಾದರೂ ತೋರಿಸಿ.

ಮಾಧವ—ಇದು ನೋಡು (ಎಂದು ಕಾರ್ಡೊಂದನ್ನು ಅವಳ ಕೈಗಿಡುವನು) ಅದೇ ಕಾರ್ಡಿನಲ್ಲಿಯೇ ಆತ ರೋಹಿಣಿಯನ್ನು ಒಲ್ಲೆನೆಂದು ಬರೆದಿದ್ದ.

ರೋಹಿಣಿ—ಇದೇ ಕಾರ್ಡು ಏನು?

ಮಾಧವ—ಹೌದು. ಅದು ಅವನ ಕಾಣಿಕೆ. ನೀವೆಲ್ಲ ಕೊಟ್ಟ ಕಾಣಿಕೆಗಳಿಗಿಂತಲೂ ಅತ್ಯಧಿಕ ಬೆಲೆಯುಳ್ಳದ್ದು.

ರೋಹಿಣಿ—ಸಾಕು! ಸಾಕು! ಏಳಿರಿ.

ಕೇಶವ—(ಬಂದು) ಬಾವಯ್ಯ ನೀರು ಕಾದಿದೆ.

ಮಾಧವ—ಕೇಶವ, ನೀನು ಹೊತ್ತಿನಿಂದ..................

ಕೇಶವ—ಲೋ ನಾನು ಉಪದೇಶದ ಮಂತ್ರ ಅಲ್ಲ. ಏಳೇಳು (ಎನ್ನುತ್ತ ಎಬ್ಬಿಸಿಕೊಂಡು ಹೋಗುವನು. ರೋಹಿಣಿ ಹಾಗೆಯೇ ನಿಂತಿರುವಾಗ ತೆರೆ ಬೀಳುವದು).

# ಹಳೆಯ ನೆನಹಿನ ಆ.......

## " ಹಂಪೆ "

೧

ತುಂಗಭದ್ರಾ ನದಿಯ ತೋಳಿನಾ ತೆಕ್ಕೆಯಲಿ
ಕಾಡು ಕಣಿವೆಗಳಲ್ಲಿ ಹಸಿರು ಹೊದಿಕೆಯಲಿ
ಬೆಟ್ಟ ತೊರೆಗಳ ನಡುವೆ ಮಲಗಿ ನಿದ್ರಿಸುವಂತೆ
ಕಾಣುತಿದೆ ಹಂಪೆಯದು ಪುಣ್ಯ ಕ್ಷೇತ್ರ

೨

ಪ್ರಕೃತಿ ಮಾತೆಯ ಸೊಗಸು ಸೂಸುತಿದೆ ಇಲ್ಲಿಲ್ಲಿ
ಕಾಣುತಿದೆ ಅಲ್ಲಲ್ಲಿ ಜನರ ಓಡಾಟ
ಬಿತ್ತರದ ಬಾನಿನೊಳು ಎತ್ತಣದ ಸೃಷ್ಟಿಯೊಳು
ತಂಗಿರುವದಾ ಹಂಪೆ ಸೊಗದ ಬೀಡಾಗಿ

೩

ಕುಸುರಿನಲಿ ಹೆಸರಾಗಿ ಸಿರಿಯ ತವರ್ಮನೆಯಾಗಿ
ಬೆಳಗಿದಾ ಹಂಪೆಯದು ಸಿರಿಯನೆಲೆವೀಡು
ಹುಕ್ಕಬುಕ್ಕರ ಕೃಷ್ಣದೇವರಾಯರ ವಿಜಯ—
ಕವಿರತ್ನ ಹರಿಹರನು ಬೆಳಗಿದಾಹಂಪೆ

೪

ಕನಕ ವೃಷ್ಟಿಯ ಸುರಿಸಿ ಜನರ ಜಾಗ್ರತಗೊಳಿಸಿ
ಹರಿಸಿದಾ ಯೋಗಿವಿದ್ಯಾರಣ್ಯರು
ಮೆರೆದ ಜ್ಞಾನದಲಿ, ಮೌನದಲಿ, ಭಕ್ತಿಪರವಶದಲ್ಲಿ
ಹಂಪೆಯ ಭೂಮಿಯದು ದೇವಗೂಡು

೫

ಎತ್ತ ನೋಡಿದೊಡತ್ತ ಗುಡಿ ವೀರಗಲ್ಲುಗಳು
ಕೆತ್ತನೆಯೆ ಪೆತ್ತಂತೆ ಕಾಂಬುತಿಹವು
ವಜ್ರದುಂಡಿಯ ಹಾಗೆ ಕಂಗೊಳಿಪ ಕಲ್ಗಳಲಿ
ಕಟೆದಿಹರು ಮೂರ್ತಿಗಳ ಭವ್ಯವಾಗಿ

೬

ಒಂದಲ್ಲ ಎರಡಲ್ಲ ನೂರಾರು ಕೃತಿಗಳನು
ಗುಡ್ಡದಾ ತುಂಬೆಲ್ಲ ಶಿಲ್ಪಿಸಿಟ್ಟಿಹರು
ಏನು ಆ ಭವ್ಯ ಕೃತಿ, ಏನು ಆ ಸೃಷ್ಟಿಮತಿ
ತಳೆದಿಹವು ಜಗದಲ್ಲಿ ಆ ಮೌನಾಕೃತಿಯ

೭

ರಾಜಂಗೆ ಮಹಲುಗಳು ವೀರಂಗೆ ಗರುಡಿ ಮನೆಶಸ್ತ್ರ
ಗಜಶಾಲೆ ಹಯಶಾಲೆ,
ಇರತೆಹವು ಈ ಜಗದಿ ಮೌನ ತಳೆದಿಹವೆಲ್ಲ
ಏಕೊ ಏನೋ ಎನಗೆ ಅರಿಯದಲ್ಲಾ !

೮

ಹಂಪೆಯಾ ವಿರುಪಾಕ್ಷ ವಿಜಯ ವಿಠ್ಠಲದೇವ
ವೀರ್‍ತ ಉಗ್ರದಿ ಇರುವ ನರಸಿಂಹ ಮೂರ್ತಿ
ಸಾಸುವೆಯಷ್ಟು ಕಡಲೆ ಶಿಲೆಯ ಗಣಪಗಳೆರಡು
ನೋಟಕರ ಮನವನ್ನು ಭೀತಿಗೊಳಿಸುವವು

೯

ತುಂಗಭದ್ರೆಯ ಧಡದಿ ಇರುತಿರುವ ಈ ಊರು
ವಿಜಯನಗರವು ಎಂದು ಸಾರುತಿತ್ತು
ಇಂಥ ಆ ಸಿರಿಸೊಬಗು ಇಂಥ ಆ ಸಾಮ್ರಾಜ್ಯ
ಹೋಗಿ ಕಲ್ಲಂತಾಯ್ತು ಏಕೋ ಮುನಿದು

೧೦

ಈ ಎಲ್ಲ ಸಿರಿ ಎಲ್ಲ ಹೋಗಿಹುದು ಭುವಿಯಲ್ಲಿ
ಎಂದದನು ನಾವಿನ್ನು ತಿಳಿಯಬೇಕು
ಹಾಳು ಮಾಡಿದ ಪರ-ಸ್ಮರಣೆಯನು ತಾರದೆಯೆ
ಹಾಳು ಹಂಪೆಯ ಕಂಡು ತಣಿಯಬೇಕು

**ಶ್ರೀ. ತುಕಾರಾಮ ಜಾಲೀಹಾಳ.**

# ಸ್ತ್ರೀ ಸ್ವಾತಂತ್ರ್ಯದ ಧ್ವಜಾರೋಹಣೆ

**ರಚಿಸಿದವರು : ಡಾ. ಆರ್. ಕೆ. ಹಾನಗಲ್ಲ.** (ಪ್ರಕೃತಿ ಭಾವದಲ್ಲಿ)

ಭಾರತಮಾತೆಯ ವೀರ ಪುತ್ರಿಯರೆ
ಸ್ವಾತಂತ್ರ್ಯದ ಧ್ವಜವೇರಿಸುವಾ ॥ ಪ ॥
ಪಾರತಂತ್ರ್ಯದೀ ಮೂಢ ರೂಢಿಯನು
ಮೀರಲಿಂದು ಸಂಕಲ್ಪಿಸುವಾ ॥ಅ.ಪ॥
ಸತ್ಯ ಶ್ರದ್ಧೆ ವಿದ್ಯೆಗಳ ಪಡೆದು ಸ- ।
ವಾರ್ಥ ಕಾಮ ಫಲ ದೊರಕಿಸುವಾ ।
ಸ್ವಾರ್ಥ ಭೋಗಕೆಡೆಗೊಡದಲೆ ಸಂತಾ-।
ನಾರ್ಥವಾಗಿ ತನುಸಲ್ಲಿಸುವಾ ॥ ೧ ॥
ವೀರಮಾತೆ ನಾವಲ್ಲದೆ ಪುರುಷರ ।
ಸಾರ ಸುಖದ ಯಂತ್ರಗಳಲ್ಲ ॥
ನಾರಿ ಸರ್ವಕಾಧಾರಿಯಿರಲು ಕೈ ।
ಜೋರಿಗಂಜಿ ಬಾಳುವದಲ್ಲ ॥ ೨ ॥
ಕಾಮ ಕಾಂಚನದ ಸ್ವಾತಂತ್ರ್ಯಯವಿದು ।
ಕಾಮಿನಿಯರ ಜನ್ಮದ ಹಕ್ಕು ॥
ಪ್ರೇಮ ಬಂಧನವದಲ್ಲದೆ ರೂಢಿಯ ।
ನೇಮಕಂಜಿ ಬಿಡುವರೆ ದಿಕ್ಕು ॥ ೩ ॥
ಪ್ರೇಮವಿಲ್ಲದಿಹ ಪಾತಿವ್ರತ್ಯದ ।
ನೇಮದಿಂದ ದುಷ್ಫಲ ನಮಗೆ ।
ಕಾಮ ಭೋಗಕೆಂದಾಗುವ ಲಗ್ನವು ।
ನಾಮ ಮಾರ್ಗವಿಡಿಸುವುದೆಮಗೆ ॥ ೪ ॥
ವಿದ್ಯಬುದ್ಧಿಯೊಳು ಮುಂದುವರಿದು ಪರಿ ।
ಶುದ್ಧ ಚರಿತ್ರೆಯರೆನ್ನಿಸುವಾ ॥
ತಿದ್ದಿ ರೂಢಿಯನು ನಿಜಪಾವಿತ್ರ್ಯದೊ-।
ಳಿದ್ದು ನಮ್ಮ ಧ್ವಜ ಮೆರೆಯಿಸುವಾ ॥ ೫ ॥

# ಶ್ರೀಕೃಷ್ಣ-ಜನ್ಮ

( ಏಕಾಂಕ ನಾಟಕ )

ಬರೆದವರು

ಡಾ. ಆರ್. ಕೆ. ಹಾಸಗಲ್ಲ.

– ಪಾತ್ರಗಳು –

| | |
|---|---|
| ೧. ಬ್ರಹ್ಮದೇವ | ೭. ರೋಹಿಣಿ |
| ೨. ನಾರಾಯಣ | ೮. ನಂದಗೋಪ |
| ೩. ಶಂಕರ | ೯. ನಾರದ |
| ೪. ದೇವೇಂದ್ರ | ೧೦. ಸೆರೆಮನೆಯ ಕಾವಲುಗಾರ |
| ೫. ಕಂಸ | ೧೧. ವಸುದೇವ |
| ೬. ದೇವಕಿ | ೧೨. ಯಶೋಧೆ |

ಸಂದರ್ಭ— ಭೂಲೋಕದಲ್ಲಿ ಅಸುರರ ದಬ್ಬಾಳಿಕೆ. ಜನರ ಕೋಲಾಹಲ. ಭೂಮಾತೆಯು ಗೋರೂಪದಿಂದ ಬ್ರಹ್ಮಾದಿ ದೇವತೆಗಳೊಂದಿಗೆ ಕ್ಷೀರಸಾಗರಕ್ಕೆ ಬಂದು ಶ್ರೀಮನ್ನಾರಾಯಣನನ್ನು ಪ್ರಾರ್ಥಿಸುತ್ತಲಿದ್ದಾಳೆ ಕ್ಷೀರ ಸಾಗರದೆಡೆ.

ನಾಂದೀಶ್ಲೋಕ

" ಶಾಂತಾಕಾರಂ ಭುಜಗ ಶಯನಂ ಪದ್ಮನಾಭಂ
ಸುರೇಶಂ ।
ವಿಶ್ವಾಧಾರಂ ಗಗನ ಸದೃಶಂ ಮೇಘವರ್ಣಂ
ಶುಭಾಂಗಂ ॥
ಲಕ್ಷ್ಮೀಕಾಂತಂ ಕಮಲ ನಯನಂ ಯೋಗಿಭಿ
ರ್ಧ್ಯಾನಗಮ್ಯಂ ।
ವಂದೇ ವಿಷ್ಣುಂ ಭವಭಯಹರಂ ಸರ್ವ
ಲೋಕೈಕನಾಥಂ ॥

ಬ್ರಹ್ಮದೇವ— ಪ್ರಭೋ ಶ್ರೀಮನ್ನಾರಾಯಣಾ ! ಭೂಲೋಕದಲ್ಲಿ ಅದರಲ್ಲಿಯೂ ಭೂವೈಕುಂಠವಾದ ಪವಿತ್ರ ಭಾರತದಲ್ಲಿ ಐಶ್ವರ್ಯ ಮದಾಂಧರಾದ ಕಂಸಾದಿಗಳು, ಅತ್ಯಂತ ಪ್ರಬಲರಾಗಿ ಧರ್ಮಾಧರ್ಮಗಳ ವಿಚಾರವಿಲ್ಲದೆ ಜನರನ್ನು ಬಹುಪರಿಯಾಗಿ ಪೀಡಿಸುತ್ತಿರುವರು. ಇದು ಸರ್ವಾಂತರ್ಯಾಮಿಯಾದ ನಿನಗೆ ಅರಿಯದ್ದಿಲ್ಲ.

" ಪರಿತ್ರಾಣಾಯ ಸಾಧೂನಾಂ ವಿನಾಶಾಯಚ
ದುಷ್ಕೃತಾಂ ।
ಧರ್ಮ ಸಂಸ್ಥಾಪನಾರ್ಥಾಯ, ಸಂಭವಾಮಿ
ಯುಗೇಯುಗೇ ॥

ಎಂಬ ನಿನ್ನ ಅಭಯ ವಚನವನ್ನು ನೆನಪುಗೊಟ್ಟು ದುಷ್ಟ ನಿಗ್ರಹ ಶಿಷ್ಟ ಪರಿಪಾಲನಾರ್ಥವಾಗಿ ಭೂಲೋಕದಲ್ಲಿ ಅವತರಿಸಬೇಕೆಂದು ಶಂಕರ ದೇವೇಂದ್ರಾದಿ ಸಕಲ ದೇವತೆಗಳೊಡನೆ ಭೂಮಾತೆಯು ಗೋರೂಪದಿಂದ ಬಂದು ಪ್ರಾರ್ಥಿಸುತ್ತಿದ್ದಾಳೆ. ದಯವಿಟ್ಟು ಅನುಗ್ರಹಿಸು.

ನಾರಾಯಣ— ಬ್ರಹ್ಮದೇವಾ ಕಂಸಾದಿ ರಾಜರು ಉನ್ಮತ್ತರಾಗಿ ಪ್ರಜಾ ರಕ್ಷಣೆಯನ್ನು ಲೆಕ್ಕಿಸದೆ ಅತ್ಯಂತ ಅಧರ್ಮದಿಂದ ನಡೆಯುತ್ತಿರುವದು ನನಗೆ ಗೊತ್ತಿದೆ. ಅವರ ಶಾಸನಕ್ಕಾಗಿ ವಸುದೇವ ದೇವಕಿಯರ ಎಂಟನೇ ಗರ್ಭದಿಂದ ಕೃಷ್ಣಾವತಾರವನ್ನು ನಾನು ಮಾಡಲೇಬೇಕಾಗಿದೆ. ಕಾರಣ ಎಲ್ಲ ದೇವತೆಗಳು ಯಾದವರಾಗಿಯೂ, ದೇವಾಂಗನೆಯರು ಗೋಪಿಕಾ ಸ್ತ್ರೀಯರಾಗಿಯೂ, ಭಾರತದಲ್ಲಿ ಅವತರಿಸಿರಿ. ಈ ಅಭಯವನ್ನು ಎಲ್ಲ ದೇವತೆಗಳಿಗೂ ತಿಳಿಸು.

ಬ್ರಹ್ಮದೇವ— ತಥಾಸ್ತು (ಎಂದು ನಮಸ್ಕರಿಸಿ, ಎಲ್ಲ ದೇವತೆಗಳನ್ನು ಕುರಿತು—)

ಮ॥ ವೃ॥ ತಿಳಿದಿರ್ಪಂ ಸಿರಿದೇವ ನೀ ಭುವನಕ್ಕೈದಾ
ಸಂಕಟವ್ರಾತಮಂ ।
ತಳೆವಂ ಸೂರ ಮಹೀಶನೋಳ್ ಜನುಮಮಂ
ಕೃಷ್ಣಾವತಾರಾಖ್ಯದಿಂ ॥
ಇಳೆಯೋಳ್ ಯಾದವರಾಗಿ ಕೈಗುಡುವುದಾ
ತಂಗೀಗಳೀದೇವ ಸಂ- ।
ಕುಳವೆಲ್ಲಂ ಸುಮನಾಂಶದಿಂ ಕುಜನರಂ
ಕೋಲ್ವೀ ಮಹಾಕಾರ್ಯದೊಳ್॥
ಚಂ॥ ವೃ॥ ಜನಿಸುವುದೀ ಸುರಾಂಗನೆಯರೆಲ್ಲರುಮಾ
ಧರೆಯೋಳ್ ನಿಜಾಂಶದಿಂ ।
ವನಿತೆಯರಾಗಿ ಗೋಕುಲದೊಳಿರ್ಪುದು ಸತ್ಯ
ಹಿತಾರ್ಥದಿಂದ ಮೇ-।
ದಿನಿಗನುರೂಪವಾಗಿ ಸದುವರ್ತನದೋಳ್
ನಡೆದಾ ಶರೀರವಂ ।
ಘನಮಹಿಮಂಗೆ ಸನ್ಮನದೊಳರ್ಪಿಸಿ ಬರ್ಪ್ಪುವ
ದೀಸುರರ್ಕರೊಳ್ ॥

ದೇವತೆಗಳೇ ಪರಮಾತ್ಮನು ಭೂಭಾರವನ್ನಿಳುಹಲು ವಸುದೇವ ದೇವಕಿಯರ ಎಂಟನೇ ಗರ್ಭದಿಂದ ಕೃಷ್ಣಾವತಾರವನ್ನು ತಾಳುವನು. ಎಲ್ಲ ದೇವತೆಗಳು ಯಾದವರಾಗಿಯೂ ದೇವಾಂಗನೆಯರು ಗೋಪಿಕಾ ಸ್ತ್ರೀಯರಾಗಿಯೂ ಭಾರತದಲ್ಲಿ ಅವತರಿಸಿರಿ. (ಪರಮಾತ್ಮನ ಅಭಯ ವಚನಕ್ಕೆ ಸರ್ವರೂ ಆನಂದಭರಿತರಾಗಿ ಚಪ್ಪಾಳೆಯನ್ನು ಹೊಡೆಯುವರು) ದೇವಾ! ನಿನ್ನ ಅಭಯದಿಂದ ಸರ್ವರಿಗೂ ಸಂತೋಷವಾಯಿತು. ನಮ್ಮ ಕಾರ್ಯದಲ್ಲಿ ನಾವು ತೊಡಗಲು ಆಜ್ಞೆಯಾಗಬೇಕು.

ನಾರಾಯಣ—ತಥಾಸ್ತು (ಎಲ್ಲರೂ ಕ್ಷೀರಸಾಗರದಿಂದ ಹೊರಡುವರು. ಇತ್ತ ಭೂಲೋಕದಲ್ಲಿ ವಸುದೇವ ದೇವಕಿಯರ ವಿವಾಹ ಮಹೋತ್ಸವವು ನಡೆದಿರುವದು. ಇದನ್ನು ಬ್ರಹ್ಮದೇವನು ಜ್ಞಾನದೃಷ್ಟಿಯಿಂದ ತಿಳಿದು).

ಬ್ರಹ್ಮದೇವ—ಸುರಶ್ರೇಷ್ಠರೇ, ಸದ್ಯಕ್ಕೆ ಭೂಲೋಕದಲ್ಲಿ ಉನ್ಮತ್ತನಾದ ಕಂಸನು ತಂಗಿಯಾದ ದೇವಕೀದೇವಿಯ ವಿವಾಹವನ್ನು ಸೂರ ದೇಶಾಧಿಪನಾದ ವಸುದೇವನೊಡನೆ, ಅತ್ಯಂತ ವೈಭವದಿಂದ ಮಾಡುತ್ತಲಿದ್ದಾನೆ. ಇದೀಗ ಮೆರವಣಿಗೆಯ ಸಮಯ. ರತ್ನಖಚಿತವಾದ ಸುವರ್ಣ ರಥದಲ್ಲಿ ದಂಪತಿಗಳನ್ನು ಕುಳ್ಳಿರಿಸಿ ತಾನೇ ಸಾರಥ್ಯಕರ್ಮವನ್ನು ಮಾಡುತ್ತ ರಾಜಬೀದಿಯಲ್ಲಿ ಹೊರಟಿದ್ದಾನೆ. ಈ ದಂಪತಿಗಳಲ್ಲಿಯೇ ಪರಮಾತ್ಮನು ಜನ್ಮ ತಾಳುವನು. ರಾಜ್ಯವೈಭವ ಮದಾಂಧನಾದ ಈ ಕಂಸನ ಸಂಹಾರವೇ ಪರಮಾತ್ಮನ ಮುಖ್ಯ ಕಾರ್ಯ. ಅದಕ್ಕಾಗಿ ಅವನ ಮುಂದಿನ ಭವಿತವ್ಯವನ್ನು ಅಶರೀರ ವಾಣಿಯಿಂದ ಅವನಿಗೆ ತಿಳಿಸಿ ಬಿಡೋಣವೇ?

ಶಂಕರ—ಬ್ರಹ್ಮದೇವಾ, ಸರಿಯಾದ ಯೋಚನೆ. ಮರಣಮೂಲವಾದ ಭಯಬೀಜವನ್ನು ಬಿತ್ತಲು ಸಮಯ ಯೋಗ್ಯವಾಗಿದೆ. ಆ ಭಯದಿಂದ ಅವನು ಮಾಡುವ ಕುಕರ್ಮಕ್ಕೆ ಅವನ ಪುರಾಕೃತ ಪುಣ್ಯವು ನಾಶವಾಗುವದು. ಪರಮಾತ್ಮನು ತೀವ್ರ ಅವತರಿಸಲು ಸಹಾಯವಾಗುವದು.

ದೇವೇಂದ್ರ—ನಿಜ. ಆ ಹೃದ್ರೋಗದಿಂದ ಅವನ ಶಕ್ತಿಯೇ ಕ್ಷಯವಾಗುತ್ತ ನಡೆಯುವದು. ವಿಲಂಬ ಮಾಡದೆ ಅಶರೀರ ವಾಣಿಯಿಂದ ತಿಳಿಸಿಬಿಡೋಣ. (ಭೂಲೋಕದಲ್ಲಿ ಮೆರವಣಿಗೆಯ ಸಮಯ. ದೊಡ್ಡ ಗುಡುಗಿನ ಸಪ್ಪಳ.)

ಅಶರೀರವಾಣಿ—ಎಲೋ ಐಶ್ವರ್ಯಮದದಿಂದ ಮುಂದು ಗಾಣದ ಕಂಸನೇ! ಈ ದಂಪತಿಗಳಲ್ಲಿ ಜನಿಸುವ ಎಂಟನೇ ಗರ್ಭದಿಂದಲೇ ನಿನಗೆ ಮರಣವಾಗುತ್ತಿರಲು ಈ ಎಲ್ಲ ಮಂಗಲೋತ್ಸವಗಳು ವ್ಯರ್ಥವಾದವುಗಳೇ! ಏಕೆ ವೃಥಾಯಾಸಪಡುತ್ತಿರುವೆ? (ಮಂಗಲವಾದ್ಯಗಳು ನಿಮಿಷಾರ್ಧದಲ್ಲಿ ನಿಲ್ಲುವವು. ಕಂಸನು ಕ್ಷಣ ಮಾತ್ರ ದಿಂಗ್ಮೂಢನಾಗಿ ಆಕಾಶದ ಕಡೆಗೆ ನೋಡಿ, ಅತ್ಯಂತ ಸಿಟ್ಟಿನಿಂದ ಖಡ್ಗವನ್ನು ಹಿರಿದು).

ಕಂಸ—ಏನು ನನಗೆ ಮರಣವೇ? ಅದರಲ್ಲಿಯೂ ತಂಗಿಯ ಆನೇ ಮಗುವಿನಿಂದ ಸೋದರಮಾವನಾದ ನನ್ನ ಮರಣವೇ? ಅತ್ಯಾಶ್ಚರ್ಯ! ಇದರ ಸತ್ಯಾಸತ್ಯವನ್ನು ನಿರ್ಣಯಿಸಲು ಯಾವ ಆಧಾರಗಳೂ ಇಲ್ಲ. ಇಷ್ಟೊಂದು ವೈಭವದಿಂದ ಮಾಡಿದ ತಂಗಿಯ ಕಲ್ಯಾಣವೇ ನನ್ನ ಪ್ರಾಣಾಹುತಿಗೆ ಕಾರಣವಾಯಿತೇ? ಅಶರೀರವಾಣಿಯು ಅಸತ್ಯವನ್ನು ನುಡಿಯಲಾರದು. ನನ್ನ ಮೇಲಿನ ಕೃಪೆಯಿಂದ ಎಷ್ಟೋ ದಿನ ಮೊದಲೇ ತಿಳಿಸಿ, ನಿವಾರಣೋಪಾಯವನ್ನು ಮಾಡಲು, ನನ್ನ ಸುದೈವವೇ ಅಶರೀರವಾಣಿಯಿಂದ ಹೇಳಿದೆ. ಇದನ್ನು ನಾನು ನಿರಾಕರಿಸುವದು ವಿಹಿತವಲ್ಲ.

ವಸುದೇವ—ಮಹರಾಜರೇ! ಸ್ವಲ್ಪ ಸಮಾಧಾನವನ್ನು ಮಾಡಿಕೊಳ್ಳಿರಿ. ಮೆರವಣಿಗೆಯನ್ನು ಮುಗಿಸಿ, ರಾಜಮಂದಿರದಲ್ಲಿ ಶಾಂತರೀತಿಯಿಂದ ವಿಚಾರಿಸೋಣವಂತೆ!

ಕಂಸ—ಮೂರ್ಖಾ ಏನು ಹೇಳುತ್ತಿರುವೆ. ನನ್ನ ಮರಣವನ್ನು ನಾನು ಕಿವಿಯಿಂದ ಕೇಳಿ, ಶತ್ರುವು ನನ್ನ ಹಸ್ತಗತ

ವಿರುವಾಗ ನಾನು ಸಮಾಧಾನವನು ಪಡೆದು ಸುಮ್ಮನಿರಲೇ ? ಎಂಥ ಮರುಳನಿಗೆ ಇದು ಸಮಂಜಸವಾಗಬಹುದು. ದುರ್ಬೀಜವು ಮೊಳೆಯುತ್ತಲೇ ಕಿತ್ತುಹಾಕುವದನ್ನು ಬಿಟ್ಟು, ಮರವಾದ ಮೇಲೆ ಕಿತ್ತಲು ಆಯಾಸಪಡುವದೇ ? ಸರಿ, ಹಿಂದಕ್ಕೆ ಸರಿದು ನಿಲ್ಲು. ಸಂತಾನ ಮೂಲವಾದ ಈ ಸಹೋದರಿಯನ್ನೇ ತುಂಡರಿಸಿ ಚೆಲ್ಲುವೆ. (ಎಂದು ಅವಳ ಮುಡಿಯನ್ನು ಹಿಡಿದು ಜಗ್ಗಿ ರಥದಿಂದ ಕೆಳಗೆ ತರುವನು. ದೇವಕಿಯು ಅತ್ಯಂತ ಗಾಬರಿಯಿಂದಲೂ ದುಃಖದಿಂದಲೂ).

ದೇವಕಿ—ಅಣ್ಣಾ! ಅಣ್ಣಾ!! ದಯವಿಟ್ಟು ನನ್ನ ಪ್ರಾಣವನ್ನು ತೆಗೆದುಕೊಳ್ಳಬೇಡ. ಇಲ್ಲಿಯ ವರೆಗೆ ಅತ್ಯಂತ ಪ್ರೀತಿಯಿಂದ ಉಣಿಸಿ ತಿನಿಸಿ ಬೆಳಸಿದ ನಿನ್ನ ಕೈಗಳನ್ನು ಇಂಥ ಅಮಂಗಲ ಪಾಪಕರ್ಮಕ್ಕೆ ಎತ್ತಬೇಡ.

ಕಂಸ—ಎಲ್ಲಿಯ ಪಾಪ ! ನನ್ನ ರಕ್ಷಣೆಯನ್ನು ನಾನು ಮಾಡಿಕೊಳ್ಳದಿದ್ದರೆ, ಅದೇ ಮಹತ್ತರವಾದ ಪಾಪ ! ಯಾರ ಭಯದಿಂದ ನಾನು ವಿಲಂಬ ಮಾಡಬೇಕು. ವಿಲಂಬದಿಂದ ಮತ್ತೇನು ವಿಘ್ನಗಳು ಬರುತ್ತವೆಯೋ ಏನೋ (ಎಂದು ಖಡ್ಗವನ್ನು ಎತ್ತುವಷ್ಟರಲ್ಲಿ ನಾರದರ ಪ್ರವೇಶ).

ಪದ ರಾಗ— ಬಿಭಾಸ ತಾಳ—ಧುಮಾಳಿ

ನಾರದ—

ಬಿಡು ರಾಯ ಬಿಡು ರಾಯ |

ಒಡಹುಟ್ಟಿದವಳ ಪಿಡದೀ ಮುಡಿಯನು ರಾಯ ||ಪ||

ತುಂಗವಿಕ್ರಮನೆ ಮಂಗಳೋತ್ಸವದಿ |
ತಂಗಿಯಂಗವನು ಭಂಗಪಡಿಸದಿರು || ೧ ||
ಇವಳುದರದಿ ಸಂಭವಿಸಿದೆಂಟನೆಯ |
ಕುವರನಹಿತನಿನಗಿವಳಲ್ಲರಿಯೈ || ೨ ||
ಅಷ್ಟವು ಶಿಶುವದು ಪುಟ್ಟಿದೊಡನೆ ತಂ |
ದಿಟ್ಟು ಪೋಗುವೆನು ಬಿಟ್ಟು ಬಿಡೀಕೆಯ || ೩ ||

ವೀರಾಗ್ರಣಿಯಾದ ನೀನು ಸಹೋದರಿಯವಧೆಗೆಉದ್ಯುಕ್ತನಾಗಬಹುದೇ? ಅಪಾರವಾದ ನಿನ್ನ ಪರಾಕ್ರಮಕ್ಕೆ ಕಲಂಕವನ್ನು ತಂದುಕೊಳ್ಳಬೇಡ. ಇವಳ ಎಂಟನೇ ಗರ್ಭದಿಂದ ನಿನಗೆ ಮರಣವಾಗುವಂತಿದ್ದರೆ, ಇವಳ ತಪ್ಪೇನು !

ಕಂಸ—ನಾರದರೆ ದೇವತೆಗಳ ಮಾತಿನಲ್ಲಿ ನನಗೆ ಪೂರ್ಣ ನಂಬಿಗೆಯಿಲ್ಲ. ಯಾವ ಗರ್ಭದಿಂದ ಬಂದು ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುವರೆಂಬದನ್ನು ಹೇಳಲಿಕ್ಕಾಗುವದಿಲ್ಲ.

ಮ|| ವೃ|| ಕುಶಲರ್ ಕಾರ್ಯವಿಸಾಧಕರ್ ಸುರರಿಗಂದಾ-
ದೈತ್ಯರಂ ಮೋಸಗೊ-|
ಳ್ಳಿಸಿ ಪಿಯೂಷವನಿತ್ತನಾ ಹರಿಯುತಾಂ ದಿವ್ಯಾಂಗನಾ
ರೂಪದಿಂ ||
ದಶಕಂಠಂಗುರೆ ಮೋಸ ಮಾಡೆ, ಭವನಿತ್ತಾ ಪ್ರಾಣ-
ಲಿಂಗಾಂಗಮಂ |
ವಸುಧಾ ಮಂಡಲಕಿಟ್ಟನಾ ದಶಶಿರಂ ಖೂಳರ್
ಸುರರ್ ಸತ್ಯದಿಂ ||

ನಾರದ—ನಿಜ ! ನಿನ್ನ ಸಂದೇಹವು ಯತಾರ್ಥವಿದೆ. ಅದಕ್ಕಾಗಿ ಈ ದಂಪತಿಗಳನ್ನು ಬಲವಾದ ಕಾರಾಗೃಹದಲ್ಲಿಟ್ಟು ಅವರ ಎಲ್ಲ ಶಿಶುಗಳನ್ನು ನಾಶಪಡಿಸಿ ನೀನು ಭಯಮುಕ್ತನಾಗು.

ಕಂಸ—ಅದಕ್ಕಿಂತಲೂ ಗರ್ಭದ ಮೂಲವಾದ ಇವಳನ್ನೇ ಸಂಹರಿಸಿ ಬಿಡುವದು ವಿಹಿತವಲ್ಲವೇ ?

ನಾರದ—ಅಲ್ಲ. ಸರ್ವಥಾ ಹಾಗೆ ಮಾಡಬೇಡ ! ನಿರಪರಾಧಿಯಾದ ಸ್ತ್ರೀವಧೆಯು ಅತ್ಯಂತ ಪಾಪಕರವು. ಇಂತಹ ಪಾಪಕರ್ಮಕ್ಕೆ ನೀನು ಕೈಹಾಕಿದರೆ, ಹಿರಣ್ಯಕಶ್ಯಪನ ವಧೆಗಾಗಿ ಕಂಬದಲ್ಲಿ ಪ್ರಕಟನಾದಂತೆ ಪರಮಾತ್ಮನು ಇಲ್ಲಿಯೇ ಪ್ರಕಟನಾಗಿ ನಿನ್ನ ಸಂಹಾರ ಮಾಡಬಹುದು. ಅದಕ್ಕಾಗಿಯೇ ನಾನು ಧಾವಿಸಿ ನಿನ್ನೆಡೆಗೆ ಬಂದೆ. ನನ್ನ ಮಾತನ್ನು ನಿರಾಕರಿಸಬೇಡ.

ಕಂಸ—ಆಗಲಿ. ನಿಮ್ಮ ಸೂಚನೆಯಂತೆ ಇವರನ್ನು ಕಾರಾಗೃಹದಲ್ಲಿಟ್ಟು ಶಿಶುಗಳು ಜನಿಸಿದ ಕೂಡಲೇ ನಾಶಪಡಿಸಿ ಬಿಡುವೆ. ವಸುದೇವನೇ ಇವಳೊಡನೆ ನೀನು ದಾಂಪತ್ಯ ಸುಖವನ್ನು ಅನುಭವಿಸುವದಿದ್ದರೆ, ನಾರದರ ಹೇಳಿಕೆಯಂತೆ ಕಾರಾಗೃಹದಲ್ಲಿದ್ದು ಹುಟ್ಟಿದ ಎಲ್ಲ ಶಿಶುಗಳನ್ನೂ ನನ್ನ ವಶಪಡಿಸು. ಇಲ್ಲದಿದ್ದರೆ, ನಿಮ್ಮ ದಾಂಪತ್ಯವಿಚ್ಛೇದನವು ಈಗಲೇ ಮುಗಿದುಹೋಗಲಿ.

ವಸುದೇವ—ಅಗ್ನಿಸಾಕ್ಷಿಯಾಗಿ ಕೈಪಿಡಿದ ಇವಳನ್ನು ನಾನು ಎಂದಿಗೂ ಅಗಲಲಾರೆ. ತಮ್ಮ ಆಜ್ಞೆಯಂತೆ ನಡೆದುಕೊಳ್ಳಲು ಸಿದ್ಧನಿರುವೆ.

ಕಂಸ—ಆಗಲಿ, ಹಾಗಾದರೆ ಕಾರಾಗೃಹಕ್ಕೆ ಹೋಗಿ, ಅಲ್ಲಿಯೇ ನಿಮ್ಮ ಜೀವಿತವನ್ನು ಕಳೆಯಿರಿ. (ಎಂದು ಅವರೀರ್ವರನ್ನೂ ಕಾರಾಗೃಹಕ್ಕೆ ಕಳಿಸುವನು. ನಾರದರಿಗೆ ನಮಸ್ಕರಿಸಿ ಹೋಗುವನು ನಾರದರೂ ಹೋಗುವರು.)

—( ಪ್ರವೇಶ ೨ )—

(ವರುಷ ವರುಷಗಳು ಕಳೆದು ದೇವಕಿಯ ಆರು ಗರ್ಭಗಳು ನಾಶವಾಗುವವು. ಕಂಸನ ಸಭಾ ಮಂದಿರ. ನಾರದರ ಪ್ರವೇಶ.)

ನಾರದ— ವಿಜಯೋಸ್ತು ರಾಜಾ! ಸರ್ವವೂ ಸಮಾಧಾನಕರವೇ ?

ಕಂಸ— ಬನ್ನಿ ನಾರದರೇ! ನಿಮ್ಮ ಕೃಪೆಯಿಂದ ಎಲ್ಲವೂ ಸರಿಯಾಗಿದೆ.

ನಾರದ— ವಸುದೇವ ದೇವಕಿಯರು ಕಾರಾಗೃಹದಲ್ಲಿ ಕುಶಲರಾಗಿ ನಿನ್ನ ಅಂಕಿತದಲ್ಲಿರುವರಷ್ಟೇ ?

ಕಂಸ— ನನ್ನ ಆಜ್ಞೆಯೆಂದರೆ ಯಮ ಶಾಸನವೇ. ಅಂಕಿತರಾಗಿರುವದರಲ್ಲಿ ಆಶ್ಚರ್ಯವೇನು ? ಈಗ ಆರು ಶಿಶುಗಳು ಜನನವಾಗಿ ನನ್ನ ಕೋಪಾಟೋಪಕ್ಕೆ ತುತ್ತಾದವು. ಏಳನೇ ಗರ್ಭವು ನಿಂತಿದೆ. ನಾಲ್ಕೈದು ತಿಂಗಳು ಬಯಿಕೆಯಿಂದ ಸ್ವಲ್ಪ ಕೃಶಳಾಗಿದ್ದಾಳೆ.

ನಾರದ— ಧನ್ಯ! ಧನ್ಯ!! ನಿನ್ನ ಪರಾಕ್ರಮದ ಮುಂದೆ ಅವುಗಳ ಆಟವೇನು ? ಮನಸ್ಸು ನೆಮ್ಮದಿಯಾಗುತ್ತಿರುವದಷ್ಟೇ ?

ಕಂಸ— ಎಂಟು ಗರ್ಭಗಳೂ ನಾಶವಾಗದ ವಿನಾ, ಅದು ಹೇಗೆ ಸಾಧ್ಯವಿದೆ. ಆ ದೇವತೆಗಳ ಮೋಸಗಾರಿಕೆಯು ಮೇಲಿಂದ ಮೇಲೆ ನನ್ನ ಮನಸ್ಸನ್ನು ವ್ಯಗ್ರಗೊಳಿಸುತ್ತದೆ. ಅವರ ಪರಾಕ್ರಮವೇನೂ ಹೇಳಿಕೊಳ್ಳುವಂತಹದಲ್ಲ.

ಕಂ|| ಹರಿ ಬಹು ಶೂರನೆ ಭಸ್ಮಾ-|
ಸುರನಂ ಕೊಲ್ಲಲ್ಕೆ ಪೆಣ್ಮಣಿಯ ರೂಪವ ತಾ।
ಧರಿಸಿ ಕಡು ಮೋಸದಿಂ ಸಂ-|
ಹರಿಸಿದುದನುಚಿತಮುದಲ್ಲದೊಡೆ ಪೌರುಷವೇ ||
ಭಟನೆ, ತಿರಿದುಣ್ಣುತಾನೆಯ।
ಶಟೆದೊಗಲಂ ಪೊತ್ತು ರಜಿತ ನಗದೋಳ್ ಸ್ತ್ರೀಲಂ-|
ಪಟನಾಗಿ ವಾಸಿಪಾ ಧೂ-|
ರ್ಜಟಿ ಶೌರ್ಯಮದಂತು ಕಂಗೊಳಿಪುದೆಮಗೀಗಳ್ ||

ನಾರದ— ಸತ್ಯವಿದೆ. ಅದಕ್ಕಾಗಿಯೇ ಎಲ್ಲ ಶಿಶುಗಳನ್ನು ನಾಶಪಡಿಸಲು ನಿನಗೆ ಸೂಚಿಸಿದೆ.

ಶೆರೆಮನೆ ಕಾವಲುಗಾರ— ಪ್ರಭೋ ವಸುದೇವ ದೇವಕಿಯರ ಭೆಟ್ಟಿಗೆಂದು ಒಂದೆರಡು ಸಲ ಬಂದ, ರೋಹಿಣೀ ದೇವಿಯರು ಮತ್ತೆ ಅವರ ಭೆಟ್ಟಿಗೆಂದು ಬಂದಿದ್ದಾರೆ. ಒಳಗೆ ಬಿಡಲು ಅಪ್ಪಣೆಯಾಗಬೇಕು.

ಕಂಸ— ಆಗಲಿ, ಹೀಗೆ ಮೇಲಿಂದ ಮೇಲೆ ಬರಬಾರದೆಂದು ನೀನೇ ಸ್ವಲ್ಪ ಬೆದರಿಸಿ ಇದೊಂದು ಸಲ ಬಿಡು. ಪತಿ ಪತ್ನಿಯರ ಭೆಟ್ಟಿಗೆ ಆತಂಕ ಮಾಡಬಾರದೆಂದು ಒಂದೆರಡು ಸಲ ಕರುಣೆಯನ್ನು ತೋರಿಸಿದೆ. ಅದರ ಉಪಯೋಗವನ್ನು ಬಹಳವಾಗಿ ತೆಗೆದುಕೊಳ್ಳುವದು ಕಾರಾಗ್ರಹ ನಿಯಮಕ್ಕೆ ವಿರೋಧವಾಗುವದು. ಇದನ್ನು ಅವಳಿಗೆ ತಿಳಿಹೇಳು.

ನಾರದ— ರೋಹಿಣಿ ದೇವಿಯೆಂದರೆ ವಸುದೇವನ ಬೇರೊಬ್ಬ ಹೆಂಡತಿಯಲ್ಲವೇ ?

ಕಂಸ— ಹೌದು.

ನಾರದ— ಆಗಲಿ ಮಹಾಸಾಧ್ವಿ ಶಿರೋಮಣಿಯು ನಿರಪರಾಧಿಗೆ ನಿರ್ಬಂಧತೆಯನ್ನು ತೋರಿಸಿದ್ದು ನಿನಗೆ ಭೂಷಣಾಸ್ಪದವೇ ಆಗಿದೆ. ರಾಜಾ, ಮನಸ್ಸಿಗೆ ನೆಮ್ಮದಿಯನ್ನು ತಂದುಕೊಂಡು, ಶರೀರ ಸಂಪತ್ತನ್ನು ಮಾತ್ರ ಕಾಯ್ದುಕೊ. ಹಿಂದೆ ಇದ್ದ ಶರೀರ ಬಲವು ಈಗ ಉಳಿದಿಲ್ಲ. ಚಿಂತೆಗೊಳಗಾಗಬೇಡ.

ಕಂಸ— ಹೇಗೆ ಉಳಿಯಬೇಕು ನಾರದರೇ! ನಾನು ಎಷ್ಟು ರೀತಿಯಿಂದ ಸಮಾಧಾನವನ್ನು ಮಾಡಿಕೊಂಡರೂ, “ಅಶರೀರವಾಣಿಯು ಅಸತ್ಯವನ್ನು ನುಡಿಯಲಾರದು” ಎಂಬ ಗಂಟೆಯೇ ನನ್ನ ಹೃದಯ ದೇಗುಲದಲ್ಲಿ ಒಂದೇಸವನೆ ಮೊಳಗುತ್ತಿದೆ. ಚಿತ್ರ ವಿಚಿತ್ರವಾದ ಸ್ವಪ್ನಗಳು ಬಿದ್ದು ಅದನ್ನು ಮತ್ತಿಷ್ಟು ದೃಢಪಡಿಸುತ್ತವೆ.

ನಾರದ— ಅದೇನು ಚಿತ್ರವಿಚಿತ್ರವಾದ ಸ್ವಪ್ನ ?

ಕಂಸ— ೧-೨ ವರುಷಕ್ಕೊಮ್ಮೆ ಆವಿಷ್ಣುವಿನ ಅವತಾರಗಳೆಂದು ಪುರಾಣ ಪ್ರಸಿದ್ಧವಾದ ಮಚ್ಛ, ಕೂರ್ಮ, ವರಹ, ನರಸಿಂಹ, ವಾಮನ ಪರಶುರಾಮ ರಾಮಾದಿಗಳು, ಒಂದೊಂದೇ ರೂಪದಿಂದ ಬಂದು, ನನ್ನನ್ನು ಕೊಲ್ಲಲು ಯತ್ನಿಸುತ್ತಾರೆ. ನಾನು ಆ ಭಯದಿಂದ ಅಬ್ಬರಿಸಿ ಎದ್ದು, ವಿಚಿತ್ರವಾಗಿ ಕೂಗುತ್ತಿರುವೆನಂತೆ. ಮುಂದೆ ಕ್ಷಣದಲ್ಲಿ ನನಗೆ ಎಚ್ಚರ!

ನಾರದ— ಹೀಗೋ ಇದೆಲ್ಲವೂ ನಿನ್ನ ಮನಸ್ಸಿನ ವಿಕಾರ, ತೆಗೆದುಕೋ ಈ ರಕ್ಷಾ ಸೂತ್ರವನ್ನು ಇದರಿಂದ ನಿನಗೆ ಈ ತೆರದ ಸ್ವಪ್ನಗಳು ಬೀಳುವದಿಲ್ಲ. ಇದಕ್ಕೆ ಪಥ್ಯವೆಂದರೆ ಅಶುಚಿಗಳನ್ನು ಮುಟ್ಟದಿರುವದು.

ಕಂಸ— ಅಂತಹ ಪ್ರಸಂಗವೇನೂ ಬರುವದೇ ಇಲ್ಲ.

ನಾರದ— ಆಗಲಿ ನಾನು ಬರುವೆ.

ಕಂಸ— ನಮಸ್ಕರಿಸುತ್ತೇನೆ.

ನಾರದ— ವಿಜಯೀ ಭವ (ಎಂದು ಹೋಗುವರು.)

— ೩ನೇ ಪ್ರವೇಶ —

(ಮೂರನೇ ದಿನ ಕಾರಾಗೃಹದಲ್ಲಿ ಪರಮಾತ್ಮನ ಯೋಗ ಮಾಯೆಯಿಂದ ದೇವಕಿಯ ಏಳನೇ ಗರ್ಭವು ಶ್ರಾವವಾಗಿ ರೋಹಿಣಿಯಲ್ಲಿ ಸ್ಥಾಪಿಸಲ್ಪಡುವದು. ಕಾವಲುಗಾರನು ಗರ್ಭಶ್ರಾವದ ಸುದ್ದಿಯನ್ನು ಕಂಸನಿಗೆ ಹೇಳಲು ಬರುವನು.)

ಕಾವಲುಗಾರ— ಪ್ರಭೋ ದೇವಕೀ ದೇವಿಯರ ೭ನೇ ಗರ್ಭವು ಶ್ರಾವವಾಯಿತು. ನಾಲ್ಕು ತುಂಬಿ ಐದನೇ ತಿಂಗಳು ನಡೆಯುತ್ತಿತ್ತಂತೆ. ತಮಗೆ ಅರಿಕೆ ಮಾಡಲು ಹೇಳಿದ್ದಾರೆ. ರೋಹಿಣೀ ದೇವಿಯರು ಶುಶ್ರೂಷೆಯಲ್ಲಿ ತೊಡಗಿದ್ದಾರೆ.

ಕಂಸ— ಆಗಲಿ, ನೆಟ್ಟಗಾಯಿತು. ಒಂದು ಶಿಶು ಸಂಹಾರದ ಶ್ರಮವು ಉಳಿದಂತಾಯಿತು. ರೋಹಿಣೀ ದೇವಿಗೆ ಆರೆಂಟು ದಿವಸ ಇದ್ದು, ಆರೈಕೆಯನ್ನು ಮಾಡಿ ಹೋಗಲು ತಿಳಿಸು. ಗಂಡನೊಡನೆ ಅವಳೂ ಸ್ವಲ್ಪ ಕಾರಾಗೃಹದ ಅನುಭವವನ್ನು ಪಡೆಯಲಿ.

ಕಾವಲುಗಾರ—ಆಜ್ಞೆ ಮಹಾಪ್ರಭೋ (ಎಂದು ಹೋಗುವನು. ೮ ದಿವಸಗಳ ನಂತರ ಕಾರಾಗ್ರಹದಲ್ಲಿ)

ವಸುದೇವ—ಸಾಧ್ವೀ ರಾಜಾಜ್ಞೆಯಂತೆ, ೮ ದಿವಸ ಶುಶ್ರೂಷೆಯನ್ನು ಮಾಡಿದೆ. ಇನ್ನು ನಿನ್ನ ಸ್ಥಳಕ್ಕೆ ನೀನು ಹೋಗಿ ಸುಖವಾಗಿರು. ಅವನ ಆಜ್ಞೆಯನ್ನು ಮಿಕ್ಕಿ ಹೆಚ್ಚು ದಿವಸ ಇಲ್ಲಿ ಇರುವದು ಯೋಗ್ಯವಲ್ಲ.

ರೋಹಿಣಿ—ನಾಥ ತಮ್ಮನ್ನು ಅಗಲಿ ಹೋಗುವದು ಈ ಸಲ ಏಕೋ ನನಗೆ ದುಸ್ತರವಾಗಿ ತೋರುವದು.

ವಸುದೇವ—ಹಾಗೆ ಮನೋಧೈರ್ಯವನ್ನು ಕಳೆದು ಕೊಳ್ಳಬೇಡ. ಪರಮಾತ್ಮನು ಈ ದುಸ್ಥಿತಿಯಿಂದ ತೀವ್ರ ದಲ್ಲಿಯೇ ಪಾರು ಮಾಡುವನು.

ದೇವಕಿ— ಅಕ್ಕಾ! ಈ ಸಲದ ತಮ್ಮ ಮುಖಲಕ್ಷಣವೇ ವಿಚಿತ್ರ ಶೋಭಾಯಮಾನವಾಗಿ ತೋರುವದಲ್ಲ! ನನ್ನ ದೃಷ್ಟಿಗಂತೂ ಗರ್ಭ ಚಿನ್ಹಗಳೇ ಒಡೆದು ಕಾಣುತ್ತವೆ. ದೈವ ಯೋಗದಿಂದ ನಿಜವಾದರೆ ದಕ್ಷತೆಯಿಂದ ಕಾಪಾಡಿಕೊಂಡು ಯಾದವ ಕುಲದೀಪವು ಅಮರ ಜ್ಯೋತಿಯಾಗುವಂತೆ ಮಾಡಿರಿ. ನನ್ನ ಅವಸ್ಥೆಯಂತೂ ಹೀಗಾಯಿತು. ನಿಮ್ಮಿಂದಾದರೂ ಮನೆಯು ಮುಂದಾಗಲಿ, ಈ ಸುದ್ದಿಯು ಅಣ್ಣನಿಗೆ ಮಾತ್ರ ತಿಳಿಯದಿರಲಿ.

ರೋಹಿಣಿ—ದೇವೀ ನಿನ್ನ ಊಹೆಯು ನಿಜವಾದ ಪಕ್ಷಕ್ಕೆ ಎಲ್ಲರ ಕಲ್ಯಾಣ ಸಮಯವು ತೀವ್ರದಲ್ಲಿ ಬರುವದೆಂದೇ ನಿಶ್ಚಯ. ನಾನು ಆಜ್ಞೆಯನ್ನು ಪಡೆದು ಹೊರಡುವೆ. (ಎಂದು ಕಾವಲುಗಾರನಿಂದ ಹೇಳಿಕಳಿಸುವಳು).

ಕಾವಲುಗಾರ—ಪ್ರಭೋ ರೋಹಿಣೀ ದೇವಿಯರು ತಮ್ಮ ಊರಿಗೆ ಹೋಗಲು ಆಜ್ಞೆಯನ್ನು ಕೇಳಿದ್ದಾರೆ.

ಕಂಸ—ಆಗಲಿ, ರಾಜಮನ್ನಣೆ ಎಂದು ಈ ಸೀರೆ ಕುಪ್ಪಸಗಳನ್ನು ಅವಳಿಗೆ ಕೊಡಲು ದೇವಕಿಯ ಕೈಯಲ್ಲಿ ಕೊಡು. (ಸೀರೆ ಕುಪ್ಪಸ ಹರಿದ್ರಾ ಕುಂಕುಮಗಳನ್ನು ಅವನ ಕೈಯಿಂದ ಕಳಿಸುವನು. ಕಾವಲುಗಾರನು ಅವುಗಳನ್ನು ತಂದು ದೇವಕಿಯ ಕಡಿಗೆ ಕೊಡುವನು.)

ದೇವಕಿ—ಒಳಿತಾಯಿತು. ದಿನ ಹೋದಂತೆ ಅಣ್ಣನ ಸಿಟ್ಟು ಶಾಂತವಾಗಹತ್ತಿದೆ. ಅಕ್ಕಾ, ಇವನ್ನು ಸ್ವೀಕರಿಸಿರಿ. ರಾಜಮನ್ನಣೆ ಎಂದು ಅಣ್ಣನು ಕಳಿಸಿದ್ದಾನೆ. ಇದೂ ಒಂದು ಶುಭಲಕ್ಷಣವೆಂದೇ ತೋರುತ್ತದೆ.

ರೋಹಿಣಿ—ಆಗಲಿ. (ಎಂದು ಸ್ವೀಕರಿಸಿ) ನಾನು ಹೋಗಿ ಬರುವೆ. (ಎಂದು ನಮಸ್ಕರಿಸಿ ಹೋಗುವಳು. ಮುಂದೆ ಒಂದು ವರುಷದ ನಂತರ ದೇವಕಿಯು ೮ನೇ ಗರ್ಭವನ್ನು ಧಾರಣ ಮಾಡುವಳು. ರೋಹಿಣಿಯಲ್ಲಿ ಬಲರಾಮನು ಜನ್ಮ ತಾಳುವನು.

— ೪ನೇ ಪ್ರವೇಶ —

(ಕಾರಾಗೃಹದಲ್ಲಿ ವಸುದೇವ ದೇವಕಿಯರು).

ವಸುದೇವ—ದೇವೀ ಎಂಟನೇ ಗರ್ಭವಂತೂ ಧಾರಣ ವಾದಂತಾಯಿತು. ನಿನ್ನ ಮುಖಕಾಂತಿಯು ಮಾತ್ರ ಅವರ್ಣನೀಯವಾದ ಸೌಂದರ್ಯವನ್ನು ತಾಳಿದೆಯಲ್ಲ!

ದೇವಕಿ—ನಿಮ್ಮ ಪ್ರೇಮುಲ ದೃಷ್ಟಿಗೆ ಅದು ಸಹಸ ಪಟ್ಟಾಗಿ ಕಾಣುವದು. ಆದರೆ ನನಗೆ ಎಲ್ಲ ಗರ್ಭದಂತೆ ಇದು ಸಾಮಾನ್ಯವಾಗಿಲ್ಲ. ಒಮ್ಮೊಮ್ಮೆ ಒಂದೊಂದು ಬಗೆಯಾದ ವಿಚಿತ್ರ ಅನುಭವವೇ ನನಗೆ ಹೊಟ್ಟೆಯಲ್ಲಿ ಆಗುತ್ತದೆ.

ವಸುದೇವ—ಅದೇನು ವಿಚಿತ್ರತೆ?

ದೇವಕಿ—ಒಮ್ಮೆ ಸರ್ವವಿಶ್ವವೇ ಹೊಟ್ಟೆಯಲ್ಲಿ ಬಂದಂತೆ ಅತ್ಯಂತ ಭಾರವಾಗುವದು. ಒಮ್ಮೊಮ್ಮೆ ಸಮುದ್ರದ ತೆರೆಗಳೇ ಬಂದಂತೆ ಭಾಸವಾಗುವದು. ಮತ್ತೊಮ್ಮೆ ಸುಗಂಧ ವಾಯುವು ಬೀಸುತ್ತಿರುವಂತೆ ತೋರುವದು. ಬೇರೊಮ್ಮೆ ಏನೂ ವಿಕಾರ

ವಿಲ್ಲದೆ ನಿಶ್ಚಲ ಬ್ರಹ್ಮಾನಂದ ಸ್ಥಿತಿಯು ಬಂದು, ಜಗತ್ತೇ ಶೂನ್ಯವಾಗಿ ತೋರುವದು.

ವಸುದೇವ—ದೇವೀ, ಇದೆಲ್ಲವೂ ಶುಭ ಲಕ್ಷಣವೇ. ಪರಮಾತ್ಮನ ಸಂಕೇತದಂತೆ, ಈ ಗರ್ಭದ ಶಿಶುವಿನಿಂದಲೇ ಭೂಭಾರವು ಇಳಿಯಬೇಕಾಗಿದೆಯಲ್ಲ ?

ದೇವಕಿ—ಆ ದುಷ್ಟನ ಕೈಯಿಂದ ಶಿಶುವು ಪಾರಾದ ಮೇಲೆ ಮುಂದಿನ ಮಾತು.

ವಸುದೇವ—ಆಗಬಹುದು. ಭವಿತವ್ಯವನ್ನು ನಿಶ್ಚಯಿಸಲು ಯಾರಿಗೂ ಸಾಧ್ಯವೇ ಇಲ್ಲ. ದೈವೀಶಕ್ತಿಯ ಮುಂದೆ ಯಾರ ಆಟವೂ ನಡೆಯಲಾರದು.

ದೇವಕಿ—ಆಗಲಿ, ಸುದ್ದಿಯನ್ನಂತೂ ತಿಳಿಸುವಂತೆ ತಿಳಿಸಿಬಿಡಿರಿ.

ವಸುದೇವ— ತಿಳಿಸೋಣ (ಕಾವಲುಗಾರನಿಂದ ಹೇಳಿಕಳಿಸುವರು. ಅವನು ಕಂಸನ ಹತ್ತಿರ ಬಂದು)

ಕಾವಲುಗಾರ—ಪ್ರಭೋ,ದೇವಕೀದೇವಿಯವರು ೮ನೇ ಗರ್ಭ ಧಾರಣೆ ಮಾಡಿರುವರಂತೆ. ೩ ತಿಂಗಳಾಗಿರಬಹುದೆಂದು ತಿಳಿಸಲು ಹೇಳಿದ್ದಾರೆ.

ಕಂಸ—ಹಾ, ೮ನೇ ಗರ್ಭವು ಧಾರಣವಾಯಿತೇ ?ಬಲು ಜೋಕೆ, ಈ ಶಿಶುವು ಜನನವಾಗುವ ವರೆಗೆ, ಯಾರನ್ನೂ ಒಳಗೆ ಬಿಡಕೂಡದು. ಒಳ್ಳೇ ದಕ್ಷತೆಯಿಂದ ಹಗಲಿರುಳೂ ಕಾಯುತ್ತಿರಬೇಕು. ತಪ್ಪಿದಲ್ಲಿ ನಿಮಗೆ ದೇಹಾಂತ ಶಿಕ್ಷೆಯೇ ವಿನಾ ಕ್ಷಮೆ ಇಲ್ಲ.

ಕಾವಲುಗಾರ—ಆಜ್ಞೆ ಮಹಾಪ್ರಭೋ (ಎಂದು ಹೊರಡುವನು).

ಕಂಸ—ನನ್ನ ಮೃತ್ಯುವು ಈ ಗರ್ಭದ ಶಿಶುವಿನಿಂದಲೇ? ಆಗಲಿ ಹೇಗಾಗುವದೋ ನೋಡೋಣ. ಶೈಶವಾವಸ್ಥೆಯಲ್ಲಿ ನನ್ನ ಕೈಯಿಂದ ಪಾರಾಗಿ, ಯೌವನಕ್ಕೆ ಬಂದು, ನನ್ನನ್ನು ಕೊಲ್ಲಬೇಕಲ್ಲವೇ? ಶಿಶುವಿನಿಂದ ಹತನಾಗಲು ನಾನೇನು ನೊರಜಲ್ಲ. ಬಲವಾದ ಬಂಧನದಲ್ಲಿದ್ದ ಶಿಶುವು, ನನ್ನ ಕೈಮೀರಿ ಹೋಗುವದೆಲ್ಲಿಗೆ ? (ಅತ್ಯಂತ ಬೇಜಾರದಿಂದ) ನಾನು ಎಷ್ಟು ರೀತಿಯಿಂದ ಸಮಾಧಾನವನ್ನು ಮಾಡಿಕೊಂಡರೂ ಅಂತರಂಗದಲ್ಲಿ ಮತ್ತೆ "ಆಶರೀರ ವಾಣಿಯು ಅಸತ್ಯವನ್ನು ನುಡಿಯಲಾರದು" ಎಂಬ ಕೂಗೇ ಕೂಗು. ನನ್ನದೇ ಹುಚ್ಚು ಭ್ರಮೆ ಇದು. ಹೇಗೆ ಸತ್ಯವನ್ನು ಮಾಡುವದೋ ನೋಡೋಣ. ನವಮಾಸಗಳಂತೂ ತುಂಬಲಿ. (ಕಾರಾಗೃಹದಲ್ಲಿ ದಿನದಿನಕ್ಕೆ ಗರ್ಭವು ಬೆಳೆದು ನವಮಾಸಗಳು ತುಂಬುವವು.)

ವಸುದೇವ—ದೇವೀ ನವಮಾಸಗಳಂತೂ ತುಂಬಿದಂ ದವು. ಪ್ರಕೃತಿಮಾನವು ಸರಿಯಾಗಿದೆಯಲ್ಲ ?

ದೇವಕಿ—ಸರಿಯಾಗಿದೆ. ಮನದಲ್ಲಿ ಯಾವ ಚಿಂತೆಯ ಅಂಜಿಕೆಯೂ ತಿಲಮಾತ್ರ ಬರುವದಿಲ್ಲ. ಸದಾ ಆನಂದಮ ವಾದ ಅವಸ್ಥೆಯಲ್ಲಿಯೇ ಪರಮಾತ್ಮನ ಸ್ಮರಣೆ ಮಾಡುತ್ತ ಕಾ ಕಳೆಯುವೆ.

ವಸುದೇವ—ಸದ್ಯದ ಸಮಯೋಚಿತ ಉಪಾಯವೆಂದ ಅದೊಂದೆ. ಆತನೇ ಯಾವ ಮಾರ್ಗವನ್ನು ತೋರಿಸುವನೋ ತೋರಿಸಲಿ. (ಶ್ರಾವಣ ಕೃಷ್ಣಾಷ್ಟಮಿಯ ಮಧ್ಯರಾತ್ರಿಯ ಸಮಯ. ಕಾರಾಗೃಹದಲ್ಲಿ ವಸುದೇವ ದೇವಕಿಯರು,ಪರಮಾ ತ್ಮನ ಧ್ಯಾನತತ್ಪರರಾಗಿ ಕುಳಿತಿರುವರು. ಒಮ್ಮೆಲೇ ಕೋಟಿ ಸೂರ್ಯಪ್ರಕಾಶದಂತೆ ಪ್ರಚಂಡವಾದ ಶಾಂತಮಯ ಪ್ರಕಾಶ ಶಂಖ, ಚಕ್ರ, ಗದಾ, ಪದ್ಮಗಳಿಂದಲೂ ತರುಣ ತುಳಸಿ ಮಾಲೆಯಿಂದಲೂ ಒಪ್ಪುವ ಶ್ರೀಮನ್ನಾರಾಯಣನ ದಿವ್ಯ ರೂಪ ದರ್ಶನವಾಗುವದು. ಈರ್ವರೂ ಸಾಷ್ಟಾಂಗವೆರಗಿ ಅಭಯಾಪೇಕ್ಷಿಗಳಾಗಿ ನಿಲ್ಲುವರು).

ನಾರಾಯಣ—ದಂಪತಿಗಳೇ ಸ್ವಯಂಭೂ ಮನ್ವಂತ ದಲ್ಲಿ ನೀವು ಸುತಪ ಪ್ರಶ್ನಿಯರೆಂಬ ಬ್ರಾಹ್ಮಣ ದಂಪತಿಗಳಾಗಿ ದ್ದಿರಿ. ಆಗ್ಗೆ ತಪಶ್ಚರ್ಯದಿಂದ ನನ್ನನ್ನು ಮೆಚ್ಚಿಸಿ, ಮೂರು ಜನ್ಮದಲ್ಲಿ ನಾನೇ ಮಗನಾಗಬೇಕೆಂದು ಅಪೇಕ್ಷಿಸಿದಿರಿ. ಅ ಮೇರೆಗೆ ಆ ಜನ್ಮದಲ್ಲಿ ಪ್ರಶ್ನಿ ಸುತನೆಂದೂ, ಎರಡನೇಯದಾದ ಅದಿತಿ ಕಶ್ಯಪರ ಜನ್ಮದಲ್ಲಿ ಉಪೇಂದ್ರನೆಂದೂ ನಿಮ್ಮಲ್ಲಿ ಜನಿಸಿ ದೆನು. ಮೂರನೇ ಈ ಜನ್ಮದಲ್ಲಿಯೂ ನಿಮಗೆ ಮಗನಾಗಿ ಹುಟ್ಟಿರುವೆ. ರಕ್ಷಣೆಗಾಗಿ ನೀವು ಭಯಪಡುವ ಕಾರಣವಿಲ್ಲ ಯಮುನೆಯ ಆಚೆಗಿರುವ ಗೋಕುಲದಲ್ಲಿ ನಂದಗೋಪನೆಂಬ ನಿನ್ನ ಮಿತ್ರನು ಇರುವನು. ಅವನ ಹೆಂಡತಿಯೂ ನನ್ನ ಮಾಯಾಶಕ್ತಿಯಾದ ದುರ್ಗೆಯನ್ನು ಇದೀಗ ಹೆರೆಯುವಳು ಶಿಶುವಾದ ನನ್ನನ್ನು, ಹೆರಿಗೆಯ ಆಯಾಸದಿಂದ ವಿಸ್ಮೃತಳಾದ ಅವಳ ಬದಿಯಲ್ಲಿಟ್ಟು, ಅವಳು ಹೆತ್ತ ದುರ್ಗೆಯನ್ನು ನೀ ತಂದರಿಸಿಕೊಳ್ಳಿರಿ. ಕಂಸನು ಅದನ್ನು ಸಂಹರಿಸಲು ಮೇ ಕೈತ್ತಿದಾಗ, ಅದು ಕೊಸರಿ ಹೋಗಿ ಆಕಾಶದಲ್ಲಿ ಅದೃಶ್ಯವಾ ವದು. ನನ್ನ ಮಾಯೆಯಿಂದ ಈ ಎಲ್ಲ ಕಾರ್ಯದಲ್ಲಿ ನಿಮ ಯಾವ ವಿಘ್ನವೂ ಬರುವದಿಲ್ಲ.

ವಸುದೇವ—ದೇವಾ, ನಿನ್ನ ದರ್ಶನದಿಂದ ನಾ ಕೃತಾರ್ಥರಾದೆವು. ನಿನ್ನ ಆಜ್ಞೆಯಂತೆ ವರ್ತಿಸಲು ಸಿ

ನಿರುವೆನು. ವಿಶಸ್ವಿಯಾಗುವಂತೆ ನೆರವೇರಿಸುವ ಭಾರವು ನಿನ್ನ ಮೇಲೆಯೇ ಅಲ್ಲವೇ ?

ನಾರಾಯಣ— ವಸುದೇವನೆ ನೀನು ಯಾವುದಕ್ಕೂ ಭಯಪಡದೆ ಕಾರ್ಯದಲ್ಲಿ ಉದ್ಯುಕ್ತನಾಗು. ದುರ್ಗೆಯನ್ನು ಇಲ್ಲಿ ತಂದಿರಿಸುವ ವರೆಗೆ,ನನ್ನ ಮಾಯೆಯಿಂದ ಯಾರಿಗೂ ಎಚ್ಚರವೇ ಇರುವದಿಲ್ಲ. ಬಂದನಂತರ ಕಂಸನಿಗೆ ತಿಳಿಸಿರಿ.

ದೇವಕಿ— ದೇವಾ ಹತಭಾಗ್ಯರೂ ಕಾರಾಗೃಹ ವಾಸಿಗಳೂ ಆದ ನಮ್ಮಲ್ಲಿ ಜನಿಸಿ,ಇದೇ ನಿನಗೆ ಜನನೋತ್ಸವವೇ ?

ನಾರಾಯಣ— ಅಮ್ಮಾ ಹಾಗೆ ತಿಳಿಯಬೇಡ. ಸುಖ ದುಃಖಗಳ ಲೇಪವು ನನಗೆಲ್ಲಿದೆ.

ದೇವಕಿ— ಆಗಲಿ ದೇವಾ ! ಶಿಶುವಾಗಿ ಒಂದು ಅರಗಳಿಗೆಯಾದರೂ ನಮ್ಮಲ್ಲಿರುವ ಸುಯೋಗವನ್ನು ದಯಪಾಲಿಸಿದೆಯಲ್ಲ ! ಇದೇ ನಮ್ಮ ಭಾಗ್ಯವು.

ನಾರಾಯಣ— ನೀವು ಸರ್ವಥಾ ದುಃಖಿಸಕೂಡದು. ಕಂಸನ ವಧೆಯ ನಂತರ ನಿಮ್ಮ ಪುತ್ರವಾತ್ಸಲ್ಯವು ತೃಪ್ತಿಕರವಾಗುವದು. ವಿಲಂಬ ಮಾಡದೆ ಕಾರ್ಯದಲ್ಲಿ ಉದ್ಯುಕ್ತರಾಗಿರಿ. ನಾನು ಶಿಶುವಾಗುವೆ. (ಪರಮಾತ್ಮನು ದೇವಕಿಯ ಮುಂದೆ ಆದೇ ಹುಟ್ಟಿದ ಶಿಶುವಾಗಿ ಮಲಗುವನು, ಗರ್ಭಭಾರವು ನಿವಾರಣೆಯಾಗುವದು. ಅಪಾರ ತೇಜದಿಂದ ಬೆಳಗುವ ಆ ಶಿಶುವನ್ನು ಕಣ್ಣು ತುಂಬ ನೋಡಿ ಸಂತೋಷ ಪಡುವರು. ಮುಂದೆ ಅರಗಳಿಗೆಯಲ್ಲಿ ಕಾರಾಗೃಹದ ಬಾಗಿಲು ತೆರೆದ ಸಪ್ಪಳವಾಗುವದು.)

ದೇವಕಿ— (ಗಾಬರಿಯಿಂದ) ಯಾರೋ ಬಂದರು.

ವಸುದೇವ— (ಬಂದು ನೋಡಿ ಅತ್ಯಾಶ್ಚರ್ಯದಿಂದ) ಸಾಧ್ವೀ ಯಾರೂಬಂದಿರುವದಿಲ್ಲ.ಪರಮಾತ್ಮನ ಮಾಯೆಯಿಂದ ಬಾಗಿಲವು ತಾನೇ ತೆರೆಯಲ್ಪಟ್ಟಿದೆ. ಕಾವಲುಗಾರರೂ ಗಾಢ ನಿದ್ರೆಯಲ್ಲಿದ್ದಾರೆ. ವಿಲಂಬ ಮಾಡದೆ ಅವನ ಆಜ್ಞೆಯಂತೆ ನಾನು ಗೋಕುಲಕ್ಕೆ ಹೊರಡುವೆ.

ದೇವಕಿ— ಆಗಲಿ! ಆಗಲಿ !! ಮಧ್ಯರಾತ್ರಿಯಲ್ಲಿ ಎಳೆ ಮಗುವನ್ನು ಅನ್ಯರ ಉಡಿಯಲ್ಲಿ ಹಾಕುವ ಪ್ರಸಂಗವೇ ? ನಮ್ಮಂತಹ ದುರ್ದೈವಿಗಳು ಜಗತ್ತಿನಲ್ಲಿ ಮತ್ತೆ ಹುಟ್ಟದಿರಲಿ.

ವಸುದೇವ— ದೇವೀ ಸಮಾಧಾನವನ್ನು ಮಾಡಿಕೋ ಪರಮಾತ್ಮನ ಸಂಕಲ್ಪದಂತೆ ಸರ್ವವೂ ಜರಗಲೇ ಬೇಕಲ್ಲ !

ದೇವಕಿ—ಎಲ್ಲವೂ ನಮ್ಮ ಕಲ್ಯಾಣಕ್ಕೆಂದೇ ತಿಳಿದಿರುವೆ. ಹಾದಿಯಲ್ಲಿ ಯಮುನೆಯನ್ನು ದಾಟುವಾಗ್ಯೆ ಬಲು ಜೋಕೆ. ಇದ್ದ ಬಿದ್ದ ಅರಿವೆಗಳನ್ನು ಸುತ್ತಿರುವೆ. ಎದಿಗೆ ಅವಚಿಕೊಂಡು ಹೋಗಿರಿ. ಗಾಳಿಯು ಬಹಳವಾಗಿದೆ.

ವಸುದೇವ— ಸಾಧ್ವೀ ನೀನು ಏನೂ ಚಿಂತಿಸಬೇಡ. ನಿನ್ನ ಮಗುವನ್ನು ಸುರಕ್ಷಿತವಾಗಿ ಮುಟ್ಟಿಸಿ ಬರುವೆ. ( ಎಂದು ತೆಗೆದುಕೊಳ್ಳುವನು) ನಾನಿನ್ನು ಹೊರಡಲೇ ?

ದೇವಕಿ— (ಧಾವಿಸಿ ನಾಲ್ಕು ಹೆಜ್ಜೆಗಳನ್ನು ಬಂದು) ತಡೆಯಿರಿ. ಸ್ವಲ್ಪ ತಡೆಯಿರಿ. ಇನ್ನೊಂದು ಸಲ ಮಗುವನ್ನು ಮುದ್ದಿಟ್ಟು ಆಲಂಗಿಸುವೆ.

ವಸುದೇವ— ತೆಗೆದುಕೋ. ಈ ಸಮಯವು ಇನ್ನು ಲಭಿಸಲಾರದು. (ಪುನಃ ಕೊಡುವನು. ಮತ್ತೆ ಮುದ್ದಿಟ್ಟು ಎದೆಗವಚಿಕೊಂಡು ಪುನಃ ಮುದ್ದಿಟ್ಟು ಕೊಡುವಳು) ಇನ್ನು ಹೊರಡಲೇ ?

ದೇವಕಿ— ಆಗಲಿ, ವಿಲಂಬ ಬೇಡ. (ಬಾಗಿಲು ವರೆಗೆ ಬಂದು ನೋಡಿ) ಏನು ಪರಮಾತ್ಮನ ಮಾಯೆ ಇದು ! ಯಾರಿಗೂ ಎಚ್ಚರವೇ ಇಲ್ಲ. ತೀವ್ರ ಹೋಗಿ ಬನ್ನಿರಿ. (ಕಾಣುವ ವರೆಗೆ ನಿಂತು ನೋಡುವಳು. ವಸುದೇವ ಶ್ರೀಕೃಷ್ಣ [illegible]ದಲ್ಲಿ ಹೋಗುವನು).

— ೫ನೇ ಪ್ರವೇಶ —

ಗೋಕುಲದ ಮಾರ್ಗ

ವಸುದೇವ— ಗಾಳಿಯೊಂವೇ ಎಂದರೆ, ಸಣ್ಣ ಮಳೆಯೂ ಸುರುವಾಯಿತಲ್ಲ. ಮಗುವು ಥಂಡಿಯಲ್ಲಿ ಎಷ್ಟು ನಡುಗಬೇಕು. ಲಕ್ಷ್ಮೀ ಪತೇ !

ಕಂ॥ ದೇವಪುರ ಸೌಖ್ಯವನು ಬಿ-।
ಟ್ಟೀವಸುದೇವಂಗೆ ತನುಜನಾಗೆನ್ನೊಳು ಮ-।
ತ್ತಾವ ಸುಖ ಗಳಿಸಿದ್ಯೆ ಶ್ರೀ-।
ದೇವನೆ ನಿರ್ಭಾಗ್ಯನಾಗಲೆಂದ್ಯೆದಿದೆಯೋ ?॥

ಅಥವಾ ವೈಕುಂಠದಲ್ಲಿಯ

ಕಂ॥ ಸುಧೆ ಬೇಸರಿಟ್ಟು ಮಾತೆಯ ।
ಸುಧೆಯನ್ನೀಂಟಲ್ಕೆ ಬಂದುದಾದೊಡೆ ನಿನಗಾ ॥
ಸುಧೆಯು ಬಯಲಾಯಿತಕ್ಕಟ ।
ವಿಧಿವಶದಿಂ ಬಳೆಯಲಾದುದನ್ಯಾಂಗನೆಯೊಳ್ ॥

ಇಂಥದರಲ್ಲಿ ಯಮುನಾತಟಕವೂ ಒಂದು ಬಂದಾಯಿತು. ಮಳೆಗಾಲಕ್ಕೆ ಅವಳೂ ಕೊಬ್ಬಿದ್ದಾಳೆ. ಆಗುವದಾಗಲಿ ಪರಮಾತ್ಮನ ಕಾರ್ಯಕ್ಕೆ ಅವಳೇನೂ ವಿಘ್ನ ಮಾಡಲಿಕ್ಕಿಲ್ಲ. ಅಮ್ಮಾ ಎಮುನೆ !

ಪದ– ರಾಗ, ಯಮುನ ಕಲ್ಯಾಣ. ತಾಳ– ದಾದರಾ.

ಕೊಡು ಮಾರ್ಗವ ನೀಗ ಯಮುನೆ ।
ನಡುರಾತ್ರಿಯೊಳೈದಿದೆನಗೆ ॥ಪ॥

ಅಸುರ ಭೀತೆಯಿಂದ ಸುತನ ।
ಅಸುವ ರಕ್ಷಿಸಲ್ಕೆ ಪೋಪ ।
ಅಸಮ ದುಃಖಭಾಗಿಯಾದ ।
ವಸುದೇವನಿಗೊಲಿದು ಬೇಗ ॥ ೧ ॥

ಕಂ॥ ಎನಿತು ಕಾಠಿಣ್ಯ ಹೃದಯದ ।
ವನಿತೆಯರೆಂದಡೆಯು ಪಸುಳರಸುವಂ
ಪೊರೆವಾ ॥
ಮನವಳಿಯದೆಂಬುವಾಶ್ವಾ- ।
ಸನಮಂ ನೆರೆನಂಬಿ ಸುತನೋಡೈ
ದುವೆನೀಗ ॥

(ಪರಮಾತ್ಮನ ಪಾದಸ್ಪರ್ಶದಿಂದ ಎಮುನೆಯು ಇಳಿದು [illegible]ಾಗಿ—)

ಮ॥ವೃ॥ ಯದು ವಾಂಶೇಶ್ವರ ಧನ್ಯನೈ-ಹರಿ
ಪಿತಂ ನೀನಾದೆಲೈಯಾದವೋ-।
ದಧಿ ಚಂದ್ರಂ ನಿಜ ಶೋಢಶೋತ್ಕಾಂತೆಯಿಂ
ಪರಿಪೂರ್ಣನಾದಂ ಧರಾ ।
ವಧು ತಾಂ ನರ್ತಿಸುತಿರ್ಪಳೈ ಖಳಹರಂ
ಪುಟ್ಟಿರ್ಪನೀಗೆಂದು ಮಾ-।
ಮದಹಾರಂ ಸುತನಾಗಿರಲ್ ಭಯವಿದೇನೈ
ಮಾರ್ಗವನ್ನೀವೆನಾಂ ॥

(ಎಂದು ಅದೃಶ್ಯಳಾಗುವಳು. ನದಿಯು ಇಳಿದು ಕಾಲು ಹೊಳೆಯಾಗುವದು. ನದಿಯನ್ನು ದಾಟಿ ವಸುದೇವನು ನಂದಗೋಪನ ಮನೆಗೆ ಹೋಗಿ ಅದೇ ಹೆತ್ತ ದುರ್ಗೆಯ ಸ್ಥಳದಲ್ಲಿ ತನ್ನ ಶಿಶುವನ್ನಿಟ್ಟು ಆ ದುರ್ಗೆಯನ್ನು ತೆಗೆದುಕೊಂಡು ಪುನಃ ಕಾರಾಗೃಹಕ್ಕೆ ಬರುವನು. ಒಳಗೆ ಬಂದನಂತರ ಬಾಗಿಲು ಮುಂಚಿನಂತೆ ಮುಚ್ಚುವದು.

ವಸುದೇವ—ದೇವೀ, ಪರಮಾತ್ಮನ ಮಾಯೆಯಿಂದ ಎಲ್ಲ ಕಾರ್ಯವೂ ಸುಗಮವಾಗಿ ನೆರವೇರಿತು. ಹೆಣ್ಣುಮಗುವು ಒಳ್ಳೇ ದಪ್ಪಪುಷ್ಟವಾಗಿದೆ.

ದೇವಕಿ—ಒಳಿತಾಯಿತು (ಎತ್ತಿಕೊಳ್ಳುವಳು. ದುರ್ಗೆಯು ಅಳಹತ್ತುವಳು. ಕಾವಲುಗಾರರಿಗೆ ಎಚ್ಚರ)

ಕಾವಲುಗಾರ—ಅಮ್ಮಾ ಶಿಶುವು ಜನನವಾದಂತೆ ತೋರುತ್ತದೆಯಲ್ಲ ?

ದೇವಕಿ—ಹೌದು ಇದೀಗ ಜನನವಾಗಿದೆ, ರಾಜನಿಗೆ ತಿಳಿಸು.

ಕಾವಲುಗಾರ—(ಓಡುತ್ತ ಬಂದು) ಮಹಾಪ್ರಭೋ, ದೇವಕೀದೇವಿಯರ ಅನೇ ಗರ್ಭವು ಜನನವಾಯಿತು.

ಕಂಸ—ಹಾ ! ಮಧ್ಯರಾತ್ರಿಯ ಸಮಯ. ಈಗ ಜನನವಾಯಿತೇ ?

ಕಾವಲುಗಾರ—ಹೌದು ಇದೀಗ ಹುಟ್ಟಿದೆ. ಹೆಣ್ಣು ಶಿಶುವಂತೆ.

ಕಂಸ—ಆಗಲಿ, ಹೆಣ್ಣಾಗಲಿ, ಗಂಡಾಗಲಿ, ಈ ಕ್ಷಣದಲ್ಲಿಯೇ ಸಂಹರಿಸಿಬಿಡುವೆ. (ಎಂದು ಅತ್ಯಂತ ಸಿಟ್ಟಿನಿಂದ ಕಾರಾಗ್ರಹಕ್ಕೆ ಬಂದು) ಈ ಹೆಣ್ಣು ಶಿಶುವಿನಿಂದ ನನ್ನ ಪ್ರಾಣಹರಣವೇ? ಏನೇ ಆಗಲಿ ಸಂಹಾರಮಾಡಿಬಿಡುವೆ. (ಎಂದು ಕಾಲನ್ನು ಹಿಡಿದು ಕಲ್ಲಿಗೆ ಅಪ್ಪಳಿಸಲು ಎತ್ತುವನು, ಶಿಶುವು ಕೈಕೊಸರಿ ಮೇಲಕ್ಕೆ ಹಾರಿ, ಆಕಾಶದಲ್ಲಿ ಶಕ್ತಿರೂಪವನ್ನು ತಾಳಿ—

ಉ॥ ವೃ॥ ಛೀ, ಕಡು ಮೂಢ ಬೇಡ ಬಿಡು ಕೊಂದಿಹೆ
ನಾರ್ವರನೆಂದು ಸೊಕ್ಕಿ ಬಂ-।
ದೇಕೆ ವಿಗರ್ವದಿಂದ ಕೊಲಲೆತ್ತಿದೆ, ನಿನ್ನ ಸುಗೊಳ್ವ
ವೀರನಾ ।
ಗೋಕುಲದೋಳ್ ಪಿತೇಂದು ತೆರ ವರ್ಧಿಪ ಕೊಲ್ವೆಡೆ
ಪೋಗಿ ಬೇಗ ಭೂ-।
ಲೋಕದ ದುಃಖವನ್ನಿಯನು ನೊಂದಿಸು ನಿನ್ನ ರುಣಾಂ-
ಬುಜಾಲದಿಂ ॥

( ಎಂದು ಅದೃಶ್ಯಳಾಗುವಳು. )

ಕಂಸ—ಹಾಯ್ ಹಾಯ್ ( ಮೂರ್ಛಾಗತನಾಗುವನು. ಕ್ಷಣಹೊತ್ತಿನ ಮೇಲೆ ಮೂರ್ಛೆ ತಿಳಿದೆದ್ದು) ಆಯಿತು. ಇಲ್ಲಿಯ ವರೆಗೆ ನಾನು ಮಾಡಿದ ಪ್ರಯತ್ನವು ಗುಡ್ಡಕ್ಕೆ ಕಲ್ಲು ಹೊತ್ತಂತೆ. ವ್ಯರ್ಥವಾಗಿ ೬ ಶಿಶುಗಳ ಸಂಹಾರದ ಪಾಪವು ಮಾತ್ರ ನನ್ನ ಪಾಲಿಗೆ. ಆಗಲಿ ಉಪಾಯವೇ ಇಲ್ಲ. ದೈವೀ ಶಕ್ತಿಯ ಮುಂದೆ ನನ್ನ ಸಾಮ್ರಾಟ ಶಕ್ತಿಯು ನಡೆಯಲಾರದು. (ಎಂದು ಹೋಗುವನು).

— ೬ನೇ ಪ್ರವೇಶ —

ಸ್ಥಳ— ನಂದಗೋಪನ ಮನೆ. ಪುತ್ರೋತ್ಸವವಾಯಿತೆಂದು, ಎಲ್ಲರಿಗೂ ಭೋಜನ ದಾನಧರ್ಮಾದಿಗಳನ್ನು ಮಾಡುವನು. ಗೋಕುಲವನ್ನು ಸಿಂಗರಿಸಲು ಆಜ್ಞಾಪಿಸುವನು.

ಹನ್ನೊಂದು ದಿನಗಳು ಕಳೆಯುತ್ತಿರಲು ಹನ್ನೆರಡನೇ ದಿನ ನಾಮಕರಣೋತ್ಸವವು ನಡೆಯುವದು. ತೊಟ್ಟಿಲವನ್ನು ಸಿಂಗರಿಸಿ ಪರಮಾತ್ಮನನ್ನು ತೊಟ್ಟಿಲದಲ್ಲಿ ಹಾಕುವ ಕಾರ್ಯ ಒಳ್ಳೇ ವೈಭವದಿಂದ ನಡೆಯುವದು. ಎಲ್ಲ ಗೋಪಾಂಗನೆಯರೂ ವಿವಿಧ ಶೃಂಗಾರದಿಂದ ಕೂಡಿರುವರು ನಾರದರ ಪ್ರವೇಶ.

ನಾರದ— ಶ್ರೀನಾರಾಯಣ, ಜಯ ನಾರಾಯಣ. ಜಯ ಜಯ ನಾರಾಯಣ ನಾರಾಯಣ ॥

ನಂದಗೋಪ—ಓಹೋ, ನಾರದರ ಸವಾರಿಯು ವೇಳೆ ಸಾಧಿಸಿ ಬಂದಂತಾಯಿತು. ಬನ್ನಿ ನಾರದರೇ ! (ಆಸನವಿತ್ತು ಕುಳ್ಳಿರಿಸಿ, ನಮಸ್ಕರಿಸುವನು ಎಲ್ಲ ಸ್ತ್ರೀಯರೂ ಆನಂದಭರಿತರಾಗಿ ಚಪ್ಪಾಳೆ ಇಕ್ಕುವರು.

ನಾರದ—ಏನು ತೊಟ್ಟಿಲ ಸಮಾರಂಭವೇ?

ನಂದಗೋಪ—ಹೌದು ನಾರದರೇ, ಗಂಡುಮಗುವು ಬಹಳೇ ಚೆನ್ನಾಗಿದೆ.

ಯಶೋಧೆ—ಬನ್ನಿ ನಾರದರೇ ಮಗುವನ್ನು ನೋಡಿ ಆಶೀರ್ವದಿಸಿರಿ. ಅನಾಯಾಸವಾಗಿ ವೇಳೆಗೆ ಬಂದಿರಿ. ಮಗುವಿಗೆ ಏನು ಹೆಸರಿಡಬೇಕೆಂಬದನ್ನು ತಾವೇ ಹೇಳಿರಿ.

ನಾರದ—ಓಹೊ, ದೊಡ್ಡ ಜವಾಬದಾರಿಯನ್ನು ನನ್ನ ಮೇಲೆ ಹಾಕಿದಿರಲ್ಲ.

ಯಶೋಧೆ— ನಿಮ್ಮಂತಹರು ವೇಳೆಗೆ ಸಿಕ್ಕದ್ದು ನಮ್ಮ ಭಾಗ್ಯವೆ !

ನಾರದ—ಎಂದು ಜನನವಾಯಿತು ?

ನಂದಗೋಪ—ಶ್ರಾವಣ ಕೃಷ್ಣಾಷ್ಟಮಿಯ ಮಧ್ಯರಾತ್ರಿಗೆ.

ನಾರದ—ನಮ್ಮ ಕೈಯಲ್ಲಿ ಕೊಡುವದಿಲ್ಲವೇ ಮಗುವನ್ನು ?

ಯಶೋಧೆ—ಎಂಥ ಮಾತು ನಾರದರೇ ಕರೆದುಕೊಳ್ಳಿ (ಎಂದು ನಾರದರ ಕೈಯಲ್ಲಿ ಕೊಡುವಳು. ನಾರದರು ಪರಮಾತ್ಮನನ್ನು ಎತ್ತಿಕೊಂಡು ಕ್ರೀಯಾಡಿಸಿ,)

ನಾರದ—ಅಮ್ಮಾ ಯಶೋಧೆ ನಿನ್ನ ಪುಣ್ಯಕ್ಕೆ ಎಣೆ ಇಲ್ಲ. ಇದು ಸಾಮಾನ್ಯ ಶಿಶುವಲ್ಲ. ಸಾಕ್ಷಾತ್ ಪರಮಾತ್ಮನೇ ಲೋಕಕಲ್ಯಾಣಕ್ಕಾಗಿ, ಅವತರಿಸಿದ್ದಾನೆ. ಶ್ರಾವಣ ಕೃಷ್ಣಾಷ್ಟಮಿಯಲ್ಲಿ ಹುಟ್ಟಿರುವದರಿಂದಲೂ, ಕೃಷ್ಣವರ್ಣನಾಗಿರುವದರಿಂದಲೂ ಇವನಿಗೆ ಶ್ರೀಕೃಷ್ಣನೆಂದು ನಾಮಕರಣಮಾಡಿರಿ. ಇವನಿಂದ ನಮ್ಮ ಭಾರತದ ಉದ್ಧಾರವೇ ಆಗಬೇಕಾಗಿದೆ. ತೆಗೆದುಕೊಳ್ಳಿ ಮಗುವನ್ನು ಮುಂದಿನ ಕಾರ್ಯವು ನಡೆಯಲಿ.

ಯಶೋಧೆ—ಆಗಲಿ, ತಮ್ಮ ಆಜ್ಞೆಯಂತೆ ಶ್ರೀಕೃಷ್ಣನೆಂದು ನಾಮಕರಣ ಮಾಡುವೆವು. (ಎಂದು ತೊಟ್ಟಿಲದಲ್ಲಿ ಹಾಕಿ—ಹರಿ, ಗೋವಿಂದ, ರಾಮ, ಅಚ್ಯುತ, ಕೃಷ್ಣ (ಎಂದು ಕೂಗಿ ಜೋಗುಳ ಹಾಡುವರು.

— ಜೋಗುಳ —

ಜೋ ಜೋ ಜೋ ಜೋ ಜೋ ಕೃಷ್ಣ, ಕೃಷ್ಣ ॥
ನಂದಗೋಪಿಯ ಕಂದ ನಂದ ಮುಕ್ಕುಂದ ॥ ೧ ॥

---

## ಬಂತು ಬಾ ಓ ಗೆಳೆಯ

ಬಂತು ಬಾ ಓ ಗೆಳೆಯ
ನಮ್ಮ ನಾಡಿನ ಹಿರಿಯ
ಹಬ್ಬ ದೀಪಾವಳಿಯು
ನೋಡಿ ಮರೆಯುವ ಬಾರೊ
ಇದು ಒಂದು ದಿನ ನಾವು
ಇಹ ಕಷ್ಟ ಕಾರ್ಪಣ್ಯ
ಬದಿಗೊತ್ತಿ ನಲಿಯೋಣ
ಕಂಗಳನು ತಣಿಸುತಲಿ
ಹಬ್ಬವನು ಮಾಡೋಣ
ಮನತಣಿದು ಹಾಡೋಣ ೧

ಬಾ ಗೆಳೆಯ ಇದು ದಿಟವು
ಕಂಗಳಿಗೆ ರಸದೂಟ
ಆಗಿ ಮೆರೆಯುವ ಹಬ್ಬ
ದೀಪ್ತಿ ದೀಪಾವಳಿಯ
ಆರು ಬರಿಯದ ಒಂದು
ಹೊಸಗಬ್ಬ ಬರಿಯೋಣ
ಬದುಕು ಆಗಲಿ ಸವಿಯು
ಬಯಸುತಲಿ ಭಜಿಸೋಣ
ಭಕ್ತರಿಗು ಮಿಗಿಲಾದ
ಶಕ್ತಿಯನು ಪಡೆಯೋಣ ೨

**ಫತ್ತೇಪೂರ ಶಾಮಂಣಾ**
ಬೆಳವಣಿಕಿ

## ಹೆಣ್ಣ ಹಳಿಯ ಬೇಡಿ

ಹೆಣ್ಣು ಹೆಣ್ಣೆಂದು ಮೂಗೇಕೆ ಮುರಿಯುವಿರಿ
ಹೆಣ್ಣಿನಿಂದಲ್ಲವೇ ನಮ್ಮೆಲ್ಲವರ ಜನನ
ಹೆಣ್ಣ ಬಾಳುವೆಯು ಕಣ್ತೆರದು ನೋಡಿದರೆ
ಉಕ್ಕಿ ಬರುವದು ಮನತುಂಬಿ ಕರುಣ

ಜನನಿ ಜನಕರ ಬಂಧ ಪತಿಸುತರ ಬಂಧ
ಜನುಮದೊಳಗವಳಿಗಿಲ್ಲ ಸ್ವಾತಂತ್ರ
ಬಂಧ ಜೀವನದಲ್ಲೆ ಅಂದಗಾಣಿಸಿದ ಹೆಣ್ಣು
ಮಾಡುವುದು, ಆಡುವುದು ಎಲ್ಲವೂ ಚೆಂದ

ಮೊಲೆ ಇತ್ತು ಹಾಲು ನೀರನು ಎರೆದು
ಬಾಲ್ಯದಲಿ ಅಕ್ಕರದ ಅಕ್ಷರವ ನೊರೆದು
ಲಾಲಿ ಪದವನು ಹಾಡಿ ಜೋಗುಳವ ತೂಗುವಾ
ನಾರಿ ಹೃದಯದಲಿಲ್ಲ ಎಳ್ಳನಿತು ಕಲ್ಲೂ

ತೊಡಗಿದಾ ಕಾರ್ಯಕೆ ಮಂಗಲವುಚೆಂದ
ಹೂವಿರುವ ಹೂದೋಟ ಚೆಂದ
ನೀಲಿಯಾಗಸಕೆ ಚೆಲುವ ಚೆಂದಿರ ಚೆಂದ
ಗಂಡು ಲೋಕಕೆ ಹೆಣ್ಣು ಚೆಂದವೊ ಚೆಂದ

ಹೆಣ್ಣು ಹೆತ್ತವರನ್ನು ಹಳಿಯಬೇಡಿ
ಹೆಣ್ಣಿಂದ ಕುಲವೆಂದು ಮರೆಯ ಬೇಡಿ
ಕಾಮ ಕಣ್ಣಿನಲವರ ನೋಡ ಬೇಡಿ
ನೊಂದೀತು ಹೆಣ್ಣು ಕೊಟ್ಟೀತು ಶಾಪ.

**ವರದಾಂಬಿಕಾ ಉಳಿಗೆರಿ**

# ಜೀವ.......ಸಾವು !

ಮಧ್ಯಾಹ್ನ: ಉರಿಬಿಸಲು!
ಸುಯ್ಯೆಂಬ ನಿಡುಸುಯಿಲು
ಗಾಳಿಯೂ ಕಾವೇರಿ ಪ್ರಖರಜ್ವಾಲೆಯ
ಬೆಸುಗೆ ಬೀಸುತ್ತಲಿಹುದು!
ಮನೆಯ ನೆಳಲಿಗೆ ನಿಂತು
ಸೂರ‍್ಯನುರಿನೋಟಕ್ಕೆ ದೃಷ್ಟಿ ತಾಕಿಸುತಿದ್ದೆ.
ಮೇಲಿನೋಣೆಯೊಳಿಂದ ಮರವಣಿಗೆ ಬಂದಂತೆ
ಡೊಳ್ಳಿನಬ್ಬರ ಕೇಳಿ ಬೆಚ್ಚಿ ಬಿದ್ದೆ.
ಯಾರ ಮೆರವಣಿಗೆಯಿದು?
ಓ! ಅರ್ಥವಾಯಿತು ಈಗ!
ಇಂದೆಯೇ ಮಾತಾಯಿ ದುರ್ಗವ್ವನಿಗೆ ಜಾತ್ರೆ!
ಅದಕಾಗಿ ಬಲಿಕೊಡಲು ಹೋತನೊಂದನು ಹಿಡಿದು,
ಸಿಂಗರಿಸಿ ಮೋಜಿನಲಿ ಎಳೆದೊಯ್ಯುತಿಹರದನು.
ಏನೆಂಥ ಅಟ್ಟಹಾಸ!
ಆ ಕೇಕೆ, ಆ ಕುಣಿತ, ಆ ವಾದ್ಯ,
ಪೂಜಾರಿ ತಾಳಿರುವ ಆ ರುದ್ರವೇಷ!
ನಿಷ್ಪಾಪ ಪಸುವಧೆಗೆ ಇನಿತೊಂದು ಸಂಭ್ರಮವೇ?
ಲೋಕಮಾತೆಗೆ ತನ್ನ ಕಂದನದೆ ಬಲಿಯೆ?
"ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು
ಎಲೆಹೋತೆ, ಅಳು ಕಂಡೆಯಾ,
ವೇದವನೋದಿದವರ ಮುಂದೆ ಅಳು ಕಂಡೆಯಾ,
ಶಾಸ್ತ್ರವನೋದಿದವರ ಮುಂದೆ ಆಳು ಕಂಡೆಯಾ,
ನೀನತ್ತುದಕ್ಕೆ ತಕ್ಕುದು ಮಾಡುವ ಕೂಡಲ
ಸಂಗಮದೇವ!"

ಬಸವವಾಕ್ಯವ ಮನದಿ ಸ್ಮರಿಸುತ್ತಲಿದ್ದೆ.
ಮಾನವನ ಮೌಢ್ಯಕ್ಕೆ ಮರುಕಪಡುತಿದ್ದೆ!
ಎಲ್ಲಿಂದೋ ಬಂತೊಂದು ಆಕ್ರಂದನ!
ರಣಗುಡುವ ಬಿಸಲನ್ನೆ ಜುಮ್ಮುದಟ್ಟಿಸುವಂಥ
ಸಾವು-ನೋವಿನ ಘೋರ ಕರುಣಕ್ರಂದನ!
"ಏನಾಯ್ತು? ಏನಾಯ್ತು?"
ಬೆಚ್ಚಿ ಕೇಳಿದೆ ಒಡನೆ.
ಯಾವನೋ ನಿರ್ಭಾಗ್ಯ! ಹಾವು ಕಚ್ಚಿತ್ತಂತೆ!
ತೀರಿತಿನ್ನವನಿಗೀ ಬಾಳಸಂತೆಯ ಚಿಂತೆ!

ಭಾರವಾಯಿತು ಹೃದಯ.
ನಿಡುಸುಯ್ದು ನಭದತ್ತ ತೂರಿದೆನು ದೃಷ್ಟಿ!
ಎನಿತು ವಿಚಿತ್ರವು ಸೃಷ್ಟಿ!
ನೀಲಗಗನದಲೊಂದು ಗರುಡಪಕ್ಷಿಯದೇಕೆ
ಸುತ್ತು ಹಾಕುತಲಿಹುದು?
ಯಾವ ಬೇತೋ ಅರಿದು
.... .... .... .... ....
ಏನಿದು?.... ಏನಿದು?
ಗರುಡ ಒಮ್ಮೆಲೆ ಕೆಳಗೆ!
.... .... .... .... ....
ಓ, ಮತ್ತೆ ಹಾರುತಿದೆ ಮೇಲೆ ಮೇಲೆ!
ಕಾಲಿನೊಳಗೇನಿಹುದು?
ಓ ಹಾವು!
ಅದರ ಪಂಜರದಡಿಗೆ ಸಿಕ್ಕು ನರಳಿದೆ ಹಾವು!
ಇನ್ನೇನು, ದೂರಿಲ್ಲ ಸಾವು!
ನರಳು, ನರಳೆಲೆ ಸರ್ಪ, ನಿನಗದೇ ಯೋಗ್ಯ ಶಿಕ್ಷೆ
ಅಬ್ಬ! ಎಂಥ ಜಂಭವು ಈ ಕೆಟ್ಟ ಹಕ್ಕಿಗೆ!
ತಾನೆಯೇ ಗಗನಕ್ಕೆ ಸಾಮ್ರಾಟನಾದಂತೆ
ಕಣ್ಣಿಗೆಟುಕದ ದೂರದಲ್ಲಿ ಹಾರಾಡುತಿದೆ.
ಬೇಡ, ಬೇಡೆಲೆ ಗರುಡ,
ಇದುವೆನಿತು ಚೆನ್ನಿಲ್ಲ!
ಓ ಮಾಯವಾಯಿತು ಹಕ್ಕಿ!

ತಿರುಗಿ ಬಂದೆನು ಒಳಗೆ.
ಬರುತಿದ್ದ ಹಾಗೆಯೇ ಗೋಡೆಯಲಿ ಎದುರಾಯ್ತು
ಚಿತ್ರಪಟವೊಂದು:
ಗರುಡವಾಹನನಾಗಿ ವಿಷ್ಣು ಸಾಗಿದ್ದಾನೆ.

ಎಡಗಡೆಗೆ ಶ್ರೀದೇವಿ, ಬಲಗಡೆಗೆ ಭೂದೇವಿ!
ನೋಡು ನೋಡಲೆ ಹಕ್ಕಿ ವೈನತೇಯ,
ನಿನ್ನನೂ ದಮನಿಸುವ ಸಾಮರ್ಥ್ಯವಿಲ್ಲಿಹುದು!
ನಾವೆಲ್ಲ ಆ ಬಲದ ಕೈಯ್ಯದಾಳಿಗಳು.
ಅ ಸೂತ್ರಧಾರನದೆ ಈ ಎಲ್ಲ ಚೆಲ್ಲಾಟ,
ಅದಕಾಗೆ ಈ ಎಲ್ಲ ಏಳುಬೀಳುಗಳು!
ಹೀಗೆಯೇ ಈ ಬಾಳು!
ಜೀವದಿಂದಲೆ ಬೇರೆ ಜೀವವನು ಹಿಂಡುತ್ತ
ಸಾವಲ್ಲಿ ನಡೆಸಿಹುದು ತನ್ನ ಸಾಮ್ರಾಜ್ಯ!
ಅಂತೆಯೇ ಜಗಕೊಂದು ದಿನ ಸಾವು ಸಾಯುಜ್ಯ!

**ಗಿರಡ್ಡಿ ಗೋವಿಂದರಾಜ**
**ಅಬ್ಬಿಗೇರಿ**

## ಓ ವಿಷಪೂರಿತ ಮಾರುತನೇ

ಓ ವಿಷಪೂರಿತ ಮಾರುತನೇ
ನೀನೇಕೆ ಬರುತಿಹೆ ಪಡವಲಿಲೀ
ಕರಾಳ-ಕಳಿಂಗ-ವಿಷಪೂರಿತನೇ
ಏತಕೆ ತರುತಿಹೆ ವಿಷನುವಿಧೀ ॥
ಈ ದುರ್ಗಂಧದ ಸ್ವಾರ್ಥದ ಚಿಂತೆಯಲೀ
ನೀನೋಡುತಲಿಹೆ ಮುಂದರಿಯದಲೆ,
ಶ್ಯಾಮಲ ಶೋಭಿತ ಕಂಪಿತ ದೇಶದಿ
ಕಾರವ ರಂಗನ ಮೂಡುತಿಹೇ ॥
ಆಟಂಬಾಂಬಿನ ಬಾಣವ ಪಿಡಿದೂ
ಪೋಗುತಲಿರುವನು ವಿಜ್ಞಾನಿ,
ನೂತನ ನಾಗರಿಕನು ಎಂದರಿವನು
ಮೂಢ ಮಹೋನ್ನತ ಅಜ್ಞಾನೀ ॥
ವಿಶ್ವದೊಳೊಲ್ಲೆಡೆ ರಕ್ಷಣೆ ಪಡೆಯೆ
ಸತ್ಯ ಅಹಿಂಸೆಯ ಶಬ್ದಗಳೇ
ಮಿಥ್ಯವಿದಲ್ಲವು ಅರಿಯಿರಿ ಮನುಜರ
ನಶ್ವರವೆಲ್ಲವು ಅರೆಘಳಿಗೆ ॥

**ಕೃ. ನಾರಾಯಣರಾವ್**
**ದೊಡ್ಡಬಳ್ಳಾಪುರ**

# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ, ಅಕ್ಕನ ಪೆಟ್ಟಿಗೆ ' ಗೆ ಓಲೆಗಳನ್ನು ಕಳುಹಿಸಬಹುದು; ಮತ್ತು ನೀವೇ ಬರೆದ ಸಣ್ಣ ಕತೆ, ಕವನ, ಆಟ ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ. ನೀವೇ ತೆಗೆದ ಅಂದವಾದ ಚಿತ್ರವಿದ್ದರೆ ಅದನ್ನೂ ಮುದ್ರಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು ' ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲಾ ಬರೆದು, ಪಾಕೀಟಿನಲ್ಲಿ ಹಾಕಿ, ಕಳಿಸಿಬಿಡಿ. ' ಅಕ್ಕನ ಪೆಟ್ಟಿಗೆ'ಗೆ ಈಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರುವರು. ಈ ಸಾರಿ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರದ (ಬ್ಲಾಕ) ಕಳಿಸಿದರೆ,ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದ ಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

**ಅಕ್ಕನ ಪೆಟ್ಟಿಗೆ**

**ವೀರಮಾತಾ ಕಾರ್ಯಾಲಯ,**

ವನಿತಾಸೇವಾ ಸಮಾಜ ಧಾರವಾಡ.

**ಧಾರವಾಡ.**

**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು ..........................................

ವಯಸ್ಸು ಮತ್ತು ಓದುತ್ತಿರುವ ತರಗತಿ..........................................

ಅಲ್ಪ ಪರಿಚಯ..........................................

ಪೂರ್ಣ ವಿಳಾಸ..........................................

..........................................(ಮನೆ ನಂಬರ ಸಹಿತ)..........................

೨ ಆಣೆ ಸದಸ್ಯತ್ವದ ಫೀಯನ್ನು ಕೊಟ್ಟು ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು ಇಂದಿನಿಂದ ನಾನು ಸದಸ್ಯನಾ/ಳಾಗಿದ್ದೇನೆ.

ತಾರೀಖು ಸಹಿ

# ಪುಣೆಯಲ್ಲಿ ಕನ್ನಡ ಹಾಯಸ್ಕೂಲದ
# ಅಮೋಘವಾದ ವಿಜಯ

ಲೇಖಕರು : " ಚಾಚಾ "
C/o R. S. Salimath.

ಇಂದಿಗೆ ೮-೧೦ ವರ್ಷಗಳ ಹಿಂದೆ ಪುಣೆಯಲ್ಲಿ ಕನ್ನಡ ಮಕ್ಕಳಿಗೆ ಕಲಿಯಲು ಪ್ರಾಥಮಿಕ ಶಾಲೆಯಿದ್ದರೆ ಹಾಯ ಸ್ಕೂಲವಿರಲಿಲ್ಲ. ಆದರೆ ಕನ್ನಡ ಶಿಕ್ಷಣ ಸೇವಾ ಸಮಿತಿ ಮತ್ತು ರಾಷ್ಟ್ರೀಯ ಎಜ್ಯುಕೇಶನ್ ಸೋಸಾಯಿಟಿ ಮುಂತಾದವರ ಸಹಾಯದಿಂದ ಒಂದು ಹಾಯಸ್ಕೂಲವನ್ನು ಪುಣೆಯಲ್ಲಿ ಸ್ಥಾಪಿಸಲಾಯಿತು.

ಮೊದಮೊದಲು ಹಾಯಸ್ಕೂಲದಲ್ಲಿ ಕೆಲ ಶಿಕ್ಷಕರು ಪಾರ್ಟಟಾಯಿಮ್ ಮಾಡಿ ಕೇವಲ ಸ್ವಲ್ಪ ಪಗಾರದ ಮೇಲೆ ಕನ್ನಡ ಶಾಲೆಗೆ ತಮ್ಮ ಸೇವೆಯನ್ನು ಸಲ್ಲಿಸಿದರು. ಆದರೆ ಈಗ ಎರಡು ಮೂರು ವರ್ಷಗಳಿಂದ ಗುರುಗಳು ಪೂರ್ಣವಾಗಿ ಕನ್ನಡ ಹಾಯಸ್ಕೂಲಕ್ಕೆ ತಮ್ಮ ಸೇವೆಯನ್ನೆಲ್ಲ ಮೀಸಲಾಗಿಟ್ಟರು. ಮತ್ತು ಅಂದಿನಿಂದ ಹಾಯಸ್ಕೂಲವೂ ಬೆಳೆಯುತ್ತ ಬಂದಿತು. ೩-೪ ವರ್ಷಗಳ ಹಿಂದೆಯೇ ಹಾಯಸ್ಕೂಲದ ವತಿಯಿಂದ S. S. C. ಪರೀಕ್ಷೆಗೆ ಕೆಲವು ವಿದ್ಯಾರ್ಥಿಗಳು ಕುಳಿತು ಕೀರ್ತಿಯನ್ನು ಹೊಂದಿದರು. ಆದರೆ ಅದರ ಪರಿಣಾಮ ಇನ್ನೂ ಹೊಗಳುವಂತಿರಲಿಲ್ಲ. ಕೇವಲ ಶಾಲೆ, ಶಾಲೆಗೆ ಹೆಸರಾಗಿತ್ತು.

ಆದರೆ ಹೋದವರ್ಷದ S. S. C. ಪರೀಕ್ಷೆಯ ಫಲಿತಾಂಶ ನೋಡಿದರೆ, ಕನ್ನಡಿಗರೆಲ್ಲ ಅಲ್ಲ, ಮರಾಠಿಯ ಜನರಿಂದಲೂ ಅವಾಚ್ಯ ಶಬ್ದಗಳು ಬಂದವು. ಅಲ್ಲದೇ ಕನ್ನಡ ಹಾಯಸ್ಕೂಲ ನಡೆಸದಾಗದಿದ್ದರೆ ಕಿತ್ತು ಬಿಡಿರಿ, ಎಂದು ಹೇಳಿದ್ದೂ ಆಯಿತು. ಇದರಿಂದ ಮೇಲಕ್ಕೆತ್ತುವ ಮುಖ ಯಾರಿಗೂ ಆಗಲಿಲ್ಲ. ಆದರೆ ಹಾಯಸ್ಕೂಲ ನಡೆಯುವದೂ ನಿಲ್ಲಲಿಲ್ಲ

ಈ ವರ್ಷ S. S. C. ಗೆ ಬಂದ ವಿದ್ಯಾರ್ಥಿಗಳೂ ಹೋದ ಪರೀಕ್ಷೆಯ ಪರಿಣಾಮ ಕಂಡಿದ್ದರು. ತಮ್ಮ ಶಾಲೆಗೆ ಅಪಮಾನವಾಗಿರುವದನ್ನು ಕಿವಿಯಿಂದ ಕೇಳಿದ್ದರು. ಎಲ್ಲರೂ ಒಂದಾಗಿ ಈ ವರ್ಷ ನಾವು ಆದ ಅಪಮಾನದ ಸೇಡು ತೀರಿಸಿಕೊಳ್ಳುವಾ ಎಂದು ಎಲ್ಲ ವಿದ್ಯಾರ್ಥಿಗಳು ಒಕ್ಕಟ್ಟಾಗಿ ನುಡಿದರು. ಅಲ್ಲದೇ ಹೊಸದಾಗಿ ಬಂದ ಶಿಕ್ಷಕರೂ ಅತಿ ಹುಮ್ಮಸಿನಿಂದ ಅಭ್ಯಾಸವನ್ನು ಪ್ರಾರಂಭಿಸಿದರು. ಅವರೆಲ್ಲರೂ ಹಗಲಿರಳು ಕನ್ನಡ ಶಾಲೆಗಾಗಿ ದುಡಿದರು. ಅವರ ಸೇವೆಯನ್ನು ಕಾಣಬೇಕಾಗಿದ್ದರೆ ಈ ಸಲದ S. S. C. ಪರಿಣಾಮವನ್ನು ನೋಡಬೆಕು. ಅದರಲ್ಲಿಯಂತೂ ಮೊದಲಿನ ಗುರುಗಳಾದ ಶ್ರೀಯುತ ಕುಂದಣಗಾರರು ಬಹು ಕಷ್ಟಪಟ್ಟು ಈ ವರ್ಷ ಕನ್ನಡ ಶಾಲೆಯನ್ನು ಮುಂದಕ್ಕೆ ತಂದರು. ಆದರೆ ಎಲ್ಲ ಗುರುಗಳೂ ತಮ್ಮ ಶಕ್ತಿಕ್ಕಿಂತ ಮೀರಿ ಹೆಚ್ಚು ಸೇವೆಯನ್ನು ಸಲ್ಲಿಸಿದರೆಂಬುದನ್ನು ಮರೆಯುವಂತಿಲ್ಲ. ಅದಕ್ಕಾಗಿ ಪುಣೆಯ ಕನ್ನಡ ಮಕ್ಕಳು ಮತ್ತು ಕನ್ನಡಿಗರು ಅವರಿಗೆ ಅಭಿನಂದನೆಗಳನ್ನು ಅರ್ಪಿಸಲೇಬೇಕು. ಆ ಶಿಕ್ಷಕರ ವೃಂದವು ಕೆಳಗಿನಂತೆ ಇದೆ.

| | | |
|---|---|---|
| ೧. ಶ್ರೀ. ಡಿ. ಪಿ. ಅತ್ರೆ | | ಮುಖ್ಯಾಧ್ಯಾಪಕರು |
| ೨. ,, | ಆರ್. ಎಸ್. ಖಳದಕರ | ಉಪ ,, |
| ೩. ,, | ಕುಂದಣಗಾರ | (ಗುರುಗಳು ಮ್ಯಾಥ್ಸ, ಸಾ.ಮತ್ತು ಫಿಜಿಕ್ಸ ಕೆಮಿಸ್ಟ್ರಿ) |
| ೪. ,, | ಮುಧೋಳಕರ | ಹಿಂದಿ ಶಿಕ್ಷಕರು |
| ೫. ,, | ಘೋರ್ಪಡೆ | ಕನ್ನಡ ಮತ್ತು ಸೊ. ಸ್ಟಡೀಜ, |
| ೬. ಶ್ರೀಮತಿ ಮುಂಗೇಕರ | | ಇಂಗ್ಲೀಷ ಮತ್ತು ಸಂಸ್ಕೃತ |

ಇನ್ನು ವಿದ್ಯಾರ್ಥಿಗಳಲ್ಲಿ ಹೆಣ್ಣುಮಕ್ಕಳು ಹಗಲಿರಳು ಅಭ್ಯಾಸ ಮಾಡಿ, ಯಶಸ್ಸನ್ನು ಪಡೆದರು. ಈ ವರ್ಷ ಶಾಲೆಯಿಂದ ೧೫ ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತು ಅದರಲ್ಲಿ ೧೦ ವಿದ್ಯಾರ್ಥಿಗಳು ಯಶಸ್ಸು ಪಡೆದರು. ಅದರಲ್ಲಿಯೂ ಕುಮಾರಿ ಸುಭದ್ರಾ ರಾವ ೮೦೦ ಗುಣಗಳ ಪೈಕಿ ೫೧೨ ಗುಣಗಳನ್ನು ಪಡೆದು ಶಾಲೆಗೆ ೧ನೇ ನಂಬರನ್ನು ಪಡೆದಳು. ಅವಳಿಗೂ ಮತ್ತು ಪಾಸಾದ ವಿದ್ಯಾರ್ಥಿಗಳಿಗೂ ಕನ್ನಡ ಶಾಲೆ ಮತ್ತು ಹಾಯಸ್ಕೂಲಿನಿಂದ ಎಲ್ಲ ವಿದ್ಯಾರ್ಥಿಗಳು ಭಕ್ತಿಪೂರ್ವಕವಾದ ಅಭಿನಂದನೆಗಳನ್ನು ಅರ್ಪಿಸಿದರು. ಇಂದಿನ S. S. C. ಪರೀಕ್ಷೆಯ ಪರಿಣಾಮ ಹೋದ ಹತ್ತು ವರ್ಷಗಳಲ್ಲಿಲ್ಲೆಂದು ಹೊಗಳುವಂತಹದ್ದಾಗಿದೆ. ಎಲ್ಲರ ಬಾಯಲ್ಲಿ ಕನ್ನಡ ಹಾಯಸ್ಕೂಲದ ಮಾತೇ ಮಾತಾಗಿದೆ. ಇಂದಿನ ಸುಖವೇ ಮುಂದೆಯೂ ತಪ್ಪದೇ ಬರಲೆಂದು ನಾವೆಲ್ಲ ಪುಣೆಯ ಕನ್ನಡಿಗರು ಹಾರೈಸೋಣ.

– ಜೈ ಹಿಂದ –

# ಕಾಬೂಲಿವಾಲಾ [ ಕತೆ ]

ಮೂಲ ಲೇಖಕರು:— ಡಾ. ರವೀಂದ್ರನಾಥ ಠಾಕೂರ.
ಅನುವಾದಕರು— ಎಮ್. ಆರ್. ಗುರವ.

ನನ್ನ ಐದು ವರುಷದ ಮುನ್ನಿಯು ಒಂದು ಗಳಿಗೆ ಯಾದರೂ ಸುಮ್ಮನೆ ಇರುವದಿಲ್ಲ. ಒಂದು ದಿನ ಮುಂಜಾನೆ ನಾನು ನನ್ನ ಉಪನ್ಯಾಸದ ಹದಿನೇಳನೆಯ ಪರಿಚ್ಛೇದವನ್ನು ಬರೆಯಲು ಪ್ರಾರಂಭಿಸಿದ್ದೆನು. ಇದೇ ವೇಳೆಯಲ್ಲಿ ಮುನ್ನಿಯು ಬಂದು ಹೇಳಿದಳು—"ಬಾಪೂಜಿ ಸುಬೋಧ (ನೌಕರ)ನು ಕಾಗೆಗೆ ಕಾಕ ಅನ್ನುತ್ತಾನೆ". ಅವನಿಗೇನು ತಿಳಿಯುವದಿಲ್ಲ. ಮತ್ತು ಇನ್ನೊಬ್ಬ ನೌಕರನು ಹೀಗೆ ಹೇಳುತ್ತಾನೆ—"ಆಕಾಶದಲ್ಲಿ ಆನೆಗಳು ತಮ್ಮ ಸೊಂಡಿಲುಗಳಿಂದ ನೀರನ್ನು ಸುರುವವು." ಆವನು ಇಂಥಾ ಸುಳ್ಳು ಮಾತುಗಳನ್ನು ಬಡಬಡಿಸುವನು.

ನಗುತ್ತ ನಾನು ಹೇಳಿದೆನು—" ಮುನ್ನೀ, ನೀನು ಆತನ ಸಂಗಡ ಆಡು. ನನಗೆ ಈಗ ಕೆಲಸವಿದೆ. ಸುಳ್ಳೇ ತ್ರಾಸು ಕೊಡಬೇಡ.

ನನ್ನ ಮನೆಯು ದಾರಿಯ ದಂಡೆಗಿತ್ತು. ಮುನ್ನಿಯು ಒಮ್ಮೆಲೇ ಓಡುತ್ತ ಪಡಸಾಲೆಗೆ ಹೋದಳು. "ಓ ಕಾಬೂಲಿ, ಓ ಕಾಬೂಲಿ" ಅನ್ನುತ್ತ ಕೂಗಿದಳು.

ಹೊಲಸು, ಢೀಲಾದ, ದಪ್ಪವಾದ ಅರಿವೆಯ ಅಂಗಿಯನ್ನು ಧರಿಸಿ, ರೂಮಾಲು ಧರಿಸಿ, ಹೆಗಲ ಮೇಲೆ ಮಿಠಾಯಿಯ ಜೋಳಿಗೆ ಹಾಕಿದ, ಕೈಯಲ್ಲಿ ೩-೪ ದ್ರಾಕ್ಷಿಯ ಡಬ್ಬಿಗಳನ್ನು ಹಿಡಿದ, ಎತ್ತರವಾದ ಆಳು, ಸಾವಕಾಶವಾಗಿ ನಡೆಯುವ ಕಾಬೂಲಿಯು ದಾರಿಯಿಂದ ಹೋಗುತ್ತಿದ್ದನು.

ಮುನ್ನಿಯ ಒದರುವಿಕೆಯಿಂದ ನಗುಮುಖದ ಕಾಬೂಲಿಯು ಹಿಂತಿರುಗಿ ನೋಡಿದನು. ಅದರಂತೆಯೇ ಮುನ್ನಿಯ ಭಾವನೆಯು ಬದಲಾಯಿಸಿತು. ಆ ಕಾಬೂಲಿಯು ತಲೆಬಾಗಿಲಿಗೆ ಬರುವದನ್ನು ನೋಡಿ ಗಾಬರಿಯಿಂದ ಒಳಗ ಓಡಿದಳು. ತಾಯಿಯು ಆಕೆಯನ್ನು ಅಂಜಿಸಿದ್ದಳು. " ನೀನು ಹೊರಗೆ ಹೋದರೆ ಆತನು ನಿನ್ನನ್ನು ತನ್ನ ಜೋಳಿಗೆಯಲ್ಲಿ ಹಾಕಿಕೊಂಡು ಹೋಗುತ್ತಾನೆ" ನಾನು ಮುನ್ನಿಯ ವಿನಾಕಾರಣ ಭಯವನ್ನು ದೂರಮಾಡಿಸುವ ಸಲುವಾಗಿ ಕಾಬೂಲಿಯನ್ನು ಒಳಕ್ಕೆ ಕರೆದನು. ಅವನು ಒಳಗೆ ಬಂದು ತನ್ನ ಜೋಳಿಗೆಯಲ್ಲಿಯ ಕಿಶಮಿಶ, ಬದಾಮುಗಳನ್ನು ತೆಗೆದು ಮುನ್ನಿಗೆ ಕೊಡಲು ಬಂದನು. ಆದರೆ ಅವಳು ತೆಗೆದುಕೊಳ್ಳಲು ತಯಾರಾಗಲಿಲ್ಲ. ಅವಳ ಸಂದೇಹವು ಮತ್ತಿಷ್ಟು ಹೆಚ್ಚಾಯಿತು. ಅವಳು ನನಗೆ ತಕ್ಕೆಬಿದ್ದಳು. ಈ ಪ್ರಕಾರವಾಗಿ ಆ ಪರದೇಶಿಯ ಮೊದಲ ಪರಿಚಯವಾಯಿತು.

ಒಂದು ದಿನ ನಾನು ಮನೆಯಿಂದ ಹೊರಬಿದ್ದೆನು. ಬಾಗಿಲದಲ್ಲಿ ಮುನ್ನಿಯು ಆನಂದದಿಂದ ಕಾಬೂಲಿಯ ಸಂಗಡ ಆಡುತ್ತಿದ್ದಳು. ಆತನು ಚಿಕ್ಕಮಕ್ಕಳ ಮೇಲೆ ಪ್ರೀತಿಯವನು. ಅವಳು ಆತನಿಂದ ಬದಾಮು, ಕಿಶಮಿಶಗಳನ್ನು ಇಸಿದುಕೊಂಡು ತಿನ್ನುತ್ತಿದ್ದಳು. ನಾನು ಕಾಬೂಲಿಗೆ ಅಂದೆನು—"ಅವಳಿಗೆ ಇವೆಲ್ಲವನ್ನು ಏಕೆ ಕೊಟ್ಟೆ? ಈಗ ಕೊಡಬೇಡ." ಕಿಸೆಯಿಂದ ಎಂಟಾಣೆಯನ್ನು ತೆಗೆದು ಅವನಿಗೆ ಕೊಟ್ಟೆನು. ಅವನು ಯಾವ ಸಂಕೋಚವಿಲ್ಲದೆ ಆ ಎಂಟಾಣೆಯನ್ನು ತನ್ನ ಕಿಶೆಯಲ್ಲಿ ಇಟ್ಟುಕೊಂಡನು. ಕೆಲಸದಿಂದ ಹಿಂತಿರುಗಿ ಮನೆಗೆ ಬಂದೆನು. ಮನೆಯಲ್ಲಿ ಆ ಎಂಟಾಣೆಯ ಸಲುವಾಗಿ ದೊಡ್ಡ ಗದ್ದಲವೇ ಎದ್ದಿದೆ. ಅವಳ ತಾಯಿಯು ಅವಳನ್ನು ಜಬರಿಸಿ ಕೇಳುತ್ತಿದ್ದಳು— " ನೀನು ಅವನಿಂದ ಎಂಟಾಣೆಯನ್ನು ಏಕೆ ಇಸಿದುಕೊಂಡಿ? ಮುನ್ನಿಯು ಅಳುತ್ತ—"ನಾನು ಬೇಡಿಲ್ಲ, ಆತನೇ ಕೊಟ್ಟನು" ಎನ್ನುತ್ತಿದ್ದಳು.

ನಾನು ಮುನ್ನಿಯನ್ನು ಈ ವಿಪತ್ತಿನೊಳಗಿಂದ ಉಳಿಸಿಕೊಂಡು ಹೊರಗೆ ಬಂದೆನು. ಇದರಲ್ಲಿ ಏನು ಅಭ್ಯಂತರವಿಲ್ಲ. ಅವನು ದಿನಾಲು ಬಂದೇ ಬರುತ್ತಾನೆ. ಬದಾಮು, ಕಿಶಮಿಶ ಕೊಟ್ಟು ಮುನ್ನಿಯ ಕೋಮಲ ಹೃದಯವನ್ನು ತನ್ನ ವಶದಲ್ಲಿ ಮಾಡಿಕೊಂಡಿದ್ದಾನೆ. ಕಾಬೂಲಿಯ ಹೆಸರು ರಹಮತಖಾನ ಎಂದಿತ್ತು. ರಹಮತ ಮತ್ತು ಮುನ್ನಿಯ ವಯಸ್ಸಿನ ಅಂತರ ಆಕಾಶ—ಪಾತಾಳದಷ್ಟಿತ್ತು. ಈ ಇಬ್ಬರೂ ಮಿತ್ರರಲ್ಲಿ ಕೆಲವು ಪ್ರಶ್ನೋತ್ತರಗಳು ಮಾಡಲ್ಪಡುತ್ತಿದ್ದವು. ರಹಮತನು ಮುನ್ನಿಗೆ " ನೀನು, ಅತ್ತೆಮನೆಗೆ ಹೋಗುವದಿಲ್ಲವೇ ? ಎಂದು ಕೇಳುತ್ತಿದ್ದನು. ಮುನ್ನಿಗೆ ಅತ್ತೆಯ ಮನೆಯೆಂದು ಏತಕ್ಕೆ ಅನ್ನುತ್ತಾರೆ ಎಂಬುದು ಗೊತ್ತಿರಲಿಲ್ಲ. ಆದರೂ ಅವಳು ಸುಮ್ಮನಿರುತ್ತಿದ್ದಿಲ್ಲ. ತಿರುಗಿ ಕೇಳೇಬಿಡುತ್ತಿದ್ದಳು.—" ನೀನು ಹೋಗುವದಿಲ್ಲವೇ ?

ರಹಮತನು ಕಲ್ಪಿಸಿ—ನಾನು ಅತ್ತೆಯನ್ನು ಹೊಡೆ

ಯುವೆ ! ಇದನ್ನು ಕೇಳಿ ಅತ್ತೆ ಎಂಬ ಅಪರಿಚಿತ ನಾವುದ ಜೀವದ ದ್ದುರ್ಗತಿಯನ್ನು ತಿಳಿದು ನಕ್ಕುಬಿಡುತ್ತಿದ್ದಳು. ೫,-೫,-೫,-೫, ಪ್ರತಿವರುಷ ಮಾಘ ತಿಂಗಳಲ್ಲಿ ಅವನು ತನ್ನ ದೇಶಕ್ಕೆ ಹೋಗುವನು. ಈ ವೇಳೆಯಲ್ಲಿ ಆತನು ಉದ್ದರಿ ವಸೂಲ ಮಾಡಿಕೊಳ್ಳುವನು. ಒಂದು ಸಲ ಮುನ್ನಿಗೆ ಭೆಟ್ಟಿ ಕೊಟ್ಟೇ ಮುಂದೆ ಸಾಗುವನು.

ನನಗೆ ಸಾಹಿತ್ಯ ಸೇವೆಯ ಅಭಿರುಚಿ ಇತ್ತು. ನನ್ನ ಒಂದು ಹೊಸ ಪುಸ್ತಕವು ಪ್ರಿಂಟಾಗುತ್ತಲಿತ್ತು. ತಯಾರಾದ ಅದರ ಒಂದು ಪ್ರತಿಯನ್ನು ನೋಡುತ್ತ ಕುಳಿತಿದ್ದೆನು. ಇದೇ ವೇಳೆಯಲ್ಲಿ ದಾರಿಯ ಮೇಲೆ ಗದ್ದಲ ಕೇಳಿಸಿತು. ನಾನು ಒಳಗಿನಿಂದ ಎದ್ದು ಬಂದು ನೋಡಿದೆ. ಇಬ್ಬರು ಸಿಪಾಯಿಗಳು ರಹಮತನನ್ನು ಕಟ್ಟಿ ಬೇಡಿ ಹಾಕಿಕೊಂಡು ಬರುತ್ತಿದ್ದರು. ಹಿಂದೆ ಜನರು ಬೆನ್ನು ಹತ್ತಿದ್ದರು. ನಾನು ಅವರನ್ನು ವಿಚಾರಿಸಲು, ತಿಳಿದು ಬಂತು.

ಒಬ್ಬ ಪಟ್ಟೆವಾಲಾನು ರಹಮತನಿಂದ ಒಂದು ಚಾದರವನ್ನು ಕೊಂಡಿದ್ದನು. ಅದರ ಕೆಲವು ಬೆಲೆಯು ಆತನ ಮೇಲೆ ಬಾಕೀ. ಕೇಳಲು ಹೋದಾಗ ಆತನು ಕೊಡಲಿಲ್ಲ. ಕೇಳಿ, ಕೇಳಿ, ಸಿಟ್ಟು ಬಂತು. ಕೊನೆಗೆ ರಹಮತನು ಚಾಕುನನಿಂದ ಆತನಿಗೆ ಹೊಡೆದನು. ಇದರ ಸಲುವಾಗಿ ರಹಮತನಿಗೆ ೭ ವರುಷದ ಶಿಕ್ಷೆ ಆಯಿತು.

( ಮುಂದುವರೆಯುವದು. )

---

## ಚೆಲುವೇ ಗುರಿಯ ನೆಲವು

ಬೆಳಗಿನ ಸುಂದರ ಚೆಂದದ ಸೊಬಗು ।
ಬಾಳಿಗೆ ನೀಡಿತು ಅಂದದ ಮೆರಗು ॥
ಸೂರ್ಯನ ಹೊಂಗಿರಣಂಗಳು ಮೂಡಿ ।
ಸರ್ವದುಃಖವನು ದೂರಕೆ ದೂಡಿ ॥
ಗಾಳಿಯ ಜೋಗುಳ ಹಾಡನು ಕೇಳಿ ।
ಗೋಳಿನ ಬಾಳದು ಮರೆಯಿತು ನೋಡಿ ॥
ಹಕ್ಕಿಯ ಚಿಲಿಪಿಲಿ ಸಪ್ಪುಳ ನೆಕ್ಕಿ ।
ಪಕ್ಕವ ಪಡೆಯಿತು ಆಶೆಯ ಪಕ್ಕಿ ॥
ಪೂಗಳು ಪರಿಮಳ ಬೀರುವ ಮುನ್ನ ।
ಆಕಾಂಕ್ಷೆಯ ಅಲರರಳಿತು ಎನ್ನ ॥
ಅಂದದಿ ಹರಿಯುವ ನದಿಯನು ನೋಡಿ ।
ಸುಂದರ ದಾರಿಯ ಮನವದು ತೋಡಿ ॥
ಕೊಳದಲಿ ಕುಲುಕುಲು ನಗುವತಾ ಕಮಲ ।
ಬಾಳಿಗೆ ಧೈರ್ಯದ ಬೆಂಬಲ ವಿಮಲ ॥
ಸುಖವನು ನೀಡುವ ಪಿಕಗಳ ಚೆಲವು ।
ಶುಕಗಳ ಪುಕಿಲನು ನುಡಿಸಿತು ಮನವು ॥

ಬೆಳಗಿನ ಸುಂದರ
ಚೆಂದದ ಸೊಬಗು ।
ಬಾಳಿಗೆ ನೀಡಿತು ।
ಅಂದದ ಮೆರಗು ॥

# ಜನ ಸೇವೆಯ ಪ್ರತಿಫಲ

## (ಚಿಕ್ಕ ಕಥೆ)

ಲೇ— ವ್ಹಿ. ಆರ್. ಅಡಿಕಿ.

ರಂಗಣ್ಣ ಬಡವ ಆದರೆ ಒಳ್ಳೆಯವ. ಎಲ್ಲರಿಗೂ ಬೇಕಾದವ. ಅವನ ಗುಣವನ್ನು ನೋಡಿ ಎಲ್ಲರೂ ಮೆಚ್ಚುತ್ತಿದ್ದರು. ಆದರೆ ಬಡತನವು ಇವನನ್ನು ಕಾಡುತ್ತಿತ್ತು. ಯಾರಾದರೂ ರಂಗಣ್ಣನಿಗೆ ಸ್ವಲ್ಪ ಹಣ ಕೊಡಲಿಕ್ಕೆ ಬಂದರೆ ರಂಗಣ್ಣನು ಉಪವಾಸವೇ ಇರಲಿ, ಏನೇ ಇರಲಿ " ಆ ಹಣವು ನನಗೆ ಬೇಡ. ನಾನು ನನ್ನ ದುಡಿತದಿಂದ ಬಂದದ್ದರಲ್ಲಿಯೇ ಉಣ್ಣುತ್ತೇನೆ" ಎಂದು ನಿರ್ಧಯನಾಗಿ ಹೇಳುತ್ತಿದ್ದನು. ರಂಗಣ್ಣ ಪರರ ಸಲುವಾಗಿಯೇ ದುಡಿಯುತ್ತಿದ್ದನು. ಯಾರಾದರೂ ರಂಗಣ್ಣನ ಮನೆಗೆ ಭಿಕ್ಷೆಗೆ ಬಂದರೆ ಇದ್ದದ್ದರಲ್ಲಿಯೇ ಸ್ವಲ್ಪ ಭಿಕ್ಷುಕರಿಗೆ ಕೊಟ್ಟು ಕಳಿಸುತ್ತಿದ್ದನು. ರಂಗಣ್ಣನು 'ದೇಶಸೇವೆಯೇ ಈಶ ಸೇವೆ' ಎಂದು ತಿಳಿದುಕೊಂಡು ಮುಂದೆ ನಡೆದಿದ್ದನು. ರಂಗಣ್ಣನು ತನಗೆ ಒಂದು ಸಲವಾದರೂ ಜಯ ದೊರೆಯಬಹುದು ಎಂದು ಅಂದುಕೊಂಡಿದ್ದನು.

ಹೀಗೆಯೇ ಕಾಲಮಾನವು ಉರುಳುತ್ತಿತ್ತು. ರಂಗಣ್ಣನು ಅತಿ ಸಣ್ಣಾಗಿದ್ದಾನೆ. ಕಣ್ಣುಗಳು ಒಳಸೇರಿವೆ. ಹೀಗಿರುವಾಗ ಆ ಊರಿಗೆ ದೊಡ್ಡ ಬರಗಾಲ ಬಿದ್ದಿತು. ಮಳೆಯ ಒಂದು ಹನಿ ಕೂಡ ಉದುರಲಿಲ್ಲ. ಬೆಳೆಯು ಬರಲೇ ಇಲ್ಲ. ಹಸು ಕರುಗಳು ನೀರು ಆಹಾರಕ್ಕಾಗಿ ಅಲೆದು ಅಲೆದು ಪ್ರಾಣ ಬಿಟ್ಟವು. ಕೆಲವು ಜನರೂ ನೀರಿಗಾಗಿಯೇ ಪ್ರಾಣಬಿಟ್ಟರು. ಆದರೆ ರಂಗಣ್ಣ ಉಳಿದು ಬಿಟ್ಟಿದ್ದ. ದೇವರ ಪ್ರೀತಿ ಅವನ ಮೇಲೆ ಇದ್ದಿರಬಹುದು. ಈ ಬರಗಾಲದ ದೃಶ್ಯವನ್ನು ನೋಡಿ ರಂಗಣ್ಣನ ಕಣ್ಣಲ್ಲಿ ನೀರು ಉದುರಿದವು. ಹೀಗಿದ್ದರೂ ರಂಗಣ್ಣನು ದೇವರನ್ನು ಜರಿಯಲಿಲ್ಲ. ಈ ಬರಗಾಲದಿಂದ ಜನರನ್ನು ಪಾರುಮಾಡುವದು ತನ್ನ ಕರ್ತವ್ಯ ಎಂದು ತಿಳಿದುಕೊಂಡು ದೇವರನ್ನು ಪ್ರಾರ್ಥಿಸ ತೊಡಗಿದ. ಅದರೂ ಪ್ರಯೋಜನವಾಗಲಿಲ್ಲ. ಕೂಡಲೆ ಆವನಿಗೆ ಏನೋ ಯೋಚನೆ ಹೊಳೆಯಿತು. ಕೂಡಲೆ ನಗೆ ಮುಖದಿಂದ ಬೇಗ ಬೇಗನೆ ಅಡವಿ ಬೆಟ್ಟಗಳ ಕಡೆಗೆ ನಡೆದ. ಆದರೆ ಅವನ ಹೆಂಡತಿ ಹೋಗ ಬೇಡವೆಂದರೂ ಕೇಳಲಿಲ್ಲ. "ನಾನು ಜನರಿಗೆ ಸುಖವನ್ನುಂಟುಮಾಡಲು ಹೊರಟಿದ್ದೇನೆ." ಎಂದು ಕೊನೆಗೆ ಅಂದನು. ಅತಿದೂರ ನಡೆದು ಬಂದು ದೊಡ್ಡ ಬೆಟ್ಟವನ್ನು ಸೇರಿದನು. ಅಲ್ಲಿ ಒಂದು ಗುಡಿ ಕಾಣಿಸಿತು. ಒಳಗೆ ಹೋಗಿ ನೋಡಿದನು. ಅದು ಕಾಲಿಕಾದೇವಿಯ ಗುಡಿ. ಅದು ಪುರಾತನದಿಂದಲೂ ಬಂದ ಗುಡಿ. ರಂಗಣ್ಣ ಅಲ್ಲಿಯೇ ಹೊಂಡದಲ್ಲಿ ಮಿಂದು ಬಂದು, ದೇವಿಯ ಮೂರ್ತಿಯನ್ನು ತೊಳೆದು ಕೆಲವು ಹೂಗಳನ್ನು ತಂದು ದೇವಿಗೆ ಏರಿಸಿದನು. ಮತ್ತು ದೇವಿಯನ್ನು ಪರಿಪರಿಯಿಂದ ಬೇಡಿಕೊಳ್ಳತೊಡಗಿದನು. ಹಾಗೆಯೇ ದೇವಿಯನ್ನು ನೆನೆಯುತ್ತ ಪರಿವೆಯಿಲ್ಲದೆ ಕುಳಿತನು. ಹೀಗೆಯೇ ಎಷ್ಟೋ ದಿನಗಳು ಕಳೆದವು. ರಂಗಣ್ಣನು ಸ್ಥಳ ಬಿಟ್ಟು ಕದಲಲಿಲ್ಲ. ರಂಗಣ್ಣನ ದೇಹ ಕ್ಷೀಣವಾಗುತ್ತ ನಡೆಯಿತು. ಕೂಡಲೆ ಗುಡುಗು, ಮಿಂಚುಗಳಿಂದ ಮಳೆ ಸುರಿಯಿತು. ಮಳೆ ಇಲ್ಲದೆ ಭೂಮಿಯು ಸೀಳಿತ್ತು. ಕೂಡಲೆ ಮಳೆಯಿಂದ ಭೂ-ದೇವಿಯು ಕಂಗೊಳಿಸತೊಡಗಿದಳು. ಜನರೆಲ್ಲರೂ ಆನಂದಿತರಾದರು. ಮಳೆಯು ಸಾಕಷ್ಟು ಆಯಿತು. ರಂಗಣ್ಣನು ಇನ್ನೂ ಎದ್ದಿರಲಿಲ್ಲ. ಕೂಡಲೆ ದೇವಿಯು ಪ್ರತ್ಯಕ್ಷಳಾದಳು. ರಂಗಣ್ಣನನ್ನು ಎಬ್ಬಿಸಿದಳು. ರಂಗಣ್ಣನು ಆನಂದಿತನಾಗಿ ದೇವಿಯನ್ನು ಹೊಗಳಿ ಹೊಗಳಿ ಹಾಡಿದನು. ದೇವಿಯು " ಹೊರಗೆ ನೋಡು ರಂಗಣ್ಣ"

ಎಂದು ಅಂದಳು. ಕೂಡಲೆ ರಂಗಣ್ಣನು ಹೊರಗೆ ಹೋಗಿ ನೋಡಲು ತಾನು ನೋಡಿದಾಗ ಹೇಗಿತ್ತೋ ಹಾಗಿರಲಿಲ್ಲ. ಇಂದು ಭೂದೇವಿಯು ಹಸಿರು ಸೀರೆ ಯನ್ನಿಟ್ಟು ಕಂಗೊಳಿಸುತ್ತಿದ್ದಾಳೆ. ಜನರೆಲ್ಲರೂ ಸುಖ ದಿಂದ ಉಣ್ಣುತ್ತಿದ್ದಾರೆ. ಅಂದು ಸಂಕಟದಿಂದ ಆಯಾಸ ಪಟ್ಟು ಮರಣಹೊಂದಿದ ಜನರು ಇಂದು ಎದ್ದು ಕುಣಿ- ದಾಡುತ್ತಿದ್ದಾರೆ. ಇದೆಲ್ಲವನ್ನು ನೋಡಿ ರಂಗಣ್ಣನು ದೇವಿಯ ಕಾಲಿಗೆ ಬಂದು ನಮಸ್ಕರಿಸಿದನು. ಕೂಡಲೆ ಏನೋ ದೊಡ್ಡ ಸಪ್ಪಳವಾಗತೊಡಗಿತು. ಹೊರಗೆ ನೋಡಲು ಪುಷ್ಪಕವಿಮಾನವು ಬಂದಿತ್ತು. ರಂಗಣ್ಣನು ಕುಳಿತು ಕೈಲಾಸಕ್ಕೆ ಹೋದನು. ನೋಡಿದಿರಾ ಬಾಲ ಕರೆ, ದೇವರು ಸಜ್ಜನರಿಗೆ ಒಮ್ಮಿಲ್ಲೊಮ್ಮೆ ಸುಖವನ್ನು ಕೊಟ್ಟೇಕೊಡುವನು.

---

# ಮನಗಟ್ಟಿಯಾದೊಡೆ ಮಾಧವನ ಗುಡಿ

ಬರೆದವರು— **ಭೀಮಕ್ಕಾ ದೇಶಪಾಂಡೆ**, ನವಿಲಗುಂದ.

ನಾನು "ಲೂಸಿ"ಯು ಚಿಕ್ಕಂದಿನ ಗೆಳತಿಯರು, ಲೂಸಿಗೆ ಮಾತ್ರ ಅಜ್ಜಮ್ಮನಿಂದ ಇದ್ದ ಸ್ಥಳಿಕ ಊರು, ಹೊನಗರ. ಆಕೆಯು ಎರಡು ವರುಷದವಳಿರುವಾಗ, ಅವಳ ತಾಯಿಯು ತೀರಿಹೋಗಿದ್ದಳು. ಅವಳ ತಂದೆಯು ಮತ್ತೊಂದು ಮದುವೆ ಯಾಗಿ ಅವಳಿಗೆ ತಾಯಿಯೊಂದು ಕಲ್ಪಿಸಿಕೊಟ್ಟಿದ್ದನು. ಅವ ಳಾದರೂ ಲೂಸಿಯನ್ನು ಮಗಳೆಂದೇ ಮಮತೆಯಿಂದ ಸಲುಹು ತ್ತಿದ್ದಳು. ಕೆಲವು ವರುಷ ಕಳೆದ ಮೇಲೆ, ಅವಳ ತಾಯಿಯು ಅವಳಿಜವಳಿ ಹೆಣ್ಣುಮಕ್ಕಳನ್ನು ಹೆತ್ತಳು. ಲೂಸಿಯು ಶಾಲೆ ಯಲ್ಲಿ ತನಗೆ ತಂಗಿಯರು ಹುಟ್ಟಿರುವರು ಎಂದು ಉತ್ಸಾಹ ದಿಂದ ಹೇಳತೊಡಗಿದಳು. ಆದರೆ ಅವಳ ತಾಯಿಯ ಪ್ರೇಮಾ ದರಗಳು ಕಡಿಮೆಯಾಗಿ ಬರಬರುತ್ತ ಕಠಿಣ ಶಿಕ್ಷೆ ಬರತೊಡ ಗಿತು. ಲೂಸಿಯು ಪ್ರತಿದಿನವು ಕಣ್ಣೀರು ಹಾಕಹತ್ತಿದಳು ಕನ್ನಡ ಶಾಲೆಯು ಮುಗಿಯಿತು. ತಂದೆಯು ಮದುವೆಮಾಡ ಬೇಕೆಂದು ವರ ಹುಡುಕಹತ್ತಿದರು. ಲೂಸಿಗೆ ಆಗಾಗ ನಮ್ಮ ಮನೆಗೆ ಬರುವ ರೂಢಿ ಇತ್ತು. ಹಾಗೆ ಒಂದು ದಿನ ಲೂಸಿಯೂ ನಾನು ನಮ್ಮ ಮನೆಯಲ್ಲಿ ಕುಳಿತು ಹರಟೆಹೊಡೆಯುವಾಗ, ಲೂಸಿಯೂ ನಾನೇನು ಮುಂದೆ ಸಾಲೆ ಕಲಿಯುವದಿಲ್ಲ. ನಾನು ಮದುವೆಯಾಗಿ ಈ ತಾಯಿಯ ಕಾಟದಿಂದ ಪಾರಾಗುವೆ,ಎಂದು ಹೇಳಿದಳು. ಮುಂದೆ ಕೆಲ ದಿನಗಳಲ್ಲಿ ಆಕೆಯ ಮದುವೆ ಗೊತ್ತಾಯಿತು. ಆದರೆ ವಿಧಿಸಂಕಲ್ಪ! ಅವಳ ಮನಸ್ಸನ್ನು ವೇದನೆಗೊಳಪಡಿಸಿತು. ಯಾಕಂದರೆ ನೌಕರಿ ಇಲ್ಲದ ಮಲ ತಾಯಿಯ ತಮ್ಮನಿಗೆ, ಮತ್ತು ನನಗೆ ಈ ಮನೆ ಬಿಡಲಿಲ್ಲ ಎಂದು ಮಿಡುಕಿದಳು. ಆ ದಿನ, ಲೂಸಿಯು ಹೇಳಿದ ಹಾರೈ ಕೆಯು ಗಾಳಿಗೋಪುರವು ಕುಸಿದು ಬಿತ್ತೆಂದು ಬಹಳೇ ಅತ್ತಳು. ಆದರೆ ಅದನ್ನು ಕೇಳುವವರಾರು? ಮುಂದೆ ಎಂಟು ದಿನಗಳ ಲ್ಲಿಯೇ ಅವಳ ಮದುವೆಯೂ ಆಯಿತು. ಮದುವೆಯಾದ ಮೇಲೆ ಲೂಸಿಯು ದಿನಕ್ಕೆ ಒಮ್ಮೆಯಾದರೂ ಬಂದು ತನ್ನ ಕಷ್ಟ ಹೇಳಿ ಕಣ್ಣೀರು ತೆಗೆಯದ ದಿನವಿರಲಿಲ್ಲ. ಹೀಗಿರುವಾಗ ಒಂದು ದಿನ ಲೂಸಿ ತನ್ನ ದುಃಖ ನನ್ನೆದುರು ಹೇಳಿದಾಗ ಇಬ್ಬರ ಕಣ್ಣ ಲ್ಲಿಯೂ ನೀರು ಬಂದಿದ್ದವು ಆಗ ನಮ್ಮಜ್ಜಿಯು ಬಂದು ಅಳುವದನ್ನು ಕಂಡು, ನೀವು ಸಣ್ಣವರು ಅಳಲು ನಿಮಗೇನು ಆಗಿರುವದು ಎಂದು ಕೇಳಲು, ಲೂಸಿಯು ತನಗಾಗುವ ಕಷ್ಟ ಗಳನ್ನು ಹೇಳಿ ತವರುಮನಿ ಗಂಡನ ಮನಿ ಎಲ್ಲವೂ ನನಗೆ ಒಂದೇ ಇರುವದು. ಅಜ್ಜೀ ಹುಚ್ಚರ ಬಾಳಿನಲ್ಲಿ ಸುಖವಿರು ವದು ಎನ್ನಲು, ಅಜ್ಜಿಯು "ಮನುಷ್ಯನ ಇಂದಿನ ಕಷ್ಟವು ಮುಂದಿನ ಸುಖದ ದಾರಿ" ಒಂದೊಂದು ಕಷ್ಟವು ಒಂದೊಂದು ಅನುಭವ ತಂದುಕೊಡುವ ವೇದಾಂತದ ಮೆಟ್ಟಲುಗಳಾಗಿವೆ. ಬಂದ ಗಂಡಾಂತರ ತಾಳುವದಕ್ಕಾಗಿಯೇ ಗಂಡನು ತಾಳಿಕಟ್ಟು ವನು. ಎಲ್ಲವನ್ನು ತಾಳಲೇಬೇಕು ಮುಂದೆ ಬಂದುದನ್ನು ಎದೆಗೊಟ್ಟು ನೀಗಸುವದು ನಮ್ಮ ಕರ್ತವ್ಯ. ಎಲ್ಲರ ಸೇವೆಯೇ

ದೇವರ ಪೂಜೆ ಎಂದು ಭಾವಿಸು, ಮನಸ್ಸು ಗಟ್ಟಿಯಾದೊಡೆ ಮಾಧವ ತಾನೊಲಿವಾ. ಆಗ ಸುಖ ಸಿಕ್ಕೀ ತೀರುವದು ಎಂದು ಹೇಳಿ ಆಕೆಯ ದುಃಖ ನಿಲ್ಲಿಸಿ, ಮನೆಗೆ ಕಳಿಸಿದಳು. ಮುಂದೆ ಎರಡು ಮೂರು ತಿಂಗಳಾದ ಮೇಲೆ ಲೂಸಿಯು ಮನೆಗೆ ಬಂದು ಅಜ್ಜಿಯನ್ನು ಮಾತನಾಡಿಸಿದಳು ಆಗ ಅವಳು ದಷ್ಟಪುಷ್ಟವಾಗಿ ಚೆಂದ ಕಾಣುತ್ತಿದ್ದಳು. ಅಜ್ಜಿಗೆ ಬೇಗನೆ ಅವಳ ಗುರ್ತು ಸಹ ಹತ್ತಲಿಲ್ಲ. ಸ್ವಲ್ಪ ಹೊತ್ತು ದಿಟ್ಟಿಸಿ ಅಜ್ಜಿ ಆರಾಮವಿರುವಿಯಾ, ಎನ್ನಲು ಆಕೆಯು ಅಜ್ಜೀ ನಿಮ್ಮ ದಯ, ನಿಮ್ಮ ಮಾತಿನಂತೆ ಎಲ್ಲ ಕೆಲಸ ನಾನೇ ಮಾಡುವೆನು ಆದೂ ಇದು ದೇಹದ ಕರ್ಮ ವೆಂದೊಡೆ ಆಯಾಸವೆನಿಸಲೊಲ್ಲದು. ಎಲ್ಲರೂ ಅನಿವಾರ್ಯ ದಿಂದ ದುಡಿಮೆಗಾದರು ನನ್ನನ್ನು ಪ್ರೀತಿಸುವರು. ನನ್ನ ಮನಸ್ಸಿಗೆ ಈಗ ದೇವರನ್ನು ನೆನೆಯಲು ಅವಕಾಶ ದೊರೆಯುತ್ತಿರುವದು. ಎನ್ನಲು ಅಜ್ಜಿಯು ನುಡಿದಳು. "ಮನಸ್ಸು ಇದು ಸುಖವೆಂದೊಡೆ ಸುಖ" "ಕಷ್ಟನೆಂದೊಡೆ ಕಷ್ಟ" ಹೆಣ್ಣುಮಕ್ಕಳಿಗೆ' ಬಳ್ಳಿಗೆ ಗಿಡದ ಆಧಾರದಂತೆ ಸಣ್ಣವರಿರುವಾಗ ತಾಯಿ ತಂದೆಗಳೇ ಆಧಾರ, ಪ್ರಾಯದಲ್ಲಿ ಗಂಡನೇ ಆಧಾರ ಆತನಿಂದಲೇ ಮುಕ್ತಿ. ಮುಪ್ಪಿನ ಕಾಲಕ್ಕೆ ಮಕ್ಕಳೇ ಆಧಾರ, ಹೀಗೆಲ್ಲ ಅಜ್ಜಿಯ ಕೆರಟೆ ಉಪದೇಶನಾಯಿತು. ಮುಂದೊಂದು ತಿಂಗಳಲ್ಲಿಯೇ ಲೂಸಿಯ ತಾಯಿಯು ಹಾರ್ಟಫೇಲಾಗಿ ತೀರಿಹೋದಳು. ತಂದೆಯು ತನ್ನ ದುಃಖದಲ್ಲಿ ಉಳಿದ ಮಕ್ಕಳ ಮದುವೆ ಮಾಡಿ, ತನ್ನ ನೌಕರಿಯನ್ನು ಅಳಿಯನಿಗೆ ದೊರಕಿಸಿಕೊಟ್ಟು ಸಂಸಾರದ ಹೊಣೆಯಿಂದ ನಿವೃತ್ತನಾದನು. ಆಗ ಲೂಸಿಯೇ, ಮನೆಯ ಯಜಮಾನಿಯಾದಳು. ಲೂಸಿಯು ಎಲ್ಲದಕ್ಕೂ ಮೊದಲು ಅಜ್ಜಿಯ ಉಪದೇಶ ಮರೆಯಲಿಲ್ಲ. ಮಾಧವನ ಮಂದಿರ ಕಟ್ಟಿಸಿ, ಹೆಣ್ಣುಮಕ್ಕಳಿಗೆ ಅನುಭವದ ನೀತಿಗಳನ್ನು ಹೇಳಿಸ ತೊಡಗಿದಳು. ಲೂಸಿಯು ಅಜ್ಜಿಗೆ ನೀವೆ ಎನ್ನ ಗುರುಗಳು ಎಂದು ಅವಳ ಆಶೀರ್ವಾದ ಮೇಲಿಂದ ಮೇಲೆ ಪಡೆಯಹತ್ತಿದಳು. ನನಗೆ ಆಗ ನೀವು ಉಪದೇಶಿಸದಿದ್ದರೆ ಮಂಗನಂತಿದ್ದ ಈ ಮನಸ್ಸು ಕಷ್ಟ ಎಂದು ಭಾವಿಸಿ ಭಾವಿ ಕೆರೆ ಬೀಳುತ್ತಿದ್ದೆನು. ಮನಸ್ಸು ಬಿಗಿಹಿಡಿಯಿರಿ ಎಂದು ಹೇಳಿದಿರಿ, ಮನ ಗಟ್ಟಿಯಾದೊಡೆ ಮಾಧವನೊಲಿವಾ ಎಂದಳು. ಕ್ರಿಶ್ಚನ್ನಳಾದ ಲೂಸಿಯು ಈಗ ಹಿಂದುವಾದಳು. ಈಗ ಹೊನಗರವು ದೇವರ ನಾಮದ ಹೂ ಬಿಟ್ಟು ಫಲ ಕೊಟ್ಟು ಹೊನಗರವೆಂದು ಪ್ರಸಿದ್ಧವಾಯಿತು. ಮನಸ್ಸು ಗಟ್ಟಿಯಾದೊಡೆ ಮಾಧವನೊಲಿವಾ ಎಂಬದನ್ನು ಲೂಸಿ ಅನುಭವದಿಂದ ಹೆಣ್ಣುಮಕ್ಕಳಿಗೆ ತೋರಿಸಿಕೊಟ್ಟು ತ್ಯಾಗಮೂರ್ತಿಯಾದಳು.

---

# ಆಹಾರವೂ ವ್ಯಾಯಾಮವೂ



ಪ್ರಾಯ ಹೋದಂಥವರಿಗೆ ಅನುಕೂಲವಾಗಿರುವ ಆಹಾರಗಳು ಯಾವುವೆಂದರೆ— ಅನ್ನ, ಮೃದುವಾಗಿರುವ ಹಾಗೆ ಬೇಯಿಸಿದ ರೊಟ್ಟಿ ಸುಟ್ಟು ಪೆಡಸಾಗಿರುವ ಹಾಗೆ ಮಾಡಲ್ಪಟ್ಟ ರೊಟ್ಟಿ ಮುಂತಾದವುಗಳೇ. ಹಲ್ಲುಗಳು ಬಲ ಹೀನವಾಗಿದ್ದ ಪಕ್ಷದಲ್ಲಿ ಇಂಥ ರೊಟ್ಟಿಯ ಮೇಲೆ ಬಿಸಿ ನೀರನ್ನು ಹಾಕಿ ಮೃದುವಾಗುವ ಹಾಗೆ ಮಾಡಬಹುದು ಹಣ್ಣುಗಳನ್ನು ಆಗಾಗ್ಗೆ ತಿನ್ನುತ್ತಿರಬೇಕು. ಚೆನ್ನಾಗಿ ಪಕ್ವವಾದ ಹಣ್ಣುಗಳು ಸುಲಭ ಬೆಲೆಗೆ ಸಿಕ್ಕುವಂಥಾ ಕಾಲದಲ್ಲಿ ಅವುಗಳನ್ನು ಹಾಗೆಯೇ ತಿನ್ನಬೇಕು. ಹವೆಯಲ್ಲಿಟ್ಟ ಮತ್ತು ಬೇಯಿಸಿದ ಹಣ್ಣುಗಳು ಬಹಳ ಶ್ರೇಷ್ಠವಾದವುಗಳು. ಬಹಳ ಸವಿ ಪದಾರ್ಥಗಳನ್ನೂ ಮಿಠಾಯಿಗಳನ್ನೂ ಉಪಯೋಗಿಸಬಾರದು.

ದೀರ್ಘಕಾಲ ಜೀವಿಸಬೇಕಾದರೆ ಪ್ರತಿದಿನವೂ ವ್ಯಾಯಾಮ ಮಾಡುವುದು ಪ್ರಮುಖ್ಯವಾದದ್ದು. ದೇಹವು ಒಂದು ವಿಧವಾದ ಯಂತ್ರವಾಗಿರುತ್ತದೆ, ಯಂತ್ರವನ್ನು ಉಪಯೋಗಿಸದಿದ್ದ ಪಕ್ಷದಲ್ಲಿ ಅದು ಬೇಗನೆ ತುಕ್ಕು ಹಿಡಿಯುತ್ತದೆ; ತುಕ್ಕು ಹಿಡಿದಂಥಾ ಯಂತ್ರವು ಬಹಳ ಬೇಗನೆ ಒಡೆದು ಹೋಗುತ್ತದೆಂಬ ಸಂಗತಿಯು ಎಲ್ಲರಿಗೂ ತಿಳಿದಿದೆಯಷ್ಟೆ. ವ್ಯಾಯಾಮವನ್ನು ಮಾಡದಿದ್ದರೆ ದೇಹವು ಮೊಂಡಾಗುತ್ತದೆ. ಪ್ರಾಯ ಹೋದವರು ವ್ಯಾಯಾಮ ಮಾಡದಿದ್ದರೆ ಅವರ ದೇಹವು ಮೊಂಡಾಗಿ ನಡೆಯುವುದಕ್ಕೆ ಕಾಲುಗಳೇ ಬರುವುದಿಲ್ಲ. ಬಹಳ ಕಾಲ ಬದುಕಿ ಪ್ರಸಿದ್ಧಿ ಹೊಂದಿದ ಕೆಲವರು ತಮ್ಮ ಜೀವಕಾಲವೆಲ್ಲಾ ವ್ಯಾಯಾಮ ಮಾಡುವ ಅಭ್ಯಾಸವನ್ನು ಬಿಡದೆ ಬಹಳ ವೃದ್ಧರಾದರೂ ಕೂಡ ಪ್ರತಿದಿನವೂ ಗಾಳಿಯ ಸಂಚಾರ ಮಾಡುತ್ತಿದ್ದರು.

ದೇಹ ಸ್ಥಿತಿಗಾಗಿ ವ್ಯಾಯಾಮ ಮಾಡುವುದು ಮಾತ್ರವಲ್ಲದೆ ಮನಸ್ಸಿಗೂ ಸಹ ವ್ಯಾಯಾಮವನ್ನು ಕೊಡಬೇಕು. ಪ್ರಾಯಸ್ಥರು ಹೀಗೆ ಮಾಡಿದ್ದಾದರೆ ತೀರ ವೃದ್ಧರಾದಂಥ ಕಾಲದಲ್ಲಿ ಅನೇಕರು ಮಾಡುವ ಹಾಗೆ ಮಕ್ಕಳ ಆಟವನ್ನು ಆಡುವುದಿಲ್ಲ.

ಪ್ರಾಯಹೋದಂಥಾ ಪ್ರತಿಯೊಬ್ಬನೂ ಶೀತಕ್ಕೂ ತ್ಯಾವಕ್ಕೂ ತಪ್ಪಿಸಿಕೊಳ್ಳಬೇಕು. ಚಳಿಗಾಲದಲ್ಲಿ ಯೌವನಸ್ಥರಿಗಿಂತಲೂ ವೃದ್ಧರಿಗೆ ಹೆಚ್ಚಾಗಿ ಉಡುಪುಗಳಿರಬೇಕು. ಯೌವನಸ್ಥನಿಗಿಂತಲೂ ವೃದ್ಧನಿಗೆ ಬಹಳ ಬೇಗನೆ ಶೀತವಾಗುತ್ತದೆ. ಮುದುಕರು ಆಗಾಗ್ಗೆ ಸ್ನಾನ ಮಾಡುವುದು ಅಗತ್ಯವಾಗಿರುತ್ತದೆ. ಸ್ನಾನ ಮಾಡಿದ ತರುವಾಯ ಮೈಯನ್ನು ಒಂದು ಒರಟಾದ ಬಟ್ಟೆಯಿಂದ ಚನ್ನಾಗಿ ಅಂದರೆ ಚುರುಕಾಗಿ ಒರಸಿದರೆ ಶೀತವಾಗುವ ಸಂಭವವಿರುವುದಿಲ್ಲ

( ಆಧಾರದಿಂದ )

—" ವಸಂತಿ

## ಸೂಚನೆ

* ಲೇಖನಗಳು, ಅಸ್ಪಷ್ಟ ರೀತಿಯಲ್ಲಿ ಬರೆದವು ಬರುತ್ತಿದ್ದು, ಮುದ್ರಣ ಕಾರ್ಯಕ್ಕೆ ತುಂಬಾ ತೊಂದರೆಯಾಗುತ್ತದೆ ಲೇಖಕರು ಸುಸ್ಪಷ್ಟ ರೀತಿಯಲ್ಲಿ ಬರೆದ ಲೇಖಗಳನ್ನು ಸಂಪಾದಕರ ವಿಳಾಸಕ್ಕೆ ಕಳುಹಿಸಬೇಕು.

* ಇನ್ನೂ ವರೆಗೂ ಚಂದಾ ಹಣವನ್ನು ಕಳಿಸದ ಚಂದಾ ದಾರರು ಅದಷ್ಟು ಕೂಡಲೆ ಕಾರ್ಯದರ್ಶಿ 'ವೀರಮಾತೆ' ವನಿತಾ ಸೇವಾ ಸಮಾಜ, ಧಾರವಾಡ. ಈ ವಿಳಾಸಕ್ಕೆ ಚಂದಾಹಣವನ್ನು ಕಳುಹಿಸಿಕೊಡಬೇಕು.

* ಚಂದಾದಾರರು, ತಮ್ಮ ವಿಳಾಸ ಬದಲಾದಲ್ಲಿ, ಹಾಗೆ ತಿಳಿಸಿದರೆ, 'ವೀರಮಾತೆ' ಯು ತ್ವರಿತವಾಗಿ ಮುಟ್ಟು ವಂತೆ ದಕ್ಷತೆ ವಹಿಸಲಾಗುವದು.

* ಲೇಖಕರು ಅಥವಾ ವಾಚಕರು, ಲೇಖ ಕಳಿಸುವದಾಗಲಿ ಉಳಿದ ಯಾವದೇ ಪತ್ರವ್ಯವಹಾರ ಮಾಡುವಾಗ ತಮ್ಮ ವಿಳಾಸವನ್ನು ಸ್ಪಷ್ಟ ರೀತಿಯಲ್ಲಿ ಬರೆದು ತಿಳಿಸಲು ಮರೆಯಬಾರದು.

* ಹೊಸದಾಗಿ ಚಂದಾದಾರರಾಗಬಯಸುವವರು, ಚಂದಾ ಹಣವನ್ನು ಮೊದಲು ಕೊಟ್ಟು, ಕಳಿಸಿದರೆ, ಮಾಸಿಕವನ್ನು ಅವರ ವಿಳಾಸಕ್ಕೆ ಕಳಿಸುವತ್ತ ಗಮನಿಸಲಾಗುವದು.

* ಸೋದರ, ಸೋದರಿಯರು, ಅಕ್ಕನಟ್ಟಿಗೆಯ ವಿಭಾಗ ದಲ್ಲಿ ಬರುವ ಸ್ಪರ್ಧೆಗಳಿಗೆ ಉತ್ತರಗಳನ್ನು ಪ್ರತಿತಿಂಗಳ ೧೦ ನೇ ತಾರೀಖಿನ ಒಳಗಾಗಿ ಕಳುಹಿಸಬೇಕು.

* * * * * *

ಮುದ್ರಕರು : ಶ್ರೀಯುತ ಕುಲಕರ್ಣಿ ರಾಮರಾಯರು
ಸ್ಥಳ : ವನಿತಾ ಪ್ರಿಂಟಿಂಗ ಪ್ರೆಸ್, ಧಾರವಾಡ
ಪ್ರಕಾಶಕರು : ಶ್ರೀ. ಲ. ರಂ. ಪುರಾಣಿಕ
ಸ್ಥಳ : ವನಿತಾ ಸೇವಾ ಸಮಾಜದಲ್ಲಿಯ ಕಾರ್ಯಾಲಯ, ಧಾರವಾಡ




ಸಂಪುಟ ೮ ] ಆಗಸ್ಟ ೧೯೫೯ [ ಸಂಚಿಕೆ ೩

# 'VEERAMATE' WOMEN'S VOICE

The Largest Circulated

KANNADA MONTHLY

## ಸಂಪಾದಕ ಮಂಡಲ

ಶ್ರೀಮತಿ ಸರೋಜಿನಿ ಮಹಿಷಿ M. A. LL B. ಮುಖ್ಯ ಸಂಪಾದಿಕೆಯರು.
,, ವೆಂಕಮ್ಮಾ ಕೊಯಿಮತ್ತೂರ ಸಹ ಸಂಪಾದಿಕೆಯರು.
ಶ್ರೀಯುತ ಹಳಪೇಟೆ ಚಿಂತಾಮಣಿರಾಯರು ಸದಸ್ಯರು
,, ನಾರಾಯಣ ಶರ್ಮಾ ,,
,, ಹೊನ್ನಾಪುರಮಠ ಚಂ. ಗ. B.A.,LL.B. ,,
,, ಬಿ. ಎಸ್. ಮಾವಿನಕುರ್ವೆ ಅಡ್ವೋಕೇಟ, ಸರಕಾರಿ ವಕೀಲರು ಕಾರವಾರ ,,

## ಕಾರ್ಯ ನಿರ್ವಾಹಕ ಮಂಡಲ

ಶ್ರೀಯುತ ಕುರಡಿ ನಾರಾಯಣರಾಯರು ಅಧ್ಯಕ್ಷರು
ಶ್ರೀಮತಿ ಸರೋಜಿನಿ ಮಹಿಷಿ M. A.,LL B. ಉಪಾಧ್ಯಕ್ಷರು
ಶ್ರೀಯುತ ಲ. ರಂ. ಪುರಾಣಿಕ ಕಾರ್ಯದರ್ಶಿಗಳು ಪ್ರಕಾಶಕರು, ಕೋಶಾಧ್ಯಕ್ಷರು
,, ಎಮ್. ವ್ಹಿ. ಮೆಳ್ಳೀಗಟ್ಟಿ B.A. LL. B. ಸದಸ್ಯರು
ಶ್ರೀಮತಿ ವೆಂಕಮ್ಮಾ ಕೊಯಿಮತ್ತೂರ ,,
,, ಕೃಷ್ಣಾಬಾಯಿ ಕರ್ಣಿಕ ,,

---

ರಜಿಸ್ಟ್ರೇಶನ್ ಆಫ್ ನ್ಯೂಜ ಪೇಪರ್ಸ (ಸೆಂಟ್ರಲ್) ರೂಲ್ಸ ೧೯೫೬ರ ೮ನೇ ನಿಯಮಕ್ಕೆ ಸಂಬಂಧಿಸಿದಂತೆ "ವೀರಮಾತೆ" ಮಾಸಪತ್ರಿಕೆಯ ಸ್ವಾಮಿತ್ವ ಮತ್ತು ಇತರ ವಿಷಯಗಳ ಬಾಬತ ವಿವರ:—

| | |
|---|---|
| ೧. ಪ್ರಕಾಶನ ಸ್ಥಳ— | ವನಿತಾ ಸೇವಾ ಸಮಾಜ ಧಾರವಾಡ. |
| ೨. ನಿಯಮಿತ ಕಾಲಿಕತೆ— | ಮಾಸಪತ್ರಿಕೆ |
| ೩. ಮುದ್ರಕರ ಹೆಸರು— | ರಾಮರಾವ ಕುಲಕರ್ಣಿ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವೀರಮಾತೆ ಕಾರ್ಯಾಲಯ ಧಾರವಾಡ |
| ೪. ಪ್ರಕಾಶಕರ ಹೆಸರು— | ಲ. ರಂ. ಪುರಾಣಿಕ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ — | ವನಿತಾ ಸೇವಾ ಸಮಾಜ ಧಾರವಾಡ |
| ೫. ಸಂಪಾದಕರ ಹೆಸರು — | ಸರೋಜಿನಿ ಮಹಿಷಿ ಎಮ್. ಎ. ಎಲ್‌ಎಲ್. ಬಿ. |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ಲೈನಬಝಾರ ಧಾರವಾಡ |
| ೬. ಪತ್ರಿಕಾ ಸ್ವಾಮಿತ್ವ ವಿಳಾಸ— ಮತ್ತು ಬಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ — | ಕಾರ್ಯಕಾರಿ ಮಂಡಳ ವನಿತಾ ಸೇವಾ ಸಮಾಜ ಧಾರವಾಡ |

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣಿಕನಾದ ನಾನು ಮೇಲಿನ ವಿವರಗಳಲ್ಲಿಯ ಎಲ್ಲ ವಿಷಯುಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣಿಕ.

# ಪರಿವಿಡಿ



# ನಮ್ಮ ಮಾತು



ಈಗ ನಾಲ್ಕಾರು ತಿಂಗಳುಗಳಿಂದ ವೀರಮಾತೆಯು ಯೋಗ್ಯ ವೇಳೆಗೆ ವಾಚಕರ ಕೈ ಸೇರುತ್ತಿಲ್ಲ. ಇದರಿಂದ ವಾಚಕರು, ಹೆಚ್ಚಾಗಿ ಚಂದಾದಾರರು ಸಂಚಿಕೆಯ ಕಾರ್ಯಕರ್ತರ ಬಗೆ ಅನಾದರ ತೋರಿಸುವ ಸಂಭವವಿದೆಯೆಂಬ ಮಾತು ಸತ್ಯ. ಆದರೆ ಅನೇಕ ತೊಡಕು ತೊಂದರೆ, ಆರ್ಥಿಕ ಬಿಕ್ಕಟ್ಟು, ಕಾರ್ಯಕರ್ತರ ಕೊರತೆ ಈ ಎಲ್ಲ ಕಾರಣಗಳಿಂದಲೂ, ಚಂದಾದಾರರು ವೇಳೆಗೆ ಸರಿಯಾಗಿ ತಮ್ಮ ಚಂದಾ ಹಣವನ್ನು ಕಾರ್ಯಾಲಯಕ್ಕೆ ಕಳುಹಿಸದೆ ಇರುವದರಿಂದಲೂ ನಾವೆಲ್ಲರೂ ಕೂಡಿ ಈ ಅನಿವಾರ್ಯ ಅವ್ಯವಸ್ಥೆಯ ಪರಿಣಾಮವನ್ನು ತಡೆದುಕೊಳ್ಳಲೇ ಬೇಕಾಗಿ ಬಂದಿದೆ. ದಯವಿಟ್ಟು ಚಂದಾದಾರರು ಆ ಬಗ್ಗೆ ಅನಾದರ ತೋರಿಸದೆ ಹೆಣ್ಣುಮಕ್ಕಳ ಸಂಸ್ಥೆಯಿಂದ, ಹೆಣ್ಣುಮಕ್ಕಳೇ ಹೊರಡಿಸುತ್ತಿರುವ ಈ ಸಂಚಿಕೆಯ ಬಗ್ಗೆ, ಅದರ ಕುಂದುಕೊರತೆಗಳ ಸೂಕ್ಷ್ಮ ವಿಚಾರ ಮಾಡಿ, ಸಂಚಿಕೆಯನ್ನು ಆದರದಿಂದ ಬರಮಾಡಿಕೊಳ್ಳುವಿರಾಗಿ ನಂಬಿದ್ದೇನೆ. ಹಾಗೂ ಈ ವರೆಗೂ ನಿಯಮಿತವಾಗಿ ಚಂದಾಹಣ ಕಳುಹಿಸದೆ ಇದ್ದಲ್ಲಿ, ಇನ್ನಾದರೂ ನಿಯಮಿತವಾಗಿ ಕಳುಹಿಸಿ, ಸಂಚಿಕೆಯ ಕಾರ್ಯಕ್ಕೆ ಅದರೊಂದಿಗೆ ಸಮಾಜದ ಕಾರ್ಯಕ್ಕೂ ನೆರವೀಯುವಿರಾಗಿ ಸಂಪೂರ್ಣ ನಂಬಿಗೆ ಹಾಗೂ ನೆರವೀಯಬೇಕಾಗಿ ಬಿನ್ನಹ.

## ಲೇಖಕರಿಗೆ ಸೂಚನೆ

ಲೇಖನಗಳನ್ನು ಕಳಿಸುವ ಲೇಖಕರು ದಯವಿಟ್ಟು ತಾವು ಮೂರು ನಾಲ್ಕು ಲೇಖನಗಳನ್ನಾಗಲೀ, ಕವನಗಳನ್ನಾಗಲೀ, ಕಳಿಸುವದಿದ್ದಲ್ಲಿ ಪ್ರತಿಯೊಂದನ್ನು ಬೇರೆ ಬೇರೆ ಹಾಳೆಗಳಲ್ಲೇ ಬರೆದು, ಪ್ರತಿಯೊಂದರ ಕೆಳಗೂ ತಮ್ಮ ಹೆಸರು, ಸಂಪೂರ್ಣ ವಿಳಾಸಗಳನ್ನು ಕೊಡಬೇಕು. ಒಂದೇ ಅಂತರ್ದೇಶಿ ಕವ್ಹರಿನಲ್ಲೋ ಅಥವಾ ಕಾರ್ಡಿನಲ್ಲೋ ಇಲ್ಲವೇ ಒಂದೇ ಹಾಳೆಯಲ್ಲೋ ಮೂರು ನಾಲ್ಕು ಲೇಖಗಳನ್ನು ಕಳಿಸುವದರಿಂದ ಒಂದು ಲೇಖ ಅಚ್ಚಾದೊಡನೆ ಆ ಹಾಳೆಯನ್ನು ಕಸದ ಬುಟ್ಟಿಗೆ ಹಾಕುವದರಿಂದ ಆ ಲೇಖಕರ ಉಳಿದ ಲೇಖನಗಳೂ ಅಚ್ಚಾಗದೆ ಅದೇ ಬುಟ್ಟಿಯನ್ನಾಶ್ರಯಿಸಬೇಕಾಗುವದು. ಅಚ್ಚಾಗದೆ ಉಳಿದ ಲೇಖಗಳು ತಿರುಗಿ ಬೇಕಾದಲ್ಲಿ ಬರೆದ ಪತ್ರಗಳಿಗೆ ಉತ್ತರ ಬೇಕಾದಲ್ಲಿ ಅದಕ್ಕೆ ತಗಲುವ ಅಂಚೆ ವೆಚ್ಚ ಕಳಿಸಿದರೆ ಮಾತ್ರ ಸಿಗುವದು.

# ವೀರಮಾತೆ







ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಾದ
ಕನ್ನಡ ಮಾಸಪತ್ರಿಕೆ

ಸಂಪುಟ ೮ | ಅಗಸ್ಟ ೧೯೫೯ | ಸಂಚಿಕೆ ೩



## ಸಂಪಾದಕೀಯ



ಸ್ವಾತಂತ್ರ್ಯದ ಹನ್ನೆರಡು ವರ್ಷಗಳು ವಿವಿಧ ಯೋಜನೆಗಳನ್ನು ಭಾರತದಲ್ಲಿ ತಂದಿವೆ. ಆದರೆ ಪ್ರಜೆಗಳ ಬೇಡಿಕೆಗಳು ಈ ಯೋಜನೆಗಳನ್ನು ಕೃತಿಯಲ್ಲಿಳಿಸಲು ಎಷ್ಟುಮಟ್ಟಿಗೆ ಕಾರಣವಾಗಿವೆ ಎಂಬುದನ್ನು ಮಾತ್ರ ಸ್ಪಷ್ಟವಾಗಿ ಹೇಳಲು ಬಾರದು. ಮೂರನೆಯ ಪಂಚವಾರ್ಷಿಕ ಯೋಜನೆ ರೂಪುಗೊಂಡಿತಾದರೂ, ಭಾರತದ ಮೂಲೆ ಮೂಲೆಗಳವರೆಗೆ ಸ್ವಾತಂತ್ರ್ಯದ ಪ್ರಜ್ಞೆ ಇನ್ನೂ ಮೂಡಿ ಬಂದಿಲ್ಲ. ಜನತೆಯ ಬೇಡಿಕೆಗೆ ಅನುಗುಣವಾಗಿ ಯೋಜನೆಯ ವಿವಿಧ ಭಾಗಗಳು ಕೃತಿಯಲ್ಲಿಳಿಯುವದು ಅವಶ್ಯವಾಗಿದೆ. ಯೋಜನೆ ನಮಗಾಗಿರದೆ ಸರಕಾರದವರು ಏನೋ ತಂದಿದ್ದಾರೆ, ಮಾಡಿಕೊಂಡು ಹೋಗುತ್ತಾರೆ ಎಂದರೆ, ನಮಗೆ ನಾವೇ ಮೋಸ ಮಾಡಿಕೊಂಡಂತೆ! ಇನ್ನೊಬ್ಬರನ್ನು ಮೋಸ ಮಾಡಲು ಹೋಗಿ ನಾವೇ ಮೋಸ ಹೊಂದುತ್ತೇವಲ್ಲ!

ಯೋಜನೆಗಳ ಮುಖಾಂತರವಾಗಿ ವೈಯಕ್ತಿಕ ಲಾಭವೂ ಇದೆ. ಸಾಮೂಹಿಕ ಲಾಭವೂ ಇದೆ. ಯಾವುದೇ ಒಂದು ಸಾಮೂಹಿಕ ಲಾಭ ದೊರೆಯಬೇಕಾದರೂ ಎಷ್ಟೋ ದಶಕಗಳ ವರೆಗೆ ನಾವು ಹೋರಾಡಬೇಕಾಗುತ್ತದೆ. ರಾಜಕೀಯ ಸ್ವಾತಂತ್ರ್ಯ ಸಿದ್ಧಿಯಿಂದಾಗಿ ನಮ್ಮ ಈ ಕಾರ್ಯ ಸುಗಮವಾದರೂ ಜನತೆಯ ಮನಸ್ಸಿನ ಮೇಲೆ ಇದು ಪರಿಣಾಮಕಾರಿಯಾಗಬೇಕಾದರೆ ಎಷ್ಟೋ ದಿನಗಳುರುಳಬೇಕು. ಭೌತಿಕ ದೃಷ್ಟಿಯಿಂದ ಲಾಭವೆನಿಸಿದರೂ ಅದರ ಪರಿಣಾಮವು ಜನತೆಯ ಮನಸ್ಸಿನ ಮೇಲಾಗುವದು ಅತ್ಯವಶ್ಯವಿದೆ.

ಮೂರನೆಯ ಪಂಚವಾರ್ಷಿಕ ಯೋಜನೆಯ ಪ್ರಚಾರ ನಡೆದಿದೆ. ಮೊದಲನೆಯ ಯೋಜನೆ ತಿಳಿಯುವದಕ್ಕೇ ಜನತೆಗೆ ಮೊದಲಿನ ಮೂರು ವರ್ಷಗಳು ಬೇಕಾದವು. ಆಗ ತಿಳಿದದ್ದಾದರೂ ಯೋಜನೆಯ ವಿವರಗಳಲ್ಲ. ಅದರಲ್ಲಿಯ ತಮ್ಮ ಭಾಗವಲ್ಲ. ಆದರೆ ತಿಳಿದದ್ದು ಯೋಜನೆ ಇದೆಯೆಂಬುದು ಮಾತ್ರ! ಯೋಜನೆ ಯಾವ ಕ್ಷೇತ್ರದಲ್ಲಿಲ್ಲ? ಯಾರಲ್ಲಿಲ್ಲ? ಸರಿಯಾದ ಯೋಜನೆ ಎಂಬುದಕ್ಕೆ ಪ್ರಾಧಾನ್ಯವಿದೆ. ಯೋಜನೆಯ ಪ್ರಜ್ಞೆ ಸುಶಿಕ್ಷಿತರೆನ್ನಿಸಿಕೊಂಡವರಲ್ಲಿಯೂ

ಕಾಣುತ್ತಿಲ್ಲ. ಆದರ ಬಗ್ಗೆ ಅಲಕ್ಷ್ಯ, ಅನಾಸಕ್ತಿ ಇವುಗಳೇ ಹೆಚ್ಚಾಗಿವೆ. ಸರಕಾರವು ನಮಗೆ ಯೋಜನೆಯ ಪ್ರಚಾರ ವನ್ನು ಮಾಡಲು ಆದೇಶವನ್ನಿತ್ತಿದೆಯೆಂದು ಮಾಡುತ್ತಿದ್ದೇವೆ ಎಂದರೆ ಮುಂದಿನದನ್ನು ಜನ ನಂಬುವ ಸ್ಥಿತಿಯಲ್ಲಿಲ್ಲ. ಜನತೆ ಯಲ್ಲಿ ವಿಶ್ವಾಸ ಮುಖ್ಯ! ಯೋಜನೆಯನ್ನು ಕೃತಿಯಲ್ಲಿಳಿಸು ವವರಲ್ಲಿ ಜನತೆಗೆ ವಿಶ್ವಾಸಬೇಕು! ಅಂದರೆ ಮಾತ್ರ ಯಾ ಸಾಮೂಹಿಕ ಕಾರ್ಯವಾದರೂ ಫಲಿಸೀತು!

# ಮಹಾತ್ಮರ ನುಡಿಗಳು

೧) ದೊಡ್ಡವನೆನಿಸಿಕೊಂಡವನು ಏನೇನು ಮಾಡು ತ್ತಾನೋ, ಉಳಿದವರೂ ಅದನ್ನೇ ಮಾಡುತ್ತಾರೆ. ಅವನು ಯಾವದನ್ನು ಸರಿ ಎಂದು ತಿಳಿದು ಮಾಡುತ್ತಾನೋ ಜನರೂ ಅದನ್ನೇ ಹಿಂಬಾಲಿಸುತ್ತಾರೆ.

೨) ತಿಳಿಯದವರು ಫಲದಾಸೆಯಿಂದ ಕರ್ಮವನ್ನು ಹೇಗೆ ಮಾಡುತ್ತಾರೋ ಹಾಗೆಯೇ ತಿಳಿದವರು ಜನರಿಗೆ ಮಾದರಿಯಾಗಬೇಕೆಂದು ಫಲದಾಸೆ ಇಲ್ಲದೆ ಕರ್ಮವನ್ನು ಮಾಡಬೇಕು.

೩) ತಿಳುವಳಿಕೆ ಇಲ್ಲದೆ ಕರ್ಮಫಲವನ್ನು ಬಯಸುವವರಿಗೆ ಅವರ ಬುದ್ಧಿಯನ್ನು ಬದಲು ಮಾಡಬಾರದು. ತಿಳಿದವನು ಫಲದಾಸೆ ಇಲ್ಲದೆ ಮಾಡುತ್ತ ಎಲ್ಲ ಕರ್ಮಗಳನ್ನು ಮಾಡಿಸ ಬೇಕು.

೪) ದೇಹ ಮೊದಲಾದವುಗಳನ್ನು ಎಲ್ಲ ಬಗೆಯಿಂ ದಲೂ ನಾನೆಂದು ತಪ್ಪು ತಿಳಿದುಕೊಂಡವನು ಮಾಯೆಯ ಸತ್ವ, ರಜಸ್ತಮೋ ಗುಣಗಳಿಂದಾಗುವ ಕರ್ಮಗಳನ್ನು ತನ್ನಿಂದಾಗುವವೆಂದು ತಿಳಿಯುತ್ತಾನೆ.

೫) ಗುಣಗಳ ಮತ್ತು ಕರ್ಮಗಳ ವಿಂಗಡದ ನಿಜ ವನ್ನರಿತವನು, ದೇಹೇಂದ್ರಿಯಗಳು ವಿಷಯಗಳಲ್ಲಿ ವ್ಯವಹರಿ ಸುವವೆಂದು ತಿಳಿದು, ತಾನು ಮಾಡುವವನೆಂದು ಅಭಿಮಾನ ಗೊಳ್ಳುವದಿಲ್ಲ.

ಗೀತೆ ೩ನೇ ಅಧ್ಯಾಯ ಶ್ಲೋಕ ೨೧, ೨೫, ೨೬, ೨೭, ೨೮

೬) ಯಾವಾಗಲಾದರೂ ನಿನಗೆ ಈ ಕರ್ಮ ಹೇಗೆ ಮಾಡಬೇಕು? ಈಗ ಹೇಗೆ ನಡೆದುಕೊಳ್ಳಬೇಕು? ಎಂದು ಸಂಶಯ ಬಂದರೆ, ವಿಚಾರವಂತರೂ, ಕರ್ಮ ಅಚಾರಗಳಿಂದ ಉತ್ತಮರೂ ಲೌಕಿಕ ಪ್ರಜ್ಞಾವಂತರೂ, ಅಕ್ರೂರಮತಿಗಳೂ, ಧರ್ಮದಲ್ಲಿ ಶ್ರದ್ಧೆಯುಳ್ಳವರೂ ಆದ ಬ್ರಾಹ್ಮಣರು ಆ ಕರ್ಮ ಗಳನ್ನು ಹೇಗೆ ಮಾಡುವರೋ, ಆ ಸಂದರ್ಭದಲ್ಲಿ ಹೇಗೆ ನಡೆದುಕೊಳ್ಳುವರೋ ಹಾಗೆ ಮಾಡು, ಹಾಗೆ ನಡೆ.

**ಉಪನಿಷತ್ತು.**

# ಶ್ರೀ ಗಜಾನನೋತ್ಸವ



ಲೇ:— ಶ್ರೀ. ಟಿ. ಎಸ್. ಪಾರ್ಥಸಾರತಿ B. A.
ಡಿವ್ಹಿಜಿನಲ್ ಸುಪರಿಂಟೆಂಡೆಂಟ್ ದ. ರೇಲ್ವೆ ಹುಬ್ಬಳ್ಳಿ.

ನಮ್ಮಲ್ಲಿ ಈ ಗಜಾನನೋತ್ಸವವನ್ನು ಜಾತಿ, ಮತ, ಪಂಥಗಳೆಂಬ ಭೇದವಿಲ್ಲದೆ.ವೈಷ್ಣವರೂ, ಶೈವರೂ ಮುಂತಾದ ಸರ್ವ ಹಿಂದುಗಳೂ ಆಚರಿಸುತ್ತಾರೆ. ವೈಷ್ಣವರು ಗಜಾನನನನ್ನು "ವಿಶ್ವಕ್ಸೇನ" ಎಂಬ ಹೆಸರಿನಿಂದ ಕರೆಯುತ್ತಾರೆ. ದಕ್ಷಿಣ ಹಿಂದುಸ್ತಾನದ ಪ್ರತಿಯೊಂದು ಗುಡಿಯಲ್ಲಿಯೂ ಗಣೇಶನ ಮಂದಿರವಿರುತ್ತದೆ. ಕೆಲವೊಂದು ಗುಡಿಯಲ್ಲಂತೂ ಗಣಪತಿಯ ಅನೇಕ ವಿಗ್ರಹಗಳಿರುತ್ತವೆ.

ತಿರುವಾರೂರಿನಲ್ಲಿರುವ ತ್ಯಾಗರಾಜರ ಗುಡಿಯಲ್ಲಿ ವಾತಾಪಿಗಣಪತಿ, ಮಹಾ ಗಣಪತಿ, ಮೂಲಾಧಾರ ಗಣಪತಿ, ವಲ್ಲಭನಾಯಕ ಗಣಪತಿ, ಪಂಚಮುಖ ಗಣಪತಿ, ಸುವರ್ಣಾಕರ್ಷಣ ಗಣಪತಿ, ಇವೇ ಮೊದಲಾದ ಹೆಸರಿನ ಗಣಪತಿಗಳಿವೆ. ಚಾಲುಕ್ಯರ ಕಾಲದಲ್ಲಿ ಬಾದಾಮಿಯಲ್ಲಿ ವಾತಾಪಿ ಗಣಪತಿಯು ಪ್ರಥಮತಃ ಪೂಜಿಸಲ್ಪಟ್ಟಿತ್ತೆಂದು ಹೇಳುತ್ತಾರೆ.

ದಕ್ಷಿಣ ಹಿಂದುಸ್ತಾನದ ಎಲ್ಲ ವ್ಯವಹಾರಸ್ಥರೂ ತಮ್ಮ ಪತ್ರವ್ಯವಹಾರದ ಕಾಗದದ ಮೇಲ್ಬದಿಗೆ ಪ್ರಾರಂಭದಲ್ಲಿ 'ತ್ರ' ಅಕ್ಷರವನ್ನು ಬರೆಯುತ್ತಾರೆ. ಈ ಅಕ್ಷರವನ್ನು ಅವರು 'ಪಿಳ್ಳೈಯಾರ್ ಚುಲಿ' ಅಂದರೆ ಗಣಪತಿಯ ಚಿನ್ಹವೆಂದು ಕರೆಯುತ್ತಾರೆ. ಈ ಅಕ್ಷರವಿಲ್ಲದೆ ಯಾವದೇ ಪತ್ರ ಬರಹವು ಪ್ರಾರಂಭವಾಗುವದಿಲ್ಲ.

ಗಣಪತಿಯು ಹಿಂದೂ ಧರ್ಮದವರು ಪೂಜಿಸುತ್ತಿರುವ ಅನೇಕ ದೇವತೆಗಳಲ್ಲಿ ಓರ್ವನು. ಪ್ರತಿಯೊಂದು ಕಾರ್ಯದ ಪ್ರಾರಂಭದಲ್ಲಿಯೂ ನಾವು ಗಣಪತಿಯನ್ನು ಪೂಜಿಸಿಯೇ ಮುಂದೆ ಸಾಗುತ್ತೇವೆ. ಏಕೆಂದರೆ ಗಣಪತಿಯು ವಿಘ್ನಹರ್ತನೆಂದು ನಾವು ತಿಳಿದಿದ್ದೇವೆ. ಅಷ್ಟೇ ಅಲ್ಲದೆ ಗಣಪತಿಯು ಜ್ಞಾನದ ಅಧಿದೇವತೆಯೆಂದು ಇರುವದರಿಂದ ವಿದ್ಯಾರ್ಥಿಗಳು, ವಿದ್ಯಾಭಿಮಾನಿಗಳು ಅವನನ್ನು ಭಕ್ತಿಯಿಂದ ಆರಾಧಿಸುತ್ತಾರೆ.

ವಿಶೇಷತಃ ಭಾದ್ರಪದ ಶುಕ್ಲ ನಾಲ್ಕು ಗಣೇಶ ಚತುರ್ಥಿ ಎನಿಸಿದೆ. ಈ ದಿವಸ ವಿಶೇಷ ವಿಜೃಂಭಣೆಯಿಂದ ಮೃಣ್ಮಯ ಗಣಪತಿಯ ವಿಗ್ರಹವನ್ನಿಟ್ಟು ಪೂಜಿಸುವ ಪರಿಪಾಠವು ಇಂದು ಜನರಲ್ಲಿದೆ.

ಪ್ರತಿ ತಿಂಗಳು ಬರುವ ಸಂಕಷ್ಟಿ ವ್ರತವನ್ನು ಕೆಲವರು ಮಾಡುತ್ತಾರೆ. ಅದು ಕೂಡ ಗಣಪತಿಯ ಪೂಜಾವ್ರತವೇ.

ಗಣಪತಿಯ ವಿಗ್ರಹದ ಕಡೆಗೆ ನೋಡಿದರೆ ಅದರಲ್ಲಿ ವೈಶಿಷ್ಟ್ಯವಿದೆ. ಮನುಷ್ಯ ದೇಹಕ್ಕೆ ಆನೆಯ ತಲೆ ಇದೆ. ಹೀಗಾಗುದರ ಬಗ್ಗೆ ಸ್ಪಷ್ಟ ಕಥೆಯು ನಮಗೆ ಗೊತ್ತಿಲ್ಲ.

ಗಣಪತಿ ದೇವತೆಯ ಕಲ್ಪನೆಯು ವೇದಕಾಲದಿಂದಲೂ ನಡೆದು ಬಂದಿದೆ. ಋಗ್ವೇದದಲ್ಲಿ

"ಗಣಾನಾಂ ತ್ವಾಂ ಗಣಪತಿಂ ಆವಾಮಯೆ
ಕವಿಂ ಕವೀನಾಂ ಉಪಮಶ್ರವಸ್ತಮಮ್"

ಎಂಬ ಮಂತ್ರವಿದೆ. ಆ ಕಾಲದಲ್ಲಿ ಗಣಪತಿಯ ಬೇರೆ ಕಲ್ಪನೆ ಇರದೆ, ಬೃಹ್ಮಣಸ್ಪತಿಗೆ ಗಣಪತಿಯ ಸರ್ವ ವಿಶೇಷಣಗಳು ಅನ್ವಯಿಸುತ್ತಿದ್ದವೆಂದು ತಿಳಿಯುತ್ತದೆ.

ಅಥರ್ವ ಶೀರ್ಷದಲ್ಲಿ

"ಆದಿಭೂತಂ ಚ ಸೃಶ್ಟ್ಯಾದೌ
ಪ್ರಕೃತೇಃ ಪುರುಷಾತ್ ಪದಂ" ಎಂದರೆ ಜಗದಾರಂಭದಲ್ಲಿ ಪ್ರಕೃತಿ ಪುರುಷರಿಂದ ಈ ಶ್ರೇಷ್ಠವಾದ ಗಜಾನನನ ಸ್ವರೂಪವು ಉತ್ಪನ್ನವಾಯಿತೆಂದು ಹೇಳಲ್ಪಟ್ಟದೆ.

ನಾಲ್ಕು ಯುಗಗಳಲ್ಲಿ ಬರಬರುತ್ತಾ ಗಣಪತಿ ವಿಗ್ರಹವು ವಿವಿಧ ರೂಪಗಳನ್ನು ಹೊಂದಿದ್ದು ತಿಳಿದು ಬರುತ್ತದೆ.

ಕೃತಯುಗದಲ್ಲಿ ಹತ್ತು ಕೈಗಳುಳ್ಳ ತೇಜಸ್ವಿ ವರ್ಣದ, ಸಿಂಹವನ್ನು ವಾಹನವಾಗಿ ಉಳ್ಳ, ವಿನಾಯಕನೆಂದು ಕರೆಯಲ್ಪಟ್ಟ ವಿಗ್ರಹವನ್ನು ಪೂಜಿಸುತ್ತಿದ್ದರಂತೆ.

ತ್ರೇತಾಯುಗದಲ್ಲಿ ಆರು ಕೈಗಳುಳ್ಳ, ಚಂದ್ರನಂತೆ ಶುಭ್ರವರ್ಣ ಉಳ್ಳ, ನವಿಲನ್ನು ವಾಹನವಾಗುಳ್ಳ, ಮಯೂರೇಶ್ವರನೆಂಬ ಹೆಸರಿನ ವಿಗ್ರಹವನ್ನು ಪೂಜಿಸಿದರು.

ದ್ವಾಪರದಲ್ಲಿ ನಾಲ್ಕು ಕೈಗಳುಳ್ಳ,ಕೆಂಪು ವರ್ಣದ, ಇಲಿಯನ್ನು ವಾಹನವಾಗಿ ಉಳ್ಳ ಮೂರ್ತಿಯನ್ನು ಪೂಜಿಸಿದರು. ಅದೇ ಇಂದಿಗೂ ನಡೆದು ಬರುತ್ತಿದೆ.

ಅ+ಉ+ಮ ಈ ಮೂರು ಅಕ್ಷರಗಳಿಂದ ಕೂಡಿರುವ ಈ ಓಂಕಾರವು ಗಣಪತಿಯ ಸ್ವರೂಪವೇ ಎಂದು ಹೇಳುತ್ತಾರೆ. ಓಂಕಾರದ ಬಾಲವನ್ನು ಮೇಲೆ ಮಾಡಿ ಬರೆದರೆ ಅದು ಗಣಪತಿಯ ಆಕಾರಕ್ಕೆ ಬರುತ್ತದೆಯೆಂದು ಹೇಳಿದ್ದಾರೆ.

ಇದೇ ತತ್ವವನ್ನು ಜ್ಞಾನ ದೇವರು ತಮ್ಮ ಜ್ಞಾನೇಶ್ವರಿಯಲ್ಲಿ ಹೀಗೆ ಹೇಳಿದ್ದಾರೆ.

" ಅಕಾರ ಚರಣ ಯುಗುಳ] ಉಕಾರ ಉದರ ವಿಶಾಲ ||
ಮಕಾರ ಮಹಾಮಂಡಲ | ಮಸ್ತಕಾಕಾರ ||

ಈ ರೀತಿ ಪರಂಪರಾಗತವಾಗಿ ಬಂದ ಈ ಮಂಗಲ ಮೂರ್ತಿಯನ್ನು ನಾವು ಪೂಜಿಸುತ್ತಿದ್ದೇವೆ. ಈ ಉತ್ಸವವನ್ನು ಪ್ರತಿ ಮನೆಯಲ್ಲಿ ನಡೆಸುವದಲ್ಲದೆ, ಅದಕ್ಕೆ ಸಾರ್ವಜನಿಕ ಸ್ವರೂಪವನ್ನು ಕೊಟ್ಟಿದ್ದೇವೆ.

ಇಂತಹ ಸಾರ್ವಜನಿಕ ಉತ್ಸವಗಳು, ಆ ಗಜಾನನನ ವೈಶಿಷ್ಟ್ಯಗಳು ಕೃತಿಯಲ್ಲಿ ಇಳಿಯುವದಕ್ಕಾಗಿಯೇ ಇವೆ.

ನಾವೆಲ್ಲರೂ ಸಹನಶೀಲರಾಗಬೇಕು, ಪರೋಪಕಾರಿಗಳಾಗಬೇಕು, ಕಷ್ಟಸಹಿಷ್ಣುಗಳಾಗಬೇಕು, ಜ್ಞಾನವಂತರಾಗಬೇಕು, ಜ್ಞಾನದಾನಿಗಳಾಗಬೇಕು, ಶೂರರಾಗಬೇಕು, ನಮ್ಮಲ್ಲಿಯ ವಿಷಮತೆಗಳನ್ನು ಅರಗಿಸಿಕೊಂಡು ಸುವ್ಯವಸ್ಥಿತ ಜೀವನವನ್ನು ಸಾಗಿಸಲು ಶಕ್ತರಾಗಬೇಕು, ಈ ಎಲ್ಲ ಸಾಮರ್ಥ್ಯಗಳನ್ನು ಸಂಪಾದಿಸುವ ಯೋಗ್ಯತೆಯನ್ನು ನಮಗೆ ಇದೇ ಬರಲಿರುವ ಶ್ರೀ. ಸಿದ್ಧಿವಿನಾಯಕನು ದಯಪಾಲಿಸಲಿ.

# ಕೃಷ್ಣ ಜನ್ಮ ಎಂದರೇನು ?

ಅನು — ವೆಂ. ಕೊ.    ಮೂಲ ಲೇ— ಶ್ರೀ. ಸಾನೆ ಗುರೂಜಿ.

ಶ್ರೀಕೃಷ್ಣನ ಬಗ್ಗೆ ಈಗ ನಾನು ಬೇರೆ ದೃಷ್ಟಿಯಿಂದಲೇ ನೋಡುತ್ತಿದ್ದೇನೆ. ಗೋಕುಲದಲ್ಲಿಯ ವ್ಯವಸ್ಥೆಯನ್ನು ಸರಿಯಾಗಿ ಮಾಡುವ ಜನರಲ್ಲಿ ಪ್ರೇಮ ನಿರ್ಮಾಣ ಮಾಡುವ, ಕೊಳಲು ಬಾರಿಸುವಂಥವನು ಈಗ ನನಗೆ ಬೇರೆ ದೃಷ್ಟಿಯಲ್ಲೇ ಕಾಣಿಸುತ್ತಿದ್ದಾನೆ. ಈ ಕೃಷ್ಣನು ಈಗ ನನಗೆ ನನ್ನ ಹೃದಯದಲ್ಲೇ ಕಾಣಿಸುತ್ತಿದ್ದಾನೆ. ಗೋಕುಲದಲ್ಲಿ ಕೃಷ್ಣ ಬೆಳೆದನು. ಈ ಗೋಕುಲವು ಯಾವದು ? 'ಗೋ' ಈ ಶಬ್ದದ ಅರ್ಥವು ಆಕಳು ಎಂದಿರುವಂತೆ ಇಂದ್ರಿಯ ಎಂಬ ಅರ್ಥವೂ ಇದೆ. ಆಕಳುಗಳು ಹೇಗೆ ಹಚ್ಚ ಹಸುರು ಹುಲ್ಲಿನ ಮೋಹಕ್ಕಾಗಿ ಬಹು ದೂರದ ವರೆಗೆ ಸುತ್ತುತ್ತ ಹೋಗುತ್ತವೆಯೋ ಹಾಗೆಯೇ ಮೋಹಕ, ಆಕರ್ಷಕ ವಸ್ತುಗಳನ್ನು ಕಂಡೊಡನೆ ಈ ಇಂದ್ರಿಯಗಳೂ ಸಹ 'ಪತಂಗ'ಗಳಂತೆ ಧಾವಿಸುತ್ತವೆ! 'ಗೋಕುಲ' ಎಂದರೆ ಇಂದ್ರಿಯಗಳ ಸಮುದಾಯ (ಕುಲ=ಬಣ, ಪಂಗಡ, ಸಮುದಾಯ ಎಂಬ ಅರ್ಥದಲ್ಲಿ) ಈ ಇಂದ್ರಿಯದ ನೂರಾರು ಪ್ರವೃತ್ತಿಗಳಿರುತ್ತವೆ. ಅವುಗಳಲ್ಲಿ ಒಂದೇ ಮಾದರಿಗಳು ಇರುವದಿಲ್ಲ. ಅಂತಃಕರಣದಲ್ಲಿ ಗೊಂದಲವಿರುತ್ತದೆ, ಕಾಡ್ಕಿಚ್ಚು ಇರುತ್ತದೆ. ಅಂತಃಕರಣದ ಶುದ್ಧ ಭಾವನೆಯ ಯಮುನೆಯಲ್ಲಿ ಅಹಂಕಾರದ ಕಾಳಿಂಗಗಳಿರುತ್ತವೆ. ಮದಾಸುರ, ಬಕಾಸುರ (ದಂಭಾಸುರ) ನಿರ್ಮಾಣರಾಗುತ್ತಾರೆ. ಅಂತಃಕರಣದ ದಗದಗೆಯು ಶುರುವಾಗುತ್ತದೆ, ಹೃದಯಾಂಗಣದಲ್ಲಿ ವಿಚಿತ್ರ ಗೊಂದಲ, ಕೋಲಾಹಲ, ದಂಗೆಗಳು ನನಗೆ ಕೇಳಿಸುತ್ತದೆ, ನನ್ನ ಹೃದಯ ಮಂಥನವು ಶುರುವಿರುತ್ತದೆ. ನೀವು ಸಮುದ್ರ ಮಂಥನದ ಕತೆ ಕೇಳಿದ್ದೀರಿ. ಈ ಸಮುದ್ರ ಮಂಥನವೆಂದರೆ ರೂಪಕವಿದೆ. ಈ ಸಮುದ್ರಮಂಥನವು ನಮ್ಮ ಪ್ರತಿಯೊಬ್ಬರ ಹೃದಯದಲ್ಲಿ ಹಗಲು ರಾತ್ರಿಗಳಲ್ಲಾಗುವ ಹೃದಯ ಮಂಥನವು. ಈ ಹೃದಯ ಸಾಗರದಲ್ಲಿ ಅನೇಕ ವಾಸನೆಗಳ ವಿಕಾರಗಳ, ಮನೋರಥಗಳ ತೆರೆಗಳು ಚಿಮ್ಮುತ್ತಿರುತ್ತವೆ. ಮತ್ತು ಈ ಮಂಥನದೊಳಗಿಂದ ಈ ಸಾಗರ ತೀರದಲ್ಲಿ ನಾನಾ ಪ್ರಕಾರಗಳ ವಸ್ತುಗಳು ಬಂದು ಬೀಳುತ್ತವೆ. ನಮ್ಮ ಈ ಹೃದಯದಲ್ಲಿ ಯಾವದು ಇಲ್ಲ ? ಇದರಿಂದ ಲಕ್ಷ್ಮಿ ನಿರ್ಮಾಣಳಾಗುತ್ತಾಳೆ, ಚಂದ್ರನು ನಿರ್ಮಾಣನಾಗುತ್ತಾನೆ, ಅಪ್ಸರೆಯರೂ ನಿರ್ಮಾಣರಾಗುತ್ತಾರೆ, ಸೆರೆಯೂ ನಿರ್ಮಾಣವಾಗುತ್ತದೆ. ವಿಷವೂ ನಿರ್ಮಾಣವಾಗುತ್ತದೆ! ಯಾವದು ನಿರ್ಮಾಣವಾಗುವದಿಲ್ಲ ? ಯಾವ ವೇಳೆಯಲ್ಲಿ ಹೃದಯದಲ್ಲಿ ವಿಷಯ ವಾಸನೆಯು ಏಳುತ್ತದೆಯೋ ಅದೇ ವೇಳೆಯಲ್ಲಿ ಹೃದಯದಲ್ಲಿ ಅಪ್ಸರೆಯು ನಿರ್ಮಾಣಳಾಗುವಳು. ಪ್ರೇಮ ಸಾಗರವು ನಿರ್ಮಾಣವಾದ ವೇಳೆಯಲ್ಲಿ ಚಂದ್ರನು ಹುಟ್ಟುವನು, ಯಾವಾಗ ನಾವು ಜನರಿಗೆ ವಾಕ್ ತಾಡನ ಮಾಡುತ್ತೇವೋ, ಅವರ ಮೇಲೆ ಬಲವಂತ ಮಾಡುತ್ತೇವೋ ಆಗ ನಮ್ಮ ಹೃದಯದಲ್ಲಿ ಚಾವಟಿಯು ನಿರ್ಮಾಣವಾಗುತ್ತದೆ; ಜಗತ್ತಿಗೆ ಬೊಂಬಡಿ ಬಾರಿಸಲು ಹಚ್ಚಿದರೆ, ಹಾಹಾ, ಕಾರ ಮಾಡಲು ಹಚ್ಚಿದರೆ ಆಗ 'ಶಂಖ' ನಿರ್ಮಾಣವಾಗುತ್ತದೆ. ಹೀಗೆ ಈ ಹೃದಯಮಂಥನವು ಶುರುವಿರುತ್ತದೆ! ಅದರಿಂದ ನಮಗೆ ಶಾಂತಿ ಇರುವದಿಲ್ಲ. ಅಮೃತ ಸಿಕ್ಕದ ಹೊರತು ದೈವೀ ವೃತ್ತಿಗೆ ಶಾಂತಿ ಇಲ್ಲ. ಅಸುರ ವೃತ್ತಿಗೆ ಸೆರೆ, ಅಪ್ಸರೆ, ಲಕ್ಷ್ಮಿಯರು ಸಿಕ್ಕಿದರೆ ಆನಂದವಾಗುತ್ತದೆ, ಆದರೆ ಸದ್ವೃತ್ತಿಗೆ ಅಮೃತವು ಬೇಕಾಗಿರುತ್ತದೆ.

ದ್ವೇಷ, ಮತ್ಸರಗಳಿಂದ ತ್ರಸ್ತವಾದ ಈ ಗೋಕುಲದಲ್ಲಿ ಕೊನೆಗೆ ಕೃಷ್ಣನು ಜನ್ಮಿಸುತ್ತಾನೆ. ನಂದ-ಯಶೋದೆಯರ ಹೊಟ್ಟೆಯಲ್ಲಿ ಅವನು ಜನ್ಮಿಸುತ್ತಾನೆ. ಯಶೋದೆ ಎಂದರೆ 'ಯಶ' ಕೊಡುವ ಕಲ್ಯಾಣ ಮಾಡುವ ವೃತ್ತಿ. 'ನಂದ' ಎಂದರೆ ಆನಂದವಾಗುವ ವೃತ್ತಿ. ಇದರ ಅರ್ಥವು ಅಂತಃಕರಣದಲ್ಲಿ ಸತ್ಪ್ರವೃತ್ತಿಗಳಿಗೆ ಯಾವಾಗ ತಳಮಳ ಹುಟ್ಟುತ್ತದೆಯೋ, ಈ

ಜಗಳದಿಂದ ದೂರಾಗಿ ಶಾಂತಿ ಹೊಂದಬೇಕೆಂಬ ಭಾವನೆ ಬರುತ್ತದೆಯೋ ಆಗ ಶ್ರೀಕೃಷ್ಣನ ಜನ್ಮವಾಗುತ್ತದೆ! ಈ ಉತ್ಕಂಠತೆಯು ಶುರುವೆಂದರೇ ಕೃಷ್ಣಜನ್ಮ. ಉತ್ಕಂಠತೆಯು ಶುರುವಾಯ್ತೆಂದರೆ ಅರ್ಧ ಕೆಲಸವಾದಂತೆ. ರೋಗಕ್ಕೆ ಚಿಕಿತ್ಸೆಯು ಪ್ರಾರಂಭವಾಯ್ತೆಂದರೆ ರೋಗವು ಓಡುತ್ತದೆ. ಅಂತಃಕರಣದಲ್ಲಿ ಗೊಂದಲ, ಗಲಾಟೆಗಳ ಸಲುವಾಗಿ ಬೇಸರ ಬಂದು ಶ್ರಾವಣದಲ್ಲಿಯ ಕೃಷ್ಣಪಕ್ಷದ ವಿಕೃತ ಕತ್ತಲೆಯ ತಿರಸ್ಕಾರವೆನಿಸಿ ಶ್ರಾವಣ ಮಾಸದ ರಾತ್ರಿಯ ಬಿರುಗಾಳಿ, ಜಿಟಿಜಿಟಿ ಮಳೆ, ಮೋಡಗಳ ಖಡಖಡಾಟ, ಮಿಂಚಿನ ಚಮಕು ಇವುಗಳು ಹೋಗಿ ವಾತಾವರಣವು ಪ್ರಸನ್ನವಾಗಬೇಕು ಎಂ ತಳಮಳವು ಪ್ರಾರಂಭವಾಗಿ ಕಣ್ಣಿನಿಂದ ನೀರು ಬಂದು ಮನಸ್ಸು ಅಸ್ವಸ್ಥವಾಗಿ, ಅಧೀರರಾದೆವೆಂದರೆ ಆಗ ಶ್ರೀಕೃಷ್ಣ ಜನ್ಮಕ್ಕೆ ಬರುತ್ತಾನೆ ಈ ಎಲ್ಲ ಅವಸ್ಥೆಗಳಿಂದ ನನಗೆ ವ್ಯ ಸ್ಥಿತವಾಗುವಂತೆ ಮಾಡಗೊಡು. ಈ ಕತ್ತಲೆಯಿಂ ನನ್ನನ್ನು ಧ್ಯೇಯ ಸೂರ್ಯ, ಧ್ಯೇಯ ಧೃವಗಳು ಕಾಣಿ ವಂತೆ ಮಾಡು, ಎಂಬ ಕಳಕಳಿಯು ಉತ್ಪನ್ನವಾಗು ದೆಂದರೇ ಶ್ರೀಕೃಷ್ಣ ಜನ್ಮ.

೨೯ ಅಗಷ್ಟ ೧೯೫೮ರ ಸಾಧನಾದಿಂ

# ತಂಗಿಯರಿಗೆ

ತಂಗೀ,

ಅನೇಕ ದಿನಗಳ ನಂತರ ಓಲೆ ಬರೆಯುತ್ತಿರುವೆ. ಸಿಟ್ಟಾಗಬೇಡ, ನನ್ನ ಸಂಸಾರದ ಸಹ ಧರ್ಮಿಣಿಯು ತೀರಿಕೊಂಡದ್ದೇ ಓಲೆ ಬರೆಯಲು ತಡವಾದ್ದಕ್ಕೆ ಕಾರಣ. ಹೆಣ್ತನದ ಹೆಚ್ಚಳಿಕೆಯು ನನಗೆ ಅರಿತೇ ಇದ್ದರೂ 'ಸಹ ಧರ್ಮಿಣಿ'ಯ ಸಾವಿನಿಂದ ಆ ಅರಿವು ಇನ್ನು ಆಳವಾಯ್ತು. ನಮ್ಮ ಜೀವನದ ಅನೇಕ ಕಹಿಯಾದ ಅನುಭವಗಳಿಂದ ಹೆಮ್ಮೆಯು ಮಣ್ಣು ಮುಕ್ಕುತ್ತದೆ. ಅವಳು ಜೀವಿಸಿರುವವರೆಗೆ ಅವಳ ಮಹತ್ವವು ನಮಗಾರಿಗೂ ಅನಿಸಿರಲಿಲ್ಲ. ದೊಡ್ಡ ಕಾರಖಾನೆಯ ಯಂತ್ರದಲ್ಲಿಯ ಒಂದು ಸಣ್ಣ ಚಕ್ರವನ್ನು ಯಾರು ಲಕ್ಷಿಸುವರು! ಆದರೆ ಆ ಚಕ್ರವು ಕಳಚಿದ ಕೂಡಲೇ ಇಡೀ ಯಂತ್ರವೇ ನಿಲ್ಲುತ್ತದೆ. ಇಡೀ ಕಾರಖಾನೆಯ ಲಕ್ಷ್ಯ ಅತ್ತಕಡೆ ಓಡುತ್ತದೆ. ಆಗ ಅದರ ಮಹತ್ವ, ಅಗತ್ಯಗಳು ಎಲ್ಲರಿಗೂ ಹೊಳೆಯುವದು. ಹಾಗೆಯೇ 'ಹೆಣ್ತನ'ದ ಮಹತ್ವ ತಿಳಿಯಬೇಕಾದರೆ ಅದು ಇಲ್ಲದ ಮನೆ ನೋಡಬೇಕು. ಸಂಸ್ಕಾರವಾಗದವನ ಮನ ನೋಡಬೇಕು; ಅದರ ಸವಿಯನ್ನು ಉಂಡು ಅದನ್ನು ಕಳೆದುಕೊಂಡವರ ತಳಮಳವನ್ನು ನೋಡಬೇಕು.

ನಾವು ಗಳಿಸುತ್ತೇವೆ; ನಾವೇ ದುಡಿಯುತ್ತೇವೆ; ಜಗತ್ತು ನಮ್ಮಿಂದ ಇದೆಯೆಂದು ಕೊಚ್ಚಿಕೊಳ್ಳುವ ಗಂಡುಗಳಿಗೆ ಲೆಕ್ಕವೇ ಇಲ್ಲ. ಆದರೆ ಅವರ ಜಂಭದ ಹುರುಳನ್ನು ಸಂಕಟದಲ್ಲಿ ಪರೀಕ್ಷಿಸಬೇಕು. ಮಕ್ಕಳನ್ನು ಸಾಕುವ ಹೊರೆಯು ಅಂಥವರ ಮೇಲೆ ಬೀಳಬೇಕು; ಅವು ಹಗಲಿರುಳು ಹಟ ಮಾಡಬೇಕು; ಕಾಯಿಲೆಗಳಿಂದ ನರಳಬೇಕು, ತಾವೇ ಬೇನೆ ಬೀಳಬೇಕು; ಆಗ ನೋಡು! ಅವರ ಎದೆಯು ತಾಯ್ತುರುಳಿಗಾಗಿ ಹೇಗೆ ಹಂಬಲಿಸುವದೆಂದು ಕಿವಿಗೊಟ್ಟು ಕೇಳು........ 'ಅಯ್ಯೋ ಹೆಣ್ಣಿಲ್ಲದ ಜಗವು ಮಣ್ಣೇ ಮಣ್ಣು' ಎಂದು ಅವರ ಹೃದಯ ಹಾಡಿ ಹಾಡಿ ಅಳುತ್ತದೆ. ನದಿಯ ನೆರೆಯಲ್ಲಿ ಹರಿದು ಹೋಗುವವರಂತೆ ಅವರ ಕಣ್ಣು ಕಕ್ಕಾವಿಕ್ಕಿಯಾಗಿ ಯಾವುದೋ ಕಾಣದ ಕೈಗಾಗಿ ದಿಕ್ಕುದಿಕ್ಕಿಗೆ ನಿಟ್ಟಿಸುತ್ತದೆ. ಅಹಹ! ತಂಗೀ! ಹೀಗೆ ಜಗದ ಜೀವಿಗಳು ಬೆಂದೆದೆಯಿಂದ ನಿನ್ನನ್ನು ನೋಡುತ್ತಿರಲು ನೀನು ನಿನ್ನ ಹೆಣ್ತನದ ಹೊಣೆಗಾಗಿ ಹೆಮ್ಮೆಯಿಂದ ನಗಬೇಕೋ! ಕೈಲಾಗದ ಹುಳದಂತೆ ಮುಳುಮುಳು ಅಳಬೇಕೊ?

ನಿಸರ್ಗದಲ್ಲಿ ಒಂದು ತತ್ವವಿದೆ. 'ಅನೌಷಧಂ ನಕಿಂಚಿದ್ವಿದ್ಯತೇ ದ್ರವ್ಯಂ ವನ್ನಾನ್ಯಾರ್ಥ ಯೋಗತಃ' ಎಂದರೆ ಅನೇಕ ಕೆಲಸಗಳಿಗೆ ಉಪಯೋಗ ಬೀಳುವ ಮೂಲಕ ಜಗತ್ತಿನಲ್ಲಿ ಔಷಧವಲ್ಲದ ವಸ್ತುವೇ ಇಲ್ಲ, ಎಂದು ಆಯು-ರ್ವೇದವು ಹೇಳುತ್ತದೆ. ಪ್ರಸಂಗವರಿತು ಉಪಯೋಗಿಸುವ ಅರಿವು ಮಾತ್ರ ನಮಗಿದ್ದರಾಯಿತು. ತೀರ ಸ್ವಲ್ಪ ಪ್ರಮಾಣದಲ್ಲಿ ಹೊಟ್ಟೆಯಲ್ಲಿ ಹೋದರೂ ಜೀವ ಹಿಂಡಿ ಬಿಡುವ ಭಯಂಕರ ವಿಷಗಳಿವೆ, ಜಗತ್ತಿನಲ್ಲಿ. ಆದರೆ ಬುದ್ಧಿ ಬಲದಿಂದ ಮನುಷ್ಯನು ಅವುಗಳನ್ನು ಶುದ್ಧಿಸಿ ಎಷ್ಟೋ ಔಷಧಗಳಲ್ಲಿ ಉಪಯೋಗಿಸುವನು. ರೋಗಗಳು ಬಹಳ ಕೆಟ್ಟವೆಂದು ನಮ್ಮ ಅಭಿಪ್ರಾಯವಲ್ಲವೇ? ಆದರೆ ಮನುಷ್ಯನು ಅಂಥ ಕೆಟ್ಟ ರೋಗಗಳ ಕ್ರಿಮಿಗಳನ್ನೇ ಉಪಯೋಗಿಸಿ ಅನೇಕ ಭಯಂಕರ ಬೇನೆಗಳೊಡನೆ ಹೋರಾಡುವನು. ಮೈಲಿ, ಪ್ಲೇಗು ಮೊದಲಾದ ರೋಗಗಳು ಬರಬಾರದೆಂದು 'ವ್ಯಾಕ್ಸಿನೇಶನ್' 'ಇನಾಕ್ಯುಲೇಶನ್'ಗಳ ಮೂಲಕ ದೇಹದಲ್ಲಿ ಆಯಾ ರೋಗದ ಕ್ರಿಮಿಗಳನ್ನು ಸೇರಿಸಿಕೊಳ್ಳುವದಿಲ್ಲವೇ? ಅದೇಕೆ! ಮಲಮೂತ್ರಗಳು ಅಸಹ್ಯ, ಹೇಸಿಕೆಯೆಂದು ನಮ್ಮ ತಿಳುವಳಿಕೆ. ಆದರೆ ಅವುಗಳನ್ನೇ ಯುಕ್ತಿಯಿಂದ ಸಂಗ್ರಹಿಸಿದರೆ ಹೊಲಗಳಿಗೆ ಅತ್ಯುತ್ತಮ ಗೊಬ್ಬರವಾಗುತ್ತದೆ. ಇಂಥ ಹೊಲಸು ಹೇಸಿಕೆಗಳೂ ದೇಶದ ಜೀವಿಗಳ ಆಹಾರಕ್ಕೇ ಆಧಾರ

ವಾಗಿರಲು, ತಂಗೀ! ಜೀವ, ಬುದ್ಧಿ, ಹೃದಯವುಳ್ಳ ನಿನ್ನಂಥ ಮನುಷ್ಯಪ್ರಾಣಿಯು ನಿರರ್ಥಕವೇ! ಹೊಲಸು ಹೇಸಿಕೆಗಳಿಗಿಂತ ನಿನ್ನ ಜನ್ಮ ಕಡೆಯೇ!

ಕೆಲವರೆನ್ನುತ್ತಾರೆ "ಹೆಂಗಸರು ಕೋಮಲರು, ಅವರ ದೇಹವು ದುಡಿಮೆಗೆ ಯೋಗ್ಯವಾಗಿಲ್ಲ. ಭುಜ ಬಲದಿಂದ ಜೀವಿಸುವದು ಅವರಿಗಾಗದು, ಆದ್ದರಿಂದ ಅವರು ಸಮಾಜ ಸೇವೆಯಲ್ಲಿ ಗಂಡಸರಷ್ಟು ಉಪಯೋಗವಿಲ್ಲೆಂದು."

ಈ ಪೂರ್ವ ಪಕ್ಷದಲ್ಲಿ ಬುದ್ಧಿ, ತರ್ಕಗಳಿಗಿಂತ ಹೆಮ್ಮೆಯೇ ಹೆಚ್ಚಿದೆ. ಏಕೆಂದರೆ ಈಗಿನ ವೈಜ್ಞಾನಿಕ ಶೋಧಗಳಿಂದ ಮನುಷ್ಯನ ಆರೋಗ್ಯಕ್ಕೆ ಮತ್ತು ರೋಗನಿರೋಧಕ ಶಕ್ತಿಗೆ ಯಕೃತ್ತೇ (ಪಿತ್ತ ಜನಕಾಂಗ) ಮುಖ್ಯ ಕಾರಣವೆಂದು ನಿರ್ಧಾರವಾಗಿದೆ. ಹೆಂಗಸರು ಆಯುಷ್ಯದಲ್ಲಿ ಅನೇಕ ಹೊಣೆಗಳನ್ನು ಹೊರಬೇಕಾಗುವದು. ಮಕ್ಕಳ ಪಾಲನೆಪೋಷಣೆಯಲ್ಲಂತೂ ಅವರಿಗೆ ತಾಳ್ಮೆ ಬಹಳ ಬೇಕಾಗುತ್ತದೆ. ಇದರಿಂದ ಅವರ ದೇಹ ಮನಸ್ಸುಗಳ ಕ್ಷಯವು ತೀವ್ರವಾಗಬೇಕಿತ್ತು. ಆದರೆ ಗಂಡಸರಿಗಿಂತ ಹೆಂಗಸರಲ್ಲಿ ಪಿತ್ತ ಜನಕಾಂಗವು ದೊಡ್ಡದಾಗಿರುವದರಿಂದ ಅವರಲ್ಲಿ ಜೀರ್ಣ ಶಕ್ತಿಯೂ, ರೋಗ ನಿರೋಧಕ ಶಕ್ತಿಯೂ ವಿಪರೀತ ಹೆಚ್ಚಾಗಿರುತ್ತದೆ. ಅವರಷ್ಟು ಸಂಸಾರದ ಹೊಣೆಯು ಗಂಡಸರ ಮೇಲೆ ಶತಮಾನಗಳ ಗಟ್ಲೆ ಬಿದ್ದಿದ್ದರೆ ಇಂದಿಗೆ ಗಂಡೆಂಬ ಜೀವಿಯೇ ಕಾಣುತ್ತಿರಲಿಲ್ಲವೋ ಏನೊ! ಎಂದು ಶರೀರ ವಿಜ್ಞಾನಿಗಳು ಉದ್ಗಾರಗಳನ್ನು ತೆಗೆದಿದ್ದಾರೆ. ಶ್ರಮ ಸಹನ ದೃಷ್ಟಿಯಿಂದಲೂ ಸ್ತ್ರೀಯರ ನರಮಂಡಲವೂ ಮಿದುಳೂ ಹೆಚ್ಚು ಬಲಿಷ್ಠವಾಗಿರುವದೆಂದು ನಿರ್ಧಾರವಾಗಿದೆ. "ಸಹಸ್ರಾರು ವರ್ಷಗಳಿಂದ ನಮ್ಮ ಪಾಶವೀ ಸಮಾಜದ ಕ್ರೂರತೆಯಿಂದ ಪೀಡಿಸಲ್ಪಟ್ಟರು. ತನ್ನ ಸಹಜ ಸಂರಕ್ಷಕ ಸಹನ ಸ್ವಭಾವಗಳನ್ನು ಸ್ತ್ರೀಯು ಕಳೆದುಕೊಳ್ಳಲಿಲ್ಲ. ಇದು ಅವಳ ಮಿದುಳು ನರಮಂಡಲಗಳ ಅಜೇಯ್ಯ ಶಕ್ತಿಗೆ ಸಾಕ್ಷಿಯಲ್ಲವೇ? ಎಂದು ಒಬ್ಬ ಅಮೇರಿಕದ ವಿಜ್ಞಾನಿಯು ಆಚ್ಚರಿಗೊಂಡು ನುಡಿದಿದ್ದಾನೆ.

ತಂಗೀ! ಒಳ್ಳೇದು, ಜನರಾಡುವಂತೆ ಗಂಡಸರೇ ಬುದ್ಧಿವಂತರು, ಬಲಿಷ್ಠರು ಎಂದು ತಿಳಿಯುವಾ. ಆದರೆ ಅವರ ಬುದ್ಧಿ, ಬಲಗಳು ಬೆಳೆದು ಬಲಿತು ಅದ್ಭುತ ಕಾರ್ಯಗಳನ್ನು ಮಾಡಬೇಕಾದರೆ ಎಂಥ ಪ್ರೇಮದ ಪೋಷಣೆಬೇಕು! ಎಂಥ ಎಚ್ಚರದ ಶಿಕ್ಷಣ ಬೇಕು! ಆ ಬುದ್ಧಿಯು ಹಸಿಯಾಗಿರುವಾಗ ಅದಕ್ಕೆ ಕಸುವು ಕೊಡುವ ಪ್ರೇಮದ ಹಸಿಯು ಇಲ್ಲದಿದ್ದರೆ ಜಗತ್ತಿನ ಒಂದೇ ಒಂದು ಬಿರುಗಾಳಿಯಿಂದ ಆ ಚಿಗುರು ಕಮರಿ ಹೋಗದೇ? ಜಗತ್ತಿನ ಬೇರೆ ಜನಾಂಗದವರೊಡನೆ, ಭಾರತದ ಗುಂಡುಗಳನ್ನು ಹೋಲಿಸಿ ನೋಡೋಣ! ಅಹಹ! ಪಾಶ್ಚಾತ್ಯರ ಎತ್ತರ, ಬಿಗಿ ಹುರಿಕಟ್ಟುಳ್ಳ ಮೈಕಟ್ಟು, ವಿಶ್ವವೆಲ್ಲ ತನ್ನದೆಂಬ ಮುಖದ ಮೇಲಿನ ವರ್ಚಸ್ಸು, ತನ್ನನ್ನಾರು ಕೇಳುವವರು ಎಂಬ ಭಾವದ ಅನಿರುದ್ಧ ಚಲನವಲನ; ಇವುಗಳೊಡನೆ ನಮ್ಮ ಭಾರತೀಯ ಗಂಡುಗಳ ಬಾಗಿದ ಬೆನ್ನು, ರೋಗದ ಕಣ್ಣು, ವಾಯು ಬಡೆದವರಂತೆ ಓಡಾಟ, ನಿಮಿಷಕ್ಕೆ ಹತ್ತು ಸಲ ನಿಟ್ಟುಸಿರು, ಹುಳಿತ ಹಲ್ಲುಗಳ ಬಾಯಿ, ಇವುಗಳೇ ಸಾಕಷ್ಟೇ ಗಂಡಸರ ಬುದ್ಧಿ, ಧೈರ್ಯ, ಸಾಮರ್ಥ್ಯಗಳಿಗೆ ಸಾಕ್ಷಿ!?

ಪಾಪ, ಅಜ್ಞಾನ, ಹೇಡಿತನ, ರೋಗ ಬಡತನಗಳಲ್ಲಿ ಹಣ್ಣಾದ ಹೆಣ್ಣಿನ ಬತ್ತಿದ ಬರಡು ಮೊಲೆಯಿಂದು ಬೆಳೆದವರಿಗೆ ಆಸ್ವಚ್ಛಂದ, ಸ್ವಾತಂತ್ರ್ಯಗಳೆಂದರೆ ಕನಸುಗಳಲ್ಲದೆ ಇನ್ನೇನು! ಆದ್ದರಿಂದ 'ತೊಟ್ಟಿಲ ತೂಗುವ ಕೈಯ್ಯೇ ಜಗವನ್ನು ತೂಗುವದು' ಎಂದು ಹೇಳುತ್ತಾರೆ. ಹೆಣ್ಣು ಮಣ್ಣಲ್ಲ ತಂಗೀ! ಸಮಾಜ ಧರ್ಮಗಳ ಮಣ್ಣು ಮುಕ್ಕಿ ಮುಕ್ಕಿ ಹೆಣ್ಣಿಗೂ ಮಣ್ಣಿನ ಬಣ್ಣವೇ ಬಂದಿದೆ. ಅದಕ್ಕೆ ಜ್ಞಾನ, ಧೈರ್ಯಗಳ ಚಿಕಿತ್ಸೆಯಾಗಬೇಕು.

ಅಂದರೆ 'ಯೋಗ್ಯಕ್ಕೆ ಇರುವ ಭಾಗ್ಯ' ಎಂಬ ತತ್ವಕ್ಕನುಸರಿಸಿ, ಸ್ತ್ರೀಯು ಜಗದಾದಿಯಿಂದ ಇದ್ದಾಳೆಂಬ ಮಾತೇ ಅವಳ ಯೋಗ್ಯತೆಯನ್ನು ತೋರಿಸುವದಿಲ್ಲವೇ? ಆದ್ದರಿಂದ ನಿನ್ನ ಆ ಹಿಂದಿನ ಅಮರತ್ವಭಾವವನ್ನು ಕಳೆ, ಸ್ತ್ರೀತ್ವದ ಗುರಿಯು ಕಡೆಗೆ ಗಂಭೀರಳಾಗಿ ಬೆಳೆ.

ಇತಿ ನಿನ್ನ ಪ್ರೇಮದ
ಅಣ್ಣ.

('ಸಾಂಸರ' ಕೈಬರಹ ಮಾಸ ಪತ್ರಿಕೆಯಿಂದ ಆಯ್ದುದ್ದು.)
ಲೇ : ತಾರಾದಾಸ

# ದೊಡ್ಡ ಬುದ್ಧಿ-ಸಣ್ಣ ಹೃದಯುಗಳಿಗೆ ಧಿಕ್ಕಿ !

ತಾ॥ ೩೧–೮–೫೪ರ "ಭೂದಾನ"ದಿಂದ.

[ ವಿನೋಬಾ ]

'ಜಯ್ ಜಗತ್' ಎಂದರೆ ಏನು? ಇಡೀ ಪ್ರಪಂಚಕ್ಕೆ ಜಯವಾಗಲಿ— ಒಬ್ಬನ ಜಯದಲ್ಲಿ ಇನ್ನೊಬ್ಬನ ಜಯವೂ ಆಗಲಿ, ಎಲ್ಲರ ಜಯ ಆಗಲಿ.— 'ಜಯ್ ಜಗತ್' ನಲ್ಲಿ 'ಜಯ್ ಹಿಂದ್' ಕೂಡ ಸೇರುತ್ತದೆ; 'ಜಯ್ ಕಾಶ್ಮೀರ್' ಸಹ ಸೇರುತ್ತದೆ. ಅಷ್ಟು ಪ್ರಯತ್ನ ಮಾಡಿದರೆ 'ಜಯ್ ಜಗತ್'ನಲ್ಲಿ 'ಜಯ್ ಶ್ರೀನಗರ'ವೂ ಸೇರುತ್ತದೆ. ಇದು ಕೇವಲ ಆಡುವ ಮಾತಲ್ಲ; ಮಾಡುವ ಮಾತು. ಅಂದರೆ, ಏನು ಮಾಡಬೇಕು? ಇಂದು ನಮ್ಮ ಮಸ್ತಿಷ್ಕ ಬಹಳೇ ದೊಡ್ಡದಾಗಿದೆ; ಆದರೆ 'ಹೃದಯ' ಚಿಕ್ಕದಾಗಿದೆ. ಆದ ಕಾರಣ, ಹೃದಯವನ್ನು ಅಷ್ಟು ದೊಡ್ಡದು ಮಾಡಬೇಕು. ಇಂದು ನಡೆಯುತ್ತಿರುವ ಎಲ್ಲ ಜಗಳಗಳೂ ದೊಡ್ಡ ಮಸ್ತಿಷ್ಕ ಹಾಗೂ ಸಣ್ಣ ಹೃದಯದಿಂದ ಹುಟ್ಟಿದವು. ಇಂದು 'ಮಸ್ತಿಷ್ಕ' ಮಾಡರ್ನ್ (ಆಧುನಿಕ) ಆಗಿದೆ; ಆದರೆ ಹೃದಯ ಇನ್ನೂ ಹಳೆಯದಾಗಿ, ಸಂಕುಚಿತವಾಗಿಯೇ ಉಳಿದಿದೆ.

ಇಂಗ್ಲೆಂಡಿನಿಂದ ಒಬ್ಬ ವ್ಯಕ್ತಿ ತನ್ನ ದರ್ಬಾರಿಗೆ ಬಂದಾಗಲೇ ಅಕ್ಬರನಿಗೆ ಇಂಗ್ಲೆಂಡ್ ಎಂಬ ಒಂದು ದೇಶ ಪ್ರಪಂಚದಲ್ಲಿದೆ ಎಂಬುದು ತಿಳಿದುದು. ಆದರೆ ಇಂದು ಶಾಲೆಯ ಮಕ್ಕಳಿಗೂ ಅಕ್ಬರನಿಗಿಂತ ಹೆಚ್ಚು ಭೂಗೋಳದ ಜ್ಞಾನವಿದೆ. ನಮ್ಮ 'ಮಸ್ತಿಷ್ಕ' ಅಷ್ಟು ದೊಡ್ಡದಾಗಿದೆ. ಜಪಾನನ್ನು 'ಫಾರ್ ಈಸ್ಟ್' ಎನ್ನುತ್ತಿದ್ದರು. ಅಮೇರಿಕೆಯನ್ನು 'ಫಾರ್ ವೆಸ್ಟ್' ಎನ್ನುತ್ತಿದ್ದರು. ಎರಡೂ ಒಂದೊಂದು ಕೊನೆ ಆಗಿದ್ದವು. ಆದರೆ ಇಂದು ಎರಡೂ ನೆರೆಹೊರೆ ಆಗಿವೆ. ಎರಡರ ನಡುವೆ ೧೨ ಸಾವಿರ ಮೈಲಿಯ ಸಮುದ್ರ ಮಾತ್ರ ಇದೆ. ಮೊದಲು ಒಡೆಯುವ ಕಾರ್ಯ ಮಾಡುತ್ತಿದ್ದ ಸಮುದ್ರವೇ ಇಂದು ಕೂಡಿಸುವ ಕಾರ್ಯ ಮಾಡುತ್ತಿದೆ. ಜಪಾನ್— ಅಮೇರಿಕೆಗಳನ್ನು ಒಡೆದುದು ಸಮುದ್ರವೇ. ಇಂದು ಅವನ್ನು ಕೂಡಿಸಿರುವುದೂ ಸಮುದ್ರವೇ. ಒಂದು ಕಾಲದಲ್ಲಿ ಒಡೆಯುತ್ತಿದ್ದ ವಸ್ತುವೇ ಇಂದು ಕೂಡಿಸುವ ವಸ್ತುವಾಗಿದೆ. ಇಂದು ನಮ್ಮ ಪ್ರಪಂಚದ ಜ್ಞಾನ ಹೆಚ್ಚಿದೆ.

ಇದು ವಿಜ್ಞಾನ ಯುಗ. ದಿನೇ ದಿನೇ ವಿಜ್ಞಾನ ಬೆಳೆಯುತ್ತಿದೆ. ನಾಯಿಯೂ ಸಾವಿರಾರು ಮೈಲಿ ಮೇಲೆ ಹೋಗುವ ಕಾಲದಲ್ಲಿ ಮನುಷ್ಯ ಇಷ್ಟು ಕೆಳಗೆ, ಭೂಮಿಯ ಮೇಲೆಯೇ ಇರುವುದೆ? ಹಿಂದೂ, ಮುಸಲ್ಮಾನ್ ಎಂಬ ಭೇದಗಳನ್ನು ಹೆಚ್ಚಿಸುವುದೆ? ಕಾಶ್ಮೀರಕ್ಕೆ ಬಂದಾಗಿನಿಂದ ನಾನು ನೋಡುತ್ತಿರುವುದೇನು? ನ್ಯಾಷನಲ್ ಕಾನ್‌ಫರೆನ್ಸಿನವರು, ಡೆಮೋಕ್ರೇಟಿಕ್ ನ್ಯಾಷನಲ್ ಕಾನ್‌ಫರೆನ್ಸಿನವರು, ಪ್ಲೆಬಿಸೈಟ್ ಫ್ರಂಟಿನವರು, ಪ್ರಜಾ ಪರಿಷತ್ತಿನವರು—ಎಲ್ಲರೂ ನನ್ನನ್ನು ಭೆಟ್ಟಿಯಾಗುತ್ತಾರೆ. ಸೀಖ್, ಹಿಂದೂ, ಶಿಯಾ, ಷುನ್ನಿಗಳೂ ಭೆಟ್ಟಿಯಾದರು. ಪಂಡಿತರುಗಳೂ ಬಂದು ನನ್ನನ್ನು ನೋಡಿದರು. ಎಲ್ಲ ಪಕ್ಷಗಳವರೂ ನನ್ನಲ್ಲಿ ಹೃದಯ ಬಿಚ್ಚಿ ಮಾತನಾಡಿದರು. ಪ್ರತಿಯೊಂದೂ ಪಕ್ಷವೂ ಇನ್ನೊಂದು ಪಕ್ಷಕ್ಕೆ ವಿರೋಧವಾಗಿರುವುದೇ ಇಂದಿನ ಲಕ್ಷಣ. ಒಂದು ಪಕ್ಷ ಇನ್ನೊಂದು ಪಕ್ಷವನ್ನು ದೂಷಿಸುವುದೇ ಕೆಲಸ. ಮಂದಿ ಎರಡೂ ಪಕ್ಷದವರ 'ನಿಂದೆ' ಕೇಳಿ ಉಭಯರೂ ಕೆಲಸಕ್ಕೆ ಬಾರದವರೆಂದು ಭಾವಿಸುತ್ತಾರೆ. ಹೀಗೇಕೆ?

ಕಾಶ್ಮೀರದಲ್ಲಿ 'ಸಮಸ್ಯೆ' ಇದೆ ಎನ್ನುತ್ತಾರೆ. ಆದರೆ ಅತ್ತ ಇತ್ತ ನೋಡಿದರೆ, ನಮಗೆ ಯಾವ ಸಮಸ್ಯೆಯೂ ಕಂಡುಬರುವುದಿಲ್ಲ. ನನ್ನ ತಾಯಿ ನನಗೆ ಬಾಲ್ಯದಲ್ಲಿಯೇ ಉಪದೇಶ ಕೊಟ್ಟಿದ್ದಳು "ವಿನ್ಯಾ, ಭೂತ ಎಂಬುದೇನೂ ಇಲ್ಲ. ಅದು ಕಾಣಿಸುವುದಾದರೆ, ಒಂದು ಕಂದೀಲು ತೆಗೆದುಕೊಂಡು ಸಮೀಪಕ್ಕೆ ಹೋಗು. ಆಗ ನಿನಗ ಭೂತಕ್ಕೆ ಬದಲು ಮರವೋ, ಕೊಂಬೆಯೋ ಕಾಣುವುದು. ಆದಕಾರಣ ಭೂತಕ್ಕೆಹೆದರಬೇಡ." ಬಾಲ್ಯದಲ್ಲೇ ಈ ಪಾಠ ಕಲಿತ ನಾನು, ಸಮಸ್ಯೆಗಳನ್ನು ಕಂದೀಲು ಹಿಡಿದು ನೋಡತೊಡಗಿದೆ. ಜಮ್ಮೂದಲ್ಲಿ, ಬಾಟಾಮುಲ್ಲಾದಲ್ಲಿ, ಶ್ರೀ ನಗರದಲ್ಲಿ ಹುಡುಕಿ

ಹುಡುಕಿ ನೋಡಿದೆ. ಯಾವುದಾದರೊಂದು ಗುಹೆಯಲ್ಲಿ ಹತ್ತು ಸಾವಿರ ವರುಷದ ಅಂಧಕಾರವೇ ಇರಲೊಲ್ಲದೇಕೆ? ಕಂದೀಲು ತೆಗೆದುಕೊಂಡು—ಅಲ್ಲಿಗೆ ಹೋದರೆ ಒಂದೇ ನಿಮಿಷದಲ್ಲಿ ಅಂಧಕಾರ ಮಾಯವಾಗುವುದು. ಹಾಗೆಯೇ ನಾವು ಬೆಳಕು ತಕ್ಕೊಂಡು ನೋಡಹತ್ತಿದರೆ, ಸಮಸ್ಯೆ ಓಟ ಕೀಳುವುದು. ಆದರೂ ಮಂದಿ "ಹಾಗಲ್ರಿ! ಇಲ್ಲಿ ಸಮಸ್ಯೆಗಳು ಇದ್ದೇ ಇವೆ." ಎನ್ನುತ್ತಾರೆ. 'ಇದ್ದರೆ ನೀವೇ ನೋಡಿಕೊಳ್ಳಿ' ಎಂದು ನಾನು ಹೇಳುವೆ. ಈ ಸಮಸ್ಯೆಗಳೆಲ್ಲ ಸಣ್ಣ ಹೃದಯದಿಂದ ಹುಟ್ಟಿದವು.

ಇಂದು ಚಿಕ್ಕ ಹೃದಯ, ದೊಡ್ಡ ಮಸ್ತಿಷ್ಕಗಳಿಗೆ 'ಢಿಕ್ಕಿ' ಆಗುತ್ತಿದೆ. ಹಿಂದಿನ ಕಾಲದಲ್ಲಿ 'ಮಸ್ತಿಷ್ಕ', ಹೃದಯ ಎರಡೂ ಸಣ್ಣವಾಗಿದ್ದವು. ಈಗಲೂ ಹಾಗೆಯೇ ಇದ್ದಿದ್ದರೆ, ಹೇಗೋ ನಡೆದು ಹೋಗುತ್ತಿತ್ತು. ಆದರೆ, ಹಾಗಿಲ್ಲ. ಇಂದು ನಮ್ಮ ಹೃದಯವನ್ನು ಹೀಗೆಯೇ ಸಂಕುಚಿತವಾದುದನ್ನಾಗಿ ಇಟ್ಟುಕೊಂಡರೆ ಸಮಸ್ಯೆಗಳು ಬಗೆಹರಿಯುವುದಿರಲಿ, ಅವು ಹೆಚ್ಚುತ್ತ ಹೋಗುತ್ತವೆ. ಈ ಹತ್ತು ವರುಷಗಳಲ್ಲಿ ನಾವು ಬಗೆಹರಿಸಿರುವ ಸಮಸ್ಯೆಗಳೆಷ್ಟು? ಸೃಷ್ಟಿಸಿರುವ ಸಮಸ್ಯೆಗಳೆಷ್ಟು? ಹಳೆಯ ಸಮಸ್ಯೆಗಳು ಹಾಗೆಯೇ ಉಳಿದಿವೆ; ಜತೆಗೆ ಹೊಸ ಸಮಸ್ಯೆಗಳು ಹುಟ್ಟಿಕೊಳ್ಳುತ್ತಿವೆ. ಕೊರಿಯಾ, ಇರಾಕ್, ಈಜಿಪ್ಟ್, ದಕ್ಷಿಣ ಆಫ್ರಿಕೆ, ಮೊರಾಕೋ ಮೊದಲಾದ ಎಲ್ಲ ಸಮಸ್ಯೆಗಳೂ ಹಾಗೆಯೇ ಉಳಿದಿವೆ. ಈಗ 'ಟಿಬೆಟ್' ಸಮಸ್ಯೆ ಹೊಸದಾಗಿ ಹುಟ್ಟಿಕೊಂಡಿದೆ. ಅತ್ತ ವಿಪುಲ ಚರ್ಚೆ ನಡೆದಿದೆ. ಈ ಚರ್ಚೆ ಅನಂತಕಾಲದವರೆಗೆ ನಡೆದೀತು. ಯಾವುದೇ ಸಮಸ್ಯೆ ರಾಜಕಾರಣದಿಂದ ಪರಿಹಾರವಾಗುವದು. ರಾಜನೀತಿಯಿಂದ ಸಮಸ್ಯೆಗಳು ಬಗೆಹರಿಯುವ ಕಾಲ ಹೋಯಿತು. ಹಿಂದೆ ಕತ್ತಿ–ಕಠಾರಿಗಳ ಕಾಳಗ ನಡೆಯುತ್ತಿದ್ದರೆ, ಇಂದು ಅಣು ಶಸ್ತ್ರಗಳ ಯುದ್ಧ ಆಗುತ್ತದೆ, ಅಷ್ಟೆ. ಒಬ್ಬರನ್ನೊಬ್ಬರು ನಂಬದ ರಾಜನೀತಿಯಿಂದ ಆಗುವುದೇನು? ಅಂತಲೆ ಕಾಶ್ಮೀರಕ್ಕೆ ಕಾಲಿಡುತ್ತಲೇ ನಾನು ಹೇಳಿದೆ— "ಕಾಶ್ಮೀರದ ಸಮಸ್ಯೆ ರಾಜನೀತಿಯಿಂದ ಬಗೆಹರಿಯುವುದಿಲ್ಲ; ಆಧ್ಯಾತ್ಮಿಕತೆಯಿಂದಲೇ ಬಗೆಹರಿಯುವುದು."

ಪಂಜಾಬಿನಲ್ಲಿ ಆಗುತ್ತಿರುವುದೇನು? ಗುರು ನಾನಕ್, ಗುರು ಗೋವಿಂದ ಸಿಂಹರು ಕಟ್ಟಿದ ಬಲಯುತ—ಕೋಮು ತುಂಡು ತುಂಡಾಗಿದೆ. ಗುರುದ್ವಾರ ಚುನಾವಣೆಯಲ್ಲಿ ಜಗಳ. ಆದರಲ್ಲೂ ರಾಜನೀತಿಯ, ಅಲ್ಪಮತ–ಬಹುಮತದ ಮಾತು.

ಧರ್ಮದ ಜಗಳದಲ್ಲೂ ರಾಜನೀತಿಯ ಪ್ರವೇಶ!

ಒಬ್ಬ ಶಾಲಾ ಮಾಸ್ತರರು ಹುಡುಗರಿಗೆ ಒಂದು ಲೆ[...] ಮಾಡಲು ಕೊಟ್ಟರಂತೆ. ಅದನ್ನು ೨೫ ಹುಡುಗರು ತಪ್ಪು ಮಾಡಿದರು. ಒಬ್ಬ ಮಾತ್ರ ಸರಿಯಾಗಿ ಮಾಡಿದ. ಆ[...] ವಿನೋದಪ್ರಿಯನಾದ ವಿದ್ಯಾರ್ಥಿಯೊಬ್ಬ ಎದ್ದು ನಿಂ[...] "ಏನು ಸರ್! ಒಬ್ಬನ ಮಾತೇ ಸರಿ; ಉಳಿದ ೨೫ ಮಂದಿ[...] ಮಾತು ತಪ್ಪು ಎಂದರೆ ಹೇಗೆ?"— ಎಂದು ಕೇಳಿದನಂ[...] ಆ ಮಾತು ಅಲ್ಪಮತ, ಬಹುಮತದ ಜಗಳದಲ್ಲಿ ನಡೆಯ[...]ತ್ತದೆ. ಧರ್ಮದ ಜಗಳದಲ್ಲೂ ಹಾಗೆಯೇ ಆಗುವುದಿ[...] ಧರ್ಮದ ಜಗಳದಲ್ಲಿ ರಾಜನೀತಿಯ ಪ್ರವೇಶವಾದರಂತ[...] ಜನರ ತಲೆ ಇನ್ನೂ ಕೆಡುತ್ತದೆ. ಸೀಖ ಸಹೋದರರಿ[...] ನಾನು ಹೇಳಿದೆ; "ನೀವು ಗುರುದ್ವಾರಕ್ಕೆ ಹೋಗುವಾ[...] ಚಪ್ಪಲಿ ಹೊರಗೆ ಬಿಟ್ಟು, ಒಳಗೆ ಹೋಗುವಿರಲ್ಲವೆ[...] ಹಾಗೆಯೇ ಗುರುದ್ವಾರದ ವಿಷಯದಲ್ಲಿ ರಾಜನೀತಿಯ ಚಪ್ಪ[...] ಯನ್ನು ಹೊರಗೇ ಬಿಡಿ." ಈ ರಾಜನೀತಿ ಎಲ್ಲಿ ಪ್ರವೇಶಿ[...] ದರೂ ಅಲ್ಲಿ ಜಗಳವೇ. ಒಬ್ಬರಲ್ಲಿ ಒಬ್ಬರು ವಿಶ್ವಾಸವಿಡ[...] ಈ ರಾಜನೀತಿ, ವಿಜ್ಞಾನ ಯುಗದಲ್ಲಿ ಬಾಳಲಾರದು. ಅಂತ[...] ಇದರ ಸ್ಥಾನದಲ್ಲಿ ಲೋಕನೀತಿಯ ಸ್ಥಾಪನೆ ಆಗಬೇಕೆನ್ನು[...]

ಶಕ್ತಿಗಳ ಪರಸ್ಪರ ಢಿಕ್ಕಿಯಾದಾಗ ಬುದ್ಧಿ—ಹೃದಯ[...] ಗಳಿಗೆ ತಿಕ್ಕಾಟವಾಗುವುದು ದೊಡ್ಡ ಬುದ್ಧಿ; ಸಣ್ಣ ಹೃದಯ[...] ಗಳಿಗೆ ಢಿಕ್ಕಿ! ನಮ್ಮ ಹೃದಯವನ್ನು ದೊಡ್ಡದು ಮಾಡಿಕೊ[...] ಡರೆ, ಪ್ರಪಂಚದಲ್ಲಿ ಶಾಂತಿ–ಸಮಾಧಾನ ನೆಲೆಸುವುದು. ಜ[...] ತಮ್ಮ ಶಕ್ತಿಯನ್ನು ತಂದುಕೊಳ್ಳುವುದೇ ಮುಖ್ಯವಾ[...] ವಿಷಯ. ಇಂದು ಆಗುವುದೇನು? ಸೇವೆ ಮಾಡಲಿಕ್ಕೆಂ[...] ಐದು ವರುಷಗಳ ವರೆಗೆ ನಾವೇ ಚುನಾಯಿಸಿರುವ ಸರಕಾ[...] ವನ್ನು ನಡೆಸುವ ನೌಕರರ ನೌಕರರ ನೌಕರರ ನೌಕರ[...] (ಪೋಲೀಸರು) ಗ್ರಾಮಕ್ಕೆ ಹೋದರೆ, ಜನ ಗಾಬರಿಯಾ[...] ತ್ತಾರೆ! ಇದು ಕೇವಲ ಕಾಶ್ಮೀರದ ಮಾತಲ್ಲ; ಭಾರ[...] ಪಾಕಿಸ್ತಾನದಲ್ಲೂ ಹೀಗೆಯೇ.

ಪಾಕಿಸ್ತಾನದ್ದು ಒಂದು ವಿಚಿತ್ರ! ಅಲ್ಲಿ ಅಯೂಬ[...] ಖಾನ್ ಪ್ರತಿಯೊಂದು ತಪ್ಪಿಗೂ ಹದಿನಾಲ್ಕು ವರುಷ ಶಿ[...] ಕೊಡುತ್ತಾನಂತೆ! ಹೀಗೆ ಹದಿನಾಲ್ಕು ವರುಷದ ಪ್ರೇಮ ಅ[...] ನಿಗೆ ಎಲ್ಲಿಂದ ಬಂತೋ? ಆತ ರಾಮಾಯಣದ ಭಕ್ತನೇನೋ[...] ರಾಮಾಯಣದಲ್ಲಿ ರಾಮಚಂದ್ರನಿಗೆ ಹದಿನಾಲ್ಕು ವರು[...] ವನವಾಸ ಸಿಕ್ಕಿತ್ತು. ಈ ಅಯೂಬ್ ಯಾವುದೇ ತಪ್ಪಿಗ[...] ಹದಿನಾಲ್ಕು ವರುಷ ಶಿಕ್ಷೆ ಕೊಡುತ್ತಾನೆ! ಇದರ ಪರಿಣಾ[...]

ಾಗಿ ಆತನ ಕೈಗೆ ಅಧಿಕಾರಕ್ಕೆ ಬಂದ ದಿನದಿಂದಲೇ ಪಾಕಿ
ಸ್ತಾನದ ಎಲ್ಲ ರಾಜಕೀಯ ಪಕ್ಷಗಳ ಕಾರ್ಯಾಲಯಗಳಿಗೆ ಬೀಗ
ತ್ತು !

ಯಾರನ್ನೂ ಟೀಕಿಸುವುದು ನನ್ನ ಉದ್ದೇಶವಲ್ಲ. ನನಗೆ
ಲ್ಲರಲ್ಲೂ ಪ್ರೇಮವೇ ಇದೆ. ಜನ ತಮ್ಮ ಶಕ್ತಿಯನ್ನು ಅರಿತು
ಕೊಂಡು ತಮ್ಮ ಕೆಲಸ ಮಾಡಿಕೊಳ್ಳಲಿ; ತಮ್ಮ ಕಾಲಮೇಲೆ
ತಾವು ನಿಲ್ಲಲಿ— ಎಂಬುದೇ ನನ್ನ ಇಚ್ಛೆ.

ವಿಜ್ಞಾನ ಯುಗದಲ್ಲಿ ರಾಜನೀತಿಯಿಂದ ದೂರವಾಗಿ, ಆತ್ಮಶಕ್ತಿಯಿಂದ ಕೂಡಿದ ಜನಶಕ್ತಿಯನ್ನು, ಲೋಕಶಕ್ತಿಯನ್ನು ಸ್ಥಾಪಿಸಬೇಕು. ಸರ್ವೋದಯದ ಭಾಷೆಯಲ್ಲಿ ಹೇಳಬೇಕೆಂದರೆ, ರಾಜನೀತಿಗೆ ಬದಲು ಲೋಕನೀತಿಯನ್ನು ಸ್ಥಾಪಿಸಬೇಕು.

## ಯತ್ನ

ಕಾರ್ಯವೆಸಗುವ ನಿನಗೆ
　ಜಯದ ಚಿಂತೇಕೆ?
ಜಯವನೆಣಿಸುವ ನಿನಗೆ
　ಸೋಲಿನ ಶಂಕೇಕೆ ?
ಜಯವಾಗಲಿ ನಿನಗೆ
　ಆಗದಿರಲೇನಂತೆ?
ಸೋಲನಪ್ಪಿದ ನಿನಗೆ
　ಇಷ್ಟು ವ್ಯಸನೇಕೆ?
ಸೋಲಬಯಸದ ನೀನು
　ಉಪ್ಪನರಿತಿಲ್ಲವೇ?
"ಯತ್ನ-ಯತ್ನವಿರಬೇಕು"
　ಎನ್ನುವವರಿಲ್ಲವೇ?
ಚಿಂತೆ ಚಿತೆಯನು ಬಿಟ್ಟು
　ಬದುಕಲಾರೆಯಾ ನೀನು ?
ಯತ್ನ ಕುದುರೆಯ ಬಿಟ್ಟು
　ಬದುಕಲಾರೆಯಾ ನೀನು !

—ರಾಮದಾಸ.

# ತಂಗಿಯರೆ ಕೇಳುವಿರಾ ನನ್ನದಿಷ್ಟು ಕಥೆ !

ಬರೆದವಳು— **ಸತ್ಯವಾದಿನಿ**

## ೧ನೇ ಪ್ರಕರಣ. ಬಾಲ್ಯ.

ತಂಗಿಯರೆ ಕಥೆಯಿಂದ ಕೂಡಲೆ ಕಟ್ಟು ಕಥೆ ಎಂದು ತಿಳಿದು ತಾವು ಉತ್ಸುಕತೆಯಿಂದ ಓದುತ್ತ ಮುಂದೆ ಬರುವಿರಿ. ಇದೇನು ಕಾಲ್ಪನಿಕ ಕಥೆ ಎಲ್ಲ ! ಕಥೆ ಕಾದಂಬರಿಗಳಂತೆ ಮನರಂಜನಕ್ಕಾಗಿ ಓದಿ ಬೀಸಾಡಿದರಾಯಿತು ಎಂದು ತಿಳಿಯ ಬೇಡಿ. ಕಟ್ಟು ಕಥೆಗಳಲ್ಲಿ ಸಹ ನಾವು ಓದುವಾಗ ಅಲ್ಲಿಯ ಪಾತ್ರಗಳ ಸುಖದುಃಖಗಳಲ್ಲಿ ಬೆರೆತುಹೋಗುತ್ತೇವೆ. ಅವರ ಸುಖದುಃಖಗಳು ನಾವೆ ಅನುಭವಿಸುತ್ತಿರುವಂತೆ ಅಳುತ್ತೇವೆ! ನಗುತ್ತೇವೆ! ಗಂಭೀರವಾಗುತ್ತೇವೆ! ಆಶ್ಚರ್ಯಗೊಳ್ಳುತ್ತೇವೆ! ಸಹಾನುಭೂತಿ ತೋರಿಸುತ್ತೇವೆ! ತಿಳಿಯದೆ ಒಳಿತ ಕೆಟ್ಟ ಸಂಸ್ಕಾರಗಳನ್ನು ಹೊಂದುತ್ತೇವೆ! ಮರಳಿ ಇದೇನು ಕಥೆ! ಇದರಿಂದ ನಮಗೇನಾಗಬೇಕಾಗಿದೆ ಎಂದು ಉದಾಸೀನತೆ ಯಿಂದ ಮರೆತು ಬಿಡುತ್ತೇವೆ! ಆದರೆ ಅದು ನಮ್ಮ ಮನ ಸ್ಸನ್ನು ಆಕರ್ಷಿಸುತ್ತದೆ. ಏನೋ ಒಂದು ಬಗೆಯ ಸಂಸ್ಕಾರ ಮಾಡಿ ಬಿಡುತ್ತದೆ! ಆದರೆ ನನ್ನ ಕಥೆಯು ಅಂತಹದಲ್ಲ. ಇದು ನಾನು ಅನುಭವಿಸಿದ ಜೀವನದ ಕಥೆ ! ಇದರೊಳಗಿನ ಸಂಗತಿಗಳೆಲ್ಲ ನಿಜವಿರುತ್ತವೆ. ಇದರಿಂದ ನನಗೆ ಬುದ್ಧಿ ಬಂದಂತೆ ನೀವಾದರು ಬುದ್ಧಿ ಕಲಿಯಬಹುದು. ನಿಮಗೆ ಇದು ಮಾರ್ಗದರ್ಶಕವಾಗಬಹುದು ವ್ಯವಹಾರದೊಳಗಿನ ಹೇಚು ಪೇಚುಗಳನ್ನು ಕಲಿಯಬಹುದು. ಸುಖದುಃಖ ಗಳನ್ನು ಅನುಭವಿಸಿ ಎಲ್ಲರಂತೆ ಬಾಳಬಹುದು. ನಮ್ಮ ದುಸ್ಥಿ ತಿಗೆ ಇತರರು ಮತ್ತು ನಾವೆ ಕಾರಣಗಳು ಹೇಗೆ ಗೊತ್ತಾಗ ಬಹುದು. ಪರಿಸ್ಥಿತಿಯು ಎಲ್ಲರಿಗೂ ಒಂದೆ ಮಾದರಿ ಇದ್ದರು ಕೂಡ ಗಂಡಸರ ಜೀವನವು ಸಹ್ಯ ಹೇಗಾಗಿದೆ ಹೆಂಗಸರದು ಅಸಹ್ಯ ಹೇಗಾಗಿದೆ ಗೊತ್ತಾಗಬಹುದು. ಎಲ್ಲರೂ ಆಚರ ಸುತ್ತಿದ್ದ ಲೌಕಿಕ ಮಾರ್ಗಗಳು, ನೀತಿ ಪಾಠಗಳು ಒಂದೆ ಮಾದರಿ ಇದ್ದರೂ ಕೂಡ ಸಾಮಾಜಿಕ ರೂಢಿ, ಸ್ವಾತಂತ್ರ್ಯ, ಜ್ಞಾನಬಲ, ಆರ್ಥಿಕ ಬಲ, ಇವುಗಳಲ್ಲಿ ಗಂಡಸರಿಗೆ, ಹೆಂಗಸ ರಿಗೆ ಹಚ್ಚಿ ನೋಡುವ ನೀತಿ, ವರೆಗಲ್ಲು ಭಿನ್ನವಾಗಿದ್ದರಿಂದ ಇಬ್ಬರ ಸ್ಥಿತಿಗತಿಗಳಲ್ಲಿ ಅಜಗಜದಷ್ಟು ಅಂತರ ಬಿದ್ದದೆ. ಆರಿಸುವ ರೀತಿ ನೀತಿಗಳು ಒಂದೆ ಮಾದರಿ ಇದ್ದಾಗ್ಯೂ ಧರ್ಮ ಅರ್ಥ ಕಾಮ ಮೋಕ್ಷ ಇವುಗಳಲ್ಲಿ ಒಂದಾದರು ಪರಿಸ್ಥಿತಿಯ ಒತ್ತಾಯದ ಮೂಲಕ ಗಂಡಸು ಗಳಿಸಿ ಆನೆಯ ಮೇಲೆ ಅಂಬಾರಿ ಹಾಕಿ ಮೆರೆಯಬಹುದು ಆದರೆ ಹೆಂಗಸು, ಗಂಡಸು ಅನುಸರಿಸುತ್ತಿರುವ ಮಾರ್ಗವನ್ನು ಅನುಸರಿಸಿದರು ಅಧೋ ಗತಿ ಹೊಂದಿ ರವರವ ನರಕ ಅನುಭವಿಸುವಳು. ಇದು ಹೇಗೆ! ಇದರ ಮರ್ಮವೇನು ! ನಾವು ಏನು ಮಾಡಿದರೆ ಏನಾಗು ವದು! ಇದು ತಮಗೆ ನನ್ನ ಜನ್ಮದ ಕಥೆಯಿಂದ ಗೊತ್ತಾಗ ಬಹುದು ! ನಾನೇನು ಯಾವ ಸಿದ್ಧಿಯನ್ನು ಗಳಿಸಿರುವದಿಲ್ಲ! ಆದರೆ ಈ ಲೌಕಿಕದೊಳಗೆ ಹೇಗೆ ಬಾಳಬೇಕು! ಹೇಗೆ ಬಾಳಿದರೆ ಆಯುಷ್ಯವು ಸಹ್ಯವಾಗುವದು! ನಾಲ್ಕು ಲೋಕಾಚಾ ರದ ಪುರುಷಾರ್ಥಗಳಲ್ಲಿ ಒಂದರ ಹಿಂದೆ ಆಯುಷ್ಯ ನನ್ನು ಸಹ್ಯವಾಗಿ ಕಳೆಯಲು ಬರುತ್ತದೆ ! ಇದೇ ಸಾಧ್ಯವಾಗದಿದ್ದರೆ ಪ್ರತಿಷ್ಠೆಯನ್ನು ಕಳೆದುಕೊಂಡು ದುರ್ಮರ ಣಕ್ಕೆ ಎಷ್ಟು ಹೆಣ್ಣುಮಕ್ಕಳು ಹೇಗೆ ಈಡಾಗುತ್ತಾರೆ, ಇದು ಗೊತ್ತಾಗುವದು. ಆದ್ದರಿಂದ ಈ ನನ್ನ ಸತ್ಯಕಥೆಯನ್ನು ಓದಿ ನನ್ನ ತಪ್ಪು ತಡೆಗಳನ್ನು ನನಗೆ ತಿಳಿಸಿದಲ್ಲಿ ನಾನು ಇನ್ನಿಷ್ಟು ತಿದ್ದಿಕೊಂಡು ನಡೆಯುವೆನು. ಈವಾಗ ನನಗೆ ೫೦ ವರ್ಷಗಳ ವಯಸ್ಸಾಗಿದ್ದರು ಇನ್ನು ಕಲಿಯಬೇಕೆಂಬ ಹಂಬಲು ನನಗೆ ಇರುತ್ತದೆ ಆದ್ದರಿಂದ ಈ ಕಥೆಯನ್ನು ತಿರುಗಿಮುರಗಿ ಓದಬೇಕು, ಯಾವ ಮಾದರಿ ತಪ್ಪು ತಿಳುವಳಿಕೆ ಯನ್ನು ಮಾಡಿಕೊಳ್ಳಬಾರದು ಮತ್ತು ಡಾಂಭಿಕತನ ಕ್ಕೊಳಪಡದೆ ಇದರೊಳಗಿನ ಅಸಹ್ಯ ಸಂಗತಿಗಳಿಗೆ ಮೂಗು ಮುರಿದು ಗೊಡ್ಡ ಮಡಿವಂತಿಕೆಯಿಂದ ತಾವು ಹಾಳಾಗ ಬಾರದು ಮಿಕ್ಕ ಸಮಾಜವನ್ನು ಹಾಳು ಮಾಡಬಾರದು. ಮತ್ತು ಒಳಗಿಂದೊಳಗೆ ದುಃಖಗಳನ್ನು ನುಂಗಿಕೊಳ್ಳಬಾರದು.

ನಾವೆಲ್ಲರು ಒಂದಾಗಿ ನಿಜಸಂಗತಿಯನ್ನು ಬೈಲಿಗಿಟ್ಟು ನಮ್ಮ ಲೌಕಿಕ ಉದ್ಧಾರ ಮೊದಲು ಮಾಡಿಕೊಳ್ಳೋಣ. ಆಮೇಲೆ ಅಧ್ಯಾತ್ಮಿಕ ಉದ್ಧಾರ ಮಾಡಿಕೊಳ್ಳಲು ಯತ್ನಿಸೋಣ, ಲೌಕಿಕ ಉದ್ಧಾರವಿಲ್ಲದೆ ಪಾರಮಾರ್ಥಿಕ ಉದ್ಧಾರ ಶಕ್ಯವಿಲ್ಲ. ಇದು ಹೇಗೆ ಎಂಬುದು ನನ್ನ ಜೀವನ ಚರಿತ್ರೆಯಿಂದ ನೀವು ನಿರಭಿಮಾನದಿಂದ,ನಿರಹಂಕಾರದಿಂದ,ಪೂರ್ವ ದೂಷಿತ ಗ್ರಹವನ್ನು ತಾಳದೆ ಶಾಂತ ಮನಸಿನಿಂದ, ವಿಮರ್ಶಕವಾಗಿ ಓದಿದರೆ ಗೊತ್ತಾಗುವದು. ನಾನೊರ್ವ ಹಳ್ಳಿಯಲ್ಲಿ ಹುಟ್ಟಿದವಳು. ಹುಟ್ಟಿದ ಕೆಲವು ವರ್ಷಗಳಾದ ಮೇಲೆ ಸಾಧಾರಣವಾಗಿ ನಾನು ೧೦-೧೨ ವರ್ಷದವಳಿರುವಾಗಲೆ ನನ್ನ ತಾಯಿಯು ತೀರಿಕೊಂಡಳು. ನನ್ನ ತಂದೆಯು ಕುಡಕ. ನಾವು ನಾಲ್ಕೈದು ಮಂದಿ ಅಕ್ಕತಂಗಿ ತಮ್ಮಂದಿರು. ಜೀವನ ಸಾಗಿಸುವದೆ ಕಷ್ಟ. ನನ್ನ ಜಾತಿ ಭಾವಸಾಗರ ಕ್ಷತ್ರಿಯ. ನಾನು ಜಾತಿ ಹೇಳಿದೆನೆಂದು ನಮ್ಮ ಜಾತಿಯ ಜನರು ಜಾತಿಗೆ ಕಲಂಕ ಹಚ್ಚಿದಳೆಂದು ತಿಳಿದು ಸಿಟ್ಟಾಗಬಾರದು. ಎಲ್ಲ ಜಾತಿ ಪಂಥಗಳಲ್ಲಿ ಇಂಥ ಸಂಗತಿಗಳು ನಡಿದೆ ಇವೆ, ವೈಯಕ್ತಿಕ ಜಾತಿ ಪಂಥ ವ್ಯಕ್ತಿಗಳ ಸಂಬಂಧ ಇಲ್ಲಿ ಇರುವದಿಲ್ಲ. ಇದು ಸಾಮಾನ್ಯವಾಗಿ ಇಡಿ ಸಮಾಜದ ರಚನೆಗೆ ಸಂಭವಿಸಿರುವದು. ಅದರಲ್ಲಿ ತಿದ್ದುಪಾಟಾಗಿ ನಮ್ಮ ಸಮಾಜದ ವಿಶೇಷವಾಗಿ ಹೆಣ್ಣುಮಕ್ಕಳ ಸ್ಥಿತಿ ಸುಧಾರಿಸಬೇಕು ಅದರಲ್ಲಿ ಎಡರುತೊಡರುಗಳನ್ನು ಹೋಗಲಾಡಿಸಬೇಕು. ಇದರಲ್ಲಿ ನಿಷ್ಪಕ್ಷಪಾತಿ ಗಂಡಸರು ಹೆಂಗಸರು ನೆರವಾಗಬೇಕೆಂಬುದೆ ನನ್ನ ಉದ್ದೇಶವಿದೆ. ಭಾವಸಾಗರ ಕ್ಷತ್ರಿಯ ಜಾತಿಯಲ್ಲಿ ಗಂಡಸರು ಹೆಂಗಸರು ಚಲುವೆಯರು ಆಕರ್ಷಕರು ಇರುತ್ತಾರೆ. ಅದರಂತೆ ನ ನೇನು ಅಷ್ಟು ಚಲುವೆ ಇರದಿದ್ದರು ಆಕರ್ಷಕಳಿದ್ದೇನೆ ಎಂದು ಹೇಳಬಹುದು. ಚಿಕ್ಕಂದಿನಿಂದಲೆ ಆಟಪಾಟಗಳಿಂದ ಹಾವಭಾವಗಳಿಂದ ಒನಪು ವಯ್ಯಾರಗಳಿಂದ, ಮಾತುಗಾರಿಕೆ, ತೀಕ್ಷ್ಣ ಬುದ್ಧಿಯಿಂದ ಎಲ್ಲರನ್ನು ಆಕರ್ಷಿಸುತ್ತಿದ್ದೆ. ಇದರಿಂದಲೇನೆ ನನ್ನ ಮೇಲೆ ಬರಬಾರದಂಥ ಪ್ರಸಂಗಗಳು ಒದಗಿದವು. ಈ ನನ್ನ ಸ್ವೈರ ಆಚಾರ ವಿಚಾರಗಳಿಂದ ಮುಂದೆ ನನ್ನ ಗತಿ ಏನೆಂಬ ಹೆದರಿಕೆಯಿಂದ ನನ್ನ ತಂದೆಯವರು ತಮ್ಮ ಆಪ್ತರಲ್ಲಿಯೆ ಒಬ್ಬ ಪೆದ್ದನನ್ನು ಹುಡುಕಿ ನನ್ನ ಲಗ್ನ ಮಾಡಿ ಕೊಟ್ಟರು. ನನ್ನಂಥ ಆಕರ್ಷಕಳು ಚುರುಕು ಬುದ್ಧಿಯವಳಿಗೆ ಇದೆಂದಾದರು ಸರಿಹೋದೀತೆ. ನನ್ನನ್ನು ಚಿಕ್ಕಂದಿನಲ್ಲಿಯೆ ಶಾಲೆಗೆ ಹಾಕಿದ್ದರಿಂದ ಶಾಲೆಯಲ್ಲಿ ನನ್ನ ನಂಬರು ಯಾವಾಗಲು ಒಂದು ಎರಡರಿಂದ ನನ್ನನ್ನು ಎಲ್ಲರೂ, ಶಿಕ್ಷಕಶಿಕ್ಷಕಿಯರು, ಎಡಬಲಕಿನವರು ಊರ ಪ್ರಮುಖರು, ಶಾಳಾಧಿಕಾರಿಗಳು ಹೊಗಳುವವರೆ! ಬೆನ್ನು ಚಪ್ಪಡಿಸುವವರೆ! ಇಂಥ ಪರಿಸ್ಥಿತಿಯಲ್ಲಿ ನಾನು ನಿರಕ್ಷರಕುಕ್ಷಿಯಾದ ಪೆದ್ದ ಗಂಡನನ್ನು ಮೆಚ್ಚಿರುವದು ಸಾಧ್ಯವೆ ಮೊದಲೆ ಕುಡಕ ನಿರುದ್ಯೋಗಿಯಾದ ಗಂಡನು ನನ್ನ ಬಗ್ಗೆ ಸಂಶಯ ತಾಳಹತ್ತಿದನು. ನಮ್ಮ ತಂದೆಯವರ ಹೆದರಿಕೆಯಿಂದ ಅವನು ಪ್ರತ್ಯಕ್ಷವಾಗಿ ಅಷ್ಟು ತೊಂದರೆ ಕೊಡಲು ಅಷ್ಟು ಸಮರ್ಥನಾಗಲಿಲ್ಲ. ಆದರೆ ದೇಹದಿಂದ ಸುದೃಢಸಿಲ್ಲದ ಮನಸಿನಿಂದ ಹೇಡಿಯಾದ ಲೌಕಿಕ ದೃಷ್ಟಿಯಿಂದ ಕ್ಷುದ್ರನಾದ ನನ್ನ ಗಂಡನು ಏನೂ ಮಾಡಲು ಸಮರ್ಥನಿರಲಿಲ್ಲ. ಆದ್ದರಿಂಧ ಹಿಂದೆ ಅಪಪ್ರಚಾರ, ಮುಂದೆ ಇದ್ದಾಗ ಲಾಚಾರ ಹೀಗೆ ಆಯುಷ್ಯ ಕಳೆಯುತ್ತ ಸಣ್ಣಾಗಿ ತೊಂದರೆ ಕೊಡುತ್ತಿದ್ದನು. ವಿವಿಧ ತೆರನಾಗಿ ಪ್ರಯೋಗಗಳನ್ನು ಮಾಡಿ ಸತತ ಸಂಪರ್ಕದಿಂದ ಎರಡು ವ್ಯಕ್ತಿಗಳಲ್ಲಿದ್ದ ವಿಷಮತೆ ಮತಭೇದಗಳನ್ನು ಅಳಿಸಿ ಎರಡು ಜೀವಗಳುಆತ್ಮೈಕ್ಯವನ್ನು ಹೊಂದಿ ಈ ಕಷ್ಟಮಯ ಪ್ರಪಂಚನಂದನವನವಾಗಿ ಬ್ರಹ್ಮಾನಂದಮಯವಾಗಲೆಂದು ಸಮಾನಶೀಲರನ್ನು ಹುಡುಕಿ ಲಗ್ನ ಮಾಡಬೇಕೆಂಬ ಉದ್ದೇಶವು ದಿನದಿನಕ್ಕೆ ಹಿಂದೆ ಬೀಳಹತ್ತಿತು. ಆದಕ್ಕೆ ಪೋಷಕವೆಂದು ಬಹಿರಂಗ ವಾತಾವರಣ ಮೋಹಕ್ಕೆ ತಡೆ ಆಗಲೆಂದು ಹೆಂಗಸರ ಮೇಲೆ ಬಂಧನಗಳನ್ನು ಹೆಚ್ಚು ಹೆಚ್ಚು ಬಿಗಿಯಾಗಿ ಹೇರಹತ್ತಿದರು. ಹೆಂಗಸರನ್ನು ಗೋಷೆಯಲ್ಲಿಟ್ಟು ಪಾವಿತ್ರ್ಯ ಕಾಪಾಡುವ ಹಂಬಲವು ಗಂಡಸರಲ್ಲಿ ಹೆಚ್ಚಾಗಿ ಅವರ ಪೌರುಷವೆಂದರೆ ಹೊರಗೆ ಏನು ಪರಾಕ್ರಮ ಮಾಡಲಾಗದಿದ್ದರೆ ಮನೆ ಹೆಂಡತಿಯನ್ನು ಪೀಡಿಸುವದೆ ಅವರ ಕರ್ತವ್ಯ. ಇದರಿಂದ ಎಷ್ಟೆ ಮನಸ್ಸು ಬಿಗಿ ಹಿಡಿದು ಪಾಲಿಗೆ ಬಂದದ್ದು ಪಂಚಾಮೃತವೆಂದು ತಿಳಿದು ಹೇಗಾದರು ಸಂಸಾರ ರಥ ಸಾಗಿಸಬೇಕೆಂದರೆ ಅದು ಸಾಧ್ಯವಾಗಲಿಲ್ಲ. ದಿನೆದಿನೆ ಗಂಡನ ಸಲುವಾಗಿ ತಿರಸ್ಕಾರ ಹುಟ್ಟಹತ್ತಿತು. ಕೂತರೆ ಕಾಟ ಎದ್ದರೆ ಕಾಟ ಹೀಗಾಗಿ ಜೀವವು ಬೇಸರಪಡಹತ್ತಿತು. ಎಲ್ಲವು ಅನುಕೂಲವಿದ್ದರೂ ಸೃಷ್ಟಿ ನಿಯಮಕ್ಕನುಗುಣವಾಗಿ ಸ್ವಾವಲಂಬಿ ಸ್ವತಂತ್ರವಿದ್ದ ಹೆಣ್ಣಾಗಲಿ ಗಂಡಾಗಲಿ ಪ್ರಾಣಿಗಳ ಪ್ರವೃತ್ತಿಯು ಅವಶ್ಯಕ ಬಂಧನಗಳನ್ನು ಹರಿದೊಗೆಯಲು ಹವಣಿಸುತ್ತಿರುವಾಗ ವಿರುದ್ಧ, ವಿಷಮಸ್ವಭಾವದ, ಹೇಸಿ ಗುಣಗಳುಳ್ಳ ಗಂಡನ ಕೂಡ ಪ್ರೀತಿಯಿಂದ ಇದ್ದು ಮಹಾ ಪತಿವ್ರತಾ ಅನಿಸಿಕೊಳ್ಳುವ ಬಗೆ ಎತ್ತ! ಎಲ್ಲಕುಸಂಸ್ಕಾರಗಳನ್ನು ಬದಿಗಿರಿಸಿ ಒಳ್ಳೆ ಲೌಕಿಕಕ್ಕೆ ಬೇಕಾ

ಗುವ ಒಳ್ಳೆ ಸಂಸ್ಕಾರಗಳನ್ನು ಪ್ರಚಾರಗೊಳಿಸಲು ಜ್ಞಾನಬಲ ಎಲ್ಲಿ! ಅನುಕೂಲ ವಾತಾವರಣವೆಲ್ಲಿ! ಇದು ನನ್ನೊಬ್ಬಳದೆ ಪಾಡಲ್ಲ. ಆದರೆ ಕೋಟ್ಯಾವಧಿ ಹೆಣ್ಣುಮಕ್ಕಳ ಸ್ಥಿತಿ ಇದು. ಲಗ್ನದ ಪವಿತ್ರ ಗುರಿ ಒತ್ತಟ್ಟಿಗೆ ಉಳಿದು ತಾಯಿತಂದೆಗಳು, ಪಾಲಕರು ಸ್ವಾರ್ಥಕ್ಕಾಗಿ ಹಣಕ್ಕಾಗಿ ಆಪ್ತೇಷ್ಟರು ರೋಗಿ, ದುಷ್ಟ ಸ್ವಭಾವದವರು, ಕುರೂಪಿಗಳಾಗಿದ್ದರೆ, ಮಗಳಿನ ಪ್ರೇಮದ ನಿಮಿತ್ತ ಮನೆ ಅಳಿಯಬೇಕೆಂದು ಸಿಕ್ಕ ಸಿಕ್ಕವರಿಗೆ ಮಗಳ ಲಗ್ನ ಮಾಡಿಕೊಟ್ಟರೆ ಅದರ ಪರಿಣಾಮ ಏನಾಗುವದು ಬೇರೆ ಹೇಳಬೇಕೆ! ಈ ಪ್ರಪಂಚದಲ್ಲಿ ಕಾಲಮಾನಕ್ಕನುಗುಣವಾಗಿ ಸದ್ಯಕ್ಕೆ ಅನುಕೂಲವಿದ್ದದ್ದು ಪ್ರತಿಕೂಲವಾಗುವದು. ಅಂಥಾದ್ದರಲ್ಲಿ ಕೊಟ್ಟ ವಚನ ಪಾಲಿಸುವದು, ಮೊದಲು ನಡೆದಂತೆ ನಡೆಯುವದು ಕಷ್ಟವಾಗುತ್ತಿರಲು ಹೆಜ್ಜೆ ಹೆಜ್ಜೆಗೆ ಪ್ರತಿಕೂಲ ಪರಿಸ್ಥಿತಿಯು ಕೂಡ ಹೋರಾಡಿ ಮುಂದೆ ಸಾಗುವದೆಷ್ಟು ಬಗಿ ಇದೆ, ಇದು ಅನುಭವಿಸದವರೇ ಬಲ್ಲರೂ. ದೊಡ್ಡ ದೊಡ್ಡ ತತ್ವಗಳನ್ನು ಬಾಯಿಂದ ಹೇಳುವದು ಸುಲಭ ಆದರೆ ಅಚರಿಸುವದೆಷ್ಟು ಬಗಿ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ. ಮನೆಯಲ್ಲಿ ತಾಯಿ ಇಲ್ಲ. ತಂದೆ ಕುಡುಕ ಸಾಲಗಾರ, ಅಣ್ಣತಮ್ಮಂದಿರು ಅಕ್ಕತಂಗೆಯರು ಉಡಾಳರು. ವಯಸ್ಸು ಚಿಕ್ಕದು ಇಂಥ ಪರಿಸ್ಥಿತಿಯಲ್ಲಿ ಹೇಗೆ ನಡೆದುಕೊಳ್ಳುವದು ನೀವೇ ಹೇಳಿ, ಇಂಥ ಗಂಡನೊಡನೆ ಸಂಸ್ಕಾರ ಮಾಡುವದು ಕಷ್ಟ. ಮುಂದೆ ಇಡಿ ಆಯುಷ್ಯವು ಹಾಳಾಗುವಕಿಂತ ಮಗಳು ಕಲಿಯಲೆಂದು ಅಲ್ಲಿಯ ಹೆಣ್ಣುಮಕ್ಕಳ ಶಾಲೆಗೆ ಕಳಿಸಹತ್ತಿದರು. ಬುದ್ಧಿಯು ಚುರುಕ, ನಿರಾಲಸ್ಯ ಸ್ವಭಾವವು, ಜಾಣತನದ ನಿಮಿತ್ತ ಶಾಲೆಯಲ್ಲಿ ಒಂದನೆ ನಂಬರು ಪಡೆಯುತ್ತ ಹೋದಂತ ಎಲ್ಲ ಶಿಕ್ಷಕ ಶಿಕ್ಷಕಿಯರು, ಶಾಳಾಧಿಕಾರಿಗಳು ಊರ ಪ್ರಮುಖರು ಶಾಲೆಯ ಉತ್ಸವಾದಿ ಪ್ರಸಂಗಗಳಲ್ಲಿಯು ನನ್ನ ಆಟಪಾಟ ಸಂಘಟನಾ ಚಾತುರ್ಯ, ಹಾವಭಾವಗಳಿಗೆ ಮೆಚ್ಚಿ ಪ್ರೋತ್ಸಾಹನ ಕೊಡುತ್ತಿರುವರು. ಮೆಚ್ಚುಗಳಿಂದ ಮೋಹಿಸುತ್ತಿರುವರು. ಸರಳ ನಂಬಿಗೆ ಮುಂದಮುಗುಳುನಗೆಯಿಂದ ಹಾವಭಾವಗಳಿಂದ ಮೋಹಗೊಳ್ಳುತ್ತಿರುವರು. ಮನೆಯೊಳಗಿನ ವಾತಾವರಣದಿಂದ ಬೆಂದು ಬೇಸತ್ತು ಬೇಜಾರಗೊಂಡ ಪರಿಸ್ಥಿತಿಯಲ್ಲಿ ಹೊರಗಿನ ಪ್ರೋತ್ಸಾಹನದಿಂದ ಇಮ್ಮಡಿ ಆನಂದವಾಗುತ್ತಿತ್ತು. ಯಾರಾದರು ಹೊಗಳಿದರೆ ಸುಲಭವಾಗಿ ಅವರ ಬಲೆಯಲ್ಲಿ ಬೀಳುವಷ್ಟು ಮನಸು ಹಾತೊರೆಯುತ್ತಿತ್ತು. ಬಾಯಿಂದ ಪಾತಿವ್ರತ್ಯದ ಮಹಿಮೆಯನ್ನು ಹೊಗಳುವಂಥ ಅನುಭವಿಕರು ನನ್ನ ಸರಳ ಸ್ವಭಾವದ, ನಂಬಿಗೆಯ, ಶ್ರದ್ಧೆಯ ದುರುಪಯೋಗ ಮಾಡಿಕೊಳ್ಳಲು ಹವಣಿಸುತ್ತಿದ್ದರು. ಪ್ರಾಪಂಚಿಕ ತೊಂದರೆಗಳಿಂದ ಕಂಗೆಟ್ಟ ನಾನು ಒಂದೊಂದು ಸಿಹಿ ಮಾತಿಗೆ ಮರುಳಾಗುತ್ತಿದ್ದೆ. ಸಿಹಿ ಮಾತಾಡುವವರು ತಿಂಡಿ ತಿನಸು ಕೊಡುವವರು, ನನ್ನ ರೂಪ,ಆಕರ್ಷಕತೆಯನ್ನು ಮನಬಿಚ್ಚಿ ಹೊಗಳುವವರು ನನಗೆ ದೇವರ ಸಮಾನರೆಂದು ಕಾಣುತ್ತಿದ್ದರು. ಉಡುಪು ತೊಡಪು ಶೃಂಗಾರದ ಮೋಹವು ಹೆಚ್ಚುತ್ತ ನಡೆಯಿತು ಇಂಥ ಲಕ್ಷಣಗಳನ್ನು ಹತ್ತಿಕ್ಕುವ ತಾಯಿ ತಂದೆಗಳು, ಗುರುಹಿರಿಯರು, ಆಪ್ತೇಷ್ಟರು ದಾಂಭಿಕತನದಿಂದ ದೂಷಿಸಬಹುದು. ಆದರೆ ಇದರ ಹಿನ್ನೆಲೆ ಕಂಡುಹಿಡಿದು ಸದ್ಬುದ್ಧಿಯಿಂದ ಮಾರ್ಗದರ್ಶನ ಮಾಡುವವರು ಸಿಗುವದು ಬಲು ಕಷ್ಟ. ಹೀಗಾಗಿ ನನಗೆ ಮನೆಯಲ್ಲಿರುವದರಕಿಂತ ಮನೆ ಹೊರಗೆ ಗೆಳತಿ ಗೆಳೆಯರ ಕೂಡ ಸ್ವಚ್ಛಂದವಾಗಿ ವಿಹರಿಸುವದು ಸೇರುತ್ತಿತ್ತು. ತರುಣರ ಕೂಡ ಅವರ ಮರಳು ಮಾತಿಗೆ, ವಚನಗಳಿಗೆ ಮರುಳಾಗಿ ಚೆಲ್ಲಾಟ ನಡೆಸಿದೆನು. ಊರ ಪ್ರಮುಖರೆಂದು ಮೆರೆಯುವ ಓರ್ವ ಸೇಕ್ರೆಟರಿಗಳು ಗಂಟು ಬಿದ್ದರು. ಸವಿ ಸವಿ ಮಾತುಗಳಿಂದ ನಿನ್ನ ಸಲುವಾಗಿ ಪ್ರಾಣಕೊಡಲು ಸಿದ್ಧನಿದ್ದೇನೆ. ಆ ಪೆದ್ದ ಗಂಡನಿಗೇಕೆ ಹೆದರುತ್ತಿ ಒಂದು ನಿಮಿಷದಲ್ಲಿ ಅವನ ಬಂದೋಬಸ್ತ ಮಾಡಿಬಿಡುವೆನು. ನಿನ್ನ ಮೇಲೆ ಬಂದ ಪ್ರಸಂಗಗೆಳನ್ನು ನಿವಾರಿಸುವೆನೆಎಂದು ಹೇಳಿ ಕೃತ್ರಿಮ ಹಾಗು ಬೇಕಾಯಿದೇಶೀರವಾಗಿ ಮುನಸಿಪಲ್ ಟ್ಯಾಕ್ಸ ವಸೂಲಿ ಮಾಡಲು ಆಳುಗಳನ್ನು ನಮ್ಮ ಮನೆಗೆ ಕಳಿಸಿ ಹೆದರಿಕೆಯನ್ನುಂಟು ಮಾಡಿದನು. ತಾನೆ ಸಂರಕ್ಷಕನಂತೆ ಮುಂದೆ ಬಂದು ಉಪಕಾರ ಕರ್ತನಾದನು. ಹೀಗೆ ದಿನಗಳು ಹೋಗುತ್ತಿರಲು ಊರಲ್ಲಿ ಬೊಬ್ಬಾಟವು ಹೆಚ್ಚಾಗಿ ಹೆಂಡಿರುಮಕ್ಕಳು ಆಪ್ತೇಷ್ಟರು ಕಾಡಲಿಕ್ಕೆ ಪ್ರಾರಂಭ ಮಾಡಿದ್ದರಿಂದ ಎಲ್ಲಿ ನೌಕರಿ ಹೋಗುವದೊ ಎಂಬ ಹೆದರಿಕೆಯಿಂದ ನನ್ನ ಕಡೆಗೆಅವನು ಅಲಕ್ಷ್ಯಮಾಡಹತ್ತಿದನು. ಇಷ್ಟರಲ್ಲಿ ತಂದೆಯ ಗಂಡನ ಕಾಟವು ಹೆಚ್ಚಾಗಿ ಮನೆ ವಾತಾವರಣವು ಹೆಚ್ಚು ಹದಗೆಟ್ಟಿತು. ಮತ್ತು ಮಾತಿನ ಮಲ್ಲ, ಹೊಣೆಗೇಡಿ ಮನೆಮಾರುಗಳ ಅರಿವಿಲ್ಲದ ಹೆಣ್ಣಿನ ಸುಖದುಃಖಗಳ ಅರಿವು ಇಲ್ಲದ ಸಾಹಸಿ ಚಲುವನಾದ ತರುಣ ಮೋಟಾರ ಡ್ರಾಯವ್ಹರನೊಬ್ಬಗಂಟು ಬಿದ್ದು ಮೋಹಕ ಹಾಗು ಆಕರ್ಷಕ ಮಾತುಗಳಿಂದ ಮರಳು ಮಾಡಿ ಮೋಟಾರಿನಲ್ಲಿ ಕೂಡಿಸಿ ಓಡಿಸಿಕೊಂಡು ಹೋದನು. ಇದರಿಂದ ಸೆಕ್ರೆಟರಿಗಳಿಗೆ ತನ್ನ ಮೇಲಿನ ಕುತ್ತುದಿಂದ ಪಾರಾಗಲು ಹಂಚಿಕೆ ಸಿಕ್ಕಿತು. ಇವಳು ಸಿಕ್ಕವರ ಕೈಯಲ್ಲಿ ಸಿಕ್ಕು ಹಾಳಾಗುವಳು. ಇವಳನ್ನು ಒಂದು ಹೆಣ್ಣುಮಕ್ಕಳ ಸಂಸ್ಥೆಗೆ ಸೇರಿಸಿದರೆ ಅವಳ ಉದ್ಧಾರವಾಗುವದೆಂದು ಹೇಳಿ ನನ್ನನ್ನು ಒಂದು ಸಂಸ್ಥೆಯಲ್ಲಿ ಸೇರಿಸಿ ಉಸುರುಗರೆದನು.

[ ಮುಂದೆ ಸಾಗುವದು.

# ಮಕ್ಕಳ ಮುಂದಿನ ಇಂದಿನ ಶಿಕ್ಷಕ

ಲೇ— ಶ್ರೀ. ಶ್ರೀ. ಸೀ. ಕಟ್ಟೀ ಗುರೂಜಿ, ಕೇಗಾಂವ ಸೊಲ್ಲಾಪೂರ.

ಮಕ್ಕಳ ಮನಸ್ಸು ಮೃದುವಾದುದೆಂಬುದು ಸರ್ವವಿಧಿತವಾದ ಮಾತಾಗಿದೆ. ಆದರೆ ಅವರ ಮನಸ್ಸಿಗೆ ಆಧಾರವೀಯುವ ಸ್ತಂಭವು ದೃಢವೆನ್ನಿರಬೇಕೆಂಬುದು ವಿಚಾರಿಸತಕ್ಕ ಸಂಗತಿಯಾಗಿದೆ. ತೊಳೆದ ಮನಸ್ಸಿನ ಮಕ್ಕಳು ಎಲ್ಲರೂ ಒಳ್ಳೆಯವರೆಂದೇ ತಿಳಿಯುವವು. ಅಂಥ ನಿರ್ಮಲ ಮನಸ್ಸಿನ ಮಕ್ಕಳಿಗೆ ದಾರಿ ದೀಪವು ಮಿಣುಕು ಮಿಣುಕಾಗಿ ಉಳಿದರೆ ಮತ್ತೆ ಕತ್ತಲೆಯ ದಾರಿಯೇ ಭಾವೀಪೀಳಿಗೆಗಾದೀತು! ಗುರುಶಿಷ್ಯರ ನಿರ್ಮಲ ಗಂಗೆ ಯಮುನೆಗಳ ಸಂಗಮವಾದರೆ ಭಾರತದ ಉದ್ಧಾರವಾಗುವದು. ಇಂದಿನ ಯುಗದಲ್ಲಿ ಮಾನವನ ಪರಿಸರವು ಹಣದ ಮೇಲೆ ಅವಲಂಬಿಸಿದೆ. ಹಣದ ಕೊರತೆಗೀಡಾದ ಶಿಕ್ಷಕನು ದುರ್ಮುಖವಾಗಿ ಕಾಣಿಸಿಕೊಳ್ಳುವನು. ಹಣದ ಕೊರತೆಯು ಹಲವಾರು ಚಿಂತೆಗಳ ಸಂತೆಯನ್ನೇ ಶಿಕ್ಷಕನ ತಲೆಯಲ್ಲಿ ಎಬ್ಬಿಸುವದು. ಆಗ ಅವನು ಮಕ್ಕಳೊಂದಿಗೆ ಮಲ್ಲಿಗೆಯಾಗಿ ನಡೆಯಬೇಕೆಂತು? ಇಂದಿನ ಶಿಕ್ಷಕನ ಸಂಬಳದ ಅಂಕಿಯು ಬರಿಯದೊಡ್ಡದಾಗಿದೆ. "ಶಿಕ್ಷಕನಿಗೆ ಬೇಕಾದಷ್ಟು ಸಂಬಳವಿದೆ" ಎಂದುಕೊಂಡು ಜನರು ಅವನ ಕೂಡ ಮಾಡುವ ವ್ಯವಹಾರಗಳಲ್ಲಿ ಮೊದಲಿನ ದಾಕ್ಷಿಣ್ಯವೆ ಉಳಿಸಿಲ್ಲ! ಹೀಗಾಗಿ ಸಮಾಜದ ಗುರುವಾಗಬೇಕಾದವನು ಸಮಾಧಾನ ಭಾವ ವ್ಯಕ್ತಗೊಳಿಸಬೇಕಾದರೆ ಅವನು ಮಾಡಬೇಕಾದ ಸಂಯಮಶಕ್ತಿ ಕಠಿಣವಿದೆ!

ಇಂಥ ಭೀಕರ ಮೂರ್ತಿಯಿಂದ ಮಕ್ಕಳು ಪ್ರಗತಿ ಹೊಂದಲಾರವು. ಅವರಿಗೆ ಬೇಕಾಗುವ ಪ್ರೇಮ ಗುರುವಿನಲ್ಲಿಲ್ಲದಂತಾಗುವದು. ಗುರುಗಳನ್ನು ಕಂಡ ಮಕ್ಕಳು ನಗುತ್ತ ಸುತ್ತು ವರಿಯಬೇಕು. ಅವರ ಮಾತಿನ ಶಬ್ದ ಶಬ್ದಗಳಲ್ಲಿ ಹೊಸತನ ರಸಮಯವಾಗಿ ಕಂಡು ಕೇಳುಕೃತಿಗೆ ಧಿಕ್ಕರಿಸುವ ಮನಸ್ಸು ತನ್ನಿಂದ ತಾನೆ ಅವರಲ್ಲಿ ಹುಟ್ಟಬೇಕು. ನಿಲುಕದ ವಿಷಯ ನಿಲುಕಿಸಬೇಕಾದರೆ ನಿಲುಕಿಸುವವನು ನೆಲುವನ್ನು ಮುಟ್ಟಿರಲೇಬೇಕಲ್ಲವೆ? ನೆಲುವನ್ನೂ ಮುಟ್ಟಬೇಕು—ಮಕ್ಕಳಿಗೂ ನಿಲುಕಿಸಬೇಕೆಂದು, ಮನೆಗಲಿವು (ಶಿಕವಣಿ) ಪ್ರಾರಂಭ ಮಾಡಬೇಕಾಗುತ್ತದೆ. ಇದರಿಂದ ಸಿರಿವಂತರ ಸೊತ್ತಿನಲ್ಲಿ ಶಿಕ್ಷಣವು ಬಂಧಿತವಾಗುವದು. ಮಧ್ಯಮ ವರ್ಗದ ಜನರು ಹಾನಿಗೀಡಾಗುವರು. "ಗುರುಗಳು ಸಾಲೆಯಲ್ಲಿ ಕಲಿಸುವದಿಲ್ಲ!" ಎಂಬ ಆರೋಪಕ್ಕೆ ಗುರವು ಗುರಿಯಾಗುವನು. ವರ್ತಮಾನ ಸ್ಥಿತಿಯಲ್ಲಿ ಮನೆಗಲಿಕೆಯ ಪಥವೇ ಸಿರಿವಂತರಲ್ಲಿ ರೂಢವಾಗಿ ಬಂದಿದೆ. ಅದನ್ನು ಶಿಕ್ಷಕನು ಉಪಯೋಗಿಸಿ ಉಳಿದವರ ಅನಾದರಕ್ಕೆ ಕಾರಣನಾಗುವನು. ವಿಶೇಷವಾಗಿ ಶಿಕ್ಷಕನಿಂದ ಹಣ ಹೀರುವದನ್ನೇ ಸಮಾಜವು ಬಯಸುತ್ತಿದೆ.

ಶಾಲೆಯಲ್ಲಿ ಶಿಕ್ಷಕನು ಪ್ರವೇಶಿಸಿದ ಕೂಡಲೇ ಮಕ್ಕಳು ಸ್ವಾಗತಮಾಡುವಾಗ ಅವರ ಮನಸ್ಸಿನಲ್ಲಿ ಒಂದುವಿಧದಪೂಜ್ಯ ಭಾವನೆಯು ನೈಸರ್ಗಿಕವಾಗಿಯೇ ಬೇರುವಂತೆನಿಸಿ ಅದೇ ಭಾವನೆಯಲ್ಲಿಯೇ ಬೆರೆತು ವಿಷಯ ಪ್ರಾರಂಭವಾಗುವಂತೆ ವಾತಾವರಣವಾಗಬೇಕು. ಶಿಕ್ಷಕನು ಮನಃಕಲಹಗಳಿಂದ ಕೂಡಿದವನಾದರೆ ಎಲ್ಲ ಕೆಲಸಗಳು ನಟನೆ ಮಾಡಿದಂತೆ ಕೃತ್ರಿಮ ತೋರುವವು, ಕೃತ್ರಿಮ ಕಲಿಸುವಿಕೆಯಿಂದ ಶೂನ್ಯ ಫಲವೆ ಪದರಿನಲ್ಲಿ ಬೀಳುವದು! ಪ್ರಾರ್ಥನೆಯ ವೇಳೆಯಲ್ಲಿ ಪಾಲಿಸತಕ್ಕ ನಿಯಮಗಳು ಶಿಕ್ಷಕರಿಂದ ಐಕ್ಯೇಶ್ವರ ಆದರ ಭಾವ ವ್ಯಕ್ತಗೊಳಿಸುವಂತಹದಿದ್ದರೆ ಮಕ್ಕಳಲ್ಲಿಯೂ ಆದರತೆ ಉತ್ಪನ್ನವಾಗುವದು. ಯಾವನ ಅಂತಃಕರುಣವು ನೊಂದಿದೆಯೋ ಅವನು ದೇವರಲ್ಲಿಯೂ ಮುನಿದುಕೊಳ್ಳುವನು. ಅಂತಹ ವ್ಯಕ್ತಿಯಲ್ಲಿ ಆದರತೆ, ದೇವಭಾವ ದೇಶಪ್ರೇಮಗಳೆಲ್ಲಿಂದ ಬರಬೇಕು? ಹೀಗಾಗಿ ನಾಸ್ತಿಕವಾದ ಬೆಳೆಯುವ ಸಂಭವವಿರುತ್ತದೆ. ಶಿಕ್ಷಕನೆಂದರೆ "ನೌಕರಿ ಮಾಡಿ ಹೊಟ್ಟೆ ಹೊರೆದುಕೊಳ್ಳುವ ಆಳು" ಎಂಬದು ಈಗಿನ ಜನಸಾಮಾನ್ಯರ

ಭಾವನೆಯಾಗಿದೆ. ಅವನ ಕೂಡ ಉಳಿದ ನೌಕರರಕಿಂತಲೂ ಜನರು ಮಾಡುವ ವ್ಯವಹಾರವು ಬಿಗಿಯಾಗಿರುತ್ತದೆ.

ಈಗಿರುವ ಅಧಿಕಾರಿಗಳಲ್ಲಿಯೂ ಶಿಕ್ಷಕನ ಬಗ್ಗೆ ಅನಾದರ ಅಲ್ಲಲ್ಲಿ ಕಾಣುವದು. ಎಷ್ಟೋ ವರುಷ ದುಡಿದು ಅನುಭವಿಯಾದ ಶಿಕ್ಷಕನ ಮೇಲೆ ಅನಾನುಭವಿ ಪದವೀಧರ ಅಧಿಕಾರಿಗಳ ಆಡಳಿತ ನಡೆಸು ಅವರಲ್ಲಿ ವಾಗ್ಯುದ್ಧಗಳು ಜರುಗಿ ಅಧೋಗತಿಗೆ ಈಡು ಮಾಡುವದೂ ಉಂಟು. ಶಿಕ್ಷಕನ ಮೇಲಾಧಿಕಾರಿಗಳು ನಡೆದುಕೊಳ್ಳುವ ರೀತಿಯೆ ವಿಚಿತ್ರ ಪದ್ಧತಿಯದ್ದಾಗಿದೆ. ಶಿಕ್ಷಣ ಖಾತೆಗೆ ಸಮಾಜದಿಂದ ಆದರ ಭಾವ ಪಡೆಯುವದು ಹೇಗೆ? ಎಂಬ ವಿಚಾರ ಅಧಿಕಾರಿಗಳ ವಿಚಾರಗಳಿಗೆ ಮೂಲವಾಗಬೇಕು. ಊರವರೆದುರು ಮಕ್ಕಳೆದುರು ಶಿಕ್ಷಕನನ್ನೀರಿಳಿಸಿ ತಮ್ಮ ಪ್ರತಿಷ್ಠೆ ಅಧಿಕಾರ ಬೆಳೆಯಿಸಿಕೊಳ್ಳಲು ಮನೋಭಾವದ ಅಧಿಕಾರಿಗಳಿರುವರು. ಇದರಿಂದ ಅಧಿಕಾರಿಗಳಿಂದ ಶಿಕ್ಷಕನಿಗೆ ಮಾನವಿಲ್ಲ. ಶಿಕ್ಷಕನಿಂದ ಆದರ ಭಾವ ಅಧಿಕಾರಿಗಳಿಗಿಲ್ಲದಂತಾಗಿ ಶಿಕ್ಷಣದ ಸ್ಪ್ರಿಂಗ ಸಡಿಲವಾಗುವದು. ಸಮಾಜ ಗುರುವಿಗೆ ಮಾರ್ಗದರ್ಶನ ಮಾಡುವವರು ಜಗತ್ತಿನ ಮನುಷ್ಯ ಪ್ರಾಣಿಯ ಆತ್ಮಗುರು ಸ್ಥಾನ ಸಂಪಾದಿಸಬೇಕು. ಅವರೆ ಜಗದ್ಗುರುಗಳು.

ಪ್ರಾಥಮಿಕ ಮಾಧ್ಯಮಿಕ ವಿದ್ಯಾಲಯ ಮುಂತಾದವರಲ್ಲಿ ಯಾವ ಗುರುಸ್ಥಾನವೇ ಇರಲಿ ಅವರಿಗೆ ಆಯಾಪರಿಸರಕ್ಕೆ ಹೊಂದಿಕೆಯಾಗಿ ಇರಬೇಕಾಗುವದು. ಆಂಗ್ಲ ಛಾಯೆಯಲ್ಲಿ ಬೆಳೆದ ಶಿಕ್ಷಣವು ಧ್ಯೇಯಋಷಿಯಕಾಲವಾಗಿ ಪರಿವರ್ತಿಸುವದೆಂತು? ಆ ಕಾಲದ ಧ್ಯೇಯ ಸಾಧನೆಯನ್ನು ಈಗಲೂ ಮಾಡಬಹುದು. ಆದರೆ ಆಗಿನ ಜನಮನವು ಬೇರೆ ವರ್ತಮಾನ ಸ್ಥಿತಿಯನ್ನೆ ಶಿಕ್ಷಕನು ಅವಲಂಬಿಸಬೇಕಾಗುವದು. ವಿಜ್ಞಾನದ ಈ ಯುಗದಲ್ಲಿ ಶಿಕ್ಷಕನ ಪರಿಸರ ಪರಿವರ್ತನೆ ಹೊಂದುತ್ತಲೆ ಇರಬೇಕಾಗುವದು. ಸಂಸ್ಥೆಗಳಲ್ಲಿ ದುಡಿಯುವ ಶಿಕ್ಷಕರ ವಿಧಿ ದೇವರೇ ಬಲ್ಲ! ಸಂಬಳದ ಅಂಕಿ ಸಂಖ್ಯೆ ಬೇರೆ, ಸಹಿ ಹಾಕಿದ ನಂತರ ಪಡೆಯುವ ಹಣವೇ ಬೇರೆ. ಇದೆಲ್ಲಕ್ಕೆ ಭಾರತ ಸರಕಾರದ ಆರ್ಥಿಕ ಪರಿಸ್ಥಿತಿಯೇ ಕಾರಣ. ಶಿಕ್ಷಣ ಸಂಸ್ಥೆಗಳನ್ನು ಏಕಕಾಲಕ್ಕೆ ವಿಲಯನ ಮಾಡಿಕೊಂಡರೆ ವೆಚ್ಚವೆ ಬೆಳೆಯುವದು! ಈ ಕಾಲ ಮಾಡುವ ರೀತಿಗಳು, ನಮ್ಮಲ್ಲಿ ಬರಬೇಕಾಗಿದೆ. ಉಳಿದ ಖಾತೆಗಳಲ್ಲಿ ಆಳಿನಿಂದ ಆಧಾರಸ್ತಂಭದ ವರೆಗೆ ಕೈಗೆ ಮೇಲೆ ದೊರೆಯುವ ಹಣವು ಇದ್ದೇ ಇರುತ್ತದೆ. ಸರಾಸರಿ ತಮ್ಮ ಸಂಬಳದಷ್ಟು ಹೊರ ಹಣ ಜಮೆಯಾಗುತ್ತಿರುತ್ತದೆ. ಅಂಥ ಆಸೆಯನ್ನಾದರೂ ಮಾಡದ ಶಿಕ್ಷಕನು ಮನೆಗಲಿವು ಪ್ರಾರಂಭಿಸಿದಲ್ಲಿ ಅನ್ಯಾಯವೇನಲ್ಲ! ಆದರೆ ಸುಸ್ಥಿತಿ ನಿರ್ಮಾಣವಾದರೂ ಕೂಡ ಅದೇ ಕಾಯಕ ಮಾಡಬೇಕೆಂದು ಹೇಳುವ ಉದ್ದೇಶವಲ್ಲ. ಇಂದಿನ ಶಿಕ್ಷಕರೂ ಸಹ ನಿಸ್ವಾರ್ಥಭಾವಿಗಳಾಗಬೇಕಾಗಿದೆ. ಭಾರತವು ಒಂದು ಕುಟುಂಬವೆಂದು ತಿಳಿದರೆ ಯಾವಾಗಲೂ ತಮ್ಮ ತೊಂದರೆಗಳನ್ನು ಒಡ್ಡುವದರಲ್ಲಿಯೂ ಅರ್ಥವಿಲ್ಲ. ಕಲೆಗಳಿಗೆ ಕೇಂದ್ರವೆನಿಸಿಕೊಂಡು ಅಡಚಣೆಗಳನ್ನು ದೂರ ಮಾಡಲು ಸರಕಾರಕ್ಕೆ ಆಳಲು ಸೇವೆ ಸಲ್ಲಿಸಬೇಕಾಗಿದೆ.

ದುಡಿಮೆಯನ್ನು ಕಲಿಸುವ ಶಿಕ್ಷಣವು ಇಂದಿನ ಪೀಳಿಗೆಗೆ ಅವಶ್ಯವಿದೆ. ಮಕ್ಕಳ ವಯಸ್ಸಿಗನುಸರಿಸಿ ಉದ್ಯೋಗ ಶಿಕ್ಷಣದಿಂದ ಸರಿಯಾದ ಕೂಲಿ ತಕ್ಕೊಳ್ಳಬೇಕು, ಶಾಲೆಯಿಂದ ಆರ್ಥಿಕ ಉತ್ಪನ್ನ ಕಾಣಿಸಿಕೊಳ್ಳಬೇಕು. ತಮ್ಮ ಸಂಬಳವು ಆ ಉತ್ಪನ್ನವನ್ನೇ ಅವಲಂಬಿಸುವಂತೆ ಆಗಬೇಕು. ಹಳ್ಳಿಗಳಲ್ಲಿ ಸಾಲೆಯ ಮಕ್ಕಳು ಕೂಲಿ ಮಾಡಲು ಹೋಗುವರು. ಅದೇ ಕೂಲಿಯು ಸಾಲೆಗೆ ಬಂದರೆ ಪದರಲ್ಲಿ ಬಿದ್ದು ವಿದ್ಯೆಯೂ ದೊರೆಯಬೇಕು. ಪಾಲಕರಿಗೂ ಹಣದ ಕೊರತೆ ಮಕ್ಕಳ ಸಲುವಾಗಿ ಅನ್ನಿಸದಂತೆ ಅವರಿಂದ ವಿಷಯಗಳೊಂದಿಗೆ ವ್ಯವಸಾಯ ಮಾಡಿಸುವದು ಮುಖ್ಯ ಕರ್ತವ್ಯವಾಗಿದೆ. ಶಾಲೆಬಿಟ್ಟ ಹುಡುಗ ಹುಡುಗೆಯರು ಕೂಲಿ ಮಾಡಲು ಹೇಸಿಕೊಳ್ಳಬಾರದು. ಪ್ರಾಪ್ತಿಯೊಂದಿಗೆ ಪ್ರಕಾಶದತ್ತ ಸಾಗಬೇಕಾಗವಂತೆ ಮಕ್ಕಳ ತರಬೇತಿಯಾಗಬೇಕು.

ನಿರ್ಮಲ ಭಾವನೆಯಿಂದ ಮಕ್ಕಳ ಮುಂದೆ ಮುಂಜಾನೆಯಿಂದ ಮುದ್ದು ಮಾತುಗಳನ್ನಾಡುತ್ತ ತಮ್ಮ ತೊಂದರೆಗಳನ್ನು ಶಿಕ್ಷಕರು ಮರೆತು ಕಲಿಸುವದನ್ನು ಕಲಿತುಕೊಳ್ಳಬೇಕು. ಇಂದು ಆರ್ಥಿಕ, ಸಾಮಾಜಿಕ, ಸ್ಥಿತಿಗಳು ಅನಾನುಕೂಲವಿದ್ದರೂ ಕೂಡ ಮಾನಸಿಕ ದೃಢತೆಯನ್ನು ಶಿಕ್ಷಕನು ಮಾಡಿಕೊಳ್ಳಬೇಕಾಗಿದೆ. ಕಾಲಮಾನಕ್ಕನುಸರಿಸಿ ಹೊಂದಿ ನಡೆಯಬೇಕು. ಸ್ವತಂತ್ರ ದೇಶವು ನಮ್ಮದಿದೆ. ನಮ್ಮ ಬಡತನ ಹೆರವರಿಗೆ ಹೇಳುವದಕ್ಕಿಂತಲೂ ಅದರ ನಿವಾರಣೆಯ ಮಾರ್ಗವನ್ನು ನೋಡಬೇಕಾಗಿದೆ. ಮನಃ ಸಂಯಮನ ಮಾಡಿ ರಾಷ್ಟ್ರದ ಏಳ್ಗೆಗೆ ಕಾರ್ಯ ಮಾಡಿ ಭಾವೀ ಪೀಳಿಗೆಯ ಜೀವನವನ್ನು ಸುಖಮಯ ಮಾಡಬೇಕು ಮಕ್ಕಳೆದುರು ಸಂತೋಷ ಅಭಿಮಾನಭರಿತ, ಸುಕೃತನಿಷ್ಠೆಗಳಿಂದ ತುಂಬಿದ ಮೂರ್ತಿಯಾಗಿ ಶಿಕ್ಷಕನು ಪೂಜೆಗೊಳ್ಳಬೇಕು.

# ಓ ! ದೇವಿ ಯಿವಳು

ಓಹ್ ! ಆರಾಧಿತೆಯು ಚಿರತಪಸ್ವಿನಿಯು ! ಮುಗ್ಧ ಸುಂದರೆ
ಅತಿಸ್ಮಿತವದನೆ ಶಾಂತ ಸರಸಿ ಧೀರ ಸೌಂದರ್ಯ ದೋರೆ
ಮಂದ ಸ್ಮಿತದೊಲು ಮುಂದಗಮನೆ ಕತ್ತು ತಿರುಗಿಸುತಿರೆ
ಹುದುಗಿಟ್ಟು ಬಾನದಲಿ ವೈಮರೆತು ಕಾರ್ಮೋಡ ಸರಿದ ರವಿಯಂತಿರೆ
ಅಲ್ಲಲ್ಲಿ ಬೆಳ್ಮುಗಿಲ ತುಂಡುಗಳು ತುಂತುರಗಳಿಲ್ಲದಂತಾಗಿರೆ
ನೇಸರಿನ ಪಡುವ ದೇಗುಲದೆಡೆಯು ಸುಧೀರ ಸುಂದರತೆ
ಕವಿ ಅದನೆ ಕುಡಿ ಕುಡಿದು; ಮನವು ತಣಿಯದತಲ್ಲೀನತೆ
ಮಿಡುಕದೊಸೆಯದೆ ಶಾಂತಭಾವವನು ಜಗಕೆಲ್ಲ ತೋರುವೆ
ದೇವ ದೇವನು ಮನೋ ಮಂದಿರದಲಿರು ಸಿರುವ ದಿವ್ಯ ಬಾವವೆನುತೆ
ಗಗನ ಪರಿವಾಣವನು ಪಿಡಿದು ಸಂಜೆಗೆಂಪಿನೋಕುಳಿ ಯರಚುತ
ಲಾರತಿಯ ಬೆಳಗುವಳೊ ದಿನಮಣಿಯ ಸೊಡರಿ(ಟ್ಟು)ಡುತ
ಕನ್ನಡ ದೇವಿ! ವಿದ್ಯುತ್ ! ಸಂಚರಿಪ ಅಂಗಾಂಗಗಳಲಭಿನಯಿಸುತ
ಪ್ರಕೃತಿ ದೇವಿ ಬಾನೆಲ್ಲ ಕೆಂಪಿನಿಂ ಅದೆಂಥ ಚೆಲುವುಯೆನುತ
ರವಿದೇವ ಬಲ್ಲನೆ? ಕವಿ ಬಲ್ಲ ನಿಜ, ಕೆಂಪಿನಿಂಗಿತವಾಸ್ವಾಧಿತ
ನಲ್ಲನೊಲುಮೆಯು ಬರವ ಬಯಸುತ್ತ ಬೆಡಗಾತಿ ಸಿಂಗರಿಸಿಕೊಂಬುತ
ಮನದನ್ನನ ಬರುವಿಕೆಯ ನೀಕ್ಷಿಸುತ ನಡುವೆಣ್
ಸಿಂಗಾರವಾಗಿಹಳು ಆನಂದ ಲಹರಿಯಲಿ
ಆಡುತಾಡುತ ಸುಳಿದು ಬಹ ಮಂದ ಮಾರುತನ
ಕೊಡಾಡಿ ನಲಿಯುತಿದೆ ಸಂಪಿಗೆವನ ನೇರದಾರಿಯಲಿ
ಮನದ ಬಾವದಲಿ ಹಕ್ಕಿಗಳ ಚಿಲಿಪಿಲಿ, ಗಿಡದ ಕೊಂಬೆಯಲಿ
ನವವಧುವು ಮನದಂತೆ ಬಗೆಬಗೆಯ ಮುದದಿಂದಲಿ
ನಸು ಬಿರಿಯಲೊಡರಿಸಿದ ಪಾರಿಜಾತದ ಮಂಗಳ
ಸೆರೆಯಿಂದ ಜಾರುತಾಡುತ ಬಂದು ಜಗವೆಲ್ಲ
ಪಸರಿಸುತ ಮತ್ತತೆಯ ನಿಮ್ಮಡಿಸಿ ಸುಖಕೆ ಸೊಗ-
ಸೀಯುತಿದೆ ಪರಿಮಳವು ಜಗವು ನೋಡುವೆನೆಂಬ
ತವಕದೌತ್ಸುಕ್ಯದಲಿ ನಸುನಗೆಯ ಬೀರುತಿದೆ
ಬಿರಿಯಲೆಳಸುವ ಮುಗುಳು, ಇರುಳು ದೇವಿಗೆ ದಾರಿ
ತೋರಲಿಕೆ ಪಿಡಿದ ಕೈದೀವಿಗೆಗಳೆಂಬಂತೆ
ಮಾರ್ಗಾಯಾಸವಿಲ್ಲದಾಗಿಸಲು ದೇವನೊಲುಮೆಯಂಬಂತೆ
ದಿನದಿನವು ಸಂಜೆ ಬರು—
ವುದು ಇಂತು; ಒಂದಲ್ಲ ಒಂದು ಬಗೆ ನೋಟವನು
ಬೀರುವುದು ಮರೆಸುವುದು ರಾಗಿಗಳ ಬೇರೊಂದು–
ನೃತ್ಯವನು ಹಾಗಲ್ಲ! ಭರತನಾಟ್ಯ ಸುಖವ, ಅದೊಂದು

—**ದೇವಪ್ರುತರಾಯ ಎಸ್. ಹೊಸಕೇರಿ.**

# ನಮ್ಮ ಆಟಗಳು

**ಲೇ— ಚಂಪಾ ಮಹಿಷಿ, ಧಾರವಾಡ.**

ಗಂಗಾಬಾಯಿ ನಸುಕಿನಲ್ಲಿ ಎದ್ದು ಮನೆಗೆಲಸಗಳಿಗಾಗಿ ನಡುಮನೆಯಿಂದ ಹಿತ್ತಲಕ್ಕೆ ಹೋಗುತ್ತಿರುವರು. ಅಷ್ಟರಲ್ಲಿ ಮೊಮ್ಮಗಳಾದ ಲಲಿತಾ ದೃಷ್ಟಿಗೆ ಬೀಳುವಳು.

ಗಂಗಾಬಾಯಿ— ಏನs ಲಲಿತಾ, ಇವತ್ತು ಸೂರ್ಯ ಪಶ್ಚಿಮಕ್ಕೆ ಮೂಡತಾನೇನು ? ಎಂದೂ ಲಗೂ ಏಳುವದಿಲ್ಲ. ಇವತ್ತ ಒಮ್ಮೆಯಾದರೂ ಎಬ್ಬಿಸದೆ ಎದ್ದೀಯಲ್ಲ.

ಲಲಿತಾ— ಇಲ್ಲ ಅಜ್ಜೀ, ದಿನಾ ನಾ ಲಗು ಏಳುದಿಲ್ಲೇನು ? ನೀನು ಏನಾದರೂ ಹೆಚ್ಚಿನ ಕೆಲಸ ಮಾಡಲಿಕ್ಕೆ ಹೇಳಿದರ ನೀನು ಹೇಳಿದ ಹೊತ್ತಿಗೆ ನಾ ಏಳತೀನಿ.

ಗಂಗಾಬಾಯಿ— ನೀನು ಯಾರು ಎಬ್ಬಿಸದೆ ಏಳೋದು ವಾರದಾಗ ಒಂದು ದಿನ, ಅದೂ ಮಂಗಳವಾರ ಮುಂಜಾನೆ ಸಾಲೆ ಇದ್ದಾಗ. ಉಳಿದ ದಿವಸ ನಾಲ್ಕೈದು ಸಾರೆ ಎಬ್ಬಿಸಿದ ಮೇಲೆ " ಹುಂ " " ಇಲ್ಲಾ " ಅನ್ನುತ ೭॥ ಘಂಟೆಗೆ ಏಳೋದು.

ಲಲಿತಾ— ಯಾವಾಗಾದರೂ ನಾ ಲಗು ಏಳತೀನಿಲ್ಲೋ.ಒಂದೂ ದಿನ ಲಗು ಏಳಲಿಕ್ಕೆ ಆಗುವದಿಲ್ಲ ಅನ್ನಬೇಡ ನನಗ.

ಗಂಗಾಬಾಯಿ— ಅದಾತು, ಇವತ್ತ ಮಂಗಳವಾರ ಇಲ್ಲಾ. ಮುಂಜಾನೆ ಸಾಲೆ ಇಲ್ಲಾ. ಯಾರೂ ಎಬ್ಬಿಸಲಿಲ್ಲಾ ಮತ್ತೇಕೆ ಲಗು ಎದ್ದಿ ? ನನಗೂ ದಿಗಿಲು ಬಿತ್ತು.

ಲಲಿತಾ— ಅಜ್ಜೀ, ಯಾರೂ ಹೇಳದಿದ್ದರೂ ನೀ ಪತ್ತೆ ಹಚ್ಚುವಾಕಿ ನೋಡು. ನೀ ಹೇಳಿದ್ದು ಪೂರಾ ಸತ್ಯ ಅಜ್ಜೀ. ಈ ದಿನ ಆಟಗಳು ನಮ್ಮ ಸಾಲೆಯೊಳಗ ಅವೆ. ನಾನು ಲಗು ಹೋಗಲಿಕ್ಕೆ ಬೇಕು. ಈಗ ನನ್ನ ಗೆಳತೇರು ಬರತಾರ.

ಗಂಗಾಬಾಯಿ— ಅದೇನು ಆಟ ನಮ್ಮವ್ವ ಇವತ್ತೆಂಥ ಆಟ ಆಡತೀಯೆ. ದಿನದ ಹಾಗೆ ಮಧ್ಯಾಹ್ನಾ ಊಟ ಮಾಡಿ ಸಾಲೆಗೆ ಹೋಗೋದು ಬಿಟ್ಟು, ನಿಮ್ಮ ಅಪ್ಪಗ ಗೊತ್ತಾದರ ಸಿಟ್ಟು ಮಾಡತಾರ.

ಲಲಿತಾ— ಅವರಿಗೂ ಗೊತ್ತದ ಬಿಡು. ಅವರೆಂದೂ ಸಿಟ್ಟಗೇಳುವದಿಲ್ಲ.

ಗಂಗಾಬಾಯಿ— ಆಟದ ಸಲುವಾಗಿ ಸುಮ್ಮನ ಸಾಲೆ ಬಿಟ್ಟು ಮುಂಜಾನೆ ಅಲ್ಲಿ ಹೋಗಿ ಕೂಡ್ರೋದು ನನಗಂತೂ ಸೇರುದಿಲ್ಲ. ಆದಿತ್ಯವಾರ ಮದ್ಯಾಹ್ನ ಸೂಟಿ ಇರತದ. ಊಟ ಆದ ಮೇಲೆ ಹುಡಿಗೇರನ್ನ ಕರಕೊಂಡು ಪುಗಡಿ, ಜುಮ್ಮಾ, ಬೇಕಾದರ ಪಗಡಿ ಇಂತಹ ಆಟಗಳನ್ನು ಆಡು. ನಿನಗೆ "ಬೇಡಾ" ಅಂತ ಹೇಳಿದವರು ಯಾರು ?

ಲಲಿತಾ— ಅಜ್ಜೀ ನಿನ್ನ ಮಾತು ಕೇಳಿ ನನಗ ನಗಿ ಬರತದ ನೋಡು. ಮೊದಲಿನ ಕಾಲದ ಆಟ ಇಷ್ಟ ಅಲ್ಲ ಈಗ ನಾವು ಆಡೋದು. ಎಷ್ಟು ತರಹದ ಆಟ ಈಗ ನಾವು ಆಡತೇವಿ ಅನ್ನೋದು ನಿನಗ ತಿಳಿಯುವದಿಲ್ಲ. ಸಂಜೆ ಮುಂದ ನಾನು ಬಂದ ಮೇಲೆ ನಿನಗೆಲ್ಲಾ ಸುದ್ದೀ ಹೇಳ್ತೀನಿ. ಅತ್ತಿಗೀಗೆ ಇದೆಲ್ಲಾ ತಿಳೀತದ ನೋಡು. ಅವರ ತಂಗೆಂದಿರೂ ಎಲ್ಲಾ ತರದ ಆಟದಾಗ ಹೋಗಿರತಾರ. ನನ್ನ ಗೆಳತೇರೆಲ್ಲಾರು ಬಂದರು ನೋಡು.

ಗಂಗಾಬಾಯಿ— ಇವರೆಲ್ಲಾ ಎಂತಹ ಹುಡಿಗೆಯರ ಮೈತುಂಬ ಚೊಣ್ಣಾ ಹಾಕಿಕೊಂಡು ಮೇಲೆ ಸೆರಗು ಹೊತ್ತುಕೊಂಡಾರ. ಇವರ ವೇಷ ನೋಡಿದರ ಗಂಡುಮಕ್ಕಳೊ ಹೆಣ್ಣುಮಕ್ಕಳೋ ಯಾವದೂ ತಿಳಿಯೋ ಹಾಂಗಿಲ್ಲ.

ಲಲಿತಾ— ಇದಕ್ಕ ಪಂಜಾಬಿ ಡ್ರೇಸ ಅಂತಾರ. ಬೇಕಂತ ಆಟಕ್ಕಾಗಿ ಅದನ್ನು ಎಲ್ಲರೂ ಹೊಲಿಸಿದ್ದೇವಿ. ಈಗ ನಾನು ಹಾಕಿಕೊಳ್ಳತೀನಿ ನೋಡು.

ಗಂಗಾಬಾಯಿ— ಈಗಿನ ಹುಡಿಗೆಯರಿಗೆ ಯಾವದೂ ಹೇಳೋಸೋವೀನ ಇಲ್ಲಾ. ನಾನಂತೂ ಆ ಸಾಲಿ ಎಂತದೊ

ನೋಡಿಲ್ಲ. ಮನಿಯೊಳಗೆ ನಮ್ಮ ವಾರಿಗಿಯ ಹುಡಿಗಿಯರ ಜೋಡಿ ಅಣೆಕಲ್ಲು ಕುಂಟಲಪಿ ಚಾವಂಗದ ಆಟ ಇಷ್ಟೇ ಗೊತ್ತು. ಏನು ಈಗಿನ ಯುಗಾ ಬಂತು ! ಇಂತಲ್ಲೆ ಹೋಗಬಾರದು. ಇಂತಹ ಉಡಿಗೆ ತೊಡಿಗೆ ಹಾಕ್ಕೊಬಾರದು ಅಂತ ಹೇಳೊವರು ಯಾರಿಲ್ಲಾ ಇವರಿಗೆ.

ಲಲಿತಾ— ಅಜ್ಜೀ ಹೊತ್ತಾತು ಹೋಗತೀನಿ. ಸಂಜೆ ಮುಂದ ಬಂದ ಮೇಲೆ ನಿನಗೆಲ್ಲಾ ಸುದ್ದಿ ಹೇಳತೀನಿ.

ಗಂಗಾಬಾಯಿ— ಹಾಗೇ ಮಾಡು. ನಾನೂ ಒಳಗಿನ ಕೆಲಸ ಮುಗಿಸಿಕೊಳ್ಳತೀನಿ.

(ಸಂಜೆಯ ೭ ಘಂಟೆಯ ಸಮಯ. ಗಂಗಾಬಾಯಿ ಲಲಿತಾ ಅವಳ ಗೆಳತಿ ಇಂದುಮತಿ ಕುಳಿತಿರುವರು.)

ಲಲಿತಾ— ಅಜ್ಜೀ ಪುರಾಣ ಮುಗಿತೇನು ?

ಗಂಗಾಬಾಯಿ— ಮುಗೀತು ಇನ್ನು ನಿಮ್ಮ ಪುರಾಣ ಸುರುವಾಗಲಿ. ಏನೇನು ಮಾಡಿ ಬಂದಿರಿ ಸಾಲಿಯೊಳಗ ಇಬ್ಬರೂ ?

ಇಂದುಮತಿ— ಅಜ್ಜಿ ಈ ದಿನ ಮುಂಜಾನೆ ಮತ್ತು ಮಧ್ಯಾಹ್ನ ಎರಡೂ ಹೊತ್ತು ಆಟ ಆಡಿದೆವು ಎಷ್ಟು ಮೋಜು ಇತ್ತಂದಿರಿ ?

ಗಂಗಾಬಾಯಿ— ಇಂದುಮತಿ ಈಗ ಸಾಲಿದೊಳಗ ಓದು, ಬರೆಯೋದು ಎಲ್ಲಾ ಕಡಿಮೆಯಾಗೇದ ನೋಡು. ನಮ್ಮ ಹುಡುಗರು ಕಲಿಯುವ ಮುಂದ ಇದೆಲ್ಲಾ ಇದ್ದಿಲ್ಲಾ. ಎಷ್ಟು ಅಭ್ಯಾಸ ಮಾಡತ್ತಿದ್ದರು ಮನಿಯೊಳಗ ? ಅದರ ತಕ್ಕ ಹಾಗೆ ಸಾಲಿಯೊಳಗ ಕಲಿಸತಿದ್ದರು.

ಲಲಿತಾ— ಈಗೂ ಅದೆಲ್ಲಾ ಅದ. ಇದಲ್ಲದೆ ನಮಗ ಹೊಸ ಬಗೆಯ ಎಷ್ಟೋ ಆಟಗಳನು ಕಲಿಸುತ್ತಾರೆ.

ಗಂಗಾಬಾಯಿ— ಹೊಸ ಆಟ ಅಂದರ ಅದು ಇದ್ದುದಾದರೂ ಏನು ಹೇಳಿರಿ. ಇಬ್ಬರೂ ಮುಂಜಾವಿನಿಂದ ಒಳ್ಳೇ ಸಂತೋಷದೊಳಗ ಇದ್ದೀರಿ.

ಲಲಿತಾ— ನಂದು ಹೋ ಹೋದೊಳಗ ಮತ್ತು ಓಟದೊಳಗ ಇಂದುಮತೀದು ಹಗ್ಗದಾಟದೊಳಗ ಮತ್ತು ಜಿಗೀಯುದರೊಳಗ ಮೇಲಿನ ನಂಬರು ಬಂದದ.

ಗಂಗಾಬಾಯಿ— ಹೆಣ್ಣುಮಕ್ಕಳಿಗೆ ಇದೆಲ್ಲಾ ತೊಗೊಂಡು ಏನು ಮಾಡೋದು ಅದ. ಓದುಬರಹ ಕಲಿಸಲಿಕ್ಕೆ ಸಾಲೆ ಅವ. ಇನ್ನು ಮನಿಗೆ ಬಂದ ಮೇಲೆ ನಾಲ್ಕು ಮನೆ ಕೆಲಸ ಕಲಿತರ ನಾಳೆ ಮದವಿ ಆದ ಮೇಲೆ ನಿಮಗ ಉಪಯೋಗ ಬಿದ್ದೀತ. ನಿಮ್ಮ ನಿಮ್ಮ ಮನಿಯೊಳಗ ಚಂಡು ಒಗೆಯೋದು ಓಡೋದು ಮಾಡೋವರ ನೀವು ?

ಇಂದುಮತಿ— ನಮಗೇನು ಮನಿಯೊಳಗಿನ ಕೆಲಸ ಬರುದಿಲ್ಲೇನು ? ನಮ್ಮ ಅವ್ವನ ಕೈತೆಳಗ ಮಾಡಿ ಎಲ್ಲಾನು ಕಲಿತೇವಿ. ಈಗ ನಿಮಗ ಹೇಳಿದ್ದಷ್ಟ ಅಲ್ಲ, ಹಾಡು, ಹಳ್ಳಿಯ ಕುಣಿತ ಇಂತಹವೂ ಕಲಿಸತಾರ.

ಲಲಿತಾ— ಎಷ್ಟು ಚುರುಕುತನ, ಶಿಸ್ತು ಕಲತೇವಿ ಅದರಿಂದ. ಮತ್ತು ಒಮ್ಮೆ ಅದರೊಳಗ ಹೋದರೆ ಪ್ರಯತ್ನ ಮಾಡಿ ಮಾಡಿ, ಕಷ್ಟಪಟ್ಟು ಗೆದ್ದೇ ತೋರಿಸಬೇಕು ಅಂತ ಮನಸ್ಸಿಗೆ ಅನಸ್ತದ ನೋಡು.

ಗಂಗಾಬಾಯಿ— ಅಷ್ಟೇ ಚುರುಕತನ, ಶಿಸ್ತು ಮನಿಯೊಳಗಿನ ಕೆಲಸದೊಳಗ ತೋರಿಸಿದಿ ಅಂದರ ನನ್ನಷ್ಟು ಪುಣ್ಯವಂತರು ಯಾರೂ ಇಲ್ಲ ಅಂತೀನಿ ನೋಡು.

ಲಲಿತಾ— ಇನ್ನು ಮುಂದ ನನ್ನ ಕೆಲಸ ನೋಡು ನಿನ್ನ ಕೈಯಿಂದ ವಾಹವ್ವಾ ಅನ್ನಿಸಿಕೊಳ್ಳತೀನಿ.

ಇಂದುಮತಿ— ಇಂತಹ ಆಟದೊಳಗ ಮೇಲಿನ ನಂಬರ ಬಂದರ ಬೇರೆ ಬೇರೆ ಊರಿಗೆ ಆಡಲಿಕ್ಕೆ ಕರಕೊಂಡು ಹೋಗತಾರ ಅಲ್ಲಿ ಎಷ್ಟೋ ಹುಡಿಗೆಯರ ಗುರುತು ಆಗತದ, ಊರು ನೋಡಲಿಕ್ಕೆ ಸಿಗತದ. ನಮ್ಮ ಎಷ್ಟೋ ಗೆಳತಿಯರು ಇದರ ಸಲುವಾಗಿ ಮುಂಬಯಿಗೂ ಹೋಗಿ ಬಂದರು.

ಗಂಗಾಬಾಯಿ— ಇಷ್ಟೆಲ್ಲಾ ನೀನು ಕಲಿತು ಬುದ್ಧಿವಂತೆ ಆದರ ನಾ ಯಾಕ 'ಬೇಡಾ' ಅನ್ನಲಿ, ನಾನು ಇಂತಾದು ಎಂದೂ ನೋಡಿಲ್ಲಾ.

ಲಲಿತಾ— ಇಲ್ಲೆ ನನ್ನ ಗೆಳತಿಯೊಬ್ಬಾಕಿ ಇದ್ದಾಳೆ ಒಮ್ಮೆ ಅವರ ಮನಿಯೊಳಗ ಮಂಗಳ ಗೌರಿ ಪೂಜೆ ಅದ ಅಂತ ನನ್ನ ಕರಕೊಂಡು ಹೋಗಿದ್ದಳು. ಅಲ್ಲಿ ಬಂದವರು ಎಲ್ಲಾರೂ ಆಟ ಆಡಿದರು. ಅದರೊಳಗ ಸಣ್ಣವರಷ್ಟೇ ಅಲ್ಲ ಅವ್ವನಷ್ಟು ನಿನ್ನಷ್ಟು ದೊಡ್ಡವರೂ ಇದ್ದರು. ಅತ್ತಿಗಿಯಷ್ಟು ದೊಡ್ಡವರಂತೂ ಬಹಳ ಮಂದಿ ಇದ್ದರು.

ಗಂಗಾಬಾಯಿ— ಅದೆಂಥಾ ಜನರು ಇದ್ದಾರ ಅವರು ನಮ್ಮ ಕಡೆ ಪೂಜಾ ಅದರ ಎಲ್ಲರನ್ನೂ ಕರೆದು, ಅರಿಸಿಣ ಕುಂಕುಮ, ಹೂ ಎಲೆಯಡಿಕೆ ಕೊಟ್ಟರ ಆತು. ಇಂತಹ ಆಟ ಆಡೋದು ನಮಗೆಲ್ಲಾ ಗೊತ್ತಿಲ್ಲಾ.

ಲಲಿತಾ— ಅವರು ಮರಾಠಿ ಮಾತಾಡುವವರು. ಅವರ ಕಡೆಗೆ ಇದೇ ಪದ್ಧತಿಯಂತ ಹಾಡು, ನಾಟಕ, ಕೀರ್ತನ ರಾತ್ರಿಯೆಲ್ಲಾ ನಡೆಯಿತು.

ಗಂಗಾಬಾಯಿ— ಅವರನ್ನೆಲ್ಲಾ ನೋಡಿಕೊಂಡು ನೀನ

ಎಲ್ಲಾದರೊಳಗೂ ಹೋಗಲಿಕ್ಕೆ ಹತ್ತೇದಿ.

ಲಲಿತಾ— ಅದೇನಿಲ್ಲವ್ವಾ ಈಗ ನಮಗs ಎಲ್ಲಾತರದ ಆಟಗಳನ್ನೂ ಕಲಿಸತಾ ಇದ್ದಾರ, ನಿನ್ನ ಒಮ್ಮೆ ನಮ್ಮ ಸಾಲೆಗೆ ಕರಕೊಂಡು ಹೋಗಿ ಎಲ್ಲಾ ತೋರಿಸತೇನಿ ನೀನು ನೋಡಿ ಒಮ್ಮೆ ಸಂತೋಷಪಟ್ಟರ ನನಗ ಮತ್ತಿಷ್ಟು ಉತ್ಸಾಹ ಬರತದ.

ಗಂಗಾಬಾಂಯಿ— ಹಾಗೇ ಆಗಲಿ.

---

## " ಹೂವಾಗಿ ಬಾಳು ಜೀವೆ "

ಹೂವಾಗಿ ಬಾಳು ಜೀವೆ
ಹೂವಾಗಿ ನೀ ಜಗದಿ
ಹಾಯಾಗಿ ಬಾಳು ಜೀವೆ ॥ಪಲ್ಲವಿ॥

ಹೂವಿನಾ ಚೆಂಬಣ್ಣ ಕಂಪು ನಿನಗಿರಲಿ
ಮಂಜು ಹನಿಗಳ ಮುತ್ತು ನೀನಲಂಕರಿಸಿರಲಿ
ದಿನಬೆಳಗು ಬಿರಿಬಿರಿದು ನೀನರಳಿ ॥ ೧ ॥

ಬಿರಿದು ನೀ ನರಳಿರಲು ಕಂಪಜನದ ಮನಕಾನಂದ ನೀ ಬೀರಿರಲು
ಚೆಂದುಂಬಿ ಜೆನ್ನೊಣವು ನನ್ಬಂಡನುಂಡು ನಲಿಯುವವು
ತಂಗಾಳಿ ಬಳಿ ಸಾರಿ ನಿನ್ಕಂಪ ಒಯ್ಯುವದು ಓಡೋಡಿ
ನಿನ್ನೋಡಿ ನಲಿಯುವುದು ಧವಲದೀ ಧರೆಯು ॥ ೨ ॥

ಉದಯ ರವಿ ತಾ ನಿನಗೆ ಕೊಡುವನುಡುಗೊರೆಯು
ಬಣ್ಣಬಣ್ಣಕೆ ತನ್ನ ಪೊನ್ನ ಬಣ್ಣದ ಕಳೆಯು
ಎಲೆಯ ಮರೆ " ಮಿಣುಕು ಹೂವು" ನಿನ್ನೋಡಿ
ಕವಿ ತಾನು ಬರೆಯುವನು ಶೃಂಗಾರಕಾವ್ಯ ॥ ೩ ॥

ಗಂಡು ಹೆಣ್ಣುಗಳೆಲ್ಲ ನಿನ್ನೋಡಿ ನಲಿಯುವರು
ಒಯ್ಯುವರು ಮುದದಿಂದ ಮುಡಿಯುವರು ಮುಡಿ ತುಂಬ
ಜೀವ ನೀ ಹೂವಾಗಿ ಎಲ್ಲರಿಗು ಮುದ್ದಾಗಿ
ದೇವ ಪೀಠವ ಸೇರಿ ಸಾಗು ನಾಕದ ದಾರಿ ॥ ೪ ॥

**ಬರೆದವರು— ಸಾಂಬಯ್ಯ ಜಿ. ಹೆಗಡೆ ಉಳಗೆರೆ.**



## ಶಾರದಾ ಲಹರಿ

ಬರೆದವರು— ಗಿರಡ್ಡಿ ಗೋವಿಂದರಾಜ ಅಬ್ಬಿಗೇರಿ.

ಅನ್ನದಾನ ಪ್ರಕಾಶನ ಅಬ್ಬಿಗೇರಿಯವರಿಂದ ಪ್ರಕಾಶಿತವಾದದ್ದು. ಫುಲಸ್ಕೇಪ ಸಾಯಿಜ ಪುಟ ೨೦

ಬೆಲೆ ೦—೨—೦

ಶ್ರೀಯುತ ಗಿರಡ್ಡಿ ಗೋವಿಂದರಾಜರು ಬರೆದ ಶಾರದಾ ಲಹರಿ ಎಂಬ ಚಿಕ್ಕ ಕಾವ್ಯವು ಒಳ್ಳೇ ರಸಭರಿತವಾಗಿದೆ. ಕವಿಗಳಲ್ಲಿ ತುಂಬಾ ಕಾವ್ಯ ಶಕ್ತಿಯಿದೆ, ಬರೆಯುವ ಉತ್ಸಾಹವಿದೆ. ಪ್ರಕಟಗೊಳಿಸುವ ಹಂಬಲವಿದೆ ಕನ್ನಡ ಗಂಗಾ ಲಹರಿಯ ಸರಣಿಯಲ್ಲಿಯೇ ಶಾರದಾ ಲಹರಿಯನ್ನು ಒಳ್ಳೇ ಆನಂದವಾಗಿ ಹಾಡಿ ಕುಣಿದಿದ್ದಾರೆ ಕವಿಗಳು. ಸುಸಂಸ್ಕೃತವಾದ ಇವರ ಜ್ಞಾನ ಚಕ್ಷುವಿಗೆ ಪೂರ್ವಜನ್ಮದ ಇವರ ಅರಿವೂ ಕಂಡುಕೊಂಡಂತೆ ನಾಲ್ಕನೇ ನುಡಿಯ ೧ನೇ ಚರಣದಿಂದ ಭಾಸವಾಗುತ್ತದೆ. ಮಹಾತ್ಮರ ಲೀಲೆಯು ಅಗಾಧವಾದದ್ದೇ.

ಕಾವ್ಯವು ತಾಲಬದ್ಧವಾಗಿ ಒಳ್ಳೇ ರಭಸದಿಂದ ಹೊರ ಹೊಮ್ಮಿದೆ. ಕಾವ್ಯಸ್ಫೂರ್ತಿಯ ಪರವಶತೆಯಲ್ಲಿ ಒಂದೆರಡು ಕಡೆಗೆ ಹಸ್ತದೋಷವಾಗಿ ನನ್ನ ಅನ್ನುವ ಶೈಲಿಗೇನೋ ಛಂದೋಭಂಗವಾದಂತೆ ತೋರುವದು.

ಶ್ಲೋ. ೨ ಸಾಲು ೧
,, ೨೬ ,, ೪

ಏನು ? ಎಂಬ ಪ್ರಶ್ನಾರ್ಥಕ ಶಬ್ದವನ್ನು ಊನು ಎಂಬವಾಗಿ ಉಪಯೋಗಿಸಿದ ೨–೩ ಉದಾಹರಣೆಗಳು ದೊರೆಯುವವು. ಅದೇನು ರೂಡಿಯೋ ದೇಶಭಾಷೆಯೋ ಆಗಿರಬೇಕು ಕಾವ್ಯ ಕರ್ತರಿಗೆ.

ಒಟ್ಟಿನ ಮೇಲೆ ಕೃತಿಯು ಚಿಕ್ಕದಾದರೂ ಭಾವನೆಗಳು ಒಳ್ಳೇ ಉದಾತ್ತವಾಗಿದೆ. ಶೈಲಿಯು ಲಲಿತವಾಗಿಯೂ ಅಂತ್ಯ ಪ್ರಾಸಬದ್ಧವಾಗಿಯೂ ಅದೆ. ಕವಿಗಳ ಶಬ್ದ ಭಾಂಡಾರವು ಆದಿಪ್ರಾಸವನ್ನಿಟ್ಟದ್ದರೂ ಕೊರತೆಯಾಗುತ್ತಿದ್ದಿಲ್ಲವೆಂದು ತೋರುತ್ತದೆ.

**ನಿರೀಕ್ಷಕ.**

---

## ಸಾದರ ಸ್ವೀಕಾರ

೧. ಅಂತರ ರಾಷ್ಟ್ರೀಯ ರಾಜಕಾರಣ ಬೆಲೆ: ೨ ರೂ.
ಲೇ:— ಶ್ರೀ. ಕೃಷ್ಣಾಚಾರ್ಯ ಜೋಶಿ B. A. LL. B.
ಪ್ರ:— ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ.

೨. ಅಮರ ಸಂದೇಶ ಬೆಲೆ: ೨ ರೂ.
ಸಾರುವವರು— ಶ್ರೀ. ದೇಶಪಾಂಡೆ ಮನೋಹರ ರಾಯರು ಎಂ. ಎ. ಅಥಣಿ.
ಪ್ರ— ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ.

## — ತಾಯಿ —

ದಿವ್ಯ ಜಗದಲಿ ದೂರದಿಂದಲಿ ಬಂದಿಹುದು ತಾಯಿ ಪ್ರೇಮ
ಅವಳಿಟ್ಟ ಪ್ರೇಮ ಚಿರವಾಗಿ ಮುಂದೇಕೆ ಬಾರ
ತಾಯಿಯಲ್ಲಿಹುದು ಮಗನ ದಿವ್ಯ ಜೀವನದ ನೆನಹು
ಅವಳಿಟ್ಟ ಪ್ರೇಮ ಇನ್ಯಾರಿಗೂ ಬಾರ
ಅವಳ ಆನಂದ ಇರುಹುದು ಸ್ಥಿರ ಮಗನ ಮೊಗದಲಿ
ಅವಳಂತ ಪ್ರೇಮ ಜಗದೊಳಗೆ ಇರಲು ಬಹುದೆ
ಅವಳಿಟ್ಟ ಹಸ್ತವವು ಮೊಗನ ಆಶ್ರಯುವೇನು
ಅವಳುಣ್ಣಿಸಿದ ಅಮೃತವು ಸ್ಥಿರವಾಗಿ ಓಕೆದಿಲ್ಲ
ಉಡಿಯಲಿ ಮಗನಿದ್ದ ಮಾತ್ರಕೆ ಮರೆಯುವಳು ಜಗವನೆಲ್ಲ
ಅವಳಾಡಿಸಿದ ನುಡಿಯು ನಡೆಯು ಮುಂದೆ ತೋರಿದ ಜ್ಞಾನವೇನು
ಅವಳಿಟ ಪ್ರೇಮ ಪರಶಿವನಲ್ಲಿ ಇಹುದೆ?
ಅಂದು ಹಬ್ಬ ಹುಣ್ಣಿಮೆಯ ದಡದ ಅಡಿಯಲಿ
ಮನದಲ್ಲಿಟ್ಟ ಮಗನ ಪ್ರೇಮವು ಕೂಡುವದು ಆತ್ಮನಲಿ
ಆಡಿ ಅಡಿ ದನಿದ ಬಂದ ಮಗನೊಮ್ಮೆ ಬೆಲ್ಲ ಕೊಟ್ಟು
ಬಿಟ್ಟು ಕೊಡುವಳು ತನ್ನ ಪ್ರೇಮವ ಮಗನ ಎದೆಯದಲಿ
ಮರೆಯುವಳೇನು ಮಗನ ಪ್ರೇಮ ಆತನ ರೋಷಗೇನು
ಇಬ್ಬರಲಿ ಬೇಡುವವ ಯಮನಲಿ ಮುಂದಾಗಿ
ಪೋಗುವಳು ಮಗನ ಮೋರೆ ನೋಡಿ
ಆಕೆ ಇಟ್ಟ ಕಣ್ಣೀರು ಮಗನ ಎದೆಯಲಿ ಭಲ್ಲೆ ಏನು
ಆಕೆ ಪಟ್ಟ ದುಃಖವವು ಮಗನಲ್ಲಿ ಕೊರೆಯುದಿಹುದೇ?
ಅಪ್ಪ ಮಾನವರೇ ನಿಮಗೇನು ತಾಯಿ ಇರುವಳೇ ಜಗದಲಿ
ತಾಯಿ ಪುಣ್ಯವಂತರರೇ ನೀವು ನಿಜವಾಗಿ ಧನ್ಯರಣ್ಣ
ಚಿರವಾಗಿ ಬಾಳದ ಆ ಜಡ ದೇಹದಲಿಯ ಪ್ರೇಮ ಚಿರವಾಗಿ ಹಿಡಿಯರಣ್ಣ
ಬಿಟ್ಟು ಮರುಳರಾಗದೆ ಮುನ್ನೋಟ ಕಾಣಿರಣ್ಣ
ಪಡೆದಂತ ಭಾಗ್ಯ ಮಗದೊಮ್ಮೆ ನೆನೆಯುತಾ–
ಜೀವನದ ವರೆಗೆ ನಡಿಯರಣ್ಣ
ಅದನ್ನೊಮ್ಮೆ ಕಳಕ್ಕೊಂಡ ಭಾಗ್ಯ ಕೇಳು ಕಾಣಿರಣ್ಣ

**ಚಂದ್ರಶೇಖರ ತುಂಗಳ** XI B
ಜಿ. ಎ. ಹೈಸ್ಕೂಲ ಬೆಳಗಾಂವ.

# " ಹುಚ್ಚರಾವ "

( ಹರಟೆ )

ಲೇ— ಎಸ್ ಆರ್. ಜೋಶಿ B.A. B Com.

ನನಗ ಬ್ರಹ್ಮಾಂಡ ಸಿಟ್ಟು ಬಂತು !

ಹೌದು ಮತ್ತು !! ಇಲ್ಲಿ ನೋಡ್ರೀ ಮನ್ಯಾಗ ಎಂದೂ ಇಲ್ಲದ್ಹಾಂಗ ನಮ್ಮೆಲ್ಲಾ ಗೆಳೆಯರ ಗುಂಪು ಕೂಡಿ ಹರಟೀ ಹೊಡಕೋತ ಕೂತಿದ್ವಿ. ಹರಟೀ ವಿಷಯರೆ ಏನಂತರೀ. ಕುಡ ಕೂಡ್ಲಿ "ನಡಗಡ್ಲಿ", ಅಂತ ಎಂಥಾ ವಿಚಿತ್ರ ಹೆಸರಪಾ ಇವು ಅಂತ ಒಬ್ಬೊಬ್ಬರ ಒದೊಂದ ಮಜಾ ಕಥೀ ಹೇಳಕೋತ ಹೊಟ್ಟೆ ಹುಣ್ಣಾಗು ಹಾಂಗ ನಕ್ಕೋತ ಕೂತೀವಿ. ಇಷ್ಟರ ಮ್ಯಾಲ ಗುಡೀಗೆ ಕಳಸಾ ಇಟ್ಹಾಂಗ ನನ್ನ ಇಬ್ಬರು ಕಾಲೇಜ Ladies ಬ್ಯಾರೆ ಬಂದಾರ ಅಂತ್ಹಾದದರಾಗ,

ಏ ಹುಚ್ಚಾ ! ಹುಚ್ಚಾ !! ಅಂತ ಅಡಗೀ ಮನಿಯೊಳಗ ಕೂತು ತಲ ಬಾಗಿಲತನಕಾ ಕೇಳಸೂ ಹಾಂಗ ಕೋಮಲ ತಾರಕದಾಗ ಕೂಗಿದರ ನನಗ ಬ್ರಹ್ಮಾಂಡ ಸಿಟ್ಟ ಬರದ ಮತ್ತೇನ ಬರಬೇಕು ?

ಒಮ್ಯಾತು. ಇನ್ನೊ ಮ್ಯಾತು, ಮತ್ತೊ ಮ್ಯಾತು, ನನಗಂತೂ ತಡೀಲಾರದ್ಹಾಂಗಾಗಿ ನಾ ಇನ್ನ ಏನ ಮಾಡತಿದ್ನ್ಯೊ ದೇವರಿಗೊತ್ತು. ಅದರ ಅಷ್ಟರೊಳಗ ನನ್ನ ಗೆಳೆಯ ಬಾಯಿ ತೆಗೆದ ಅಂವ ಕೇಳೂ ಪ್ರಶ್ನೆ ನನಗ ಗೊತ್ತಿತ್ತು. ಕೇಳಿದ್ದರ ಏನ ಹೇಳಬೇಕು. ಅಂಬೂದ ಮಾತ್ರ ನನಗ ತಿಳಿದ್ಹಾಂಗಆಗಿತ್ತು. ದೇವರ ದಯದಿಂದ ನನ್ನ ಇನ್ನೊಬ್ಬ ಅಗದೀ Intimate ಗೆಳೆಯ ನನ್ನ ಕಡೆ ನೋಡಿ,

"ಏ ಹುಚ್ಚಾ ಒಳಗ ಕಾಕೂ ಕರಿತಾರ ನೋಡೋ." ಅಂತ ಅಂದೇ ಬಿಟ್ಟ ಕೂತ ಮಂದಿಯೊಳಗ ಅಂವಗೊಬ್ಬಗ ಗೊತ್ತು. ನನಗ ಮನೀಯೊಳಗ " ಹುಚ್ಚಪ್ಪಾ " ಬಹಾಳ ಪ್ರೀತಿ ಬಂದರ "ಹುಚ್ಚಾ" ಅಂತ ಕರೀತಾರ ಅಂತ. ಆದರ ಆ ಕ್ಷಣಕ್ಕ ನನಗ, ಇವರ ಬಾಯಿ ಸೇದಿ ಹೋಗಬಾರದಿತ್ತ. ಅಂತ ಅನಿಸಿದ್ದು ಮಾತ್ರ ಖರೆ.

ಏನು ಆಗಲಿ ಮುಗಿತೊಮ್ಮೆ ಪ್ರಾರಬ್ಧ ಅಂತ ಎದ್ದಿದ್ದೆ. ಆದರ ಅರ್ಧಾ ಬಿಸ್ಕೀಟು ಬಾಯೊಳಗ ಇಟ್ಕೊಂಡು ನಕ್ಕೊತ ಆ ನನ್ನ Class mate ಕೋಮಲಾಂಗಿ ಕೇಳೇ ಬಿಟ್ಲ.

" ಯಾಕ್ರೀ ಜೋಶಿ" ನಿಮ್ಮ ಹೆಸರು ಹುಚ್ಚರಾವ ಏನು ? ಕಾಕೂ ಹಂಗs ಕರದ್ರಲಾ " " ಹೌದ ಮತ್ತ ಚಹಾ ತಂದಾಂವ ಆದರ ಜೋಡೀನ ಅಡಿಕೀ ತರಬೇಕು. ಅಂತ ತಿಳೀದವಂಗ "ಹುಚ್ಚರಾವ" ಅಂತ ಅವರಾದರಕ್ಕಿಂತ ಇನ್ನೇ ನರೆ ಅಂದಿದ್ದರ ಯೋಗ್ಯ ಇತ್ತು.

ನನಗ ಎದ್ದು ಅಂವನ ಅಪ್ಪಿಕೊಳ್ಳುವಷ್ಟು ಆನಂದ ಆಗಿತ್ತು. ನಮ್ಮ ಹರಟಿ ಮುಗಿತು. ಅವರೆಲ್ಲರೂ ಮನೀಗೆ ಹೋದರು. ಆದರ ನನ್ನ ಹೆಸರಿನ ಗೊಂದಲ ಮಾತ್ರ ನನ್ನ ತಲೀಯೊಳಗ ತಿರಗತಿತ್ತು.

ಅವರು ಹೊರಗ ಹೋಗೂದೊಂದು ತಡ, " ಅಲ್ಲೇ ಕಾಕು, ನನ್ನ, ನನ್ನ Friends ಮುಂದ ಹಂಗ ಕರೀಭಾಡ ಅಂತ ಸಾವಿರ ಸಲ ಹೇಳೀನಿ ಇವತ್ತ "ಅವರು" "ಆಕಿ" ಹ್ಯಾಂಗ ನಕ್ಕರು ನೋಡಿದೇನು? ಸಿಟ್ಟ ಅಳು ಎರಡೂ ಬಂದಿತ್ತು ನನ್ನ ಮುಖದ ಮ್ಯಾಲೆ. ನಮ್ಮ ಕಕ್ಕಿಗೆ ಖರೇ ಅಂದರೂ ಕೆಟ್ಟ ಅನಿಸಿರಬೇಕು. ಪಾಪ !

" ನಾನs ಏನ ಮಾಡಲೇಪಾ ! ಇದರ ಸುಡ್ಲಿ. ನನಗಂತೂ ನಿನ್ನ ಹಂಗs ಕರದು ರೂಢೀ ಆಗೇದ ಅದು ಬಾಯಿಗೆ ಬರತದ" ಅಂತಂದರು.

" ಹಲ್ಲೋ ಇಷ್ಟ್ಯಾಕ ಸಿಟ್ಟಿಗೆ ಬರತೀ ನೀನು ? " ಹುಚ್ಚರಾವ " ಅಂತ ನಿನಗ ಕರೀಬಾರದು. ಹೌದಲ್ಲೋ ಅಂತ ಸಟ್ಟ ಗಾಯಕ್ಕ ನೀರ ಹಾಕಿದ ನನ್ನ ತಮ್ಮ.

"ಅದ್ಯಾಕ ಇದ್ದದ್ದು ಇದ್ಹಾಂಗ ಅಂದರ ನಿನಗ್ಯಾಕ ಇಷ್ಟು ಅವಮಾನ ! ಮತ್ತು ನ್ಯಾಲ 'ಹುಚ್ಚರಾವ' ಅಂತ ನಿನ್ನ ಕರದರ ನೀ ಏನ ಖರೇ ಹುಚ್ಚ ಆಗ್ತೀ ಏನ, ಮಸ್ತ ಪಕ್ಕಾ ಇದ್ದೀ ಏಳು ಅದೇನಿಲ್ಲಾ ನಾ ಮಾತ್ರ ಹಂಗs ಅನ್ನಾಕಿ ನೋಡು " ನನ್ನ ಅಕ್ಕ ಅಪೀಲು ಮಾಡಿದ್ಲ !

"ಅಲ್ಲs ಈಗ ಬೇಕಾದ್ಹಾಂಗ ಅನ್ನಲು, ಆಗದೀ ಆ ಹುಡಗೀ ಮುಂದ ಹಂಗಂದರ ನಾಳೆ ಹ್ಯಾಂಗ ಪಾಪ" ಅಂತ ನನ್ನ ತಮ್ಮ ಇನ್ನು ಒಂದು ಹೆಜ್ಜೆ ಮುಂದಿಟ್ಟ.

ಇಲ್ಲೀ ನಿಂತರ ಎಲ್ಲಾರ ತಲೀ ಕೆಡೂ ಆಟ ಅಂತ ಹೊರಗ ಬಂದೆ ಆದರ ಕೆಡೂ ತಲೀನೆ ಇದ್ದರ ಎಲ್ಲಿ ಹೋದರೇನು ? ನನ್ನ ತಮ್ಮ ಅಂದ ಮಾತು" ನಾಳೆ ಹ್ಯಾಂಗ ? ಅಂತ ವಿಚಾರಕ್ಕೆ ಹಿಂದೆ ಮುಂದೆ ದೂಕಿದವು.

ಅದ್ಹಾಂಗ ನಾಳೆ "ನನ್ನಾಕಿ" ತನ್ನ ಮೃದುವಾದ ಬೆರಳುಗಳ ಮಧ್ಯ ಉಂಡೀ ಚೂರು ಹಿಡಿದು, ನನ್ನ ಬಾಯೊಳಗ ಹಾಕಿದ ನಂತರ, ಆಹಾ ! ಅಂತ ಸ್ವರ್ಗದ ನೆನಪು ಮಾಡಕೋತ ನಾ ಕೂತಾಗ, ಮುಂದ ಒಗಟನೊಳಗ ನಮ್ಮ ರಾಯರ ಹೆಸರು ಹುಚ್ಚರಾವ ಅಂತ ಏನೂ ಹೇಳಲಿಕ್ಕಿಲ್ಲ, ಯಾಕಂದರ ಲಗ್ನ ಪತ್ರದೊಳಗ ಪ್ರಿಂಟಾಗೂ ಹೆಸರು ನನಗೊಂದು ಬ್ಯಾರೇ ಅದ ಆದರ ಆಕೆ ಮನ್ಯಾಗ ಬಂದಿದ್ದರ ಇವರೆಲ್ಲಾರೂ ನನ್ನ ಆ ಸುಂದರ ಹೆಸರಗೊಂಡು ಕರೆಯೊ ಮುಂದ ನನ್ನ ಗತೀ ಏನು ಅಂತ ನೆನಸಿಗೊಂಡು ಆಗs ನನ್ನ ಬಾಯಿ ಕಹಿಯಾಯ್ತು. ಎಂದೂ ಅಟ್ಟ, ಅಪ್ಪನ್ನ ಬಯ್ದೂ ಅಂವ ಅಲ್ಲ. ಆದರ ಆ ಹೊತ್ತು ಮಾತ್ರ ಈ ಸುಡಗಾಡು ಹೆಸರಿನ ಸಲುವಾಗಿ ಬಯ್ದೆ.

ನಾವs ಕೂತು ಹುಡಗನ್ನ ಹಿಂಗ ಹೆಸರುಗೊಂಡು ಕರದರ ನಾಳೆ ಹ್ಯಾಂಗ ಅಂತ ಇಷ್ಟ ತಿಳೀಬಾರದ ಅವರಿಗೆ ಹಿಂಗ ಅಂದಾಗ ನನಗ ನಮ್ಮಪ್ಪ ಹೇಳೂ ನನ್ನ ಹೆಸರಿನ ಇತಿಹಾಸ ಒಂದು ಕ್ಷಣ ನೆನಪಾತು.

ನನಗ "ಹುಚ್ಚಪ್ಪ" ಅಂತ ಯಾಕ ಕರದರು ಅಂತ ಅಂದರ ನನಗಿಂತಲೂ ಮೊದಲ ಹುಟ್ಟಿದ ಮೂರು ನಾಲ್ಕು ಮಂದಿ ನಮ್ಮ ಅಳಿಂದರು ಈ ತುಟ್ಟಿಕಾಲದಾಗ ಏನ ಇರೂದು ಅಂತ ಹುಟ್ಟಿದ ಸ್ವಲ್ಪ ದಿವಸದಾಗ ಹೊರಟು ಹೋದರಂತ ಅವರಿದ್ದರ ನನಗೇನು ಬಹುಶಃ ಈ ಹೆಸರು ಬರತಿರಲಿಕ್ಕಿಲ್ಲ. ಆದರ ಏನ ಮಾಡೂದು- ಅವರು ಹೋದಿಂದ ನಾ ಭೂಮಿಗೆ ಬಂದೆ. ಇನ್ನ ಈ ಹುಡುನೂ ಎಲ್ಲೆರೆ ಹೋಗಾಂವನೆ ! ಅದಕ ಹೆಸರಿಟ್ಟು ಹೊರಗ ಕಳಿಸಿ ಹಿಂದಾಗಡೆ ಹಳಾಳಿಯದೂ ಯಾಕಂತ ಅಪ್ಪಿ ತಪ್ಪಿ ಬೆಳದರ, ಎಲ್ಲೆರೆ "ಹುಚ್ಚರೆ" ಎಡ್ಡರೆ ಆಗಿ ಬೆಳೀಲಿ ಅಂತಂದು ನನಗ "ಹುಚ್ಚಣ್ಣ" ಅಂತ ಕರದರಂತ ಕೇಳಿದವರಿಗೆಲ್ಲ ಇವನ ಹೆಸರು ಅದ ಅಂತೆ ಹೇಳಿದರಂತ ಇಷ್ಟಕ್ಕ ಮುಗೀಲಿಲ್ಲ ನನ್ನ ಹೆಸರಿನ ಇತಿಹಾಸ. ನಮ್ಮಜ್ಜಗೂ ನನ್ಹಾಂಗ ಆಗಿತ್ತಂತs ನಾ ಹುಟ್ಟೊದಕ್ಕ ನನ್ನ ಮಾರಿ ನೋಡಿ ಮುದುಕ ಆಗಿರದಿದ್ದರೂ, ಅಂವನೂ ಮ್ಯಾಲ ಹೋದಂತ. ಅದಕ ಅಂವನ ನೆನಪಿರಲೆಂತ ನನಗ ಅವರದ ಹೆಸರಿಟ್ಟಿರತ, ನಮ್ಮವ್ವ ಹೇಳತಿದ್ಲು, ನಮ್ಮಪ್ಪ ಸಾಲ್ಯಾಗ ಇತಿಹಾಸದ ಮಾಸ್ತರು. ಅದಕ್ಕs ಅವರಃ, ರಾಣೇಬೆನ್ನೂರ ಹತ್ತರ ಆದೆಲ್ಲೊ ಹುಚ್ಚ ಹನುಮಂತ ಅಂತ ಒಂದು ಹನುಮಂತದೇವರ ಗುಡೀ ಅದ ಅಂತ ಮಕ್ಕಳು ಬದಕಸೀ ಇದ್ದವರು. ಮಕ್ಕಳನ ಆ ಅಂಜನೇಯನ ಪಾದಾರವಿಂದಗಳ ಮ್ಯಾಲೆ ಹಾಕಿ ಅವನ ಆಶೀರ್ವಾದದಿಂದ ಇಷ್ಟಸಿದ್ಧಿಯಾದ ಮ್ಯಾಲೆ ಅವನ ಪ್ರೀತ್ಯರ್ಥವಾಗಿ ತಮ್ಮ ಮಕ್ಕಳಿಗೆ ಅಂವನ ಹೆಸರ ಇಡತಾರ ಅಂತ ತಮ್ಮ ಇತಿಹಾಸಬುದ್ಧೀ ತೋರಸ್ತಾರ. ನಾ ಮಾತ್ರ ಇನ್ನೂ ತನಕಾ ರಾಣೇಬೆನ್ನೂರು ನೋಡಿಲ್ಲಾ ಕೇಳೀನಿ. ನಮ್ಮಪ್ಪನೂ ನೋಡಿಲ್ಲ. ಅಂತ ಹೇಳಿಕೋತ ಹೋದರ ನನ್ನ ಹೆಸರಿನ ಆಧಾರ ಬೇಕಾದಲ್ಲೆ ಬೇಕಾದಷ್ಟು ಸಿಗತಾವ ಮುಂದ, ನಾ ಖರೇ ಅಂದರೂ ದೊಡ್ಡಾಂವ ಆಗಿ ಸಾಲ್ಯಾಗ ಹೋಗಲಿಕ್ಕೆ ಶುರು ಮಾಡ್ಲಿಕ್ಕೆ ಹತ್ತಿದ ಕೂಡಲೆ, ನಮ್ಮಪ್ಪಗ ಕೆಟ್ಟ ಅನಿಸಿತು ಹಂಗ ಕಾಣಸ್ತದ. ಕಾರಣಂದರ ಸಾಲ್ಯಾಗನ ರಜಿಸ್ಟರದಾಗ ನನ್ನ ಹೆಸರ ಬ್ಯಾರೆ ಆಗೇದ. ಆದರ ಆಗ ನನಗ ಹೇಳಲಾರದಷ್ಟು ಮುಂದ ಹೋಗಿತ್ತು ಮಂದಿ ! ಸಂತೀಯೊಳಗ ಸಹಿತ "ಏ, ಹುಚ್ಚ್ಯಾ" ಅಂದರ ತಿರುಗಿ ನೊಡುವಷ್ಟು ಹಿಂದ ಬಂದಿದ್ದೆ ನಾನು !!

ಅವತ್ತಿನಿಂದ ನನ್ನ ಈ ಹೆಸರು ಬೆನ್ನ ಹತ್ತಿದ ಬೇತಾಳದ್ಹಾಂಗ ಬೆನ್ನ ಹತ್ತೇದ "what is in name" ? ಅಂತ ಅನ್ನು ಕವಿ ನನಗ ಇಂದ ಭೆಟ್ಟಿ ಆಗಿದ್ದರ ಒಂದ ಕೈ ನೋಡ್ತಿದ್ದೆ ಅವನನ್ನ. ಒಳ್ಳೇ ಸಡಗರದಾಗ ನಾಲ್ಕು ಮಂದೀ ನಡುವ "ಪೋಕ್ತ" ಆಗಿ ಮಾತಾಡಕೋತ ನಾ ರೋಡ ಹಿಡದ ಹೊಂಟೇನಿ ಅಷ್ಟರಾಗ ನಮ್ಮೂರಿನಂವಾ ಒಬ್ಬವ ನನ್ನ ಹಿಂದಿಂದ ಬಂದು "ಏನಪಾ ಏ ಹುಚ್ಚ್ಯೋಪಂತ" ಕಾಲೇಜಿಗೆ ಬಂದೀ ಅಂತ ನಾವು ಕಣ್ಣಾಗ ಕಾಣೂದೇ ಇಲ್ಲೇನೋ ಅಂತಂದರ ನೀವ ಹೇಳ್ರಿ ನನಗ ಕಣ್ಣಿಗೆ ಕತ್ತಲಿ. ಬಂದಿರಬೇಕೋ ಇಲ್ಲೊ? ನನಗಿನ್ನ ನೆನಪದ. ನಾ ಹಾಯುಸ್ಕೂಲದಾಗ ಇದ್ದಾಂಗ ಒಂದ ದಿನ ಭಾಷಾ ಸ್ಪರ್ಧಾದ ಮೊದಲನೇ ನಂಬರು ಹೊಡದು ಪ್ರಾಯ್ಜ ತೆಗೊಂಡು ಬರಲಿಕ್ಕೆ ಹತ್ತಿದ್ದೆ. ಹಾದೀಯೊಳಗ ನಮ್ಮ ಕ್ಲಾಸ ಮಾಸ್ತರು ತಮ್ಮ ಮಗ್ಗಲಿಗೆ ಕೂತ ಸದ್ಗೃಹಸ್ಥರಿಗೆ ನೋಡ್ರೀ ಈ "ಪಕ್ಕಾ ಶ್ಯಾಣ್ಯಾ ಇದ್ದಾನ ಈ ಹುಚ್ಚ" ಅಂತಂದರು ಒಮ್ಮೆಂತೂ ನಾ ನಮ್ಮ ಅಪ್ತರ ಮನೀ ಮದಿವಿಗೆ ಹೋಗಿದ್ದೆ. ಎಲ್ಲಾರೂ ಕೂತಾರ, ಬೀಗರ ಬಂದಾರ ಯಾರ ತಲ್ಯಾಗ ಬಂತೋ ದೇವರೇಬಲ್ಲ. ಒಂದೆರಡು ಹಾಡಿನ "ಪ್ರೋಗ್ರಾಮ" ಆಗಲಿ ಅಂತಂದರು ಬೀಗರ ಪೈಕಿ ಒಂದಿಬ್ಬರು. ಬೇಸೂರ ಧನೀಲೆ ಹಾಡಿದರು ಇರಲಿ ಅಂತ ನಾ

ಸುಮ್ಮನಿದ್ದೆ. ಯಾಕಂದರ ಕುಡ್ಡರಾಗ ಮೆಳ್ಳ ಶ್ರೇಷ್ಠ ಅಂತ ಆ ಹುಡುಗೂರಕಿಂತಲೂ ನನ್ನ ಧನಿ ಛಲೋ ಇತ್ತು ಆಗ. ಆದರ ಅಷ್ಟರಾಗ ನಮ್ಮ ಕಾಕಾ "ಅದ್ಯಾಕ ಯಾಕs ನಮ್ಮ ಕಾಕಾ, " ಅದ್ಯಾರ ಯಾಕs ನಮ್ಮ " ಹುಚ್ಚ " ಹಾಡತಾನಲಾ, " ಒಂದ ಹಾಡ ಹಾಡು, ಅಂತ ಅಂದಬಿಟ್ಟರು. ಬೀಗರೆಲ್ಲಾ ನಕ್ಕs ನಕ್ಕರು. ಅವತ್ಯಾಂಗ ದಿನಾ ನೆನಪಾದರ ಇವತ್ತಿಗೆ ಸಹಿತ ನನ್ನ ಹೊಟ್ಟ್ಯಾಗಿನ ಸಿಹಿ ಜೀವವೆಲ್ಲಾ ಹುಳೀ ಆಗತಾವ.

ಏನೋ ನನ್ನ ಸುತ್ತಮುತ್ತ ಇರೋ ನಾಲ್ಕು " ಬುದ್ಧಿವಂತರ " ಸಹವಾಸದಿಂದ ನನಗೂ ಯಾರಾದರೆ ಪ್ರತಿಭಾದ Shork ಬಂದು ಒಂದೆರಡು ಕಥೀನೋ ಕವಿತಾನೋ ಒಂದು ಫಾಯಿಲದೊಳಗ ಇಟ್ಟಿರತಿದ್ದೆ ಆದರ ಸಂಪಾದಕರು ಅಥವಾ ಯಾರರೆ ಸಂಪಾದಕರ ಬೀಗರು ನಮ್ಮನಿಗೆ ಬಂದಾಗ ವ್ಯಾಖ್ಯಾ ಸಾಧಿಸಿ, ಯಾಕಂದರೆ ಖರೇತನಕ್ಕ ಮತ್ತ Merit ಗೆ ಈ ಉತ್ರ ಯಾರೂ ಕಿಮ್ಮತ್ತ ಕೊಡೂದುಲ್ಲಾ ಎಲ್ಲಾದಕ್ಕೂ ವಶೀಲಿ ಬೇಕು ಅಂತ, ನನ್ನ ಕವಿತಾದ ಬಗ್ಗ ಹೇಳಬೇಕು ಅಂತನೂ ದರಾಗ ನಮ್ಮ ಮನೀಯೊಳಗಿದ್ದವರು " ನಮ್ಮ ಹುಚ್ಚನೂ " ಯಾವಾಗರೆ ಬರೀತಿರತಾನರಿ " ಅಂತಂದರು ಅಂದರ ಆ ಬಂದವರ ಹುಚ್ಚುಚ್ಚಾರ ನಗೀ ನೋಡಿ ನನಗ ಅಳಬೇಕನಸ್ತದ. ನನ್ನ ಕವಿತಾ ಅಲ್ಲೇ ಸಮಾಧಿ ಕಚ್ತಾವ. ಮುಂದಿ ಬಂದಾಗ ನನ್ನ ಹಂಗ ಕರೀಬ್ಯಾಡ ಅಂತ ಎಷ್ಟೋ ಸಾರೆ ರೊಕ್ಕಾ ಕೊಟ್ಟು ನನ್ನ ತಮ್ಮನು ಸುಮ್ಮಕ ಕೂಡಸೇನಿ ಅಂತ ಅಂದಮ್ಯಾಲ ಈ ಹೆಸರು ನನಗೆ ಎಷ್ಟು ತ್ರಾಸಕೊಟ್ಟಿರಬೇಕು ನೀವs ಲೆಕ್ಕಾಹಾಕರಿ. ಅಸತ್ತಬ್ಯಾಸತ್ತ ಅಕ್ಕನ ಮನಿಗೆ ಹೋದರ ಅಕ್ಕನ ಗಂಡ ಅಕ್ಕ ಅಂತ ಅಂದಂತೆ ನಾ ಯಾವದೇ ಊರಿಗೆ ಹೋಗ್ಲಿ ಅಲ್ಲಿ ಹಠಾತ್ತಾಗಿ ನಮ್ಮೂರಿನಂವಾ ಯಾಂವರೆ ಒಂದು ಯಾಕ " ಹುಚ್ಚ್ಯಾರಾವ ಇಲ್ಲೆ!! " ಅಂತ ಇಷ್ಟಗಲ ಬಾಯಿ ತಗೀತಾನ. ಸುತ್ತಲಿದ್ದ ಮಂದೆಲ್ಲಾ ಆಸಾಮಿ ಮೆಂಟಲ ಹಾಸ್ಪಿಟಲದಿಂದ ಬಂದಾಂಗ ಕಾಣತದ ಅಂತ ಮಿಕೀ ಮಿಕೀ ನೋಡತದ ನನ್ನ. ಸರಿ—ಜೋಡೀ ಅವರು ಇದ್ದರ ಜಬರಿಸಿ ಅವರ ಬಾಯಿ ಬಂದು ಮಾಡಬಹುದು. ಆದರ, ಒಂದು ಕಪ್ಪು ಚಹಾ ಮಾಡಿದಾಗ ಅಸಾಜಸಾಸ ಒಂದು ಇನ್ನೊಂದು ಕಪ್ಪು ಮಾಡೂದಕ್ಕಸಹಿತ ಪ್ರದಸೋತ್ತ ಕೊಡದ ಅದು ಕಪ್ಪುಮ್ಯಾಲೆ ಹಕ್ಕ ಪ್ರಸ್ಥಾಪಿಸೋ ಈ " ಹಿರೀರು " ಅನ್ನೋ ಮಂದಿ, ಈ ನಮ್ಮ ಮಂದೀನೇ ಮಂದೀದೊಳಗ ಘಂಟಾಗಿ ರಾಗದಾರೀ ಧನೀಲೆ " ಹುಚ್ಚ್ಯಾಂತ ಕೂಗಿದರ ಮಂದಿಗೇನ ಮಜಾ ಮಾಡೂದೇನ ಬ್ಯಾಡಾಗೇದೇನ?

ಒಮ್ಮೊಮ್ಮೆ ಹಿಂಗ ಅನಸ್ತದ ನನಗ, ನಮ್ಮವ್ವ ಅಪ್ಪ, ಆತು ಎಲ್ಯಾರೆ ಹುಚ್ಚರೆ ಎಡ್ಡರೆ ಆಗಿ ಬೆಳೀವಲ್ಲ್ಯಾಕ ಅಂತಂದರೂ ದೇವರ ದಯದಿಂದ ನಾ ಶಾಣ್ಯಾ ಆಗಿ ಬೆಳೆದರೂ ಈ ಮಂದಿ ಮಾತ್ರ ನಮ್ಮ ಅವ್ವಾ ಅಪ್ಪನ ಮಾತು ಉಳಸೇ ಶೀರಬೇಕು ಅಂತ ಹರಕೀ ಹೊತ್ತಾಂಗ ನಾ ಖರೇನ ಹುಚ್ಚಾಗಿ ಬೆಳೀಲಿ ಅಂತ ಸಂಕಲ್ಪ ಮಾಡ್ಯಾರೇನೋ ಅಂತ ಆಗೊಮ್ಮೆ ಈಗೊಮ್ಮೆ ಒಬ್ಬರು ನನ್ನ ಸಲುವಾಗಿ ಸಹಾನುಭೂತಿ ತೋರಸ್ತಾರ ಆದರೇನು? ಈ " ಹುಚ್ಚ " B.A.B.Com. ಆಗ್ಯಾನ ಅಂದರೇನದರರ್ಥ? ಇದಕ್ಯಾಂಗ ಮತ್ತ ಕೆಲವರು ಇಂಥಾ ಹುಡುಗ್ಗ ಹುಚ್ಚ ಅಂತ ಹೆಸರಿಟ್ಟ ಅವರಗ್ಪ ಖರೇ ಹುಚ್ಚ ಅಂತ ಅಂತಾರೇನೋ ನಿಜ. ಆದರ ಮಂದಿ ಅದಕ್ಕೂ ಒಂದು ಬ್ಯಾರೇನ ಅರ್ಥ ಹಚ್ಚಿ ನಗತಾರ.

ಕತ್ತಿ ತಪ್ಪಿದರ ಹಾಳ ಗೋಡಿ ಅನ್ನೂಹಾಂಗ ಇಷ್ಟೆಲ್ಲಾ ವಿಚಾರ ಮಾಡಿಕೋತ ಗ್ರಾಮಪ್ರದಕ್ಷಿಣೆ ಹಾಕಿ ಮನಿಗೆ ಬಂದೆದ್ದೆ. ಮನೀ ನೋಡಿದ ಕೂಡಲೆ ಮತ್ತ ನಮ್ಮ ತಮ್ಮನ " ನಾಳೆ ಹ್ಯಾಂಗ " ಅಂವನ ಮಾತು ಮತ್ತ ನೆನಪಾತು. ಆದರ ಸಂಗತೀನ ತಲ್ಯಾಗ ಮಿಂಚು ಬಂದಾಂಗ್ಹಾಗಿ ಒಂದು ಮಾತು ಹೊಳದು, ನನ್ನ ಬುದ್ಧಿಮತ್ತಾದ ಬೆಳಕು ಕಂಡು ನಾನೇ ನಕ್ಕೆ. ಯಾಕಂದರ ನಾಳೆ ನನ್ನ ಮನೀಗೆ ಬರೋ " ನನ್ನಾಕಿ " ಮಾತ್ರ ಯಾರಿಗೆರೆ ಮಂದಿಗೆ ಅಥವಾ ತನ್ನ ಸುಪುತ್ರಗ ಸುದ್ಧಾ ಯಾವಾಗರೆ ಸಿಟ್ಟು ಮಾಡೂಣಂತ ಏನರಲೆ ಹುಚ್ಚಾ " ಅನಬೇಕು ಅಂತ ನಾಲಿಗಿ ತುದೀಗೆ ತಂದರೂ " ಅಯ್ಯ " ಅವರ ಹೆಸರಲ್ಲ ಇದು ಅಂತ ಮನಸಿನೊಳಗ, ನಾಳಿನ ಜಗತ್ತಿನ ಸ್ತ್ರೀಯರೊಳಗ ಸ್ತ್ರೀಸಹಜಲಜ್ಜಾ ಅಂತನ್ನೋದೇನರೆ ಉಳೀತಿದ್ದರ, ಆಕಿ ಜಗತ್ತಿನೊಳಗ ಯಾರಿಗೂ ಆಕಿ ತಪ್ಪಿ ಸಹಿತ ಹುಚ್ಚ ಅನಲಿಕ್ಕಿಲ್ಲಾ ಅಂತ ನನಗ ಶೀರ ಸಂತೋಷಾತು. ಆದರ ಮತ್ತೊಮ್ಮೆ ಏ " ಹುಚ್ಚಾ " ಅಂತ ಮಗನಿಗೂ ಆತು ಮನಿಯವರಿಗೂ ಆತು ಅಂತ ಒಂದು common ಮಂಗಳಾರತೀ ಮಾಡೂದೂ ಆಕಿಗೆ ಸಾಧ್ಯ ಅದ ಅಂತ ಅನಿಸಿದಾಗ ನಾ ನನ್ನ ಖೋಲ್ಯಾಗ ಗಾದೀ ಮ್ಯಾಲ ಮಲಗಿ ಕಣ್ಣು ಮುಚ್ಚಿದ್ದೆ ಕಣ್ಣಮುಂದ ನನ್ನಾಕಿ ಚಿತ್ರ ಇತ್ತು. ಆಕಿ ಏನೋ ಅನಬೇಕು ಅಂತ ಬಾಯಿ ತಗದಲು ನನಗ ಏನ

ಅನಿಸ್ತೊ ಏನೋ ಘಟ್ಟ್ಯಾಗಿಕಿವೀ ಮುಚ್ಚಿಕೊಂಡೆ. ಆದರ ಎಚ್ಚರಾದಾಗ ಮಾತ್ರ ನಮ್ಮ ಕಕ್ಕಿ ಕೂಗತಿದ್ದರು ಏ ಹುಚ್ಚಾ ಚಹಾ ತೊಗೊ ಏಳೋ ಅಂತ ಕೂತರ ನಿಂತರ ಸಹಿತ ಕಾಯಿದೆ ಮಾಡೂ ಈ ದಿವ್ಸದಾಗ, ಹೆಸರುಗಳು ಸಹಿತ ಕೇವಲ ಅವ್ವಾ ಅಪ್ಪಾ ಪ್ರೀತೀಲೆ ಕರೀಲಿಕ್ಕೆ ಅನುಕೂಲ ಇರದ, ಮುಂದ ಅವರಿಗೆ ಬರೊ ಹೆಂಡಂದಿರಿಗೆ ಛಂದಾಗಿ "ಒಗಟಿನೊಳಗ" ಕೂಡಿಸಿ ಹೇಳ್ಳಿಕ್ಕೆ, ಹಡದ ಮಕ್ಕಳಿಗೆ "ಸ್ತ್ರೀಲಿಂಗ" ತಪ್ಪದ ಬರೀಲಿಕ್ಕೆ ಬರೋಹಾಂಗ ಇರಬೇಕು ಅಂತ ಒಂದು ಕಾಯ್ದೆ ಈ ನಮ್ಮ ಸರಕಾರ ಯಾಕ ಮಾಡಬಾರದು ?

# ಪ್ರತಿಭೆ

ಲೇ— ಶ್ರೀಮತಿ ಸುಮಿತ್ರಾ ಅಸುಂಡಿ

ಪ್ರತಿಭೆ ಹೆಸರಿಗೆ ತಕ್ಕಮಗು. ಅನೇಕ ದಿನಗಳಿಂದ ಮಕ್ಕಳಿಲ್ಲದ ಅವಳ ತಂದೆ-ತಾಯಿಗಳಿಗೆ ಇವಳು ಹುಟ್ಟಿದಂದಿನಿಂದ ಸ್ವರ್ಗವನ್ನೇ ಗೆದ್ದಂತಾಗಿತ್ತು ಹೀಗಾಗಿ ಸಂತೋಷದ ಸರೋವರದಲ್ಲಿ ಸ್ವಚ್ಛಂದವಾದ ಕಮಲದಂತೆ ಬೆಳೆಯಹತ್ತಿದಳು ಪ್ರತಿಭೆ. ಪೌರ್ಣಿಮೆಯ ಚಂದಿರನಂತೆ ದಿನದಿನಕ್ಕೂ ತೇಜಃಪುಂಜವಾಗಿ ಕಂಗೊಳಿಸಹತ್ತಿದಳು.

ಪ್ರತಿಭೆ ಇನ್ನೂ ಚಿಕ್ಕ ಮಗು. ತನ್ನ ಮೋಜಿನ ಆಟ ಪಾಟದಿಂದ ಹೆತ್ತ ತಾಯಿತಂದೆಗಳನ್ನು ಆನಂದಗೊಳಿಸುತ್ತಿದ್ದಳು. ಎಷ್ಟೇ ಕಷ್ಟ ಬಂದರೂ ಈ ಮುದ್ದು ಮಗುವನ್ನು ಕಂಡು ಎಲ್ಲವನ್ನೂ ಮರೆತುಬಿಡುತ್ತಿದ್ದರು. ತಮಗೆ ಕಡಿಮೆ ಮಾಡಿಕೊಂಡು ಮಗುವಿನ ಇಚ್ಛೆಯನ್ನು ಪೂರ್ಣ ಮಾಡುತ್ತಿದ್ದರು. ಬಡತನವಿದ್ದರೂ ಅವಳಿಗೆ ಯಾವ ಕೊರತೆಯನ್ನು ಮಾಡಿರಲಿಲ್ಲ. ಏನನ್ನೂ ಅರಿಯದ ಹಸುಳೆಯಂತೆ ಬೆಳೆಯಲಾರಂಭಿಸಿದಳು ಪ್ರತಿಭೆ. ತನ್ನ ತೊದಲ್ನುಡಿಗಳಿಂದ ಎಲ್ಲರನ್ನೂ ಆನಂದಗೊಳಿಸುತ್ತಿದ್ದಳು.

ಪ್ರತಿಭೆ ದಿನಾಲು ಈಗ ಶಾಲೆಗೆ ಹೋಗಲಾರಂಭಿಸಿದಳು. ಇನ್ನೂ ಚಿಕ್ಕವಳಾದರೂ ಬಲುಜಾಣಹುಡುಗಿ. ಎಲ್ಲ ಅಭ್ಯಾಸವನ್ನೂ ಲಕ್ಷ್ಯಗೊಟ್ಟು ಮುಂದುವರಿಸಿದಳು, ಓಮ ಒಕ್ಕಾಲು ಬುದ್ಧಿಮುಕ್ಕಾಲು ಅನ್ನುವಂತೆ ಅವಳ ಬುದ್ಧಿ ಬೆಳೆಯಹತ್ತಿತು. ಶಾಲೆಯಲ್ಲಿ ಎಲ್ಲ ಮಕ್ಕಳಿಗಿಂತಲೂ ಪ್ರತಿಭೆ ಬಲು ಜಾಣೆ. ಹೀಗಾಗಿ ಎಲ್ಲ ಗುರುಗಳಲ್ಲಿಯೂ ಇವಳದೇ ಮೊದಲು ಹೆಸರು.

ಮೊಳಕೆಯಲ್ಲೇ ಗಿಡದ ಭವಿಷ್ಯ ತಿಳಿಯುವಂತೆ ಪ್ರತಿಭೆ ಚಿಕ್ಕವಳಿರುವಾಗಲೇ ಅವಳ ಹಿರಿಮೆಯು ಗೊತ್ತಾಗಹತ್ತಿತು. ಬೇಗಬೇಗನೆ ಒಂದೊಂದು ವರ್ಗವನ್ನು ಮುಂದುವರಿಸಿದಳು. ಮುಲ್ಕೀ ಅಭ್ಯಾಸವೂ ಮುಗಿಯುತ್ತ ಬಂದಿತು. ಪ್ರತಿಭೆಗೆ ಈಗ ಹದಿನಾಲ್ಕುವರ್ಷ ಚಿಕ್ಕ ಪ್ರಾಯದಿಂದ ತುಂಬಿದವಳಾಗಿದ್ದಳು. ಆ ತುಂಬಿದ ದೇಹ, ಚಿಗರೆಯಂಥ ಚಪಲ ಕಣ್ಣುಗಳು, ಮುಗುಳ್ನಗೆಯಿಂದ ಪ್ರಫುಲ್ಲಿತವಾದ ಮುಖ ಇವು ಪ್ರತಿಭೆಯನ್ನು ಅಣಕಿಸಹತ್ತಿದವು. ಆ ಹಳ್ಳಿಯಲ್ಲಿ ಎಲ್ಲ ಕಡೆಗೂ ಪ್ರತಿಭೆಯ ಚಲುವಿಕೆ ಹರಡಲಾರಂಭಿಸಿತು.

ಪ್ರತಿಭೆಯ ವಿದ್ಯೆ ಅಷ್ಟಕ್ಕೆ ಕುದುರುವ ಹೊತ್ತು ಬಂದಿತು. ಎಷ್ಟೇ ಕಲಿಯಬೇಕೆಂದರೂ ಪಾಪ ಹತ್ತಿರ ಹಣವಿಲ್ಲ. ಅವಳ ತಂದೆಗೆ ಬಹಳ ಚಿಂತೆಯಾಯಿತು ಇಷ್ಟಪಟ್ಟು ಕಲಿಯುತ್ತಿರುವ ಮಗಳನ್ನು ಕಷ್ಟಕ್ಕೆ ಗುರಿಮಾಡುವಹೊತ್ತು ಬಂತೆಂದು ಮರುಗಲಾರಂಭಿಸಿದನು. ಕೊನೆಗೆ ಎಲ್ಲಿಯಾದರೂ ಹಣ ದೊರಕಿಸಿ ಮಗಳ ವಿದ್ಯೆ ಮುಂದುವರಿಸಬೇಕೆಂದು ವಿಚಾರ ಮಾಡಿದನು. ಆತನ ಬಾಲ್ಯಗೆಳೆಯನಾದ ಗಂಗಾಧರಶೆಟ್ಟಿಯ ಹತ್ತಿರ ಸಾಲ ಕೇಳಬೇಕೆಂದು ಆಶೆಯಿಂದ ಅವನ ಮನೆಗೆ ಹೋದನು. ಮಿತ್ರರ ಮಾತುಗಳು ಮುಗಿದು ಮುಂದೆ ತನಗೆ ಸಾಲದ ಪ್ರಶ್ನೆ ಇದುರಿಗೆ ಬಂದು ನಿಂತಿತು. ಗಂಗಾಧರನೂ ಹಣ ಕೊಡುವದಾಗಿ ಒಪ್ಪಿದನು. ಪ್ರತಿಭೆಯ ತಂದೆಗೆ ಆನಂದ ಬಾಷ್ಪಗಳು ಉದುರಿದವು. ನನ್ನ ಮಗಳು ಮುಂದುವರಿಯುವ ಹೊತ್ತನ್ನು ದೇವರು ಅನುಕೂಲಮಾಡಿ ಕೊಟ್ಟನೆಂದು ಮನದಲ್ಲಿ ಹಿರಿಹಿರಿ ಹಿಗ್ಗಿದನು. ಪ್ರತಿಭೆಯ ಶಾಲೆ ಹಾಗೇ ಮುಂದುವರಿಯಿತು. ಆದರ ಜೊತೆಗೆ ಅಭ್ಯಾಸವೂ ಜೋರಿನಿಂದ ಸಾಗಿತು. ಎಲ್ಲದರಲ್ಲಿಯೂ ತೆರಬೇತಿ ಪಡೆದು ಮಾಧ್ಯಮಿಕವನ್ನೂ ತನ್ನ ಕೈವಶವಾಗಿ ಮಾಡಿಕೊಂಡಳು. ಈಗ ಪ್ರತಿಭೆ ಯಾವದರಲ್ಲಿಯೂ ಹಿನ್ನುಗ್ಗಲಾರಳು. ವಿದ್ಯೆಯಲ್ಲಿಯೂ ಬುದ್ಧಿಯಲ್ಲಿಯೂ ಪ್ರಗತಿ ಸಂಪಾದಿಸಿದ್ದಳು. ಆದರಂತೆಯೆ ಸೌಂದರ್ಯದಲ್ಲಿಯೂ ಒಂದು ಹೆಜ್ಜೆ ಮುನ್ನುಗ್ಗಿಯೇ ಇದ್ದಳು. ಮ್ಯಾಟ್ರಿಕ ಅಭ್ಯಾಸ ಮುಗಿಸಿ ಮುಂದಿನ ವಿಚಾರದಲ್ಲಿದ್ದಳು.

ಪ್ರತಿಭೆಗೆ ೧೮ ವರ್ಷ. ತುಂಬಿದ ತಾರುಣ್ಯ ಯೌವನದ ಉಯ್ಯಾಲೆಯ ಮೇಲೆ ಕುಳಿತು ಸ್ವೇಚ್ಛೆಯಾಗಿ ಜೀಕುತ್ತಿದ್ದಾಳೆ. ಹಳ್ಳಿಯ ಎಲ್ಲ ಜನರ ಕಣ್ಣಲ್ಲಿಯು ಪ್ರತಿಭೆ ಬಿಂಬಿಸಿದ್ದಳು. ಎಷ್ಟೋ ತರುಣರು ಅವಳನ್ನು ಕೈಹಿಡಿಯಲು ಪ್ರಯತ್ನಪಟ್ಟರು ಆದರೆ ಪ್ರತಿಭೆ ಲಗ್ನವನ್ನು ಇಚ್ಛಿಸಲಿಲ್ಲ. ಎಲ್ಲರೂ ನಿರಾಶೆ

ಗೊಂಡರು ಅವಳನ್ನು ವರಿಸುವ ಭಾಗ್ಯ ಯಾರದೂ ಬರಲಿಲ್ಲ.

ಗಂಗಾಧರಶೆಟ್ಟಿ ಮಾತ್ರ ಇವಳನ್ನು ಓರೆಗಣ್ಣಿನಿಂದ ನೋಡುತ್ತಿದ್ದ. ಆಗಾಗ ಅವಳ ಮನೆಗೂ ಹೋಗಿ ಅವಳ ತಂದೆಯ ಜೊತೆ ಮಾತನಾಡ್ಡಿಬರುತ್ತಿದ್ದ. ಅವನಿಗೆ ಸುಮಾರು ೫೦ ವರ್ಷ. ಮನೆಯಲ್ಲಿ ಹೆಂಡತಿ ತೀರಿಹೋಗಿದ್ದಳು. ಊರಿಗೆಲ್ಲ ದೊಡ್ಡವನಾಗಿ ದೊಡ್ಡಿಸ್ತಿಕೆಯಿಂದ ಇರುತ್ತಿದ್ದನು. ಇವನು ಹೇಳಿದ ಮಾತನ್ನು ಊರ ಜನ ಮೀರುತ್ತಿರಲಿಲ್ಲ. ಆದರೆ ಗಂಗಾಧರ ಪ್ರತಿಭೆಯನ್ನು ತನ್ನ ವೆಣ್ಮಣಿಯಲ್ಲಿ ಪೋಣಿಸಿಬಿಟ್ಟನು. ಪ್ರತಿಭೆ ಬಲು ಜಾಣಾಕ್ಷಿ ಕೂಡಲೇ ಆತನ ನಡೆನುಡಿಗಳನ್ನು ಮನಗಂಡಳು. ತಂದೆ ತಾಯಿಗೆ ತಿಳಿಸಿದರೆ ಅವರು ವಿಪರೀತ ಭಾವಿಸಬಹುದೆಂದು ತಡೆದಿದ್ದಳು. ಗಂಗಾಧರ ಸೆಟ್ಟಿ ದಿನಾಲು ಪ್ರತಿಭೆಯಲ್ಲಿ ಬರತೊಡಗಿದ. ಅವಳ ತಂದೆಯೊಡದೆ ಎಷ್ಟೋ ಹೊತ್ತು ಹರಟುತ್ತ ಕುಳಿತುಕೊಳ್ಳುತ್ತಿದ್ದ. ಯಾರ ಮನೆಗೂ ಇಣಿಕಿ ಹಾಕದ ಈ ವೃದ್ಧ ಇವರಲ್ಲೇಕೆ ಕೂಡ್ರುತ್ತಾನೆ? ಎಂದು ಜನ ಮಾತನಾಡಲಾರಂಭಿಸಿತು. ಜನರ ಬಾಯಿ ಮುಚ್ಚಲು ಸಾಧ್ಯವೇ? ಇಲ್ಲದ್ದನ್ನು ಹುಟ್ಟಿಸಹತ್ತಿದರು. ಪಾಪ ಮುದಿ ತಂದೆ-ತಾಯಿಗಳಿಗೆ ಬಹಳ ಆಪತ್ತು ಬಂದಂತಾಯಿತು. ತಮ್ಮ ಸ್ನೇಹದ ಪುತ್ಥಳಿಯನ್ನು ಯಾರಿಗಾದರೂ ಯೋಗ್ಯನಿಗೆ ಒಪ್ಪಿಸಬೇಕೆಂದು ಒಳಗೊಳಗೇ ತವಕಪಡುತ್ತಿದ್ದರು. ಆದರೆ? ........ಎಂದು ಸುಮ್ಮನಾಗುತ್ತಿದ್ದರು. ಇದೆಲ್ಲದಕ್ಕೆ ಪ್ರತಿಭಳ ತಿರಸ್ಕಾರವೇ ಕಾರಣವಾಯಿತು. ಯಾರನ್ನು ಕಂಡರೂ ಲಗ್ನವಾಗಲಾರೆ ಎಂದು ಹೇಳಿಬಿಡುತ್ತಿದ್ದಳು. ಕೊನೆಗೆ ಅವಳ ತಂದೆ ಬೇಸತ್ತು, ಮಗು ಪ್ರತೀ! ನಿನ್ನ ಇಚ್ಛೆಯಾದರೂ ಏನಿದೆ? ಹೇಳಿಬಿಡಬಾರದೇ. ಇನ್ನು ನೀನು ನಮಗೇನೋ ಚಿಕ್ಕವಳು ಆದರೆ ಸಮಾಜದ ಕಣ್ಣಿಗೆ ದೊಡ್ಡವಳಾಗಿ ಕಾಣುತ್ತಿರುವಿ. ಜನರ ಅಪವಾದಕ್ಕೆ ಸುಮ್ಮನೆ ಕಿವಿಗೊಡಬೇಕೇ? ಇದು ಹಳ್ಳಿ. ಸ್ವಲ್ಪಕ್ಕೇ ಜನ ಹಾಹಾಕಾರ ವೆಬ್ಬಿಸಿಬಿಡುತ್ತಾರೆ. ನೋಡು ನೀನು ತಿಳಿದವಳು. ನಮಗೂ ವಯಸ್ಸಾಗುತ್ತ ಬಂತು. ಸಾಯುವದರೊಳಗಾಗಿ ನಿನಗೆ ನಾಲ್ಕು ಅಕ್ಷೀಕಾಳು ಹಾಕಬೇಕೆಂದು ಇಚ್ಛೆಯಾಗುತ್ತದೆ ಎಂದನು.

ಅದಕ್ಕೆ ಪ್ರತಿಭೆ ಸೊಪ್ಪು ಹಾಕಲಿಲ್ಲ.

ನಾನು ಇಷ್ಟು ಬೇಗನೇ ಸಮಾಜದ ಕಣ್ಣಲ್ಲಿ ಮಾಡಿದೆನೇ? ನಾ ಇನ್ನೂ ಓದಬೇಕೆಂದು ಇಚ್ಛೆಯಾಗಿದೆ. ಆದೇಕೋ ಲಗ್ನಕ್ಕೆ ಇಚ್ಛೆ ಬರಲೊಲ್ಲದು ಜನ ಆಡುತ್ತಾರೆಂದು ಒತ್ತಾಯಕ್ಕಾಗಿ ಲಗ್ನವಾಗಬೇಕೇ? ಎನ್ನುತ್ತಿದ್ದಳು. ಆದರೆ ಈ ಮಾತುಗಳು ಅವಳ ತಂದೆ-ತಾಯಿಗಳನ್ನು ಶೂಲದಿಂದ ಇರಿದುಬಿಡುತ್ತಿದ್ದವು. ಆದರೂ ಮಾತೃಹೃದಯಿ ಕರುಣೆಯಿಂದ ಕರಗಿ ಹೋಗುತ್ತಿತ್ತು. ಅವಳೇನೂ ಅಷ್ಟೊಂದು ಬೆಳೆದು ನಿಂತಿಲ್ಲ. ಎಂದು ಸಮಾಧಾನ ತಾಳುತ್ತಿದ್ದರು.

ಹತ್ತುಗಂಟೆಯ ಸಮಯ. ಪ್ರತಿಭೆ ಹೊರಗಿನ ಕೋಣೆಯಲ್ಲಿ ಪುಸ್ತಕವನ್ನು ಓದುತ್ತ ಕುಳಿತಿದ್ದಳು. ಅಷ್ಟರಲ್ಲಿ ಅಂಚೆಯವನು ಒಂದು ಪಾಕೀಟನ್ನು ತಂದುಕೊಟ್ಟನು. ಪ್ರತಿಭೆಗೆ ಒಳ್ಳೇ ಉತ್ಸುಕತೆಯಾಯಿತು. ಆದೇಕೋ ಅವಳಿಗೆ ಅಂದು ಸಮಾಧಾನ ಆವರಿಸಿತ್ತು. ಕಣ್ಣಲ್ಲಿ ಚಪಲತೆ ಕುಣಿಯಲಾರಂಭಿಸಿತು. ಮುಖವು ಕೆಂಪಾಯಿತು. ನಾಚಿಕೆಯಿಂದ ತಲೆಬಾಗಿತು. ಆದೇಕೆ ಹೀಗಾಯಿತೋ ಅವಳಿಗೆ ತಿಳಿಯಲಿಲ್ಲ. ಏನನ್ನೂ ಅರಿಯದೆ ಸಮಾಚಾರವನ್ನು ಓದಲು ಹವಣಿಸಿದಳು ಪಾಕೀಟನ್ನು ಒಡೆದು ಓದಲಾರಂಭಿಸಿದಳು. ಓದಿದಂತೆಲ್ಲ ಮುಖ ಕೆಂಪಿಟ್ಟಿತು. ಅವಳ ತಾಯಿ ತಂದೆಗಳು ಏನಿದೆ ತಂಗೀ ಯಾರ ಪತ್ರ? ಎಂದು ಕೇಳಿದಾಗ ಅವಳ ಲಜ್ಜಾ ಲಜ್ಜೆಯಿಂದ ಕಾತರಗೊಂಡ ಮುಖವೇ ಆವರಿಗೆ ಯೋಗ್ಯ ಉತ್ತರ

ಅವಳಿಗೆ, ತನಗೇಕೆ ಹೀಗಾಗುತ್ತಿದೆ? ಬರುವಾತ ನನಗೆ ಯಾರು? ಆತನ ಏನನ್ನೂ ಅರಿಯದ ನನ್ನ ಮನ ಆತನಿಗಾಗಿ ಇಷ್ಟೇಕೆ ಕಾದಿದೆ? ಏನನ್ನೂ ತಿಳಿಯದಾದಳು. ಅವಳ ತಂದೆ ತಾಯಿಗಳಿಗಂತೂ ಆನಂದಕ್ಕೆ ಮಿತಿಯೇ ಇಲ್ಲದಂತಾಯಿತು.

ಪ್ರತಿಭೆಯ ಪತಿ ಬಹಳ ದೂರಿನ ಊರಿನವನಂತೆ. ಚಲುವಿಕೆಯಲ್ಲಿಯೂ ಆಕೆಯನ್ನು ಜೊತೆಗೂಡಿದ್ದನು. ಬ ಇಂಜನಿಯರ ಪದವಿಯಂತೆ ಕೇಳುವದೇನು? ಬಂದ ವರನು ಆಕೆಗೆ ಒಪ್ಪಿಕೊಂಡೇ ಹೊರಟನು. ಬಡ ತಂದೆತಾಯಿಗಳು ಆನಂದದಿಂದ ಸಂತೃಪ್ತರಾದರು. ಇನ್ನು ಎಂಟು ದಿನಗಳಲ್ಲಿ ಪ್ರತಿಭೆಯ ಲಗ್ನ ಹೇಳಿ ಮಾಡಿಸಿತಂದ ಜೋಡಿ ಊರ ಜನ ಹಿಗ್ಗಿದರು. ಎಲ್ಲರಿಗೂ ಒಂದು ಸಮಾಧಾನದ ಆಧಾರ ಸಿಕ್ಕಿತು. ನೋಡಲು ಬಂದ ಬೀಗರು ಮಾತು ಮುಗಿಸಿ ಲಗ್ನಕ್ಕೆಬರುವದಾಗಿ ಹೇಳಿಹೋದರು. ಅಂದಿನಿಂದ ಪ್ರತಿಭೆಗೆ ನಿದ್ರೆಬಾರದು. ತನ್ನ ಜೊತೆಗಾರನೊಂದಿಗೆ ಬಾಳುವ ಸುದಿನದ ದಾರಿಕಾಯುತ್ತಿದ್ದಳು ಇದೆಲ್ಲವೂ ದೇವರ ಕೃಪೆ.

ಆದರೆ ಆ ಗಂಗಾಧರಶೆಟ್ಟಿ ಈ ಮಾತನ್ನು ಕೇಳಿದ ಕೂಡಲೇ ಕೆಂಗೆಟ್ಟನು. ಯಾವಾಗ ಅವಳನ್ನು ತನ್ನ ಪತ್ನಿಯನ್ನಾಗಿಮಾಡಿಕೊಂಡೇನೆಂಬ ಹವ್ಯಾಸ ಕ್ಷಣಕ್ಷಣಕ್ಕೆ ಕುದಿಯಲಾರಂಭಿಸಿತು. ನೀರಿಲ್ಲದ ಮೀನಿನಂತೆ ಶೆಟ್ಟಿ ಚಡಪಡಿಸಹತ್ತಿದನು. ಅವಳು ತನ್ನ ಲಗ್ನವಾಗಲೇಬೇಕು. ಇಲ್ಲವಾದರೆ

ಅವಳ ಭವಿಷ್ಯ ನನ್ನ ಕೈಯಲ್ಲಿದೆ ಎಂದು ಗರ್ಜಿಸಿದನು. ಈ ಸುದ್ದಿ ಮನೆಯಲ್ಲಿ ಎಲ್ಲರಿಗೂ ಮಿಂಚಿನಂತೆ ಸುಳಿಯಿತು.

ಮಾಡುವದೇನು ? ಪ್ರತಿಭೆಯು ತಂದೆ ಗಂಗಾಧರನ ಸೂತ್ರದ ಗೊಂಬೆಯಾಗಿದ್ದನು. ನಿನ್ನ ಮಗಳನ್ನು ನನಗೆ ಲಗ್ನ ಮಾಡಿಕೊಡದಿದ್ದರೆ ನಿನ್ನ ಭವಿಷ್ಯ ಇಲ್ಲಿಗೆ ಮುಗಿಯಿತೆಂದು ತಿಳಿ ಎಂದು ಹೆದರಿಸಿ ಬಿಟ್ಟನು. ಪಾಪ ಅಸಹಾಯಕರಾದ ಅವರು ಮರಮರನೆ ಮರುಗಿದರು. ಮಗಳ ಚಲುವಿಕೆಯನ್ನು ಹಳಿದರು. ಇಂಥವಳು ನಮಗೆ ಹುಟ್ಟದಿದ್ದರೆ ಚನ್ನಾಗಿತ್ತು. ಎಂದು ಇದೆಲ್ಲವನ್ನೂ ಒಳಗೆ ವಿಚಾರಿಸುತ್ತಲೇ ಇದ್ದಳು. ಪ್ರತಿಭೆ ಹೌದು ನಾನು ಹೆಣ್ಣಾಗಿ ಹುಟ್ಟಿದ್ದೇ ತಪ್ಪಲ್ಲದೆ ಬೇರೆ ಯಾವ ತಪ್ಪೂ ಇಲ್ಲ ಎಂದು ಉಸುರ್ಗರೆದಳು. ಆದರೂ ಒಂದು ದೀನ ಆಶೆ ದೂರದಲ್ಲಿ ನೆಟ್ಟಿತ್ತು. ಇನ್ನೆಂಟು ದಿನಗಳಲ್ಲಿ ಆ ಆಶೆ ಸಫಲವಾಗುವದೆಂದು ದೃಢವಾಗಿ ನಂಬಿದಳು. ಒಂದೊಂದು ಕ್ಷಣವು ಒಂದೊಂದು ಯುಗವಾಗಿ ಪರಿಣಮಿಸ ಹತ್ತಿದವು.

ಎಂಟನೆಯು ಬೆಳಿಗ್ಗೆ ಆ ದಿನವನ್ನು ಸ್ವಾಗತಿಸುತ್ತಿದ್ದರೂ ಶೆಟ್ಟಿಯ ಕ್ರೂರ ದೃಷ್ಟಿ ಅವಳ ಮನದಲ್ಲಿ ನೆಟ್ಟಿತ್ತು. ಆ ದಿನ ನಸುಕಿನಲ್ಲಿಯೇ ಎದ್ದಳು. ಅವಳಲ್ಲಿ ಅದಾವುದೋ ಜಾಡ್ಯ ಒಡಮೂಡಿತ್ತು. ಮನಸ್ಸಿಗೆ ಅಸಮಾಧಾನದ ಇರಿತ ಹೆಚ್ಚಾಗಿತ್ತು. ಪ್ರತಿಭೆಗೆ ಅದೇಕೋ ಕಳವಳವಾಯಿತು. ಇದ್ದಕ್ಕಿದ್ದಂತೆ ತಟ್ಟನೇ ಪೋಸ್ಟಮನನು ಬಂದು ಪಾಕೀಟನ್ನು ಕೈಗಿತ್ತನು. ಪ್ರತಿಭೆ ದೃಷ್ಟಿ ಅದರಲ್ಲೇ ನೆಟ್ಟಿತ್ತು. ಆತುರತೆಯಿಂದ ಒಡೆದು ಓದಲಾರಂಭಿಸಿದಳು. ಆದರೆ ಅಂದಿನ ಮಂದಹಾಸ್ಯ ಇದರಲಿಲ್ಲ. ಅದರ ಬದಲಾಗಿ ನೀರಸವಿತ್ತು. ಕಣ್ಣಲ್ಲಿ ಚಪಲತೆ ಇಲ್ಲ. ನಿರಾಶೆಯಿಂದ ಬಾಡಿವೆ. ಪ್ರತಿಭೆ ಎದುರಿಗೆ ನಿಂತಿದ್ದ ತಾಯಿ ತಂದೆಗಳನ್ನು ಒಮ್ಮೆ ದಿಟ್ಟಿಸಿದಳು. ಅವರ ಮುಖ ಕಳೆಗುಂದಿ ಕೆಳಗಾದವು. ಆದರೆ ಪ್ರತಿಭೆಯು ದೀನತೆ ದೃಷ್ಟಿಯಲ್ಲಿ ಮೂಡಿತ್ತು. ಇದೆಲ್ಲಾ ಗಂಗಾಧರಶೆಟ್ಟಿಯ ವಂಚನೆ ಆತನು ಪ್ರತಿಭೆಯು ಚಾರಿತ್ರ್ಯ ಕೆಟ್ಟಿರುವದೆಂದು ವರನಿಗೆ ಪತ್ರ ಬರೆದು ತಿಳಿಸಿದ್ದನೆಂದೂ ಅದಕ್ಕಾಗಿ ಅವರಿಂದ ಇಂಥ ಒಪ್ಪಿಗೆ ಇಲ್ಲದ ಪತ್ರಬಂತೆಂದೂ ಜನ ಒಳಗೊಳಗೇ ಗುಣಗುಟ್ಟುತ್ತಿತ್ತು. ಪ್ರತಿಭೆ ಅದನ್ನೂ ಕೇಳಿದ್ದಳು.

ಬೆಳಗಾಗುತ್ತಲೇ ಎಲ್ಲ ಕಡೆಗೂ ಪ್ರತಿಭೆ ಎಲ್ಲಿಯೋ ಮಾಯವಾಗಿದ್ದಾಳೆಂದು ಸುದ್ದಿ ಹರಡಿತು. ತಾನು ಕಾಯ್ದಿರುವ ಆಶೆಗಾಗಿ ಪ್ರತಿಭೆಯು ಹೆಜ್ಜೆಗಳು ಧಾವಿಸಹತ್ತಿವೆ. ನೆಟ್ಟಿರುವ ದೀನ ದೃಷ್ಟಿ ದೂರದಲ್ಲಿ ನೆಟ್ಟಿತ್ತು.

---

# “ ರೆಡಿಮೆಡ ” ಸಮಾಧಾನ

ಲೇ :— ಎಸ್ಸಾರ್ ಬಿ. ಎ. ಬಿಕಾಮ್

ಯಾಕಳುವೆ ಕಂದಾ ಎನ್ನ ಮುದ್ದೇ !
ಹಾಯಾಗಿ ಮಲಗಿ ಮಾಡು ನಿದ್ದೆ !!
ನಿನಗೇನು ಕೆಲಸ ಕಣ್ತೆಗೆದು ನೋಡು
ನೀನಿರುವ ಜಗದಲ್ಲಿ ಎಲ್ಲವೂ ರೆಡಿಮೇಡು ॥ ೧ ॥

ಕಾಲೇಜು ವಿದ್ಯೆ !
ನಿಷ್ಪ್ರಯೋಜಕ ಮುದ್ದೆ
ತುಳುಕಾಡುತಿದೆ “ಬರ್ಕಲಿಯ” ತತ್ವಜ್ಞಾನ
ತುಂಬಿದೆ “ಭಕ್ಕರಿಯ” ಅಜ್ಞಾನ
ಈಗಿನ ಹೆಂಗಸರ “ಸ್ಪೆಸಿಮೆನ್ನು”
ಇವಳು “ನಿಮ್ಮವ್ವ” ರೆಡಿಮೇಡು ॥ ೨ ॥

ನಾಲ್ಕ್ಯದ ಪದವಿ ಘಳಿಸಿದ ವೀರ
“ಅರ್ಥಶಾಸ್ತ್ರ”ವನೋದಿದ ಚತುರ
ಮಕ್ಕಳಿವೆ ಈತನಿಗೆ ‘ ಏಳು ’ ಜನ
ತೊಂಬತ್ತು ರೂಪಾಯಿ ಕಾರಕೂನ
ಇಂವ “ ನಿಮ್ಮಪ್ಪ ” ಭೂಪ ರೆಡಿಮೇಡು ॥ ೩ ॥
ಜಾಹಿರಾತಿನಲಿ ಕಂಡ ವಧು
ವಿವಾಹ ಸಂಸ್ಥೆಯ ಮಧ್ಯಸ್ತಿ
ನೋಂದಣಿಯು ಹೊಸ ವೈದಿಕ ಮಂತ್ರ
“ಸಮಾರಾಧನೆ”ಯಾದುದು ಹೊಟೇಲು ಛತ್ರ
ನಿಮ್ಮಪ್ಪ ನಿಮ್ಮಮ್ಮನಿಗೆ ಕಟ್ಟಿದ “ಮಂಗಳಸೂತ್ರ”
“ರೆಡಿಮೇಡು” ॥ ೪ ॥

ಗೃಹ ಪ್ರವೇಶದ ಉತ್ಸವ !
ದೇವರಿಗೆ ನೈವೇದ್ಯ !!
ಮನೆ ಮುಂದಿ ಮೌನ
ಭಕ್ತಿ ಗೀತದ ರೆಕಾರ್ಡ್ಸು
ಎದುರಿಗಿದೆ ದೇವರಿಗೆ ಹಣ ಕೊಟ್ಟ ಪಾವತಿ
ನಡೆಯುತಿದೆ ಗುಡಿಯಲಿ ಮಂಗಳಾರತಿ
ದೇವರಿಗೆ ನೈವೇದ್ಯ ! ನಮ್ಮ ಪ್ರಸಾದ !!
ಎಲ್ಲವೂ ರೆಡಿಮೇಡು ॥ ೫ ॥

ಮನೆ ಕಟ್ಟುವಾ ಗೋಡೆಗಳು
ನೆರಳು ನೀಡುವಾ ರೂಫುಗಳು
ಅಡುಗೆ ಮನೆ ಸಾಮಾನು ಸೇಫುಗಳು
ಅನ್ನ ಬೇಯುವ ಸಿಮೆಂಟು ಒಲೆಗಳು
ಮನೆಯೊಳಗಿನಾ ಜೀವಗಳು !! ರೆಡಿಮೇಡು ॥ ೬ ॥

ಹಪ್ಪಳ ಸಂಡಿಗೆ ಉಪ್ಪಿನ ಕಾಯಿ
ಪಾಕಶಾಸ್ತ್ರದ ಹತ್ತನೆಯ ಹೊಸ ಆವೃತ್ತಿ !!
ಅಂಗಡಿ ಮಾಣಿ ಬೀರುವ ಬಿಸಿ ಪುರಿ ಚಪಾತಿ
"ಪಾನಪಟ್ಟಿ" ಗ್ಯಾರೇಜಿನ ಬಲೂನು ಗಾದಿ
ಗೃಹಿಣಿ ಜೀವನದ ಸಡಗರದ ಓಂಕಾರ ರೆಡಿಮೇಡು ॥ ೭ ॥

ಬಾಗಿಲಿಗೆ ಬಡೆದಿಹ ಹೆಸರಿನಾ ಹಲಗೆ
ಕುರ್ಚಿ ಟೀಪಾಯಿಗಿರುವ ಕಸೂತಿ ಹೊದಿಕೆ
ಕೂಜೆಯಲಿ ಕುಣಿಯುವಾ ಸೇಂಟಿನಾ
ಕಾಗದ ಗುಲಾಬಿ ಗೊಂಚಲು
"ಸ್ವಾಗತಂ" ಎಂದುಸುರವಾ ಗೊಂಬೆಯೂದುವ ಕೊಳಲು
ಅತಿಥಿ ಕುಡಿಯುವಾ ಪಾವಡರಿನ ಹಾಲು
ಪಾನಕದ ಎಸೆನ್ಸು
ಹಿಡಿದಕ್ಕೆ ಬಿಟ್ಟೊಡೆ ಮುಚ್ಚುವ ಸ್ಪ್ರಿಂಗ ಡೋರ್‍ಸು
ಎಲ್ಲ ರೆಡಿಮೇಡು ॥ ೮ ॥

ತಂದೆಯಾ ಮಗನಲ್ಲವೇ ನೀನು ?
ತಂದೆಯಂತಾಗ ಬೇಕಲ್ಲವೇ ಏನು ?
ಹೆದರಿದರು ಮಗು ನೀನು
ನೀ ಓದುವಾ ಶಾಲೆ ಕಾಲೇಜುಗಳಲ್ಲಿ
ಮೆರೆಯುವಾ ಗುಗ್ಗುಗಳೆಲ್ಲ
ಕ್ವೆಶ್ಚೆನ್ಸು ಆನ್ಸರ್‍ಸು ಗಾಯಿಡುಗಳ ಓದಿ
ಪಡೆಯುವಾ ಡಿಗ್ರಿಗಳೆಲ್ಲ ರೆಡಿಮೇಡು ॥ ೯ ॥

ಅಳಬೇಡ ಕಂದ ಸುಮ್ಮನಾಗು ಬೇಗ
ಬರುವಳು ನಿಮ್ಮಮ್ಮ ಇದೀಗ
ತರುವಳು ಹೊಸ ಅಂಗಿ ಕುಲಾವಿ
ಕಾಡಿಗೆಯ ಡಬ್ಬಿ ಕುಂಕುಮದ ಬಾಟಲಿ
ಗ್ರಾಯಿಪ ಸಿರಪ್ಪು ಫೀಡಿಂಗ ಬಾಟ್ಲು
ಈ ಕ್ಷಣವೇ ಸವಿಯುವಿಯಂತೆ ಎಲ್ಲವೂ
ರೆಡಿಮೇಡು ॥ ೧೦ ॥

ಸುಮ್ಮನಿರು ಕಂದ ನಿನ್ನ ಸಂತೈಸಲೆನಗೆ ಬಾರದು
ಮಕ್ಕಳಾಡಿಸುವ ಕಲೆ ನನಗೆ ತಿಳಿಯದು
ದಿನವೆಲ್ಲಾ ಆಫೀಸಿನ ದುಡಿತ
ರಾತ್ರಿ ಮನೆ ಲೆಖ್ಖ ಹೊಂದಿಸುವ ತಲೆ ಕಡಿತ
ತಿಗಣಿ ಕಡಿತ
ಏನೋ ಒಂದೆರಡು ಕೂಸನಾಡಿಸುವ ಮಾತುಗಳ ಹೇಳ್ದೆ
ಯಾವುದೋ ಕನ್ನಡ ಚಿತ್ರದಲ್ಲಿನವು ಅವೂ
ನನ್ನವಲ್ಲ ರೆಡಿಮೇಡು ॥ ೧೧ ॥

## ಸೂಚನೆ

* ಲೇಖನಗಳು, ಅಸ್ಪಷ್ಟ ರೀತಿಯಲ್ಲಿ ಬರೆದವು ಬರುತ್ತಿದ್ದು, ಮುದ್ರಣ ಕಾರ್ಯಕ್ಕೆ ತುಂಬಾ ತೊಂದರೆಯಾಗುತ್ತದೆ. ಲೇಖಕರು ಸುಸ್ಪಷ್ಟ ರೀತಿಯಲ್ಲಿ ಬರೆದ ಲೇಖಗಳನ್ನು ಸಂಪಾದಕರ ವಿಳಾಸಕ್ಕೆ ಕಳುಹಿಸಬೇಕು.

* ಇನ್ನೂ ವರೆಗೂ ಚಂದಾ ಹಣವನ್ನು ಕಳಿಸದ ಚಂದಾದಾರರು ಆದಷ್ಟು ಕೂಡಲೆ ಕಾರ್ಯದರ್ಶಿ 'ವೀರಮಾತೆ' ವನಿತಾ ಸೇವಾ ಸಮಾಜ, ಧಾರವಾಡ. ಈ ವಿಳಾಸಕ್ಕೆ ಚಂದಾಹಣವನ್ನು ಕಳುಹಿಸಿಕೊಡಬೇಕು.

* ಚಂದಾದಾರರು, ತಮ್ಮ ವಿಳಾಸ ಬದಲಾದಲ್ಲಿ, ಹಾಗೆ ತಿಳಿಸಿದರೆ, 'ವೀರಮಾತೆ' ಯು ತ್ವರಿತವಾಗಿ ಮುಟ್ಟುವಂತೆ ದಕ್ಷತೆ ವಹಿಸಲಾಗುವದು.

* ಲೇಖಕರು ಅಥವಾ ವಾಚಕರು, ಲೇಖ ಕಳಿಸುವದಾಗಲಿ ಉಳಿದ ಯಾವದೇ ಪತ್ರವ್ಯವಹಾರ ಮಾಡುವಾಗ ತಮ್ಮ ವಿಳಾಸವನ್ನು ಸ್ಪಷ್ಟ ರೀತಿಯಲ್ಲಿ ಬರೆದು ತಿಳಿಸಲು ಮರೆಯಬಾರದು.

* ಹೊಸದಾಗಿ ಚಂದಾದಾರರಾಗಬಯಸುವವರು, ಚಂದಾ ಹಣವನ್ನು ಮೊದಲು ಕೊಟ್ಟು ಕಳಿಸಿದರೆ, ಮಾಸಿಕವನ್ನು ಅವರ ವಿಳಾಸಕ್ಕೆ ಕಳಸುವತ್ತ ಗಮನಿಸಲಾಗುವದು.

* ಸೋದರ, ಸೋದರಿಯರು, ಅಕ್ಕನಟ್ಟಿಗೆಯ ವಿಭಾಗದಲ್ಲಿ ಬರುವ ಸ್ಪರ್ಧೆಗಳಿಗೆ ಉತ್ತರಗಳನ್ನು ಪ್ರತಿತಿಂಗಳ ೧೦ ನೇ ತಾರೀಖಿನ ಒಳಗಾಗಿ ಕಳುಹಿಸಬೇಕು.

* * * * * *

---

'ಸಮಾಸಾಧಿಕಾರ' ಕೃತಿಯಲ್ಲಿ ಬರಬೇಕಿದ್ದರೆ
ಮಹಿಳೆಯರ 'ಬೌದ್ಧಿಕ ಉನ್ನತಿ' ಅತ್ಯವಶ್ಯವಾದುದು
ಜ್ಞಾನ, ಮನೋರಂಜನೆಗಾಗಿ ವಿವಿಧ ಲೇಖಗಳಿದ್ದ
ಪ್ರಗತಿಪರ ವಿಚಾರಗಳಿಂದೊಡಗೂಡಿದ
ಮಹಿಳೆಯರ ಮಾಸಪತ್ರಿಕೆ

# ವೀರಮಾತೆ

ಇಂದೇ ಚಂದಾದಾರರಾಗಿರಿ

ಸಂಪಾದಕರು: — ಪ್ರೊ. ಸರೋಜಿನಿ ಮಹಿಷಿ,
ಎಂ. ಎ., ಎಲ್. ಎಲ್. ಬಿ.

ಸ್ತ್ರೀಯರ ವಿಕಾಸಕ್ಕಾಗಿ ಮೀಸಲಾಗಿಟ್ಟ
ಮಾಸಪತ್ರಿಕೆ

ವಾರ್ಷಿಕ ಚಂದಾಹಣ ೫ ರೂಪಾಯಿ
ಬಿಡಿಸಂಚಿಕೆ ೩೭ ನ. ಪೈ. ಮಾತ್ರ

ಮನೆಮನೆಯಲ್ಲಿಯೂ ಸುಖಸಂತೋಷಗಳನ್ನು
ಬೀರಬಲ್ಲ ಕನ್ನಡ ಮಾಸಪತ್ರಿಕೆ

[ ಮುಂಬಯಿ, ಮೈಸೂರು ಮತ್ತು ಮದ್ರಾಸ
ಸರಕಾರಗಳಿಂದ ಮಾನ್ಯತೆ ದೊರೆತಿದೆ.]



ADDRESS

No 368.





ಮುದ್ರಕರು: ಶ್ರೀಯುತ ಕುಲಕರ್ಣಿ ರಾಮರಾಯರು,
ಸ್ಥಳ: ವನಿತಾ ಪ್ರಿಂಟಿಂಗ ಪ್ರೆಸ್, ಧಾರವಾಡ.
ಪ್ರಕಾಶಕರು: ಶ್ರೀ. ಲ. ಕೆ. ಪುರಾಣಿಕ
ಸ್ಥಳ: ವನಿತಾ ಸೇವಾ ಸಮಾಜದ ಕಾರ್ಯಾಲಯ, ಧಾರವಾಡ.








ಸಂಪುಟ ೪ ]　　ಸಪ್ಟಂ ಷ್ಟ ೧೯೫೪　　[ ಸಂಚಿಕೆ ೩

# 'VEERAMATE' WOMEN'S VOICE

The Largest Circulated

KANNADA MONTHLY

## ಸಂಪಾದಕ ಮಂಡಲ

ಶ್ರೀಮತಿ ಸರೋಜಿನಿ ಮಹಿಷಿ M. A. LL B.
ಮುಖ್ಯ ಸಂಪಾದಿಕೆಯರು.

,, ವೆಂಕಮ್ಮಾ ಕೊಯಿಮುತ್ತೂರ ಸಹ ಸಂಪಾದಿಕೆಯರು.
ಶ್ರೀಯುತ ಹಳಪೇಟೆ ಚಿಂತಾಮಣಿರಾಯರು ಸದಸ್ಯರು
,, ನಾರಾಯಣ ಶರ್ಮಾ ,,
,, ಹೊನ್ನಾಪುರಮಠ ಚಂ. ಗ. B.A.,LL.B. ,,
,, ಬಿ. ಎಸ್. ಮಾವಿನಕುರ್ವೆ ಅಡ್ವೋಕೇಟ,
ಸರಕಾರಿ ವಕೀಲರು ಕಾರವಾರ ,,

## ಕಾರ್ಯ ನಿರ್ವಾಹಕ ಮಂಡಲ

ಶ್ರೀಯುತ ಕುರಡಿ ನಾರಾಯಣರಾಯರು ಅ
ಶ್ರೀಮತಿ ಸರೋಜಿನಿ ಮಹಿಷಿ M. A.,LL B. ಉಪಾ

ಶ್ರೀಯುತ ಲ. ರಂ. ಪುರಾಣಿಕ ಕಾರ್ಯದ
ಪ್ರಕಾಶಕರು, ಕೋಶಾ
,, ಎಸ್. ವ್ಹಿ. ಮೆಳ್ಳೀಗಟ್ಟಿ B.A. LL. B. ಸ
ಶ್ರೀಮತಿ ವೆಂಕಮ್ಮಾ ಕೊಯಿಮುತ್ತೂರ
,, ಕೃಷ್ಣಾಬಾಯಿ ಕರ್ಣಿಕ

---

ರಜಿಸ್ಟ್ರೇಶನ್ ಆಫ್ ನ್ಯೂಜ ಪೇಪರ್ಸ (ಸೆಂಟ್ರಲ್) ರೂಲ್ಸ ೧೯೫೬ರ ೮ನೇ ನಿಯಮಕ್ಕೆ ಸಂಬಂಧಿಸಿದಂ
"ವೀರಮಾತೆ" ಮಾಸಪತ್ರಿಕೆಯ ಸ್ವಾಮಿತ್ವ ಮತ್ತು ಇತರ ವಿಷಯುಗಳ ಬಾಬತ ವಿವರ:—

| | |
|---|---|
| ೧. ಪ್ರಕಾಶನ ಸ್ಥಳ— | ವನಿತಾ ಸೇವಾ ಸಮಾಜ ಧಾರವಾಡ. |
| ೨. ನಿಯಮಿತ ಕಾಲಿಕತೆ— | ಮಾಸಪತ್ರಿಕೆ |
| ೩. ಮುದ್ರಕರ ಹೆಸರು— | ರಾಮರಾವ ಕುಲಕರ್ಣಿ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವೀರಮಾತೆ ಕಾರ್ಯಾಲಯ ಧಾರವಾಡ |
| ೪. ಪ್ರಕಾಶಕರ ಹೆಸರು— | ಲ. ರಂ. ಪುರಾಣೀಕ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವನಿತಾ ಸೇವಾ ಸಮಾಜ ಧಾರವಾಡ |
| ಸಂಪಾದಕರ ಹೆಸರು— | ಸರೋಜನಿ ಮಹಿಷಿ ಎಮ್. ಎ. ಎಲ್ಎಲ್. ಬಿ. |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ಲೈನಬಝಾರ ಧಾರವಾಡ |
| ೬. ಪತ್ರಿಕಾ ಸ್ವಾಮಿತ್ವ ವಿಳಾಸ— | ಕಾರ್ಯಕಾರಿ ಮಂಡಳ |
| ಮತ್ತು ಬಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ — | ವನಿತಾ ಸೇವಾ ಸಮಾಜ ಧಾರವಾಡ |

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣೀಕನಾದ ನಾನು ಮೇಲಿನ ವಿವರಗಳಲ್ಲಿಯ ವಿಷಯುಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣಿ

# ಪರಿವಿಡಿ



## — "ವೀರಮಾತೆ" ಚಂದಾದಾರರಲ್ಲಿ ನಮ್ರ ವಿನಂತಿ —

"ವೀರಮಾತೆ"ಯ ಮೇ, ಮತ್ತು ಜೂನ-ಜುಲೈ ಸಂಚಿಕೆಯು ತಮಗೆ ಕೈ ಸೇರಲಿಲ್ಲವೆಂದು ಕಳವಳ ಪಡಕೊಳ್ಳ ...ಡಿರಿ! ಪ್ರೆಸ್ಸಿನ ಕೆಲವೊಂದು ಕೊರತೆಯ ಮೂಲಕ ಪತ್ರಿಕೆಯು ತಡವಾಗಿ ಹೊರಟಿತು, ಕಾರಣ ಇನ್ನು ಮುಂದೆ ...ೇ ಮತ್ತು ಜೂನ-ಜುಲೈ ಸಂಚಿಕೆ ಕ್ರಮೇಣವಾಗಿ ಕಳಿಸುಕೊಡುತ್ತೇವೆ. ಅಲ್ಲದೆ ಮುಂದಿನ ಸಂಚಿಕೆಯು ಸರಿಯಾದ ...ೇಳೆಗೆ ಮುಟ್ಟುವಂತೆ ವ್ಯವಸ್ಥೆ ಮಾಡಲಾಗುವದು. "ವೀರಮಾತೆ"ಯ ಚಂದಾದಾರರು ಸಹಕರಿಸಬೇಕಾಗಿ ವಿನಂತಿ.

[ಸಂ.

## ಸಂಪಾದಕ ಮಂಡಲ

ಶ್ರೀಮತಿ ಸರೋಜಿನಿ ಮಹಿಷಿ M. A. LL B.
ಮುಖ್ಯ ಸಂಪಾದಿಕೆಯರು.

,, ವೆಂಕಮ್ಮಾ ಕೊಯಿಮುತ್ತೂರ ಸಹ ಸಂಪಾದಿಕೆಯರು.

ಶ್ರೀಯುತ ಹಳಪೇಟೆ ಚಿಂತಾಮಣಿರಾಯರು ಸದಸ್ಯರು

,, ನಾರಾಯಣ ಶರ್ಮಾ ,,

,, ಹೊನ್ನಾಪುರಮಠ ಚಂ. ಗ. B.A.,LL.B. ,,

,, ಬಿ. ಎಸ್. ಮಾವಿನಕುರ್ವೆ ಅಡ್ವೋಕೇಟ,
ಸರಕಾರಿ ವಕೀಲರು ಕಾರವಾರ ,,

## ಕಾರ್ಯ ನಿರ್ವಾಹಕ ಮಂಡಲ

ಶ್ರೀಯುತ ಕುರಡಿ ನಾರಾಯಣರಾಯರು ಅಧ

ಶ್ರೀಮತಿ ಸರೋಜಿನಿ ಮಹಿಷಿ M. A.,LL B. ಉಪಾಧ

ಶ್ರೀಯುತ ಲ. ರಂ. ಪುರಾಣಿಕ ಕಾರ್ಯದಶಿ
ಪ್ರಕಾಶಕರು, ಕೋಶಾಧ

,, ಎಸ್. ವ್ಹಿ. ಮೆಳ್ಳೀಗಟ್ಟಿ B.A. LL. B. ಸದ

ಶ್ರೀಮತಿ ವೆಂಕಮ್ಮಾ ಕೊಯಿಮುತ್ತೂರ ,,

,, ಕೃಷ್ಣಾಬಾಯಿ ಕರ್ಣಿಕ ,,

---

| | |
|---|---|
| ಸಂಪಾದಕರ ಹೆಸರು— | ಸರೋಜಿನಿ ಮಹಿಷಿ ಎಮ್. ಎ. ಎಲ್ಎಲ್. ಬಿ. |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ಲೈನಬಝಾರ ಧಾರವಾಡ |
| ೬. ಪತ್ರಿಕಾ ಸ್ವಾಮಿತ್ವ ವಿಳಾಸ— | ಕಾರ್ಯಕಾರಿ ಮಂಡಳ |
| ಮತ್ತು ಬಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ — | ವನಿತಾ ಸೇವಾ ಸಮಾಜ ಧಾರವಾಡ |

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣೀಕನಾದ ನಾನು ಮೇಲಿನ ವಿವರಗಳಲ್ಲಿಯ ಎಲ್ಲ ವಿಷಯಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣೀಕ.

# ಪರಿವಿಡಿ

# ಸ್ವಾತಂತ್ರ್ಯ ದಿನೋತ್ಸವ
# ವನಿತಾ ಸೇವಾ ಸಮಾಜದಲ್ಲಿ



ಧಾರವಾಡ ೧೫-೮-೪೭ ನಮ್ಮ ಭಾರತವು ಸ್ವಾತಂತ್ರ್ಯ ವನ್ನು ಹೊಂದಿ ಹನ್ನೆರಡು ವರುಷಗಳಾಗಿ ಹದಿಮೂರನೆಯ ವರುಷದಲ್ಲಿ ಕಾಲನಿರಿಸುವ ದಿನವಾಗಿದೆ. ಇದು ಭಾರತೀಯರ ರಾಷ್ಟ್ರೀಯ ಹಬ್ಬವಾಗಿದೆ. ಭಾರತವು ಸ್ವತಂತ್ರವಾಗಿದ್ದರೂ ಹೆಣ್ಣುಮಕ್ಕಳು ದಾಸ್ಯದಲ್ಲಿಯೇ ತೊಳಲಾಡುತಿರುವರು. ಆದ್ದರಿಂದ ಹೆಣ್ಣುಮಕ್ಕಳಲ್ಲಿ ಸ್ವಾತಂತ್ರ್ಯದ ಸರಿಯಾದ ಕಲ್ಪನೆ ಅರಿವುಗಳುಂಟಾಗಲೆಂದು ವನಿತಾ ಸೇವಾ ಸಮಾಜವು ಭಾರತೀಯ ಸ್ವಾತಂತ್ರ್ಯ ದಿನೋತ್ಸವವನ್ನು ಆಚರಿಸುತ್ತಲೇ ಇದೆ. ಇದಲ್ಲದೆ ಪ್ರತಿತಿಂಗಳಿನ ೧೫ನೆಯ ದಿನಾಂಕದಂದು ರಾಷ್ಟ್ರ ಧ್ವಜವಂದನೆಯ ಸತ್‌ಸಂಪ್ರದಾಯವನ್ನು ಪರಿಪಾಲಿಸುತ್ತಿದೆ.

ಆದ್ದರಿಂದ ಇಂದು ೧೯೬೦ನೆಯ ಆಗಸ್ಟ್ ೧೫ರಂದು ಹದಿಮೂರನೆಯ ಸ್ವಾತಂತ್ರ್ಯ ದಿನೋತ್ಸವವನ್ನು ವನಿತಾ ಸೇವಾ ಸಮಾಜದಲ್ಲಿ ವಿಜೃಂಭಣೆಯಿಂದ ಆಚರಿಸಲಾಯಿತು. ಈ ಸಲುವಾಗಿ ವನಿತಾ ಸೇವಾಸಮಾಜದ ಹೊರಾಂಗಣವನ್ನು ಅಣಿಗೊಳಿಸಿ ಧ್ವಜಸ್ತಂಭವನ್ನು ನಿಲ್ಲಿಸಿ ತಳಿರು ತೋರಣಗಳಿಂದ ಅಲಂಕರಿಸಲಾಗಿದ್ದಿತು. ಸ್ವಾತಂತ್ರ್ಯ ದಿನೋತ್ಸವದ ನಿಮಿತ್ತವಾಗಿ ಇಂದು ವನಿತಾ ಸೇವಾ ಸಮಾಜದಲ್ಲಿ ಎಡೆಬಿಡದ ಕಾರ್ಯಕ್ರಮಗಳು ನಡೆದುವು. ನಸುಕಿನಲ್ಲಿ ೫-೩೦ ಗಂಟೆಯಿಂದ ೬-೩೦ ಗಂಟೆಯ ವರೆಗೆ ವನಿತಾ ಸೇವಾ ಸಮಾಜದ ವಿದ್ಯಾ ಸಂಸ್ಥೆಗಳ ವಿದ್ಯಾರ್ಥಿನಿಯರು ಹಾಗೂ ಕಾರ್ಯಕರ್ತರು ಶುಭ್ರವಾದ ತೊಡವುಗಳನ್ನು ಧರಿಸಿ ಸ್ವಾತಂತ್ರ್ಯ ಕಹಳೆಯು ಬೀರುತ ನಗರದ ಪ್ರಮುಖ ಬೀದಿಯನ್ನು ಸುತ್ತಿ ವನಿತಾ ಸೇವಾ ಸಮಾಜಕ್ಕೆ ಬಂದು ರಾಷ್ಟ್ರ ಧ್ವಜಸ್ತಂಭದೆಡೆ ಅರ್ಧ ವರ್ತುಲಾಕಾರದ ಸಾಲುಗಳಾಗಿ ನಿಂತರು. ಸೂರ್ಯೋದಯುವಾದ ನಂತರ ಸರಿಯಾಗಿ ಬೆಳಗಿನ ೭-೦ ಗಂಟೆಗೆ ನಗರದ ನ್ಯಾಯ ರಕ್ಷಕರಾದ ಗದುಗಿನ ಶ್ರೀ. ಕುಲಕರ್ಣಿ ಅವರ ಅಮೃತಹಸ್ತದಿಂದ ರಾಷ್ಟ್ರಧ್ವಜಾರೋಹಣ ಕಾರ್ಯದ ಸಮಾರಂಭವು ವಿಧ್ಯುಕ್ತವಾಗಿ ನೆರವೇರಿತು. ಸ್ವಾತಂತ್ರ್ಯದ ದಿನೋತ್ಸವದ ಈ ಶುಭ ಸಮಯದಲ್ಲಿ ಹಿರಿಯ ಕನ್ನಡ ಕವಿಗಳಾದ ಡಾ. ಆರ್. ಕೆ. ಹಾನಗಲ್ಲರು ಹೆಣ್ಣಿನ ಸ್ವಾತಂತ್ರ್ಯವನ್ನು ಸಾರುವ ತಾವು ರಚಿಸಿದ್ದ ಕವನವೊಂದನ್ನು (ಇದು ವನಿತಾ ಸೇವಾ ಸಮಾಜದ ಮುಖಪತ್ರಿಕೆಯಾದ 'ವೀರಮಾತೆ' ಯ ೧೯೪೭ನೆಯ ಜೂನ್-ಜುಲೈ ತಿಂಗಳ ಸಂಚಿಕೆಯಲ್ಲಿ ಪ್ರಕಟವಾಗಿದೆ) ಭಾವಪೂರಿತವಾಗಿ ಹಾಡಿ ತೋರಿಸಿದರು. ವನಿತಾ ಸೇವಾ ಸಮಾಜದಲ್ಲಿಯ ರಾಷ್ಟ್ರಧ್ವಜಾರೋಹಣದ ಕಾರ್ಯಕ್ರಮಕ್ಕೆ ಪತ್ನಿಸಮೇತವಾಗಿ ಬಂದಿದ್ದ ಶ್ರೀ ಕುಲಕರ್ಣಿ ಅವರು ಸಮಯೋಚಿತವಗಿ ನಾಲ್ಕು ಮಾತುಗಳನ್ನಾಡಿದ ನಂತರ ವನಿತಾ ಸೇವಾಸಮಾಜದ ಸಂಸ್ಥಾಪಿಕೆಯರಾದ ಶ್ರೀಮತಿ ಭಾಗೀರಥಿಬಾಯಿ ಪುರಾಣಿಕರು ಶ್ರೀ ಕುಲಕರ್ಣಿ ದಂಪತಿಗಳನ್ನು ಹಾಗೂ ಉಳಿದೆಲ್ಲ ಅತಿಥಿಗಳನ್ನು ಹಾರ್ದಿಕವಾಗಿ ಅಭಿವಂದಿಸಿದರು. ಆಮೇಲೆ 'ವಂದೇ ಮಾತರಂ' ಗೀತೆಯೊಂದಿಗೆ ಧ್ವಜವಂದನೆಯ ಕಾರ್ಯಕ್ರಮವು ನಡೆಯಿತು. ಮಧ್ಯಾಹ್ನದ ೩-೦ ರಿಂದ ೬-೦ ಗಂಟೆಯ ವರೆಗೆ ವನಿತಾ ಪ್ರಾಯೋಗಿಕ ಶಾಲೆಯ ಚಿಕ್ಕಮಕ್ಕಳಿಂದ ಮನರಂಜನೆಯ ವಿವಿಧ ಕಾರ್ಯಕ್ರಮಗಳು ಮುಗಿದ ನಂತರ ರಾಷ್ಟ್ರಧ್ವಜಾರೋಹಣದ ಕಾರ್ಯಕ್ರಮವು 'ವಂದೇಮಾತರಂ' ಗೀತೆಯೊಂದಿಗೆ ನಡೆದು ಹದಿಮೂರನೆಯ ಸ್ವಾತಂತ್ರ್ಯ ದಿನೋತ್ಸವದ ಕಾರ್ಯಕ್ರಮಗಳು ಕೊನೆಗೊಂಡುವು.

# ವೀರಮಾತೆ





ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಾದ
ಕನ್ನಡ ಮಾಸಪತ್ರಿಕೆ

ಸಂಪುಟ ೮ | [ಸೆಪ್ಟಂಬರ ೧೯೫೯ | ಸಂಚಿಕೆ ೩



## ಸಂಪಾದಕೀಯ



### ಸ್ವಾತಂತ್ರ್ಯದ ಹನ್ನೆರಡು ವರುಷಗಳು!

ರಾಜಕೀಯ ಸ್ವಾತಂತ್ರ್ಯವನ್ನು ಪಡೆದು ಹನ್ನೆರಡು ವರುಷಗಳು ಪೂರ್ತಿಯಾದವು! ಅಂದಿನ ಆ ಹೋರಾಟ, ಅಶಾಂತಿ, ಸ್ವಾತಂತ್ರ್ಯಕ್ಕಾಗಿ ತಳಮಳ! ಆಂಗ್ಲರ ಅಪಾರ ಸೈನ್ಯಬಲದ ವಿರುದ್ಧ ಭಾರತೀಯರ ಹೋರಾಟ! ಅದೂ ನೈತಿಕ ಬಲದ ಆಧಾರದ ಮೇಲೆ! ಆ ಲಾಠೀ ಪೆಟ್ಟು, ಸೆರೆ-ಸಿಂದಿ ಅಂಗಡಿಗಳೆದುರು, ವಿದೇಶಿ ಅಂಗಡಿಗಳೆದುರು, ಬಹಿಷ್ಕಾರ ಹಾಕಿ, ಮುಷ್ಕರ ಹೂಡಿದ ಮಕ್ಕಳು, ಸ್ತ್ರೀಯರು! ತಂಡತಂಡದಲ್ಲಿ ಸೆರೆಮನೆಗೆ ಹೋಗುವ ಆ ಬಾಲವೃದ್ಧರು! ಅವನ್ನೆಲ್ಲ ನೆನೆಸಿದರೆ ಇನ್ನೂ ಮೈಮೇಲೆ ಮುಳ್ಳೇಳುತ್ತವೆ. ವ್ಯಾಯಾಮಶಾಲೆಗಳಲ್ಲಿ ಮೈಕಟ್ಟು ಹುರಿಗೊಳಿಸಿ ಸ್ವಾತಂತ್ರ್ಯದ ಹೋರಾಟಕ್ಕೆ ಅಣಿಯಾದವರನೇಕರು! ವಿಜ್ಞಾನ ಶಾಲೆಗಳಲ್ಲಿ ವಿವಿಧ ಪ್ರಯೋಗಗಳಲ್ಲಿ ತೊಡಗಿದವರನೇಕರು. ಬೌದ್ಧಿಕ ಕಸರತ್ತನ್ನು ಮಾಡಿ ಯುಕ್ತಿಗಳನ್ನು ಹುಡುಕಿ ತೆಗೆಯಲು ಯೋಚಿಸಿದವರೂ ಅನೇಕರು!

ಆದರೆ ಸ್ವಾತಂತ್ರ್ಯ ದೊರೆತ ಮೇಲೆ! ಆಗಿದ್ದ ಉತ್ಸಾಹ, ಹುಮ್ಮಸ್ಸು, ಹೋರಾಡುವ ಸಿದ್ಧತೆ ಇಂದಿಲ್ಲ! ಎಲ್ಲಿ ನೋಡಿದರೂ ಇಲ್ಲ. ಸ್ವಾತಂತ್ರ್ಯೋತ್ತರ ಶೈಥಿಲ್ಯ ಎಲ್ಲೆಡೆಗೂ ಹಬ್ಬಿದೆ. ಯಾವ ಕ್ಷೇತ್ರದಲ್ಲಿ ನೋಡಿದರೂ ಅಷ್ಟೇ! ಬರೀ ಸ್ವಾತಂತ್ರ್ಯೋತ್ಸವವನ್ನು ಆಚರಿಸುವ ಮಟ್ಟಿಗೆ ಮಾತ್ರ ನಮ್ಮ ಹುಮ್ಮಸ್ಸು ಸೀಮಿತವಾಗಿದೆಯೇ? ಅಂದು ಪಾರತಂತ್ರ್ಯದಲ್ಲಿದ್ದಾಗ ಪರಕೀಯರ ಸತ್ತೆಯನ್ನು ಎದುರಿಸಿ ಹೋರಾಡಬೇಕಾಗಿದ್ದರೆ! ಇಂದು ನಮ್ಮಲ್ಲಿಯೇ ಹುದುಗಿ ಕೊರೆಯುತ್ತಿರುವ ಅಜ್ಞಾನ, ದಾರಿದ್ರ್ಯ ಆಲಸ್ಯಗಳ ವಿರುದ್ಧ ಹೋರಾಡಬೇಕಾಗಿದೆ! ಇನ್ನೊಬ್ಬರು ದಬ್ಬಾಳಿಕೆ ನಡೆಸಿದಾಗಲೇ ನಮ್ಮ ಶಕ್ತಿ ಜಾಗೃತವಾಗುತ್ತದೆ. ಅಂದರೆ ಹಣೆಯಬರಹವನ್ನು ತಡೆಯಲು ಯಾರಿಗೂ ಸಾಧ್ಯವಿಲ್ಲ. ಒಬ್ಬ ಟಿಳಕ, ಒಬ್ಬ ಗಾಂಧೀ ಒಬ್ಬ ನೆಹರೂ ರಾಷ್ಟ್ರದ ಕೋಟಿ ಕೋಟಿ ಜನರಲ್ಲಿ ಒಬ್ಬೊಬ್ಬರ ಹಿತವನ್ನು ನೋಡಲು ಸಾಧ್ಯವೆ? ಮೈಮುರಿದು ದುಡಿದಾಗ, ಪ್ರಯತ್ನಶೀಲರಾದಾಗ ಸುಖ-ಸಮಾಧಾನಗಳು ತಂತಾನೇ ಮೂಡಿ ಬರುತ್ತವೆ!

ನಮ್ಮ ಉದ್ಧಾರವನ್ನು ನಾವೇ ಮಾಡಿಕೊಳ್ಳಬೇಕಲ್ಲದೆ ಇನ್ನೊಬ್ಬರು ನಮಗಾಗಿ ಮಾಡಲು ಸಾಧ್ಯವಿಲ್ಲ.

ನಮ್ಮಲ್ಲಿ ಜನಸಾಮಾನ್ಯರು ತಿಳಿದ ಸುಖದ ಕಲ್ಪನೆಯಲ್ಲಿ ಆಮೂಲಾಗ್ರ ಕ್ರಾಂತಿಯಾಗಬೇಕಾಗಿದೆ. ಅದರ ಬೇರು ಹಬ್ಬಿ ಮುಂದಿನ ಪೀಳಿಗೆಯ ಮೇಲೂ ಪರಿಣಾಮವನ್ನುಂಟು ಮಾಡುತ್ತದೆ. ಊಟಮಾಡಿ, ಯಾವ ಯೋಚನೆಯೂ ಇಲ್ಲದೆ ಆಲಸ್ಯದಲ್ಲಿ ವೇಳೆ ಕಳೆಯುವದೇ ಸುಖವೆಂಬ ಕಲ್ಪನೆ ಮುಂದುವರಿಯದಂತೆ ನೋಡಿಕೊಳ್ಳಬೇಕಾಗಿದೆ.

ಸ್ವಾತಂತ್ರ್ಯದ ಅರ್ಥವನ್ನು ಅರಿಯದೆ ಅಜ್ಞಾನದಲ್ಲಿದ್ದವರು ಕೆಲವರು,ಅರಿತು ದುರುಪಯೋಗ ಮಾಡಿಕೊಳ್ಳುವವರು ಕೆಲವರು, ಅರ್ಥವನ್ನರಿತರೆ ದುಡಿಯಬೇಕಾಗುತ್ತದೆ, ಇನ್ನೊಬ್ಬರ ದುಡಿತಕ್ಕೆ ಬೆಲೆ ಕೊಡಬೇಕಾಗುತ್ತದೆಂದು ಅರಿಯದೆ ಇದ್ದಂತೆ ನಟಿಸುವವರು ಇನ್ನು ಕೆಲವರು ! ಅರಿತು ದುಡಿಯುವವರು ಎಷ್ಟು ಜನರೊ !

ಹೇಳಿದ ಕೆಲಸವನ್ನು ಮಾಡಿಕೊಂಡಿದ್ದರೆ ಆಯಿತು. ಉಳಿದ ಹೊಣೆ ನಮಗೆ ಬೇಡವೇ ಬೇಡ ಎಂಬ ಗುಲಾಮರ ಮನೋವೃತ್ತಿ ಎಲ್ಲ ಕ್ಷೇತ್ರಗಳಿಂದಲೂ ತೊಲಗಬೇಕಾಗಿದೆ. ರಾಜಕೀಯ ಸ್ವಾತಂತ್ರ್ಯವು ಸಿಗುವವರೆಗೆ ಸಿದ್ಧಿಯಾಗಿದ್ದರೂ, ಸಿಕ್ಕ ಮೇಲೆ ಸಾಧನವಾಗಿದೆ. ಅದರಿಂದ ಇನ್ನುಳಿದ ಅಭಿವೃದ್ಧಿ ಪಡೆಯಬೇಕಾಗಿದೆ. ದಾಸ್ಯದ ಮನೋವೃತ್ತಿಯಲ್ಲಿ, ಅಂಧಶ್ರದ್ಧೆಗಳನ್ನು ಪಾಲಿಸಿಕೊಂಡು ಬರುವಲ್ಲಿ, ಅಪಾರವಾದ ಶಕ್ತಿ ವ್ಯಯವಾಗುತ್ತದೆ. ಅದರ ಉಳಿತಾಯ ಅತ್ಯವಶ್ಯ !

ಕುಟುಂಬಗಳಲ್ಲಿ, ತಮ್ಮ ಮನೆಯ ಮಟ್ಟಿಗೆ ಈ ಜಾಗೃತಿಯನ್ನು ನಮ್ಮ ಅಕ್ಕ-ತಂಗಿಯರು ತೋರಿದರೂ ಎಷ್ಟೋ ಲಾಭವಾದೀತು ! ಒಳ್ಳೇ ಆಹಾರ, ಸಕಾಲಕ್ಕೆ ದೊರೆವ ಆಹಾರ, ಮಿತವ್ಯಯ, ಅಚ್ಚುಕಟ್ಟುತನ-ಒಂದೇ ಎರಡೇ-ನಮ್ಮ ಗೃಹಿಣಿಯರು ಒಟ್ಟು ಗೂಡಿದರೆ ಸಾಮಾಜಿಕ ಶಕ್ತಿ ಕೇಂದ್ರಿಕೃತವಾದಂತೆಯೇ !

---

# ಕೊಂಡು ತಂದ ಮನುಷ್ಯರು

ತಾ. ೩೦ ನೇ ಮರಾಠಿ ಸಾಧನಾದಲ್ಲಿಯ ಶ್ರೀ. ದೇವದಾಸ ಬಾಗುಲ ಇವರ ಲೇಖನದ
ಸ್ವೈರ ಅನುವಾದ

ಅನು— ಶ್ರೀ. ವೆಂ. ಕೊ.

ಮಾತಾಡುವ ಅವಶ್ಯಕತೆಯಿಂದ ಮನುಷ್ಯರು ಒಟ್ಟು ಗೂಡುತ್ತಾರೆ, ಓದುವ ಹವ್ಯಾಸದಿಂದ ಪುಸ್ತಕಗಳ ರಾಶಿಬೀಳುತ್ತದೆ. ಹಣ ವೆಚ್ಚಮಾಡದೆ ಹರಟೆಯು ಹೇಗೆ ಸಂತೆಪೇಟೆಯಲ್ಲಿ ಸಿಗುತ್ತದೆಯೋ ಹಾಗೆ ಓದುವದನ್ನು ಸಹ ಬಿಟ್ಟಿಯಲ್ಲೇ ಸಾಧಿಸಲು ಬರುತ್ತದೆ. ವಾಚನದ ಬಗ್ಗೆ ಬಹಳೇ ಹಸಿವು ಉಂಟಾದರೆ, ತಿಂಗಳ ಅವಧಿಯ ಚಂದಾಹಣ ತುಂಬಿ, ಮಾತಿಗೆ ಬಾರದ ಪುಸ್ತಕಗಳನ್ನೋದಿ ಮುಗಿಸುವ ಹಬ್ಬವನ್ನು ವಾಚನಾಲಯಗಳಲ್ಲಿ ತೀರಿಸಲು ಬರುತ್ತದೆ. ಮಾತಿನವಲ್ಲರಿದ್ದರೆ ಎರಡನೆಯವರ ಪುಸ್ತಕಗಳನ್ನು ಕೈಗಡತಂದು, ಅಲಿಪ್ತರಾಗಿ ಅವುಗಳನ್ನು ಮುಟ್ಟಿಸಲೂ ಬರುತ್ತದೆ.

ಆದರೆ ಮುಂದಿನದನ್ನು ಓದುತ್ತ, ಹಿಂದಿನದನ್ನು ಮರೆಯುವ ನಡತೆಯಿಂದ ಒಮ್ಮೊಮ್ಮೆ ಓದುವ ಅಭಿರುಚಿಗೆ ಸಹ ಆತಂಕವಾಗುತ್ತದೆ. ಒಂದು ಪುಸ್ತಕವನ್ನು ಓದಿಮುಗಿಸಿದರೂ ಸಹ ಕೆಲವೊಮ್ಮೆ ಅದು ಓದಿ ಮುಗಿಸಿದಂತೆನಿಸುವದಿಲ್ಲ. ಅದನ್ನು ತಿರುಗಿಕೊಡುವದೂ ಆಗುವದಿಲ್ಲ.

ಕೆಲಸದ ಗಡಿಬಡಿಯಿಂದ ಸ್ವಲ್ಪ ಬಿಡುವು ಸಿಕ್ಕೊಡನೆ ಆ ಪುಸ್ತಕದ ಕಡೆಗೆ ಅತೀ ಲಕ್ಷ್ಯ ಸೆಳೆಯುತ್ತದೆ. ನಿಜವೆಂದರೆ ಇದರಿಂದ ನಮ್ಮ ಬೆಲೆಯೇ ಸುಳ್ಳು! ನನ್ನ ಮನಸ್ಸೇ ನನ್ನ ವಿರುದ್ಧ ಫಿತೂರಿಮಾಡಿ, ಪುಸ್ತಕದ ಕಡೆಗೆ ಹೋಗಿ, ಆವೆರಡೂ ಒಂದಾಗುತ್ತವೆ. ಅಂತೆಯೇ ನಾನು ಲಗುಬಗೆಯಿಂದ ಅಂಗಡಿಗೆ ಹೋಗಿ ಆ ಪುಸ್ತಕವನ್ನು ಕೊಂಡುಕೊಳ್ಳುತ್ತೇನೆ. ಮನೆಗೆ ತಂದು ಹಗುರಾಗಿ ಕೈಯಿಂದ ಕಪಾಟಿನಲ್ಲಿಡುತ್ತೇನೆ.

ಈಗ ಇದರ ಮುಂದಿನ ನಿಜ ಸಂಗತಿ ಹೇಳುವದೆಂದರೆ, ನಾನು ಆ ಪುಸ್ತಕವನ್ನು ತೆಗೆದು ನೋಡುವದು ಕ್ವಚಿತವೇ. ಕೆಲಸದ ಗೊಂದಲದಲ್ಲಿ ಸಮಯ ಸಿಗುವದಿಲ್ಲ. ಆದರೆ ಈ ಕಾರಣವೇನೂ ಅಷ್ಟು ನಿಜವಲ್ಲ. ಸಮಯವಾಗದಿದ್ದರೆ ಇನ್ನೂ ಹೆಚ್ಚು ಹೊಸ ಪುಸ್ತಕಗಳು ಬರುತ್ತಿರಲಿಲ್ಲ. ನಿಜವೆಂದರೆ, ಸಮಯ ಸಿಕ್ಕಾಗ ಸಹ ನಾನದನ್ನು ಕೈಯಲ್ಲಿ ಹಿಡಿಯುವದಿಲ್ಲ. ಬಹಳವಾದರೆ, ಹಗುರಾಗಿ ಒಂದೆರಡು ಪುಟ ತಿರುವಿ ಹಾಕುತ್ತೇನೆ ಮಾತ್ರ. ಸಣ್ಣಂದಿನಲ್ಲಿ ಚಿಕ್ಕಮನ ಸೆರಗಿಗೆ ಮುಖ ಒರೆಸಿ, ಅವಳಿಂದ ಬೈಸಿಕೊಂಡ ಹೊರತು ಸಮಾಧಾನವಾಗುತ್ತಿರಲಿಲ್ಲ. ಈಗ ಚಿಕ್ಕಮ್ಮನು ಮನೆಯಲ್ಲಿದ್ದಾಳೆಂಬ ಅರಿವಿನಿಂದಲೇ ಬಗೆಹರಿಯುತ್ತದೆ. ಅದರಂತೆಯೇ ಈಗ ಅಗತ್ಯವೆಂದು ತಂದಿಟ್ಟ ಪುಸ್ತಕಗಳ ಸಲುವಾಗಿಯೂ ಆಗುತ್ತದೆ. ಆರಂಭಕ್ಕೆ ತೆಗೆದುಕೊಂಡ 'ಸ್ಮೃತಿಚಿತ್ರಗಳು' ಎಂಬ ಪುಸ್ತಕವನ್ನು ಒಮ್ಮೆ ಓದಿದ ನಂತರ ಹೆಚ್ಚೆಂದರೆ ಎರಡು–ಮೂರು ಬಾರಿ ತಿರುವಿ ಹಾಕಿರಬಹುದು. ಆದರೆ ಪುಸ್ತಕವನ್ನು ಪುನಃ ಹೆಚ್ಚು ತಿರುವಿಹಾಕದಿದ್ದರೂ ಸಹ 'ಲಕ್ಷ್ಮೀಬಾಯಿ ಟಿಳಕ' ಇವರು 'ರಾತ್ರಿ ರಾಣಿ' ಹೂವಿನಂತೆ ತನ್ನ ಅಸ್ತಿತ್ವದ ಸುಗಂಧವನ್ನು ಪಸರಿಸುತ್ತಿದ್ದಾಳೆಂಬ ಅರಿವು ನನಗೆ ಪ್ರತಿಕ್ಷಣದಲ್ಲಾಗುತ್ತಿರುತ್ತದೆ. ಅದೇ ಮಾತು 'ಸ್ಮೃತಿಚಿತ್ರ' ಪುಸ್ತಕದ ಬಳಿಯಲ್ಲೇ ಇಟ್ಟಿರುವ 'ಕೆಲವು ಮುದುಕರು ಮತ್ತು ಒಂದು ಮುದುಕಿ' ಇವರದ್ದು ಸಹ. ಧೂಳನ್ನು ತಿನ್ನುತ್ತ ಬಿದ್ದ ಅವುಗಳ ಪುಟಗಳಲ್ಲಿ ಸಹ, ಬಾಡಿದ ಗಿಡದ ಮೇಲಿನ ಚಿಗುರೆಲೆಗಳಂತೆ ನಮಗೆ, ಶಾಶ್ವತ ತಾರುಣ್ಯ ಜೀವನವು ಹತ್ತಿರವಿದೆಯೆಂಬಂತೆ ಭಾಸವಾಗುತ್ತಿರುತ್ತದೆ.

ಆ ನಂತರ ಈ ಕಪಾಟಿನಲ್ಲಿ ಎಷ್ಟೋ ಜನರು ಪುಸ್ತಕ ರೂಪಿಯಾಗಿ ಬಂದಿಳಿದಿದ್ದಾರೆ. ಅಮೀಲನ 'ಚಿಂತನಿಕಾ' ವನ್ನು ತೆಗೆದುಕೊಂಡು ಶ್ರೀ. ಸಾನೇ ಗುರೂಜಿಯವರು ಬಂದರು; "ಆಟನಿ ಮತ್ತು ಕ್ಲಿಯೋ ಪಾತ್ರ' ದ ಜೊತೆಗೆ ಮೆಯರ್ ಆಫ್ ಕ್ಯಾಸ್ಟರ್ ಬ್ರೀಜ್" ಬಂದು ನಿಂತಿದ್ದಾನೆ. ವಿರಹೀ ವ್ಯಥೆಯ ಕಾವ್ಯದರ್ಶಿಸುವ 'ಮೇಘದೂತ' ದ ಜೊತೆಗೆ 'ತುಕಾರಾಮ ವಚನಾಮೃತ' ದಿಂದ, ಆತ್ಮಶೋಧನ ಮಾಡುವ

ಜೀವನಪ್ರವಾಹಿ ತುಕಾರಾಮನು ಹೃದಯಸ್ಪರ್ಶಿಯಾಗುವಂತಾದ.

ವಾಚನವೇಗದ ಲೆಕ್ಕದಿಂದ ಈ ಎಲ್ಲ ಪುಸ್ತಕಗಳನ್ನು ಒಂದೇ ವೇಳೆಯಲ್ಲಿ ನಾನು ಓದಲು ಸಾಧ್ಯವಿಲ್ಲ. 'ಹುಕುಮ ಎಕ್ಕಾ' ವನ್ನು ಕೈಲಿ ಹಿಡಿದಂತೆ, ಕಪಾಟಿನಲ್ಲಿಯ ಯಾವದೊಂದು ಪುಸ್ತಕದ ಬೇಡಿಕೆಯು ಬೇರೆಯವರಿಂದ ಬಂದರೆ, ನಾನು ಕೂಡಲೇ ಬೇಸರಗೊಳ್ಳುತ್ತೇನೆ. ಸಿಟ್ಟಿನಿಂದ "ಪುಸ್ತಕವು ಸಿಗಲಿಕ್ಕೆ ಸಾಧ್ಯವೇ ಇಲ್ಲ" ವೆಂದು ಒದರುತ್ತೇನೆ. ನನ್ನ ಪುಸ್ತಕದ ಬಗ್ಗೆ ಇರುವ ವೇಳೆ, ಕೆಲಸ, ವೇಗದೊಳಗಿನ ಅರ್ಥವಿಲ್ಲದ ಪ್ರವೃತ್ತಿಯ ಪ್ರಶ್ನೆಯು ನನಗೇ ತಿಳಿಯುವದಿಲ್ಲ. ಇದರಿಂದ ನನ್ನ ಗೆಳೆಯರು ನಾನು ಪುಸ್ತಕದಂತಹ ನಿರ್ಜೀವ ವಸ್ತುವಿನ ಬಗ್ಗೆ ಇಷ್ಟು ಜೀವ ಹಚ್ಚಿ, ಏಕೆ ಮಾತಾಡುತ್ತೇನೆಂಬದನ್ನು ಅರಿಯಲಾರರು. ಆದರೆ ಅವರಿಗೆ ಇದೇ ವೇಳೆಯಲ್ಲಿ ಇನ್ನೂ ಹಲವು ಸಂಗತಿಗಳು ತಿಳಿಯುವದಿಲ್ಲವೆಂಬ ಮಾತು ನನಗೆ ಖಂಡಿತ ಗೊತ್ತು. ಕಾರಣವೆಂದರೆ, ಇಂತಹ ವೇಳೆಯಲ್ಲಿ ಅವರು ತಮ್ಮ ಬಾಲ್ಯವನ್ನು ಮರೆತಿರುತ್ತಾರೆ. ಪಡಸಾಲೆಯಲ್ಲಿ ತಾಯಿ ಇರುವಳೆಂಬ ವಿಶ್ವಾಸದಿಂದ ಅಂಗಳಲ್ಲಿ ಬಂದು, ತಿಳಿಯದ ಹುಮ್ಮಸ್ಸಿನಿಂದ ಜಿಗಿದಾಡುವ ಪ್ರಸಂಗದಲ್ಲಿಯ ಕಾವ್ಯಕ್ಕೆ ಅವರು ಎರವಾಗಿರುತ್ತಾರೆ. ತಮ್ಮ ತಾರುಣ್ಯವನ್ನು ಅವರು ಮರೆತಿರುತ್ತಾರೆ. ಮನೆಯಲ್ಲಿ ಮಡದಿಯ ಗಾನರಮ್ಯ ತಿರುಗಾಟವು ನಡೆದಿರುವಾಗ, ದಿವಾಣಖಾನೆಯಲ್ಲಿ ಹಬ್ಬಿದ ಪ್ರಸನ್ನ ಮತ್ತು ಶುದ್ಧ ವಾತಾವರಣಕ್ಕೆ ಅವರು ಕೃತಘ್ನರಾಗುತ್ತಾರೆ. ಒಂದೇ ಊರಿನಲ್ಲಿದ್ದು ಸಂಧಿಸದ ಗೆಳೆಯರು, ಪರ ಊರಿಗೆ ಹೋಗುವ ಪ್ರಸಂಗ ಬಂದಾಗ, ಅಂತಃಕರಣದಿಂದ ನಿರ್ಮಾಣವಾದ ಮತ್ತು ಉತ್ಕಟತೆಯ ದರ್ಶನ ಸಂಭವಿಸುವ ಲವಲವಿಕೆಯ ಕಡೆಗೆ ಸಹ ಅವರು ಅಲಕ್ಷ್ಯಮಾಡುತ್ತಾರೆ.

ನಿಜವಾಗಿಯೂ, ಆವೆಯು ಕೇವಲ ತನ್ನ ದೃಷ್ಟಿಯಿಂದ ಹೇಗೆ ಮರಿಗಳ ಪೋಷಣೆಮಾಡುತ್ತದೆಯೋ ಅದೇ ರೀತಿಯಿಂದ, ಪುಸ್ತಕಗಳು ಕೇವಲ ತಮ್ಮ ಕಪಾಟಿನಲ್ಲಿಯೇ ಇದ್ದು, ತಮ್ಮ ಅಸ್ತಿತ್ವದಿಂದ ನನ್ನ ಜೀವನವನ್ನು ಎತ್ತಿಹಿಡಿಯುತ್ತವೆ. ಜೀವನಕ್ಕೆ ಅನ್ವಯ ಹಚ್ಚುವ ದೃಷ್ಟಿಯಿಂದ ನನ್ನ ಭಾವಜೀವನವನ್ನು ಸಮೃದ್ಧಮಾಡುತ್ತವೆ. ಒಳಗಣ್ಣನ್ನು ತೆರೆಯ ಹಚ್ಚಿ ಚರಾಚರದೊಳಗಿನ ಸೌಂದರ್ಯ ಪುಷ್ಪಗಳನ್ನು ತೋರಿಸುತ್ತವೆ.

ನನ್ನ ತಿಳುವಳಿಕೆಯಂತೆ, ನನ್ನ ಕಪಾಟಿನಲ್ಲಿಯ ಪುಸ್ತಕಗಳ ತಾರ್ಕಿಕ ಬೇಡಿಕೆ ಮಾಡುವ ಜನರಿಗೆ, ಮನೆಯ ಸರಿಯಾದ ಅರ್ಥವೇನೆಂಬದು ಇನ್ನೂ ತಿಳಿದಿರಲಿಕ್ಕಿಲ್ಲ. ಅವರ ದೃಷ್ಟಿಯಿಂದ, ಮನೆ ಎಂದರೆ ಕೇವಲ 'ಆಹಾರ, ನಿದ್ರಾ, ಭಯ, ಮೈಥುನ'ಗಳೇ ಆದಿಯಾದ ಕೊರತೆಗಳನ್ನು ನಿವಾರಿಸುವ ಒಂದು ಸ್ಥಳವಿಷ್ಟೆ! ವಾಸ್ತವಿಕವಾಗಿ, 'ಕೊರತೆಯು ಸಾಧನಸ್ವರೂಪಗಳಿರುತ್ತವೆ. ಮನೆಯಲ್ಲಿ ಇದಕ್ಕಿಂತ ಇನ್ನೂ ಹೆಚ್ಚು ಏನಾದರೂ ಇರುತ್ತದೆ' ಎಂಬ ಈ ಸಾಕ್ಷಾತ್ಕಾರದ ಕಡೆ, ಅವರು ಬೆನ್ನು ತಿರುವಿಯೇ ಕುಳಿತಿರುತ್ತಾರೆ. ಕೌಟುಂಬಿಕ ಜೀವನದಿಂದ ಲಭಿಸುವ ಒಂದು ಪ್ರಸಾದಕ್ಕೆ ಅವರು ವಂಚಿತರಾಗಿರುತ್ತಾರೆ. ಒಂದು ಪ್ರಸನ್ನ ಗಳಿಗೆಯಲ್ಲಿ ಈ ಪ್ರಸಾದದ ಅಸ್ಪಷ್ಟ ದರ್ಶನವು ಅವರಿಗೂ ಆಗುತ್ತದೆ. ಆ ದರ್ಶನ ಸಮಯದಲ್ಲಿ ಈ ಮನುಷ್ಯರೂ ಸಹ ಪೇಟೆಯಿಂದ ಯಾವದೊಂದು ಚಿತ್ರ, ಯಾವದೇ ಮೂರ್ತಿ ಅಥವಾ ಪುಸ್ತಕಗಳನ್ನು ತರುತ್ತಾರೆ. ನಿಜವೆಂದರೆ ಅವರು ಆ ವಸ್ತುವನ್ನು ತರದೆ, ಆ ವಸ್ತುವಿನ ಮಾಧ್ಯಮದಿಂದ ಒಬ್ಬ ರಸಿಕ ಮನುಷ್ಯನನ್ನೇ ತಮ್ಮ ಭಾವಜೀವನದಲ್ಲಿ ತರುತ್ತಿರುತ್ತಾರೆ. ಆ ರಸಿಕ ಮನುಷ್ಯನ ಆಗಮನದಿಂದ ಅವರ ಅಂತಃಕರಣದಲ್ಲಿ ಪಾರಿವಾರಿಕ ಜೀವನದ ಧಾರಣೆಯು ಹೊಸ ಹುರುಪಿನಿಂದ ಪಲ್ಲವಿಸುತ್ತದೆ. ಪೇಟೆಯ ಆವಾರದೊಳಗಿಂದ ಸ್ವಂತದ ಬೆಲೆ ಸಾರುವ ವಸ್ತುಗಳು ಮನೆಗೆ ಬಂದೊಡನೆ ಆತ್ಮೀಯತೆಯ ಸ್ಪರ್ಶದಿಂದ ಅಮೂಲ್ಯವಾಗುತ್ತವೆ. ಏಕಾಂಗದ ವಿಕೃತ ಸ್ವರೂಪವು ಮಾಯವಾಗಿ ಹೃದಯದಲ್ಲಿ ಸಮ್ಮಿಲನದ ಉದಯವಾಗುತ್ತದೆ. 'ಕಲಂದರ'ದ ಇಲ್ಲವೇ 'ರಾಜಾರಾಣಿ'ಯ ಜೀವನದ ಕಕ್ಷೆಯು ವಿಸ್ತಾರವಾಗುತ್ತದೆ, ಮನೆಗೆ ಪಾರಿವಾರಿಕ ಜೀವನದ ಸುಗಂಧ ಸಿಗುತ್ತದೆ. ಮುಂದೆ ದಿನವಿಡೀ ಹೊಟ್ಟೆಗಾಗಿ ಹತ್ತು ದಿಶೆಗಳಲ್ಲಿ ತಿರುಗುವ ಕಾಲುಗಳನ್ನು, ಸಾಯಂಕಾಲದಲ್ಲಿ ಈ ಕೊಂಡುತಂದ ರಸಿಕ ಮನುಷ್ಯರು, ಮನೆಗೆ ಸ್ಪರ್ಶಿಸುವಂತೆ ಮಾಡುತ್ತಾರೆ. ಆಗ ಕಾಲಿನ ಮೇಲೆ ಹೃದಯದ ಅಧಿಕಾರವು ನಡೆಯುತ್ತದೆ!

ಪಕ್ಷಿಗಳು ಯಾವ ಆತುರದಿಂದ ತಮ್ಮ ಗೂಡಿನ ಕಡೆಗೆ ಹಿಂದಿರುಗುತ್ತವೆಯೋ, ದನಕರುಗಳು ಹಟ್ಟಿಯ ಕಡೆಗೆ ಧಾವಿಸುತ್ತವೆಯೋ ಅದೇ ಆತುರದಿಂದ ನಾನು ನನ್ನ ಕೋಣೆಯ ಕಡೆಗೆ ಧಾವಿಸುತ್ತೇನೆ. ಅಧೀರನಾಗಿ ಬೀಗ ತೆಗೆಯುತ್ತೇನೆ. ಕಣ್ತುಂಬ ಈ ಮನುಷ್ಯರ ಕಡೆಗೆ ನೋಡುತ್ತೇನೆ. ಆ ವೇಳೆ ಈ ಕಪಾಟೆಂದರೆ "ವಿಶ್ವಾಸ, ಸ್ನೇಹ, ಭಕ್ತಿ ಇವುಗಳ ಮಹತ್ತರವಾದ ಮಂದಿರವಿದೆ" ಎಂಬ ತೀವ್ರ ಅರಿವುಂಟಾಗುತ್ತದೆ.

ದಿನವಿಡಿಯ ದಿಕ್ಕಿಲ್ಲದ ಮದ್ಯಾಟದ ಮೇಲೆ ಅನ್ವಯಾರ್ಥದ ಪ್ರಕಾಶವು ಬೀಳುತ್ತದೆ. ಅನಾಥತ್ವದ ಕಹಿತನವು ಹೋಗಿ ಪಾರಿವಾರಿಕ ಜೀವನದ ವಸಂತಮಾಸದ ಗಾಳಿಯು ಬೀಸುತ್ತದೆ. ಸಹಿಸಿದ ವ್ಯಥೆಗೆ ಶಮನ ಸಿಗುತ್ತದೆ. ಪುಸ್ತಕದಲ್ಲಿಯ ಈ ಅನೇಕ ವಿಧ ಮನುಷ್ಯರು ವೈರಾಗ್ಯ ತಾಳಿದ ನನ್ನ ಮನಸ್ಸಿನ್ನು ಪುನಃ ಜೀವನಸನ್ಮುಖವಾಗುವಂತೆ ಮಾಡುತ್ತಾರೆ. ಅಕ್ಕಪಕ್ಕದ ಜನರ ಕಡೆ ‘ತಿಳಿದುಕೊಳ್ಳುವ” ವೃತ್ತಿಯಿಂದ ನೋಡುವ ಪ್ರವೃತ್ತನನ್ನಾಗಿ ಮಾಡುತ್ತಾರೆ. ವನವಾಸದಲ್ಲಿಯ ಪಾಂಡವರಿಗೆ ಋಷಿಮುನಿಗಳು ಬೇರೆ ಬೇರೆ ರಾಜರ ಕಷ್ಟಮಯ ಜೀವನದ ಕತೆಗಳನ್ನು ಹೇಳಿ ಮನರಂಜಿಸಿದಂತೆ ಈ ‘ಕೊಂಡು ತಂದ” ಅಮೂಲ್ಯ ಮನುಷ್ಯರೂ, ತಮ್ಮ ಜೀವನವನ್ನು ಅಂತಃಕರಣ ಪೂರ್ವಕವಾಗಿ ಬಿಚ್ಚಿ ಹೇಳಹೇಳುತ್ತ ನನ್ನನ್ನು ಪ್ರಫುಲ್ಲಿತನನ್ನಾಗಿ ಮಾಡುತ್ತಾರೆ. ಅವರ ಶೀತಲ ಆತ್ಮಾವಿಷ್ಕಾರದಿಂದ ಅಲ್ಲಿ ಇಲ್ಲಿ ಮೃಧುಮಧುರವಾಸನೆ ಬೀರುತ್ತಾರೆ. ಪ್ರಶಾಂತತೆಯ ವೈಜಯಂತಿಮಾಲೆಯು ಕೊರಳಲ್ಲಿ ಬೀಳುತ್ತದೆ. ಕತ್ತಲು ರಾತ್ರಿಯಲ್ಲೇ ಬೆಳದಿಂಗಳು ಪಸರಿಸುತ್ತದೆ. ಮತ್ತು ನಾಳಿನ ಉಷಃಕಾಲದ ಪ್ರತೀಕ್ಷೆಯಲ್ಲಿ ಶಾಂತ ನಿದ್ರೆಯಾಗುತ್ತದೆ.

ಆ ಬಗ್ಗೆ ಮನುಷ್ಯರಲ್ಲೇ ಹಸಿವಿರಬೇಕಾಗುತ್ತದೆ. ಆದರೆ ಅಷ್ಟರ ಮೇಲೇ ಸಾಗುವದಿಲ್ಲ. ಎರಡನೇಮನುಷ್ಯರನ್ನು ಅರಿತುಕೊಳ್ಳುವ ಇಚ್ಛೆಯು ಜಾಗೃತವಿರುವಂತಹ ಪ್ರಕೃತಿಯಾಗಬೇಕು. ಅಂದರೆ ಆ ಮೇಲೆ ಈ “ ಕೊಂಡು ತಂದ ಮನುಷ್ಯರು ” ಜೀವನದಲ್ಲಿ ತಪ್ಪು ತಿಳುವಳಿಕೆ, ಕ್ರೋಧ, ದ್ವೇಷ, ಮತ್ಸರಗಳೇ ಆದಿಯಾಗಿ ಷಡ್ರಿಪುಗಳು ಮಿಂಚಿನಂತೆ ಹೇಗಿವೆ ಎಂಬುದರ ಅರಿವು ತಂದು ಕೊಡುತ್ತಾರೆ. ಒಬ್ಬರಿಗೊಬ್ಬರ ಹಿತಚಿಂತನೆಯ ಬೆಳದಿಂಗಳ ಬೆಳಕು ಕೆಡವಿ, ನಿಮ್ಮ ನಮ್ಮ ವಿಶ್ವದಲ್ಲಿ ಸೌಂದರ್ಯ, ಸಾಮರ್ಥ್ಯ ಮತ್ತು ಸಂಪದ್ಧತೆಯು ಹೇಗೆ ಅಣುರೇಣುಗಳಲ್ಲಿ ತುಂಬಿವೆಯೆಂಬುದರ ದರ್ಶನವನ್ನು ಒಳ್ಳೇ ರಸಿಕತೆಯಿಂದ ಒದಗಿಸಿಕೊಡುತ್ತಾರೆ. ಮಣ್ಣಿನಿಂದ ದೂರ ಓಡುವ ಕಾಲಿಗೆ ಮಣ್ಣಿನಲ್ಲಿಯ ಅದಮ್ಯವಾಗಿ ಸೃಷ್ಟಿಸುವ ಪ್ರಯೋಗಶೀಲತೆಯ ದೃಷ್ಟಿಕೊಡುತ್ತಾರೆ ಮತ್ತು ಅದಕ್ಕಾಗಿ ‘ ಪರೋಪದೇಶ ’ದ ವಿಫಲ ಮಾಧ್ಯಮವನ್ನು ಉಪಯೋಗಿಸದೆ, ಸ್ವತಃಜೀವನದಿಂದ ಎರಡನೇಯವರನ್ನು ವಿಶ್ವಾಸದಲ್ಲಿ ತೆಗೆದುಕೊಳ್ಳುತ್ತಾರೆ. ನನ್ನ ಪುಟ್ಟ ಕೋಣೆಯಲ್ಲಿ ಅಂತೆಯೇ ಒಮ್ಮೊಮ್ಮೆ ‘ಏಕಚಪ್ಯಾಲಾ’ ದೊಳಗಿನ ಸಿಂಧುವು ಹಾಸ್ಯ ವೃತ್ತಿಯಿಂದ ಬೀಸುತ್ತ ಕುಳಿತದ್ದು ಕಾಣುತ್ತದೆ. ‘ಉತ್ತರ ರಾಮ ಚರಿತ್ರೆ’ ಯಲ್ಲಿಯ ರಾಮನು ದಂಡಕಾರಣ್ಯದಲ್ಲಿ ಸೀತೆಯ ಸ್ಮೃತಿಯಿಂದ ವಿಹ್ವಲನಾಗಿ ತನ್ನ ಪ್ರಜಾಜನರಲ್ಲಿ ಅಂತಃಕರಣ ಪೂರ್ವಕವಾಗಿ ಕ್ಷಮಾಬೇಡಿ ತನ್ನ ಅಂತಃಕರಣದೊಳಗಿನ,— ತೋರಿಕೆಗೆ ವಿರೋಧಕಾಣುವಂತಹ ಎರಡು ಭಾವನೆಗಳಲ್ಲಿಯ ಸಂಘರ್ಷಣದೊಳಗಿನ ಕಾವ್ಯ ತೋರಿಸುತ್ತಾನೆ. ಒಮ್ಮೊಮ್ಮೆ ‘ಸತಾರಿಚೀಬೋಲ’ (ಕವನ) ದೊಳಗಿನ ಕೇಶವಸುತರ ‘ವಿಭೂತಿ’ಯು ವಿಶ್ವದೊಳಗೆ ಸತಾರದ ಧ್ವನಿಯು ಹೇಗೆ ಪಸರಿಸುತ್ತದೆ ಎಂಬದರ ಸರಳ ದರ್ಶನ ಮಾಡಿಸುತ್ತದೆ.

ಅಂತೆಯೇ ಪೇಟೆಯಲ್ಲಿ ಪ್ರೀತಿಯು ಸಿಗದಿದ್ದರೂ ಸಹ, ನಮ್ಮ ಜೀವನದಿಂದ, “ ಪ್ರೀತಿಯೂ ಒಂದು ತಪಸ್ಯವಿದೆ ” ಎಂಬ ಪ್ರತ್ಯಯವನ್ನು ಕೊಡುವ ಮನುಷ್ಯರು ಸಿಗುತ್ತಾರೆ. ಜೀವನದಲ್ಲಿಯ ಆನಂದವನ್ನು ಕೊಂಡು ತೆಗೆದುಕೊಳ್ಳಲು ಬರದಿದ್ದರೂ, ಅದು ಯಾವ ರೀತಿಯಿಂದ ಸಿಗುತ್ತದೆ ಎಂಬದರ ವಿಶ್ವದರ್ಶನವನ್ನು ಒದಗಿಸಿಕೊಡುವ ಮನುಷ್ಯರು ಸಿಗುತ್ತಾರೆ. ಇಂತಹ ಮನುಷ್ಯರು ನಿಮ್ಮ ನಮ್ಮ ಸಲುವಾಗಿ ಕಲ್ಪವೃಕ್ಷದಂತೆ ದಿನವೂ ತತ್ಪರರಾಗಿ ನಿಂತಿರುತ್ತಾರೆ. ನೀವು ಕೇವಲ ಅವರನ್ನು ನಿಮ್ಮ ಮನೆಗೆ ಕರೆತರಬೇಕು. ಮತ್ತು ಅದಕ್ಕಾಗಿ ‘ ಮನೆಯ ’ ಅರ್ಥವನ್ನು ಅರಿತುಕೊಳ್ಳಬೇಕು.

# ವಿವೇಕಾನಂದರು
## ಹೇಳಿದ್ದೇನೆಂದರೆ—

೧. ಯಾವನಿಗೆ ಆಜ್ಞೆ ಪಾಲಿಸಲು ಗೊತ್ತೋ ಅವನೇ ಆಜ್ಞಾ ಮಾಡಲು ಸಮರ್ಥ. ಮೊದಲು ಆಜ್ಞೆ ಪಾಲಿಸುವದನ್ನು ಕಲಿ. ಕೂಡಿರುವದು ನಮಗೆ ಬೇಕಾಗಿದೆ. ಅದೂ ಒಂದು ಶಕ್ತಿ, ಮತ್ತು ಅದು ಆಜ್ಞೆ ಪಾಲನೆಯಿಂದಲೇ ಸಾಧ್ಯ.

೨. ಏಳು! ಎಚ್ಚರಾಗು! ಮತ್ತು ನಿನ್ನ ಗುರಿಯನ್ನು ಮುಟ್ಟುವವರೆಗೂ ನಿಲ್ಲದೆ ಕೆಲಸ ಮಾಡು. ಅಂದರೆ ಸಂಪೂರ್ಣ ಸಾಧಿಸುವದು.

೩. ನಾನು ಬಡವ, ಮಿತ್ರರಾರೂ ಇಲ್ಲೆ"ಂದು ಯೋಚಿಸಬೇಡ. ಆದರೆ ಹೌದು, ಹಣಕ್ಕಾಗಿ ಆಶಿಸದ ಮಾನವರಾರು? ಹಣ ಮಾಡು (ಗಳಿಸು) ವವನೇ ಮಾನವ! ಇಡೀ ಜಗತ್ತು ಮಾನವನ ಉತ್ಸಾಹ ಬಲ, ಶಕ್ತಿ ಬಲ ಹಾಗೂ ನಂಬಿಗೆಯಿಂದಲೇ ಮಾಡಲ್ಪಟ್ಟದೆ.

೪. ಬೇರೊಬ್ಬರ ತಪ್ಪನ್ನೆತ್ತಿ ಮಾತಾಡದಿರು. ಅದೆಷ್ಟೇ ಕೆಡುಕಾಗಿದ್ದರೂ ಅದರ ಬಗೆಗೆ ಆಲೋಚಿಸದಿರು. ಅದರಿಂದ ಯಾವದೊಂದು ಲಾಭವಾಗದು. ಅವರ ತಪ್ಪನ್ನೆತ್ತಿ ತೋರಿಸಿ ನೀನವರಿಗೆ ಸಹಾಯ ಸಲ್ಲಿಸಲಾರಿ. ಅವನಿಗೆ ಅದರಿಂದ ಅಪಾಯ ಮಾಡುವಿ ಮತ್ತು ನಿನ್ನಷ್ಟಕ್ಕೆ ನೀನೂ ಅಪಾಯ ಮಾಡಿಕೊಳ್ಳುವಿ.

೫. ಯಾವನು ತನ್ನ ಮೇಲೆ ತನ್ನದೇ ಅಧಿಕಾರ ಮಾಡಿಕೊಳ್ಳುವ ರೂಢಿಯನ್ನಿಟ್ಟುಕೊಂಡಿರುವನೊ ಅವನು ಹೊರಗಿನ ಯಾವುದಕ್ಕೂ ಆಕರ್ಷಿತನಾಗಲಾರ ಮತ್ತು ಯಾರಿಗೂ ಗುಲಾಮನಾಗಲಾರ. ಅವನ ಮನಸ್ಸು ಸ್ವತಂತ್ರವಾಗಿರುತ್ತದೆ. ಅಂಥವನೇ ಈ ಜಗತ್ತಿನಲ್ಲಿರಲು ಯೋಗ್ಯನಾದವನು.

೬. ಅತಿ ದಪ್ಪ ಮನುಷ್ಯನು ತನ್ನ ಮನಸ್ಸಿಲ್ಲದಿದ್ದರೂ ಬೇರೊಬ್ಬರು ಗೊತ್ತುಪಡಿಸಿ ಹಚ್ಚಿದ ಕೆಲಸವನ್ನು ಸಾಧಿಸಬಲ್ಲನು. (ಮಾಡಬಲ್ಲನು). ಆದರೆ ಅದನ್ನೇ ಜಾಣನಾದವನು ತನ್ನ ಇಚ್ಛೆಗೆ ತಕ್ಕಂತೆ ತಿರುಗಿಸುವನು. ಕಾರಣ ಯಾವ ಕೆಲಸವೂ ಸಣ್ಣದಲ್ಲ.

೭. ಕಲ್ಪನಾ ಸಮರ್ಥನು ಒಂದು ಸಾವಿರ ತಪ್ಪು ಮಾಡಿದರೆ ಅಸಮರ್ಥನು ೫ ಸಾವಿರ ತಪ್ಪುಗಳನ್ನು ಮಾಡುವನು. ಕಾರಣ ಕಾಲ್ಪನಿಕ ಮಾನವರಾಗಲು ಪ್ರಯತ್ನಿಸುವದು ಒಳ್ಳೆಯದು.

ಸಂಗ್ರಹಕರು— **ಸರೋಜ ಕೊ.**

# ಜಗತ್ ಪ್ರಸಿದ್ಧ ಕವಿವರ್ಯ ರವೀಂದ್ರನಾಥ ಟಾಗೋರರವರ ಗೀತಾಂಜಲಿಯ ಅನುವಾದ

( ಸಂಗ್ರಹ )

**ಜೂನ-ಜುಲೈ ಸಂಚಿಕೆಯಿಂದ ಮುಂದುವರೆದುದು**



ಇದೇ ಬರಲಿರುವ ಆಗಸ್ಟ ೭ ರಂದು ಜಗತ್ ಪ್ರಸಿದ್ಧ ಕವಿವರ್ಯ ರವೀಂದ್ರನಾಥರ ದಿನಾಚರಣೆ ಅವರ ನೆನಪಿನ ಕುರುಹಾಗಿ ನೋಬೆಲ್ ಬಹುಮಾನ ಪಡೆದ ಅವರ ಕೃತಿ ಗೀತಾಂಜಲಿಯ ಕೆಲವು ಪದ್ಯಗಳ ಅನುವಾದವನ್ನಿಲ್ಲಿ ಕೊಡಲಾಗಿದೆ. ಅನುವಾದಗಳ ಹಿಂದೆ ಹಾಕಿದ ಅಂಕೆಯು ಗೀತಾಂಜಲಿಯೊಳಗಿನ ಪದ್ಯಗಳ ಅಂಕೆ ಕೆಲವು ಪದ್ಯಗಳ ಅನುವಾದಗಳನ್ನು ಈ ಮೊದಲೇ ವೀರಮಾತೆಯ ಬೇರೆ ಬೇರೆ ಸಂಚಿಕೆಗಳಲ್ಲಿ ಪ್ರಸಿದ್ಧಿಸಲಾಗಿದೆ.

**ಸ. ಸಂ.**

೧೫. ನಾನು ಇಲ್ಲಿಗೆ ನಿನ್ನೆದುರಿಗೆ ಹಾಡಬೇಕೆಂದು ಬಂದದ್ದು. ಈ ನನ್ನ ಓಲಗದಲ್ಲಿ ನನಗೊಂದು ಮೂಲೆಯಲ್ಲಿ ಸ್ಥಳವಿದೆ.

ಈ ನಿನ್ನ ಜಗತ್ತಿನಲ್ಲಿ ನನಗೇನೂ ಕೆಲಸವಿಲ್ಲ. ನನ್ನ ಈ ನಿರರ್ಥಕವಾದ ಜೀವವು ವಿಶಿಷ್ಟ ಉದ್ದೇಶವಿಲ್ಲದೆ ಗಾಯನ ಮಾತ್ರ ಮಾಡಬಲ್ಲದು.

ಮಧ್ಯರಾತ್ರಿಯಲ್ಲಿ ಕತ್ತಲೆಯ ಗುಡಿಯಲ್ಲಿ ಏಕಾಂತ ಪೂಜೆಯ ಸಮಯವಾಗುತ್ತಲೆ, ನಿನ್ನೆದುರಿಗೆ ನಿಂತು ಹಾಡಲಿಕ್ಕೆ ನನಗೆ ಅಪ್ಪಣೆ ಕೊಡು.

ಮುಂಜಾನೆಯ ತಂಗಾಳಿಯಲ್ಲಿ ಭಂಗಾರದ ತಂಬೂರಿಯ ಸ್ವರವು ಕೂಡುತ್ತಲೇ ನನಗೆ ನಿನ್ನೆದುರಿಗೆ ಬರಲು ಅಪ್ಪಣೆ ಕೊಟ್ಟು ಗೌರವಿಸು.

೧೬. ಈ ಜಗತ್ತಿನ ಉತ್ಸವದಲ್ಲಿ ನನಗೊಂದು ಆಮಂತ್ರಣ ಬಂದು ನನ್ನ ಜನ್ಮವು ಸಾರ್ಥಕವಾಯಿತು. ನನ್ನ ಕಣ್ಣುಗಳು ಕಂಡವು, ಕಿವಿಗಳು ಕೇಳಿದವು.

ಈ ಉತ್ಸವದಲ್ಲಿ ನನ್ನ ವೀಣೆಯನ್ನು ನುಡಿಸುವದು ನನ್ನ ಕೆಲಸವಾಗಿತ್ತು. ಅದನ್ನು ನಾನು ಶಕ್ಯವಿದ್ದಷ್ಟು ಮಾಡಿರುತ್ತೇನೆ.

ಮನಸ್ಸಿನಿಂದ ನಮಸ್ಕರಿಸಲಿಕ್ಕೆ, ನಾನು ಒಳಗೆ ಬಂದು ನಿನ್ನ ದರ್ಶನ ತೆಗೆದುಕೊಳ್ಳಲಿಕ್ಕೆ ಈಗ ಸಮಯ ಒದಗಿ ಬಂದಿದೆಯೋ? ಎಂದು ಕೇಳಿಕೊಳ್ಳುತ್ತೇನೆ.

೧೭. ನಾನಂತೂ ಕಟ್ಟಕಡೆಗೆ ಅವನಿಗೇ ಪೂರ್ಣವಾಗಿ ನನ್ನನ್ನು ಒಪ್ಪಿಸಿಬಿಡಲಿಕ್ಕೆ ಭಕ್ತಿಭಾವದ ದಾರಿಯನ್ನೇ ಕಾಯುತ್ತೇನೆ. ಆದ್ದರಿಂದಲೇ ಇಷ್ಟು ತಡವಾದುದು. ಮತ್ತು ನಾನು ಮಾಡುವದರಲ್ಲಿ ತಪ್ಪಿದೆನೆಂಬ ಅಪವಾದಕ್ಕಾದರೂ ಇದೇ ಕಾರಣ.

ಅವರು ನನ್ನನ್ನು ನಿಯಮಗಳಿಂದಲೂ, ಕಟ್ಟಳೆಗಳಿಂದಲೂ ಗಟ್ಟಿಯಾಗಿ ಕಟ್ಟಲು ಬರುತ್ತಾರೆ. ಆದರೆ ನಾನು ಯಾವಾಗಲೂ ತಪ್ಪಿಸುತ್ತೇನೆ. ಯಾಕೆಂದರೆ, ನಾನು ಕಟ್ಟಕಡೆಗೆ ಅವನಿಗೆ ನನ್ನನ್ನು ಪೂರ್ಣವಾಗಿ ಒಪ್ಪಿಸಿಬಿಡಲಿಕ್ಕೆ ಭಕ್ತಿಭಾವದ ದಾರಿಯನ್ನೇ ಕಾಯುತ್ತೇನೆ.

ಜನರು ನನಗೆ, ಹೇಳಿದ್ದರ ಕಡೆಗೆ ಲಕ್ಷ್ಯವನ್ನೇ ಕೊಡುವದಿಲ್ಲವೆಂದು ದೋಷಕೊಡುತ್ತಾರೆ. ಮತ್ತು ಅವರು ಈ ರೀತಿ ದೋಷಕೊಡುವದಾದರೂ ಯೋಗ್ಯವೇ ಸರಿ.

ಸಂತೆಯು ಮುಗಿಯಿತು. ಸಂತೆಗೆ ಬಂದವರೆಲ್ಲರ ಕೆಲಸವೂ ಮುಗಿಯಿತು. ನನ್ನನ್ನು ಕರೆಯಲಿಕ್ಕೆ ಬಂದವರೆಲ್ಲರೂ,

ನಾನು ಬರಲಿಲ್ಲವೆಂದು ಸಿಟ್ಟಿನಿಂದ ತಿರುಗಿ ಹೋದರು. ನಾನು ಕಟ್ಟಕಡೆಗೆ ಅವನಿಗೇ ನನ್ನನ್ನು ಪೂರ್ಣವಾಗಿ ಒಪ್ಪಿಸಿಬಿಡಲಿಕ್ಕೆ ಭಕ್ತಿಭಾವದ ದಾರಿಯನ್ನೇ ಕಾಯುತ್ತೇನೆ.

೧೮. ಆಕಾಶದಲ್ಲೆಲ್ಲಾ ಮೋಡಗಳು ಒಂದರ ಮೇಲೊಂದು ಮುಸುಕಿ ಕತ್ತಲೆಯಾಯಿತು. ಎಲೈ ಪ್ರಿಯ ಕರನೇ, ನನ್ನೊಬ್ಬನನ್ನೇ ಬಾಗಿಲ ಹೊರಗೆ ದಾರಿ ಕಾಯಲಿಕ್ಕೆ ಯಾಕೆ ಹಚ್ಚುತ್ತೀ? ಮಧ್ಯಾಹ್ನದ ಕೆಲಸದ ವೇಳೆಯಲ್ಲಿ ನಾನೂ ಜನಸಂದಣಿಯೊಳಗೆ ಸೇರಿಕೊಳ್ಳುತ್ತೇನೆ. ಆದರೆ ಇಂತಹ ಕತ್ತಲೆಯ, ಯಾರೂ ಇಲ್ಲದ ದಿವಸದಲ್ಲಿ ನೀನೇ ನನಗೆ ಗತಿ.

ನೀನು ನನಗೆ ಮೋರೆ ತೋರಿಸದಿದ್ದರೆ, ನನ್ನನ್ನು ತಾತ್ಸರ ಮಾಡಿದರೆ, ಇಂತಹ ಹೊತ್ತು ಹೋಗದ ಮಳೆಯ ದಿವಸವನ್ನು ನಾನೆಂತು ಕಳೆಯಬೇಕೋ ನಾನರಿಯೆ.

ನಾನು ಆಕಾಶದಲ್ಲಿ ದೂರ ಕಾಣುವ ಕತ್ತಲೆಯ ಕಡೆಗೆ ನೋಡುತ್ತಾ ಕುಳಿತಿರುವೆನು. ನನ್ನ ಹೃದಯವು ಒಂದೇ ಸವನೆ ಬೀಸುವ ಗಾಳಿಯ ಸಂಗಡ ತಳಮಳಿಸುತ್ತಾ ಭ್ರಮಣ ಮಾಡುತ್ತಲಿದೆ.

೧೯. ನೀನು ಮಾತಾಡದಿದ್ದರೆ ನಿನ್ನ ಮೌನವನ್ನೇ ಹೃದಯದಲ್ಲಿ ತುಂಬಿಕೊಂಡು ಅದನ್ನೇ ತಾಳಿಕೊಳ್ಳುವೆನು. ಮತ್ತು ತಲೆತಗ್ಗಿಸಿಕೊಂಡು, ಶಾಂತಚಿತ್ತದಿಂದ ಕಾಯುತ್ತಿರುವ ನಕ್ಷತ್ರದ ರಾತ್ರಿಯಂತೆ ಕಾಯುತ್ತ ಕೂಡುವೆನು.

ನಿಶ್ಚಯವಾಗಿಯೂ ಬೆಳಗು ಬರುವದು. ಕತ್ತಲೆಯು ಇಲ್ಲದಂತಾಗುವದು ಮತ್ತು ನಿನ್ನ ಧ್ವನಿಯು ಹೊಂಬಣ್ಣದ ನದಿಗಳಂತೆ ಗಗನಮಂಡಲದೊಳಗಿಂದ ತೆರಪಿಲ್ಲದೆ ಸುರಿಯ ಕೊಡಗುವದು.

ಆಮೇಲೆ ನಿನ್ನ ಶಬ್ದಗಳು ನಿನ್ನ ಪ್ರತಿಯೊಂದು ಪಕ್ಷಿಯ ಗೂಡಿನೊಳಗಿಂದ ಗಾಯನವಾಗಿ—ಹಾರುವವು. ಮತ್ತು ನಿನ್ನ ಗಾಯನವು ನನ್ನ ಅಡವಿಯೊಳಗಿನ ಎಲ್ಲ ಗಿಡಗಳೊಳಗೆ ಹೂವಾಗಿ ಹೊರಬೀಳುವದು.

೨೦. ಅಯ್ಯೋ! ಕಮಲವು ಅರಳಿದಾಗ ನನ್ನಮನಸ್ಸು ಸ್ಥಿರವಾಗಿದ್ದಿರಲಿಲ್ಲ. ಆದ್ದರಿಂದ ಅದು ನನಗೆ ತಿಳಿಯಲಿಲ್ಲ. ನನ್ನ ಹೂವಿನ ಬುಟ್ಟಿಯು ಬರಿದಾಗಿತ್ತು. ಆದರೂ ಆ ಹೂವು ನೋಡದೆ ಉಳಿದುಹೋಯಿತು.

ಮೇಲಿಂದಮೇಲೆ ಮನಸ್ಸಿನಲ್ಲಿ ಖಿನ್ನತೆಯು ಮಾತ್ರ ಬರುತ್ತಿತ್ತು. ದಕ್ಷಿಣ ಕಡೆಯ ಗಾಳಿಯಲ್ಲಿ ವಿಲಕ್ಷಣವಾದ ಒಂದು ಸುವಾಸಿತ, ಮಧುರವಾದ ಝುಳುಕು ಬಂತು. ಕೂಡಲೇ ಕನಸಿನೊಳಗಿಂದ ಎಚ್ಚತ್ತಂತೆ ಗಡಬಡಿಸಿಕೊಂಡು ಎದ್ದೆ.

ಆ ವಿಲಕ್ಷಣವಾದ ಮಾಧುರ್ಯವನ್ನು ಪಡೆಯಬೇಕೆಂಬ ಆತುರತೆಯಿಂದ ಮನಸ್ಸು ತಳಮಳಿಸುತ್ತಿತ್ತು. ಆ ಮಾಧುರ್ಯವು ವಸಂತಋತುವೇ ಪೂರ್ಣವಾಗಿ ಫಲಿಸಬೇಕೆಂಬ ಉತ್ಸುಕತೆಯಿಂದ ಬಿಟ್ಟ ಉಸಿರೆಂದು ನನಗೆ ಅನಿಸಿತು.

ಅದು ಇಷ್ಟು ಸಮೀಪದಲ್ಲಿಯೇ ಇರುವದೆಂದೂ ಅದು ನನ್ನದೇ ಎಂದೂ, ಆ ಮಾಧುಯವು ನನ್ನ ಹೃದಯದ ಮಧ್ಯದಲ್ಲಿಯೇ ಅರಳಿದ ಕಮಲದ್ದೆಂದೂ ಆಗ್ಗೆ ನನಗೆ ತಿಳಿಯಲಿಲ್ಲ.

೨೧. ನನ್ನ ಡೋಣಿಯನ್ನು ಈಗ ನೀರಿನಲ್ಲಿ ದೂಡಲೇಬೇಕು. ಆಲಸ್ಯದಿಂದ ದಂಡೆಯ ಮೇಲೆ ಕುಳಿತು ಎಷ್ಟೋ ತಾಸುಗಳಾದವು, ಅಯ್ಯೋ ವಸಂತಕಾಲವು ಹೂವನ್ನು ಅರಳಿಸುವ ತನ್ನ ಕೆಲಸವನ್ನು ಮುಗಿಸಿ, ಅಳಿದುಹೋದೀತು. ಈಗ ನಾನು ಒಣಗಿದ ಹೂವಿನ ವ್ಯರ್ಥಭಾರವನ್ನು ಹೊತ್ತುಕೊಂಡು, ದಾರಿಕಾಯುತ್ತ ಸುಮ್ಮನೆ ಹಿಂದೆ ಉಳಿದಿರುತ್ತೇನೆ.

ತೆರೆಗಳ ಅಬ್ಬರವು ಹೆಚ್ಚಾಯಿತು. ಮತ್ತು ದಂಡೆಯ ಮೇಲಿನ ಹಾದಿಯಲ್ಲಿ, ಸಾಲುಮರಗಳ ನೆರಳಲ್ಲಿ ಹಣ್ಣಾಎಲೆಗಳು ಉದುರಿಬೀಳುತ್ತಲಿವೆ.

ನೀನು ಸುಮ್ಮನೆ ಏನು ನೋಡುತ್ತ ಕುಳಿತಿರುವೆ? ಆಚೆಯ ದಂಡೆಯಿಂದ ಗಾಳಿಯ ಸಂಗಡ ಸಾವಕಾಶವಾಗಿ ದೂರದಿಂದ ಬರುವ ಸುಸ್ವರದಿಂದ, ನಿನ್ನಲ್ಲಿ ಏನೂ ಸ್ಫೂರ್ತಿ ಹುಟ್ಟುವದಿಲ್ಲವೆ?

# ರಾಯರ ಕನಸು

( ನಗೆ ಬರಹ )

ಲೇ— ಜಿ. ಬಿ. ಕುಲಕರ್ಣಿ, ಧಾರವಾಡ.

“ ನಿನ್ನ ಮದುವೆಯೊಂದು ಮುಗಿದು ಮನೆಯ ತುಂಬ ಒಂದು ಮೊಮ್ಮಗು ಓಡಾಡುವದನ್ನು ಕಂಡ್ರೆ, ಇಲ್ಲಿಯ ವರೆಗೆ ಬದುಕಿದ್ದು ಸಾರ್ಥಕವಾಯಿತಪ್ಪಾ ಶ್ರೀನಿವಾಸಾ! ” ಎನ್ನುತ್ತಿದ್ದರು ಶ್ರೀನಿವಾಸನ ತಂದೆ ಗಡಿಬಿಡಿ ಶ್ರೀಪಾದರಾಯರು. ಈ ವಾಕ್ಯ ದಿನಬೆಳಗಿನ ಪಾರಾಯಣ. ಸಾಗಿದ್ದಿತು ಕಿವಿಗೊಡುವ ಭಕ್ತರಿಲ್ಲದೆ.

ಜಮೀನುದಾರ ಶ್ರೀಪಾದರಾಯರ ಷಷ್ಠ್ಯಬ್ಧಿ ಪೂರ್ತಿಯಾಗಿ ಆರು ತಿಂಗಳು ಗತಿಸಿದ್ದರೂ ಅಜ್ಜನಾಗುವ ಭಾಗ್ಯ ಲಭಿಸಲಿಲ್ಲ. ಮುದಿಶರೀರ, ಪಾಪ! ಮುಪ್ಪು ಕ್ರಮೇಣ ಆಕ್ರಮಣ ನಡೆಸಿ ಅದರ ಪ್ರತಿಫಲವೆಂಬಂತೆ ಬಿಳಿಗೂದಲು ಅಲ್ಲಲ್ಲ ಬೆಳ್ಳಿಯ ಕೂದಲು ತಲೆಯಲ್ಲಿ ಬಿಡಾರ ಹೂಡಿದ್ದವು. ಅರವತ್ತರ ಅರಿವು ಮರೆವು ಕೂಡಾ ಅನುಭವಕ್ಕೆ ಬರುತ್ತಿತ್ತು. ಅಂಗಿಯನ್ನು ತಿರುವು ಮುರುವು ಧರಿಸಿ ಅರ್ಧ ದಾರಿ ನಡೆದು ಹಾದಿಯಲ್ಲಿ ಯಾರಾದರೂ ಪರಿಹಾಸ್ಯ ಮಾಡಿದನಂತರ ಮನೆಗೆ ಮರಳಿದುದೂ ಅದೆಷ್ಟೋ ಬಾರಿ. ಎಲೆಯಡಿಕೆ ಮೆಲ್ಲುವ ಭರದಲ್ಲಿ ಬರಿಯ ಸುಣ್ಣವನ್ನೇ ಎಲೆಗೆ ಹಚ್ಚಿ ಅವಸರದಿಂದ ಬಾಯಲ್ಲಿ ತುರುಕಿಕೊಂಡು, ಸುಣ್ಣದಿಂದ ನಾಲಿಗೆ ಚುರ್ ಚುರ್ ಎಂದನಂತರವೇ ಅಡಿಕೆಯ ನೆನಪಾಗುತ್ತಿದ್ದಿತು. ಪಾಪ ರಾಯರ ಗಡಿಬಿಡಿಯೊಂದಿಗೆ ಅರುವತ್ತರ ಅರಿವು ಮರೆವು ಕೂಡಾ ಭಾಗವಹಿಸುತ್ತಿತ್ತೆಂಬದು ಇತರರಿಗೆ ತಿಳಿಯುವದಾದರೂ ಹೇಗೆ ?

ಸುಮ್ಮನೆ ಕುಳಿತಲ್ಲಿ ಕೂಡುವ ಮಧ್ಯಜೀವಿಯಲ್ಲ ರಾಯರು, ತಮ್ಮ ಸ್ನೇಹಿತರೆನ್ನಿಸಿಕೊಂಡ ವೃದ್ಧರು ತಮ್ಮ ಮೊಮ್ಮಕ್ಕಳನ್ನೆತ್ತಿಕೊಂಡು ಮನೆಗೆ ಬರುವುದನ್ನೂ ಅವು ಹಟ ಮಾಡಿ ಓಡಿಸುತ್ತಿದ್ದುದನ್ನೂ ಕಣ್ಣಾರೆ ಕಂಡಿದ್ದರು. ಅದನ್ನು ಕಂಡು ತಮಗೂ ಮೊಮ್ಮಕ್ಕಳನ್ನೆತ್ತಿಕೊಳ್ಳುವಾಸೆ ಚಿಗುರುತ್ತಿತ್ತು. ತಡೆಯಲಾರದ ಗಡಿಬಿಡಿ ಶ್ರೀಪಾದರಾಯರು ಅವಸರ ಮಾಡಿದರೆ ಫಲವೇನು ? ಮಗ ಶ್ರೀನಿವಾಸನ ವಿವಾಹ ಪ್ರಸ್ತಾಪ ಮಾಡಿದ್ದೇ ಮಾಡಿದ್ದು ಅವನಿಂದ “ ಈಗೇನವಸರ ” ಎಂಬ ನಕಾರಾತ್ಮಕ ಉತ್ತರ ದೊರೆತದ್ದು ಮಾತ್ರ. ಚಾತಕ ಪಕ್ಷಿ ಮೋಡಗಳೆಡೆಗೆ ಆಶೆಯಿಂದ ನೋಡುವಂತೆ ದಾರಿ ಕಾಯ್ದುದ್ದಾಯಿತು. ಮಳೆ ಬರುವ ಲಕ್ಷಣ ಕಾಣಲಿಲ್ಲ. ವಿಧಿಯ ಸಂಕಲ್ಪ ರಾಯರು ಇನ್ನೂ ತಡಮಾಡಿ ಮೊಮ್ಮಗುವನ್ನೆತ್ತಿಕೊಳ್ಳಬೇಕೆಂದಿದ್ದರೆ ಮಾಡುವದೇನು ?

ಇದಕ್ಕೆಲ್ಲ ಮೂಲ ಕಾರಣ ರಾಯರ ಜ್ಯೇಷ್ಟ ಪುತ್ರ ಬಿ. ಎ. ಪದವೀಧರ ಶ್ರೀನಿವಾಸನಾಗಿದ್ದ. ಅವನ ಕಲ್ಯಾಣ ಜರುಗಿರಲಿಲ್ಲ. ಕಾರಣ ಉದ್ಯೋಗದ ಬೇಟೆಯಲ್ಲಿ ಯಶ ದೊರಕಿರಲಿಲ್ಲ. ವಿದ್ಯಾರ್ಥಿ ಪರ್ವ ಕೊನೆಗಂಡಿದ್ದರೂ ಉದ್ಯೋಗ ಪರ್ವದಲ್ಲಿ ಪ್ರವೇಶ ದೊರೆತಿರಲಿಲ್ಲ. ನಡೆದಿದ್ದಿತು ಅಶ್ವಮೇಧದ ಯಾಗದಂತೆ ಉದ್ಯೋಗದ ಶೋಧ. ಪುತ್ರನ ವಿದ್ಯಾಭ್ಯಾಸ ಪರಿಸಮಾಪ್ತಿಗೊಂಡೊಡನೆ ಶ್ರೀಪಾದರಾಯರ ಅಪೇಕ್ಷೆಯಂತೆಯೇ ಇತರರು ಅಂದರೆ ಮೃಷ್ಟಾನ್ನದ ಅಪೇಕ್ಷಿಗಳು ಶ್ರೀನಿವಾಸನ ಮದುವೆಯನ್ನು ಬಯಸುತ್ತಿದ್ದರು. “ ಮೃಷ್ಟಾನ್ನ ಮಿತರೇ ಜನಾಃ ”ಎಂದು ಕವಿ ಸುಮ್ಮನೆ ಉಸುರಿದ್ದಾನೆಯೇ ! ಅವರಿಗೆಲ್ಲ ಹೋಳಿಗೆಯ ಹಂಚಿಕೆ.

“ ಉದ್ಯೋಗವೇನು ಇಂದಿಲ್ಲಾ ಮುಂದಿನ ವರ್ಷದೊಳಗಾದರೂ ಸಿಕ್ಕೀತು. ನಿನಗ್ಯಾರು ಇಲ್ಲಾ ಅಂತಾರಪಾ ಸೀನಣ್ಣಾ, ಮುಖ್ಯ ಗ್ರಹಬಲ ಚೆನ್ನಾಗಿರಲಿಕ್ಕಿಲ್ಲ ಅಷ್ಟೆ, ತಾನೇ ಸರಿ ಹೋಗ್ತದೆ ಬರ್‍ತಾ ಬರ್‍ತಾ, ಹೋಳಿಗೀ ಹೊಡಿಸೇ ಬಿಡೂದೂ. ಹಾಂ! ಏನಂತೀ ಹೂಂ ಅಂದು ಬಿಡು ಮಹಾರಾಯಾ ಲಗೂನ, ಎಂದು ಸವಾಲು ಹಾಕಿದರು,ನಡು ರಸ್ತೆಯಲ್ಲಿಯೇ ಕಲ್ಯಾಣ ಸಾಧಕರಾದ ಗುಂಡಾಚಾರ್ಯರು ಅವರ ಮಾತು ಕೇಳಿ ನಗು ಬಂದಿತ್ತು.ಕಕ್ಕಾಬಿಕ್ಕಿಯಾದ ಶ್ರೀನಿವಾಸ. ನಕ್ಕರೆ ಕೆಲಸ ಕೆಡುವದೆಂದು ಮಾತು ಹಾರಿಸಿದ್ದ ಗಂಭೀರವದನಾಗಿ “ ನೋಡಿದ್ರಾತು ಇನ್ನೂ ಕೆಲಸ ಸಿಗಲಿ ಆಚಾರ, ಯುಗ ಬದಲಾಗೇದ. ಮೊದಲು ಮಾರ್ಗ ಹಿಡಿದು ನಂತರ ವಿಚಾರ. ಅಂದಷ್ಟಕ್ಕೇ ಸುಮ್ಮನಾಗುವ ಸ್ವಭಾವ ಗುಂಡಾಚಾರ್ಯರದಲ್ಲ. ಮಾತು ಎಳೆದಾಡುವದೇ ಅವರ ಸ್ವಭಾವ. ಬಿಟ್ಟರು

ಮತ್ತೊಂದು ವಾಗ್ಬಾಣವನ್ನು. "ಹಂಗಂದರೆ ಹೆಂಗಪಾ ಸೀನಣ್ಣ! ಶುಭಸ್ಯ ಶೀಘ್ರಂ ಎಂಬಂತೆ ಮುಗಿಸೇಬಿಡೋಣ, ಬರೋ ಲಗ್ನ ಮಾಸದಾಗ. ಇವತ್ತ ರಾತ್ರೀ ಬರತೇನಿ. ಕೂತಿರು ಮತ್ತ ಮನ್ಯಾಗ ಮತ್ತ ರಾಯರ್ನ ಕರಕೊಂಡು" ಎಂದಿದ್ದರು. "ಏತಕ್ಕೆ" ಎಂದು ಕೇಳುವಷ್ಟರಲ್ಲಿಯೇ ನಾಲ್ಕು ಮಾರು ನಡೆದಿದ್ದರು ಆಚಾರ್ಯರು.

ವಿಚಾರ ಚಕ್ರ ಸುರುವಾಗಿತ್ತು ಶ್ರೀನಿವಾಸನ ಮನಸ್ಸಿನಲ್ಲಿ ಆಧುನಿಕ ಸುಸಂಸ್ಕೃತ ನಾಗರಿಕನಾದ ತನಗೆ ಮದುವೆಯ ವಿಚಾರದಲ್ಲಿ ಸ್ವಂತ ಅಭಿಪ್ರಾಯ ಕೊಡುವ ಹಕ್ಕೂ ಇಲ್ಲವೇ? ಅದೂ ತಂದೆ ಮತ್ತು ಪುರೋಹಿತರು ಹೇಳಿದಂತೆಯೇ ಒಪ್ಪುವದೆಂದರೆ ಸಾಂಪ್ರದಾಯಿಕ ಕಾಲವಲ್ಲ. ಮೇಲಾಗಿ ಉದ್ಯೋಗ ದೊರೆತಿಲ್ಲ. ರಾಯರ ಆಸ್ತಿಯೇನೋ ಸಾಕಷ್ಟಿತ್ತು. ಆದರೆ ಸುಶಿಕ್ಷಿತ ಸುಮ್ಮನೆ ಕುಳಿತಿರಲಾದೀತೇ.

ಆದರೆ ಗುಂಡಾಚಾರ್ಯರ ಮುಂದೆ ಈ ವಿಧದ ನೆವ ನಡೆಯುತ್ತಿರಲಿಲ್ಲ. ಬೇಟೆಗಾರ ಬಿಲ್ಲು ಹೆದೆಗೇರಿಸಿದಂತೆ ನಡೆದರು. ಜಾತಕಪಂಚಾಂಗದ ಕಟ್ಟುಗಳೊಂದಿಗೆ ರಾಯರ ಕಡೆಗೆ ಬಾಣವನ್ನೇನೋ ಹೂಡಿದ್ದರು. ಬಿಡುವ ವಿಚಾರದಲ್ಲಿದ್ದರು. ಬಿಟ್ಟರಲಿಲ್ಲ ಅಷ್ಟೆ. ಮೊದಲು ಪ್ರಾಣಿಯ ಅಳವು ನೋಡಬೇಡವೇ ಪಾಪ. ಅವರ ವಿಚಾರ ಅದರಿಗೇ ಗೊತ್ತು. ಮುಖ್ಯ ಪಾತ್ರ ಒಪ್ಪುವ ತೊಂದರೆ ಅಷ್ಟೆ.

ಸರಿ, ಆಚಾರ್ಯರ ಆಗಮನದಿಂದ ರಾಯರು ಆನಂದ ಭರಿತರಾದರು. ದಿವ್ಯಲಾಭವಾಯಿತು ಅವರಿಗೆ. ಆಚಾರ್ಯರ ಚಾಣಾಕ್ಷತನದ ವಾಗ್ಬಾಣದಮುಂದೆ ಸೋಲನ್ನೊಪ್ಪಿಕೊಳ್ಳಲೇ ಬೇಕಾಯಿತು ರಾಯರ ಪುತ್ರ. ಸರಿ, ಅರ್ಧಕೆಲಸವಂತೂ ಮುಗಿಯಿತು. ಇನ್ನರ್ಧ ಲಗ್ನವೊಂದೇ. ನಡೆದರು ಗುಂಡಾ-ಚಾರ್ಯರು ದಿಗ್ವಿಜಯಿಗಳಾಗಿ. ಬಡಕನ್ಯಾಪಿತೃಗಳ ಹಿತಚಿಂತನೆ ಅವರಿಗೆ ಸೇರಿದ್ದಲ್ಲವೇ!

"ನಾನೂ ಏನೋಂತಿದ್ದೆ. ಅಂತೂ ಒಪ್ಪೇ ಬಿಟ್ಟೆತು ಇಸಾಮಿ. ಮುಖ್ಯ ವಾದ ಮಾಡೋವ ನಾ ಇದ್ದೀನಿ ಸೋತೆ ಅನ್ನದಿದ್ದರ ಹ್ಯಾಂಗ; ಎಂದು ಮನದಲ್ಲಿಯೇ ಮುಂಡಿಗೆ ಮಾಡಿದರು ಆಚಾರ್ಯರು. ರಾಯರ ಅರ್ಧ ಭಾರ ಇಳಿಸಿದವರೆಂದರೆ ನಿಶ್ಚಯವಾಗಿ ಅವರೇ ಎಂದು ಹೇಳಬಹುದು.

ಪರಮಾನಂದಭರಿತರಾದ ರಾಯರು ಆಚಾರ್ಯರನ್ನು ಹೊಗಳಿ ಹರುಷದಿಂದ ಮಾತುಕತೆಯಾಡಿದರು. ಅರ್ಧಭಾರ ಇಳಿದ ಸಂಭ್ರಮ ಹೆಚ್ಚಿನದಾಗಿತ್ತು- ಆದರೊಡನೆ ದಣಿವೂ ಆಗಿತ್ತು. ದೇಹವನ್ನೊರಗಿಸಿದರು ಹಾಸಿಗೆಗೆ. ದೇಹ ಹಾಸಿಗೆಯಲ್ಲಿದ್ದರೂ ಮನಸ್ಸು ಮದುವೆಯ ಬಗ್ಗೆ ವಿಚಾರ ನಡೆಸುತ್ತ ಜಗಿದಾಡುತ್ತಿತ್ತು. ಬರಬರುತ್ತಲೇ ಬಂದಿತು ಜೊಂಪು.

* * * *

ಶ್ರೀಪಾದರಾಯರು ಸ್ವಪ್ನಲೋಕದಲ್ಲಿವಿಹರಿಸುತ್ತಿದ್ದಾರೆ. ಶ್ರೀನಿವಾಸನ ಮದುವೆ ನಿಶ್ಚಯವಾಗಿ ವೈಭವದಿಂದ ನಡೆದೇ ಹೋಗಿದೆ. ಚಿಂತೆಯಿಲ್ಲ, ಪೂರ್ಣಭಾರ ಇಳಿಯಿತು ರಾಯರದು. ಹಗುರಾದರು ರಾಯರು ಹಲಿಬೆಂಡಿನಂತೆ.

ದಿನಗಳುರುಳಿ ವರ್ಷವಾಗುತ್ತ ಹೋಗಿ ವರ್ಷ ಮುಗಿದೂ ಹೋಗಿತ್ತು. ಮುಂದುವರೆಯಿತು ರಾಯರ ಸ್ವಪ್ನ. ಸಿನಿಮಾದಂತೆ ಶ್ರೀನಿವಾಸನಿಗೆ ಕನಸಿನಲ್ಲೂ ಉದ್ಯೋಗ ದೊರಕಿರಲಿಲ್ಲ. ರಾಯರಿಗೆ ಅದು ಬೇಕಾಗಿಯೂ ಇರಲಿಲ್ಲ. ಶ್ರೀನಿವಾಸನ ಪತ್ನಿ ತೆರಳಿದ್ದಳು ತವರುಮನೆಗೆ. ರಾಯರು ಅಜ್ಜನಾಗುವ ಕಾಲ ಸನಿಹದಲ್ಲಿತ್ತು. ಬೀಗರ ಕಡೆಯ ಸಂದೇಶವನ್ನೇ ನೆನೆಯುತ್ತ ಕುಳಿತಿದ್ದರು ರಾಯರು ಆರಾಮಖುರ್ಚಿಯ ಮೇಲೆ. ಸರಿ, ಪೋಸ್ಟಮ್ಯಾನನ ಸವಾರಿ ಬಂದಿತು. ತಂತಿ ಬಂದಿತ್ತು ರಾಯರಿಗೆ ಬೀಗರ ಕಡೆಯಿಂದ. ಸರಿ, ಗಡಿಬಿಡಿರಾಯರು ರುಜು ಹಾಕಿ ತಗೆದುಕೊಂಡರು ತಂತಿಯನ್ನು ಶ್ರೀನಿವಾಸನ ಕಡೆಯಿಂದ ಓದಿಸುವ ಆತುರ ಬೇರೆ ಹೆಚ್ಚಿದ್ದಿತು. ಮುದಿಪ್ರಾಣಿಯ ಈ ಹುಮ್ಮಸ್ಸು ಕಂಡು ನಗು ಬಂದಿರಬೇಕು ಪೋಸ್ಟಮನ್ನನಿಗೆ. ನಗು ತಡೆಯಲಾಗಲಿಲ್ಲ ನಕ್ಕ. ಆದರೆ ಇವನ ನಗೆಗೆ ಗಮನ ವಿದ್ದರಲ್ಲವೆ ರಾಯರದು. ಅವರದೊಂದು ಲೋಕ ಬೇರೆಯೇ ಇತ್ತು. ಸರಿ, ಮಗನಿಂದ ತಂತಿಯ ವಾಚನ. ಕರ್ಣಾನಂದಕರವಾದ ಸುದ್ದಿ. ಶುಭಮುಹೂರ್ತದಲ್ಲಿ ಶ್ರೀನಿವಾಸನ ಪತ್ನಿ (ಮೊಮ್ಮಗನನ್ನು) ಗಂಡುಮಗುವನ್ನು ಹೆತ್ತಿದ್ದಳು. ಕ್ಷೀರಸಾಗರ ಕಡೆಯುತ್ತಿದ್ದ ದೇವತೆಗಳಿಗೆ ಅಮೃತ ದೊರಕಿದಂತಾಯಿತು ರಾಯರಿಗೆ. ಎಲ್ಲಿಯ ಶಕ್ತಿ ಸಂಚರಿಸಿತೋ ಆ ಮುದಿ ಶರೀರದಲ್ಲಿ. ರೆಕ್ಕೆಗಳಿದ್ದರೆ ಆಕಾಶಕ್ಕೇ ಉಡ್ಡಾಣ ಮಾಡುತ್ತಿದ್ದರೋ ಏನೋ ಬಲ್ಲವರು ಯಾರು?

ರಾಯರಿಗೆ ಮೊಮ್ಮಗು ಹುಟ್ಟಿದ ಸಂಭ್ರಮ. ಪೇಡೆ ಹಂಚಿದ್ದಾಯಿತು ಮಿತ್ರಮಂಡಳಿಗೆಲ್ಲ. ಮಿತ್ರರ ಮನೆಮನೆಗೆ ಹೋಗಿ ತಿಳಿಸಿದ್ದೂ ಆಯಿತು. ಪ್ರಯತ್ನಪಟ್ಟು ಮರುದಿನದ ಪ್ರಯಾಣಕ್ಕೆ ಶ್ರೀಮಂತ ಮಿತ್ರರೊಬ್ಬರಿಂದ ಕಾರನ್ನೂ ದೊರಕಿಸಿದ ರಾಯರು ಹೊರಡುವ ತಯಾರಿ ತಿಳಿಸಲು ಗಡಬಡಿಸುತ್ತಲೇ ಬಂದರು ಮನೆಗೆ. ಪತ್ನಿಗೆ ಆಜ್ಞೆಯಾಯಿತು. ಸಿದ್ಧತೆ ಮಾಡಲು ನಡೆಯಿತು ರಾಯರ ದರ್ಬಾರು. ಮೊಮ್ಮಗನ ಪುಣ್ಯವೋ ರಾಯರು ಮಾಡಿದ ಪುಣ್ಯವೋ ಬಲ್ಲವರಾರು

ೆಲಸಗಳಲ್ಲಿ ತ್ವರಿತ ಗತಿಯಿಂದ ನಡೆದು ಮರುದಿನ ಬೆಳಗಿನಲ್ಲಿ
ಾರಿನಲ್ಲಿ ಹೊರಟೇಬಿಟ್ಟರು ಶ್ರೀಪಾದರಾಯರು ಸಪತ್ನೀಕ
ಾಗಿ. ದಾರಿಯಲ್ಲಿದ್ದ ದೊಡ್ಡ ಅರಿವೆಯಂಗಡಿಯಲ್ಲಿ ಹ್ಯಾಟ್,
ುಶ್‌ಶರ್ಟ್ ಮತ್ತೆರಡು ಬಣ್ಣದ ಕೋಟ್ ತೆಗೆದುಕೊಂಡರು.
ಮುಂದಿನ ಅಂಗಡಿಯಲ್ಲಿ ಬೂಟ್ಸ ಮತ್ತು ಕರ್ಪುರದಗೊಂಬೆಯು
ರೀದಿ ಆಯಿತು ಕಾಣಲಿರುವ ಮೊಮ್ಮಗನಿಗೆ. ವ್ಯಾಪಾರ
ಮುಗಿಯಿತು. ಸಾಗಿತು ಕಾರು—ರಾಯರ ಊರು ಹಿಂದುಳಿದು
ೀಗರ ಊರು ಮುಂದೆ ಬಂದಿತು. ಮನೆಯೂ ಬಂದಿತು. ನಡೆ
ಯಿತು ಎಲ್ಲ ನಾಗಾಲೋಟದಿಂದ.

ಕಾರಿನಿಂದ ಇಳಿದು ರಾಯರು ಹೆಂಡತಿಯೊಡನೆ ಗೇಟು
ೆಗೆದು ಕಂಪೌಂಡಿನಲ್ಲಿ ಪ್ರವೇಶ ಮಾಡಿ ಮುಂದುವರೆದರು.
ಪ್ರವೇಶಮಾಡಿದರು ಮನೆಯಲ್ಲಿ. ಸ್ವಾಗತಿಸಿತು ಮೊಮ್ಮಗುವಿನ
ಅಳುವಿನ ಧ್ವನಿ. ಪರಮಾನಂದವಾಯಿತು ರಾಯರಿಗೆ. ಗಾಡಿ
ಯಲ್ಲಿಯೇ ಕುಳಿತ ಡ್ರೈವರ್ ಕೂಗಿದ. "ರಾಯ್ರೇ ಅರಿವೇ
ಚೀಲ ಬಿಟ್ಟಿ ಹೊರಟಿದ್ದೀರಲ್ಲಾ, ಏನವಸರವಪ್ಪ ನಿಮ್ಮದೂ"
ಎಂದು. ಮಗುವಿನ ಅಳು ಜೋರಾಗಿತ್ತು ಬಾಲಾನಾಂ
ರೋದನಂ ಬಲಂ ಡ್ರೈವರನ ಧ್ವನಿ ತೇಲಿತು ಗಾಳಿಯಲ್ಲಿ.
ಪತ್ನಿಯೊಡನೆ ಒಳಬಂದ ರಾಯರಿಗೆ ಸುಸ್ವಾಗತವಾಯಿತು.
ಬೀಗರಿಂದ. ಉಭಯಕುಶಲೋಪರಿ ನಡೆಯಿತು. ಫಲಹಾರ
ಸೇವೆ ನಡೆಯಿತು. ಬಾಳೆಯಹಣ್ಣು ತಿಂದು ಮೆಟ್ಟಲ ಮೇಲೆ
ಎಸೆದು "ಮೊಮ್ಮಗು ಎಲ್ಲಿ?" ತೋರಿಸಿಯೇ ಇಲ್ಲವಲ್ಲ,
ಎಂದು ಕೇಳಿಯೇ ಬಿಟ್ಟರು. ಪಾಪ! ಬೀಗರಿಗೇನಾತುರ ರಾಯ
ರಷ್ಟು ಬೀಗಿತ್ತಿ ಒಳಗಿನಿಂದ ತಂದರು ಮಗುವನ್ನು. ಪುಟಚೆಂಡಿ
ನಂತಿದ್ದ ಮೊಮ್ಮಗನನ್ನು ಕಂಡು ರಾಯರು ಬ್ರಹ್ಮಾನಂದ
ವನ್ನನುಭವಿಸಿದರು ರಾಯರ ಹೆಂಡತಿ ತೆಗೆದುಕೊಂಡರು
ಮಗುವನ್ನು. ಆದರೆ ರಾಯರು ಬಿಟ್ಟಾರೇ. "ಇಲ್ಕೊಡೇ
ಮೊದ್ಲು, ನಂತರ ಎತ್ಕೋ" ಎಂದು ತಾವೇ ಎತ್ತಿಮುದ್ದಾಡಿ
ದರು. ಮಗು ನಕ್ಕಿತು. ತಮ್ಮ ಬಾಯಿ ಕಂಡು ಅಣಕಿಸಿದಂತಾ
ಯಿತು ರಾಯರಿಗೆ. ಮುದ್ದು ಮಾತನಾಡಿದರು ಗಿಳಿಗೆ ಮಾತು
ಕಲಿಸಿದಂತೆ.

"ಚಿ. ನನ್ನೋಡಿ ನಗ್ತೀಯಾ ತುಂಟಮರೀ! ನಿನ್ನ
ಬಾಯಲ್ಲೂ ಹಲ್ಲೇ ಇಲ್ಲಲ್ಲ, ಕಳ್ಳ! ತಡೆ ನಿನಗೆ ಹಾಕ್ತೇನೆ
ಟೋಪಿ" ಎಂದು ಹ್ಯಾಟಗೆ ತಡಕಾಡಿದರು. ಹ್ಯಾಟಿನ ಚೀಲ
ಉಳಿದಿತ್ತು ಕಾರಿನಲ್ಲಿ, ರಾಯರ ಪತ್ನಿಯ ಮರೆವಿನಿಂದ ನೆನ
ಪಾಯಿತು ರಾಯರಿಗೆ. "ಬೇಗ್ಹೋಗಿ ಹ್ಯಾಟು ತಗೊಂಬಾರ
ಹೋಗು ಬೇಗ" ಎಂದು ಅವಸರಪಡಿಸಿದರು. ಸರಿ, ರಾಯರ
ಹೆಂಡತಿ ಮುಸಿಮುಸಿ ನಗುತ್ತ ನಡೆದರು ಕಾರಿನೆಡೆಗೆ, ಎಲ್ಲ
ಸಾಮಾನುಗಳನ್ನು ಎಣಿಸಿ ತೆಗೆದುಕೊಂಡು ಬರುವದರಲ್ಲಿ ತಡ
ವಾಗಿರಬೇಕು ಪಾಪ! ರಾಯರಿಗೆಲ್ಲಿ ಸಹನೆ ಬೇಗ ಬಾ, ಎಂದು
ಕುಳಿತಲ್ಲಿಯೇ ಕೂಗಿದರು ಐದುಬಾರಿ. ಐದು ಮಿನಿಟಿನಲ್ಲಿಯೇ
ತಡೆಯಲಾಗಲಿಲ್ಲ. ಸಿಟ್ಟು ಬಂತು; ಹ್ಯಾಟು ಬೇಗ ಬರಲಿಲ್ಲ
ವೆಂಬ ಕಾರಣದಿಂದ. ಮಗುವನ್ನು ಮಲಗಿಸಿ ಎದ್ದವರೇ ದುಡು
ದುಡು ಹೆಜ್ಜೆ ಹಾಕುತ್ತ ಹೊರಗೆ ಬಂದರು. ಮೆಟ್ಟಲಿಳಿಯಲು
ಬಂದುದೊಂದೇ ತಡ ಕಾಲಡಿಯಲ್ಲಿದ್ದ ಬಾಳೇಹಣ್ಣಿನ ಸಿಪ್ಪೆ
ಪ್ರತಿಫಲ ಕೊಟ್ಟಿತು. ಜಾರಿದ್ದೇ ತಡ ಪಾತಾಳಕ್ಕೇ ಇಳಿದರು
ರಾಯರು. ರಾಯರ ಬೀಗರು ಓಡಿ ಬಂದವರೇ "ರಾಯ್ರೇ
ರಾಯ್ರೇ ಏನಾಯ್ತು?" ಎಂದು ಕೂಗಿದರು.

* * *

"ಥಕ್ಕನೆ ಎಚ್ಚರಾದಾಗ ರಾಯರಿಗೆ ತಿಳಿದುದು ನಿಜ
ಸಂಗತಿ. ಕೂಗಿದವರು ರಾಯರ ಬೀಗರಾಗಿರದೆ ಗುಂಡಾಚಾರ್ಯ
ರಾಗಿದ್ದರು. ಬೆಳಗಿನಲ್ಲಿ ಬಿಜಯ ಮಾಡಿದ್ದ ಗುಂಡಾಚಾರ್ಯ
ರನ್ನು ಬರಮಾಡಲು, ಕನಸಿನಲ್ಲಿ ಮೊಮ್ಮಗುವನ್ನು ಕಂಡ
ರಾಯರು, ಮನದಲ್ಲಿ ಮುಸಿ ಮುಸಿ ನಗುತ್ತ ಬಾಗಿಲು ತೆರೆ
ದರು. ಪಾಪ ತಮ್ಮ ಕನಸು ಕಂಡು ತಾವೇ ಪೆಚ್ಚಾದರು
ರಾಯರು ಗುಂಡಾಚಾರ್ಯರೆದುರು.

#  ನನ್ನ ಒಡೆಯಾ ಮಗು 

ಹಿಂದುಸ್ತಾನದ ಜಗತ್ಪ್ರಸಿದ್ಧ ಕವಿಗಳಾದ ರವೀಂದ್ರನಾಥ ಟಾಗೋರರು ಅನೇಕ ಕತೆ, ಕಾದಂಬರಿ, ಕವನ, ನಾಟಕ ನಿಬಂಧಗಳನ್ನು ಬರೆದಿದ್ದಾರೆ. ಇವರು ಶಿಕ್ಷಣ ತಜ್ಞರೂ ಹೌದು. ಬಂಗಾಲದ ಬೋಲಪುರದಲ್ಲಿರುವ ಶಾಂತಿನಿಕೇತನ ಹಾಗೂ ವಿಶ್ವಭಾರತಿಯೆಂಬ ವಿಶ್ವವಿದ್ಯಾಲಯಗಳ ಸಂಸ್ಥಾಪಕರಿವರು. ಇವುಗಳನ್ನವರು ಸಾಮಾಜಿಕ ಕಾರ್ಯಗಳ ಕೇಂದ್ರವಾಗಿ ನೆರೆ ಹಳ್ಳಿಗಳ ನಡುವೆ ಸ್ಥಾಪಿಸಿದರು. ಇವರಿಗೆ ಶಾಲೆ ಮತ್ತು ಅಲ್ಲಿ ಕಲಿಸತಕ್ಕ ಪದ್ಧತಿಗಳ ರೀತಿಯು ಸರಿ ಬಾರದ್ದರಿಂದ, ಸ್ವತಃ ಮನೆಯಲ್ಲೇ ವಿದ್ಯಾರ್ಜನೆ ಮಾಡಿದರು. ಅಂತೆಯೇ ಅವರು ದೊಡ್ಡವರಾದ ಮೇಲೆ ತಮ್ಮ ಸ್ವಂತ ವಿಚಾರಗಳಿಗೆ ಹೊಂದಿಕೆಯಾಗುವಂತಹ ಶಾಲೆ ಸ್ಥಾಪಿಸಿದರು. ಇವರ ಕೃತಿಗಳೆಲ್ಲವೂ ಇವರ ಮಾತೃಭಾಷೆಯಾದ ಬಂಗಾಲಿಯಲ್ಲಿಯೇ ಇದ್ದು, ಅನೇಕ ಕೃತಿಗಳು ಇಂಗ್ಲಿಷ್ ಹಾಗೂ ಇತರ ಪರಕೀಯ ಭಾಷೆಗಳಲ್ಲಿ ಅನುವಾದಗೊಳಿಸಲಾಗಿದೆ. ಈ ಕತೆಯು, ಇವರ Hungry Stones and other stories ಎಂಬ ಇಂಗ್ಲೀಷ್ ಪುಸ್ತಕದೊಳಗಿಂದ ಆಯ್ದು ತೆಗೆದದ್ದು.

೧

ರಾಯಚರಣನು ತನ್ನ ಯಜಮಾನನಲ್ಲಿ ಚಾಕರನೆಂದು ನಿಂತಾಗ ಹನ್ನೆರಡು ವರ್ಷದವನಿದ್ದ. ಇವನು ಯಜಮಾನನ ಜಾತಿಯವನೇ ಆಗಿದ್ದು, ಯಜಮಾನನ ಚಿಕ್ಕ ಮಗು ಅನುಕೂಲನ ಶುಶ್ರೂಷೆಯ ಕೆಲಸವು ಇವನಪಾಲಿಗೆ ಬಂದಿತ್ತು. ದಿನಗಳೆದಂತೆ ಆ ಮಗುವು ರಾಯಚರಣನ ಹೆಗಲಿನಿಂದಿಳಿದು ತಾನೇ ನಡೆಯುವಂತಾದ, ಮುಂದೆ ಶಾಲೆ, ಕಾಲೇಜುಗಳಿಗೂ ಸೇರಿದ. ಕಾಲೇಜ ಮುಗಿಸಿ ನ್ಯಾಯಖಾತೆಯಲ್ಲಿ ಕೆಲಸಕ್ಕೆ ಸೇರಿದ. ಅವನ ಲಗ್ನವಾಗುವವರೆಗೂ ರಾಯಚರಣನೊಬ್ಬನೇ ಅವನ ಸೇವಕನಾಗಿ ನಿಂತ ಹಾಗೂ ರಾಯಚರಣನಿಗಾದರೂ ಆ ಮನೆಯಲ್ಲಿ ಅನುಕೂಲನೊಬ್ಬನೇ ಯಜಮಾನನಾಗಿದ್ದ.

ಆದರೆ ಅವನಿಗೆ ಲಗ್ನವಾಗಿ ಮಡದಿಯು ಮನೆಗೆ ಬಂದಾಗ ರಾಯಚರಣನು ತನ್ನ ಲಕ್ಷ್ಯವನ್ನು ಇಬ್ಬರು ಯಜಮಾನರಲ್ಲಿ ಹರಿಸಬೇಕಾಯ್ತು. ಇದು ಅನಿವಾರ್ಯವಾಗಿತ್ತು. ಮುಂದೆ ಅನುಕೂಲನು ಬೇಗನೆ ಒಂದು ಗಂಡು ಮಗುವಿನ ತಂದೆಯಾದ್ದರಿಂದ, ರಾಯಚರಣನು ತನ್ನ ಪೂರ್ಣ ಲಕ್ಷ್ಯವನ್ನು ಆ ಮಗುವಿನ ಕಡೆಗೇ ಹರಿಸಬೇಕಾಯ್ತು. ಅವನು ಮಗುವನ್ನು ಅತಿ ಪ್ರೀತಿಯಿಂದ ನೋಡತೊಡಗಿದ. ಮಗುವನ್ನು ತನ್ನ ಕೈಗಳಿಂದ ತೂರಿ ಹಿಡಿಯುವದು, ಮಕ್ಕಳ ಭಾಷೆಯಲ್ಲಿ ಅದರೊಂದಿಗೆ ಮಾತಾಡುವದು, ತನ್ನ ಮುಖವನ್ನು ಮಗುವಿನ ಮುಖದ ಬಳಿ ಒಯ್ದು, ಒಮ್ಮೆಲೇ ಹಿಂದಕ್ಕೆ ಸರಿಸಿ ಮಕ್ಕಳಂತೆಯೇ ನಗುವದು, ಮುಂತಾದ ರೀತಿಯಿಂದ ಮಗುವಿನೊಂದಿಗೆ ಆಟವಾಡುತ್ತಿದ್ದ.

ಮಗುವು ಅಂಬೇಗಾಲಿಕ್ಕಲು, ಹೊಸ್ತಿಲು ದಾಟಲು ಸಮರ್ಥವಾಯ್ತು. ರಾಯಚರಣನು ಮಗುವನ್ನು ಹಿಡಿಯ ಹೋದೊಡನೆ ಅದು ತುಂಟ ನಗೆಯಿಂದ ತಪ್ಪಿಸಿಕೊಳ್ಳುತ್ತಾ ತನ್ನನ್ನು ಕಾಯ್ದುಕೊಳ್ಳಲು ಪ್ರಯತ್ನಿಸುತ್ತಿತ್ತು. ಅವನು ತನ್ನ ಬೆನ್ನು ಹತ್ತಿದಾಗ ಮಗುವು ಕುಶಲತನದಿಂದ ತಪ್ಪಿಸಿಕೊಳ್ಳಲು ಸರಿಯಾದ ಸ್ಥಳವನ್ನು ಕಂಡುಕೊಳ್ಳುತ್ತಿದ್ದುದನ್ನು ನೋಡಿ, ಅವನು ಆನಂದಿತನಾಗಿ, ತನ್ನ ಯಜಮಾನನಿಗೆ "ನಿಮ್ಮ ಮಗನು ಒಳ್ಳೇ ನ್ಯಾಯಾಧೀಶನಾಗುತ್ತಾನೆ" ಎಂದು ಒಳ್ಳೇ ಆಶ್ಚರ್ಯಾಭಿಮಾನಗಳಿಂದ ವಿಚಿತ್ರ ರೀತಿಯಲ್ಲಿ ಹೇಳುತ್ತಿದ್ದ.

ಅವರ ಜೀವನದಲ್ಲಿ ಮುಂದೆ ಹೊಸ ಸಂಗತಿಗಳು ತಲೆದೋರಿದವು. ಮಗುವು ತಪ್ಪು ಹೆಜ್ಜೆಗಳನ್ನಿಡುವಾಗ, ಅದು ರಾಯಚರಣನಿಗೆ ಮಾನವೀ ಚರಿತ್ರೆಯಲ್ಲಿ ಹೊಸ ಕ್ರಾಂತಿ ಎನಿಸಿತು. ಮಗುವು ತನ್ನ ತಂದೆಗೆ 'ಬಾ-ಬಾ' ಎಂದೂ, ತಾಯಿಗೆ 'ಮ-ಮ' ನೆಂದೂ ತನಗೆ 'ಚನ್ನಾ-' ಎಂದೂ ಕರೆದಾಗಂತೂ ರಾಯಚರಣನ ಆನಂದಕ್ಕೆ ಪಾರವಿಲ್ಲದಾಯ್ತು ಅವನು ಜಗತ್ತಿಗೆಲ್ಲಾ ಈ ಸುದ್ದಿ ತಿಳಿಸಲು ಹೊರಡುತ್ತಿದ್ದ, ಮಗುವಿನೊಂದಿಗೆ—ಅದು ಬೆಳೆದಂತೆ—ರಾಯಚರಣನಿಗೆ ಬೇರೆ

ಬೇರೆ ಕುಶಲತನಗಳನ್ನು ತೋರಿಸುವ ಪ್ರಸಂಗ ಬಂದಾಗ, ಅವನು ತನ್ನ ಹಲ್ಲುಗಳ ನಡುವೆ 'ಲಗಾಮ್' ಹಿಡಿದು, ಕಾಲಿನಿಂದ ಕುಣಿಯುತ್ತಾ ಕುದುರೆಯಂತೆ ನಟಿಸುತ್ತಿದ್ದ. ಒಮ್ಮೊಮ್ಮೆ ಮಗುವಿನೊಂದಿಗೆ ಕುಸ್ತಿ ಸಹ ಹಿಡಿಯಬೇಕಾಗುತ್ತಿತ್ತು. ಆಗ ರಾಯಚರಣನು ಸೋತ ಕುಸ್ತಿಗಡಿಯಂತೆ ಕೆಳಗೆ ಬೀಳದಿದ್ದರೆ ಮಗುವು ದೊಡ್ಡ ಧ್ವನಿಯಿಂದ ಚೀರುತ್ತಿತ್ತು.

ಇದೇ ಸಮಯದಲ್ಲಿ ಅನುಕೂಲನಿಗೆ 'ಪದ್ಮಾ' ನದಿಯ ದಂಡೆಯ ಮೇಲಿರುವ ಒಂದು ಜಿಲ್ಲೆಗೆ ಬದಲಿಯಾಯ್ತು. ಅವನು ಕಲಕತ್ತೆಯ ಮಾರ್ಗವಾಗಿ ಆ ಊರಿಗೆ ಹೋಗುವಾಗ ಮಗುವಿಗಾಗಿ ಒಂದು ದೂಡುವಗಾಡಿ, ಹಳದೀ ಬಣ್ಣದ ಮಖಮಲ್ ಬಟ್ಟೆಯ ಒಂದು ಕೋಟು, ಜರದ ಟೊಪ್ಪಿಗೆ ಮತ್ತು ಕೆಲವು ಬಂಗಾರದ ಒಡವೆ ವಸ್ತುಗಳನ್ನು ಕೊಂಡುಕೊಂಡನು. ರಾಯಚರಣನು ಇವುಗಳನ್ನು ಕೇವಲ ಸಮಾರಂಭಗಳ ಸಮಯಗಳಲ್ಲಿ ಹೊರಗೆ ಹೋಗುವಾಗ ಮಾತ್ರವಲ್ಲದೆ, ಬೇರಾವಾಗಲೂ ಹೊರ ತೆಗೆಯುತ್ತಿರಲಿಲ್ಲ.

ಮಳೆಗಾಲ ಬಂತು. ದಿನದಿನಕ್ಕೆ ಜಡಿಮಳೆಗಾರಂಭವಾಯಿತು. ಹಸಿದ ನದಿಯು ಭಯಂಕರ ಸರ್ಪದಂತೆ, ಕೆಳಗಿನ ಮನೆಗಳನ್ನೂ, ಹಳ್ಳಿಗಳನ್ನೂ, ಅಂಚಿನಲ್ಲಿದ್ದ ಹೊಲಗಳನ್ನೂ ಮುಳುಗಿಸಿದ್ದಲ್ಲದೆ, ತನ್ನ ಮಹಾಪೂರದಿಂದ ತನ್ನ ಉಸುಕಿನ ದಂಡೆಯ ಮೇಲಿದ್ದ ದೊಡ್ಡ ದೊಡ್ಡ ಹುಲ್ಲುಗಾವಲುಗಳನ್ನೂ, ಗಾಳಿ ಮರಗಳನ್ನೂ ಸುತ್ತುಹಾಕಿತು. ಗಳಿಗೆ ಗಳಿಗೆಗೆ ನದಿ ದಂಡೆಯು ಕುಸಿದು ಬಿದ್ದಂತೆ ಭಯಂಕರ ಸದ್ದಾಗುತ್ತಿತ್ತು. ಮೂಲ ಪ್ರವಾಹದ ಬಿಡುವಿಲ್ಲದ ಆರ್ಭಟವು ಬಹುದೂರದ ವರೆಗೆ ಕೇಳುತ್ತಿತ್ತು. ನದಿ ಪ್ರವಾಹದ ಬುರುಗು ಹರಿದು ಹೋಗುವ ದೃಶ್ಯವು ಪ್ರವಾಹದ ವೇಗವನ್ನು ಮನವರಿಕೆ ಮಾಡಿ ಕೊಡುತ್ತಿತ್ತು.

ಮಳೆಯು ನಿಂತು, ತಂಪಾದ ಹವೆಯಿಂದಿದ್ದ, ವಾತಾವರಣವು ಪ್ರಶಾಂತವಾಗಿದ್ದ ಒಂದು ಮಧ್ಯಾಹ್ನ. ಇಂತಹ ಸಮಯದಲ್ಲಿ ರಾಯಚರಣನ ನಿರಂಕುಶ ಪ್ರಭುವು ಮನೆಯಲ್ಲಿ ಕುಳಿತಿರಲು ನಿರಾಕರಿಸಿ, ತನ್ನ ದೂಡುವ ಗಾಡಿಯಲ್ಲಿ ಹತ್ತಿ ಕುಳಿತ. ರಾಯಚರಣನು ಕುದುರೆಯಾಗಿ, ನದಿಯ ದಂಡೆಯ ಮೇಲಿನ ಭತ್ತದಗದ್ದೆ ತಲ್ಪುವವರೆಗೂ ನಿಧಾನವಾಗಿ ಗಾಡಿಯನ್ನು ಎಳೆಯುತ್ತಾ ನಡೆದ. ಗದ್ದೆಯಲ್ಲಿ ಯಾರೂ ಇರಲಿಲ್ಲ. ನದಿಯಲ್ಲಿ ದೋಣಿಗಳಿರಲಿಲ್ಲ. ನೀರಿನ ಆಚೆ ಪಶ್ಚಿಮ ದಿಕ್ಕಿನಲ್ಲಿ ಮೋಡವು ಇಬ್ಭಾಗವಾಗಿ, ಮುಳುಗುವ ಸೂರ್ಯನ ಶಾಂತ ಸಮಾರಂಭವು, ತನ್ನೆಲ್ಲ ಸೌಂದರ್ಯಗಳೊಂದಿಗೆ ವ್ಯಕ್ತವಾಯ್ತು. ಈ ನಿಶ್ಶಬ್ದದ ನಡುವೆ, ಮಗುವು ತನ್ನೆದುರಿಗೆ ಬೆರಳು ತೋರಿಸುತ್ತಾ "ಚನ್ನಾ, ಚಂದ ಹೂ" ಎಂದು ಬಾಲ ಭಾಷೆಯಲ್ಲಿ ಕೂಗಿತು.

ಕೆಸರಿನ ಬೈಲಿನ ಬಳಿಯೇ ಹೂವಿನಿಂದ ತುಂಬಿದ ಕದಂಬಗಿಡದ ಕಡೆಗೆ ತೋರಿಸುತ್ತ ಮಗುವು ಅದನ್ನು ಕಾತರ ಭಾವದಿಂದ ನೋಡುತ್ತಿತ್ತು. ರಾಯಚರಣನು ಅವನ ಭಾವವನ್ನರಿತ. ಕೆಲವೇ ವೇಳೆಯ ಹಿಂದೆ ಅವನು ಅದೇ ಹೂವಿನ ಗೊಂಚಲಿನಿಂದ ಸಣ್ಣ ದೂಡುವಗಾಡಿಯೊಂದನ್ನು ಮಾಡಿ ಕೊಟ್ಟಿದ್ದಾಗ, ಮಗುವು ಅದನ್ನು ದಾರ ಹಿಡಿದೆಳೆದಾಡುವ ಆಟದ ಆನಂದದ ಭರದಲ್ಲಿ, ರಾಯಚರಣನಿಗೆ ಕುದುರೆಯಾಗುವ ಪ್ರಸಂಗ ತಪ್ಪಿ, ಅದರ ಬದಲು ಆಳಾಗುವ ಮಟ್ಟಕ್ಕೆ ಏರಿಸಲ್ಪಟ್ಟಿದ್ದ. ಆದರೆ ಅವನಿಗೆ ಇಂತಹ ಸಂಜೆಯ ಸಮಯದಲ್ಲಿ ಆ ಮೊಳಕಾಲುವರೆಗಿನ ಕೆಸರಿನಲ್ಲಿ ಹೋಗಿ 'ಹೂ'ತರುವ ಇಚ್ಛೆ ಇರಲಿಲ್ಲ. ಕೂಡಲೇ ಅವನು ವಿರುದ್ಧದಿಕ್ಕಿಗೆ ತೋರಿಸುತ್ತಾ "ಓ ನೋಡು ಕಂದಾ, ನೋಡು! ನೋಡು ಆ ಪಕ್ಷಿ" ಎಂದು ಕೂಗಿದ. ಬೇರೆ ಬೇರೆ ಧ್ವನಿಮಾಡಿ ಕೂಗುತ್ತಾ ಗಾಡಿಯನ್ನು ಬೇಗನೆ ಗಿಡದ ಕಡೆಯಿಂದ ದೂರ ತಳ್ಳಿದ. ಆದರೆ ವಿಧಿಲಿಖಿತವು ಬೇರೆಯೇ ಇರುವಾಗ ಮಗುವನ್ನು ಸುಲಭವಾಗಿ ಅವನ ಹಟದಿಂದ ಮರೆಸಲು ಸಾಧ್ಯವಾಗಲಿಲ್ಲ. ಮೇಲಾಗಿ ಅಲ್ಲಿ ಮಗುವಿನ ಕಣ್ಣಿಗೆ ಆಕರ್ಷಕವಾಗುವಂತಹ ಯಾವ ವಸ್ತುವೂ ಇರದೆ, ಕಾಲ್ಪನಿಕ ಪಕ್ಷಿಗಳ ನಟನೆಯಿಂದ ಆದರ ಲಕ್ಷ್ಯ ಸೆಳೆಯುವದು—ಸಾಧ್ಯವಾಗಲಿಲ್ಲ. ಮಗುವು 'ಹೂ' ಬೇಕೇ ಬೇಕೆಂಬ ಬಗ್ಗೆ ನಿಶ್ಚಯವೇ ಮಾಡಿದ್ದರಿಂದ ಅವನಿಗೆ ಏನು ಮಾಡಬೇಕೆಂಬದು ತಿಳಿಯದೆ "ಒಳ್ಳೆಯದು ಕಂದಾ, ನೀನು ಇಲ್ಲೇ ಗಾಡಿಯಲ್ಲಿ ಸುಮ್ಮನೆ ಕುಳಿತಿರು. ನಾನು ಹೋಗಿ ನಿನಗಾಗಿ ಒಳ್ಳೆಯ ಹೂ ತರುವ ವರೆಗೂ ನೀನು ಮಾತ್ರ ನದಿಯ ಕಡೆ ಹೋಗಬಾರದೆಂಬುದನ್ನು ನೆನಪಿಡು" ಎಂದು ಹೇಳಿ, ತನ್ನ ಅರಿವೆಯನ್ನು ಮೇಲೇರಿಸಿ, ಕೆಸರಿನಲ್ಲಿ ಕಾಲಿಡುತ್ತಾ ಗಿಡದ ಕಡೆ ನಡೆದನು.

ಅವನು ಹೋದೊಡನೆ ಸಣ್ಣ ಧಣಿಯು, ತನಗೆ ಹೋಗಬಾರದೆಂದು ಅಪ್ಪಣೆ ಮಾಡಿದ, ನದಿಯ ನೀರಿನ ಕಡೆಗೆ ಭರದಿಂದ ಹೊರಡಲನುವಾದನು. ನದಿಯ ಸೆಳವು ಜೋರಿನಿಂದ ಸಾಗುತ್ತಾ, ತಿರುಗುತ್ತಾ, ಸದ್ದು ಮಾಡುತ್ತ ಹೋಗುತ್ತಿರುವದನ್ನು ಮಗುವು ನೋಡಿತು. ಆಜ್ಞಾಧಾರಕವಲ್ಲದ ಸಣ್ಣ ತೆರೆಗಳು, ರಾಯಚರಣನಂತಹ ದೊಡ್ಡ ಪ್ರತಿಬಂಧಕನಿಂದ ತಪ್ಪಿಸಿ

ಕೊಂಡು ಗೇಲಿಮಾಡುತ್ತಾ ಹೋಗುವ ಸಾವಿರಾರು ಸಣ್ಣಮಕ್ಕಳಂತೆ, ಮಗುವಿಗೆ ಕಾಣಿಸಿತು.

ಅವುಗಳ ಕಿಡಿಗೇಡಿತನದ ದೃಶ್ಯವು ಮಗುವಿನ ಹೃದಯದಲ್ಲಿ ಒಳ್ಳೇ ಭಾವೋದ್ರೇಕವನ್ನೂ, ಕಾತುರವನ್ನೂ ಹುಟ್ಟಿಸಿತು. ಮಗುವು ಕಳ್ಳತನದಿಂದ ಗಾಡಿಯಿಂದಿಳಿದು ನದಿಯ ಕಡೆಗೆ ಹೆಜ್ಜೆ ಹಾಕಿತು. ಹೋಗುವಾಗ ಹಾದಿಯಲ್ಲಿದ್ದ ಒಂದು ಸಣ್ಣ ಕೋಲನ್ನು ತೆಗೆದುಕೊಂಡು ಹೋಗಿ, ಮೀನು ಹಿಡಿಯುವವರಂತೆ ನಟಿಸುತ್ತ ನದಿಯ ದಂಡೆಯ ಮೇಲೆ ಬಗ್ಗಿದನು. ನದಿಯಲ್ಲಿಯ ಕಿಡಿಗೇಡಿ ದೇವತೆಗಳು ತಮ್ಮ ವಿಚಿತ್ರ ಧ್ವನಿಯಿಂದ ತಮ್ಮ ಆಟದ ಮನೆಗೆ ಮಗುವನ್ನು ಆಮಂತ್ರಿಸುತ್ತಿವೆಯೇನೋ ಎಂಬಂತೆ ಕಾಣಿಸುತ್ತಿತ್ತು.

ರಾಯಚರಣನು ಕೈತುಂಬ 'ಹೂ' ಕೊಯ್ದು ಮಾಲೆ ಮಾಡಿ, ತಿರುಗಿ ಗಾಡಿಯ ಬಳಿ ಬಂದಾಗ್ಗೆ ಅಲ್ಲಿ ಯಾರೂ ಇರಲಿಲ್ಲ. ಸುತ್ತೆಲ್ಲ ನೋಡಿದ. ಯಾರೂ ಇಲ್ಲ. ಗಾಡಿಯ ಹಿಮ್ಮಗ್ಗಲು ಹೋಗಿ ನೋಡಿದ, ಅಲ್ಲಿಯೂ ಯಾರೂ ಇಲ್ಲ.

ಇಂತಹ ಪ್ರಥಮ ಬಿಕ್ಕಟ್ಟಿನ ಪರಿಸ್ಥಿತಿಯಿಂದ ರಾಯಚರಣನ ರಕ್ತ ಹೆಪ್ಪುಗಟ್ಟಿತು. ಇಡೀ ವಿಶ್ವವೇ--ಒಂದು ಕಪ್ಪು ಮಂಜು ತೇಲುವಂತೆ-ಅವನ ಕಣ್ಣೆದುರು ತೇಲಿದಂತಾಯ್ತು. ಅವನು ತನ್ನ ಒಡೆದು ಚೂರಾದ ಹೃದಯನಾಳದಿಂದ ಒಮ್ಮೆ "ಒಡೆಯಾ! ಒಡೆಯಾ!! ಪುಟ್ಟ ಒಡೆಯಾ!!! ಎಂದು ಆರ್ತಸ್ವರದಿಂದ ಕೂಗಿದನು. ಆದರೆ "ಚಿನ್ನಾ" ಎಂಬ ಉತ್ತರ ಬರಲಿಲ್ಲ, ತುಂಟತನದ ಮಗುವಿನ ನಗೆಯೂ ಬರಲಿಲ್ಲ. ಮಗುವಿನ ಆನಂದದ ಚೀರಾಟ ಅವನನ್ನು ಸ್ವಾಗತಿಸಲಿಲ್ಲ. ಕೇವಲ ನದಿಯು ಮಾತ್ರ ಹಿಂದಿನಂತೆಯೇ ತನ್ನ ತೆರೆ, ನೊರೆಗಳ ಸಪ್ಪಳಗಳೊಂದಿಗೆ—ತನಗೆ ಏನೂ ಗೊತ್ತಿರದಂತೆ ಮತ್ತು ಮಗುವಿನ ಮರಣದಂತಹ ಸಣ್ಣ ಪುಟ್ಟ ಮಾನವೀ ಸಂಗತಿಗಳ ಕಡೆಗೆ ಲಕ್ಷಗೊಡುತ್ತಾ ನಿಲ್ಲಲು ತನಗೆ ಸಮಯವಿಲ್ಲವೆಂಬಂತೆ—ಓಡುತ್ತಿತ್ತು.

ಸಂಜೆಯಾದಂತೆ ರಾಯಚರಣನ ಯಜಮಾನಿತಿಗೆ ಮಗು ಬಾರದ ಬಗ್ಗೆ ಆತಂಕವಾಯ್ತು. ಕಂದೀಲುಗಳನ್ನು ಕೊಟ್ಟು, ಹುಡುಕಲು ಜನರನ್ನು ಕಳಿಸಿದಳು. ಅವರು ಅಲ್ಲಿ ಇಲ್ಲಿ ಹುಡುಕುತಾ್ತ, ಪದ್ಮಾನದಿಯ ದಂಡೆಗೆ ಬಂದಾಗ "ಧಣಿಯರೇ, ಧಣಿಯರೇ, ಚಿಕ್ಕ ಧಣಿಯರೇ" ಎಂದು ತೆರುಪಿಲ್ಲದೆ ಒದರುತ್ತಾ, ಬಿರುಗಾಳಿಯಂತೆ ಮೈದಾನದಲ್ಲಿ ಮೇಲಕ್ಕೂ, ಕೆಳಕ್ಕೂ ನಿರಾಶೆಯಿಂದ ಧಾವಿಸುತ್ತಿರುವ ರಾಯಚರಣನನ್ನು ಕಂಡು, ಅವನನ್ನು ಹಿಡಿದುಕೊಂಡು ಮನೆಗೆ ತಂದರು. ಬಂದವನೇ ರಾಯಚರಣನು ಏನೂ ಮಾತಾಡದೆ ಯಜಮಾನಿತಿಯ ಪಾದಗಳ ಮೇಲೆ ಬಿದ್ದುಬಿಟ್ಟನು. ಮಗುವನ್ನೆಲ್ಲಿ ಬಿಟ್ಟೆಯೆಂದು ಮೇಲಿಂದಮೇಲೆ ಕೇಳಿದಾಗ,ಅವನಿಂದ ಬಂದ ಉತ್ತರವೆಂದರೆ ತನಗೇನೂ ಗೊತ್ತಿಲ್ಲವೆಂಬದು ಮಾತ್ರ.

"ಪದ್ಮಾ" ನದಿಯು ಮಗುವನ್ನು ತನ್ನಲ್ಲಿ ಅಡಗಿಸಿಕೊಂಡಿತೆಂಬ ಅಭಿಪ್ರಾಯವೇ ಎಲ್ಲರಿಂದಲೂ ಬಂದರೂ ಸಹ, ಅಂದು ಮಧ್ಯಾಹ್ನ ಊರ ಹೊರಗೆ ಬಂದ 'ಜಿಪ್ಸಿ'ಯ ಗುಂಪನ್ನು ನೋಡಿದ್ದರಿಂದ ಕೆಲವರಿಗೆ ಬೇರೇ ಸಂಶಯವೂ ಬಂತು, ಅತೀವ ಕೆಟ್ಟ ದುಃಖದಲ್ಲಿದ್ದ ತಾಯಿಯು; ರಾಯಚರಣನೇ ಸ್ವತಃ ಮಗುವನ್ನು ಕದ್ದಿರಬೇಕೆನ್ನುವಷ್ಟರ ಮಟ್ಟಿಗೆ ಸಂಶಯ ತೆಗೆದುಕೊಂಡು, ಅವನನ್ನು ಒಂದು ಕಡೆಗೆ ಕರೆದು '' ರಾಯಚರಣ, ನನ್ನ ಮಗುವನ್ನು ತಿರುಗಿ ಕೊಡು. ಹಾಯ್! ನನ್ನ ಕಂದಮ್ಮನನ್ನು ನನಗೆ ತಿರುಗಿ ಕೊಟ್ಟರೆ ನಿನಗೆ ನಾನು ಬೇಡಿದಷ್ಟು ಹಣ ಕೊಡುವೆ, ತೆಗೆದುಕೋ. ಆದರೆ ನನ್ನ ಕಂದನನ್ನು ಮಾತ್ರ ತಿರುಗಿ ಕೊಡು" ಎಂದು ದೈನ್ಯದಿಂದ ಬೇಡಿದಳು,

ಆದರೆ ಅವನು ಇದಕ್ಕೆ ಉತ್ತರ ರೂಪವಾಗಿ ಕೇವಲ ತನ್ನ ಹಣೆ ಜಜ್ಜಿಕೊಳ್ಳುತ್ತಿದ್ದನು. ಇದರಿಂದ ಯಜಮಾನತಿಯು ಅವನಿಗೆ ಮನೆ ಬಿಟ್ಟು ಹೋಗಲು ಅಪ್ಪಣೆ ಕೊಡಿಸಿದಳು. ಅನುಕೂಲನು "ಏಕೆ? ಅವನು ಈ ಜಗತ್ತಿನಲ್ಲಿ ಯಾವ ಆಶೆಯಿಂದ ಇಂತಹ ತಪ್ಪನ್ನು ಮಾಡಬಹುದು? ನೀ ನೀರೀತಿ ಸಂಶಯಿಸುವದು ತಪ್ಪೆಂದು" ತಿಳಿಸಹೋದಾಗ ಅವಳು '' ಮಗುವಿನ ಮೈಮೇಲೆ ಚಿನ್ನದ ಒಡವೆಗಳಿದ್ದವು. ಯಾರು ಬಲ್ಲರು?" ಎಂಬದನ್ನೇ ಉತ್ತರಿಸುತ್ತಿದ್ದಳಾದ್ದರಿಂದ ಮುಂದೆ ಅವಳಿಗೆ ತಿಳಿಸಿಹೇಳುವದೂ ಅಶಕ್ಯವಾಯ್ತು.

೨

ರಾಯಚರಣನು ತನ್ನ ಹಳ್ಳಿಗೆ ಹಿಂದಿರುಗಿದನು. ಈ ವರೆಗೂ ಅವನಿಗೆ ಮಕ್ಕಳಾಗಿರಲಿಲ್ಲ. ಹಾಗು ಇನ್ನು ಮುಂದೆ ಆಗಬಹುದೆಂಬ ಆಶೆಯೂ ಇರಲಿಲ್ಲ. ಆದರೆ ಅವನು ತನ್ನ ಹಳ್ಳಿಗೆ ಬಂದು ಒಂದು ವರ್ಷವಾಗುವದರೊಳಗಾಗಿ ಅವನ ಹೆಂಡತಿಯು ಒಂದು ಗಂಡುಮಗುವಿಗೆ ಜನ್ಮವಿತ್ತು ಮೃತಳಾದಳು. ಮಗುವನ್ನು ನೋಡಿದೊಡನೆಯೇ, ರಾಯಚರಣನಿಗೆ ಮೊದಲು ಬಹಳ ತಿರಸ್ಕಾರವುಂಟಾಯಿತು. ತನ್ನ ಚಿಕ್ಕ ಯಜಮಾನನ ಸ್ಥಳವನ್ನು ಆ ಮಗುವು ಆಕ್ರಮಿಸಿದೆಯೆಂಬ ಸಂಶಯವು ಅವನ ಮನದ ಒಂದು ಮೂಲೆಯಲ್ಲಿ ಹುದುಗಿಕೊಂಡಿತ್ತು. ತನ್ನ ಯಜಮಾನನ ಸಣ್ಣ ಮಗುವಿನ ಭವಿ

ಸ್ಯತ್ತು ಹೀಗಾದ ಮೇಲೆ, ತಾನು ತನ್ನ ಸ್ವಂತ ಮಗುವಿನೊಂದಿಗೆ ಆನಂದದಿಂದಿರುವದು ದೊಡ್ಡ ತಪ್ಪೆಂಬ ಭಾವನೆ ಸಹ ಬಂದಿತವನಿಗೆ. ಅವನ ವಿಧವೆಯಾದ ತಂಗಿಯು ಆ ಮಗುವನ್ನು ತಾಯಿಯಂತೆ ಸಾಕಿಸಲುಹದಿದ್ದರೆ ಅದು ಬಹಳ ದಿನಗಳವರೆಗೆ ಬದುಕತ್ತಲೇ ಇರಲಿಲ್ಲ.

ಆದರೆ ದಿನಗಳೆದಂತೆ ರಾಯಚರಣನ ಮನಸ್ಸಿನಮೇಲೆ ಒಂದು ವಿಚಿತ್ರ ಪರಿಣಾಮವಾಯ್ತು. ಹೊಸ ಮಗುವು ಅಂಬೇಗಾಲಿಕ್ಕುವದು, ತುಂಟತನದಿಂದ ನಗುತ್ತ ಹೊಸ್ತಿಲು ದಾಟುವದು, ತನ್ನನ್ನು ಹಿಡಿಯಬಂದವರಿಂದ ತಪ್ಪಿಸಿಕೊಳ್ಳಲು ಸುರಕ್ಷಿತವಾದ ಸ್ಥಳವನ್ನು ಹುಡುಕಲು ಒಳ್ಳೇ ಮನರಂಜಕವಾದ ಜಾಣತನವನ್ನು ತೋರಿಸುವದು ಇವುಗಳಲ್ಲದೆ ಅದರ ಧ್ವನಿ, ನಗು, ಅಳುವಿನ ಸಪ್ಪಳ. ಹಾವಭಾವಗಳೆಲ್ಲವೂ ರಾಯಚರಣನಿಗೆ ತನ್ನ ಪುಟ್ಟ ಧಣಿಯ ನೆನಪನ್ನೇ ತಂದುಕೊಡುತ್ತಿತ್ತು. ಅವನಿಗೆ ತನ್ನ ಸಣ್ಣ ಧಣಿಯು ತನ್ನ 'ಚನ್ನಾ' ನನ್ನು ಕಳೆದುಕೊಂಡದ್ದಕ್ಕಾಗಿ ಸಾವಿನ ಎಲ್ಲೋ ಗೊತ್ತಿರದ ಸ್ಥಳದಿಂದ ಅಳುತ್ತಿದ್ದಂತೆ ಭಾಸವಾಯ್ತು.

ಫೈಲ್ನಾ (ರಾಯಚರಣನ ತಂಗಿಯು ಹೊಸಮಗುವಿಗಿಟ್ಟ ಹೆಸರು) ಮಾತಾಡಹತ್ತಿ ಬಾ–ಬಾ, ಮ್ಮಾ–ಮ್ಮ ಎಂದು ಬಾಲಭಾಷೆಯಲ್ಲಿ ಅನ್ನತೊಡಗಿದ. ಈ ಪರಿಚಿತ ಧ್ವನಿ ಕೇಳಿದೊಡನೆಯೇ ರಾಯಚರಣನಿಗೆ ಗೂಢನಾಗಿ ಉಳಿದ ಪ್ರಶ್ನೆಯು ಬಿಟ್ಟಂತಾಯಿತು. ಚಿಕ್ಕ ಧಣಿಯು ತನ್ನ 'ಚನ್ನಾ' ನ ಮಂತ್ರಮುಗ್ಧತೆಯ ಪರಿಣಾಮವನ್ನು ತಪ್ಪಿಸಿಕೊಳ್ಳಲು ಸಾಧ್ಯವಾಗದೆ ಪುನಃ ತನ್ನ ಸ್ವಂತ ಮನೆಯಲ್ಲೇ ಜನ್ಮ ತಾಳಿದನೆಂದು ಅವನೆಣಿಸಿದನು. ರಾಯಚರಣನ ಈ ಅನಿಸುವಿಕೆಯ ಪುರಾವೆಗಳು ವಾದಾತೀತ ವಾಗಿದ್ದವು

೧ ಹೊಸ ಮಗುವು ತನ್ನ ಧಣಿಯು ಸತ್ತಮೇಲೆ ಬೇಗನೆ ಜನ್ಮಕ್ಕೆ ಬಂದದ್ದು.

೨ ಅವನ ಹೆಂಡತಿಯು ತನ್ನ ಮಧ್ಯ ವಯಸ್ಸಿನಲ್ಲಿ ತಾಯಿಯಾಗುವಂತಹ ಪುಣ್ಯವನ್ನೆಂದೂ ಕೂಡಿಹಾಕಿರದಿದ್ದರೂ ಸಹ ತಾಯಿಯಾದದ್ದು.

೩ ಹೊಸ ಮಗುವು ತಪ್ಪು ಹೆಜ್ಜೆ ಹಾಕುತ್ತಾ ಬಾ-ಬಾ, ಮ–ಮ್ಮ ಎಂದು ಕರೆಯುವದು, ಮತ್ತು ಮಗುವಿನ ಭವಿಷ್ಯತ್ತಿನಲ್ಲಿ ಅವನು ನ್ಯಾಯಾಧೀಶನಾಗುವನೆಂಬ ಗುರುತಿಗೆ ಯಾವ ಕೊರತೆಯು ಚಿಸ್ಟೆಯೂ ಇಲ್ಲವೆಂದು ರಾಯಚರಣನಿಗೆ ಅನಿಸುತ್ತಿದ್ದುದು.

ರಾಯಚರಣನಿಗೆ ತನ್ನ ಯಜಮಾನಿಯು ತನ್ನ ಮೇಲಿಟ್ಟ ಆರೋಪದ ನೆನಪಾಗಿ "ಹಾಯ್. ಆ ತಾಯಿಯ ಹೃದಯವು ಸರಿಯಾದದ್ದನ್ನೇ ಹೇಳಿತು. ಮಗುವನ್ನು ಕದ್ದವನು ನಾನೇ ಎಂಬದು ಅವಳಿಗೆ ಗೊತ್ತು" ಎಂದು ಆಶ್ಚರ್ಯದಿಂದ ಹೇಳಿಕೊಳ್ಳುವನು. ಅವನು ಈ ನಿರ್ಣಯಕ್ಕೆ ಬಂದಮೇಲೆ ಮಗುವನ್ನು ಈ ವರೆಗೂ ತಾನು ಅಲಕ್ಷಿಸಿದ್ದು ತಪ್ಪೆಂದು ತಿಳಿದು ದುಃಖಿಸಿದನು. ಈಗವನು ತನ್ನ ದೇಹ, ಮನಗಳೆರಡನ್ನೂ ಮಗುವಿಗಾಗಿ ಮೀಸಲಿಟ್ಟನು. ಅವನ ಸೇವೆಗಾಗಿ ನಿಂತನು. ಮಗುವನ್ನು ಶ್ರೀಮಂತ ಮನೆತನದ ಮಗುವಿನಂತೆ ಸಾಕ ತೊಡಗಿದನು. ಮಗುವಿಗಾಗಿ ಒಂದು ಸಣ್ಣ ದೂಡುವ ಗಾಡಿ, ಹಳದೀ ಮಖಮಲ್ಲಿನ ಅರಿವೆಯ ಕೋಟು, ಜರದ ಟೊಪ್ಪಿಗೆಗಳನ್ನು ತಂದನು. ತನ್ನ ಮೃತ ಪತ್ನಿಯ ಒಡವೆಗಳನ್ನು ಕರಗಿಸಿ ಮಗುವಿಗೆ ಬಳೆ, ಕಾಲ್ಕಡಗಗಳನ್ನುಮಾಡಿಸಿದನು. ನೆರೆಹೊರೆ ಮಕ್ಕಳೊಂದಿಗೆ ಆಟವಾಡುವದನ್ನು ಬಿಡಿಸಿ ಹಗಲೂ ರಾತ್ರಿ ತಾನೇ ಮಗುವಿನ ಸಂಗಾತಿಯಾಗುಳಿದನು. ಇದರಿಂದ ಮಗುವು ಒಳ್ಳೇ ಪ್ರೀತಿಯವನೂ, ಹಠವಾದಿಯೂ ಆದನು. ಹಳ್ಳಿಯ ಮಕ್ಕಳು ಇವನನ್ನು ಬೇಕೆಂದೇ "ರಾಯರೇ" ಎನ್ನುತ್ತಿದ್ದರಲ್ಲದೆ, ಅಣಕಿಸುತ್ತಿದ್ದರು. ಹಿರಿಯರು ರಾಯಚರಣನಿಗೆ 'ಮಗುವನ್ನು ಅತಿ ಹುಚ್ಚು ಪ್ರೀತಿ ಮಾಡುವ ಹುಚ್ಚ'ನೆಂದು ಹೆಸರಿಡುತ್ತಿದ್ದರು.

ಮುಂದೆ ಮಗುವು ದೊಡ್ಡವನಾಗಿ ಶಾಲೆಗೆ ಹೋಗುವ ಪ್ರಸಂಗ ಬರಲು ರಾಯಚರಣನು ಹಳ್ಳಿಯಲ್ಲಿದ್ದ ತನ್ನ ಸ್ವಲ್ಪ ಭೂಮಿಯನ್ನು ಮಾರಿ ಕಲ್ಕತ್ತೆಗೆ ಬಂದು, ಬಹು ಪ್ರಯಾಸದಿಂದ ಸೇವಕನ ನೌಕರಿಯೊಂದನ್ನು ದೊರಕಿಸಿಕೊಂಡು, ತಾನು ಮುಷ್ಟಿ ಅನ್ನ ತಿಂದು, ಮಗನಿಗೆ ಒಳ್ಳೆಯ ವಿದ್ಯೆ, ಬಟ್ಟೆ ಹಾಗೂ ಆಹಾರಗಳಿಗಾಗಿ ಹಣ ವೆಚ್ಚ ಮಾಡತೊಡಗಿದನು. ಅವನು ಆಗಾಗ್ಗೆ "ಹಾ! ನನ್ನ ಒಡೆಯಾ, ನನ್ನ ಪ್ರಿಯ ಸಣ್ಣ ಒಡೆಯಾ, ನೀನು ನನ್ನ ಮನೆಯಲ್ಲಿ ತಿರುಗಿ ಜನ್ಮ ತಾಳುವಷ್ಟು ನನ್ನನ್ನು ಪ್ರೀತಿಸುತ್ತಿ. ನೀನೆಂದೂ ನನ್ನ ಅಲಕ್ಷ್ಯತನದಿಂದ ಇನ್ನು ದುಃಖಿತನಾಗಲಾರಿ" ಎಂದು ಗುಪ್ತವಾಗಿ ಅನ್ನುತ್ತಿದ್ದನು.

ಇದೇ ರೀತಿ ಹನ್ನೆರಡು ವರ್ಷಗಳು ಸಂದವು. ಹುಡುಗನು ಓದಲು ಬರೆಯಲು ಸಮರ್ಥನಾದ. ತೇಜಸ್ವಿಯೂ, ಆರೋಗ್ಯವಂತನೂ ಆಗಿ ಕಾಣಿಸುತ್ತಿದ್ದ. ಅವನು ತನ್ನ ಸ್ವಂತ ರೂಪದ ಬಗ್ಗೆ ಅದರಲ್ಲೂ ಬೈತಲೆಯ ಬಗ್ಗೆ ಬಹಳ ಜಾಗ್ರತೆ ವಹಿಸುತ್ತಿದ್ದ. ದುಂದುಗಾರಿಕೆಯ ಕಡೆ ಒಲವು

ಬಹಳ. ಹಣವನ್ನು ನಿರಾತಂಕವಾಗಿ ವೆಚ್ಚ ಮಾಡುತ್ತಿದ್ದ. ಆವನೆಂದೂ ರಾಯಚರಣನು ತನ್ನ ತಂದೆಯೆಂಬ ಸದ್ಭಾವನೆಯಿಂದ ನೋಡಲಿಲ್ಲ. ಕಾರಣವೆಂದರೆ, ರಾಯಚರಣನು ಪ್ರೀತಿಯಲ್ಲಿ ತಂದೆಯಾಗಿದ್ದರೂ ನಡತೆಯಲ್ಲಿ ಸೇವಕನಂತಿದ್ದನು. ಮತ್ತೊಂದು, ಅವನು ತಾನೇ ಆ ಮಗುವಿನ ತಂದೆಯೆಂಬದನ್ನು ಯಾರಿಗೂ ತಿಳಿಸದೆ ಗುಪ್ತವಾಗಿಟ್ಟಿದ್ದ.

ಫೈಲ್ನಾ ಇರುವ ವಸತಿಗೃಹದ ವಿದ್ಯಾರ್ಥಿಗಳು ರಾಯಚರಣನ ಹಳ್ಳಿಯ ರೀತಿ ನೀತಿಗಳನ್ನು ಕಂಡು ಗೇಲಿಮಾಡುತ್ತಿದ್ದರು. ತಂದೆಗೆ ತಿಳಿಯದೆ ಫೈಲ್ನಾನೂ ಅವರ ಈ ಕುಚೇಷ್ಟೆಯಲ್ಲಿ ಭಾಗಿಯಾಗುತ್ತಿದ್ದ. ಆದರೆ ಕೋಮಲ ಹಾಗೂ ನಿಷ್ಕಪಟ ಹೃದಯದ ಮುದುಕನನ್ನು ಅವರೆಲ್ಲರೂ ಹೃತ್ಪೂರ್ವಕ ಪ್ರೀತಿಸುತ್ತಿದ್ದರು. ಫೆಲ್ನಾ ಸಹ ತಂದೆಯನ್ನು ಬಹಳ ಪ್ರೀತಿಸುತ್ತಿದ್ದರೂ ಆದರಲ್ಲಿ ಕೇವಲ ಒಂದು ವಿಧ ಕನಿಕರತೆ ಮಾತ್ರ ಇರುತ್ತಿತ್ತು.

ರಾಯಚರಣನಿಗೆ ವಯಸ್ಸಾಗುತ್ತ ಬಂದದ್ದರಿಂದ ಅವನ ಈಗಿನ ಯಜಮಾನನು ಅವನಿಂದ ಸರಿಯಾಗಿ ಕೆಲಸವಾಗದ್ದಕ್ಕೆ ಒಂದೇಸಮನೆ ತಪ್ಪುಗಳನ್ನು ಹುಡುಕುತ್ತಿದ್ದನು. ಅವನು ಇವನಿಂದ ಒಬ್ಬ ಆಳಿನ ಸಂಪೂರ್ಣ ಕೆಲಸವನ್ನು ಅಪೇಕ್ಷಿಸುತ್ತಿದ್ದನಲ್ಲದೆ ಅಲ್ಲಿ ಕ್ಷಮೆಗೆ ಅವಕಾಶವಿರಲಿಲ್ಲ. ಇದರಿಂದ ರಾಯಚರಣನಿಗೆ ಹೆಚ್ಚು ದಿನಗಳ ವರೆಗೆ ತನ್ನ ಕೆಲಸವನ್ನು ಕಾಯ್ದುಕೊಳ್ಳುವದು ಸಾಧ್ಯವಿರಲಿಲ್ಲ. ಇಷ್ಟರಲ್ಲೇ ತನ್ನ ಸ್ಥಳ ಮಾರಿ ಬಂದ ಹಣವೂ ಖರ್ಚಾಗಿತ್ತು. ಹುಡುಗನೂ ಯಾವಾಗಲೂ ಹೊಸ ಅರಿವೆಯ ಸಲುವಾಗಿ ಒಂದೇ ಸಮನೆ ಗೊಣಗುಟ್ಟುತ್ತಿದ್ದನಲ್ಲದೆ ಹೆಚ್ಚು ಹಣ ಬೇಕೆನ್ನುತ್ತಿದ್ದ.

೩

ರಾಯಚರಣನು ಒಂದು ನಿರ್ಧಾರಕ್ಕೆ ಬಂದು, ತಾನು ಮಾಡುತ್ತಿದ್ದ ಕೆಲಸದಿಂದ ಬಿಡುಗಡೆ ಹೊಂದಿ, ಫೈಲ್ನಾನಿಗೆ ಸ್ವಲ್ಪ ಹಣ ಕೊಟ್ಟು "ನನಗೆ ನಮ್ಮ ಹಳ್ಳಿಯ ಮನೆಯಲ್ಲಿ ಸ್ವಲ್ಪ ಕೆಲಸವಿದೆ, ಅದನ್ನು ತೀರಿಸಿ ಬೇಗ ಬರುವೆ" ಎಂದು ಹೇಳಿ, ಅನುಕೂಲನು ನ್ಯಾಯಾಧೀಶನಾಗಿದ್ದ ಊರಿಗೆ ಬಂದ. ಅನುಕೂಲನ ಹೆಂಡತಿಗೆ ಬೇರೆ ಮಕ್ಕಳೇ ಆಗದ್ದರಿಂದ ಅವಳು ದುಃಖದಿಂದ ಎದೆಯೊಡೆದುಕೊಂಡಿದ್ದಳು.

ನ್ಯಾಯಾಲಯದ ದೀರ್ಘಾವಧಿಯ ಬೇಸರದ ಕೆಲಸಗಳಿಂದ ಬೇಸತ್ತ ಅನುಕೂಲನು ಒಂದು ದಿನ ಮನೆಯಲ್ಲಿ ವಿಶ್ರಾಂತಿಗಾಗಿ ಕುಳಿತಿದ್ದನು. ಅವನ ಹೆಂಡತಿಯು ಮಕ್ಕಳ ಫಲ ಸಿಗುವದೆಂದು ಭರವಸೆ ಹೇಳುತ್ತ ಬಂದ, ಕೀಳುದರ್ಜೆಯ ಒಬ್ಬ ಭಿಕ್ಷುಕ ವೈದ್ಯನಿಂದ ಅವನು ಬಹಳ ಬೆಲೆ ಹೇಳಿದ ವನಸ್ಪತಿಯೊಂದನ್ನು ವ್ಯಾಪಾರ ಮಾಡುತ್ತಿದ್ದಳು. ಆ ವೇಳೆಗೆ ಅಂಗಳದಲ್ಲಿ 'ನಮಸ್ಕಾರ' ವೆಂಬ ಶಬ್ದ ಕೇಳಿ ಅನುಕೂಲನು ಹೊರಗೆ ಬಂದು ನೋಡಿದಾಗ ರಾಯಚರಣನನ್ನು ಕಂಡನು. ಅನುಕೂಲನ ಹೃದಯವು ತನ್ನ ಹಳೆಯ ಸೇವಕನನ್ನು ಕಂಡು ಮೃದುವಾಯ್ತು. ಅವನಿಗೆ ಬಹಳ ಪ್ರಶ್ನೆಗಳನ್ನು ಕೇಳಿ ಅವನನ್ನು ತನ್ನ ಬಳಿಯಲ್ಲೇ ಪುನಃ ಸೇವಕನೆಂದು ನೇಮಿಸಿಕೊಳ್ಳುವದಾಗಿ ಹೇಳಿದನು. ಆದರೆ ರಾಯಚರಣನು ಮೃದುವಾಗಿ ನಕ್ಕು, "ನಾನು ನನ್ನ ಯಜಮಾನಿಗೆ ನಮಸ್ಕರಿಸಬೇಕಾಗಿದೆ" ಎಂದ.

ಆದರೆ ಅನುಕೂಲನೊಂದಿಗೆ ಅವನು ಯಜಮಾನಿಯ ಬಳಿ ಹೋದಾಗ ಅವನಿಗೆ ಅವಳಿಂದ ಆದರದ ಸ್ವಾಗತ ಸಿಗದಿದ್ದರೂ ಸಹ, ಆದರ ಕಡೆ ಲಕ್ಷಿಸದೆ ರಾಯಚರಣನು, "ತಾಯಿ, ನಿಮ್ಮ ಮಗುವನ್ನು ಅಪಹರಿಸಿದ್ದು 'ಪದ್ಮಾ' ನದಿಯಲ್ಲ, ನಾನು" ಎಂದು ಕೈಜೋಡಿಸಿದ.

"ಹಾ! ದೇವರೇ, ಏನಿದು? ಅವನೆಲ್ಲಿ?" ಆಶ್ಚರ್ಯದಿಂದ ಅನುಕೂಲನು ಪ್ರಶ್ನಿಸಿದ.

"ಅವನು ನನ್ನ ಬಳಿ ಇದ್ದಾನೆ, ನಾಡಿದ್ದು ಕರೆದು ತರುವೆ" ಎಂದು ಹೇಳಿ ರಾಯಚರಣನು ಹೊರಟ.

೪

ಅಂದು ರವಿವಾರ. ಗಂಡಹೆಂಡಿರಿಬ್ಬರೂ ಮುಂಜಾವಿನಿಂದಲೂ ರಸ್ತೆಯ ಕಡೆಗೇ ಕುತೂಹಲ, ಕಾತರಭಾವದಿಂದ ರಾಯಚರಣನ ಬರವನ್ನು ನಿರೀಕ್ಷಿಸುತ್ತಿರುವಾಗ, ರಾಯಚರಣನು 'ಫೈಲ್ನಾ' ನನ್ನು ತನ್ನ ಕೈಯ್ಯಲ್ಲಿ ಹಿಡಿದುಕೊಂಡು ಕರೆತಂದ.

ಅನುಕೂಲನ ಪತ್ನಿಯು ಏನೊಂದನ್ನೂ ಆಡದೆ, ಮಗನನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು, ಯಾವದೋ ಅವ್ಯಕ್ತಭಾವದಿಂದ ಒಮ್ಮೆ ನಗುವಳು, ಒಮ್ಮೆ ಅಳುವಳು, ಅವನ ಮೈ, ಕೈ ಮುಟ್ಟುವಳು, ತಲೆ, ಹಣೆಗಳ ಮೇಲೆ ಮುದ್ದಿಸುತ್ತಾ, ಹಸಿದವಳಂತೆ ಅವನ ಮುಖದ ಕಡೆಗೇ ಆತುರ ದೃಷ್ಟಿ ಬೀರುವಳು.

ಶ್ರೀಮಂತರ ಉಡುಪು ತೊಡವುಗಳಲ್ಲಿದ್ದ, ರೂಪವಂತನಾದ ಮಗುವನ್ನು ನೋಡಿ, ಅನುಕೂಲನಿಗಾದರೂ ಹೃದಯ

ದಲ್ಲಿ, ಆಕಸ್ಮಿಕ ನುಗ್ಗುವ ತೆರೆಯಂತೆ— ಪ್ರೀತಿಯು ಹೊರ ಸೂಸಿತು.

ಆದಾಗ್ಯೂ ನ್ಯಾಯಾಧೀಶನ ಚಿಕಿತ್ಸಕ ಬುದ್ಧಿಯು, ಅವನಿಂದ "ಇದಕ್ಕೇನಾದರೂ ನಿನ್ನ ಬಳಿ ಪುರಾವೆ ಇದೆಯೋ" ಎಂಬ ಪ್ರಶ್ನೆಯನ್ನು ಕೇಳಿಸಿತು.

"ಇಂತಹ ಕೃತಿಗಳಿಗೆ ಪುರಾವೆ ಎಲ್ಲಿಯದು? ನಿಮ್ಮ ಮಗುವನ್ನು ನಾನು ಕದ್ದದ್ದು, ದೇವರೊಬ್ಬನಿಗಲ್ಲದೆ ಮತ್ತೆ ಈ ಜಗತ್ತಿನಲ್ಲಿ ಯಾರಿಗೂ ಗೊತ್ತಿಲ್ಲ" ರಾಯಚರಣನೆಂದ.

ತನ್ನ ಹೆಂಡತಿಯು ದೃಷ್ಟಿ ಬಡೆಯುವಂತೆ ಒಂದೇ ಸಮನೆ ಹುಡುಗನನ್ನು ನೋಡುತ್ತಿರುವದನ್ನು ಕಂಡ ಅನುಕೂಲನು ಇನ್ನೂ ತಾನು ಪುರಾವೆಯ ಸಲುವಾಗಿ ಹೆಚ್ಚು ಪ್ರಶ್ನಿಸುವದು ನಿಷ್ಫಲವೆಂದೂ, ರಾಯಚರಣನು ಹೇಳಿದ್ದನ್ನು ನಂಬುವದೇ ಜಾಣತನವೆಂದೂ ಮನಗಂಡನು. ಹಾಗೂ ರಾಯಚರಣನಂತಹ ಮುದುಕನು ಇಂತಹ ಹುಡುಗನನ್ನು ಮತ್ತೆಲ್ಲಿಂದ ದೊರಕಿಸಬಲ್ಲನು? ನನ್ನ ನಂಬಿಗೆಯ ಸೇವಕನಿಗೆ ನನ್ನನ್ನು ವಿನಾಕಾರಣ ಮೋಸಗೊಳಿಸುವ ಬುದ್ಧಿಯಾದರೂ ಯಾಕೆ ಬಂದೀತೆಂದು ವಿಚಾರಮಾಡಿದನು. ಆದರೆ ಅವನು ರಾಯಚರಣನಿಗೆ "ರಾಯಚರಣ, ನೀನು ಮಾತ್ರ ಇಲ್ಲಿರಲಾಗದು" ಎಂದು ನಿಷ್ಠುರವಾಗಿ ನುಡಿದನು.

"ನಾನೆಲ್ಲಿ ಹೋಗಲಿ ನನ್ನೊಡೆಯಾ? ನಾನೀಗ ಮುದುಕ. ಯಾರು ಈ ಮುದುಕನನ್ನು ಸೇವಕನೆಂದು ನೇಮಿಸಿಕೊಳ್ಳಬಲ್ಲರು?" ಕೈಮುಗಿದು, ಬಿಗಿದ ಕಂಠದೊಂದಿಗೆ ನುಡಿದ ರಾಯಚರಣ.

"ಅವನನ್ನು ಇರಗೊಡಿ, ನನ್ನ ಮಗನಿಗೆ ಆನಂದವಾಗುವದು. ನಾನವನನ್ನು ಕ್ಷಮಿಸಿದ್ದೇನೆ,". ಮಗನನ್ನು ತಂದುಕೊಟ್ಟವನ ಮೇಲೆ ತೋರುವ ಕರುಣೆಯಿಂದ ನುಡಿದಳು ಯಜಮಾನಿ.

ಆದರೆ ಅನುಕೂಲನ ಅಂತರಾತ್ಮವು ಇದನ್ನೊಪ್ಪಲಿಲ್ಲ. "ಇಲ್ಲ, ಅವನು ಮಾಡಿದ್ದಕ್ಕೆ ಅವನೆಂದಿಗೂ ಕ್ಷಮಿಸಲ್ಪಡಲಾರ" ನ್ಯಾಯಾಧೀಶನ ದರ್ಪದಲ್ಲಿ ಹೇಳಿದ ಅನುಕೂಲ.

"ಧಣಿಯರೇ, ನನ್ನನ್ನು ಇರಗೊಡಿ, ಇಂತಹ ಕೃತಿ ಮಾಡಿದ್ದು ನಾನಲ್ಲ, ದೇವರು" ನೆಲಕ್ಕೆ ಬಗ್ಗಿ, ಅನುಕೂಲನ ಪಾದಗಳ ಮೇಲೆ ಬಿದ್ದು ನುಡಿದ ರಾಯಚರಣ.

ರಾಯಚರಣನು ದೇವರ ಮೇಲೆ ದೋಷ ಹೊರಿಸಲು ಪ್ರಯತ್ನಿಸಿದ್ದು ನೋಡಿ, ಅನುಕೂಲನ ವಿವೇಕವು ಎಂದಿಗಿಂತ ಕಠಿಣವಾಯ್ತು. "ಇಲ್ಲ ನಾನೆಂದಿಗೂ ಅಪ್ಪಣೆ ಕೊಡುವದಿಲ್ಲ. ಇನ್ನೆಂದೂ ನಿನ್ನನ್ನು ನಂಬಲಾರೆ. ನೀನು ವಿಶ್ವಾಸಘಾತುಕತನದ ಕೆಲಸ ಮಾಡಿರುವಿ." ಅನುಕೂಲನು ಸಿಟ್ಟಿನಿಂದ ನುಡಿದ

"ಈಗಾದ ಕೆಲಸವನ್ನು ನಾನು ಮಾಡಿಲ್ಲ" ಎದ್ದು ನಿಂತು ನುಡಿದ ರಾಯಚರಣ.

"ಹಾಗಾದರೆ ಯಾರು?" ಅನುಕೂಲನ ಪ್ರಶ್ನೆ. "ನನ್ನ ದೈವ" ಉತ್ತರ ಬಂದಿತು ರಾಯಚರಣನಿಂದ. ಆದರೆ ಯಾವ ಸುಶಿಕ್ಷಿತನೂ ಇದನ್ನು ಕ್ಷಮ್ಯವೆಂದು ಗ್ರಹಿಸಲಾರ. ಅನುಕೂಲನಾದರೂ ಹತಮಾರಿಯಾಗಿ ನಿಂತ.

ತಾನು ಒಬ್ಬ ಶ್ರೀಮಂತ ನ್ಯಾಯಾಧೀಶನ ಮಗ, ರಾಯಚರಣನ ಮಗನಲ್ಲವೆಂಬದನ್ನರಿತಾಗ ಮೊದಲು 'ಫೈಲ್ನಾ'ನಿಗೆ ಕೋಪಬಂದಿತ್ತು. ಆದರೆ ರಾಯಚರಣನ ದುಃಖವನ್ನು ನೋಡಿ ಅವನು ಕರುಣೆಯಿಂದ ತನ್ನ ತಂದೆಗೆ, "ಅಪ್ಪಾ, ಅವನನ್ನು ಕ್ಷಮಿಸಿರಿ. ಒಂದು ವೇಳೆ ಅವನು ನಮ್ಮೊಂದಿಗಿರಲು ನಿಮ್ಮ ಒಪ್ಪಿಗೆ ಇರದಿದ್ದರೆ, ಅವನಿಗೆ ಸ್ವಲ್ಪ ಮಾಸಿಕ ನಿವೃತ್ತಿ ಸಂಬಳ ಕೊಟ್ಟುಬಿಡಿ" ಎಂದ. ಇದನ್ನು ಕೇಳಿದ ರಾಯಚರಣನು ಮುಂದೆ ಏನೊಂದೂ ಮಾತಾಡದೆ, ಕೊನೆಯ ಬಾರಿ ತನ್ನ ಮಗನ ಮುಖವನ್ನು ಕಣ್ತುಂಬ ನೋಡಿ, ತನ್ನ ಹಳೆಯ ಯಜಮಾನ, ಯಜಮಾನಿಯರಿಗೆ ನಮಸ್ಕರಿಸಿ ಹೊರಗೆ ಹೊರಟು, ಜಗತ್ತಿನ ಅಸಂಖ್ಯ ಜನಸಮೂಹದಲ್ಲಿ ಕೂಡಿ ಹೋದ.

ತಿಂಗಳ ಕೊನೆಯಲ್ಲಿ ಅನುಕೂಲನು ಸ್ವಲ್ಪ ಹಣವನ್ನು ಅವನ ಹಳ್ಳಿಯ ವಿಳಾಸಕ್ಕೆ ಕಳುಹಿದಾಗ, ಅಲ್ಲಿ ರಾಯಚರಣನೆಂಬ ಹೆಸರಿನ ಯಾವದೇ ವ್ಯಕ್ತಿಯು ಇಲ್ಲವೆಂದು, ಆ ಹಣವು ತಿರುಗಿ ಬಂತು.

ಸ್ವೈರಾನುವಾದ— ಅನು– ವೆಂ. ಕೊ.

# — ವೈರಾಗ್ಯ ನಿಧಿ ಅಕ್ಕ ಮಹಾದೇವಿ —

ಶಿವತತ್ವ ಸುಂದರತೆ ಅನುಭಾವ ಅಳವಡಿಸಿ
ಲಿಂಗ ಸಂಗಮ ಬಯಸಿ ಆತ್ಮಜ್ಞಾನವ ಪಡೆದು
ಕೃತಕೃತ್ಯ ಕೈವಲ್ಯ ಸಾಧನದಿ ಸಾಧಿಸಿದೆ
ಜೀವ ಭಾವದ ಬೆಳಕು ಪಡೆದ ಓ ತಾಯೆ !

ಉಚ್ಚ ಗುರಿ ಮುಟ್ಟಲ್ಕೆ ಶೂನ್ಯ ಸಿಂಹಾಸನದಿ
ಸ್ಥಾನ ಪಡೆಯುತೆ ಬಸವ ಅಲ್ಲಮರ ಒಡಗೂಡಿ
ನಿರ್ಮಲಿತ ಮಮತೆಯಲಿ ಶರಣ ಗಣದಲಿ ಕೂಡಿ
ಭಕ್ತಿ ಮುಕ್ತಿಯ ಮಾರ್ಗ ಪರ್ಯಾವಸಾನದಲಿ

ವೈರಾಗ್ಯ ನಿಧಿಯಾಗಿ ಭೋಗಭಾಗ್ಯವ ತೊರೆದು
ಶಿವನ ಸತಿ ನಾನೆಂದು ವಚನ ರೂಪದಿ ಹಾಡಿ
ಗುಣಗಾಣ ಮಾಡಿರುವೆ ತತ್ವಮಸಿ ಮಂತ್ರದಿಂ
ಐಕ್ಯಾನುಕೂಲದಿಂ ಶಿವನೊಡನೆ ಬೆರೆತು

ತುಂಬು ಯೌವನದಲ್ಲಿ ಇಂದ್ರಿಯ ಸುಖವ ತ್ಯಜಿಸಿ
ದೇಹದಾಶೆಯ ತೊರೆದು ತವಕೇಶ ರಾಶಿಯನೆ
ವಸ್ತ್ರವಾಗಿರಿಸಿ ಘೋರಾರಣ್ಯದಲಿ ಚರಿಸಿ
ಮದವೇರ್ದ ಕೌಶಿಕಂಗೆ ಮತಿಯಿತ್ತೆ ತಾಯೆ

ರುದ್ರರಮಣಿಯೆ ನಿತ್ಯ ಓಂಕಾರ ಪ್ರಣಯದಲಿ
ಶಿವನೈಕ್ಯ ಸಾಧಿಸಿದೆ ಮಹಾದೇವಿ ತ್ಯಾಗದಿಂ
ಭಕ್ತಿ ರಸದಲಿ ಬೆರೆತು ಅಸ್ಖಲಿತ ಮಮತೆಯಲಿ
ಮಲ್ಲಿಕಾರ್ಜುನನ ಕೂಡಿದೆ ಮಹಾತಾಯೆ

ಕುಮಾರ— **ಎಸ್. ವ್ಹಿ. ಪಾಟೀಲ** Sr. ಬಿ. ಎ.
ಚುಳಕಿ.

# ಕಪ್ಪು ಹುಡುಗಿ

೧

ಕಪ್ಪು ಹುಡುಗಿಯಾದರೇನು ?
ಹೃದಯ ಕಪ್ಪು ಅಲ್ಲವು,
ಕಾಯ ಕಪ್ಪಾದರೂ, ಅವಳ ಅಂತರಂಗ
ದೊಲವು ಕಪ್ಪು ಅಲ್ಲವು,

೨

" ಕೆಂಪು ದಾಸಾಳದಲಿ ಕೆಂಪುಂಟು ಕಂಪಿಲ್ಲ"
ಕಪ್ಪಿನವಳಲಿ ಕೆಂಪಿಲ್ಲ ಕಂಪುಂಟು,
ಕೆಂಪು ಕಪ್ಪು ಬಣ್ಣಗಳೇತಕೆ ?
ಒಲವು ಅವಳಲುಂಟು

೩

"ಕಪ್ಪು ಹಸವು ಕಪ್ಪು ಹಾಲ್ಗರಿವುದೆ?"
ಕಪ್ಪಿನವಳನಲ್ಮೆ ಕಪ್ಪಿರ್ಪುದೆ ?
ಕಪ್ಪಿನವಳ ಒಲ್ಮೆ ಕಪ್ಪಿರ್ಪುದೇ ?
ಕಪ್ಪಲ್ಲ ಕಾಯಕಪ್ಪಿರ್ಪುದು

೪

"ಕಬ್ಬಿನಗಣಿ ಡೊಂಕು ಹಾಲದು ಡೊಂಕೆ?"
ಕಪ್ಪಿನವಳ ಪ್ರೇಮದು ಡೊಂಕೆ ?
ಬಿಲ್ಲಿನ ಕಂಬಿಯು ಡೊಂಕು ಬಿಟ್ಟ ಬಾಣದು ಡೊಂಕೆ?
ಕಪ್ಪಿನವಳ ಒಲುಮೆಯು ಡೊಂಕೆ?

೫

ಅಂತೆ, ನಾನು ಏನು ಕಾಮನಲ್ಲ
ರೂಪದಲ್ಲಿ ನೋಡಲು
ಹಾಗೆ ಅವಳು ರತಿಯು ಅಲ್ಲ
ತುಲನೆ-ಗಿಲನೆ ಮಾಡಲು

೬

ನಡೆ-ನುಡಿ ನಯ-ನೀತಿ
ಚನ್ನು ಅವಳದು
ನುಡಿಗೆ ನಿಲುಕಲಾರದ ಪತಿಯ
ಭಕ್ತಿ ಅವಳದು

೭

ಮಾತು ಬೆಳ್ಳಿ, ಮೌನ ಚಿನ್ನ
ಅವಳಲೆ ಅರಿತಿದು
ಒಳಗೆ ಹೊರಗೆ ಒಂದೇ ಬಗೆಯು
ಅಚ್ಚು ಮೆಚ್ಚು ಅವಳದು



ರಾಮುಲಿಂಗ ಪೂಜಾರ (ಯಲಿವಾಳ) ಧಾರವಾಡ.

ಲೇಖಾಂಕ ೧

# ಸುಖದ ಶೋಧ

ಲೇ— ಓರ್ವ ಅಜ್ಞಾನಿ.

ಶಿಷ್ಯ— ಗುರುಗಳೆ! ಈ ವಿಶ್ವದಲ್ಲಿ ಎಷ್ಟೋ ಕೋಟಿ ಚರಾಚರ ಪ್ರಾಣಿಗಳು ಇರುವವು ಇವುಗಳನ್ನು ಹುಟ್ಟಿಸಿದವರಾರು?

ಗುರು— ಪ್ರಾಚೀನ ಕಾಲದಿಂದ ಇದರ ಶೋಧವನ್ನು ಹಚ್ಚಲು ಮಹಾನ ಮಹಾನ ತತ್ವಜ್ಞಾನಿಗಳು ಪ್ರಯತ್ನ ಪಟ್ಟಿರುವರು. ಆದರೆ ಇದರ ಶೋಧವಿನ್ನೂ ಹತ್ತಿರುವದಿಲ್ಲ. ಮೊದಲು ಮೊದಲು ಸೂರ್ಯ ಚಂದ್ರ ಪೃಥ್ವಿ, ತೇಜ ಆಪ ವಾಯು ಸಮುದ್ರ, ಪರ್ವತ ಮುಂತಾದ ಕಣ್ಣಿಗೆ ಕಾಣುವ ಪ್ರಚಂಡ ವಸ್ತುಗಳೆ ದೇವತೆಗಳಿದ್ದು, ಈ ಚರಾ ಚರ ವಸ್ತುಗಳನ್ನು ನಿರ್ಮಿಸಿರುವವು ಎಂದು ಪ್ರಾಚೀನ ಋಷಿಗಳು ಹೇಳುತ್ತ ಬಂದಿರುವರು.

ಶಿಷ್ಯ— ಈ ವಿಚಾರವನ್ನು ಎಲ್ಲ ಚರಾಚರ ಪ್ರಾಣಿಗಳು ಮಾಡುತ್ತಿರುವವೋ? ಅಥವಾ ಕೇವಲ ಮನುಷ್ಯ ಪ್ರಾಣಿಯಷ್ಟೆ ಮಾಡುತ್ತಿರುವದೋ?

ಗುರು— ಕೆಲವು ಋಷಿಗಳ ಅಭಿಪ್ರಾಯದಂತೆ ಕೇವಲ ಮನುಷ್ಯ ಪ್ರಾಣಿಯೆ ವ್ಯಕ್ತ ಸ್ವರೂಪದಲ್ಲಿ ಮಾಡುತ್ತಿರುವದು. ಕೆಲವು ಋಷಿಗಳೆಂದರೆ ಆಧುನಿಕ ಸಾಹಿತಿಗಳೆಂದರೆ ಶಾಸ್ತ್ರಜ್ಞರಂತೆ ಎಲ್ಲ ಚರಾಚರ ಪ್ರಾಣಿಗಳು ಅಂದರೆ ವಸ್ತುಗಳು ಮಾಡುತ್ತಿರುವವು.

ಶಿಷ್ಯ— ಗುಡ್ಡ, ನದಿ, ಕ್ರಿಮಿಕೀಟಕಗಳು ಹೇಗೆ ವಿಚಾರ ಮಾಡಬಲ್ಲವು? ಅವುಗಳಿಗೇನಾದರು ವಿಚಾರ ಮಾಡುವಂಥ ಮನಸು, ಮಿದಳು ಬುದ್ಧಿಯುಂಟೇ.

ಗು— ಅಹುದು. ಅವುಗಳಿಗಾದರು ಇವೆಲ್ಲವುಂಟು. ಆದ್ದರಿಂದ ಅವು ಬಾಳುತ್ತಿರುವವು, ಬದಲಾಗುತ್ತಿರುವವು, ಬೆಳೆಯುತ್ತಿರುವವು. ಅವುಗಳ ಮನಸ್ಸು ಅಷ್ಟು ಪ್ರಗಲ್ಭವಾಗಿರುವದಿಲ್ಲ. ಮೊದಲು ಮೊದಲು ಜಡ ಸ್ವರೂಪಿಯಾದ ಎಲ್ಲ ವಸ್ತುಗಳು ವಿಕಾಸ ಹೊಂದುತ್ತ ಹೊಂದುತ್ತ ಮನುಷ್ಯ ಪ್ರಾಣಿಯ ಸ್ವರೂಪ ತಾಳಿದವು. ಎಲ್ಲ ವಸ್ತುಗಳು ಮನುಷ್ಯ ಪ್ರಾಣಿಯಾಗಲಿಲ್ಲ. ಆದರೆ ಆ ವಸ್ತುಗಳಲ್ಲಿ ವಿಕಾಸ ಕ್ಷಮಗಳವುಗಳೆ ಮಾತ್ರ ಮನುಷ್ಯ ಪ್ರಾಣಿಯಾದವು.

ಶಿ— ವಿಕಾಸಹೊಂದುವ ಶಕ್ತಿ ಕೆಲವುಗಳಲ್ಲಿ ಬಂದಿತು ಹೇಗೆ ಕೆಲವುಗಳಲ್ಲಿ ಬರಲಿಲ್ಲ ಹೇಗೆ ಮತ್ತು ಏಕೆ?

ಗುರು— ಇದೊಂದು ಗೂಢವಾದ ಸಮಸ್ಯೆಯಾಗಿದೆ. ಇದನ್ನು ದೇವತೆ ಅಥವಾ ದೇವ ಸ್ವರೂಪಿಯಾದ ಸ್ವಯಂ ಸಿದ್ಧ ಪ್ರಚಂಡ ಶಕ್ತಿಯಾದ ಸೃಷ್ಟಿಯೆ ಮಾಡಿರುತ್ತದೆಂದು ಗೃಹಿತ ಸಿದ್ಧಾಂತವಾಗಿದೆ. ಹೇಗೆ ಭೂಮಿತಿ ಸಿದ್ಧಾಂತಗಳಲ್ಲಿ ಬಿಂದುವಿನ ಅಸ್ತಿತ್ವವನ್ನು ಗೃಹಿತ ಸಿದ್ಧಾಂತ (Hypothisis) ವೆಂದು ಹಿಡಿದು ಮುಂದೆ ಸಾಗಿದ್ದರಿಂದ ಇಡಿ ಚರಾಚರಯೊಳಗಿನ ಆಕೃತಿಗಳು ಆಗಿರುವವೆಂದು ಸಿದ್ಧ ಮಾಡಲು ಬಂದಿತೋ ಆದರಂತೆ ದೇವರು ಅಥವಾ ಸೃಷ್ಟಿ ಒಂದು ವಸ್ತುವನ್ನು ಮೊದಲು ನಿರ್ಮಿಸಿತು. ಅದರೊಳಗಿನ ಕೆಲವು ಅಂಶಗಳು ವಿಕಾಸ ಹೊಂದುತ್ತ ಹೊಂದುತ್ತ ಮನುಷ್ಯಪ್ರಾಣಿಯಾಯಿತು. ಅದರಲ್ಲಿ ಮೊದಲು ಹೆಣ್ಣು ಮುಂದೆ ಗಂಡು ಪ್ರಾಣಿಯಾಯಿತು. ಇದನ್ನು ನಾವು ಗೃಹಿತ ಸಿದ್ಧಾಂತವೆಂದು ಹಿಡಿಯದ ವಿನಾ ಮುಂದೆ ಯಾವ ಸಿದ್ಧಾಂತವು ನಮಗೆ ಸಿದ್ಧ ಮಾಡಲು ಬರುವದಿಲ್ಲ. ಇದನ್ನು ಗೃಹಿತ ಹಿಡಿದಲ್ಲಿ ಮಾತ್ರ ಇಡಿ ಚರಾಚರ ಪ್ರಾಣಿಯು ಅದ್ವೈತ ಸಿದ್ಧಾಂತದಂತೆ ಜಗದೊಳಗೆ ೨ ವಸ್ತುಗಳಿಲ್ಲ. ದ್ವೈದ ಸಿದ್ಧಾದಂತೆ ೫ ವಸ್ತುಗಳು ಇದರಂತೆ ಮಿಕ್ಕ ವಿಶಿಷ್ಟಾ ದ್ವೈತದಂತೆ ಎಲ್ಲ ಒಂದು ಇರುವಂತಿದ್ದು ದೇವರು ಹೆಚ್ಚಿನವ ಹೀಗೆ ಎಷ್ಟೋ ಸಿದ್ಧಾಂತಗಳು ಹುಟ್ಟಿ ಮತ, ಪಂಥ ಪಂಗಡಗಳಾಗಿ ಸದ್ಯಕ್ಕೆ ನಾವು ನೋಡುತ್ತಿರುವಂಥ ಮನುಷ್ಯ ಪ್ರಾಣಿಯು ಜಗತ್ತು ಕಾಣಹತ್ತಿದೆ.

ಶಿ— ಇಡಿ ವಿಶ್ವದಲ್ಲಿಯೆ ಬದಲಾವಣೆಗಳಾಗಿವೆಯೋ ಅಥವಾ ಮನುಷ್ಯ ಪ್ರಾಣಿಗಳಲ್ಲಿ ಮಾತ್ರವೊ?

ಗು— ಮಾನವೇತರ ವಿಶ್ವದಲ್ಲಿ ಕೆಲವು ಬದಲಾವಣೆಗಳು ಆಗಿರುವವು. ಆದರೆ ಅವು ದೃಶ್ಯಸ್ವರೂಪಿನಲ್ಲಿ ಮಾತ್ರ. ಅಂದರೆ ನದಿಗಳ ಬದಲಾಗಿ ಗುಡ್ಡಗಳು. ಗುಡ್ಡಗಳ ಬದಲಾಗಿ ನದಿಗಳು. ಒಂದು ಕೀಟಕ ಹೋಗಿ ಮತ್ತೊಂದು ಕೀಟಕ. ಹೀಗೆ ಸ್ಥೂಲವಾಗಿ ದೇಹದ ಸ್ವರೂಪದಲ್ಲಿ ಮಾತ್ರ ಬದಲು ಹೊಂದುತ್ತಹೋಗಿರುವವು. ಆದರೆ ಮನುಷ್ಯಪ್ರಾಣಿಗಳಲ್ಲಿ ಮಾತ್ರ ಬಾಹ್ಯದೇಹಸ್ವರೂಪದಲ್ಲಿ ವಿಶೇಷವೇನೂ ಬದಲಾಗದೆ ಮಾನಸಿಕ ಆರ್ಥಿಕ ಸ್ವರೂಪದಲ್ಲಿ ಅಜಗಜದಷ್ಟು ಬದಲಾವಣೆಗಳು, ಕ್ರಾಂತಿಗಳು, ಸ್ಥಿತ್ಯಂತರಗಳು ಆಗುತ್ತ ಬಂದಿರುವವು, ಆಗುತ್ತ ನಡೆದಿರುವವು. ಇದಕ್ಕೇನೆ ನಾವು ಸದ್ಯಕ್ಕಿದ್ದವರು ಸುಧಾರಣೆಗಳೆನ್ನುತ್ತೇವೆ. ಕೆಲವರು ಇದನ್ನು ಅಲ್ಲಗಳೆದು ಪೂರ್ವಿಕರಿಗಿಂತ ನಾವು ಹೆಚ್ಚಾಗಿ ಸುಧಾರಣೆಯ ಬದಲು ಅಧೋಗತಿ ಹೊಂದಿದ್ದೇವೆ, ಇಷ್ಟು ಸುಖದ ಸಾಧನಗಳು ನಮಗೆ ದೊರೆತಿದ್ದರೂ ಕೂಡ ನಾವು ಹೆಚ್ಚು ದುಃಖಿಗಳಾಗಿದ್ದೇವೆಂದು ಸಾಧಿಸುತ್ತಿರುವರು.

ಶಿ—ಹೀಗೆ ಭಿನ್ನಾಭಿಪ್ರಾಯವಾಗಲು ಕಾರಣವೇನು? ಈ ಭಿನ್ನಾಭಿಪ್ರಾಯಗಳ ತಳಹದಿ ಯಾವದು ಮತ್ತು ವರೆಗಲ್ಲಾವದು?

ಗು—ಬುದ್ಧಿವಂತರಾದ ಕೆಲವು ಸಾಹಿತಿಗಳು ಈ ಮಾನವೀ ಸಮಾಜವು ಸುಸಂಘಟಿತವಾಗಿ ಬಾಳುವಂತೆ ಕೆಲವು ಸಿದ್ಧಾಂತಗಳನ್ನು ಕಂಡುಹಿಡಿದು ಸಂಸ್ಕಾರಕ್ಷಮವಾದ ಸಾಮಾನ್ಯ ಜನರ ಮನಸಿನ ಮೇಲೆ ಪರಿಣಾಮ ಮಾಡಲು ಹೆಣಗಿದರು. ಅಹೊ ರೂಪ ಅಹೊ ಧ್ವನಿಯೆಂಬಂತೆ ಈ ಬುದ್ಧಿವಂತರು ತಮ್ಮ ತಮ್ಮೊಳಗೆ ಕೆಲವು ಮತಭೇದಗಳನ್ನು ವ್ಯತ್ಯಾಸಗಳನ್ನು ಬಚ್ಚಿಟ್ಟು, ಸೃಷ್ಟಿ ಅಥವಾ ಈಶ ನಿಯಮಗಳ ಮರ್ಮವನ್ನು ಸಾಮಾನ್ಯಜನರಿಗೆ ತಿರಿಯಗೊಡದೆ ತಮ್ಮ ಸಿದ್ಧಾಂತಗಳ ಮನವರಿಕೆ ಮಾಡಿಗೊಟ್ಟು ಲೋಕಾಚಾರದ ನಿಯಮಗಳನ್ನು ಪ್ರಸ್ಥಾಪಿಸಿದರು. ಉದಾಹರಣಾರ್ಥ—ಎಲ್ಲ ಸೃಷ್ಟಿಯಲ್ಲಿ ಆ ಆ ಜಾತಿಗಳ ವಸ್ತುಗಳ ಬೀಜವು ಶಾಶ್ವತವಾಗಿ ಉಳಿಯಲೆಂದು ಹೆಣ್ಣುಗಂಡೆಂಬ ಎರಡು ಭಿನ್ನಸ್ವರೂಪದ ಸಮ್ಮೇಲನದಿಂದ ಉತ್ಪತ್ತಿಯಾಗುವಂತೆ ಸೃಷ್ಟಿಯಲ್ಲಿ ಏರ್ಪಾಟು. ಈ ಸಮ್ಮೇಲನವು ವಿಶಿಷ್ಟ ಪರಿಸ್ಥಿತಿಯಲ್ಲಿ ಒದಗಿಬರುವಂತೆ ಗಂಡುಹೆಣ್ಣಿನ ಸ್ವಭಾವದಲ್ಲಿ ವ್ಯತ್ಯಾಸವುಂಟು. ಪ್ರಜೋತ್ಪಾದನದ ಸಿದ್ಧತೆಯು ಹೆಣ್ಣಿನಲ್ಲಾದ ಕೂಡಲೆ ಗಂಡಿನಲ್ಲಿ ಆ ಹೆಣ್ಣಿನ ಸಲುವಾಗಿ ಆಕರ್ಷಣವಾಗುವಂತೆ ಹೆಣ್ಣಿನಲ್ಲಿ ಕೆಲವು ಲಕ್ಷಣಗಳುಂಟಾಗುವವು. ಒಂದು ಮಾದರಿ ಆಕರ್ಷಕ ವಾಸನೆ. ಮುಖಮುದ್ರೆಗಳಲ್ಲಿ ವ್ಯತ್ಯಾಸ, ಅಂಗವಿಕ್ಷೇಪ ಹಾವಭಾವಗಳಲ್ಲಿ, ನಡೆನುಡಿಗಳಲ್ಲಿ ವ್ಯತ್ಯಾಸ, ಸಿಟ್ಟು, ಪ್ರೇಮಗಳ ಉದ್ಭವ ಉಂಟಾಗುವಂತೆ ಏರ್ಪಾಟು ಸೃಷ್ಟಿಯಲ್ಲಿ ಇತ್ತು. ಈಗಿನ ನಮ್ಮ ಲೌಕಿಕ ಮತ್ತು ಸಾಮಾಜಿಕ ನೀತಿ ಅನೀತಿ ಕಲ್ಪನೆಗಳಕಿಂತ ಭಿನ್ನವೆಂದರೆ ನೀತಿ ಅನೀತಿ ಎಂಬ ದ್ವಂದ್ವಾತೀತವಾಗಿರುವದು. (Moral, immorai ವಾಗಿರದೆ Non moralವಾಗಿತ್ತು). ಗಂಡು ಹೆಣ್ಣುಗಳು ವಿಶಿಷ್ಟ ಕಾಲದಲ್ಲಿ ಅಗತ್ಯವಿದ್ದ ಮಟ್ಟಿಗೆ ಪರಸ್ಪರಾವಲಂಬಿಯಾಗಿದ್ದು ಮಿಕ್ಕ ಎಲ್ಲ ಸಮಯಗಳಲ್ಲಿ ತುಂಬಾ ಸ್ವತಂತ್ರವಾಗಿದ್ದವು. ಆದರೆ ಬರಬರುತ್ತ ಮನುಷ್ಯ ಸಮಾಜವು ಹೆಚ್ಚು ಹೆಚ್ಚು ಸಂಘಟಿತವಾಗುತ್ತ ನಡೆದಂತೆ ಹೆಚ್ಚು ಹೆಚ್ಚು ಪರಸ್ಪರಾವಲಂಬಿಯಾಗುತ್ತ ನಡೆಯಿತು. ಮಾನವೇತರದೃಷ್ಟಿ ಇದ್ದಕ್ಕಿದ್ದ ಹಾಗೆ ಉಳಿಯಿತು. ಮನುಷ್ಯ ದೃಷ್ಟಿಯೊಳಗೆ ಪೂರ್ಣ ಸ್ವಾತಂತ್ರ್ಯದ ಮೂಲಪ್ರವೃತ್ತಿಯು ಅಳಿದುಹೋಗಿಲ್ಲ. ಆದರೆ ಕೃತ್ರಿಮ ಸಂಸ್ಕಾರಗಳ ನಿಮಿತ್ತ ಕೆಲವೊಂದು ಪ್ರವೃತ್ತಿಯು ಹುದುಗಿಕೊಂಡು ಉಳಿದವು, ಕೆಲವೊಂದು ವಿಕಾಸಹೊಂದಿದವು. ಮನುಷ್ಯಸಮಾಜವು ಹೆಚ್ಚು ಹೆಚ್ಚು ಸಂಘಟಿತವಾಗಲು ಉಪಯುಕ್ತವಾದ ಗುಣಗಳಿಗೆ ಪ್ರೋತ್ಸಾಹ ಕೊಡುವದು ಪ್ರಾರಂಭವಾಯಿತು. ಇವೇ ನೀತಿ ಧರ್ಮ ಕರ್ಮಗಳ ನಿಯಮಗಳಾದವು. ಸೃಷ್ಟಿಯಲ್ಲಿ ವಯಮಾನ, ಪರಿಸ್ಥಿತಿಗನುಸರಿಸಿ ಸಬಲ ಅಬಲವೆಂಬ ಭೇದಭಾವ ಇದ್ದಿತು. ಆಹಾರ ನಿದ್ರಾಭಯಮೈಥುನಾನಿ । ಸಾಮಾನ್ಯಮೇತತ್ ಪಶುಭಿರ್ನರಾಣಾಮ್ ॥ ಎಂಬಂತೆ ಜೀವೋ" ಜೀವಸ್ಯ ಎಂದರೆ ಒಂದು ಪ್ರಾಣಿ ಮತ್ತೊಂದು ಪ್ರಾಣಿಯ ಆಹಾರವೆಂಬಂತೆ ವ್ಯವಸ್ಥೆ ಇತ್ತು. ಆದರೆ ಇದು ಈ ಬುದ್ಧಿವಂತ ಸಾಹಿತಿಗಳಿಗೆ ಸರಿ ಹೋಗದೆ ಮನುಷ್ಯಸಮಾಜ ಒಂದುಗೂಡಿಸಿ ದೇವರ ವಿರುದ್ಧ ಅಂದರೆ ದೇವರ ನಿಯಮಗಳ ವಿರುದ್ಧ ಬಂಡು ಹೂಡಿ ಒಂದು ದೊಡ್ಡ ಕ್ರಾಂತಿ ಮಾಡಲು ಹೊರಟನು ಮತ್ತು ಸಂಘಟಿತವಾಗಲೇ ಬೇಕಾಗುವ ನಿಯಮಗಳ ಪ್ರಚಾರ ಮಾಡತೊಡಗಿದನು. ಈ ನಿಯಮಗಳು ಸೃಷ್ಟಿ-ನಿಯಮಗಳ ವಿರುದ್ಧ ಇರುತ್ತವೆ. ಇತ್ತ ಲಕ್ಷ್ಯಕೊಡದಾದನು. ಎಲ್ಲ ಪ್ರಾಣಿಗಳ ಆಹಾರದೃಷ್ಟಿಯಲ್ಲಿ ಸ್ವಯಂಸಿದ್ಧವಿದ್ದಂತೆ ಮನುಷ್ಯಪ್ರಾಣಿಯ ಆಹಾರವಾದರೂ ಸ್ವಯಂಸಿದ್ಧವಿರುವದು. ಆದರೆ ಇದು ಮನುಷ್ಯನಿಗೆ ಸರಿಹೋಗದೆ ಅವನು ತನ್ನ ಆಹಾರ ತಾನೆ ಹುಟ್ಟಿಸಿಕೊಳ್ಳಲು ಹೊರಟನು. ಅದಕ್ಕಾಗಿ ಕೆಲವೊಂದು ನಿಯಮಗಳನ್ನು ಮಾಡಿಕೊಂಡನು. ವಿಶಿಷ್ಟ ಆಹಾರ ಮನುಷ್ಯನು ತಿನ್ನಬೇಕು. ಅದರ ಉತ್ಪಾದನೆ ವಿಶಿಷ್ಟ ಜನರೇ

ಮಾಡಬೇಕು. ಮಿಕ್ಕಜನರು ಆ ವರ್ಗಕ್ಕೆ ಸಹಾಯ ಮಾಡ ಬೇಕು. ವಿಶಿಷ್ಟ ರೀತಿಯಿಂದ ಆಹಾರ ಎಲ್ಲರಲ್ಲಿ ಹಂಚಲಾಗ ಬೇಕು. ಇವುಗಳ ಬಗ್ಗೆ ನೀತಿ ನಿಯಮಗಳಾದವು. ಅದ ರಂತೆ ಲಗ್ನ ವಾಗಿ ಪ್ರಜೋತ್ಪಾದನೆ ಮಾಡಬೇಕು. ಸೃಷ್ಟಿನಿಯಮಗಳು ಎಷ್ಟೇ ಸ್ವಯಂಸಿದ್ಧವಿದ್ದರೂ ಅವುಗಳನ್ನು ಮುರಿದು ಹಾಕಿ ಸಾಮುದಾಯಿಕ ಸಂಘಟನೆಗೆ ಅನುಕೂಲವಾಗುವ ನಿಯಮಗಳಿಗೆ ಪ್ರೋತ್ಸಾಹನ ಕೊಟ್ಟು ಬೆಳೆಸಬೇಕು. ಅದಕ್ಕೆ ವಿರುದ್ಧವಾದ ಸಂಗತಿಗಳನ್ನು ಕಿತ್ತೀ ಒಗೆಯುವಂತೆ ನೀತಿ ನಿಯಮಗಳಾದವು. ಏತರಿಂದ ಸಮಾಜಧಾರಣೆಯಾಗುವದು ಅದಕ್ಕೇನೇ ಮಹತ್ವಕೊಟ್ಟು ಅದನ್ನು ಕಾಪಾಡಲು ನೀತಿ ನಿಯಮಗಳು ಮೊದಲು ಮೊದಲಾದವು. ಮುಂದೆ ಅವುಗಳಿಗೆ ಕಾನೂನಿನ ಸ್ವರೂಪಬಂದಿತು. ಅದರ ವಿರುದ್ಧ ನಡೆದವರಿಗೆ ಶಿಕ್ಷೆಯಾಗುವಂತೆ ರಾಜಶಾಸನ ಬಂದಿತು. ಇಷ್ಟಾದ ಮೇಲೆ ಆ ನಿಯಮಗಳಂತೆ ನಡೆಯಲು ಹಚ್ಚುವಷ್ಟು ಅಧಿಕಾರ ಕೆಲವು ವ್ಯಕ್ತಿಗಳಲ್ಲಿ ಬಂದಿತು. ಆದರೆ ಕಾನೂನು ಮಾಡುವ ಪಂಡಿತರು ಅಂದರೆ ಬ್ರಾಹ್ಮಣರು ಅವುಗಳನ್ನು ಅಮಲಿನಲ್ಲಿ ತರುವವರು ಶಕ್ತಿ ಬಲದಿಂದ ರಾಜರಾದರು. ಹುಟ್ಟಿಸಿದ್ದನ್ನು ಎಲ್ಲ ಕಡೆಗೆ ಹಂಚುವವರು ವೈಶ್ಯರು. ಹುಟ್ಟಿಸುವರು ಶೂದ್ರರು ಹೀಗೆ ವರ್ಣಾಶ್ರಮಗಳುಂಟಾದವು. ಈ ಮಟ್ಟಕ್ಕೆ ಈ ಸಮಾಜ ಸುಧಾರಣೆಯು ಬಂದ ತರುವಾಯ ಕೆಲವು ಕೆಲವು ರೂಢಿಗಳು ಪ್ರಸ್ಥಾಪಿತವಾದವು. ಆ ರೂಢಿಯಂತೆ ನಡೆಯುವ ಸಾಮಾನ್ಯ ಜನರಿಗೆ ಆ ರೂಢಿಯ ದುಷ್ಪರಿಣಾಮಗಳು ಕಾಣುವದು ಶಕ್ಯವಿಲ್ಲ. ಬಂದದ್ದು ಅವರು ಅನುಭವಿಸುತ್ತಲೆ ಇರುವರು. ಎಷ್ಟೇ ತೊಂದರೆಗಳಾದರು ಗತಾನುಗತಿ ಕೊ ಲೋಕಃ| ನ ಲೋಕಃ ಪಾರಮಾರ್ಥಿಕಃ ಎಂಬಂತೆ ಅವರು ನಡೆಯುವರು. ಆದರೆ ಬುದ್ಧಿವಂತರಿಗೆ ಇದು ಸಹನವಾಗದು. ಎಷ್ಟೊ ಸ್ವತಂತ್ರ ಮತ್ತು ಸ್ವಯಂ ಸಿದ್ಧ ಗುಣಗಳನ್ನು ಹತ್ತಿಕ್ಕಿ ಹೊಡೆದು ಲಗ್ನ ಪದ್ಧತಿಯನ್ನು ಪ್ರಸ್ಥಾಪಿತ ಮಾಡಿದರು. ಅದರಿಂದ ಕ್ರಮೇಣ ಬೆಳೆಯುತ್ತ ಹೋದ ದುಷ್ಪರಿಣಾಮಗಳನ್ನು ಹೋಗಲಾಡಿಸಲು ಬುದ್ಧಿವಂತರು ಹೊಸ ನಿಯಮಗಳನ್ನು ಹುಡುಕಿ ತೆಗೆಯುವದರಿಂದ ಹಳೆ ಹೊಸ ತಾಕಲಾಟ ಪ್ರಾರಂಭವಾಯಿತು. ಈ ಹೊಸ ಪದ್ಧತಿ ಅನುಸರಿಸುವವರಿಗೆ ಸುಧಾರಣೆ ಎನಿಸಹತ್ತಿತು ಮತ್ತು ಗತಾನುಗತಿಕರಿಗೆ ಕುಧಾರಣೆ ಅನಿಸಹತ್ತಿತು. ಕೆಲವೊಂದು ದೃಷ್ಟಿಯಿಂದ ಒಳ್ಳೆ ಸಂಸ್ಕಾರವೆಂದು ಹಳೆಯದಕ್ಕೆ ಅಂಟಿಕೊಂಡವರಿಗೆ ಹೊಸದು ಕುಸಂಸ್ಕಾರವೆನಿಸಹತ್ತಿತು. ಹಳೆಯದರಲ್ಲಿಯು ದೋಷಗಳನ್ನು ಕಂಡವರು ಹೊಸದಕ್ಕೆ ಸುಧಾರಣೆ ಎಂದು ಬೆನ್ನು ಹತ್ತುವದೂ ತಿದ್ದುಪಡಿ ಮಾಡುವದೂ ನಡೆಯಿತು. ಒಟ್ಟಾರೆ ಇಬ್ಬರು ಏಕಾಂತ ದೃಷ್ಟಿಕೋನವುಳ್ಳವರೆ, ಆದರೆ ಮೂಲ ವ್ಯತ್ಯಾಸ ಎಲ್ಲೆಂಬುದನ್ನು ಇಬ್ಬರು ಅರಿಯರು. ೭ ಜನ ಕುರುಡರು ಆನೆಯ ಸ್ವರೂಪದ ನಿರ್ಣಯ ಮಾಡಿದ ಕಥೆಯಂತೆ ಎಲ್ಲರ ಹಣೆಬರಹವಾಗಿದೆ.

---

# ವರದಕ್ಷಣೆಯ ಸೊಸಿ

## ( ಏಕಾಂಕ ಸಾಮಾಜಿಕ ನಾಟಕವು )

ಬರೆದವರು : ಡಾ. ಆರ್. ಕೆ. ಹಾನಗಲ್ಲ, ಧಾರವಾಡ.

— ಪಾತ್ರಗಳು —

ಗೋಪಾಳರಾಯರು
ರಂಗಕ್ಕ [ಗೋಪಾಳರಾಯರ ಹೆಂಡತಿ]
ತಮಣಾಚಾರ್ಯ [ಪುರೋಹಿತ]
ಶ್ರೀನಿವಾಸರಾಯರು [ಗೋಪಾಳರಾಯರ ಮಗ]
ಅಂಬಾಬಾಯಿ [ಶ್ರೀನಿವಾಸರಾಯರ ಹೆಂಡತಿ]

ಸ್ಥಳ— ಗೋಪಾಳರಾಯರ ಮನೆ. ಮಧ್ಯಾನ್ಹದ ಪೂಜೆಯ ವೇಳೆ, ಪುರೋಹಿತ ತಮಣಾಚಾರ್ಯರು ಸ್ನಾನಮಾಡಿ ಮಂತ್ರವನ್ನು ಗುನುಗುಟ್ಟುತ್ತ ಗಡಿಬಿಡಿಯಿಂದ ಬರುವರು.

ತಮಣಾಚಾರ್ಯ—ಯಾಕ ರಂಗಕ್ಕs ಅಡಿಗಿ ಕೆಲಸ ಇವತ್ತ ಒಳ್ಳೇ ಸುಸ್ತ ಕಾಣಸ್ತದಲ್ಲ?

ರಂಗಕ್ಕ— ಬಂದಬಿಟ್ರs ಆಚಾರ, ಬರೋ ಹೊತ್ತು ಆಯ್ತು ಅಂತ ನಾ ನೆನಸ್ತಿದ್ದೆ; ಆಯುಷ್ಯ ಮಾತ್ರ ನಿಮಗ ಪೂರ್ಣ ಅದ ನೋಡ್ರಿ!

ತಮಣಾ—ಇರದ ಏನು ರಂಗಕ್ಕs ನಿಮಗ ಆಯುರಾರೋಗ್ಯ ಇದ್ದ ಮ್ಯಾಲೆ,ನಮಗ ಇರಲಿಕ್ಕೇಬೇಕು; ಯಾಕ ಸೊಸಿ ಕಾಣುದುಲ್ಲಾ. ಪಟ್ಟಕ್ಕ ಕೂತಾರೇನು ?

ರಂಗಕ್ಕ—ಎಲ್ಲಿ ಪಟ್ಟ, ಪಟ್ಟಕ್ಕೂತಿಲ್ಲ ಆಟ್ಟದ ಮ್ಯಾಲೆ ಏರ್ಯಾರ. ನೈಮುರದು ಕೆಲಸ ಮಾಡಬೇಕಂದ್ರ ಈಗಿನವರಿಗೆ ಸಿಟ್ಟ ಬರತದ. ಅದರೊಳಗ ಈಕೆಯುನಕ ಕಲ್ತಾಕಿ. ಮೇಲಾಗಿ ವರದಕ್ಷಿಣಿ ಸೊಸಿ, ೨ ತಿಂಗಳ ಹಿಂದ ಚಮಚೆ ಕಳದದ್ದಕ್ಕ ಕೆಲಸ್ತಾಕಿ ಬಿಟ್ಟು ಹೋದಳಲ್ಲಾ, ಆವಾಗಿನಿಂದ ಹತ್ತಿಬಿಟ್ಟದ ನೋಡ್ರಿ ರದ್ದಬದ್ದ ಜಗಳ ಮನಿಯೊಳಗ. ತಮ್ಮ ಮನಿ ಕೆಲಸ ತಾವು ಮಾಡಲಿಕ್ಕೆ ಅಭಿಮಾನ ಯಾಕ್ರಿ ಆಚಾರ. ಏನೋ ಒಬ್ಬಾಕೆ ಇದ್ದೆ, ಇಷ್ಟ್ಯಾಗಿ ಕೆಲಸ್ತಾಕಿನು ಸೋವಿಯೊಳಗ ಸಿಕ್ಕಿದ್ಲು ಅಂತ ಹಚ್ಚಿದ್ದಿ. ಅದು ಐದು ರೂಪಾಯಿ ಉಳಿದ್ರ ತಮಗ ಉಪಯೋಗ ಬೀಳೂದಿಲ್ರಿ. ವರದಕ್ಷಿಣಿ ಸೊಸಿ ಆದ್ರ ಮನಿ ಕೆಲಸ ಮಾಡಬಾರದೇನು ? ಹಾಂಗ ಕರಾರು ಮಾಡಿ ಕೊಟ್ಟ್ಯಾನೇನು ಇವರ ಅಪ್ಪ ನಮಗೆ ವರದಕ್ಷಿಣಿ ?

ಅಂಬಾಬಾಯಿ (ಸೊಸೆ ಅಟ್ಟದಿಂದ ಇಳಿದು ಬಂದು) ಹೀಂಗ ಕರಾರ ಮಾಡಿದ್ರೇನು? ಸೊಸಿ ಬಂದ ಕೂಡ್ಲೆ ನಾವು ಕೆಲಸದಾಕಿನ್ನ ಬಿಡಸವರು. ಎಲ್ಲಾ ಕೆಲಸ ಸೊಸೀನ ಮಾಡ ಬೇಕು ಅಂತ. ಸೊಟ್ಟ ಎರಡು ದುಡ್ಡಿನ ಚಮಚೆದ ಸಲುವಾಗಿ ಕೆಲಸದಾಕಿ ಕೂಡ ಜಗಳಾಡಿ ಬಿಡಿಸಿದ್ದು ನನಗೇನು ತಿಳಿಯುದುಲ್ಲೇನು ? ೩೦೦೦ರೂ ವರದಕ್ಷಿಣಿ ಬಡದು, ಮುಸರಿ ಕಸ, ನೀರು ಒಗಿಯೋಣ ಮಾಡಲಿಕ್ಕೆ ಕೊಟ್ಟಿಲ್ಲ ನಿಮ್ಮ ಮನಿಗೆ. ಬಾಯಿ ಬಿಡಬಾರದು ಅಂತ ೫-೬ ತಿಂಗಳ ತಡಕೊಂಡು ನೋಡಿದೆ. ನಿಮ್ಮ ಉಪದ್ರ ಹೆಚ್ಚs ಆಗಲಿಕ್ಕೆ ಹತ್ತೇದ ಅಗಲಿ ಗಟ್ಟಿಗೆ ಹಚ್ಚೇಬಿಡೋಣ. ನಾನು ಏನು ಬಗಲಾಗ ಸೀರಿ ಇಟ ಕೊಂಡು ಬಂದಿಲ್ಲ, ಚನ್ನಾಗಿ ವಿಚಾರಮಾಡಿ ಮಾತಾಡ್ರಿ.

ರಂಗಕ್ಕ— ಎಷ್ಟು ಮಾತಾಡ್ತೀಯೇ? ಬಂದಿನ್ನು ವರ್ಷ ಆಗಿಲ್ಲಾ, ಇಷ್ಟು ಉದ್ದ ನೀರಿನ ಮಾತ ನಿನಗ. ಬರ್ಲಿ ನಿನ್ನ ಗಂಡ. ಅವರು ಬರ್ಲಿ ಅದು ಏನು ಗಟ್ಟಿಗೆ ಹಚ್ಚತೀಯೋ ಹಚ್ಚಿಬಿಡು. ಇತ್ಲಾಗಿನವರೇನು ಹೆದರತಾರ ಅಂತ ತಿಳಿದೀ ಏನು ?

ತಮಣಾ—ರಂಗಕ್ಕ ಸುಮ್ಮನ ಮಾತ ಬೆಳಸಬಾಡ್ರಿ: ನಿಮ್ಮ ಕಾಲ ಎಲ್ಲಾ ಬದಲಾಗೇದ ಈಗ. ಗಂಡು ಹೆಣ್ಣು ಆಗ್ಯಾವ. ಹೆಣ್ಣು ಗಂಡು ಆಗ್ಯಾವ.

ರಂಗಕ್ಕ—ಏನು ಹೇಳತೀರಿ ಬಿಡ್ರಿ ಆಚಾರs ವರದಕ್ಷಿಣಿ ಇಲ್ಲದ ಈಗ ಯಾರು ಮಾಡಿಕೋತಾರ. ವರದಕ್ಷಿಣಿ ತಂದವ್ರಿಗೆಲ್ಲ ಕೈಗೊಂದು ಕಾಲಿಗೆ ಒಂದು ಆಳು ಇಡಬೇಕಂದ ಯಾರಿಗೆ ಸಾಧ್ಯ ಆಗ್ತದ? ಎಲ್ಲರೂ ಇಂಥವರ ಇದ್ರ, ಜಗತ್ತ ನಡಿಲಿಕ್ಕಿಲ್ಲ. ನನ್ನ ಪಾಲಿಗೆ ಸಿಕ್ಕ್ಯಾಳ ಇಂಥಾಕಿ, ದುಡದು ದುಡದು ಅಂಗೈಯ್ಯಾಗಿನ ಗೆರಿ ಸವದು ಹೋಗ್ಯಾವ. ಮುಪ್ಪಿನ ಕಾಲಕ್ಕ ಸೊಸಿನ್ನ ಮೊಮ್ಮಕ್ಕಳ್ನ ನೋಡಿ ಸಂತೋಷಪಡ

ಬೇಕಂದ್ರ ಇದೆಂಥ ರಾಕ್ಷಸಿ ಗಂಟುಬಿತ್ರಿ ನಮ್ಮ ಪಾಲಿಗೆ! ಏನು ಪಾಪ ಮಾಡಿದ್ದೇನು ಆಚಾರ (ಎಂದು ಅಳಹತ್ತುವಳು).

ಗೋಪಾಳರಾಯ—(ಒಳಗೆ ಬಂದು) ಏನಿದು, ಮನಿಯೊಳಗ, ಸರ್‍ಯೋಮರ್‍ಯೋ; ನಡೆದೇ ಅದ ಅಲ್ಲ ಮತ್ತ, ಹೊರಗಿನಿಂದ ಬ್ಯಾಸತ್ತು ಮನಿಗೆಬಂದು ಒಂದ ಅರಕ್ಷಣ ಅರಾಮ ಕೂತೇವು ಅಂದ್ರ ಇಲ್ಲದ್ಹಾಂಗಾಯ್ತು ನಮ್ಮ ಪಾಲಿಗೆ ಅರ್ದಮದರ್ಾ ದಿವಸ ಆಗಿ ಮುಳಃಮುಳು ಅಳಲಿಕ್ಕೆ ನಿನಗ ತಿಳಿಯೋದಿಲ್ಲ. ಅತ್ತೀಮನಿ ಸೊಸಿಯಾಗಿದಿ ನೀನ!

ರಂಗಕ್ಕ—ಹೌದು ನೋಡ್ರಿ ಇದೇನು ಅಂದ್ರಲ್ಲ, ಅಕ್ಷರ ಶಹಃ ಖರೇ ಅದ. ಅತ್ತಿನ್ನ ಲಗೂನ ಕಳಕೊಂಡಾಳ ಅಂತ, ನನಗ ಚಲೋ ಅತ್ತಿನ್ನ ಹುಡಕಿ ಗಂಟುಹಾಕೀರಿ. ಆಕೇನೊ ವರದಕ್ಷಿಣಿ ಸೊಸಿ ಅಂತ, ೩೦೦೦ ರೂ. ಝುಣ ಝುಣ ಝುಣ ಎಣಿಸಿ,ಗಂಡನ್ನsಸೇವಾ ಮಾದಲಿಕ್ಕೆ ನಮ್ಮ ಎಲ್ಲಾರ್ನsಖರೀದಿ ತೊಗೊಂಡಾಳಂತ ನಿಮ್ಮ ಸೊಸಿ,ಒಂದು ತೂಗಮಂಚ ಮಾಡ ಸರಿ. ಆಕಿನ್ನ ಕೂಡಿಸಿ ದಿನಾ ತೂಗೋಣಂತ ಒಬ್ಬರಿಲ್ಲಾ ಒಬ್ರು. ಹೆಣ್ತಿನ್ನ ತಲಿಗೆ ಏರಿಸೋದಂದ್ರ. ಎಷ್ಟದು, ಎಲ್ಲಿದ್ದಾನವ ಶೀನು ಇನ್ನೂ ಬರಲಿಲ್ಲೇನು.

ಗೋಪಾಳ—ಆದದ್ದರ ಏನು ಆಯ್ತು ಈಗ. ಅಂತಾಳರ ಏನು?

ರಂಗಕ್ಕ—ಅಂಬೋದೇನು, ಆವರಪ್ಪ ೩೦೦೦ರೂ. ವರ ದಕ್ಷಿಣಿ ಬಡದಾನಂತ, ನನ್ನ ದಂಡಸ್ತಿರ್‍ಯಾಕs ಅಂತಾಳ. ಪುಸ್ತಕ ಮಾರಿಗೆ ಹಿಡಕೊಂಡು ಖುರ್ಚಿ ಮ್ಯಾಲ ಕೂತರ, ಇಲ್ಲಿ ಮಾಡ ವರು ಯಾರು? ಇಡೆಲ್ಲ ಅವನ ಸವಲತ್ತು,ಸಿರಸ್ತಾರಕಿ ಆಯ್ತು ತನ್ನ ಕಚೇರಿ ಆಯ್ತು. ಮನಿಯೊಳಗಿನ ಈ ನ್ಯಾಯ ತಿದ್ದ ವರು ಯೂರು?

ತಮಣಾ— ಶ್ರೀನಿವಾಸರಾಯರಿಗೆ ಸಿರಸ್ತಾ್ಕ ಆಗೇದ ಏನು ಈಗ? ನನಗ ಗೊತ್ತsಇಲ್ಲಾ.

ರಂಗಕ್ಕ—ಆಗಿ ಮೂರು ತಿಂಗಳಾಯ್ತುಲ್ಲಾ.

ತಮಣಾ—ಬರೋಬರಿ ಆಯ್ತು ಬಡ್ರಿ."ಸಿರಸ್ಥದಾರಾ"ಆದ ಮೇಲೆ ಮನಿಯೊಳಗ ಅದರಂತೆ ಇಡಲಿಕ್ಕೆ ಬೇಕಲ್ಲ ವ್ಯವಸ್ಥಾ. ಅಂಬಾಬಾಯರಿಗೆ ಈ ಅಧಿಕಾರವಾಣಿ ಬಂದದ್ದು ಯೋಗ್ಯ ಆಯ್ತು.

ಅಂಬಾಬಾಯಿ— ಯಾಕ ಆಚಾರs ಸಿರಸ್ಥದಾರ್‍ರಂದ್ರ ಹೇಣ್ತಿನ್ನ ತಲೀ ಮೇಲೆ ಕೂಡ್ರಿಸಿಕೊಂಡವರು ಅಂತ ಅರ್ಥ ಮಾಡಿ ಹೇಳತೀರೇನು ಅತ್ಯಾ ಅವರಿಗೆ? ಅತ್ಯಾ ಆವರ ಅನ್ನ ಚಲೋ ಮೈಗೆ ಹತ್ತೇದಲ್ಲಾ. ನಿಮಗ್ಯಾಕ್ಬೇಕು ಹೆಚ್ಚಿನ ಕಾರ ಭಾರ. ಅವರೂ ಅಷ್ಟ; ನಾನೂ ಅಷ್ಟ ನಿಮಗ.

ತಮಣಾ—ಖರೇ ಬಿಡ್ರಿ, ನಮಗ್ಯಾಕಬೇಕು ನಿಮ್ಮಮನಿ ಕಾರಭಾರ. ನಾವಾಯ್ತು ನಮ್ಮ ದೇವರ ಪೆಟಗಿಯಾಯ್ತು.

ಗೋಪಾಳರಾಯ—ಹಾಂಗ ಹಿರೇರಿಗೆ ಕವಕ್ನ ಅನಬಾರ ದವಾ ಅಂಬಾಬಾಯಿ. ಏನದು, ನಿನ್ನ ಸಿಟ್ಟರ ಏನು ಹೇಳು? ದಿನಾ ಮನಿಯೊಳ ನೆಟ್ಟಗಲ್ಲಿದು ರಸಕಸಿ, ಕಲ್ತಾಕಿ ತಿಳುವಳಿಕೆಯಿಂದ ಬಾಳ್ವೆ ಮಾಡಿಕೊಂಡು ಹೋದಾಳು ಅಂತ ೮–೧೦ ಕನ್ಯಾ ಬಿಟ್ಟು ನಿನ್ನ ಮದುವಿ ಮಾಡ್ದೆ. ಇದೇನು ನಡಿಸಿದೆವಾ ಮನಿಯೊಳಗ?

ಅಂಬಾಬಾಯಿ—ನನ್ನ ಕಡಿಗೆ ಏನು ತಪ್ಪಿಲ್ಲ. ನನಗ ಕೆಲಸ ಭಗಸಿ ಮಾಡಿ ರೂಢಿ ಇಲ್ಲಾ. ತಾಯಿ ಸತ್ತ ಮಗಳು ಅಂತ,ನಮ್ಮ ಅಪ್ಪ ಪ್ರೀತಿಯಿಂದ ನನ್ನ ಜೋಪಾನಮಾಡ್ಯಾನ. ಮನಿಯೊಳಗ ಮಲತಾಯಿ ಕಾಟ ತಡೀಲಾರ್ದ ಇದ್ದಬಿದ್ದದ್ದೆಲ್ಲ ಮಾರಿ,ಹೆಂಡರುಮಕ್ಕಳಿಗೆ ಖೊಟ್ಟಿಯಾಗಿ ಚಲೋ ಶ್ರೀಮಂತರ ಮನೀ, ಮಗಳು ಸುಖಬಡತಾಳ ಅಂತ ೩೦೦೦ರೂ.ವರದಕ್ಷಿಣಿ ಕೊಟ್ಟು ನಿಮ್ಮ ಮನಿಗೆ ಕೊಟ್ಟಾನ. ಎಷ್ಟು ಸುಖಬಡಸ್ತಾರ ನೋಡ್ರಿ ನಿಮ್ಮನಿಯುವರು.

ರಂಗಕ್ಕ—ಮಾತಿಗೊಮ್ಮೆ ೩೦೦೦ರೂ. ವರದಕ್ಷಿಣಿ ಕೊಟ್ಟಾನ, ಕೊಟ್ಟಾನ ಅಂತೀದಿ ಯಾರ ಉಪಕಾರಕ್ಕ ಕೊಟ್ಟಾನ, ೨೦ ತೊಲಿ ಭಂಗಾರ ಹಾಕೀವಿ, ಬಿ. ಎ. ತನಕ ಹುಡಗ್ಗ ಕಲಿಸೀವಿ, ಚೆಲೋ ನೌಕರೀ ಅದ, ೧೦೦೦ರೂ. ಉತ್ಪನ್ನ ಅದ. ಇಂಥ ವರ ನಿನಗ ಮಾರಿ ಮಾರಿ ಕೆರಕೊಂಡ್ರು ಸಿಗತಿದ್ದಿಲ್ಲ ಏನೋ ನಿನ್ನ ಪುಣ್ಯ ಅಂತ ತಿಳಕೋ.

ಅಂಬಾಬಾಯಿ—ಯಾರಿಗಿಟ್ಟೇರಿ ೨೦ ತೊಲಿ ಭಂಗಾರ? ಬ್ಯಾಂಕಿಗಿಟ್ಟೇರೋ ಪ್ಯಾಟಿಗಿಟ್ಟೇರೋ ಟ್ರಂಕಿಗಿಟ್ಟೇರೋನೋಡಿ ಕೊಳ್ರಿ. ಮನೀಗೆ ಬಂದು ೮ ದಿವಸ ಏನು ಬಿಡಲಿಲ್ಲ ನನ್ನ ಮೈ ಮ್ಯಾಲೆ, ಬಿ. ಎ. ತನಕ ಮಗ್ಗ ಕಲಿಸೀನಿ ಅಂತೀರಿ. ಏನು ದೊಡ್ಡ ಮಾತು, ನಮ್ಮ ಅಪ್ಪ ವಕೀಲಿ ಕಾರಕೂನಿಕಿ ಮಾಡಿ, ಮಂದಿ ಮನಿಗೆ ಹೋಗೋ ಹೆಣಮಗಳು ನಾನು, ನನಗ ಕಲಶ್ಯಾನ ಇಂಟರ ಆಗೋತನಕ. ಬಿ. ಎ. ಆಗೋತನಕ ಲಗ್ನನ ಬ್ಯಾಡ ಅಂತ ಮಾಡಿದ್ವಿ. ಮನಿಯೊಳಗ ಮಲತಾಯಿ ತ್ರಾಸ ಬಹಳ ಆಗಿ,ಚಲೋ ಮನಿ ನೋಡಿ ಕೊಡತೀನಿ ಅಲ್ಲೇ ಕಲ್ತು ಬಿ. ಎ. ಆಗು ಅಂತ ಹೇಳಿ ನಿಮ್ಮ ಮನಿಗೆ ಕೊಟ್ಟ,ಕಲಿಸಲಿಕ್ಕೆ ಹತ್ತೀರಿ ನೋಡ್ರಿ ಸೊಸೆಗೆ ಕಾಲೇಜ.

ರಂಗಕ್ಕ—ಕಾಲೇಜ ಕಲಿಯೋ ಸಸಿ ಏನು ನೀನು! ನನಗ

ಗೊತ್ತs ಇಲ್ಲ ಬಿಡು. ಇದೆಲ್ಲ ಮಾತ ಆದದ್ದು!! ನಮ್ಮ ಮನೀ ಕಾಲೇಜದ ಹಾಸ್ಟೆಲ್ ಅಂತ ತಿಳಿದೀ ಏನು ಅದಕ್ಕ ಫೀ ಬೀಳದಲ್ಲ ಮತ್ತ ?

ಅಂಬಾಬಾಯಿ—ಕೊಟ್ಟದ ಒಮ್ಮಿಗೇಲೆ ಆಗಾವ ೩೦೦೦ ರೂಪಾಯಿ.

ರಂಗಕ್ಕ—ಛೀ ! ಛೀ!! ಛೀ!!! ನಿನ್ನ ಮೂರು ಸಾವಿರ ರೂಪಾಯಿ ಋಣs ಬಹಳ ಆಯ್ತು ಬಿಡು ನಮ್ಮಮೇಲೆ, ಬಿ.ಎ. ಆಗೋತನಕಾ ಕಲಸಬೇಕು; ಹೊಟ್ಟಿ ಬಟ್ಟಿ ಖರ್ಚ ಆಗಬೇಕು; ನಿನ್ನ ಸೇವಾ ಮಾಡೋ ಆಳಿನ ಪಗಾರ ಆಗಬೇಕು, ಮೈಮ್ಯಾಲೆ ೨೦ ತೊಲಿ ಭಂಗಾರ ಆಗಬೇಕು

ಅಂಬಾಬಾಯಿ—ಸೊನಿನ್ನ ಮಕ್ಕಳಂತೆ ನೋಡುವವರಿಗೆ ಇವು ಯಾವು ಭಾರಲ್ಲ. ನೀಚ ಸ್ವಾರ್ಥ ಇಟಗೊಂಡು ಮನಿ ತುಂಬಬೇಕು ಅಂಬವರಿಗೆ ಎಲ್ಲಾ ವಿಪರೀತನ ಕಾಣಸ್ತಾವ.

ರಂಗಕ್ಕ—ಅದೇನವಾ ನೀಚಸ್ವಾರ್ಥ ಸಾಧಿಸಿಕೊಂಡದ್ದು. ನಿನ್ನ ಮ್ಯಾಲೆ ?

ಅಂಬಾಬಾಯಿ—ಸಾಧಿಸಿಲ್ಲೇನು ಈಗ. ಭಂಗಾರಕ್ಕ ಭಂಗಾರಾನೂ ಬಂತು, ದುಡಿಸ್ಕೊಳ್ಳಿಕ್ಕೆ ಆಳು ಆಯ್ತು ಮ್ಯಾಲೆ ೩೦೦೦ ರೂ. ರೊಕ್ಕ ಬಂತು. ಇದಕ್ಕೂ ಹೆಚ್ಚಿಗಿ ಏನು ಸಾಧಿಸಬೇಕಿನ್ನ ?

ರಂಗಕ್ಕ— ಚಲೋ ಮಾತಾಡಲಿಕ್ಕೆ ಕಲಶ್ಯಾರ ನಿಮ್ಮಪ್ಪ ನಿಮ್ಮವ್ವ ಮನಿಯೊಳಗs.

ಗೋಪಾಳ—ಏ ಇರ್ಲಿ ಬಿಡು. ನಿನಗ ಜಗಳ ಸಿಕ್ಕರ ಊಟ ಬ್ಯಾಡ, ಉಡಿಗಿ ಬ್ಯಾಡ ಏತರದೂ ಖಬರ ಇರೊದುಲ್ಲ. ಪಾಪ ಆಚಾರು ಊಟ ಮಾಡುವರು, ಅಡಿಗಿ ಎಲ್ಲಿಗೆ ಬಂತು ನೋಡು; ಇದೇನು ನ್ಯಾಯ ಸುಸೂತ್ರ ಮುಗಿಯೋದಲ್ಲ. ಆಕೀ ಗಂಡನೂ ಬರಲಿ, ಅವರ ಅಪ್ಪನ್ನೂ ಕರಿಸಿ, ಏನು ಮಾಡೋದು ಎಲ್ಲಾ ನಾ ಮಾಡ್ತೇನಿ. ಸುಮ್ಮನ ನೀ ಆಕಿ ಬಾಯ್ಗೆ ಹತ್ತ ಬ್ಯಾಡ. ಜೀಡಿ ಬಯಸಿ ಲಗ್ನ ಮಾಡಿದ್ರ ಚಲೋ ಕೂಡಿದ್ಲು ನಮ್ಮ ಪಾಲಿಗೆ. ಅಡಿಗಿ ಊಟಾ ತನಕಾ ಮುಗಿಲಿ, ಆದಿತ್ಯವಾರ ಇವತ್ತ, ಅವರಪ್ಪನು ಬಂದ್ರು ಬರೋ ಸಂಭವ ಅದ ಕೇಳೋಣಂತ.

ಅಂಬಾಬಾಯಿ—ಅಪ್ಪನ್ನ ಏನು ಕೇಳೋದು, ಇದೇನು ಇವತ್ತ ನಡೆದದ ? ಬಂದಾಗಿನಿಂದ ಹಣ್ಣಾಗಿ ನಡೆದs ಅದ. "ನಿನ್ನ ನಸೀಬವಾ ಏನು ಮಾಡ್ಲಿ ನಾನು" ಅಂತಾನ. ನಾನ ನನ್ನ ನಸೀಬ ಅಂತ, ಬಾಯಿ ಮುಚ್ಚಿಕೊಂಡು ಕೂತ್ರ. ಬಿ. ಎ. ತನಕ ಕಲ್ತ ಹುಡಿಗನ್ನ ಭಾವಿಪಾಲು ಮಾಡಿದರಲ್ಲ, ನರಸಿಂಗ ರಾಯರ ಮನಿಯವರು. ಅದರಂತೆ ನನ್ನದೂ ಹಾಡು ಆಗ್ತದ ಅಂತ ತಿಳಿದಹೋಗೇದ ನನಗ.

ರಂಗಕ್ಕ—ಭಾವಿ ಕೆರಿ ಪಾಲು ಆಗೋಕೆ ನೀನು? ಯಾರ್ನರ ಕಳಿಸುವಾಕೆ ಭಾವಿ ಕೆರಿಗೆ ಪಾಪ. ಅದು ಬಾಯ್ಯಿಲ್ದ ಸಂಪನ್ನ ಹುಡಿಗಿ, ಅದರ ಸಾಕ್ಷಿ ಏನು ತೊಗೋತಿಯೆ ನೀನು ?

ಅಂಬಾಬಾಯಿ—ನಾನು ಅದನ್ನ ಹೇಳ್ತೇನಿ. ಅಂಥಾ ಸಂಪನ್ನ ಬಾಯ್ಯಿಲ್ದ ಹುಡಗಿ ಗತೀಬಾಕೆ ಸಂಪನ್ನ ಹುಡುಗರು ಬಾಯಿ ಮುಚ್ಚಿಕೊಂಡು ಕೂತು, ತಂದುಕೊ ಬಾರದು ಅಂತ. ಬಾಯಿ ಮುಚಿಗೊಂಡು ಕೂತು, ಭಾವಿ ಬಿದ್ರ, ಭಾವಿ ಹೇಳಬೇಕೇನು ಇವರ ಸಂಪನ್ನಗಿರಿ? ಇದ್ದು ಖರೇತನಕ್ಕ ಬಡದಾಡಿ ಅಡ್ಡಹಾದೀಯವರ್ನ ಹಾದಿಗೆ ತಂದ್ರ, ಇವರು ಕಲ್ತದ್ದಕ್ಕೂ ಸಾರ್ಥಕ; ಹುಟ್ಟಿದ ಮನಿಗೂ ಕೀರ್ತಿ, ಕೊಟ್ಟ ಮನೀಗೂ ಕೀರ್ತಿ.

ರಂಗಕ್ಕ—ಇಷ್ಟು ಪುರಾಣ ಹೇಳುವಾಕಿ ನಿನ್ನ ಹಾದಿ ಹೀಂಗs ಏನು ಅತ್ತಿ-ಮಾವನ ಸಂಗತೀಲೆ ಬಡಿದಾಡೋದು ?

ಗೋಪಾಳ—ಏ ಸುಮ್ಮನಾಗತೀಯೋ ಇಲ್ಲೊ ನೀನು. ನೀನು ಬರ್ಲಿ, ಅವರಪ್ಪನೂ ಬರ್ಲಿ ನಾ ಎಲ್ಲಾ ವಿಚಾರಮಾಡ್ತೀನಿ ಅಂದ್ರ, ಮತ್ತs ಮಾತ ಬೆಳಸ್ತಿಯಲ್ಲ ನೀನು, ಏನಿರೋ ಕೃಷ್ಣ ಮೂಲ ಅನರ್ಥ ನಿನ್ನ ಕಡಿಗೆ ಅದ ನೋಡು!

ರಂಗಕ್ಕ—ನಿಮಗೂ ಬ್ಯಾಸರ ಆದೆ ಅನ್ನರಿ ನಾನು ? ದೇವರು ನನ್ನದs ಕಣ್ಣು ಮುಚ್ಚಿದರ ಎಲ್ಲಾರಿಗೂ ಸುಸೂತ್ರ ಆಗತದ.

ಗೋಪಾಳ—ಹಾಂಗಲ್ಲ, ಆಚಾರ ಬಂದು ತಾಸಾಯ್ತು. ಬರೇ ಹೀಂಗ ಜಗಳಾಡುತ್ತಾ ಕೂತರ ಅವರೇನು ಉಪಾಸ, ಹೋಗಬೇಕೇನು ಮನಿಗೆ ?

ರಂಗಕ್ಕ—ಉಪಾಸ ಯಾಕ ಹೋಗ್ತಾರ, ಅನ್ನ ಆಗೇದ ಸಾರು ಆಗೇದ, ನೈವೇದ್ಯ ಮಾಡ್ಲಿ ಊಟ ಮಾಡ್ರಿ ಎಲ್ಲಾರು. ನಾ ಇರುತನಕ ಉಪಾಸ ವನವಾಸ ಯಾಕ.

ಗೋಪಾಳ—ಅಷ್ಟುಮಾಡು ಮಹಾರಾಯಳs. ಊಟಾ ಮಾಡಿ ಮತ್ತ ಜಗಳಾಡಿರಂತ, ಆಕೆರ ಎಲ್ಲಿಂದಾದ್ರು ಬರಬೇಕಾಗಿಲ್ಲ. ನೀನರ ಬೆರಬೇಕಾಗಿಲ್ಲ. ನಿದಾನದಿಂದ ನಡೀಲಿ ನಿಮ್ಮ ಜಗಳದ ಪ್ರ್ಯಾಕ್ಟೀಸ, ಉದ್ರಿಯನಕಾ ಚಲೋ ಸಿಕ್ಕದಲ್ಲ ನಿನಗ ?

ರಂಗಕ್ಕ—ಸಂತೋಷ ಆಗೇದಿಲ್ಲೊ ನಿಮಗ, ಚಲೋ ಉದ್ರಿ ಹುಡಿಕಿಕೊಟ್ಟು ಪುಣ್ಯಾ ಕಟಗೊಂಡೀರಿ. ಏಳ್ರಿ ಇನ್ನ ಊಟಾ ಮಾಡಿ ನೋಡಿರಂತ ಮತ್ತ ಮಜ್ಯಾ. ಆಚಾರ ನೇವಿದ್ಯ ಬಡಿಸೀಸಿ ನೈವೇದ್ಯ ಮಾಡಿ ಊಟ ಮಾಡ್ರಿ ಇದಕ್ಕೇನು

ಮೊದಲಿಲ್ಲಾ, ಕಡಿ ಇಲ್ಲಾ, ಹೀಂಗ ನಡಿಯೋದ.

ತಮಣ್ಣಾ—ಆಗಲಿ, (ಎಂದು ನೈವೇದ್ಯಮಾಡಿ ಊಟಕ್ಕೆ ಕೂಡ್ರುವರು.)

ಗೋಪಾಳ—ಜಗಳದೊಳಗ ಅಡ್ಗಿ ಕೆಟ್ಟದೇನೋ ಅಂತ ಮಾಡಿದ್ದೆ, ಸಾರು ಒಳೆ ಉತ್ತಮಾಗೇದಲ್ಲಾ !

ರಂಗಕ್ಕ—ಸಾಕು ನಿಮ್ಮ ವರ್ಣನಾ. ಏನು ಇವತ್ತ ಹೊಸದಾಗಿ ಮಾಡ್ತೇನೆ ನಾನು ಅಡಗೀನ ?

ಗೋಪಾಳ—ಅಂಬಾಬಾಯಿಗೂ ಎಲಿ ಹಾಕಿಬಿಡಲ್ಲ.

ರಂಗಕ್ಕ—ಬರತಾಳೋ ಇಲ್ಲೋ ಅಟ್ಟಾಬಿಟ್ಟು, ಕರಿರಿ ನೀವ.

ಗೋಪಾಳ—ಅಟ್ಟಕ್ಕೇರಿದಾಕಿನ್ನ ಕೆಳಗ ಇಳಿಸೋದು ಅನಕಾ ನಿನ್ನ ಕಡಿಂದ ಆಗಲಲ್ಲಾ ಅನ್ನು.

ರಂಗಕ್ಕ—ಗಂಡ ಬಂದ ಮ್ಯಾಲೆ ತಾನs ಇಳಿತಾಳ.

ಗೋಪಾಳ—ಅಂಬಾಬಾಯಿ ಊಟಕ್ಕ ಕೂತಬಿಡ ಬಾರವಾ ನೀನು,ಸೀನು ಅನಕಾ ಊಟಕ್ಕ ಹೋಗ್ಯಾನ ಸುಮ್ನ ಯಾಕ ಕೂಡತೀದಿ.

ಅಂಬಾಬಾಯಿ—ನಾ ಏನು ಈಗ ಉಂಬುದುಲ್ಲಾ;ಅವರೂ ಬರ್ಲಿ ಆದು ಏನು ನಿರ್ಣಯ ಹೇಳತಾರೋ ಹೇಳಿದ ಮೇಲೆ ಉಂಬೋಣಂತ.

ಗೋಪಾಳ—ಹಾಗೆಲ್ಲ ಊಟಾಬಿಟ್ಟು ನಿರ್ಣಯಕ್ಕ ಹಚ್ಚೊ ವಿಷಯುನ ಅಲ್ಲವಾ ಇವು, ಅತ್ತಿ ಸಸಿ ಜಗಳ; ಹಿಂಗ ನಡಿಯೋವ, ಸುಮ್ಮನ ನನ್ನ ಮಾತು ಕೇಳಿ ಊಟ ಮಾಡು. ಬಂದ ಮೇಲೆ ನಾ ಎಲ್ಲಾ ನಿರ್ಣಯ ಮಾಡ್ತೆನಿ. ಗುಡ್ಡದ್ಹಾಂಗ ನಾ ಇರಲಿಕ್ಕೆ ನೀ ಎಲ್ಲಾ ಹಿಂಗ ಮಾಡೋದು ಯೋಗ್ಯ ಅಲ್ಲ ನೋಡಿದು.

ಅಂಬಾಬಾಯಿ— ಹಾಂಗs ಮಾಡೀರಂತ ನೀವನಕಾ ಊಟಾ ಮಾಡ್ರಿ, ಅತ್ತ್ಯಾ ಅವರ ಸಂಗತೀಲೆ ಕೂಡತೇನಿ ನಾನು.

ಗೋಪಾಳ—ಅಷ್ಟು ಮಾಡವಾ ಪುಣ್ಯಾ ಕಟಕೊಂಡು (ಎಂದು ಊಟ ಮಾಡುವರು. ಎಲ್ಲರದೂ ಊಟವಾಗುವದು)

ತಮಣ್ಣಾ—ಬರತೇನಿ ರಾಯರ ನಾನು.

ಗೋಪಾಳ— ಆಗಲಿ ಎಲಿಅಡಿಕಿ ತೊಗೊಂಡ್ರಲ್ಲ.

ತಮಣ್ಣಾ—ಎಲಿಯಡಿಕಿ ತೊಗೊಂಡೇನಿ. ಬರತೇನೀ (ಎಂದು ಹೊರಡುವನು).

ಗೋಪಾಳ—ಓಹೊ. ದಕ್ಷಿಣಿ ಕೊಟ್ಟಿಲ್ಲಲ್ಲ, ಏನು ಈ ನ್ಯಾಯುದಾಗ ತಲೀನ ಷವ ಉಳಿದಿಲ್ಲ ಆಚಾರ; ತೊಗೊಳ್ರಿ ದಕ್ಷಿಣಿ. (ಕೊಡುವರು ಆಚಾರ್ಯರು ಹೋಗುವರು. ಊಟದ ನಂತರ ಎಲ್ಲರೂ ಬಿಗುವಿನಲ್ಲಿಯೇ ಕುಳಿತಿರುವರು. ಸೀನು ಬರುವನು).

ಸೀನು—ಯಾಕೋ ಒಳ್ಳೇ ಸ್ತಬ್ಧ ಕಾಣಸ್ತದಲ್ಲಾ ಮನಿ ಯೊಳಗ ಮುಂಗಾರಿ ಮಳಿ ಹೊಡದು ನಿಂತ್ಹಾಂಗ.

ರಂಗಕ್ಕ—ಮುಂಗಾರಿ ಮಳಿ ಹೊಡ್ತ ಬೇಕಾಯಿತು. ನಿನ್ನ ಹೇಣ್ತಿ ಬಾಯಿ ಮುಂದ,ತುಟಿಗೆ ತುಟಿ ಹೊಂದುದುಲ್ಲಾ ಬಾಯಿಗೆ ಬಾಯಿ ಹೊಂದುದಿಲ್ಲ. ಅಳ್ಳುಹುರದ್ಹಾಂಗ ಮಾತಾಡ ತಾಳ ಒಬ್ಬರದರ ಹೆದರಿಕಿ ಆದನ ಈಕಿಗೆ, ೩೦೦೦ ರೂ. ವರ ದಕ್ಷಿಣಿ ಬಡದಾಳಂತ. ನಾ ಯಾಕ ದುಡೀಲಿ ಅಂತಾಳ, ಕೆಟ್ಟ ದಿವಸ ನೈವ್ಯಾಲೆ ವಸ್ತ ಬ್ಯಾಡಾ ಅಂತ ಟ್ರಂಕಿಗೆ ಹಾಕಿದ್ದಕ್ಕ ಏನೋ ಒಂದು ವಿಪರೀತನ ತಿಳಕೊಂಡು ಸಿಕ್ಕಹಾಂಗ ಬಾಯ್ಬಿಡ ಲಿಕ್ಕೆ ಸುರುವು ಮಾಡ್ಯಾಳ·ಹ್ಯಾಂಗ ಬಗಿಹರಿಸ್ತೀದಿ ಬಗಿಹರಿಸು

ಸೀನು— ನಾ ಏನು ಬಗಿಹರಿಸೋದು ದೇವರs ಬಗಿಹರಿ ಸ್ಯಾನ ನಾಳಿನ ನಾಲ್ಕರ ಗಾಡಿಗ ಆಕಿ ಭಂಗಾರ ಆಕಿಗೆ ಕೊಟ್ಟು ಕಳಿಸಿಬಿಡೋಣ ಬೆಳಗಾಂವಿಗೆ—

ರಂಗಕ್ಕ—ಬೆಳಗಾಂವಿಗೆ ಯಾರ ಕಡೆಗೆ ಕಳಸ್ತಿಯೋ.

ಸೀನು—ಆಕಿ ಗಂಡನ ಕಡೆಗೆ—

ರಂಗಕ್ಕ—ಏನು ನಿನ್ನ ಕವಡಕಂಟಕ ಮಾತು ನನಗ ತಿಳಿವಲ್ತು 'ಬಿಡು.

ಸೀನು—ಇಷ್ಟು ತಿಳಿವಲ್ತೇನವಾ ನಿನಗs ಬೆಳಗಾಂವಿಗೆ ನನಗ ವರ್ಗ ಆಯ್ತು. ನಿನ್ನೇ ಆರ್ಡರ ಬಂದಿತ್ತಂತ ಸಾಹೇಬರು ಇವತ್ತಊಟಕ್ಕ ಕರದು ಸುದ್ದಿ ಹೇಳಬೇಕು ಅಂತ ಊಟ ಆದ ಮೇಲೆ ಆರ್ಡರ ಕೊಟ್ರರು.

ರಂಗಕ್ಕ—ಖರೇ ಏನೋ ಸೀನು.

ಸೀನು—ಖರೇನವಾ ಸುಳ್ಳ್ಯಾಕ ಹೇಳಲಿ.

ಗೋಪಾಳ—ನಾಳೇ ಹೋಗಬೇಕೇನು ?

ಸೀನು—ಹೌದು, ನಾಡದು ಚಾರ್ಜು ತೊಗೊಳ್ಳಿಕ್ಕೇ ಬೇಕು. ಅರ್ಜಂಟ ವರ್ಗಾವರ್ಗಿ ಆಗೇದ.

ಗೋಪಾಳ—ಅಂಬಾಬಾಯಿನ್ನ ಕರಕೊಂಡೇ ಹೋಗಿ ಬಿಡತೀದಿ.

ಸೀನು—ಅಷ್ಟ ಮಾಡೋದ ಯೋಗ್ಯ, ಮುಂಚಿನ ಸಿರಸ್ತಾರರ ಬಂಗ್ಲೆ ಖಾಲೀನ ಆದಅಂತ,ಇಲ್ಯರ ಏನು ಸುಖ ಆದ. ಸುಮ್ಮನ ದಿನಾವಂದಕು ನ್ಯಾಯ. ಆಕಿಗರ ಸುಖ ಇಲ್ಲ. ನಿಮಗರ ಸುಖ ಇಲ್ಲ.

ಗೋಪಾಳ—ಅದರದೇನು ಬಿಡು. ನಡದಿರತೆದs ಅಲ್ಲಿ ಅನುಕೂಲ ನೋಡಕೊ. ಕೇಳಿಸ್ತಿಲ್ಲವಾ ಅಂಬಾಬಾಯಿ.

ಅಂಬಾಬಾಯಿ—ಕೇಳಿಸ್ತಲ್ಲ ಇಲ್ಲೇ ಇದ್ದೀನಿ.

ಗೋಪಾಳ—ಸಂಗತೀಲೆ ಶ್ಯಾಮನ್ನ ಕರಕೊಂಡುಹೋಗಿ ಬಿಡ್ರಿ.

ಶೀನು—ನಾನು ಅಷ್ಟಮಾಡಬೇಕು ಅಂತ ಮಾಡೀನಿ.

ರಂಗಕ್ಕ—ಮಾಡಿಕೊಂಡು ಹೋಗೋದು ಅದೀತಿಲ್ಲವಾ ಮತ್ತ, ಅಲ್ಲೂ ನಾ ವರದಕ್ಷಿಣೆ ಸೊಸಿ ಅಂತ ಕೂಡ್ಬ್ಯಾಡ.

ಅಂಬಾಬಾಯಿ—ನಿಮಗ ವರದಕ್ಷಿಣೆ ಸೊಸಿ ನಾನು ಅವರಿಗೆ ಧರ್ಮ ಪತ್ನಿ.

ರಂಗಕ್ಕ—ಸಂತೋಷ ಆಯ್ತು ಬಿಡು ನಮ್ಮವ್ವ! ಎತ್ತ ಲಾಗರ ಗಂಡಾ ಹೆಣ್ತಿ ನೆಟ್ಟಗಿರ್ರಿ.

೩೦-೧೨-೫೮ರಂದು ಧಾರವಾಡ ರೇಡಿಯೋ ಸ್ಟೇಶನ್‌ದಿಂದ ಮತ್ತು ೧೨-೪-೫೯ ರಂದು ಮದ್ರಾಸ ಸ್ಟೇಶನ್ನದಿಂದ ಇದುಪ್ರಸಿದ್ಧಿಸಲ್ಪಟ್ಟದೆ.

---

##  ಭೂಮಿತಾಯ ಬಯಕೆ 

ಚಂದ್ರ ಛಾಯಕೆ ಸೃಷ್ಟಿ ಚಲುವಿಂ
　　ದೊಗೆಯುತಿಹುದೈ ಶಾಂತಿಯು !
ಶುಭ್ರ ಮನವನು ಪಡೆದು ಜೀವನ
　　ಸೌಖ್ಯದಿರಿಸುವ ಕಾಂತಿಯು !!
ಬುವಿಯ ಮಾತೆಯ ಬಯಕೆ ಅರಳಿದೆ
　　ಎರೆಯೆ ಪರಿಮಳ ಸುತ್ತಲು !
ಬಾಳುತಿರುತಿಹ ಮನುಜರಾತ್ಮದೆ
　　ಐಕ್ಯ ಬೀಜವ ಬಿತ್ತಲು !!
ಹಮ್ಮು ಬಿಮ್ಮುಗಳಳಿಯ ಬನ್ನಿರಿ!
　　ಮೋಸ ವಂಚನೆ ತುಳಿಯಲೇಳಿರಿ !
ಜಾತಿ ಮತ್ಸರ ದೂರ ನೂಕಿರಿ
　　ನನ್ನ ಮಾತನು ಕೇಳಿ ಕುವರಿರ !
ಎಂದು ಕರೆಯುತ ಲಾಲಿಗೈವಳು
　　ಇರುಳಿನಿಂದೆಚ್ಚರಿಸಲು !
ಐಕ್ಯ ಬೀಜವ ಬಿತ್ತಲು !!
　　ಪ್ರೀತಿಯೇ ಬದುಕಿಂಗೆ ದಾರಿಯು
ಸಮತೆಯೇ ಸುಖಸಾಧನ !
　　ರೀತಿ ನೀತಿಗಳಲ್ಲಿ ನೈಜವು
ಅಡಗಿರಲು ನವ ಜೀವನ !
　　ಒಂದೇ ತಾಯಿಯ ಬಸುರಿನಿಂದಲಿ
ಜನಿಸಿ ಬಂದವರೆನ್ನುತ !
　　ಒಂದು ತನದಲಿ ಬಾಳಿ-ಬದುಕಿರಿ
ಎಂದು ಹರಸುತ ನಲಿಸುತ !!
　　ಕೇಡು-ಕೆಡಕಿನ ಹಾದಿ ಬಿಡಿರೈ !
ನಾಡು-ನುಡಿಯಲಿ ಮನವ ನಿಡಿರೈ !
　　ದುಡಿತ-ದಿಂದಲಿ ದುಗುಡ ಅಳಿರೈ !
ಬಡತನೆಂಬುದ ದೂರ ಬಿಡಿರೈ !
　　ಹಣದ ಆಶೆಯ ಬಿಟ್ಟು ಸದ್ಗುಣ
ಶಿರಿಯ ಗಳಿಸುತ ಬಾಳಿರಿ !
　　ಗುಣಕೆ ಗೌರವ ಕೊಡುವ ದಾರಿಯ
ತುಳಿದು ಸುಖನು ಗಳಿಸಿರಿ !!
　　ಸ್ವಾಭಿಮಾನವ ನುಳಿಸಿರಿ !

—ಎಚ್. ಆರ್. ಬಂಡೀವಡ್ಡರ
ಹಾರೋಬೆಳವಡಿ.

# ವಾಚನಾಲಯಗಳು



ಲೇ— ವ್ಹಿ. ಜೆ. ಬಳಿಗಾರ ೨ನೇ ವರ್ಷ ಶಿ. ವಿ.
ಟಿ. ಸಿ. ಎಮ್. ಧಾರವಾಡ.

ಮುಖ್ಯವಾಗಿ ನಾಗರಿಕತೆ ಬೆಳೆಯಲು ಓದುಮನೆಗಳು ಗ್ರಂಥ ಸಂಗ್ರಾಲಯಗಳು ಮುಖ್ಯ ಪಾತ್ರ ವಹಿಸಿಕೊಂಡಿವೆ. ನಮ್ಮ ನೆರೆಯ ರಾಷ್ಟ್ರಗಳನ್ನು ನೋಡಲಾಗಿ ಅವುಗಳ ಪ್ರಗತಿಯನ್ನು ಕಂಡು ನಮಗೆ ಅಚ್ಚರಿ ಎನಿಸುತ್ತದೆ. ಇದಕ್ಕೆ ಕಾರಣ ನಾಗರಿಕತೆಯನಿತ್ತ ಓದುಮನೆಗಳು, ವಾಚನಾಲಯಗಳು ಇಲ್ಲದ ದೇಶ-ನಾಡು-ಗ್ರಾಮ "ಕಣ್ಣಿಲ್ಲದ ವ್ಯಕ್ತಿ" ಯಂತೆಯೇ ಸರಿ. ಮೊದಲು ಇವುಗಳ ಸ್ಥಿತಿ, ಗತಿ, ಮಹತ್ವ ಅರಿಯುವದು ಅತಿ ಮುಖ್ಯವಾದುದು.

ವಾಚನಾಲಯಗಳು ಜ್ಞಾನದ ತವರುಮನೆಯೆಂತಲೂ, ಸಂಸ್ಕೃತಿಯ ಕೇಂದ್ರವೆಂತಲೂ, ನಾಗರಿಕತೆ ಬೆಳೆಸಲು ಪೋಷಕ ಆಹಾರವೆಂತಲೂ ಹೇಳಬಹುದು. ವಾಚನಾಲಯಗಳಲ್ಲಿ ವಿವಿಧ ಭಾಷೆಯ ವಿವಿಧ ರೀತಿಯ ಪುಸ್ತಕ, ಪತ್ರಿಕೆ, ಮುಂತಾದವುಗಳನ್ನು ಓದುವದರಿಂದ ಬುದ್ಧಿವಿಕಾಸವಾಗುತ್ತದೆ. ಓದುಮನೆಗಳು ನಿರಂತರವೂ ಎಚ್ಚತ್ತವಾಣಿ, ಹಿಂದು ಮುಂದುಗಳ ರಾಜ್ಯ ರಾಷ್ಟ್ರ, ಸಂಸ್ಕೃತಿ ಹಾಳಾಗಿ ಮಣ್ಣುಗೂಡಿದರೂ, ಚೈತನ್ಯಮಯವಾಗಿ ಮತ್ತೆ ಮತ್ತೆ ಬಡಿದೆಬ್ಬಿಸಿ ಘೋರ್ಷಿಸುವ ಸಾಮರ್ಥ್ಯ ಓದುಮನೆಗಳ ಓದಿನಲ್ಲಿ ಅಡಕವಾಗಿದೆ.

ವಾಚನಾಲಯಗಳು ಯಾವಾಗಲೂ ಗ್ರಾಮಮಧ್ಯದಲ್ಲಿದ್ದು, ವಿಶಾಲವಾಗಿಯೂ, ಹವೆ, ಬೆಳಕು, ಸ್ವಚ್ಛತೆ ಇವುಗಳಿಗೆ ಕೊರತೆ ಇರಬಾರದು. ಓದುಗರಿಗೆ ಕುಳಿತುಕೊಳ್ಳುವಂತೆ ಸರ್ವ ವಿಧವಾದ ಏರ್ಪಾಡುಗಳನ್ನು ಮಾಡಿರಬೇಕು. ದೈನಂದಿನ, ಸಾಪ್ತಾಹಿಕ, ಮಾಸಿಕ, ಈ ಎಲ್ಲ ಪತ್ರಿಕೆಗಳು ಪ್ರತಿಯೊಬ್ಬರಿಗೆ ಆತಂಕ ಉಂಟಾಗದಂತೆ ಓದಲು ದೊರೆಯಬೇಕು, ಇದಲ್ಲದೆ ಜನಸಾಮಾನ್ಯರು—ಅಲ್ಪಾಕ್ಷರಿಗಳು ಓದಲು ಚಿಕ್ಕ ಚಿಕ್ಕ ಕಥೆ, ಕಾದಂಬರಿ, ನಾಟಕ, ಲಲಿತಕಲೆ ಮುಂತಾದ ಪುಸ್ತಕಗಳು ಓದಲು ಅವಕಾಶವಿರಬೇಕು. ಸರ್ವಭಾಷೆಯ ಪತ್ರಿಕೆ, ಪುಸ್ತಕಗಳನ್ನಿಡುವದು ಸರ್ವ ಸಂಸ್ಕೃತಿಗೆ ಭೂಷಣ ಹಾಗೂ ಅವಶ್ಯ.

ಇಂದು ಈ ದಿನಗಳಲ್ಲಿ ಯಾಂತ್ರಿಕತೆಯು ಬೆಳೆದಂತೆ ಮನುಷ್ಯ ಮಾತ್ರರಿಗೆ ಹೆಚ್ಚು ಹೆಚ್ಚು ಕಾಲ ವಿಶ್ರಾಂತಿ ದೊರೆಯಲು ಹತ್ತಿದೆ. ಈ ವಿಶ್ರಾಂತಿಯ ಸದುಪಯೋಗ ಮಾಡಿಕೊಳ್ಳಲು, ವಿಚಾರ ಶಕ್ತಿಯನ್ನು ಬೆಳೆಸಿಕೊಳ್ಳಲು ವಾಚನಾಲಯಗಳು ಮುಖ್ಯವಾದವುಗಳು. ಮನುಷ್ಯನಿಗೆ ಕೆಲಸವಿಲ್ಲದ ಹೆಚ್ಚು ಅವಕಾಶ ಸಿಕ್ಕಾಗ ದುರ್ವಿಚಾರಗಳ ಸೆಳೆತಕ್ಕೆ ಸಿಕ್ಕು ಅನೇಕ ಅನಾಹುತಗಳು ಸಂಭವಿಸುವದುಂಟು. ಅಲ್ಲದೇ ದುಶ್ಚಟಗಳಿಗೆ ಅವಕಾಶ ಸಿಕ್ಕು ತನು ಧನಗಳನ್ನು ಹಾಳು ಮಾಡಿಕೊಳ್ಳುವದುಂಟು. ಇಂಥ ಅನಾಚಾರಗಳನ್ನು ಬದಿಗೊತ್ತಿ ಪ್ರಜಾಪ್ರಭುತ್ವದ ಅರಿವನ್ನು ಮಾಡಿಕೊಡುವ ಚಿತ್ ಸಾಧನಗಳೇ ವಾಚನಾಲಯಗಳು ಎಂಬುದನ್ನು ನಾವಿಲ್ಲಿ ಮರೆಯಬಾರದು. ಮರೆಯಲಾಗದು, ವಿಶ್ರಾಂತಿ ಇದ್ದಾಗ ಇಂಥ ಸಾಧನಗಳಿಗೆ ಹೋಗಿ ನಮ್ಮ ನೆರೆಯ ದೇಶಗಳ ನಾಡುಗಳ ದೈನಿಕ ಸುದ್ದಿಯನ್ನಾಗಲೀ, ಕಥೆಯನ್ನಾಗಲೀ, ರಾಜ್ಯದ ಸ್ಥಿತಿಯನ್ನಾಗಲೀ, ದೇಶದ ವಾರ್ತೆಯನ್ನಾಗಲೀ ಮನನ ಮಾಡುವದು ಬುದ್ಧಿಗೆ ಮನಸ್ಸಿಗೆ ಒಳ್ಳೆಯ ಸಂಸ್ಕಾರವಾಗುತ್ತಿದೆ. ಇದರಿಂದ ಅವನು ದಿನೇ ದಿನೇ ಸುಧಾರಣೆಯ ಸೋಪಾನಗಳನ್ನು ಏರುವನು.

ವಾಚನಾಲಯಗಳು ನಿರಕ್ಷರದ ಬಾಧೆಯಿಂದ ಬಳಲುತ್ತಿರುವ ಪ್ರತಿ ಮಾನವನಿಗೂ ಸಾಕ್ಷರರನ್ನಾಗಿ ಮಾಡುವ ಒಬ್ಬ "ಮೇಧಾವಿ ಶಿಕ್ಷಕ"ನಿದ್ದಂತೆಯೇ ಸರಿ. ಈ ಸಾಕ್ಷರತೆಯ ಜೊತೆಗೆ ನಾಗರಿಕ ಕಲ್ಪನೆ ಪ್ರಜಾಪ್ರಭುತ್ವದ ಅರಿವು, ತಂದುಕೊಡುವ ಸಾಧನವೇ ವಾಚನಾಲಯಗಳು. ವಿಶೇಷವಾಗಿ ಅಲ್ಪ ಸ್ವಲ್ಪ ಓದು ಮುಗಿಸಿ ದೇವರಿತ್ತ ಮದ್ದಿನ ಮರವಿಗೆಗೆ ಸಿಕ್ಕ ಮರೆಯಾದ ಅಕ್ಷರಜ್ಞಾನವನ್ನು ಉದ್ದೀಪನಗೊಳಿಸಲು ವಾಚನಾಲಯಗಳು ದಾರಿ ದೀಪವಿದ್ದಂತೆಯೇ ಸರಿ. ಸಾಮಾನ್ಯ ಮನುಷ್ಯನೂ ಕೂಡಾ ಪುಸ್ತಕ, ಪತ್ರಿಕೆಗಳ ಜ್ಞಾನದಿಂದ ಬುದ್ಧಿಗಾಣದ ವೇಳೆಯಲ್ಲಿ ಜೀವನದ ಅರಿವನ್ನು ಕಂಡುಕೊಳ್ಳಬಹುದು. ವಾಚನಾಲಯದ ವ್ಯಾಸಂಗವು ಮನವು ಬುದ್ಧಿಗೆ ಸದಾ ವಿದ್ಯುತ್ ಪ್ರಕಾಶದಂತೆ.

ಈ ನಮ್ಮ ಕನ್ನಡಿಗರ ಮುಂದಗತಿಯ ಶಿಕ್ಷಣ ಕ್ರಮದಲ್ಲಿ ರಕ್ಷ ಜೀವನವನ್ನು ಅಮೃತಧಾರಾ ಮಾರ್ಗವಾಗಿ ಪುನರುಜ್ಜೀವನಗೊಳಿಸುವ ಮುಖ್ಯಸಾಧನವೆಂದರೆ ಓದುಮನೆಗಳು

ನಮ್ಮ ನಾಡು, ನುಡಿ, ಒಂದು ಹಂತಕ್ಕೆ ಬರಬೇಕಾದರೆ ಕಂಡು ನಿರಾಶಾಭಾವದಿಂದ ನಡೆಯುವ ಬಾಳುಳ್ಳವರು ಓದು ಹೊತ್ತಿಗೆಯ ಸಂಗ್ರಾಲಯಗಳು ಹಾಗೂ ಓದು ಮನೆಗಳು ದರ್ಶನದ ಬೆಳಕಿನ ಸುಜ್ಞಾನದಿಂದ ಆಶಾವಾದಿಯಾಗಿ ಅತಿ ಮುಖ್ಯ. ಹಾಗೂ ಅವಶ್ಯ. ಅಜ್ಞಾನದ ಕತ್ತಲೆಯನ್ನು ಚೈತನ್ಯಮಯವಾದ ಜೀವನಕ್ಕೆ ಕಾಲಿರಿಸಬಹುದು.

ಜೈಹಿಂದ್

# ಕನ್ನಡಿಗರ ಕನ್ನಡ

( ೧ )

ಓ ಕನ್ನಡದ ಕಬ್ಬ
ದಿನವೂ ನೀನೆನಗೆ ಹಬ್ಬ !
　　ಕನ್ನಡ ಸ್ಫೂರ್ತಿಯೆ
　　ಕನ್ನಡ ಮೂರ್ತಿಯೆ
　　ದೇವರಗನ್ನಡ ನೀನಲ್ತೆ ?
ಕಬ್ಬಿಗರೆದೆಯಲಿ ಕುಣಿ-ಕುಣಿದಾಡುವ
　　ವಿಲಯ ವಿಪ್ಲವ ನೀನಲ್ತೆ ?
　　ಕನ್ನಡ ಜೀವನು
　　ಕನ್ನಡ ಪಾವನು
　　ಆತ್ಮದಗನ್ನಡ ನೀನಲ್ತೆ ?
ನಲ್ಲ-ನಲ್ಲೆಯರೆದೆಯನು ಬೆರಸಿದ
　　ಪ್ರೇಮತ್ವವೇ ನೀನಲ್ತೆ ?

( ೨ )

ಶಿವನಲ್ಗನ್ನಡ
ಕನ್ನಡಿಗರ ಕನ್ನಡ !
　　ಕನ್ನಡ ಬಾಳಿದು
　　ಕನ್ನಡ ತಿರುಳಿದು
ಗುರುವರುಗನ್ನಡ ನೀನಲ್ತೆ ?
　　ಹೊಲ-ತೋಟದಿ ಹುಲುಸುಗೊಂಡಿಹ
　　ಹುರುಳ್ಗನ್ನಡ ನೀನಲ್ತೆ ?
　　ಕನ್ನಡ ಗುಡುಗಿದು,
　　ಕನ್ನಡ ಬೆಡಗಿದು
　　ಓ ಕಲಾಗನ್ನಡ ನೀನಲ್ತೆ ?
ಬಾಳ್ ಕನ್ನಡ ಓ ಕನ್ನಡವೇ
　　ನೀನೆಂದೆಂದಿಗು ಅಮರಲ್ತೆ ?

—ಬಿ. ಎಂ. ಗಿರಿಯಪ್ಪ ಧಾರವಾಡ.

## — ಹಾರ್ದಿಕ ಹಾರೈಕೆ —

ಪದ— ಉದಯವಾಗಲಿ ನಮ್ಮ ಚಲುವ ಕನ್ನಡನಾಡು (ಎಂಬಂತೆ)

ಬೆಳಗಿ ಬಾಳಲಿ ನಮ್ಮ ವನಿತಾ ಸಮಾಜವಿದು ॥ ಪ ॥
ಇಳೆಯೊಳಗೆ ನಿರುತ ಮಹಿಳೆಯರನು ವಿಕಾಸಿಸುತ ॥ ಅ ಪ ॥

ಭಗೀರಥ ಪ್ರಯತ್ನೆ ಭಾಗೀರಥೀ ಮಾಯಿಯರು।
ಜಗದೊಳಗಜಾತಹಿತ ದಾದಾ ಪುರಾಣಿಕರು।
ಹಗಲಿರುಳು ತನುಮನವ ಸವಿಸಿ ಸಿಂಪಾಗಿ ಬಹು।
ಸೊಗಸಿನಿಂ ಬೆಳೆಸಿದೀ ಭಗಿನಿ ಸೇವಾ ಸಂಸ್ಥೆ ॥ ೧ ॥

ಜಾತಿ ಭೇದವ ಬಿಡಿಸಿ, ನೀತಿ ತತ್ವವ ತಿಳಿಸಿ।
ಭೂತದಯೆ ಸ್ವಾವಲಂಬನ ಸಹನ ಶೀಲತೆಯ।
ಮಾತೆಯಾಗುವ ಬಾಲಿಕೆಯರ ಮನದೊಳು ಬಿತ್ತಿ।
ಪ್ರೀತಿಯಿಂ ಬಳೆಸುತಿರುವೀ ಸಮಾಜವು ನಿರುತ ॥ ೨ ॥

ಜಯ ಜಯವು ಭಾರತಿಗೆ ಜಯವು ಸಂಸ್ಥಾಪಿಕೆಗೆ।
ಜಯಶಾಂತಿ ಸಂಯಮಿಗಳಾದ ದಾದಾ ಪಿತಗೆ।
ಜಯ ಜಯವು ಸಂಸ್ಥೆಯೊಳು ಕಲಿವ ಬಾಲಿಕೆಯರಿಗೆ।
ಜಯ ದಾನವೀವ ಕರುಣಾಳು ಭಾರತೀಯರಿಗೆ ॥ ೩ ॥

—ಪ್ರೇಮಾ ಮಂಗಳೂರು.

# ಅಕ್ಕನ ಪೆಟ್ಟಿಗೆ

---

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ, ಅಕ್ಕನ ಪೆಟ್ಟಿಗೆ ' ಗೆ ಓಲೆಗಳನ್ನು ಕಳುಹಿಸಬಹುದು; ಮತ್ತು ನೀವೇ ಬರೆದ ಸಣ್ಣ ಕತೆ, ಕವನ, ಆಟ ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ. ನೀವೇ ತೆಗೆದ ಅಂದವಾದ ಚಿತ್ರವಿದ್ದರೆ ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು ' ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲಾ ಬರೆದು, ಪಾಕೇಟಿನಲ್ಲಿ ಹಾಕಿ, ಕಳಿಸಿಬಿಡಿ. ' ಅಕ್ಕನ ಪೆಟ್ಟಿಗೆ'ಗೆ ಈಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರುವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರದ (ಬ್ಲಾಕ) ಕಳಿಸಿದರೆ,ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದ ಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

**ಅಕ್ಕನ ಪೆಟ್ಟಿಗೆ**

**ವೀರಮಾತಾ ಕಾರ್ಯಾಲಯ,**

ವನಿತಾಸೇವಾ ಸಮಾಜ ಧಾರವಾಡ.

**ಧಾರವಾಡ.**

---

**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು ......................................................

ವಯಸ್ಸು ಮತ್ತು ಓದುತ್ತಿರುವ ತರಗತಿ ......................................................

ಅಲ್ಪ ಪರಿಚಯ ......................................................

ಪೂರ್ಣ ವಿಳಾಸ ......................................................

......................................................(ಮನೆ ನಂಬರ ಸಹಿತ)..........................

೨ ಆಣೆ ಸದಸ್ಯತ್ವದ ಫೀಯನ್ನು ಕೊಟ್ಟು ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು ಇಂದಿನಿಂದ ನಾನು ಸದಸ್ಯನಾ/ಳಾಗಿದ್ದೇನೆ.

ತಾರೀಖು ..........                                        ಸಹಿ

**ಅಕ್ಕನ ಬಳಗಕ್ಕೆ ಹಿರಿಯಕ್ಕನ ಅಕ್ಕರೆಯ ಮಾತು.**

ತಮ್ಮ ತಂಗಿಯರೇ ಕೆಲವು ಅನಿವಾರ್ಯ ಅಡಚಣೆಯ ಮೂಲಕ ನಮ್ಮ ಪತ್ರಿಕೆಯು ತಡವಾಗಿ ಹೊರಟು ಮೇ, ಜೂನ-ಜುಲೈ-ಅಗಷ್ಟ ಸಂಚಿಕೆಗಳು ಒಮ್ಮೆಲೇ ಕೈಸೇರುವಂತೆ ಕಳಿಸುವ ಪ್ರಸಂಗವು ಬಂದಿತು. ಆದಕ್ಕಾಗಿ ತಮ್ಮ ಒಗಟಿದ ಉತ್ತರ ಸರಿಯಾದ ವೇಳೆಗೆ ನಿಮಗೆತಿಳಿಯದಂತಾಗಿ ಹೊಸ ಒಗಟಗಳು ಸ್ಪರ್ಧೆಗಳು ಬರಲು ಆತಂಕವಾಗಿದೆ. ಈ ಪರಿಸ್ಥಿತಿಯು ಸಪ್ಟಂಬರ ಸಂಚಿಕೆಗೆ ನಿವಾರಣೆಯಾಗಬಹುದು. ಆಮೇಲೆ ಎಲ್ಲವೂ ಸರಿಹೋಗುವದು. ತಾವು ಯಾವದಕೂ ಉತ್ಸಾಹಗುಂದ ಬಾರದಾಗಿ ಅಕ್ಕನ ಭರವಸೆ.

ನಿಮ್ಮ ಹಿರಿಯಕ್ಕ

**— ಈ ತಿಂಗಳ ಹೊಸ ಸದಸ್ಯರು —**

ಆದೂರು ಲಕ್ಷ್ಮೀರತ್ನ ಚಡಗ ಓದುವ ತರಗತಿ ೯. ಕತೆಗಳನ್ನು ಓದುವದರಲ್ಲಿ ಹೆಚ್ಚು ಆಸಕ್ತಿ. ವಯ ತಿಳಿಸಿಲ್ಲ. ವಿಳಾಸ C/o ಆದೂರು ದಾಮೋದರ ಚಡಗ ಪೋ. ಆದೂರು ಕಾಸರಗೋಡು ದ. ಕ.

---

## ರಾಷ್ಟ್ರ ಪ್ರೇಮಿಯಾಗು

ರಾಷ್ಟ್ರ ಪ್ರೇಮ ನಿನ್ನ ಎದೆಯೊಳಿಲ್ಲ ಸೋದರ!
ಕೀಳು ಭಾವ ತೊರೆದು ನೀನು ಮರೆಯೆ ಸೋದರ!
ಕಹಳೆಯೂದಿ ಜನಗಳನ್ನು ಎಬಿಸು ಸೋದರ !

ದೇಶಪ್ರೇಮ ಕಾಯದಲ್ಲಿ ಕೀರ್ತಿಕಹಳೆ ಯೂದಲಿ
ವಾಚದಲ್ಲಿ ಶಾಂತಿ ಸಹನೆ ಮೂಡಿಭಾವ ಬೆಳೆಯಲಿ
ರಾಷ್ಟ್ರಪ್ರೇಮ ನಿನ್ನ ಮನದಿ ಬುಗ್ಗೆಯಾಗಿ ಹರಿಯಲಿ

ಹುಟ್ಟಿಬಂದ ಪ್ರಾಣವದೋ ದೀನ ಸೇವೆಗೈಯ್ಯಲಿ
ದೀನದಲಿತ ಜನರ ಗೋಳ ನೋಡಿ ಮನವು ಮರುಗಲಿ
ಪಣವತೊಟ್ಟು ಜನರ ಗೋಳ ಎದೆಯಗೊಟ್ಟು ಸರಿಸನಿ

ದೇಶಶಾಂತಿಗಾಗಿ ನಿನ್ನ ತನುವು ಸತತ ದುಡಿಯಲಿ
ಲೋಕವೆನ್ನ ಮನೆಯು ಎಂಬ ಐಕ್ಯಭಾವ ಬೆಳೆಯಲಿ
ಒಂದೆ ಈ ಕುಟುಂಬವೆಂಬ ದೃಷ್ಟಿನಿರುತ ನೆಲೆಸಲಿ

ರಾಷ್ಟ್ರಪ್ರೇಮ ನಿನ್ನ ಎದೆಯೊಳಿಲ್ಲ ಸೋದರ !
ದೇಶಬಂಧು, ದೇಶಪ್ರೇಮಿಯಾಗು ಸೋದರ !
ನಿಜದಿ ತತ್ವವಿಡಿದು ನೀನು ನಡೆಯೆ ಸೋದರ !

—**"ತುಕಾರಾಮ" ಜಾಲಿಹಾಳ.**

# ನಾನು ಶಾಲೆಯ ಮುಖ್ಯಾಧ್ಯಾಪಿಕೆಯಾಗಿದ್ದರೆ

**ಲೇಖಕ : ವೀರುಬಾಯಿ ಉಮಚಿಗಿ.**

ನಾನು ನನ್ನ ಕರ್ಮಧರ್ಮ ಸಂಯೋಗದಿಂದ ಪುಣ್ಯ ಪ್ರದವಾದ ಪ್ರಾಥಮಿಕ ಶಿಕ್ಷಕಿ ಅದರಲ್ಲೂ ಮುಖ್ಯಾಧ್ಯಾಪಿಕೆ ಯಾದರೆ ಕೇಳುವದೇನು ? ನನ್ನ ಆನಂದಕ್ಕೆ ಎಣೆಯೇ ಇಲ್ಲ " ಕಾಯಕವೇ ಕೈಲಾಸವೆಂದು " ಭಾವಿಸಿ ಅತ್ಯಂತ ಪರಮ ಪೂಜ್ಯವಾದ ಗುರುಸ್ಥಾನವನ್ನು ಸ್ವೀಕರಿಸಿ ಇಂದಿನ ಮಕ್ಕಳನ್ನು ನಾಳಿನ ನಾಗರಿಕರನ್ನಾಗಿ ಮಾರ್ಪಡಿಸಲು ಬೇಕಾಗುವ ಎಲ್ಲ ಶೈಕ್ಷಣಿಕ ವಿಚಾರಗಳನ್ನು ವಿದ್ಯಾಬುದ್ಧಿಗಳನ್ನು ಕೊಟ್ಟು ಆದರ್ಶ ವಿದ್ಯಾರ್ಥಿಗಳನ್ನಾಗಿ ಮಾಡಲೆತ್ನಿಸುತ್ತಿದ್ದೆ.

ಮಗು ಬೆಳೆದು ಮಾನವನಾಗುವಲ್ಲಿ ಯಾವ ಯಾವ ವ್ಯವಸ್ಥೆಗಳು ಬೇಕೋ ಅವೆಲ್ಲವುಗಳ ತಕ್ಕ ಏರ್ಪಾಟು ಮಾಡಿ ಮಕ್ಕಳ ಗುಂಪಿನ ಮಧ್ಯದಲ್ಲಿ ಚುಕ್ಕೆಗಳ ಚಂದ್ರನಂತೆ ಶಿಕ್ಷಕ ವೃಂದದಲ್ಲಿ ಹಿರಿಯ ಹುದ್ದೆದಾರಿಯಾಗಿ ಶಾಲೆಯ ಹೊಣೆ ಹೊತ್ತು ನನ್ನಾದ್ಯ ಕರ್ತವ್ಯವಾದ ಶಿಕ್ಷಕ ದೀಕ್ಷೆಯನ್ನು ಪಡೆದು ಪವಿತ್ರವಾದ ಶಿಕ್ಷಕ ವೃತ್ತಿಯನ್ನು ಅಹೋರಾತ್ರಿ ಮನಮುಟ್ಟಿ ಮಾಡುತ್ತಿದ್ದೆನು.

ನನ್ನ ಶಾಲೆಯ ಉಪ ಶಿಕ್ಷಕರನ್ನು ಆತ್ಮೀಯ ಬಂಧುಗಳೆಂದು ಭಾವಿಸಿ ಅವರೊಡನೆ ತುಂಬ ಸಹಕರಿಸಿ ಪರಸ್ಪರ ಪ್ರೀತಿಯಿಂದ ನನ್ನ ಶಾಲೆಯು ಪ್ರಗತಿ ದೆಶೆಯಲ್ಲಿ ಮುನ್ನುಗ್ಗಿ ಬರುವಂತೆ ನೋಡಿಕೊಳ್ಳುತ್ತಿದ್ದೆನು. ನನ್ನೆಲ್ಲ ಉಪಗುರುಗಳ ಕುಂದುಕೊರತೆಗಳನ್ನರಿತು ಅವುಗಳ ನಿವಾರಣೆಯನ್ನು ಕೂಡಲೇ ಮಾಡಲೆತ್ನಿಸುತ್ತಿದ್ದೆನು. ೧ ರಿಂದ ೭ನೆಯ ವರ್ಗದ ವರೆಗಿನ ಪ್ರತಿಯೊಂದು ತರಗತಿಯ ವಿದ್ಯಾಭ್ಯಾಸದ ಪ್ರಗತಿಯನ್ನು ಆಗಾಗ ನಿರೀಕ್ಷಿಸಿ ಸಲಹೆ ಸೂಚನೆಗಳನ್ನು ಕೊಡುತ್ತಿದ್ದೆನು ಪ್ರಯತ್ನವಾಗಿ ಗುರುಗಳಿಗೆ ಉತ್ಸಾಹದ ಪ್ರೋತ್ಸಾಹನೆಯನ್ನು ಕೊಟ್ಟು ಜೀವನವನ್ನು ಸರ್ವಾಂಗಸುಂದರ ಮಾಡಲೆತ್ನಿಸುತ್ತಿದ್ದೆನು. ನಾನು ಹುದ್ದೆಯ ಹುಚ್ಚುತನವನ್ನು ಬಿಟ್ಟು ಸ್ವತಃ ಮಮತೆಯ ಮೂರ್ತಿಯಾಗಿ ಹಸನ್ಮುಖಿಯಾಗಿ ಮುಂಜಾವಿನಿಂದ ಸಂಜೆಯ ವರೆಗೆ ವೇಳೆಗೆ ಸರಿಯಾಗಿ ನನ್ನೀ ಕಾರ್ಯವನ್ನು ಎಡಬಿಡದೆ ಮಾಡುತ್ತಿದ್ದೆನು. ಬಾಲಕ ಪಾಲಕ ಶಿಕ್ಷಕರ ಪರಸ್ಪರ ಆತ್ಮೀಯ ಸಂಬಂಧವನ್ನಿಟ್ಟುಕೊಳ್ಳುತ್ತಿದೆನು.

ನನ್ನ ಶಾಲೆಯ ಪ್ರತಿಯೊಂದು ಮೂಲೋದ್ಯೋಗ, ಸಮುದಾಯಪಾಠ, ಶೈಕ್ಷಣಿಕ ಪ್ರವಾಸ, ವನಭೋಜನ, ಚರ್ಚಾಕೂಟ, ಸರಕಾರಿ ಸಂಘ, ಮಕ್ಕಳ ಕೈಬರಹದ ಪತ್ರಿಕೆ, ಬಾಲವೀರದಳ ಇವೆಲ್ಲವುಗಳನ್ನು ವರ್ಗವಾರ ವಯೋವಾರ ಯೋಗ್ಯತೆಗನುಗುಣವಾಗಿ ಸಂಘಟಿಸಿ ಒಬ್ಬೊಬ್ಬ ಉಪಗುರುಗಳಿಗೆ ಒಂದೊಂದು ಚಟುವಟಿಕೆಗಳನ್ನು ಹಂಚಿ ವ್ಯವಸ್ಥಿತವಾಗಿ ಸಾಗುವಂತೆ ನೋಡಿಕೊಳ್ಳುತ್ತಿದ್ದೆನು. ಪ್ರತಿದಿನ ಮುಂಜಾನೆ ನನ್ನ ಶಾಲೆಯ ಎಲ್ಲ ಮಕ್ಕಳ ಗುರುಗಳ ಯೋಗಕ್ಷೇಮ ತಿಳಿದುಕೊಳ್ಳದೆ ಇರಲಾರೆನು. ಸಾಮೂಹಿಕ ಪ್ರಾರ್ಥನೆ ಪಂಚಾಂಗ, ಅಮರವಾಣಿ, ವಾರ್ತಾವಿವರಣೆ, ಸಫಾಯಿ, ಆರೋಗ್ಯ ಪರೀಕ್ಷೆ, ಹಾಜರಿ ತೆಗೆದುಕೊಳ್ಳುವದು. ಇತ್ಯಾದಿಗಳನ್ನು ಸ್ವಲ್ಪ ವೇಳೆಯನ್ನೂ ಹಾಳು ಮಾಡದೆ ಮಾಡುತ್ತಿದ್ದೆನು. ವರ್ಷಕ್ಕೊಮ್ಮೆ ಗರ್ಲಗಾಯಿಡ ಶಿಬಿರವನ್ನು ತೆಗೆದು ಮಕ್ಕಳಿಗೆ ಶಿಕ್ಷಣವನ್ನು ಕೊಡುತ್ತಿದ್ದೆನು.

ಒಟ್ಟಾರೆ ನನ್ನ ಶಾಲೆ ಆದರ್ಶ ಜೀವನ ಶಿಕ್ಷಣ ಶಾಲೆಯಾಗುವಂತೆ ಹಗಲು ರಾತ್ರಿ ಭಗೀರಥ ಪ್ರಯತ್ನ ಮಾಡಿ ಮೇಲಾಧಿಕಾರಿಗಳ, ಊರವರ ಮೆಚ್ಚುಗೆಗೆ ಪಾತ್ರವಾಗುವಂತೆ ಹೆಚ್ಚು ದಕ್ಷತೆಯಿಂದ ನೋಡಿಕೊಳ್ಳುತ್ತಿದ್ದೆನು. ಅಂತೂ ಈ ರೀತಿಯಲ್ಲಿ ನಾನು ಒಂದು ವೇಳೆ ಮುಖ್ಯಾಧ್ಯಾಪಿಕೆಯಾಗಿದ್ದರೆ ನುಡಿಸೇವೆಯನ್ನು ಮಾಡುತ್ತಿದ್ದೆನು.

## " ಅರುಣೋದಯ "

ಮೂಡಣ ಮುಗಿಲಲಿ
ಮೂಡುತಿಹನು ರವಿ
ಕೆಂಪಡರುತಲಿದೆ ಆ ಮುಗಿಲು ।
ಬಡವನಗೆ ಬಣ್ಣದು
ಬಲ್ಲಿದಗೇನಿದು ?
ಬಿದ್ದಿದೆ ಇಬ್ಬರಲ್ಲೊಬ್ಬಗೆ ದಿಗಿಲು ।
ಅರುಣನ ಕಿರಣವು
ಆಗಸದಿಂದಲೆ
ಎಚರಿಸಲಿ ಎಮ್ಮನು ಬೇಗ ।
ನಿನ್ನೆಯ ಕಷ್ಟವು
ಇರುಳಲಿ ಅಳಿಯಲಿ
ಬದುಕು ಮತ್ತೆ ಹೊಸದಾಗಲಿ ಈಗ ।
ಇರುಳದು ಅಳಿಯಲಿ
ಬೆಳಕನು ಬೆಳಗಲಿ
ನರಕ ಹೋಗಿ ಬರಲಾ ಸಗ್ಗ ।
ಭೇದವು ತೊಲಗಲಿ
ಭಾವವು ಬೆಳೆಯಲಿ
ಅರಳಲಿ ಮಾನವತೆಯ ಮೊಗ್ಗ ।
ಬಡವನು ಬೀಳಲಿ
ಬಲ್ಲಿದ ಏಳಲಿ
ಬದಲಾಗಲಿ ಜಗದೀ ಸಮಯ ।
ಬಡವನು ಏಳಲಿ
ಬಲ್ಲಿದ ಬೆಳೆಯಲಿ
ಬೇಗನೆ ಆಗಲಿ ನವ ಅರುಣೋದಯ ।

—ಅ. ಕ. ಬೆಳಂಬಗಿ.



## ರವೀಂದ್ರರ ಹಾಡು

ಕವಿ ವಂದನೆ ಮಾನ್ಯ ರವೀಂದ್ರ ।
ಹರಸೆಮ್ಮ ವಂಗ ಕವೀಂದ್ರ ।
ಭಾರತಾಂಬೆಯ ಕಳವಳ ಕಂಡು ।
ಮನಮನದಲ್ಲಿ ಕಳವಳಗೊಂಡು ।
ಚಿತ್ರಿಸಿದೆಯೇ ತಾಯಿಯ ಅಳಲು ।
ಕರಕರಗಿತೊ ಜನಮನ ಕರುಳು । ॥೧॥
ನೀ ಕಂಡೆಯೊ ಬಿಡುಗಡೆ ಕನಸು ।
ಕನಸಾಗಿದೆ ಇಂದಿಗೆ ನನಸು ।
ಕವಿ ಸಂತಸ ಕಂಬನಿ ಸುರಿಸು ।
ಕೈಲಾಸದೆ ಭಾರತ ಹರಸು ।
ಸುರಕುಸುಮದ ದೃಷ್ಟಿಯ ಕರೆಸು । ॥೨॥
ಹಿಂದಾದರು ಭಾರತವ್ಯಾಸ ।
ಕನ್ನಾಡಲಿ ಕುಮಾರವ್ಯಾಸ ।
ವರಕವಿ ಕಾಲಿಯದಾಸ ।
ಸರಸತಿಯ ಹಾಸನುಭಾಸ ।
ನೀ ಭಾರತೀ ಮಾನಸ ಹಂಸ । ॥೩॥
ಗೀತಾಂಜಲಿ ಕೊಟ್ಟೆಯೊ ಜಗಕೆ ।
ಪ್ರಭುವಾಗಿಹ ಪರಮನ ಪದಕೆ ।
ಬಿಡದಿತ್ತೆಯೋ ಸಂತಸ ಜಗಕೆ ।
ನೀ ಸೇರಿದೆ ಪರಮನ ಪದಕೆ ।
ಬಾ ನೀಡಲು ಸಂತಸ ಜಗಕೆ । ॥೪॥
ಬುಧಗಳಲಿ ಕಾವ್ಯದ ಬುಧ ।
ಮುತ್ತೈದೆಗೆ ಕುಂಕುಮ ಅಂದ ।
ದೈವಗಳು ಹಿರಿಗೋವಿಂದ ।
ವಂಗಾಲಕೆ ಮಾನ್ಯ ರವೀಂದ್ರ ।
ಬಂಗಾಲದ ಬಾನಿನ ಚಂದ್ರ ! ॥೫॥

ಸಂಗ್ರಹಕಾರ— **ಕುಮಾರಿ M. R. ಗುರವ.**





# ನನ್ನ ನೆಚ್ಚಿನ ಕವಿ



ಲೇ— ಬಾ. ರಾ. ಹುಲಮನಿ.

ನಮ್ಮ ನಾಡಿನಲ್ಲಿ ಅನೇಕ ಕನ್ನಡ ಕವಿಗಳು ಆಗಿ ಹೋದರು. ಅವರು ತಮ್ಮ ಪದ್ಯಗಳನ್ನು ಸಂಸ್ಕೃತದಲ್ಲಿ ಬರೆಯುತ್ತಿದ್ದರು. ಆದರಿಂದ ಆ ಕವಿತೆಗಳ ಅರ್ಥವು ಸಾಮಾನ್ಯ ಜನರಿಗೆ ತಿಳಿಯುತ್ತಿದ್ದಿಲ್ಲ. ಮತ್ತು ನಮ್ಮ ಕನ್ನಡ ಭಾಷೆಯು ಬೆಳೆಯಲಿಕ್ಕೆ ಅನುವು ದೊರೆಯುತ್ತಿದ್ದಿಲ್ಲ. ಈಗೀಗ ನಮ್ಮ ಕನ್ನಡ ನಾಡಿನಲ್ಲಿ ಇದ್ದಂತ ಕವಿಗಳು ಬರೆದ ಕವಿತೆಗಳು ಸಾಮಾನ್ಯ ಜನರಿಗೆ ತೀವ್ರನಾಗಿ ತಿಳಿಯುತ್ತವೆ. ಆದರಲ್ಲಿ ತಿಳಿದುಕೊಂಡು ಕವನಗಳನ್ನು ಕಟ್ಟಿದವರೆಂದರೆ ದ. ರಾ. ಬೇಂದ್ರೆಯವರು ಒಬ್ಬರು. ಅವರ ಕವನಗಳು ನನಗೆ ಒಳ್ಳೆ ಅಚ್ಚು ಮೆಚ್ಚಾಗಿ ಸೇರುತ್ತವೆ.

ಇವರು ಧಾರವಾಡ ಜಿಲ್ಲೆಯ ಶಿರಹಟ್ಟಿಯಲ್ಲಿ ಜನ್ಮ ತಾಳಿದರು. ಇವರ ಅಭ್ಯಾಸವು ಧಾರವಾಡದಲ್ಲಿ ಆಯಿತು. ಕೆಲವು ದಿವಸ ಅವರು ಈಗಿನ ವಿದ್ಯಾರಣ್ಯ ಹೈಸ್ಕೂಲಿನಲ್ಲಿ ಕೆಲಸ ಮಾಡಿದರು. ಕೆಲವು ದಿವಸಗಳ ನಂತರ ಸೊಲ್ಲಾಪುರದ ಕಾಲೇಜದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನಿಯಮಿಸಲ್ಪಟ್ಟರು. ಶ್ರೀಯುತ ದ. ರಾ. ಬೇಂದ್ರೆಯವರು ಅನೇಕ ಪದ್ಯಗಳನ್ನು ಬರೆದರು. ಅವುಗಳಲ್ಲಿ ನನ್ನ ಹರಣ ನಿನಗೆ ಶರಣ ಮತ್ತು ಗಂಗಾವತರಣ ಹೀಗೆ ಅನೇಕ ಪದ್ಯಗಳನ್ನು ಬರೆದಿದ್ದಾರೆ. ಆ ಎಲ್ಲ ಕವನಗಳು ಜನಸಾಮಾನ್ಯರೆಲ್ಲರಿಗೂ ತಿಳಿಯುತ್ತವೆ. "ಅಡು ಮುಟ್ಟದ ವನಸ್ಪತಿಯಿಲ್ಲ ಬೇಂದ್ರೆಯವರು ಬರೆಯದೆ ಇದ್ದಂಥ ಕವನಗಳಿಲ್ಲ" ಎಂಬ ಮಾತು ಇವರಿಗೆ ಸಲ್ಲುತ್ತದೆ.

ಶ್ರೀಯುತ ದ. ರಾ. ಬೇಂದ್ರೆಯವರ ಪದ್ಯದಿಂದ ಕನ್ನಡ ಭಾಷೆ ಬೆಳೆಯುತ್ತ ನಡೆದಿದೆ. ಇನ್ನು ಮುಂದೆಯಾದರೂ ಹೆಚ್ಚಾಗುತ್ತದೆ ಎಂದು ನನ್ನ ಆಶೆ. ಆದ್ದರಿಂದ ಇವರು ಚಿರಂಜೀವಿಗಳಾಗಿ ನಮ್ಮ ಕನ್ನಡ ಭಾಷೆಯ ಪತಾಕಿಯನ್ನು ದಶದಿಕ್ಕುಗಳಲ್ಲಿ ಬೆಳಗಿಸಲೆಂದು ಹಾರೈಸುವೆ. ಇವರು ನನ್ನ ನೆಚ್ಚಿನ ಕವಿಯೆಂದು ಹೆಮ್ಮೆ ಎನಿಸುತ್ತದೆ.



# ನಾನು ಜೀವನ ಶಿಕ್ಷಣ ಸಾಲೆಗೆ ಏಕೆ ಹೋಗುವೆ?

ಲೇ— ವ್ಹಿ. ಜಿ. ಬಳಿಗಾರ

ಸಾಲೆಗೆ ಹೋಗ್ತೇನವ್ವ ನಾನು ಸಾಲೆಗೆ ಹೋಗ್ತೇನೇ ।
ಓದುಬರೆಹ ಕಲಿತು । ನಾನು ಜಾಣಳಾಗುದಕೇ ।
ಅಪ್ಪ ಕೊಟ್ಟ ಪಾಟಿಚೀಲ ಬಗಲಲ್ಲಿ ಹಾಕೇನೇ ।
ಅಣ್ಣ ಕೊಟ್ಟ ಪೆನ್ಸಿಲನ್ನು ಕೈಯ್ಯಲ್ಲಿ ಹಿಡಿದೇನೇ ।
ಸಾಲೆಗೆ ಹೋಗಿ ಸಫಾಯಿ ಮಾಡಿ । ಪ್ರಾರ್ಥನೆ ಮಾಡುದಕೇ ।
ಪ್ರಾರ್ಥನೆ ಮಾಡಿ ಜಗದ ಸುದ್ದಿ । ತಿಳಿದುಕೊಂಬುದಕೇ ।
ಪಾಠ ಓದಿ ಆಟ ಆಡಿ । ಶಕ್ತಿಪಡೆಯುದಕೇ ।
ಶಕ್ತಿಯುಕ್ತಿಗಳನ್ನು ನಾನು । ಗಳಿಸಿಕೊಂಬುದಕೇ ।
ನೂಲುವ ನೇಯುವ ಒಕ್ಕಲುತನದ ಶಿಕ್ಷಣ ಪಡೆಯುದಕೇ ।
ಜೀವನ ಶಿಕ್ಷಣ ಕಲಿತು ನಾನು । ಸುಖದಿಂದಿರುವದಕೇ ॥

 ಭೂಮಿತಾಯ ಬಯಕೆ 

೧

ಬಾಲ ಬುದ್ಧಿಯಲಿ ನಿನ್ನ ಮರೆತು ನಾ
ಹೊರಟು ಬಂದೆನಿಲ್ಲಿ
ಕ್ಷಣಿಕ ಸುಖದ ಹೊರತಾಗಿ ನನಗೆ
ಮತ್ತೇನು ಕಾಣದಿಲ್ಲಿ

●

೨

ಧೂಮ ಮಿಶ್ರಿತ ತಮದ ಮಧ್ಯದಂ
ತೊಳಲುತಿಹುದು ಹೃದಯ
ಹಸಿದಮಗುವು ತಾಯ್ ನೆನೆಯುವಂತೆ
ನನ್ನಾಶೆ ನಿನ್ನ ಸುದಯ

●

೩

ಜ್ಞಾನವರ್ಗವ ಜ್ಞಾನವೆಂದು
ನಾನಾಗ ನಿನ್ನ ಮರೆತೆ
ಅಜ್ಞಾನ ಮದವು ನನ್ನಿಂದ ತೊಲಗಿ
ನನಗಾಯ್ತು ನಿನ್ನ ಕೊರತೆ

●

೪

ನನ್ನ ಬಾಳಬೈಲಾಟ ಗೋಳಿಸಿದಾ
ಶಿಷ್ಟ ತಮದ ಕೋಪ
ತೋರಗೊಡದೆ ಅಂತರ್ಯವನ್ನು ತಾ
ನಟಿಸಿತಾಗಿ (ದಾರಿ) ದೀಪ

●

೫

ಭವದ ಸವಿಯ ನಾನರಿಯ ಹೋಗಿ
ಈ ತಮದ ಮಧ್ಯೆ ಬಿದ್ದೆ
ಅರಿತ ಮೇಲೆ ನಿನ್ನಡಿಗಳೆನಗೆ
ಪಾವನವು ತಾಯೆ ಎಂದೆ

●

೬

ದಟ್ಟ ತಮಕೆ ದಿನಮಣಿಯು ಕಿರಣ
ತಾನೊಂದು ಶಾಸ್ತ್ರವಂತೆ
ಅಜ್ಞಾನ ತಮಕೆ ನೀ ಜ್ಞಾನ ಕಿರಣ
ವರದಾನ ಮಾಡು ಮಾತೆ

೭

ನಿನ್ನ ಮುಖವು ನನಗಿಂದು ಪಾವನವು
ಜ್ಞಾನಮಾರ್ಗ ಜ್ಯೋತಿ
ಕತ್ತಲೊಳಗೆ ಎನ್ನ ಚಿತ್ರಭಿತ್ತಿಯನು
ಸುತ್ತುತಿಹುದು ಭೀತಿ

●

೮

ಜ್ಞಾನ ಮಾರ್ಗದಲ್ಲಿ ಧೂಮ ಮುಸುಕಿಹುದು
ನಡೆಯಲಾರೆ ಮುಂದೆ
ಅರಿತ ನಿನ್ನಿ ಆ ಮೃದುಕರಗಳನ್ನು
ಕಳಿಸದಿಹೆಯ ಹಿಂದೆ

●

೯

ನಿನ್ನ ಮಾರ್ಗವದು ಹೊನ್ನ ಮಾರ್ಗವದು
ಮೊದಲೆ ಮರೆತು ಹೋದೆ
ಕೆಟ್ಟ ಮೇಲೆ ನಾನಿನ್ನ ನೆನೆಯುತಿಹೆ
ಕೃಪೆದೋರು ವೀರಮಾತೆ

●

೧೦

ದಲಿತ ಜನಕೆ ನೀ ಫಲವನಿತ್ತು
ತೋರಿರುವಿ ಸುಖದ ಮಾರ್ಗ
ಪತಿತ ಹೃದಯದ ಮರೆತ ಮನುಜ ನಾ
ನೀನೆ ನನ್ನ ಸ್ವರ್ಗ

●

೧೧

ಅಜ್ಞಾನದ್ರುವದ ಈ ಘಟವ ಹೊತ್ತು
ನೋಯುತಿಹುದಶ್ಕಿಂದ
ಜ್ಞಾನಶಿಲೆಯಲೀ ಘಟವನೊಡೆದು
ತೋರೆನಗೆ ಮುಖಾರವಿಂದ

●

೧೨

ಶುಭ್ರಮಲ್ಲಿಗೆಯ ಬಟ್ಟೆಯುಟ್ಟು
ನಿಲ್ಲುವದು ನಿನಗೆ ಇಷ್ಟ
ಪಂಕ ಮಧ್ಯದಿ ಮುಳುಗುತಿಹೆನು ನಾ
ಪರಿಹರಿಸು ಸರ್ವಕಷ್ಟ

—ದೇಶಪಾಂಡೆ ಲಕ್ಷ್ಮಣ (ಗಲಗಲಿ)

---

## ಕುಣಿಯೋಣ ಬಾರ !

ಕುಣಿಯೋಣ ಬಾರ ನಾ ನೀನು ಕೂಡಿ ಕುಣಿಯೋಣ ಬಾರ !
ನಾ ನೀನು ಕೂಡಿ ಕುಣಿಯೋಣ ಬಾರ ! ಕುಣಿಯೋಣ !
ಚಂದಿರ ಮೂಡಿದ ಅಂದದಿ ಬೆಳದಿಂಗಳು ಕುಣಿಯೋಣ ಬಾರ
ವೈ ವೈ ಹಚ್ಚಿ ತಾಲಕೆ ತಾಲ ಹಾಕಿ ಕುಣಿಯೋಣ ಬಾರ !
॥ ಕುಣಿಯೋಣ ॥

ದೂರದಿ ಕಾಣುವ ಮಲ್ಲಿಗೆ ಮಂಟಪದೊಳ್
ನಾನೀನು ಕೂಡಿ ಕುಣಿಯೋಣ ಬಾರ ! ಕುಣಿಯೋಣ !
ಮಲ್ಲಿಗೆ ಹೂವರಳಿದ್ದಂಗ ಮಲ್ಲಿಗೆ ಮಂಟಪದೊಳ್
ಅರಳುತ ನಾವ್ ನಲಿಯುತ ನಾವ್ ಕುಣಿಯೋಣ ಬಾರ !
॥ ಕುಣಿಯೋಣ ॥

ಹಿಂದಿನ ಕುಣಿತ ನಾವು ಮುಗಿಸೋಣ !
ಮುಂದಿನ ಕುಣಿತದ ಗುರಿಯು ಕಟ್ಟೋಣ !
ಕುಣಿಕುಣಿದಂತೆ ಲಯುವ ಕಲಿಯೋಣ !
ಲಯಕೆ ಲಯುವ ಹಾಕಿ ಕುಣಿಯೋಣ ಬಾರ !
॥ ಕುಣಿಯೋಣ !॥

ಯಾರಿಗೂ ಹೇಳಬ್ಯಾಡ ಯಾರಿಗೂ ಕೇಳಬ್ಯಾಡ !
ಎನ್ನಯ ಚಲುವಿನ ಕಣ್ಣೆ ! ಚಿಂತಿಯ ತೆರೆದೇಳು !
ಬಾಳ ಅಳಲನ್ನಳಿಸಲು ಮಲ್ಲಿಗೆ ಅರಳಿದೆ ಕುಣಿಯುತ
ರಮಣಿಯೇ ಹಾಡೇಳು ! ಕುಣಿಯೋಣ ಬಾರ !
॥ ಕುಣಿಯೋಣ ॥

ಬರಲಿಹ ಭಾಗ್ಯದ ದಿನಗಳ ನೆನೆಯುತ ಬಾಳತೇಜದ
ನವರಸ ಹುಡುಕುತ ಜೀವನದ ಕುಣಿತ ಕುಣಿಯೋಣ !
ನಿನ್ನಯ ಹೃದಯವು ಎನ್ನಲಿ ಬೆರತಾಗ ನವರಸ ಚಿಮ್ಮುವದು !
ನವೀನ ತೇಜದಿ ನವರಸ ಹುಡುಕಲು ಜೀವನ ಸಾಗಿಹುದು
॥ ಬಾ ಬಾರೆ ! ಕುಣಿಯೋಣ ಬಾರೆ ! ಕುಣಿಯೋಣ !
ಕತ್ತಲೆಯುಡಗಿದೆ ಗಗನವು ತಿಳಿಯುದೆ ಬಾರೆ ಕುಣಿಯೋಣ ಬಾರ !
ನಾ ನೀನು ಕೂಡಿ ಕುಣಿಯೋಣ ಬಾರೆ ಕುಣಿಯೋಣ !
ಚಂದಿರ ಮೂಡಿದ ಅಂದದಿ ಬೆಳದಿಂಗಳು ಕುಣಿಯೋಣ ಬಾರೆ
॥ ಕುಣಿಯೋಣ ॥

—**ರಾಮಲಿಂಗ ಪೂಜಾರ (ಯಲಿವಾಳ) ಧಾರವಾಡ.**

## ಸೂಚನೆ

* ಲೇಖನಗಳು, ಅಸ್ಪಷ್ಟ ರೀತಿಯಲ್ಲಿ ಬರೆದವು ಬರುತ್ತಿದ್ದು, ಮುದ್ರಣ ಕಾರ್ಯಕ್ಕೆ ತುಂಬಾ ತೊಂದರೆಯಾಗುತ್ತದೆ ಲೇಖಕರು ಸುಸ್ಪಷ್ಟ ರೀತಿಯಲ್ಲಿ ಬರೆದ ಲೇಖಗಳನ್ನು ಸಂಪಾದಕರ ವಿಳಾಸಕ್ಕೆ ಕಳುಹಿಸಬೇಕು.

* ಇನ್ನೂ ವರೆಗೂ ಚಂದಾ ಹಣವನ್ನು ಕಳಿಸದ ಚಂದಾದಾರರು ಆದಷ್ಟು ಕೂಡಲೆ ಕಾರ್ಯದರ್ಶಿ 'ವೀರಮಾತೆ' ವನಿತಾ ಸೇವಾ ಸಮಾಜ, ಧಾರವಾಡ. ಈ ವಿಳಾಸಕ್ಕೆ ಚಂದಾಹಣವನ್ನು ಕಳುಹಿಸಿಕೊಡಬೇಕು.

* ಚಂದಾದಾರರು, ತಮ್ಮ ವಿಳಾಸ ಬದಲಾದಲ್ಲಿ, ಹಾಗೆ ತಿಳಿಸಿದರೆ, 'ವೀರಮಾತೆ' ಯು ತ್ವರಿತವಾಗಿ ಮುಟ್ಟುವಂತೆ ದಕ್ಷತೆ ವಹಿಸಲಾಗುವದು.

* ಲೇಖಕರು ಅಥವಾ ವಾಚಕರು, ಲೇಖ ಕಳಿಸುವದಾಗಲಿ ಉಳಿದ ಯಾವದೇ ಪತ್ರವ್ಯವಹಾರ ಮಾಡುವಾಗ ತಮ್ಮ ವಿಳಾಸವನ್ನು ಸ್ಪಷ್ಟ ರೀತಿಯಲ್ಲಿ ಬರೆದು ತಿಳಿಸಲು ಮರೆಯಬಾರದು.

* ಹೊಸದಾಗಿ ಚಂದಾದಾರರಾಗಬಯಸುವವರು, ಚಂದಾ ಹಣವನ್ನು ಮೊದಲು ಕೊಟ್ಟು, ಕಳಿಸಿದರೆ, ಮಾಸಿಕವನ್ನು ಅವರ ವಿಳಾಸಕ್ಕೆ ಕಳಿಸುವತ್ತ ಗಮನಿಸಲಾಗುವದು.

* ಸೋದರ, ಸೋದರಿಯರು, ಅಕ್ಕನಟ್ಟಿಗೆಯ ವಿಭಾಗದಲ್ಲಿ ಬರುವ ಸ್ಪರ್ಧೆಗಳಿಗೆ ಉತ್ತರಗಳನ್ನು ಪ್ರತಿತಿಂಗಳ ೧೦ ನೇ ತಾರೀಖಿನ ಒಳಗಾಗಿ ಕಳುಹಿಸಬೇಕು.

* * * * * *

---

'ಸಮಾನಾಧಿಕಾರ' ಕೃತಿಯಲ್ಲಿ ಬರಬೇಕಿದ್ದರೆ
ಮಹಿಳೆಯರ 'ಬೌದ್ಧಿಕ ಉನ್ನತಿ' ಅತ್ಯವಶ್ಯವಾದುದು
ಜ್ಞಾನ, ಮನೋರಂಜನೆಗಾಗಿ ವಿವಿಧ ಲೇಖಗಳಿದ್ದ
ಪ್ರಗತಿಪರ ವಿಚಾರಗಳಿಂದೊಡಗೂಡಿದ
ಮಹಿಳೆಯರ ಮಾಸಪತ್ರಿಕೆ

# ವೀರಮಾತೆ

**ಇಂದೇ ಚಂದಾದಾರರಾಗಿರಿ**

ಸಂಪಾದಕರು:— **ಪ್ರೊ. ಸರೋಜಿನಿ ಮಹಿಷಿ,**
ಎಂ. ಎ., ಎಲ್‌ಎಲ್. ಬಿ.

**ಸ್ತ್ರೀಯರ ವಿಕಾಸಕ್ಕಾಗಿ ಮೀಸಲಾಗಿಟ್ಟ**

**ಮಾಸಪತ್ರಿಕೆ**

ವಾರ್ಷಿಕ ಚಂದಾಹಣ ೫ ರೂಪಾಯಿ
ಬಿಡಿಸಂಚಿಕೆ ೩೭ ನ.ಪೈ. ಮಾತ್ರ

**ಮನೆಮನೆಯಲ್ಲಿಯೂ ಸುಖಸಂತೋಷಗಳನ್ನು**
**ಬೀರಬಲ್ಲ ಕನ್ನಡ ಮಾಸಪತ್ರಿಕೆ**

[ ಮುಂಬಯಿ, ಮೈಸೂರು ಮತ್ತು ಮದ್ರಾಸ
ಸರಕಾರಗಳಿಂದ ಮಾನ್ಯತೆ ದೊರೆತಿದೆ.]

ಬಟವಡೆಯಾಗದಿದ್ದಲ್ಲಿ
ಹಿಂತಿರುಗಿಸಬೇಕಾದ ವಿಳಾಸ:—
"ವೀರಮಾತೆ" ಕಾರ್ಯಾಲಯ
ವನಿತಾ ಸೇವಾ ಸಮಾಜ
ಶುಕ್ರವಾರ ಪೇಟ
ಧಾರವಾಡ

ADDRESS

No 202.

To,
ಶ್ರೀ. H.H. ...
Post Master

ಮುದ್ರಕರು: ಶ್ರೀಯುತ ಕುಲಕರ್ಣಿ ರಾಮರಾಯರು
ಸ್ಥಳ: ವನಿತಾ ಪ್ರಿಂಟಿಂಗ ಪ್ರೆಸ್, ಧಾರವಾಡ
ಪ್ರಕಾಶಕರು: ಶ್ರೀ. ಲ. ರಂ. ಪುರಾಣಿಕ
ಸ್ಥಳ: ವನಿತಾ ಸೇವಾ ಸಮಾಜದಲ್ಲಿಯ ಕಾರ್ಯಾಲಯ, ಧಾರವಾಡ

---

ರಜಿಸ್ಟ್ರೇಶನ್ ಆಫ್ ನ್ಯೂಜ ಪೇಪರ್ಸ (ಸೆಂಟ್ರಲ್) ರೂಲ್ಸ ೧೯೫೬ರ ೮ನೇ ನಿಯಮಕ್ಕೆ ಸಂಬಂಧಿಸಿದಂತೆ "ವೀರಮಾತೆ" ಮಾಸಪತ್ರಿಕೆಯ ಸ್ವಾಮಿತ್ವ ಮತ್ತು ಇತರ ವಿಷಯಗಳ ಬಾಬತ ವಿವರ:—

| | |
|---|---|
| ೧. ಪ್ರಕಾಶನ ಸ್ಥಳ— | ವನಿತಾ ಸೇವಾ ಸಮಾಜ ಧಾರವಾಡ. |
| ೨. ನಿಯಮಿತ ಕಾಲಿಕತೆ— | ಮಾಸಪತ್ರಿಕೆ |
| ೩. ಮುದ್ರಕರ ಹೆಸರು— | ರಾಮರಾವ ಕುಲಕರ್ಣಿ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವೀರಮಾತೆ ಕಾರ್ಯಾಲಯ ಧಾರವಾಡ |
| ೪. ಪ್ರಕಾಶಕರ ಹೆಸರು— | ಲ. ರಂ. ಪುರಾಣೀಕ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವನಿತಾ ಸೇವಾ ಸಮಾಜ ಧಾರವಾಡ |
| ೫. ಸಂಪಾದಕರ ಹೆಸರು— | ಸರೋಜನಿ ಮಹಿಷಿ ಎಮ್. ಎ. ಎಲ್ಎಲ್. ಬಿ. |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ಲೈಸಬರ್‍ಯಾರ ಧಾರವಾಡ |
| ೬. ಪತ್ರಿಕಾ ಸ್ವಾಮಿತ್ವ ವಿಳಾಸ— | ಕಾರ್ಯಕಾರಿ ಮಂಡಳ |
| ಮತ್ತು ಭಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ — | ವನಿತಾ ಸೇವಾ ಸಮಾಜ ಧಾರವಾಡ |

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣೀಕನಾದ ನಾನು ಮೇಲಿನ ವಿವರಗಳಲ್ಲಿಯ ಎಲ್ಲ ವಿಷಯಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣೀಕ.

# ಪರಿವಿಡಿ



# ನಮ್ಮ ಮಾತು



ಈ ತಿಂಗಳ ಸಂಚಿಕೆಯು ಸಕಾಲಕ್ಕೆ ಓದುಗರ ಕೈಸೇರುತ್ತಿರುವದು ಸಂತೋಷದ ಸಂಗತಿ. ಆ ಬಗ್ಗೆ ಪತ್ರಿಕೆಗೆ ಲೇಖಗಳನ್ನು ಸಕಾಲಕ್ಕೆ ಕಳುಹಿಸಿದ ಲೇಖಕರಿಗೂ ಸಕಾಲಕ್ಕೆ ಮುದ್ರಿಸಿಕೊಟ್ಟ ಪ್ರೆಸ್ಸಿನ ಮಾಲಕರಿಗೂ ಇತರ ಸಂಬಂಧಿಸಿದ ಕಾರ್ಯಕರ್ತರಿಗೂ ವೀರಮಾತೆಯು ತುಂಬಾ ಋಣಿಯಾಗಿದ್ದಾಳೆ.

ಇನ್ನು ಮುಂದಿನ ಸಂಚಿಕೆಯಿಂದ ಮಕ್ಕಳ ಪುಟವು ಮಕ್ಕಳ ಲೇಖನ, ಕವನ, ಕತೆ, ಹಾಸ್ಯ, ಒಗಟು, ಉತ್ತರಗಳಿಂದ ತುಂಬಿ ಶೋಭಿಸುವದೆಂದು ಹಿರಿಯಕ್ಕನು ಸಂಪೂರ್ಣ ನಂಬಿದ್ದಾಳೆ.

---

## ವನಿತಾ ಸೇವಾ ಸಮಾಜದಲ್ಲಿ

# ಗಜಾನನೋತ್ಸವ

ಸಮಾಜ ದ ಬಾಲಿಕೆಯರೇ ಸ್ವತಃ ತಯಾರಿಸಿದ ಗಜಾನನ ಮೂರ್ತಿಯನ್ನು ಗಜಾನನ ಚತುರ್ದಶಿಯಂದು, ಬ್ಯಾಂಡು, ವಾದ್ಯ,ಕೋಲಾಟಗಳೊಂದಿಗೆ ಉತ್ಸವ ಮಂಟಪಕ್ಕೆ ಕರೆತಂದು, ಮೂರ್ತಿಯನ್ನು ಆವಾಹನೆ ಮಾಡಲಾಯ್ತು. ಗಣಪತಿ ಚೌತಿಯಿಂದ ೫ ದಿನಗಳವರೆಗೆ ಬೇರೆ ಬೇರೆ ಕಾರ್ಯಕ್ರಮಗಳನ್ನಿಟ್ಟು, ಉತ್ಸವವನ್ನು ವೈಭವದಿಂದ ನೆರವೇರಿಸಲಾಯ್ತು.

ದಿನಾಂಕ ೮ರಂದು, ಶ್ರೀಮಾನ್ ಬಿ. ವ್ಹಿ. ನಾಯಕ್ ಆ. ರಜಿಸ್ಟ್ರಾರರ್ ಕೋ. ಆ. ಸೋಸಾಯಿಟಿ ಧಾರವಾಡ ಇವರ ಅಧ್ಯಕ್ಷತೆಯ ಕೆಳಗೆ, ಮಕ್ಕಳಿಂದ ಮನರಂಜನ ಕಾರ್ಯಕ್ರಮಗಳು ಜರುಗಿದವು. ಪ್ರಾಥಮಿಕ ಶಾಲೆಯ ವಿದ್ಯಾರ್ಥಿನಿಯರಿಂದ ಕೋಲಾಟ, ನೃತ್ಯ, ಹಾಸ್ಯ ಮುಂತಾದವುಗಳೂ, ಮಾಧ್ಯಮಿಕಶಾಲೆಯವರಿಂದ ಹಾಡುಗಾರಿಕೆಯೂ, ಟ್ರೇನಿಂಗ ಕಾಲೇಜಿನವರಿಂದ ಒಂದು ನಾಟಕವೂ, ಸಂಗೀತ ಶಾಲೆಯವರಿಂದ ನಡೆದ ನೃತ್ಯ ಮತ್ತು ಕೋಲಾಟ ಇವೆಲ್ಲವುಗಳಿಂದ ಕೂಡಿದ ವಿವಿಧ ವಿನೋದಾವಳಿ ಕಾರ್ಯಕ್ರಮಗಳು ಬಹಳ ಮನರಂಜಕವಾಗಿದ್ದವು. ೫ನೇ ದಿನದಂದು ಶಾಲಾಮಕ್ಕಳ ಮೇಳ, ವಾದ್ಯಗಳೊಂದಿಗೆ ಗಜಾನನನ ವಿಸರ್ಜನೆಯಾಯ್ತು.

ವ. ಟ್ರೇ. ಕಾಲೇಜ ವಿದ್ಯಾರ್ಥಿನಿಯರು, ಪ್ರದರ್ಶಿಸಿದ ಶ್ರೀಮಾನ್ ಮುಗುಳಿಯವರ 'ವಿದ್ಯಾವತಿ' ಏಕಾಂಕ ನಾಟಕವು ಬಹಳ ಉತ್ತಮವಾಗಿದ್ದು ಅದರಲ್ಲಿ ಪಾತ್ರವಹಿಸಿದ್ದ ಶ್ರೀಮತಿ ಹೊಸೂರ, ಶ್ರೀಮತಿ ಕಾವಿ, ಶ್ರೀಮತಿ ಅಶ್ರಿತ ಹಾಗೂ ಕು. ಥಳಂಗೆ ಇವರ ಅಭಿನಯವು ತುಂಬ ಚನ್ನಾಗಿತ್ತು.

ಇದೇ ರೀತಿ ವಿದ್ಯಾರ್ಥಿನಿಯರು ತಮ್ಮ ಕಲೆಯನ್ನು ಇಂತಹ ಸಂದರ್ಭಗಳಲ್ಲಿ ಪ್ರದರ್ಶಿಸಿ, ಅದರ ಬೆಳವಣಿಗೆಗೆ ಸಿಗುವ ಅವಕಾಶದ ಲಾಭ ಪಡೆಯಬೇಕು.

---

## ವನಿತಾ ಸೇವಾ ಸಮಾಜದ ಬಾಲಿಕೆಯರಿಂದ ಮೇಳ

ಗಜಾನನೋತ್ಸವದ ನಿಮಿತ್ತ ಏರ್ಪಡಿಸಲಾಗಿದ್ದ ವನಿತಾ ಸೇವಾ ಸಮಾಜದ 'ಮೇಳ'ವನ್ನು ತಮ್ಮ ಉತ್ಸವಕ್ಕೆ ಕರೆಸಿ, ಮಕ್ಕಳ ಕಡೆಯಿಂದ ಜರುಗಿದ ಕೋಲಾಟ, ನೃತ್ಯ, ಹಾಸ್ಯ, ಹಾಡು, ಮುಂತಾದವುಗಳನ್ನು ನೋಡಿ ಆನಂದಿಸಿ ಮಕ್ಕಳ ಕಲೆಗೆ ಪ್ರೋತ್ಸಾಹನವೀಯುವದರೊಂದಿಗೆ ವನಿತಾ ಸೇವಾ ಸಮಾಜಕ್ಕೂ ಮೇಳದ ಬಗ್ಗೆ ಕಾಣಿಕೆ ಸಲ್ಲಿಸಿದ್ದಕ್ಕಾಗಿ ಧಾರವಾಡದ ದಲಾಲಿ ವ್ಯಾಪಾರಿ ಸಂಘದವರಿಗೂ ಧಾ. ಜಿ. ಮಹಿಳಾ ಮಂಡಲದವರಿಗೂ ಧಾರವಾಡ ಪೋಲೀಸ ಹೆಡ್‌ಕ್ವಾರ್ಟರ್ಸನವರಿಗೂ ಹಾಗೂ ಧಾರವಾಡ ಸಾರಸ್ವತ ಸಮಾಜದ ಕಾರ್ಯಕರ್ತರಿಗೂ ವನಿತಾ ಸೇವಾ ಸಮಾಜವು ತುಂಬಾ ಋಣಿಯಾಗಿದೆ.

# ವೀರಮಾತೆ







ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಾದ
ಕನ್ನಡ ಮಾಸಪತ್ರಿಕೆ

ಸಂಪುಟ ೮ | ಅಕ್ಟೋಬರ ೧೯೫೯ | ಸಂಚಿಕೆ ೪

 ## ಸಂಪಾದಕೀಯ 

### ಚಲಚ್ಚಿತ್ರಗಳು ಹಾಗೂ ಮಕ್ಕಳು

ಚಲಚ್ಚಿತ್ರಗಳಲ್ಲಿ ಸಮಾಜ ವಿಕಾಸಕ್ಕೆ ಅನಾರೋಗ್ಯಕರವಾದ ಕೆಲವೊಂದು ವಿಷಯ ಹಾಗೂ ವಸ್ತುಪ್ರದರ್ಶನಕ್ಕೆ ವಿರೋಧ ಮಾಡುವ ಸಂಸ್ಥೆಯು ಜನರಿಗೂ ಸರಕಾರಕ್ಕೂ ಕೂಡಿಯೇ ಒಂದು ವಿನಂತಿಯನ್ನು ಮಾಡಿಕೊಂಡಿದೆ. ಚಲಚ್ಚಿತ್ರಗಳಲ್ಲಿ ಪ್ರದರ್ಶಿಸಲ್ಪಡುವ ಲೈಂಗಿಕ ವಿಷಯ ಹಾಗೂ ಅಪರಾಧೀ ಮನೋವೃತ್ತಿಯ ಯಶಸ್ವೀ ಪ್ರಚಾರ ಇವುಗಳಿಂದಾಗಿ ಮಕ್ಕಳ ಮನಸ್ಸಿನ ಮೇಲೆ ಯಾವ ತರದ ಪರಿಣಾಮವಾಗುತ್ತಿದೆಯೆಂಬುದನ್ನು ಕಲ್ಪನೆ ಮಾಡುವದೂ ಅಸಾಧ್ಯ. ಸಮಾಜವಿಕಾಸಕ್ಕೆ, ಕುಟುಂಬದ ಶಾಂತಿಗೆ ವಿರೋಧಿಯಾದಂಥ ಮನೋವೃತ್ತಿಗಳು ಇದರಿಂದ ಬೆಳೆಯುತ್ತಿವೆ. ಅತ್ಯಂತ ಪ್ರಗತಿವಾದಿಗಳೆಂದು ಹೇಳಿಕೊಳ್ಳುವವರು, ಈ ಪ್ರದರ್ಶನದ ಬಗ್ಗೆ ಇಷ್ಟು ಕಟುವಾಗಿ ಮಾತನಾಡಬಾರದೆಂದು ಹೇಳಬಹುದು. ಪರಂಪರಾಪ್ರಿಯರು, 'ಎಂತಹ ಅಶ್ಲೀಲತೆಯನ್ನು ಪ್ರದರ್ಶಿಸುತ್ತಾರೆ, ಅದನ್ನು ಇನ್ನೂ ತೀವ್ರವಾಗಿ ಖಂಡಿಸಬೇಕು,' ಎಂದು ಅಭಿಪ್ರಾಯಪಡಬಹುದು. ಆದರೆ ಚಲಚ್ಚಿತ್ರಗಳ ಈ ಪರಿಣಾಮವಾಗಿ ಅಸಂಖ್ಯ ತಾಯಿ-ತಂದೆಗಳು ಪಾಲಕರು ಮಾತ್ರ ಯೋಚಿಸತೊಡಗಿದ್ದಾರೆಂಬುದು ನಿಜ !

ಚಲಚ್ಚಿತ್ರಗಳೂ ಶಿಕ್ಷಣಕ್ಕೆ ಒಂದು ಸಾಧ್ಯವು; ಮಕ್ಕಳಿಗಷ್ಟೇ ಅಲ್ಲ. ಜನಸಮೂಹಕ್ಕೂ ಅಹುದು. ಬೇಗನೆ ಪರಿಣಾಮವನ್ನುಂಟು ಮಾಡುವ ಶಕ್ತಿ ಚಲಚ್ಚಿತ್ರಕ್ಕಿದೆ, ಅದೂ ವಿಶೇಷತಃ ಮಕ್ಕಳ ಮನಸ್ಸಿನ ಮೇಲೆ. ಬಳಿಕ ಲೈಂಗಿಕ ವಿಷಯ ಹಾಗೂ ಗುನ್ಹೆಯ ವಿಚಾರಗಳ ಯಶಸ್ವೀ ಪ್ರಚಾರವು ಮಕ್ಕಳ ಮನಸ್ಸಿನ ಮೇಲೆ ಯಾವ ಪರಿಣಾಮವನ್ನು ತಾನೇ ಮಾಡಬಹುದು ?

ಕೇಂದ್ರ ಸರಕಾರದ ಸುದ್ದಿ ಹಾಗೂ ಬಾನುಲಿಶಾಖೆಯು ನಿಶ್ಚಿತವಾಗಿಯೂ ಇದರ ಬಗ್ಗೆ ಅಲಕ್ಷ್ಯ ಮಾಡಕೂಡದು. ಅಶ್ಲೀಲತೆಯ ಪ್ರದರ್ಶನದ ಬಗ್ಗೆ ಪಾರ್ಲಿಮೆಂಟಿನಲ್ಲಿಯೇ ಬೇಕಾದಷ್ಟು ಚರ್ಚೆ ನಡೆದಿದೆ. ಸೆನ್ಸಾರ ಬೋರ್ಡು

(ಪರೀಕ್ಷಕ ಮಂಡಳ) ಇಟ್ಟುಕೊಂಡಿರುವ ಅಳತೆಗೋಲಿನಲ್ಲಿಯೇ ವ್ಯತ್ಯಾಸವಾಗುವದು ಅವಶ್ಯವಾಗಿದೆಯೇನೊ! ಜನತೆಯ ಅಭಿರುಚಿಯೇ ಕೆಳಮಟ್ಟದ್ದಾಗುತ್ತಿದ್ದರೆ, ಅದು ಕೆಳಗಿಳಿಯದಂತೆ ಒಳ್ಳೆಯ ಶಿಕ್ಷಣಕೊಡಬೇಕಾದ್ದು ಚಲಚ್ಚಿತ್ರಗಳ ಕರ್ತವ್ಯವೂ ಆಗಿದೆ ಪಾಲಕರೂ ಈ ದಿಕ್ಕಿನಲ್ಲಿ ಯೋಚಿಸಬೇಕು.

ದಿಲ್ಲಿಯಲ್ಲಿ ೩ರಿಂದ ೧೮ ವರ್ಷದೊಳಗಿನ ಮಕ್ಕಳು ಹಗಲು ಹೊತ್ತಿನಲ್ಲಿ ಚಲಚ್ಚಿತ್ರಗಳನ್ನು ನೋಡಲು ಅವಕಾಶವಿರಕೂಡದೆಂದು ನಿರ್ಬಂಧವನ್ನು ಹಾಕಿದ್ದರೆ, ಪಾಲಕರೇ ಈ ನಿರ್ಬಂಧದ ವಿರುದ್ಧ ತಕರಾರು ಮಾಡಿದವರು. ಹುಡುಗರು ಶಾಲೆ-ಕಾಲೇಜು ತಪ್ಪಿಸಿ ಚಲಚ್ಚಿತ್ರಗಳಿಗೆ ಬರಕೂಡದೆಂಬ ಸದುದ್ದೇಶವೇ ಅವರಲ್ಲಿದ್ದದ್ದು! ಸಾಯಂಕಾಲದ ಅಥವಾ ರಾತ್ರಿ ಆಟಗಳಿಗೆ ಈ ನಿರ್ಬಂಧವಿರಲಿಲ್ಲ. ಈ ನಿರ್ಬಂಧವು ಸಡಿಲಾದದ್ದು ಸಾರ್ವಜನಿಕರ ಒತ್ತಾಯದ ಮೂಲಕವೋ ಅಥವಾ ವಿಶಿಷ್ಟವರ್ಗದ ಪ್ರಾತಿನಿಧಿಕ ಸ್ವರೂಪದ ಒತ್ತಾಯದ ಮೂಲಕವೊ! ಸರಕಾರವು ಚಲಚ್ಚಿತ್ರಗಳಲ್ಲಿಯ ಅಶ್ಲೀಲತೆಯನ್ನು ನಿವಾರಿಸುವದಕ್ಕಾಗಿ ಇನ್ನೂ ಹೆಚ್ಚಿನ ನಿರ್ಬಂಧವನ್ನು ಹೇರಿದರೆ, ಜನತೆ ಈ ನಿರ್ಬಂಧವನ್ನು ಸ್ವಾಗತಿಸುವದೆಂಬಲ್ಲಿ ನಿಶ್ಚಯವೇನಿದೆ?

ಚಿಕ್ಕವರನ್ನು ಬಿಡಬಾರದೆಂದೂ, ಕೇವಲ ದೊಡ್ಡವರಿಗಾಗಿಯೇ ಚಿತ್ರಪಟವಿದೆಯೆಂದೂ ಅಂದರೆ, ದೊಡ್ಡವರ ವಯಸ್ಸನ್ನೇ ಹೇಳಹೋಗಬೇಕೆಂಬ ಪ್ರವೃತ್ತಿ ಚಿಕ್ಕವರದು! ಬಳಿಕ ಇಂತಹ ಚಿತ್ರಪಟಗಳ ಆಕರ್ಷಣೆ, ಪರಿಣಾಮ ಮಕ್ಕಳ ಮೇಲೆ ಒಳ್ಳೆಯದಾಗಬಲ್ಲದೆ? ಪಾಲಕರೂ ಸರಕಾರವೂ ಒಟ್ಟಿನಲ್ಲಿಯೇ ಈ ದಿಕ್ಕಿನಲ್ಲಿ ವಿಚಾರ ಮಾಡಬೇಕಾದ್ದು ಅತ್ಯವಶ್ಯವಾಗಿದೆ.

# ಕಿತ್ತೂರು !

**ಲೇ— ಸರೋಜಿನಿ ಮಹಿಷಿ.**

**— ಪಾತ್ರವರ್ಗ —**

೧) ಮಲ್ಲಸರ್ಜ
೨) ಸೇನಾಪತಿ
೩) ಮಂತ್ರಿ
೪) ನಿಂಗಪ್ಪ } ಇಬ್ಬರು ಪ್ರಜೆಗಳು.
೫) ಮಲ್ಲಪ್ಪ }
೬) ಶಿವಲಿಂಗರುದ್ರ ಸರ್ಜ
೭) ಚೆನ್ನಮ್ಮ
೮) ದೂತ } ಪ್ರಜೆಗಳು.
೯) ಬಾಳಪ್ಪ }

**ದೃಶ್ಯ ೧.**

**ನಿವೇದಕ—** ಕಿತ್ತೂರಿನ ದೇಸಾಯಿ ಮಲ್ಲಸರ್ಜ ದೊರೆಯು ಮಂತ್ರಾಗಾರ ದೇಸಾಯಿ ಚಿಂತಾಕ್ರಾಂತನಾಗಿದ್ದಾನೆ. ಸೇನಾಧಿಪತಿಯು ಪ್ರವೇಶಿಸುತ್ತಾನೆ.

ಸೇನಾ— ಮಹಾ ಪ್ರಭುಗಳಿಗೆ ಜಯವಾಗಲಿ.

ಮಲ್ಲಸರ್ಜ— ಸೇನಾಧಿಪತಿಗಳೇ, ಕಿತ್ತೂರಿನ ಭವಿತವ್ಯದ ಬಗ್ಗೆ ನನಗೆ ಯೋಚನೆಯಾಗಿದೆ.

ಸೇನಾ— ಮಹಾ ಪ್ರಭುಗಳಿಗೆ ತೊಂದರೆ ಕೊಡುವ ಯೋಚನೆ ಯಾವುದು ?

ಮಲ್ಲಸರ್ಜ— ನನ್ನ ಪೂರ್ವಜರು ಕಲಿತನದಿಂದ ಕಾದು, ಗಳಿಸಿ ಬೆಳೆಸಿದ ಕಿತ್ತೂರು—ನನ್ನ ಕಿತ್ತೂರು ಇಂದು ಮರಾಠರಿಗೂ ಟೀಪುವಿಗೂ ಕಾದಾಟದ ಕೇಂದ್ರವಾಗಿದೆ! (ದುಃಖ ಕೋಪಗಳಿಂದ) ಒಬ್ಬನಲ್ಲದಿದ್ದರೆ ಇನ್ನೊಬ್ಬನನ್ನು ಸುಖಿಸುವ ವೇಶ್ಯೆಯಂತಾಗಿದೆ ನಮ್ಮ ಗತಿ!! ಅಭಿಮಾನಧನರಾದ ನಮಗೆ ಇದು ಯೋಗ್ಯವೇ ಸೇನಾಪತಿಗಳೇ! ಇದರಿಂದ ಕಿತ್ತೂರಿನ ಭವಿತವ್ಯವೇನಾದೀತು!!

ಸೇನಾ— ತಮ್ಮ ಯೋಚನೆ ಸೂಕ್ತವಾಗಿದೆ ಮಹಾಪ್ರಭು! ಇಷ್ಟೇ ಅಲ್ಲ ಕಂಪನಿ ಸರಕಾರದವರೂ ಹೊಂಚು ಹಾಕುತ್ತಿದ್ದಾರೇನೋ! ಹೊತ್ತು ಸಾಧಿಸಿ ಯಾರ ಮೇಲೆ ಬಿದ್ದಾರೆಂದು ಹೇಳಲು ಬಾರದು. ಆದರೆ ಮಹಾಪ್ರಭು (ಗದ್ಗದಿತನಾಗಿ) ನಮ್ಮ ದೇಹದಲ್ಲಿ ಒಂದು ಹನಿ ರಕ್ತವಿರುವವರೆಗೂ ಕಿತ್ತೂರಿಗಾಗಿ ಕಾದುತ್ತೇವೆ. ವೀರ ಸ್ವರ್ಗ ಸೇರಿದರೂ ಸರಿ. ಶತ್ರುಗಳಿಗೆ ಬೆನ್ನು ತೋರಿಸಿ ಮಾತ್ರ ಬರಲಾರೆವು!

ಮಲ್ಲಸರ್ಜ— ಸರಿ ಸೇನಾಧಿಪತಿಗಳೇ, ಭಾವಾವೇಶದಲ್ಲಿ, ಸುಸಂಘಟಿತರಾಗದೆ ನಾವು ಹೋರಾಡಿ ಪ್ರಯೋಜನವೇನು? ನಮ್ಮ ರಾಜ್ಯದ ಸುದೈವವೋ, ನನ್ನ ಸುದೈವವೋ, ಟೀಪುವಿನ ಹಿಡಿತದಿಂದ ಕೊಪ್ಪಳದ ಕೋಟೆಯಿಂದ ನಾನು ಪಾರಾಗಿ ಬಂದುದೇ ಒಂದು ದೊಡ್ಡ ಮಾತಾಗಿದೆ! ಇಲ್ಲದಿದ್ದರೆ....

ಸೇನಾ— ಅಹುದು ಮಹಾಪ್ರಭು, ತಾನು ಪಾರಾಗಿ ಬಂದುದರಿಂದಲೇ ನಮ್ಮ ನಾಡಿನಲ್ಲಿ ಪುನಃ ಜೀವ ಸಂಚರಿಸಿದೆ.

ಮಲ್ಲಸರ್ಜ— ಅದಿರಲಿ ಸೇನಾಪತಿಗಳೇ, ನಮ್ಮ ಬಲವನ್ನೆಲ್ಲ ಸುಸಂಘಟಿತಗೊಳಿಸಬೇಕಾದ್ದು ಈಗ ಅತ್ಯವಶ್ಯವಾಗಿದೆ. ಎಂತಹ ಪ್ರಸಂಗದಲ್ಲಿಯೂ ಎದುರಿಸಲು ನಾವು ಸಿದ್ಧರಾಗಬೇಕು. ಅಲ್ಲದೇ ಮರಾಠರ ಪಕ್ಷವನ್ನು ವಹಿಸಬೇಕೋ ಹೇಗೆ ಎಂಬುದನ್ನು ಕುರಿತು ಯೋಚಿಸಬೇಕು. ನೀವೆಂದಂತೆ ಕಂಪನಿ ಸರಕಾರದವರ ಬಲವೂ ಬೆಳೆಯುತ್ತಿದೆ.

ಸೇನಾ— ಈ ವಿಷಯವನ್ನೆಲ್ಲ ಇಂದಿನ ಸಭೆಯಲ್ಲಿ ಯೋಚಿಸುವದು ಒಳ್ಳೆಯದಾದೀತು ಮಹಾಪ್ರಭು!

ಮಲ್ಲಸರ್ಜ— ನಾನೂ ಅದನ್ನೇ ಯೋಚಿಸುತ್ತಿದ್ದೇನೆ. ರಾಜ್ಯದ ವೃದ್ಧರೊಡನೆಯೂ ಹಿತಚಿಂತಕರೊಡನೆಯೂ, ಮಂತ್ರಿ ಮಂಡಲದೊಡನೆಯೂ, ಯೋಚಿಸಿ ನಿರ್ಧರಿಸುವದು ಒಳ್ಳೆಯದು....ಹಾಗಾದರೆ ಇಂದೇ ಮಧ್ಯಾಹ್ನ ಸಭೆ ಕೂಡಲಿ.

ಸೇನಾ— ಆಗಲಿ ಮಹಾ ಪ್ರಭು (ವಂದಿಸಿ ನಿಷ್ಕ್ರಮಣ)

(ಮಲ್ಲಸರ್ಜ ದೊರೆಯು ಆಸ್ಥಾನ ಪರಿವಾರದೊಂದಿಗೆ ಬರುತ್ತಿದ್ದಾರೆ)

"ರಾಜಾಧಿರಾಜ ಶ್ರೀಮಂತ ಮಲ್ಲಸರ್ಜ ಪ್ರತಾಪರಾವ ದೇಸಾಯಿ ಸಮಶೇರ ಜಂಗ ಬಹಾದ್ದೂರ ಅವರಿಗೆ ಜಯವಾಗಲಿ, ಜಯವಾಗಲಿ (ಆಸ್ಥಾನದ ಗರ್ಜನೆ)

ಮಲ್ಲಸರ್ಜ— (ಆಸ್ಥಾನವನ್ನಲಂಕರಿಸಿ) ಮಂತ್ರಿವರ್ಯರೆ, ಕಿತ್ತೂರಿನ ನಮ್ಮ ದೇಸಗತಿಯಲ್ಲಿ ಪ್ರಜೆಗಳು ಶಾಂತಿ ಸುವ್ಯವಸ್ಥೆಗಳಿಂದ ಸುಖವಾಗಿರುವಂತೆ ನೋಡಿಕೊಳ್ಳುವದು ನಮ್ಮ ಆದ್ಯ ಕರ್ತವ್ಯ.

ಮಂತ್ರಿ— ಅಹುದು ಮಹಾಪ್ರಭು ! ಹಿಂದೆಂದೂ ಕಾಣದ ವೈಭವವನ್ನು ನಮ್ಮ ಕಿತ್ತೂರ ನಾಡಿನ ಪ್ರಜೆಗಳು ಇಂದು ಕಾಣುತ್ತಿದ್ದಾರೆ.

ಮಲ್ಲಸರ್ಜ— ಆ ಹೆಮ್ಮೆ ನನಗಿಲ್ಲ ಮಂತ್ರಿಗಳೇ! ಹತ್ತು ತಲೆಗಳಿಂದ ಗಳಿಸಿ ಉಳಿಸಿಕೊಂಡು ಬಂದ ನಾಡಿನ ಘನತೆಯನ್ನು ಕಾಯ್ದುಕೊಂಡು ಹೋದರೆ ಸಾಕು. ಕವಿಗಳನ್ನು ಕಲಾವಿದರನ್ನು ಪೋಷಿಸಿದ ನಮ್ಮ ನಾಡು ಇಂದು ಪೇಶವೆ ಹಾಗೂ ಟೀಪುವಿನ ಆಕ್ರಮಣಕ್ಕೆ ಸಿಕ್ಕಿ ನುಚ್ಚು ನೂರಾಗುತ್ತಿದೆಯೆಂಬುದನ್ನು ನಮ್ಮ ಪ್ರಜೆಗಳು ಬಲ್ಲರು..........ಶಾಂತಿ ಕಂಗೆಡದಿರಲು, ವೈಭವ ಕುಂದದಿರಲು ಯೋಚಿಸಬೇಕಾದ ಉಪಾಯಗಳನ್ನು ಕೂಡಲೆ ಯೋಜಿಸಬೇಕು.

ಪ್ರಜೆಗಳು— ಮಹಾಪ್ರಭು ಎಂಥ ಪ್ರಸಂಗದಲ್ಲಿಯೂ ಕಿತ್ತೂರಿಗಾಗಿ ಹೋರಾಡಲು ನಾವು ಸದಾ ಸಿದ್ಧರು.

ಮಲ್ಲಸರ್ಜ— ನಿಮ್ಮ ಬೆಂಬಲ ನಮಗಿದ್ದೇ ಇದೆ ಎಂಬುದು ನನಗೆ ಗೊತ್ತು. ಆದರೆ ಸಾಮಂತ ಪಾಳೆಯಗಾರರನ್ನೂ ನಮ್ಮ ಸೈನ್ಯ ಬೆಂಬಲವನ್ನೂ ಸಂಘಟಿಸಬೇಕಾಗಿದೆ. ಈ ದಿಕ್ಕಿನಲ್ಲಿ ಯತ್ನಿಸಿದ್ದಾದರೆ, ನಮಗೆ ಜಯವು ದೊರತೀತೆಂಬ ಆಶೆಯಿದೆ ಅಥವ ಆದರ ಪ್ರಥಮ ಕುರುಹಾಗಿ ಕಾಕತಿಯ ದೇಸಾಯರು ತಮ್ಮ ಕನ್ಯೆಯನ್ನೂ ಬೆಂಬಲವನ್ನೂ ಒಟ್ಟಿಗೆ ನೀಡಿ ನಮ್ಮ ಸ್ನೇಹವನ್ನು ದೃಢಪಡಿಸಿದ್ದಾರೆ.

ಪ್ರಜೆಗಳು— ಮಹಾಪ್ರಭುಗಳಿಗೆ ಜಯವಾಗಲಿ !

ಮಲ್ಲಸರ್ಜ— ಸಧ್ಯ ಶ್ರೀರಂಗ ಪಟ್ಟಣದ ಒಪ್ಪಂದದಿಂದಾಗಿ ಪೇಶವೆಯರು ಕಿತ್ತೂರನ್ನು ನಮಗೆ ಒಪ್ಪಿಸುವ ಅವಕಾಶ ದೊರತಿತು. ಆದರೆ ಆದಕ್ಕಾಗಿ ಪೇಶವೆಯವರಿಗೆ ದೊಡ್ಡ ಮೊತ್ತವನ್ನು ಕಪ್ಪ ಕಾಣಿಕೆಯೆಂದು ಕೊಡುವದನ್ನು ಮಾತ್ರ ಬಿಡುವಂತಿಲ್ಲ.

ಸೇನಾಧಿಪತಿ— ಅಲ್ಲದೇ ಕಂಪನಿ ಸರಕಾರದ ಭಯವೂ ನಮಗಿದೆ ಮಹಾಪ್ರಭು! ಇದೇ ತಾನೇ ಮಂತ್ರಿಗಳು ಕಂಪನಿ ಸರಕಾರದ ಈ ಪತ್ರವನ್ನು ನನ್ನ ಕೈಗಿತ್ತರು. ಕುದುರೆ ಕಾಲಾಳುಗಳನ್ನೂ, ಸೈನ್ಯಕ್ಕಾಗಿ ಸಂಗೊಳ್ಳಿಯ ಕೋಟೆಯನ್ನೂ ಕೂಡಲೇ ನಾವು ಕಂಪನಿ ಸರಕಾರಕ್ಕೆ ಕೊಡಬೇಕಂತೆ. ಅಂದರೆ ಮಾತ್ರ ಪಾಘನ ದಾಳಿಯನ್ನು ತಡೆಯುವದು ಸಾಧ್ಯ ಎಂದು ಬರೆದಿದ್ದಾರೆ.

ಮಲ್ಲಸರ್ಜ— ಮಂತ್ರಿಗಳೇ, ಇದಕ್ಕೆ ನಿಮ್ಮ ಅಭಿಪ್ರಾಯವೇನು ?

ಮಂತ್ರಿ— ಕಿತ್ತೂರಿನ ಶಾಂತತೆಯ ದೃಷ್ಟಿಯಿಂದ ಸಧ್ಯಕ್ಕಂತೂ ಒಪ್ಪಿಕೊಳ್ಳುವದೇ ಒಳ್ಳೆಯದಾದೀತು ಮಹಾಪ್ರಭು !

ಮಲ್ಲಸರ್ಜ— ಹಾಗಿದ್ದರೆ ಮುಂದಿನ ವ್ಯವಸ್ಥೆಯನ್ನೆಲ್ಲ ಮಾಡಬಹುದು ಆದರೆ ಪೇಶವೆಯವರಿಗೂ, ಕಂಪನಿ ಸರಕಾರಕ್ಕೂ ಯುದ್ಧವಾದರೆ ನಮ್ಮ ಗತಿ ಏನಾದೀತೆಂಬುದನ್ನೂ ಸ್ವಲ್ಪ ಯೋಚಿಸಬೇಕು. ಸಂಪಗಾವಿ, ಬೀಡಿ, ಖಾನಾಪೂರ, ಬೆಳಗಾವಿ, ಸವದತ್ತಿ, ಹಳಿಯಾಳಗಳ ಭಾಗಗಳನ್ನು ಕೂಡಿಸಿ ಸಂಘಟಿಸಿದರೂ, ಈ ಸೈನ್ಯಗಳನ್ನೆದುರಿಸುವ ಶಕ್ತಿ ಬರಲಿಕ್ಕಿಲ್ಲ. ಯುಕ್ತಿಯಿಂದ ಪಾರಾಗುವದೇ ಲೇಸು !.........ನಾನಿರುವ ವರೆಗೆ ಹೇಗೋ ನೋಡಿಕೊಳ್ಳುತ್ತೇನೆ. ಆದರೆ ಶಿವರುದ್ರ ಸರ್ಜನನ್ನು ನೋಡಿಕೊಳ್ಳುವದು ಮಾತ್ರ ನಿಮ್ಮನ್ನೇ ಕೂಡಿದ್ದು ಅಂತಃಪುರದ ಅಭಿಪ್ರಾಯವೇನೆಂಬುದನ್ನು ಈ ಸಮಯದಲ್ಲಿ ತಿಳಿಯಬೇಕಾದ್ದು ಅವಶ್ಯ! ಒಟ್ಟಿನಲ್ಲಿ ಕಿತ್ತೂರ ನಾಡು ನೆಮ್ಮದಿಯಿಂದ ಇರಬೇಕೆಂಬುದೇ ನನ್ನ ಇಚ್ಛೆ !

ಮಂತ್ರಿಗಳೇ, ಇಂದಿನ ಸಭೆ ಇಲ್ಲಿಗೆ ಮುಗಿಯಲಿ ! ನಮ್ಮ ಪ್ರತಾಪಗಡದ ಕೋಟೆಯಲ್ಲಿ ಕುಳಿತು ಮುಂದಿನ ಯೋಜನೆಯನ್ನು ಮಾಡೋಣ.

ಮಂತ್ರಿ— ಪ್ರಭುಗಳ ಅಪ್ಪಣೆ !

"ರಾಜಾಧಿರಾಜ ಶ್ರೀಮಂತ ಮಲ್ಲಸರ್ಜ ಪ್ರತಾಪರಾವ ಸರದೇಸಾಯಿ ಸಮಶೇರಲಿಂಗ ಬಹಾದ್ದೂರ ಅವರಿಗೆ ಜಯವಾಗಲಿ" (ಪ್ರಜೆಗಳು ಜಯಘೋಷ ಮಾಡುತ್ತಾರೆ. ಮಲ್ಲಸರ್ಜರ ನಿಷ್ಕ್ರಮಣ)

ದೃಶ್ಯ ೩.

[ಕಿತ್ತೂರಿನ ಬೀದಿಯ ಒಂದು ಭಾಗ. ಪ್ರಜೆಗಳಿಬ್ಬರು ಮಾತನಾಡಿಕೊಳ್ಳುತ್ತಿದ್ದಾರೆ.]

ನಿಂಗಪ್ಪ— ಮಲ್ಲಪ್ಪಾ ಮತ್ತ ನಮ್ಮ ದೇಸಾಯರನ್ನ ಮರಾಟೇರು ಯಾವದೋ ಊರಾಗ ಒಯ್ದು ಕೈದಿನಾಗ ಟ್ಟಾರಂತ ಸುದ್ದಿ ಅsತಿ ! ಹೌದೇನು ?

ಮಲ್ಲಪ್ಪ— ನಾನೂ ಕೇಳೇನೋ ನಿಂಗಪ್ಪಜ್ಜಾ ! ಅದರ ಮುಂದಿಂದುs ಆsಟ ಸುದ್ದಿ ಕೇಳೇನಿ. ಕರ್ಮವೋ ಅಲ್ಲೋ ಎನ್ನುದು ಆ ಪರಮಾತ್ಮಗs ಗೊತ್ತು !

ನಿಂಗಪ್ಪ— ಅದೇನೋ ಸುದ್ದಿ ಮತ್ತ ?

ಮಲ್ಲಪ್ಪ— ಮಲ್ಲಸರ್ಜ ದೇಸಾಯರು ಅಲ್ಲೇ ಕಣ್ಣ ಮುಚ್ಚಿದರು ಅಂತ ಕೇಳಿದೆ. ಕೇಳಾಕ ಮನಸs ಆಗಲಿಲ್ಲ. ಚೆನ್ನಮ್ಮ ತಾಯಿಗೆ, ರುದ್ರವ್ವ ತಾಯಿಗೆ ಏಟ ದುಃಖೋ.

ನಿಂಗಪ್ಪ— ಇರೂತsನ ಮಾರಾಯ ಹಾಲಹೊಳೀ ಸಿದ ಕಿತ್ತೂರಾಗs ಅಂತಾವಗ ಇಂತಾ ಹೊತ್ತ ಬಂತs ! ತ್ತಾsಗ ಹುಲಿ, ಅತ್ತಾಗ ದರಿ; ಆsಟ ಹುಡುಗ ಆ ಶಿವ ಲಿಂಗರ ಏನ ಮಾಡೀತುs ! ಕೆಂಪ ಮೂತಿ ಕಂಪನಿ ಸರಕಾರ ವರದೂ ಬಾಳ ಮಸಲತ್ತ ಐತೇಳ ಇದರಾಗ !

ಮಲ್ಲಪ್ಪ— ಏನೈತ್ಯೋ ಏನೋ ! ಊರ ಅರಸರ ಸುದ್ದಿ ತೊಗಂಡ ಉಣದ ಕೆಟ್ಟರಂತ. ನಮಗ್ಯಾಕ ಬೇಕ ಡಪ ದೊಡ್ಡವರ ಸುದ್ದಿ ! ನಡೀ ಹೋಗೂಣು !

ದೃಶ್ಯ ೪.

ವೇದಕ— ಮಲ್ಲಸರ್ಜ ದೊರೆಯ ಮರಣದಿಂದ ದುಃಖಿತ ಳಾದರೂ ಚೆನ್ನಮ್ಮ ಧೈರ್ಯಗೆಡದೆ, ರಾಜ್ಯದ ಕಲ್ಯಾಣ ನ್ನು ನೋಡಿಕೊಳ್ಳುವದು, ಆಡಳಿತದಲ್ಲಿ ಸಲಹೆ ಕೊಡುವದು ನಿವಾರ್ಯವಾಗಿತ್ತು. ಅವ್ವ ರುದ್ರವ್ವನ ಮಗ ಶಿವಲಿಂಗ ದ್ರ ಸರ್ಜರನ್ನು ಪಟ್ಟಕ್ಕೆ ಕುಳ್ಳಿರಿಸಿ, ಚೆನ್ನಮ್ಮ ಹಿನ್ನೆಲೆಯಲ್ಲಿ ಂತು ಸಲಹೆ ನೀಡಿದಳು.

ಸ್ಥಳ— [ಅಂತಃಪುರ. ಶಿವಲಿಂಗ ರುದ್ರ ಸರ್ಜರು ಚೆನ್ನ ನ್ನನ ಸಲಹೆ ಕೇಳುತ್ತಿದ್ದಾರೆ.]

ಶಿವಲಿಂಗ— ಅವ್ವಾ ಪೇಶವೆಯರ ಬಲ ಕುಗ್ಗುತ್ತ ಂತು. ಕಂಪನಿಯವರ ಬಲ ಹೆಚ್ಚುತ್ತ ಬಂತು. ನಾವು ಶವೆಯವರಿಗೆ ಕಪ್ಪ ಕಾಣಿಕೆಗಳನ್ನು ಕೊಡುವದನ್ನು ೀಡುವದೂ ಕಂಪನಿಯವರಿಂದ ಆಗದು ! ಅಪ್ಪನ ಕಾಲ ಕಂಪನಿಯವರಿಗೆ ಸಹಾಯ ಸಲ್ಲಿಸಿ ಪಾರಾದಂತೆ ಈ ಬಾ ಪಾರಾಗಬೇಕಾಗಿದೆ....ಏನು ಮಾಡಬೇಕೋ ತಿಳಿಯದಾಗಿದೆ.

ಚೆನ್ನಮ್ಮ— ಮಗು, ಕಂಪನಿ ಸರಕಾರದವರ ನೀತಿ ಕುಟಿಲ ನೀತಿ. ಯಾವ ಹೊತ್ತಿಗೆ ಅವರು ಕೊರಳು ಕೊಯ್ಯು ವರೆಂಬುದನ್ನು ಹೇಳಲಿಕ್ಕಾಗದು. ನಿನ್ನ ತಂದೆ ಅದನ್ನೆಲ್ಲ ಬಲ್ಲವರಾಗಿದ್ದರು. ಕಿತ್ತೂರಿನ ಅಂತರಂಗವನ್ನು ಮಾತ್ರ ಅವರೆದುರು ಬಿಚ್ಚಿಡಬೇಡ !

ಶಿವಲಿಂಗ— ಅದಕ್ಕೆಂದೇ ನಿನ್ನ ಸಲಹೆ ಪಡೆಯಲು ಬಂದೆ ತಾಯಿ ! ಬೆಳಗಾವಿಯನ್ನು ಮುತ್ತಿದ್ದ ಜನರಲ್ ಮನ್ರೋನಿಗೆ ಸೈನ್ಯ ಸಾಮಗ್ರಿಗಳಿಂದ ಸಹಾಯಸಲ್ಲಿಸಿದೇನೆ. ಈಗ ಕಂಪನಿ ಸರಕಾರಕ್ಕೆ ಜಯ ದೊರಕಿದಂತೇ ಆಗಿದೆ.

ಚೆನ್ನಮ್ಮ— ಇನ್ನಾದರೂ ನಮ್ಮ ನಾಡಿನ ಬಳಿ ಅವರು ಸುಳಿಯದಿದ್ದರೆ ಸಾಕು.

ಶಿವಲಿಂಗ— ಈಗ ಬಂದಿರುವದು ಅದೇ ಪ್ರಶ್ನೆ. ನಾವು ಪೇಶವೆಯವರಿಗೆ ಕೊಡುತ್ತಿದ್ದ ಕಪ್ಪ-ಕಾಣಿಕೆಗಳನ್ನು ಕಂಪನಿ ಯವರಿಗೆ ಸಲ್ಲಿಸಿದರೂ ಸಾಕಾಗದಂತೆ ನಾವು ಸೈನ್ಯವನ್ನಿಡ ಕೂಡದೂ ಎಂಬ ಕರಾರನ್ನು ಹಾಕುತ್ತಿದ್ದಾರೆ.

ಚೆನ್ನಮ್ಮ— ಸೈನ್ಯವನ್ನು ಕಸಿದುಕೊಂಡು ದುರ್ಬಲ ರನ್ನಾಗಿ ಮಾಡಬೇಕೆಂದಿದ್ದಾರೆಯೋ? ಹಾಗಾದರೆ ಮತ್ತೊಂದು ಯುದ್ಧದ ಬೀಜವನ್ನೇ ಬಿತ್ತುತ್ತಿದ್ದಾರೆ ರಕ್ಕಸರು !

ಶಿವಲಿಂಗ— ಅದೂ ಅಲ್ಲದೇ ಸೈನ್ಯದ ವೆಚ್ಚಕ್ಕಾಗಿ ನಾವು ಮೀಸಲಾಗಿಟ್ಟಿದ್ದ ಖಾನಾಪುರವನ್ನು ಅವರಿಗೇ ಬಿಟ್ಟು ಕೊಡಬೇಕಂತೆ !

ಚೆನ್ನಮ್ಮ— ಈ ಕರಾರುಗಳಿಗೆ ಒಪ್ಪದಿದ್ದರೆ ಏನು ಮಾಡುವರಂತೆ....?

ಶಿವಲಿಂಗ— ಮತ್ತೆ ಯುದ್ಧಕ್ಕೆ ಆಹ್ವಾನ ಕೊಟ್ಟಂತಾ ದೀತು ! ಆದರೆ ಕಂಪನಿಸರಕಾರದ ಜೊತೆಗೆ ಯುದ್ಧ ಮಾಡಿ ದರೆ ಕಿತ್ತೂರಿನ ಸೈನ್ಯ ನಿಲ್ಲಬಹುದೇ ?

ಚೆನ್ನಮ್ಮ— ಮಗು ಶಿವಲಿಂಗ, ವೀರದೇಸಾಯರ ಅಭಿಮಾನದ ರಕ್ತ ನಮ್ಮ ನರಗಳಲ್ಲಿ ಹರಿಯುತ್ತಿದೆ. ನಾಡಿ ಗಾಗಿ ರಣರಂಗದಲ್ಲಿ ಸ್ವಾಭಿಮಾನದಿಂದ ಮಡಿದರೂ ನಾನು ಲೆಕ್ಕಿಸುವದಿಲ್ಲ. ಆದರೆ ನೋಡು, ಸಾಮೋಪಾಯದಿಂದ ಕಾರ್ಯ ಜಗೆಹರಿಯುವದಾದರೆ ಸರಿ ! ಎಲ್ಲ ಉಪಾಯಗಳೂ ಮುಗಿದುದೆಂದರೆ, ಯುದ್ಧ ಇದ್ದೇ ಇದೆ !

ಶಿವಲಿಂಗ— ಆಗಲಿ ಪ್ರಯತ್ನಿಸುತ್ತೇನೆ ತಾಯಿ, ನಿನ್ನ ಆಶೀರ್ವಾದದ ಬಲವೊಂದಿದ್ದರೆ ಸಾಕು, ರಾಜ್ಯದ ಮಂತ್ರಿ ಗೊಡನೆಯೂ, ಹಿರಿಯರೊಡನೆಯೂ ವಿಚಾರ ಮಾಡುತ್ತೇನೆ.

ಚೆನ್ನಮ್ಮ— ಹೋಗಿ ಬಾ ಮಗು, ಯಶಸ್ವಿಯಾಗು.

ದೃಶ್ಯ ೩.

ನಿವೇದಕ— (ಕಿತ್ತೂರ ಪ್ರಾಂತವು ಧಾರವಾಡದ ಕಲೆಕ್ಟರನಾಗಿದ್ದ ಥ್ಯಾಕರೆ ಸಾಹೇಬರ ಅಧೀನದಲ್ಲಿರಿಸಲ್ಪಟ್ಟಿತು. ಥ್ಯಾಕರೆ ಸಾಹೇಬರು ಕಂಪನೀ ಸರಕಾರದ ರಾಜನೀತಿಯ ಮೇರೆಗೆ ಕಿತ್ತೂರಿನ ಆಡಳಿತದ ಬಗ್ಗೆ ತನ್ನ ಅಸಮಾಧಾನವನ್ನು ವ್ಯಕ್ತ ಮಾಡಿ, ಕ್ರಮೇಣ ಅದನ್ನು ನುಂಗಿಬಿಡುವ ಹಂಚಿಕೆಯಲ್ಲಿಯೇ ಇದ್ದರು. ದೇಸಾಯಿಯು ಕಳ್ಳರ ತಂಡಕ್ಕೆ, ಆಶ್ರಯ ಕೊಟ್ಟು ಸುತ್ತುಮುತ್ತಲಿನ ಜನರಿಗೆ ಪೀಡೆಕೊಡುತ್ತಿದ್ದಾನೆಂಬ ಆಶಯದ ಪತ್ರವನ್ನು ಥ್ಯಾಕರೆ ಸಾಹೇಬರು ಕಿತ್ತೂರಿನ ದೇಸಾಯಿಗೆ ಕಳಿಸಿಕೊಟ್ಟರು. ಶಿವಲಿಂಗರುದ್ರ ಸರ್ಜರು ಕಂಪನಿ ಸರಕಾರದ ಕುಟಿಲ ನೀತಿಯನ್ನು ಯೋಚಿಸುವ ವಿಚಾರದಲ್ಲಿಯೇ ೧೮೨೪ನೆಯ ಸಪ್ಟೆಂಬರ ೧೧ರಂದು ಕೈಲಾಸವಾಸಿಯಾದರು. ಆಗ ಕಿತ್ತೂರ ಸಂಸ್ಥಾನಕ್ಕೆ ವಾರಸುದಾರರೇ ಉಳಿಯಲಿಲ್ಲ.

ನಿವೇದಕ— ೧೮೨೪ರ ಸಪ್ಟೆಂಬರ ೧೨ನೆಯ ತಾರೀಖು ಮುಂಜಾವಿನ ಸಮಯ, ಮಂತ್ರಿಗಳು ಚೆನ್ನಮ್ಮನ ಸಂದರ್ಶನಕ್ಕಾಗಿ ಬಂದಿದ್ದಾರೆ.

ಮಂತ್ರಿ— ವಂದನೆ ತಾಯಿ, ರಾಜ್ಯದ ಗತಿಯಂತೂ ಹೀಗಾಯಿತು. ಶಿವನ ಇಚ್ಛೆ ಹೇಗಿದೆಯೋ ಶಿವಲಿಂಗಪ್ಪನನು ದತ್ತಕ ಮಾಡಿದ ವಿಷಯವನ್ನೂ ಆ ಬಗೆಗೆ ದೇಸಾಯರ ಪತ್ರವನ್ನೂ ನಿನ್ನೆಯ ದಿನವೇ ಥ್ಯಾಕರೇ ಸಾಹೇಬರ ಕಡೆಗೆ ಕಳಿಸಿಕೊಟ್ಟಿದ್ದೇನೆ. ಸಧ್ಯ ಉತ್ತರದ ದಾರಿಯನ್ನೇ ಕಾಯುತ್ತಿದ್ದೇವೆ.

ಚೆನ್ನಮ್ಮ- ಯಾವ ಉತ್ತರಕ್ಕೂ ನಾವು ಸಿದ್ಧರಾಗಬೇಕಲ್ಲವೇ? ಮಂತ್ರಿಗಳೇ ನೀವು ಹಿರಿಯರು. ಕಂಪನಿ ಸರಕಾರದ ಕುಟಿಲ ನೀತಿಯನ್ನು ಬಲ್ಲವರು. ಆಡಳಿತದಲ್ಲಿ ಅನೇಕ ಅಡೆ-ತಡೆಗಳನ್ನು ತಂದೊಡ್ಡುವ ಕಂಪನಿ ಸರಕಾರ, ಈ ಪ್ರಸಂಗದ ಲಾಭವನ್ನು ಹೇಗೆ ಸಾಧಿಸೀತೆಂದು ಹೇಳಲು ಬಾರದು. (ದುಃಖದಿಂದ) ಇಂದಿನ ಈ ಪ್ರಸಂಗದಲ್ಲಿ ನನಗೆ ಏನೂ ತೋಚದಾಗಿದೆ.

( ದೂತನು ಪ್ರವೇಶಿಸುತ್ತಾನೆ )

ದೂತ— ಅಮ್ಮನವರಿಗೆ ಶರಣು; ಮಂತ್ರಿಗಳಿಗೆ ಶರಣು. ಧಾರವಾಡಕ್ಕೆ ಹೋಗಿದ್ದ ದೂತನು ಹಿಂದಿರುಗಿ ಬಂದು ಬಾಗಿಲಲ್ಲಿ ಕಾಯುತ್ತಿದ್ದಾನೆ.

ಮಂತ್ರಿ— ಸರಿಯಾದ ಸಮಯಕ್ಕೆ ಬಂದ. (ದೂತನಿಗೆ) ಅವನನ್ನು ಕೂಡಲೇ ಇಲ್ಲಿಗೆ ಕಳಿಸು. (ಪತ್ರ ಸಹಿತ ಹೊಸ ದೂತನ ಪ್ರವೇಶ)

ದೂತ-- ಅಮ್ಮನವರಿಗೆ ಶರಣು, ದೊರೆಗಳಿಗೆ ಶರಣು. ನಿನ್ನೆಯ ದಿನವೇ ನಾನು ಪತ್ರವನ್ನೊಯ್ದು ಥ್ಯಾಕರೇ ಸಾಹೇಬರ ಕೈಯ್ಯಲ್ಲಿಟ್ಟೆ. ಅವರು ತಮ್ಮ ತಮ್ಮಲ್ಲಿಯೇ ಏನೇನನ್ನೋ ಮಾತನಾಡಿದರು. ನನಗರ್ಥವಾಗಲಿಲ್ಲ ಅಮ್ಮನವರಿಗೆ ಈ ಪತ್ರವನ್ನು ಕೊಟ್ಟಿದ್ದಾರೆ.

(ಪತ್ರ ಕೊಡುವನು, ಚೆನ್ನಮ್ಮನು ಪತ್ರವನ್ನು ಬಿಚ್ಚಿ ಓದಿದಳು)

ಚೆನ್ನಮ್ಮ— "ನಮ್ಮ ಕಡೆಯಿಂದ ವೆಂಕಟರಾವ ವಕೀಲರನ್ನು ಕಿತ್ತೂರಿಗೆ ಕಳಿಸಿಕೊಡುತ್ತಿದ್ದೇನೆ. ಅವನೂ ಕಾರಭಾರಿ ಕನ್ನೂರ ಮಲ್ಲಪ್ಪಣ್ಣ ಕೂಡಿಯೇ ಯಾವತ್ತೂ ಲೆಕ್ಕ-ಪತ್ರ, ಬೊಕ್ಕಸ, ಕೋಠಿ, ಮೊದಲಾದವುಗಳನ್ನು ತಪಾಸು ಮಾಡಿ ಇಲ್ಲಿ ನಮಗೆ ವರದಿ ಮಾಡಬೇಕು. ಸಂಸ್ಥಾನದ ಕಾರಭಾರವನ್ನು ವೆಂಕಟರಾವ ಮತ್ತು ನೀವು ಇಬ್ಬರೇ ನೋಡಬೇಕು. ಖಜಾನೆಯ ಕೋಣೆಗೆ ಸರಕಾರದ ಸಮಕ್ಷಮ ಸಂಸ್ಥಾನದ ಮೊಹರ ಮಾಡಿಸತಕ್ಕದ್ದು."

ಕೇಳಿದಿರಾ ಮಂತ್ರಿಗಳೇ, ದತ್ತಕದ ಬಗ್ಗೆ ಒಂದು ಮಾತೂ ಅದರಲ್ಲಿಲ್ಲ. ಸಂಸ್ಥಾನವನ್ನೂ ನುಂಗುವ ವಿಚಾರವೇ ಇರಬೇಕು. ಅಭಿಮಾನ ಶೂನ್ಯರಾಗಿ, ಸ್ವಾತಂತ್ರ್ಯವನ್ನು ಬಲಿಗೊಟ್ಟು ಬದುಕುವುದಾದರೂ ಯಾಕೆ?........ಈಗಲೇ ನಮ್ಮ ದಂಡು ಸನ್ನದ್ಧವಾಗಿರಲಿ. ಗಡಿಗಳಲ್ಲಿದ್ದ ಪಾಳಯಗಾರರಿಗೂ, ಸಾಮಂತರಿಗೂ ಸಿದ್ಧತೆಯಲ್ಲಿರಲು ಹೇಳಿ ಕಳಿಸಿರಿ. ಹಳ್ಳಿಯ ಗೌಡರೂ, ಓಲೆಯಕಾರರೂ, ತಮ್ಮ ತಮ್ಮ ಗಡಿಗಳನ್ನು ಕಾಯ್ದುಕೊಂಡಿರಲಿ. ತೋಪು ತುಬಾಕಿಗಳು ಸಿದ್ಧವಾಗಿರಲಿ. ಹೇಡಿಯಾಗಿ ಬದುಕುವದು ಬೇಡ.

(ಚೆನ್ನಮ್ಮ ಗುಡುಗಿದಳು; ಮಂತ್ರಿಗಳು ವಂದಿಸಿ ಮೌನವಾಗಿ ಆಜ್ಞೆ ವಹಿಸಿ ಹೊರಹೊರಟರು).

* * * *

ನಿವೇದಕ— ಕೆಲವು ದಿನಗಳ ಮೇಲೆ ಚೆನ್ನಮ್ಮನಿಗೆ ಥ್ಯಾಕರೇಸಾಹೇಬನಿಂದ ಮತ್ತೊಂದು ಪತ್ರ ಬಂತು. "ನೀವು ಯುದ್ಧಸಿದ್ಧತೆಯಲ್ಲಿದ್ದೀರೆಂದು ಕೇಳಿದ್ದೇನೆ. ದತ್ತಕವುಸುಳ್ಳೆಂದು ನನಗೆ ತೋರಿದರೂ ರೀತಿಯಂತೆ ಅದರ ವಿಚಾರವಾಗಬಹುದು. ನಮ್ಮಿಂದ ನಿಮಗೆ ಯಾವುದೇ ಭಯವಿಲ್ಲ." ಪತ್ರದಲ್ಲಿ ಚೆನ್ನಮ್ಮನಿಗೆ ವಿಶ್ವಾಸವಿರಲಿಲ್ಲ. ಥ್ಯಾಕರೇನಿಂದ ಕಳಿಸಲ್ಪಟ್ಟವಕೀಲರು ಸರಕಾರದ ನಿರ್ಣಯವನ್ನೂ ತಿಳಿಸಿದರು.

೩೧ನೇ ಪುಟ ನೋಡಿರಿ.

ಲೇಖಾಂಕ ೩

# ಸುಖದ ಶೋಧ

ಲೇ— ಓರ್ವ ಅಜ್ಞಾನಿ.

೧೯೫೯ನೇ ಸಪ್ಟೆಂಬರ ಸಂಚಿಕೆಯಿಂದ ಮುಂದೆ ಸಾಗಿದ್ದು.

ಶಿಷ್ಯ— ಈಗಿದ್ದ ಮಾನವಿ ಜಗತ್ತು ಈಗಿದ್ದ ಹಾಗೆ ಉಳಿಯುವದೋ ಹೆಚ್ಚಿಗೆ ಸುಧಾರಿಸುದದೋ? ಅಧೋಗತಿ ಹೊಂದುವದೋ? ಇಷ್ಟೆಲ್ಲ ಉಪದ್ವ್ಯಾಪವು ಏತಕ್ಕಾಗಿ? ಈ ಮಾನವನ ಹಂಬಲವು ಯಾವದು?

ಗುರು— ಇಡಿ ಮಾನವ ಸಮಾಜವನ್ನು ಸೂಕ್ಷ್ಮ ಮತ್ತು ಸ್ಥೂಲ ದೃಷ್ಟಿಯಿಂದ ಪೃಥಃಕರಣ ಮಾಡಿ ನೋಡಿದರೆ ಅದು ಸ್ವಲ್ಪ ಜನಾಂಗದವರದೆಂದರೆ ನೂರಕ್ಕೆ ೩-೪ ಟಕ್ಕೆ ಜನರಾದ ಸಾಹಿತಿ ರಾಜಕಾರಣಿ ಮತ್ತು ವಿಜ್ಞಾನಿ ಶಾಸ್ತ್ರಜ್ಞ ಜನರಿಂದ ಮಾರ್ಪಾಟು ಹೊಂದುತ್ತಿರುವದು. ಅವರೆಲ್ಲರ ಗುರಿಯು ಬೇರೆ ಬೇರೆಯಾಗಿರುವದು. ಅವರವರ ಮತ ಪ್ರಣಾಲಿಯಂತೆ ಸ್ಥೂಲಮಾನದಿಂದ ಮೂರು ಭಾಗಗಳನ್ನು ಮಾಡಬಹುದು. ಈ ಮಾನವಿ ಜಗತ್ತು ವಿಶ್ವದ ಮಾನದಿಂದ ಎಲ್ಲಿಯೋ ಮೂಲೆಯಲ್ಲಿ ಹಿಡಿಸುವಷ್ಟು ಕಾಣಿಸದಷ್ಟು ಚಿಕ್ಕದಿರುವದು. ಅದನ್ನು ರಾವ ಕನ್ನಡಕದಿಂದ ವಿಸ್ತಾರಗೊಳಿಸುವದರಿಂದ (Magnify) ಬಹು ದೊಡ್ಡದಾಗಿ ಮಾನವನಿಗೆ ಕಾಣುವದು. ಇದರೊಳಗಿನ ಜಂಜಾಟ, ಹೊಯುದಾಟ, ಬಡೆದಾಟ, ಮತಮತಾಂತರಗಳಿಂದುಂಟಾದ ದುಃಖದ ಜಾಳಿಗೆಯೊಳಗೆ ಸಿಗಬಿದ್ದು, ಅದರೊಳಗಿಂದ ಪಾರು ಹೇಗಾಗಬೇಕೆಂದು ವಿಚಾರ ಮಾಡಿ ಯಾವ ಮಾರ್ಗವು ತೋಚದೆ, ಇದರೊಳಗಿಂದ ಪಾರು ಮಾಡಲು ಅಚಟ ಸಾಮರ್ಥ್ಯವುಳ್ಳ ಶಕ್ತಿವಂದಿದೆ. ಅದೇ ದೇವರು ಎಂಬ ಭಾವನೆಯಿಂದ ಪೂಜೆ ಅರ್ಚೆಯಿಂದ ಹಿಡಿದು ಧ್ಯಾನಧಾರಣೆ ಆಸನ ಪ್ರಾಣಾಯಾಮಮುಂತಾದ ಯೋಗಾಭ್ಯಾಸದ ಸಾಧನೆಯಿಂದ ಈ ಪ್ರಾಪಂಚಿಕ ತೊಡಕಿನೊಳಗಿಂದ ಮುಕ್ತಿಯನ್ನು ಬಯಸಲು ಹೊರಟ ಆಧ್ಯಾತ್ಮಿಕ ವಾದಿಗಳದೊಂದು ಗುಂಪು. ಈ ಗುಂಪು ಬಹಳಪುರಾತನ ಕಾಲದಿಂದಹೋರಾಡುತ್ತಿರುವದು ಮುಕ್ತಿಯನ್ನು ದೊರಕಿಸಲು ಮತ್ತು ಇತರರಿಗೆ ದೊರಕಿಸಿಕೊಡಲು. ಇವರ ಮಾರ್ಗವು ಬಹಳ ಗೂಢವಾಗಿರುವದು. ಸಾಮಾನ್ಯ ಜನರಿಗೆ ಆಕಲನವಾಗದಿದ್ದಂಥಾದ್ದು. ಇವರಾದರು ಒಳ್ಳೆ ಬುದ್ಧಿಶಾಲಿಗಳು, ಕಲ್ಪನಾ ಶಕ್ತಿಯುಳ್ಳವರು, ಶಬ್ದ ಜಾಲ ನಿರ್ಮಾಣಕರು ಇರುವರು. ಇವರು ಭೂಲೋಕದೊಳಗಿನ ತಾಕಲಾಟತಾವೆತಕ್ಕಮಟ್ಟಿಗೆ ನಿರ್ಮಿಸಲು ಕಾರಣವಾಗಿದ್ದನ್ನು ಮರೆತು ಅದರದೊಳಗಿಂದ ಪಾರಾಗಲು ಇತರರನ್ನು ಪಾರು ಮಾಡಲು ದಾರಿ ತೋರಿಸಲು ಅಂದರೆಸ್ವರ್ಗಕ್ಕೆಹೋಗುವದಾರಿ ತೋರಿಸಲುದೇವರಿಗೆ ಮೊರೆ ಇತ್ತಿರುವರು. ಏಕಾಂಗಿ ಪ್ರಯತ್ನಗಳಿಂದ ಮನುಷ್ಯನಲ್ಲಿ ಹುದುಗಿಕೊಂಡಿದ್ದ ವಿವಿಧ ಶಕ್ತಿಗಳನ್ನು ಹತ್ತಿಕ್ಕಿಒಂದೆ ಒಂದು ಮಾನಸಿಕ ಶಕ್ತಿಯನ್ನು,ಏಕಾಗ್ರಚಿಂತನೆಯಿಂದ, ಪ್ರಯತ್ನದಿಂದ ಯೋಗ ಸಾಧನೆಯಿಂದ ಬೆಳಸಿ, ಉಂಟಾದ ಶಕ್ತಿ ಸಾಮರ್ಥ್ಯಗಳಿಂದ, ಏತಕ್ಕೆ ಪವಾಡಗಳೆಂದನ್ನಬಹುದು ಇಂಥ, ಸತ್ತವರನ್ನು ಬದುಕಿಸುವದು,ಎಲ್ಲಿಯಾದರು ಅದೃಶ್ಯವಾಗಿ ಎಲ್ಲಿಯಾದರು ಪ್ರಕಟವಾಗುವದು, ನೀರಿನಿಂದ ಹಾಲು ಮಾಡುವದು, ಗಂಡಸು ಹೆಂಗಸಾಗುವದು, ಸಂತಾನ ಕೊಡುವದು, ನದಿ ಇಬ್ಭಾಗ ಮಾಡಿ ತೋರಿಸುವದು (ಶ್ರೀಕೃಷ್ಣನ ಕಥೆಯಂತೆ,) ಕಾಲಿನಿಂದ ಸಮುದ್ರವನ್ನು ನೆಲದ ಮೇಲೆ ನಡೆದಂತೆ, ದಾಟುವದು. ಬೆಂಕೆಯ ಮೇಲೆ ನಡೆದು ಹೋಗುವದು,ಭವಿಷ್ಯ ಹೇಳುವದು, ವೈಭವ ಮಾಯ ಮಾಡುವದು ಇಲ್ಲವೆ ತಂದುಕೊಡುವದು, ಮಾರ್ಕಂಡೆಯ, ಸತ್ಯವಾನನಂಥ ಅಲ್ಪಾಯುಷಿಗಳನ್ನು ದೀರ್ಘಾಯುಷಿಗಳನ್ನು ಮಾಡುವದು, ಸಮುದ್ರ ಕುಡಿದು ಬಿಡುವದು ಇವೇ ಮೊದಲಾದ ಆಧ್ಯಾತ್ಮಿಕ ಅದ್ಭುತ ಚಮತ್ಕಾರಗಳನ್ನು ಪ್ರತ್ಯಕ್ಷವಾಗಿ ಮಾಡಿ ತೋರಿಸಿ, ಇಲ್ಲವೆ ಕಾಲ್ಪನಿಕ ಕಟ್ಟು ಕಥೆಗಳ ಪ್ರಚಾರ ಮಾಡಿ ಸಾಮಾನ್ಯ ಜನರಲ್ಲಿ ಹಬ್ಬಿಸಿ ಅವರ ಸಂಸ್ಕಾರ ಕ್ಷಮಮನಸುಗಳನ್ನು ತಮ್ಮ ವಾಕ್ಚಾತುರ್ಯ, ಸಾಹಿತ್ಯ ರಚನಾ ಶಕ್ತಿಯಿಂದ ಕಲ್ಪನಾ ತರಂಗ

ಗಳನ್ನು ಹುಟ್ಟಿಸಿ ದಿಙ್ಮೂಢರನ್ನಾಗಿ ಮಾಡುವ ಪ್ರಚಾರ ಶಕ್ತಿಯಿಂದ ಅಜ್ಞರನ್ನು ಮಂಕುಗೊಳಿಸುತ್ತ ಬಂದರು. ಆ ಸಂಸ್ಕಾರಗಳಿಗೊಳಪಟ್ಟ ಎಷ್ಟೋ ಬುದ್ಧಿವಂತರು, ಅಂಥ ಶ್ರದ್ಧೆಯುಳ್ಳವರು, ಕಷ್ಟಸಹಿಷ್ಣುಗಳು, ಪ್ರಯತ್ನವಾದಿಗಳು ಇದರಲ್ಲಿ ಬಿದ್ದು ತಮ್ಮ ಪ್ರಯತ್ನದಿಂದ ಈ ಪ್ರಾಪಂಚಿಕ ತೊಂದರೆಯೊಳಗಿಂದ ಪಾರಾಗಿರುವರು. ಆದರೆ ಈ ವ್ಯಾಪದೊಳಗಿಂದ ಪಾರಾಗುವ ಕಷ್ಟಗಳನ್ನು ಮಾಡಿದವರು ಮನಸ್ಸು ತೆಗೆಯಲು ಯತ್ನಿಸಿದರು. ಅದೇ ಚಟ ಹಚ್ಚಿಕೊಂಡಿದ್ದರಿಂದ ಜನರು ಅನುಭವಿಸುತ್ತಿರುವ ತಾಪದೊಳಗಿಂದ ಪಾರಾಗಿರುವರು. ಇವರು ತಮ್ಮ ಸೂಕ್ಷ್ಮದೃಷ್ಟಿಯಿಂದ ಜನಮನಗಳನ್ನು ಅಭ್ಯಸಿಸಿ ಆ ಅನುಭವಗಳನ್ನು ಮಾರ್ಮಿಕವಾಗಿ ಬಣ್ಣಿಸುವ ಕಲಾಕುಶಲರು ಸಾಹಿತಿಗಳಾದ್ದರಿಂದ ಇವರ ಭಾಷಣಗಳನ್ನಾಗಲಿ, ಗ್ರಂಥಗಳನ್ನಾಗಲಿ ಪದ್ಯಗಳನ್ನಾಗಲಿ ಕೇಳುವವರಿಗೆ ಇವರೆಷ್ಟು ಸತ್ಯವಾದಿಗಳು, ಅನುಭವಶಾಲಿಗಳು, ಭವಿಷ್ಯವಾದಿಗಳು ಇರುವರೆಂಬ ಭಾವನೆ ತಮ್ಮ ತಮ್ಮ ದಿನದ ವ್ಯವಸಾಯಗಳಲ್ಲಿ ತೊಡಗಿದ ಬಹುಜನ ಸಮಾಜದಲ್ಲಿ ಒಡಮೂಡಿ ಇವರನ್ನು ಸಾಧು ಸಂತರೆಂದು ನಂಬಿ ಮೂಢ ಭಾವನೆಯಿಂದ ಇವರ ಶಿಷ್ಯರಾಗಿ ತಮ್ಮ ಸರ್ವಸ್ವದ ತ್ಯಾಗ ಮಾಡಲು ಸಿದ್ಧರಾಗುವರು. ಇದರಿಂದ ದಿನದ ಅವಶ್ಯಕ ಕೊರತೆಗಳನ್ನು ಪೂರಯಿಸಲು ಅವರು ಹವಣಿಸಿ ಈ ಸಾಧುಸಂತರ ಯೋಗಕ್ಷೇಮ ನೋಡಲು ಸಮರ್ಥ ಜನರು ನಾ ಮುಂದೆ ನೀ ಮುಂದೆಂದು ಸ್ಪರ್ಧೆಯಿಂದ ಮೇಲಾಟ ನಡೆಸುವರು. ಈ ಸಾಧುಸಂತರಿಗೆ ತಮ್ಮ ಆಧ್ಯಾತ್ಮಿಕ ಮಾನಸಿಕ ವಾತಾವರಣದಲ್ಲಿ ವಿಹರಿಸಿ ಹೆಚ್ಚೆಚ್ಚು ಗೂಢವಾದ ತತ್ವಗಳ ಶೋಧ ನಡೆಸಲು ಅನುಕೂಲವಾಗುವದು. ಹೀಗಾಗಿ ಈ ಆಧ್ಯಾತ್ಮಿಕವಾದಿಗಳಲ್ಲಿ ಮತ್ತು ಸಾಮಾನ್ಯಜನರಲ್ಲಿ ಅಜಗಜದಷ್ಟು ಅಂತರ ಬೀಳುವದು. ಇದರಿಂದ ಈ ಸಾಮಾನ್ಯ ಜನರಿಗೆ ಈ ಸಾಧುಸಂತರ ಕಷ್ಟ, ಸಾಹಸ, ಯುಕ್ತಿ, ಪ್ರಯುಕ್ತಿ ಗೊತ್ತಾಗುವದಿಲ್ಲ. ಮೇಲಾಗಿ ಈ ಎಲ್ಲ ವ್ಯವಹಾರವನ್ನು ಆವರು ಶಾಸ್ತ್ರೀಯ ಪದ್ಧತಿಗೆ ಅನುಸರಿಸಿ ಪ್ರಚಾರ ಮಾಡುತ್ತಿರುವದಿಲ್ಲ. ಇದರ ಮರ್ಮವನ್ನು ತಮ್ಮಂತೆ ಬಿಡುವಿದ್ದ ಒಬ್ಬೊಬ್ಬ ಶಿಷ್ಯರಿಗೆ ಗುರುಮಂತ್ರವೆಂದು ಹೇಳಿಕೊಡುವರು. ಈ ಶಿಷ್ಯರಲ್ಲಿ ಕೆಲವರು ಗುರುಗಳನ್ನು ಮಿಕ್ಕಿ ಹೆಚ್ಚಿನವರು ಆಗುವರು. ಬಾಪಕಾ ಬೇಟಾ ಸವಾಯಿ ಅಥವಾ ಶಿಷ್ಯಾದಿಚ್ಛೇತ ಪರಾಜಯಂ। ಎಂಬಂತೆ ತಾವು ಶ್ರೇಷ್ಠರಾಗಿ ತಮ್ಮ ಗುರುಗಳನ್ನು ಹೆಚ್ಚಿಗೆ ಪ್ರಸಿದ್ಧಿಗೆ ತರುವರು. ಇದೆಲ್ಲವನ್ನು ಈ ಸಾಧು ಸತ್ಪುರುಷರು, ಸಿದ್ಧಪುರುಷರು ದೇವರ ಹೆಸರಲ್ಲಿ ನಡೆಸಿರುವರು. ಇದರಿಂದ ಇವರು ಪ್ರಸಿದ್ಧಿ ವಿನ್ಮುಖರು, ನಿರಪೇಕ್ಷಿಗಳು, ತ್ಯಾಗಿಗಳು, ಸಿದ್ಧಪುರುಷರು, ನಿರಭಿಮಾನಿಗಳು ಎಂದು ಸಾಮಾನ್ಯ ಜನರಲ್ಲಿ ಇವರ ಬಗ್ಗೆ ಹೆಚ್ಚು ಆದರಭಾವ ಬೆಳೆದು ಹೋಗುವದು. ಇದರಿಂದ ಅವರು ಮತ್ತಿಷ್ಟು ಇವರ ದಾಸರಾಗುವರು. ಹೀಗೆ ಸಾಮಾನ್ಯ ಜನರ ಹೆಚ್ಚು ಹೆಚ್ಚು ಬೆಂಬಲದಿಂದ ಈ ಗುರುಗಳ ಮಠಗಳು ಯಾತ್ರೆ ಜಾತ್ರೆ ಸ್ಥಳಗಳಾಗುವವು. ಈ ಮಠಗಳ ಪ್ರಸ್ಥವು ಬೆಳೆದಂತೆ ಆಡಂಬರವು ಹೆಚ್ಚುತ್ತ ಹೋಗಿ ಉತ್ಪತ್ತಿ ಕಾಲಕ್ಕೆ ಇದ್ದ ಸಾಧೆತನ, ಉಚ್ಚ ವಿಚಾರದ ಲಾಭವು ಸ್ಥಿತಿ ಕಾಲಕ್ಕೆ ಅನುಭವಿಸಲು ಮತ್ತು ನೋಡಲು ಸಿಗುವದು. ಇಲ್ಲಿಯೆ ಅದರ ನಾಶದ ಬೀಜವಾದ ಲಯಕ್ಕೆ ಪ್ರಾರಂಭವಾಗುವದು ಈ ಎಲ್ಲ ಅವಸ್ಥೆಗಳಲ್ಲಿಯು ಅನುಭವಗಳನ್ನು ಕಂಡುಹಿಡಿದ ಸೂಕ್ಷ್ಮವಾದಿ ಸಿದ್ಧರು ಇಂಥ ಬಹಿರಂಗದ ಆಡಂಬರಕ್ಕೆ ಮೆಚ್ಚಬೇಡಿ, ರುದ್ಧಿ ಸಿದ್ಧಿಗಳಿಗೆ ಮರುಳಾಗಬೇಡಿ ಎಂದು ಅಲಂಕಾರಿಕವಾಗಿ ಹೇಳುತ್ತ ನಡೆದಂತೆ ಅದಕ್ಕೆ ತಕ್ಕಂತೆ ತಮ್ಮ ವರ್ತನೆಯನ್ನಿಟ್ಟು ಹೆಚ್ಚೆಚ್ಚು ಯೋಗಿಕ ಚಮತ್ಕಾರಗಳನ್ನು ಮಾಡುತ್ತ ಹೋಗುವರು. ಇವರಲ್ಲಿಯು ಪರಸ್ಪರ ವಿರೋಧಿ ಅನುಭವದ ಸಂಗತಿಗಳ ಸಮನ್ವಯಾರ್ಥ ಮಾಡಲು ಪ್ರಯತ್ನಿಸುವವರಿಗೆ ನಿಜವಾದ ಮರ್ಮ ತಿಳಿದಾಗಲಿ, ತಿಳಿಯದಾಗಲಿ ಇದೆಲ್ಲವು ಹೀಗೆ ನಡೆಯುವದೆಂದು ತಿಳಿದು, ಇದೆಲ್ಲವು ಮಾಯೆ, ದೇವರಾಟವೆಂದು ಸಾರುತ್ತ ಜೀವನ ಮುಕ್ತತೆಯ ಅನುಭವ ಪಡೆಯುವರು ಮತ್ತು ಅವರ ಮನಸ್ಸು ಶಾಂತವಾಗುವದು. ಈ ಶಾಂತತೆಯ ಮಟ್ಟಗಳನ್ನು ವಿವಿಧ ತೆರನಾಗಿ ಬಣ್ಣಿಸುವರು. ಕೆಲವರು ಆತ್ಮಾನಂದ, ಬ್ರಹ್ಮಾನಂದ, ಶಿವೈಕ್ಯ ಜೀವನ ಮುಕ್ತಿ, ಅತಿ ಮಾನುಷತ್ವ ಏನೇನೋ ಗೂಢ ಶಬ್ದಜಾಲದಿಂದ (occult) ಬಣ್ಣಿಸಿ ಸಾಮಾನ್ಯ ಜನರನ್ನು ಮಂಕುಗೊಳಿಸುವರು. ಈ ಸಂಗತಿಯ ಅನುಭವವು ಏನೋ ಪ್ರಾಮಾಣಿಕತನದಿಂದ ಪ್ರಯತ್ನ ಮಾಡುವವರಲ್ಲಿ ಕಂಡುಬರುವದು. ಅದಾದರು ಯತತಾನಾಮಪಿ ಸಹಸ್ರಾಣಾಂ ಕಶ್ಚಿನ್ಮಾಂ ವೇತ್ತಿ ತತ್ವತಃ ಎಂಬ ಗೀತಾ ವಚನದಂತೆ ಕೋಟ್ಯಾವಧಿ ಜನರಲ್ಲಿ ಒಬ್ಬಿಬ್ಬರದು. ಆದರೆ ಆ ಅನುಭವ ಪಡೆದವರ ಬಾಯಿಂದ ಅಥವಾ ಗ್ರಂಥಗಳಿಂದ ಕೇಳಿ ಭಾಷಣ ಪ್ರವಚನ ಕೀರ್ತನ ಪುರಾಣಗಳಿಂದ, ಫಲಶ್ರುತಿಗಳ ಮಬ್ಬಿಗೆ ಬಿದ್ದು ಹಾಳಾದ ಜನರು ಕೋಟ್ಯಾವಧಿ ಅನುಕೂಲವಿಲ್ಲದೆ ಅರಿವಿಲ್ಲದೆ, ವಿವಿಧ ತೆರನಾಗಿ ಪ್ರಪಂಚದಲ್ಲಿ ತ್ರಿವಿಧ ತಾಪಗಳನ್ನು ಅನುಭವಿಸುತ್ತಿದ್ದ ಜನರು

ಕಂಗೆಟ್ಟು ವಿವಿಧ ದುಃಖಗಳನ್ನು ಅನುಭವಿಸುತ್ತಿರುವರು. ಇಂಥವರ ಕಿವಿಗಳ ಮೇಲೆ ಈ ಸಾಧುಸತ್ಪುರುಷರ ಸವಿ ಮಾತುಗಳು ಅನುಭವಗಳ ಸತ್ಯಚಿತ್ರಣ, ಕಣ್ಣು ಮುಂದೆ ಬೀಳುವದರಿಂದ ಅವರಿಗೆ ಇದು ಅಮೃತವೆಂದು ಸಂಜೀವಿನಿ ಮಂತ್ರವೆಂದು ಭಾವನೆಯುಂಟಾಗಿ ಅವರು ಅದಕ್ಕೆ ತಮ್ಮ ಪ್ರಾಣಾರ್ಪಣೆಯನ್ನು ಮಾಡುವರು. ಇವರಲ್ಲಿ ಹೆಂಗಸರಿಗಿಂತ ಗಂಡಸರೇ ಹೆಚ್ಚಾಗಿರುವರು. ಏಕೆಂದರೆ ಈ ಗಂಡಸರೆಲ್ಲರು ಇಡಿ ಮಾನವಿ ಜನಾಂಗದ ಪ್ರಪಂಚವನ್ನು ಹೆಂಗಸರನ್ನು ಮೂಲಿಗೊತ್ತಿ ತಾವೆ ಆಕ್ರಮಿಸಿರುವರು. ಆದ್ದರಿಂದ ಈ ಪ್ರಪಂಚವನ್ನು ತಮಗೆ ಅನುಕೂಲವಾಗುವಂತೆ ದೇಶಾಭಿಮಾನ, ಸ್ವಾತಂತ್ರ್ಯ, ವ್ಯವಹಾರ, ಶ್ರೀಮಂತಿ ಗಳಿಸುವ, ಜ್ಞಾನ ದೊರಕಿಸುವ ಸಂಧಿಗಾಗಿ, ಹೆಂಗಸರು ಕೇವಲ ಸಹಕಾರಿಗಳಾಗುವಂತೆ ಅವರನ್ನು ಪರಾವಲಂಬಿ ಮಾಡುವಂತೆ ಕಟ್ಟಳೆಗಳನ್ನು, ಅವರಲ್ಲಿದ್ದ ಸಾಹಸಾದಿ ಗುಣಗಳು ಲುಪ್ತವಾಗಿ ಅವರು ಹೇಡಿಗಳು, ನಿರಾಶ್ರಿತರು ಅಸಹಾಯಕರು ಆಗುವಂತೆ ಮತ್ತು ತಾವು ಸಾಹಸಿಗರು, ಬೇಟೆಗಳಿಂದ ಬಲಶಾಲಿಗಳು, ಜ್ಞಾನ ಬಲದಿಂದ ಆಡಳಿತಗಾರರು ಆಗಲು ಎಲ್ಲ ಪ್ರಾಪಂಚಿಕ ವ್ಯವಹಾರಗಳನ್ನು ತಮ್ಮ ಸ್ವಾಧೀನದಲ್ಲಿಟ್ಟು ಕೊಳ್ಳಲು ಹವಣಿಸುತ್ತಿರುವದರಿಂದ ಪ್ರಾಪಂಚಿಕ ತೊಂದರೆಗಳನ್ನಾಗಲಿ ಸುಖಸೌಕರ್ಯಗಳನ್ನಾಗಲಿ ಅನುಭವಿಸಲು ತಾವೆ ಬಾಧ್ಯರೆಂದು ತಿಳಿದಿದ್ದರಿಂದ ಅವರೆ ಹೆಚ್ಚು ದುಃಖಭಾಗಿಗಳಾದ್ದರಿಂದ ತ್ರಿವಿಧ ತಾಪಕ್ಕೆ ಬೇಸತ್ತು ಎಷ್ಟೆ ಲೋಲುಪತೆಯಲ್ಲಿದ್ದರು ಕೆಲವರು ಎಲ್ಲದರ ತ್ಯಾಗಮಾಡಿ ಸಾಧು ಸತ್ಪುರುಷರ ಉಪದೇಶಕ್ಕೆ ಬಲಿಯಾಗುವರು, ಕೆಲವರು ಪಶ್ಚಾತ್ತಾಪಪಟ್ಟು ವ್ಯಸನಾಧೀನರಾಗುವರು. ಅವರೇನೇ ಆದರು ಅವರನ್ನು ಅವಲಂಬಿಸಿದ ಹೆಂಗಸರು ಇಮ್ಮಡಿ ದುಃಖಿಯಾಗುವರು. ಇದರಿಂದ ಪಾರಾಗಲು ಅಜ್ಞಾನ, ಅಸಹಕಾರ, ಅಸಹಾಯತೆಯಿಂದ ಮಾರ್ಗ ತೋಚದೆ ರವರವ ನರಕದಲ್ಲಿ ತೊಳಲುತ್ತಿರುವರು. ಎಲ್ಲರೂ ತಾಪಗಳಿಂದ ಬಳಲುತ್ತಿರುವದರಿಂದ ಒಬ್ಬಿಬ್ಬ ಸಾಧು ಸತ್ಪುರುಷರು ಜೀವನ ಮುಕ್ತಿಯ ಸುಖವನ್ನು ಅನುಭವಿಸುತ್ತಿರುವರೆಂಬ ಫಲಶ್ರುತಿಯ ಮಹಿಮೆಯನ್ನು ಕೇಳಿ ಅವರು ಅನುಸರಿಸಿದ ದಾರಿಯೆ ಯೋಗ್ಯವೆಂದು ಎಲ್ಲರು ಆ ಮಾರ್ಗವನ್ನು ಅನುಸರಿಸಿದ ಕಾಲವು ಎಲ್ಲ ದೇಶಗಳಲ್ಲಿ ಒಂದಾನೊಂದು ಕಾಲಕ್ಕೆ ಇತ್ತು. ಆದರಲ್ಲಿ ಜ್ಞಾನಮಾರ್ಗ ವೇದಕಾಲದಲ್ಲಿ ಭಕ್ತಿಮಾರ್ಗ ಮಧ್ಯದಲ್ಲಿ ಕರ್ಮಮಾರ್ಗ ಕಲಿಯುಗದಲ್ಲಿ ಹೀಗೆ ಪ್ರಚಾರದಲ್ಲಿದ್ದು ಈ ಪ್ರಪಂಚದಲ್ಲಿಯ ತಾಪದಿಂದ ಮುಕ್ತರಾಗಿ ಸುಖಿಯಾಗುವ ಮಾರ್ಗ ಶೋಧನೆಯೆ ಮನುಷ್ಯಪ್ರಾಣಿಯ ಮುಖ್ಯ ಗುರಿಯಾಗಿದೆ. ಈ ಅಧ್ಯಾತ್ಮ ಮಾರ್ಗವು ಸಫಲವಾಗಲಿಲ್ಲ. ಈ ಅಧ್ಯಾತ್ಮ ಮಾರ್ಗದಿಂದ ಜಗತ್ತು ಮುಕ್ತವಾಗದೆ ಸಾವಿರಾರು ಧಾರ್ಮಿಕ ಪಂಥಗಳು ಹುಟ್ಟಿ ಅವುಗಳ ಪರ್ಯವಸಾನವು ಸಾವಿರಾರು ಜಾತಿ ಪಂಥಗಳನ್ನು ಹುಟ್ಟಿಸಿ ಮೊದಲಿನಕಿಂತ ಜನಸಾಮಾನ್ಯರು ಹೆಚ್ಚು ಹೆಚ್ಚು ದುಃಖಿಗಳಾಗುವದರಲ್ಲಿ ಆಗಿದೆ. ಈ ಅಧ್ಯಾತ್ಮಿಕವಾದಿಗಳು ತಮ್ಮ ಮಾರ್ಗಬಿಟ್ಟಲ್ಲಿ ಈ ದುಃಖವುಂಟಾಗಿದೆ, ಎಂದು ಭಾವಿಸುತ್ತಿರುವರು. ಆದರೆ ತಮ್ಮ ಮಾರ್ಗದ ಪ್ರತಿಕ್ರಿಯೆಯೇ ಈ ದುಃಖಗಳಿಗೆ ಕಾರಣವೆಂದು ತಿಳಿದ ದಿನವೇ ಸುದಿನ. ಅದು ಹೇಗೆ ಬರುವದೊ ನೋಡೋಣ.

#  ಹೂ.... ಬಾಳ್ವೆ 

ಬಾಗಿ ನಗುತಿಹ ವಲ್ಲಿಗೆ
ಸೊಗಸು ಮೊಗದಲಿ ಮಲ್ಲಿಗೆ
ಸುಗುಣವಾಸನೆ ಸುರರಿಗಾಗಿಯೆ
ಸಲಿಸುತಿರುವೆಯಾ? ಅಲ್ಲಿಗೆ ॥ ಪಲ್ಲ ॥

ದೈವಕಾಗಿಯೆ ಧರೆಯೊಳಿಳಿದು
ಮೌನ ಮಾಯೆಯ ಸೊಲ್ಲಿಗೆ
ಹೌದು ಹೌದೆನ್ನುತಲೆ ತಲೆ
ಅರಿಯದಲ್ಲಾಡಿಪ ಬಗೆ ॥ ೧ ॥

ಹಸಿರು ಹೊಚ್ಚಿದ ಕಂಟಿಯೊಳು ಮೃದು
ಅಂಟಿಕೊಂಡಿಹ ನಲ್ಲೆಯೆ
ದಶದಿಸೆಯೊಳು ಬೀರಿ ಕೀರ್ತಿಯ
ಕೊನೆಯ ದೇವನಲ್ಲಿಯೆ ॥ ೨ ॥

ಒಳಗು ಸುಗುಣವು ಹೊರಗು ಹೊಳಪುವು
ಅಂತರಾಳದಿ ಅಮೃತ
ಕೊಳೆಯು ಕೀಳತೆಗಳನು ನೀಗಿದ
ಶಾಂತಿ ಕಾಣ್ಬ ಮನೋರಥ ॥ ೩ ॥

ಚಣದ ಬಾಳುವೆ ಚಕಿತಗೊಳಿಸುವ
ಚಲುವೆ ಹೂವಿನ ಜನುಮವು
ಅಣಕವಾಟವಿದಲ್ಲ! ಕೊಡಲದು
ದೇವನಲಿ ಬಿನ್ನೈಸುವೆ ॥ ೪ ॥

ಸುಮನವಾಗಿಯೆ ನನ್ನ ಜೀವನ
ಸಾಗಲೆಂದೂ ಬಯಸುವೆ
ಶಮನ ಮಾಡುವೆ ಸರ್ವ ದುರ್ಗುಣ
ಶಿರದಿ ದೇವರೊಳಾಡುವೆ ॥ ೫ ॥

ಇಚ್ಛೆ ಮಾಳ್ಪವು ಎಲ್ಲಪೂಗಳು
ದೇವನಿಗೆ ಪ್ರಿಯವಾಗಲು
ಸ್ವಚ್ಛ ಸುಂದರವಾದವುಗಳೆ
ಸೇರುವವು ಯಾವಾಗಲು ॥ ೬ ॥

ತುಳಸಾತ್ಮಜ ಕಟ್ಟಿ ಗುರೂಜಿ ಕೇಗಾಂವ (ಸೊಲ್ಲಾಪೂರ)

# ತಂಗಿಯರೆ ಕೇಳುವಿರಾ ನನ್ನದಿಷ್ಟು ಕಥೆ !

**ಬರೆದವಳು— ಸತ್ಯವಾದಿನಿ.**

**೨ನೇ ಪ್ರಕರಣ.** (ನಮ್ಮ ಸಂಸ್ಥೆ)

[ ೧೯೩೫ನೇ ಸಪ್ಟೆಂಬರ ಸಂಚಿಕೆಯಿಂದ ಮುಂದೆ ಸಾಗಿದ್ದು ]


**ಕಥೆಯ ಸಾರಾಂಶ:—** ನಾನೋರ್ವ ಭಾವಸಾರ ಕ್ಷತ್ರಿಯ ಬಡಕುಟುಂಬದಲ್ಲಿ ಹುಟ್ಟಿದವಳು. ಓರ್ವ ತೇಜೋಹೀನ, ಹೇಡಿ, ಕುರೂಪಿ ಆಪ್ತನನ್ನು ಲಗ್ನವಾಗಿದ್ದು ತಂದೆ ಮತ್ತು ಗಂಡ ಇಬ್ಬರು ಕುಡುಕರು. ಆದ್ದರಿಂದ ಮನೆಯಲ್ಲಿ ಸ್ವಾಸ್ಥ್ಯವಿಲ್ಲ. ನಾನು ಸಾಧಾರಣ ಚಲುವೆ, ಚುರುಕು ಬುದ್ಧಿಯವಳು. ಸಂಘಟನಾ ಚತುರಳು, ಮಾತುಗಾರಳು ಆಕರ್ಷಕಳು ಇದ್ದ ಮೂಲಕ ಎಲ್ಲರು ನನ್ನನ್ನು ವಿಶೇಷವಾಗಿ ತರುಣರು ಪ್ರೀತಿಸುತ್ತಿದ್ದರು. ಓರ್ವ ಸೆಕ್ರೆಟರಿ ಬಲೆಯೊಳಗೆ ಸಿಕ್ಕಬಿದ್ದೆನು. ಗಂಡನು ಸಂಶಯ ಪಿಶಾಚಿಗೆ ಬಲಿಬಿದ್ದನು. ಕೊನೆಗೆ ಓರ್ವ ಮೋಟಾರ ಡ್ರಾಯವ್ಹರನ ಕೂಡ ಓಡಿ ಹೋಗಿದ್ದಕ್ಕೆ ನನ್ನನ್ನು ಒಂದು ಹೆಣ್ಣುಮಕ್ಕಳ ಸಂಸ್ಥೆಯಲ್ಲಿ ಆ ಸೆಕ್ರೆಟರಿಯು ತಂದುಬಿಟ್ಟನು.


ಎಲ್ಲ ಹೆಣ್ಣುಮಕ್ಕಳ ಉದ್ಧಾರಕರ್ತರಂತೆ ನಟಿಸುತ್ತಿದ್ದ ಆ ಸೆಕ್ರೆಟರಿಯು ನನ್ನನ್ನು ನೀನು ಕಲಿತರೆ ನೌಕರಿ ಸಿಗುವದು. ಸ್ವತಂತ್ರ ಸ್ವಾವಲಂಬಿಯಾಗುವಿ. ನಿನಗೆ ಜನರಲ್ಲಿ ಮರ್ಯಾದೆ ಸಿಗುವದು. ಮೇಲಾಗಿ ನೀನೆಲ್ಲಿದ್ದರು ನಾನು ಸಹಾಯ ಮಾಡುವೆನು. ನಾಲ್ಕು ದಿನ ಕಷ್ಟಪಟ್ಟರೆ ಮುಂದೆ ಕಲ್ಯಾಣವಾಗುವದು. ಮೊದಲಾದ ಸವಿ ನುಡಿಗಳಿಂದ ನನ್ನ ಮನಸು ಒಲಿಸಿ ಸಂಸ್ಥೆಗೆ ಕರೆದು ತಂದನು. ಸಂಸ್ಥೆಯಾದರು ಹೊಸದಾಗಿ ಪ್ರಾರಂಭವಾಗಿತ್ತು. ಅದರ ಪ್ರಚಾರ, ಅದರ ಉದ್ದೇಶ ಪತ್ರಿಕೆ ಅದರ ಅನಾವರಣ ವಿಧಿ ಸಮಾರಂಭವು ಒಳ್ಳೆ ವಿಜೃಂಭಣೆಯಿಂದ ಆಗಿದ್ದರಿಂದ ವೃತ್ತಪತ್ರಗಳಲ್ಲಿ ಅದರ ಸುದ್ದಿಗಳು ಬಹಳ ರಸವತ್ತಾಗಿ ಪ್ರಕಟವಾಗುತ್ತಿದ್ದವು. ಮೇಲಾಗಿ ಅದರ ಸಂಚಾಲಕರು ಒಬ್ಬರು ಇಬ್ಬರು ಗಂಡಸರು, ಒಬ್ಬರು ವಿಧವಾ ಹೆಣ್ಣುಮಗಳು ಅದರ ಪ್ರಚಾರಕ್ಕಾಗಿ ನಮ್ಮೂರಿಗೆ ಬಂದು ಹೋಗಿದ್ದರು. ಆ ವಿಧವಾ ಬಾಯಿಯವರು ಒಳ್ಳೆ ಕಳಕಳಿಯಿಂದ ಹೆಣ್ಣುಮಕ್ಕಳ ಉದ್ಧಾರ ಹೇಗೆ ಮಾಡಿಕೊಳ್ಳಬೇಕು! ತಮ್ಮ ಕಾಲುಗಳ ಮೇಲೆ ಹೇಗೆ ನಿಲ್ಲಬೇಕು! ಅವರು ಕಲಿಯುವದರಿಂದ ಗಂಡುಮಕ್ಕಳು ರಾಷ್ಟ್ರದ ಸ್ವಾತಂತ್ರ್ಯಕ್ಕೆ ಹೋರಾಡುತ್ತಿರುವಾಗ ಅವರಿಗೆ ನೆರವು ಹೇಗೆ ಸಿಗುವದು! ಹೆಣ್ಣುಮಕ್ಕಳ ಶಿಕ್ಷಣದ ಕಡೆಗೆ ಗಂಡಸರು ಅಲಕ್ಷ್ಯ ಮಾಡುವದರಿಂದ ಅವರು ಗಂಡಸರ ಕೊರಳೊಳಗೆ ಗುದ್ದಿಯಂತೆ ಅಡಗಾಲು ಹೇಗೆ ಆಗಿರುವರು! ಗಂಡಸರು ಹೆಂಗಸರಿಂದ ಪತಿವ್ರತಾ ಧರ್ಮಾಚರಣದ ಅಪೇಕ್ಷೆ ಮಾಡಿದಂತೆ ಹೆಂಗಸರಾದರು ಗಂಡಸರಿಂದ ಸತಿವ್ರತಾ ಧರ್ಮದ ಅಪೇಕ್ಷೆ ಮಾಡುವದು ಸ್ವಾಭಾವಿಕವಲ್ಲವೆ! ಇವೆ ಮೊದಲಾದ ವಿಷಯಗಳನ್ನು ಪೌರಾಣಿಕ ಐತಿಹಾಸಿಕ ಹೆಣ್ಣು ಗಂಡುಗಳ ಜಾಜ್ವಲ ಉದಾಹರಣೆಗಳನ್ನು ಕೊಟ್ಟು ತಮ್ಮ ಹಾಡುಗಾರಿಕೆಯನ್ನು ತಮ್ಮ ಒಳ್ಳೆ ಮಧುರ ಕಂಠದಿಂದ ತಮ್ಮ ವಾಕ್ಚಾತುರ್ಯದಲ್ಲಿ ಬೆರಿಸಿ, ಯಾರ ಮನಸ್ಸು ನೋಯದಂತೆ, ಆದರೆ ಚುರುಕು ಹತ್ತುವಂತೆ ಮಾತಾಡಿ ಗಂಡು ಹೆಣ್ಣುಗಳ ಮನಸ್ಸನ್ನು ತಮ್ಮ ಕಡೆಗೆ ಸೆಳೆಯುತ್ತಿದ್ದರು. ಮೊದಲೆ ಸಣ್ಣದಾದ ನಮ್ಮ ಊರಿನ ಗಂಡು ಹೆಣ್ಣುಗಳು ಹುಚ್ಚರಂತೆ ಅವರ ಬೆನ್ನುಹತ್ತಿದರು. ಹೆಣ್ಣುಮಕ್ಕಳ ಶಿಕ್ಷಣಕ್ಕಾಗಿ ಇಬ್ಬರು ಗಂಡು ಮತ್ತು ಹೆಣ್ಣುಮಕ್ಕಳು ನಮ್ಮ ಊರಿಗೆ ಬಂದಿದ್ದು ಅವರ ಉಪನ್ಯಾಸವಿದೆಯೆಂದು ಗಂಡಸರು ಸಾರಿದರು. ಆದರೆ ಮೊದಲನೆ ದಿನ ಯಾರು ವಿಶೇಷವಾಗಿ ಜನರು ಬಂದಿರಲಿಲ್ಲ. ಆದರೆ ೨ನೇ ದಿನ ಬೈಲೊಳಗಿನ ಸ್ಥಳ ಸಾಲದಷ್ಟು ಜನದಟ್ಟಣೆಯು,

ಆವಾಗರಾಷ್ಟ್ರೀಯ ಆಂದೋಲನದ ಕಾಲವು ಇದ್ದುದರಿಂದಎಂಥ ವ್ಯಾಖ್ಯಾನಗಳಾದರು ಜನರು ಮುಕರುವರು. ಇಂಥ ಪರಿಸ್ಥಿತಿ ಯಲ್ಲಿಓರ್ವ ಗಿಡ್ಡ ಹೆಣ್ಣುಮಗಳುಮಧುರಕಂಠದಿಂದರಾಷ್ಟ್ರೀಯ ಗೀತಗಳನ್ನು ಹಾಡುವದು, ಗಂಭೀರವಾಗಿ ಶುದ್ಧ ಸ್ಪಷ್ಟ ಧ್ವನಿ ಯಿಂದ ಪೋಕ್ತ ಶಬ್ದಗಳಲ್ಲಿ ಉಪನ್ಯಾಸ ಕೊಡುವದು, ಯಾರಿಗೆ ತಾನೆ ಆಕರ್ಷಿಸಲಿಕ್ಕಿಲ್ಲ? ಅದರಲ್ಲಿಯು ಖಾದಿ ಇಲ್ಲದಿದ್ದರು ಬಿಳೀ ಸ್ವಚ್ಛ ಪತ್ತಲವು ಯಾವಳೊ ಒಬ್ಬಳು ಅಪ್ಸರೆಯು ಸ್ವರ್ಗಲೋಕದಿಂದ ಭೂಲೋಕಕ್ಕೆ ಹೆಣ್ಣುಮಕ್ಕಳ ದುಃಖವನ್ನು ನೋಡಿ ತಡೆಯಲಾರದೆ, ಮೈತ್ರೆಯಿ, ಗಾರ್ಗಿ ಯಂತೆ ವಿದೂಷ್ಕಿ, ಪನ್ನಾ, ಝಾಂಸಿ ಲಕ್ಷ್ಮೀಬಾಯಿಯಂತೆ ಅನ್ಯಾಯದ ವಿರುದ್ಧ ಹೋರಾಡಲು ಹೊರಟ ಮ್ಹೈಸಾಸುರ ಮರ್ದಿನಿಯಂತೆ ಕನ್ನಡಿಕ (ಚಾಳಿಸ) ದೊಳಗಿನ ವಿಶಾಲ ನೇತ್ರದೊಳಗಿಂದ ಪ್ರತಿಭಟಿಸುವ ಘಾತ್ರತೇಜವನ್ನು ತೋರಿಸಿ ದಳು. ಇದರಿಂದ ಹೊಡಿಬಡಿಯೆಂದು ಭಾವನೋದ್ರೇಕ ವನ್ನು ಕೆಣಕುವ ರಾಜಕೀಯ ಉಪನ್ಯಾಸಗಳಕಿಂತ ಆತ್ಮ ನಿರೀಕ್ಷಣೆಯಿಂದ ತಮ್ಮ ದೋಷಗಳನ್ನು ತಿದ್ದಲು ಹಚ್ಚುವ ಈ ಗಿಡ್ಡ ವಿಧವೆಯ ಬೆನ್ನು ಜನಜಂಗುಳಿಯು ಹುಚ್ಚರಂತೆ ಹತ್ತಿತು. ಇಷ್ಟು ಸಣ್ಣಊರಲ್ಲಿ ಸಹ ೮-೧೦ ಉಪನ್ಯಾಸ ಗಳು ಆವರದಾದವು. ಒಂದು ಕ್ಷಣವೇಕೆ ಆಗಬಲ್ಲತು ನನ ಗಾದರು ಇವರ ಸಂಸ್ಥೆಗೆ ಹೋಗಬೇಕು, ಇವರಂತೆ ಕಲಿತು ಉಪನ್ಯಾಸಗಳನ್ನು ಕೊಡಬೇಕು. ಸರೋಜಿನಿ ನಾಯಡು, ಕಮಲಾದೇವಿ ಚಟ್ಟೋಪಾಧ್ಯಾಯರಂತಾಗಬೇಕು. ಇವೆ ಮೊದಲಾದ ಬಯಕೆಗಳು ಹುಟ್ಟಿದವು. ಇಷ್ಟರಲ್ಲಿ ತನ್ನ ಮೇಲಿನ ಕಲಂಕವನ್ನು ತೊಳೆದುಕೊಳ್ಳಲು ಹೊರಟ ನಮ್ಮ ಸೇಕ್ರೆಟರಿಯು ನಾನು ಈ ಸಂಸ್ಥೆಗೆ ಹೋಗಬೇಕೆಂದು ಒತ್ತಾಯ ಪಡಿಸಹತ್ತಿದನು. ಇದರಿಂದ ಹಾಲೊಳಗೆ ಸಕ್ಕರೆ ಬೆರೆ ತಂತಾಯಿತು. ಮತ್ತು ನಾನಾದರು ಹೊರಟೆ ಉತ್ಸಾಹದ ಭರದಲ್ಲಿ. ಆದರೆ ಸಂಸ್ಥೆಗೆ ಬಂದು ನೋಡುತ್ತಿರಲು ಬೆಪ್ಪಾದೆ. ಬಾಯಿಯವರ ಉಪನ್ಯಾಸಗಳಿಂದ ಇವರ ಸಂಸ್ಥೆ ಏನೋ ವಿಶಾಲವಾಗಿದ್ದಿರಬೇಕು, ಎಷ್ಟೋ ಮಹಿಳೆಯರು ಪಾಠ ಗಳನ್ನು ಹೇಳುತ್ತಿದ್ದಿರಬೇಕು. ಮ. ಗಾಂಧಿಯಂಥವರ ಉಪನ್ಯಾಸಗಳು ಆಗಾಗ್ಗೆ ನಡೆದಿದ್ದಿರಬೇಕು; ಒಳ್ಳೆ ಗಾಯನ ವಾದ ಕಲೆಯು ಕಲಿಸಲ್ಪಟ್ಟಿರಬಹುದು. ಇವೆ ಮೊದಲಾದ ಭವ್ಯ ಉದಾತ್ತ ಕಲ್ಪನೆಗಳಿಂದ ಒಳ್ಳೆ ಉತ್ಸುಕತೆಯಿಂದ ಮಧ್ಯಾನ್ಹ ಮೂರು ಗಂಟೆಗೆ ಈ ಸಂಸ್ಥೆಯಲ್ಲಿ ನಮ್ಮ ಸೆಕ್ರೆಟರಿ ಗಳೊಡನೆ ಕಾಲಿಟ್ಟೆನು, ಆದರೆ ದಿಕ್ಕೆ ತಪ್ಪಿದಂತಾಗಿ ಬೆಪ್ಪಾ ದೆನು. ನಾನು ಬಯಸಿದ್ದೇನು, ಇಲ್ಲಿ ಕಂಡದ್ದೇನು! ಒಂದು ಹರಕು ಮುರಕು ಮನೆ, ಅಲ್ಲಿ ಒಬ್ಬ ಕುರುಡ ಮುದಕ ಮತ್ತು ಅವನ ೩ ಮಕ್ಕಳೊಡನೆ ಇದ್ದ ಕುಟುಂಬ. ಎಲೆ ಹುಚ್ಚಿ ಇಲ್ಲಿಗೇಕೆ ನೀನು ಬಂದಿಯೆಂದು ಹಾಸ್ಯ, ತಿರ ಸ್ಕಾರ, ಉಪಹಾಸ ವ್ಯಕ್ತಪಡಿಸುವ ಅವರ ಹಾವಭಾವ ಯುಕ್ತ ಮುದ್ರೆಗಳನ್ನು ನೋಡಿ ನನಗಂತು ಅಳೂ ಬಂದಿತು. ಇಷ್ಟರಲ್ಲಿ ಸಂಸ್ಥೆಯ ವಸತಿ ಗೃಹದ ಮೇಲ್ವಿಚಾ ರಕರಾದ ಓರ್ವ ಹೆಣ್ಣುಮಗಳು ಬಂದಳು. ಬಂದ ಕೂಡಲೆ ಅವಳ ಕೂಡ ನಾನು ಮೊದಲು ಹೇಳಿದ ಆ ಕುರುಡನ ಹೆಂಡತಿ ಬೇಳೆಯಿಲ್ಲ, ಅಕ್ಕಿ ಇಲ್ಲ, ಸಿಕ್ಕಸಿಕ್ಕವರನ್ನು ಏಕೆ ಬೋರ್ಡಿಂ ಗಕ್ಕೆ ತೆಗೆದುಕೊಳ್ಳುತ್ತೀರಿ ಎಂದು ವ್ಯಾಜ್ಯ ಹೊಡಿದಳು. ಆಕೆಯ ಮಕ್ಕಳು ಉಪಹಾಸದಿಂದ ನನ್ನನ್ನು ಬಿರಿಬಿರಿ ನೋಡ ಹತ್ತಿದರು. ಇದರಿಂದ ನಾನಿಲ್ಲಿಗೇಕೆ ಬಂದೆ ಇಷ್ಟು ವೆಚ್ಚು ಮಾಡಿಕೊಂಡು! ಬಂದು ಏನು ಕಲಿಯದೆ ತಿರುಗಿ ಹೋಗಿ ಊರಲ್ಲಿ ನಮ್ಮ ಅಕ್ಕವವರಿಗೇನು ಹೇಳಲಿ, ಮೋರೆಯನ್ನಾ ದರು ಹೇಗೆ ತೋರಿಸಲಿ, ಎಂದು ಅಳೋವು ಬಂದಿತು. ಇಷ್ಟರಲ್ಲಿ ನಮ್ಮೂರಿಗೆ ಉಪನ್ಯಾಸಕ್ಕೆ ಬಂದ ಸಂಸ್ಥೆಯ ಮೇಲ್ವಿಚಾರಕರಾದ ವಿಧವೆ ಮತ್ತು ಕಾರ್ಯದರ್ಶಿಗಳಾದ ಗಂಡಸು ಸಂಜೆ ನಾಲ್ಕು ಗಂಟೆಗೆ ಬಂದರು. ಆವರ ಮುಂದೆ ನಮ್ಮ ಸೆಕ್ರೆಟರಿಗಳು ನನ್ನ ಇತಿಹಾಸವನ್ನು ನನ್ನ ಇದೂರಿನಲ್ಲಿ ಹೇಳಲು ಪ್ರಾರಂಭಿಸಿದರು. ಏನೂ ಸಂಕೋಚ, ಹೆದರಿಕೆ ಮನಸ್ತಾಪ ಅಂಜಿಕೆ ನಾಚಿಕೆ ಇಲ್ಲದನರಂತೆ ' ಇವಳು ಡ್ರಾಯವ್ಹರನ ಬೆನ್ನುಹತ್ತಿದ್ದಳು. ನಾನು ನೆರವು ಕೊಡ ದಿದ್ದರೆ ಹಾಳಾಗಿ ಹೋಗುತ್ತಿದ್ದಳು. ಇವಳನ್ನು ಎಲ್ಲಿಯು ಹೊರಗೆ ಹೋಗಗೊಡಬೇಡಿರಿ ಇವಳು ಬಹಳ ಚಂಚಳಲು ಆದರೆ ಬಹಳ ಚುರುಕ ಬುದ್ಧಿಯವಳು. ಕಲಿಸಿ ಸಿದ್ಧಗೊಳಿ ಸಿದರೆ ನಿಮ್ಮ ಹಾಗು ಸಂಸ್ಥೆಯ ಹೆಸರು ಮುಂದೆ ತರುವಳು. ಎಂದು ಬಾಲಕರ ಮುಂದೆ ನನ್ನ ಕಡೆಗೆ ವಾರಿ ಗಣ್ಣಿನಿಂದ ವ್ಯಂಗ್ಯವಾಗಿ ನೋಡುತ್ತ ಹೇಳಿದನು. ಮತ್ತು ನನ್ನ ಕಡೆಗೆ ಉಪಹಾಸಬೀರುತ್ತ 'ತಂಗಿ ಇವರೆ ನಿನ್ನ ತಂದೆ ತಾಯಿಯವರು ಇವರು ಹೇಳಿದಂತೆ ನಡೆದುಕೊಂಡು ನಿನ್ನಕಲ್ಯಾಣ ಮಾಡಿಕೋ ಅಂದರೆ ನಿನ್ನ ಉದ್ಧಾರವಾದೀತು. ಸೀತಾ ಸಾವಿತ್ರಿಯಾಗು. ಬರಲ್ಯಾ ಇನ್ನು" ಎಂದು ಹೊರಡುವಾಗ ಎರಡು ರೂಪಾಯಿ ಗಳನ್ನು ತೆಗೆದು ಕೈಯಲ್ಲಿ ಕೊಟ್ಟನು. ಇದನ್ನು ಕೇಳಿ ನೋಡಿ ಮನಸಿನಲ್ಲಿ ಸ್ವಾಭಿಮಾನದ ಕಿಚ್ಚು ಉರಿದೆದ್ದಿತು. ದವಡಿ ಹಲ್ಲುಗಳು ಕಚ್ಚಹತ್ತಿದವು. ಏನು ಮಾಡಲಿ! ಈ ನೀಚನ

ಕುತ್ತಿಗೆಯನ್ನು ಈಗಲೆ ಹಿಚಕಲ್ಯೊ! ಎಂಥ ನೀಚನಿವನು! ಏನೇನು ಅರಿಯದ ಚಿಕ್ಕ ಕಂದಮ್ಮನಾದ ನನ್ನನ್ನು ಸವಿಸವಿ ಮಾತುಗಳಿಂದ, ತಿಂಡಿ ತಿನಸುಗಳಿಂದ, ಉಡುಪು ತೊಡಪುಗಳಿಂದ ನನ್ನ ಮೇಲೆ ಬಂದ ಸಂಕಟಗಳ (ನನ್ನದೇನು ತಪ್ಪಿರಪೆ) ಲಾಭಪಡೆದು ನನ್ನನ್ನು ಹಾಳು ಮಾಡಿದ ನೀಚನು ಕೃತಘ್ನನು, ವಿಶ್ವಾಸಘಾತಕಿ, ಕೊಲೆಗಡಕನು ಇವನೇ ಅಲ್ಲವೇ! ನೀನು ಕಲಿತ ಜ್ಞಾನದ್ದು, ಸಾಮಾಜಿಕ ದರ್ಜೆಯು ಕಾನು ಕಟ್ಟಳೆಗಳ ಧಾರ್ಮಿಕ ನಿಯಮಗಳು ಗಂಡಸರಿಗೆ ಅನುಕೂಲವಿದ್ದದ್ದರ ಲಾಭಪಡೆದು ನನ್ನನ್ನು ಸಮಾಜದಲ್ಲಿ ಸ್ಥಳಹೀನಳನ್ನು ಮಾಡಿ ದೇಶಾಂತರ ಮಾಡಲು ಹಚ್ಚಿದ ಅಧಮಾಧಮನಾದವನು ನೀನೇ ಅಲ್ಲವೆ! ಆದರೆ ಮಾಡುವದೇನು! ನನ್ನಲ್ಲಿ ಅವನಷ್ಟು ಪುರಾಣ ಪುಣ್ಯಕಥೆಗಳ ಜ್ಞಾನವಿಲ್ಲ! ಇತಿಹಾಸ ಗೊತ್ತಿಲ್ಲ! ಆಪ್ತೇಷ್ಟರ ಬೆಂಬಲವಿಲ್ಲ! ರೊಕ್ಕದ ನೆರವಿಲ್ಲ! ಇಂಥ ಸಾಮಾಜಿಕ ಬೆಂಬಲವಿಲ್ಲದ ಅಸಹಾಯಕಳಾದ ನಾನು ಏನು ಮಾಡಬಲ್ಲೆ! ಮನಸಿನಲ್ಲಿ ನೊಂದರು ಬಹಿರಂಗವಾಗಿ ವ್ಯಕ್ತಪಡಿಸಲು ನಾಲಿಗೆ ಇಲ್ಲ! ಸುಮ್ಮನೆ ನಾಲಗೆಯನ್ನು ಹಲ್ಲಿನ ಬುಡದಲ್ಲಿ ಅಡಗಿಸಿದ ವಿನಾ ಉಪಾಯ ಕಾಣಲಿಲ್ಲ! ಜಗದೊಳಗಿನ ಸಾಧುಸಂತರು ತಮ್ಮ ಅನುಭವಿಕ ಅರ್ಥ ಮತ್ತು ಸ್ವಾರಸ್ಯಪೂರ್ಣ ವಚನಗಳನ್ನು ಇಂಥ ಬಾಯಬಡಕರ ಉಪಯೋಗಕ್ಕಾಗಿ ಮಾಡಿರುವರೋ ಏನೋ ಎಂದು ಅನಿಸಹತ್ತಿತು. ಈ ಎಲ್ಲ ವಚನಗಳನ್ನು ಸಮುದ್ರಾಸ್ತ್ಯಸ್ಯಂತು ಮಾಡಿದರೇನೆ ಹೆಚ್ಚು ಜಗತ್ಕಲ್ಯಾಣವಾದೀತೆಂದು ಅನಿಸಿತು. ಇದರಿಂದ ಅಜ್ಞ ಜನರನ್ನು ಮೋಸ ಮಾಡುವ ದುಷ್ಟರ ಕೈಯೊಳಗಿಂದ ದೊಡ್ಡ ಶಸ್ತ್ರವಾದರು ಇಲ್ಲದಂತಾದೀತು! ವ್ಯಾಖ್ಯಾನಕಾರರು, ವಚನಕಾರರು, ನಾಟ್ಯಾಚಾರರು, ಸ್ವಾಮಿಗಳು, ಮಠಾಧಿಪತಿಗಳು, ಸಾಹಿತಿಗಳು ಒಟ್ಟಾರೆ ಬಹುಶ್ರೇಕ ಎಲ್ಲ ಬುದ್ಧಿವಂತ ಕಲಾಕಾರರು ಸಾಹಿತಿಗಳು ಆಸ್ತಿಕರನ್ನು, ಶಿಷ್ಯರನ್ನು ತರ್ಕಶಾಸ್ತ್ರದ ಪಠಣ ಇಲ್ಲದ್ದರಿಂದ ಕಾರ್ಯಕಾರಣ ಮೀಮಾಂಸೆ ಗೊತ್ತಿಲ್ಲದ ಮೂಢರನ್ನು ಗುಂಡಿಪಾಲು ಮಾಡುತ್ತಿರುದಲ್ಲೆಂದು ಮಂಕಳಾಗಿ ಬಿಟ್ಟೆನು. ಈವಾಗ ನಾನು ಪ್ರತಿಭಟಿಸಿದರೆ ಸಂಸ್ಥೆಯ ಚಾಲಕರು ನನ್ನ ಪಕ್ಷಕ್ಕೆಗೆ ತೆಗೆದುಕೊಳ್ಳಲಿಕ್ಕಿಲ್ಲ. ದೊಡ್ಡವರ ಅಪಮಾನ ಮಾಡಿದರೆ ಅವರು ಸಂಸ್ಥೆ ನೆರವು ಕೊಡಲಿಕ್ಕಿಲ್ಲ! ಇವೆ ಮೊದಲಾದ ವಿಚಾರಗಳಿಂದ ಬಿಕ್ಕಿ ಬಿಕ್ಕಿ ಕಣ್ಣೀರು ಸುರಿಸುತ್ತ, ಭಾವನೋದ್ರೇಕದಿಂದ ಬಾಯಿಂದ ಮಾತುಗಳು ಹೊರಡದೆ ಮೆಲ್ಲನೆ 'ಹೂಂ' ಎಂದು ಅವರೆಲ್ಲ ಮಾತಿಗೆ ಸಮ್ಮತಿ ಕೊಟ್ಟೆನು. ಸಂಸ್ಥೆಯ ಚಾಲಕರಾದ ಮೂವರ ಮುಖ ಮುದ್ರೆಯಲ್ಲಿ ವಿವಿಧ ಭಾವಗಳು ಕಂಡುಬಂದವು. ಗಂಡಸಾದ ಕಾರ್ಯದರ್ಶಿಗಳು ಒಳ್ಳೆ ಗಾಂಭೀರ್ಯದಿಂದ ತಮ್ಮ ವ್ಯವಹಾರ ಚಾತುರ್ಯವನ್ನು ವ್ಯಕ್ತಪಡಿಸುವಂತೆ 'ನೀವು ಅವಳ ಯೋಜನೆ ಬಿಡಿರಿ. ಹೊಸದಾಗಿ ಎಲ್ಲರನ್ನು ಅಗಲಿ ಬಂದಿದ್ದರಿಂದ ಅವಳು ಮರುಗುತ್ತಿರುವಳು. ಇನ್ನೊಮ್ಮೆಗೆ ನೀವು ಬಂದಾಗ ಅವಳೆ ನಿಮಗೆ ಬುದ್ಧಿ ಕಲಿಸುವಳು' ಎಂಬುದಾಗಿ ಅರ್ಥ ಗಾಂಭೀರ್ಯದ ಮಾತುಗಳನ್ನಾಡಿದರು. ಸಂಸ್ಥೆಯ ವ್ಯವಸ್ಥಾಪಕಿಯರಾದ ವಿಧವಾಬಾಯಿಯವರು 'ಈಗಿನ ಹೆಣ್ಣುಗಳೆಲ್ಲ ಇಂಥವವೆ! ಕುಣಿತದಿಂದ ಸ್ವೇಚ್ಛಾಚಾರಿಯಾಗಿ ತಮ್ಮ ಕುಲಕ್ಕೆ ಕಲಂಕ ಹಚ್ಚುತ್ತಿರುವರು. ಇಷ್ಟೆಲ್ಲ ಈ ಶಿಕ್ಷಣವೆ ಹಾಳು ಮಾಡಿರುವದು. ಏನು ಶಾಲೆಯ ಅಕ್ಕವರು ತಮಗೆ ಹ್ರಸ್ವದೀರ್ಘ ಗೊತ್ತಿಲ್ಲದರ ದೊಡ್ಡ 'ಕ' ಅನ್ನಿ ಎಂದು ಕಲಿಸುವವರೆ ಎಲ್ಲ ಮಕ್ಕಳನ್ನುಹಾಳು ಮಾಡಿರುವದು. ನಾವೇನು ಮಾಡುವೆವು. ಕಲಿಸುವಷ್ಟು ಕಲಿಸುತ್ತೇವೆ! ಹೇಳುವಷ್ಟು ಹೇಳುತ್ತೇವೆ! ಅವಳ ನಶೀಬ! ಅವಳೇನು ಮಣ್ಣಿನ ಗೊಂಬೆ! ಎಂದು ಗರ್ಜಿಸಿದರು. ವಸತಿಗೃಹದ ವ್ಯವಸ್ಥಾಪಿಕೆಯರು ನಗುನಗುತ್ತ 'ನೀವು ಅವಳ ಬಗ್ಗೆ ಕಾಳಜಿ ಬಿಡಬೇಕೆಂದು' ಅಂದರು. ಮೊದಲು ಬೋರ್ಡಿಂಗದಲ್ಲಿದ್ದವರು ಹೊಸಬರು ಯಾರಾದರು ಬಂದರೆ ತಮ್ಮ ಸರ್ವಾಧಿಕಾರತ್ವಕ್ಕೆ ಎಲ್ಲಿ ಕುಂದು ಬರುವದೋ ಎಂದು ಹೊಟ್ಟೆಕಿಚ್ಚಿನಿಂದ ಕದ್ದು ಕೇಳುತ್ತಿದ್ದವರು ಈ ನನ್ನ ಎಲ್ಲ ಇತಿಹಾಸವನ್ನು ಕೇಳಿ 'ಈ ರಂ............ ಜೊತೆಗೆ ನಾವು ಹೇಗಿರಬೇಕು' ಎಂದು ಕಾಲ ಅಪ್ಪಳಿಸಹತ್ತಿದರು ಮತ್ತು ಮೂಗು ಮುರಿಯುವದು ನನ್ನ ಕಣ್ಣಿಗೆ ಬಿದ್ದಿತು. ಇಂಥ ಸ್ವಾಗತವಿಲ್ಲದ ಸಂಸ್ಥೆಯಲ್ಲ 'ಇರಬೇಕೊ ಇರಬಾರದೊ' ಎನ್ನುತ್ತ ನಿರುಪಾಯಳಾಗಿ ಮನಸಿಲ್ಲದೆ ಇರಲು ಒಪ್ಪಿಕೊಂಡೆ. ಸೆಕ್ರೆಟರಿಗಳು ಬಿಟ್ಟವರು ಹೋಗಿಬಿಟ್ಟರು. ಕಗ್ಗತ್ತಲೆ ಕಣ್ಣು ಮುಂದೆ ಕಟ್ಟಿತು.

## ಅಂಬಿಗನ ಕುರಿತು

ಅಂಬಿಗಾ ಓ ಅಂಬಿಗಾ
ಬಾಳ ನಾವೆಯ ಜನ್ಮ ನಾವಿಕ
ಅಂಬಿಗಾ ಓ ಅಂಬಿಗಾ

ನಡೆವ ದಾರಿಲಿ ಅಡ್ಡ ಬಂದಿಹ
ದೊಡ್ಡ ನದಿಯನು ನೋಡುತ
ಪಾರುಗಾಣದೆ ಕರೆವೆ ನಿನ್ನನು
ಬಂದು ದಾಟಿಸೊ ಅಂಬಿಗಾ ॥೧॥

ತೇಲಿ ಬರುತಿವೆ ಬಿದ್ದ ಮರಗಳು
ಹಾರಿ ಬರುತಿವೆ ತಿಮಿತಿಮಿಂಗಿಲ
ಬೋರುಗೈಯ್ಯುತ ತುಂಬಿ ಹರಿಯುವ
ನದಿಯ ದಾಟಿಸೊ ನಂಬಿಗಾ ॥೨॥

ಬಾಳ ನದಿಯದು ಬಿಡದೆ ಹರಿದಿದೆ
ಆರು ರುತುಗಳು ಮದಪೂರವು
ಹೇಗೊ ! ಎನಿತೊ ! ಮಾಡಿ ನನ್ನನು
ಆಚೆ ದಡವನು ಸೇರಿಸೋ ॥೩॥

ಬೀಸು ಗಾಳಿಲಿ ಸುರಿವ ಮಳೆಯಲಿ
ಮುಸುಕಿ ಬರುತಿಹ ತಮದಲಿ
ಆಚೆ ದಡದಿಂ ತೂರಿ ಬರುತಿಹ
ಬೆಳಕ ದಾವುದೋ ನಾವಿಕಾ ॥೪॥

ಜ್ಞಾನ ಜ್ಯೋತಿಯ ಬೆಳಕ ಗುರಿಯಲಿ
ಹೃದಯದನುರಾಗ ಬಲದಲಿ
ನಿನ್ನ ನಾವೆಯ ನೂಕಿ ನನ್ನನು
ಆಚೆ ದಡವನು ಸೇರಿಸೋ ॥೫॥

—ಎಸ್. ಜಿ. ಉಳಗೆರೆ

## ವಿಧಿವಿಲಾಸ

ಆದಿಯಿಂದ ನಂತವರೆಗೆ ಆಗು-ಹೋಗು
ಗಳನು ಏರಿ ಇಳಿವ ಬಾಳ ತೊಟ್ಟಿಲ
ತೂಗು ತೂಗುತಿರಲು, ತೂಗದಾಗಿ ವೇಗ–

ಆಗುತಿರಲು ನಮ್ಮ ಬಾಳ ತೊಟ್ಟಿಲ
ತುಂಬಿಬರಲು ಮುಂದಗಣ್ಣು
ಮೈಯು ಕೂಡ ಹಣ್ಣು ಹಣ್ಣು

ಹೆಜ್ಜೆ ಸಾಗದಾಗಿದೆ ದಾರಿ ದೂರ ಉಳಿದಿದೆ
ದಿಟ್ಟಗಾಗಿ ಇಟ್ಟ ಹುಬ್ಬು ಗೈಯು–
ಹೊತ್ತ ಕೋಲು ಮೈಯ

ಬಸಿರಿನಾಳದಿಂದ ಉಸಿರ ತೇಗತೊಡಗಿದೆ
ವೇಗ ಆರತೊಡಗಿದೆ
ಬೆಟ್ಟ ಬಯಲ ಹಳ್ಳ ಕೊಳ್ಳ ನೀರು-ನೆಲಗಳ
ಇಳಿದೆ ನೀ ವಿಧಿವಿಲಾಸದ
ನೋವಿನಾಳದಲ್ಲಿ ಮಿಂದು ಬಾಳಬೇಗೆಯಲ್ಲಿ ಬೆಂ
ಅಂತರಂಗ ಶೂಲದ

ಜನನ ಜರಾರೋಗ ಮರಣ
ಭಯಂಭರಿತ ಕರುಣ ನಯನ
ಪಯಣದೀ ಪ್ರವಾಸದ

ಯುಗಯುಗಾಂತರವ ಕಳೆದು
ಮರಣ ತೆರೆಯ ಮೇಲೆ ಕಳೆದು
ಭ್ರಾಂತಿ ವಿಧಿವಿಲಾಸದ

—ಶ್ರೀಕಾಂತ ಶಮನೇವಾಡಿ (ಚಿಕ್ಕೋ

# ಎದುರು ಚಾಳು

( ಹರಟೆ )

ಲೇ— ಸರೋಜಿನಿತಾಯಿ ಚೌಕಿ.

ಹೌದು, ನಮ್ಮ ಕಟ್ಟಡವು ಈ ಭಾಗದಲ್ಲಿ ಕಟ್ಟುವ ಮೊದಲು ಈ ಸ್ಥಳವೆಲ್ಲವೂ ಮಾವಿನ, ಸೀಬೆಹಣ್ಣಿನ ತೋಪುಗಳಿಂದ ತುಂಬಿತ್ತು. ಸಾಧಾರಣ ಸಂಜೆ ಆರರನಂತರ ಈ ರಸ್ತೆಯಿಂದ ಹಾದು ಹೋಗುವದೆಂದರೆ ನಮಗೆಲ್ಲ ತುಂಬ ಭಯ. ಕುಡುಕರ, ಕಳ್ಳರ, ಪೋಕರಿಗಳ ಸೌಕರ್ಯಕ್ಕಾಗಿಯೇ ಈ ರಸ್ತೆ ಇದೆಯೇನೋ ಎಂಬ ಭಾವನೆ ಸಹ ಆಗಾಗ ಬರುತ್ತಿತ್ತು. ಮುಂದೆ ಈ ತೋಪಿನ ಎದುರಿಗಿರುವ ದೊಡ್ಡ ದಿಣ್ಣೆಯ ಮೇಲೆ ನಮ್ಮ ಶಾಲಾ ಕಟ್ಟಡವು ತನ್ನದೇ ಆದ ಒಂದು ಗರ್ವದಿಂದ ಸುತ್ತಲಿನ ಜನರಿಗೆ ಕಾಣುವಂತೆ ಎದ್ದು ನಿಂತಿತು. ಇದರಿಂದ ಇಲ್ಲಿ ಜನರ ಓಡಾಟ, ಗದ್ದಲವಿದ್ದು ಸಂಜೆ ಆರ ವರೆಗೂ ಸಾಧಾರಣ ಪುಕ್ಕ ಮನುಷ್ಯರೂ ಸಹ ಹೆದರಿಕೆ ಇಲ್ಲದೆ ಓಡಾಡುವಂತಾಯ್ತು. ಮುಂದೆ ನಮ್ಮ ಎದುರು ತೋಪಿನ ಮಾಲಕರು ಹಣದ ಆಶೆಯಿಂದಲೋ, ತೊಂದರೆಯಿಂದಲೋ ಅಥವಾ ಈಗಿನ ದಿನಗಳಲ್ಲಿ ತೋಟಪಟ್ಟಿಗಳಿಂದ ಲಾಭವಿಲ್ಲೆಂಬ ವಿಚಾರದಿಂದಲೋ ಅಂತೂ ತೋಪನ್ನು ಮಾರಿಬಿಡಲಾಗಿ ಸರ್ಕಾರದವರು ಭರದಿಂದ ವನಮಹೋತ್ಸವದ ಕಾರ್ಯಕ್ರಮ ಕೈಕೊಂಡಾಗಲೇ ಇಲ್ಲಿನ ತೋಟವೆಲ್ಲಾ ಬಟಾ ಬಯಲಾಗಿ ಕೆಸರಿನ ಬಯಲು ತಾನೇ ತಾನಾಗಿ ಹಾಸಿ ಮಲಗಿ ಜನರಿಗೆ ತನ್ನನ್ನು ಹಸನು ಮಾಡಿ, ನಿಮ್ಮ ವಾಸಸ್ಥಳವನ್ನು ಮಾಡಿಕೊಳ್ಳಿರೆಂದು ಕರೆಯುತ್ತಿತ್ತು. ಕೆಲವೇ ದಿನಗಳಲ್ಲೇ ಆ ಕೆಸರು ಮೈದಾನದಿಂದ ನಮ್ಮ ಎದುರಿನ ರಸ್ತೆಗೆ ಹೊಂದಿ ಒಂದು ಕಟ್ಟಡದ ಅಸ್ತಿಭಾರ ಹಾಕಿದ್ದು ಕಾಣಿಸಿತು. ಒಂದೆರಡು ವರ್ಷಗಳಿನ್ನುವದರಲ್ಲೇ ಅಲ್ಲೊಂದು ಇಲ್ಲೊಂದು ಮನೆಗಳು ಕೊಕ್ಕರೆಯಂತೆ ತಮ್ಮ ಕೊರಳೆತ್ತಿ ನಿಂತವು. ನಾಲ್ಕಾರು ವರ್ಷಗಳೆನ್ನುವದರಲ್ಲೇ, ಈ ಹಿಂದೆ ನಾಲ್ಕಾರು ವರ್ಷಗಳ ಕೆಳಗೆ ಬಂದವರಿಗೆ ತಾವು ಬಂದ ದಾರಿಯು ತಪ್ಪೇನೋ ಎಂದು ಭಾಸವಾಗುವಷ್ಟು ಬದಲಾಗಿ, ನಮ್ಮ ಕಟ್ಟಡದ ಮುಂದಿನ ರಸ್ತೆಗೆ ಹೊಂದಿರುವ ಆ ಕೆಸರು ಬೈಲಿನಲ್ಲಿ ಸಾಧಾರಣ ಮೂರು, ಮೂರೂವರೆ ಫರ್ಲಾಂಗ್ ಉದ್ದ ೨ ಫರ್ಲಾಂಗ ಅಗಲದ ವರೆಗೆ ಬೇರೆ ಬೇರೆ ರೀತಿಯಿಂದ ಶೋಭಿಸುವ ಕಮಲಗಳು (ಮನೆಗಳು) ಎದ್ದು ನಿಂತವು. ಕೆಲವು ಚಾಳು, ಕೆಲವು ಸ್ವಂತ ಇರಲು ಮನೆ, ಕೆಲವು ಮಠ ಕೆಲವು ಕಟ್ಟಿಗೆ ಅಡ್ಡೆಗಳು ಮತ್ತೆ ಹಲವು ಬಾಡಿಗೆ ಜನರಿಗಾಗಿಯೇ ನಿರ್ಮಿಸಿದ, ಕಕ್ಕಸು, ನಲ್ಲಿ, ಭಾವಿಗಳಿಲ್ಲದ ಮನೆಗಳು. ಹಲವು ಮನೆಗಳಂತೂ ಮಳೆಗಾಲದಲ್ಲಿ ಕೆಸರಿನ ಪಟ್ಟಿ ಹಾಕಿಕೊಂಡಿರುತ್ತವೆ. ಇಂತಹ ಒಂದು ಚಾಳಿನಲ್ಲಿದ್ದ ಒಂದು ಕೋಣೆಯೇ ನನ್ನ ವಾಸಸ್ಥಳ. ಮಳೆಗಾಲದಲ್ಲಿ ಇಲ್ಲಿಗೆ ಬರಬೇಕಾದರೆ ಮೂರು ನಾಲ್ಕು ದೊಡ್ಡ ದೊಡ್ಡ ಕೆಸರಿನ ಕೆರೆಗಳನ್ನು ದಾಟಿ ಬರಬೇಕು. ಆಗ ನೋಡಬೇಕು ಜನರ ತಿಂಡಾಟ. ಕಾಲನ್ನು ಬಲವಾಗಿ ಊರಿದಷ್ಟು ಮುಂದೆ ಜಾರಿ ಅಡ್ಡವೋ, ಉದ್ದವೋ, ಬೋರಲವೋ, ಅಂಗಾತವೋ ಅಂತೂ ಒಂದು ಭಂಗಿಯಲ್ಲಿ ಭೂದೇವಿಯನ್ನಾಶ್ರಯಿಸುವ ವಿಚಿತ್ರ ಸಂಭವಗಳಂತೂ ಇಲ್ಲಿ ಓಡಾಡುವ ಅನೇಕ ಜನರಿಗೆ ಬರುತ್ತದೆ. ಇಲ್ಲಿ ವಾಸಿಸುವವರಿಗಂತೂ ತೀರದು, ಇದೇ ದಾರಿಯಿಂದ ಬರಲೇಬೇಕು, ಅನಿವಾರ್ಯ. ಆದರೆ ಇಷ್ಟಿದ್ದರೂ ಸಹ ಬಳಸು ಹಾದಿಯಿಂದ ಬರಲು ಬೇಸತ್ತ ವಿಚಿತ್ರ ವ್ಯಕ್ತಿಗಳನೇಕರು ಇದೇ ದಾರಿಯಿಂದಲೇ ಬೀಳುತ್ತ ತಿಪ್ಪರಲಾಗ ಹಾಕುತ್ತ ಹಿಂದಿನ ಬೀದಿಗೆ ಹೋಗುತ್ತಾರೆ. ಅದರಲ್ಲಿ ಒಳ್ಳೇ ಒಳ್ಳೇ ಸೀರೆಯಿಂದ ಶೋಭಿಸುವ ಹೆಂಗಳೆಯರೂ ಸೂಟುಬೂಟು ಧರಿಸಿದ ಗಂಡಸರೂ ಉಂಟು. ನಮ್ಮ ಚಾಳಿನಲ್ಲಿದ್ದ ಹುಡುಗಿಯರಿಗಂತೂ ದಿನವೂ ಇಲ್ಲಿ ಎಷ್ಟೆಷ್ಟು ಜನ, ಯಾವ ಯಾವ ಡ್ರೆಸ್ಸನ್ನು ಧರಿಸಿ, ಯಾವ ಯಾವ ಭಂಗಿಯಲ್ಲಿ ನೃತ್ಯ ಮಾಡಿದರೆಂಬದನ್ನು ಲೆಕ್ಕ ಹಾಕುವದೇ ಒಂದು ಕೆಲಸವಾಗಿ ಬಿಟ್ಟಿದೆ. ಇಲ್ಲಿನ ಕೆಸರಿನ ಬಗ್ಗೆ ಒಳ್ಳೇ ಅರ್ಥವಾಗುವಂತಹ ಒಂದು ಕಲ್ಪನೆ ಕೊಡುವದೆಂದರೆ, ಒಮ್ಮೆ

ನಮ್ಮ ಚಾಳಿನ ಪಕ್ಕದ ಕಟ್ಟಡಕ್ಕಾಗಿ ಮಣ್ಣು ತಂದ. ಗಟ್ಟಿ ಮುಟ್ಟಾದ ಜೋಡೆತ್ತಿನ ಗಾಡಿಯ ಗಾಲಿಗಳು ಅರ್ಧದ ವರೆಗೂ ಎತ್ತುಗಳ ಅರ್ಧಕಾಲುಗಳೊಂದಿಗೆ ಹೂತು ಹೋಗಿ, ಅದನ್ನು ಪುನಃ ಮೇಲೆತ್ತಬೇಕಾದರೆ, ಮೊಣಕಾಲ ವರೆಗೆ ಕೆಸರಿನಲ್ಲಿ ನಿಂತು ಒಂದೇ ಸಮನೆ ಮುಂದೆ ದೂಡುವ ನಾಲ್ಕು ಜನ ಜಗಜಟ್ಟಿಗಳ ಬಲವು ಸಾಧಾರಣ ಅರ್ಧ ಗಂಟೆಯ ವರೆಗೆ ವ್ಯಯವಾಗಬೇಕಾಯ್ತು. ಆದರೂ ಸಹ, ನನ್ನ ಭೆಟ್ಟಿಗಾಗಿ ಬಂದ ಅನೇಕ ಜನರಿಗೆ ಈ ಕೆಸರಿನಿಂದ ತೊಂದರೆಯಾಗಿ ಅವರು ನನ್ನ ರೂಮಿನ ಬಗ್ಗೆ ಇಲ್ಲದ ಮಾತಾಡಿದರೆ ನನಗೆ ಬಲು ಸಿಟ್ಟು. ನನ್ನ ಕೋಣೆಯೆಂದರೆ ನನಗಷ್ಟು ಅಭಿಮಾನ. "ಕಮಲಗಳೆಲ್ಲವೂ ಕೆಸರಿನಲ್ಲೇ ಇರುವದಿಲ್ಲವೇ ?" ಎಂಬದೇ ನನ್ನ ಮರುಸವಾಲು ಅವರಿಗೆ. ನನ್ನ ಕೋಣೆಯ ಬಗ್ಗೆ ನನಗೇಕೆ ಅಷ್ಟು ಅಭಿಮಾನವೆನ್ನುವಿರಾ ? ಅದಕ್ಕೂ ಬಲವಾದ ಒಂದು ಕಾರಣವಿದೆ. ಮೊದಮೊದಲು ನನಗೂ ಈ ಕೋಣೆಯೆಂದರೆ ತಲೆ ಬೇಸರ ಬರುತ್ತಿತ್ತು. ಆದರೆ ಈಗೀಗ ಮುನಸಿಪಾಲ್ಟಿಯವರು ಈ ಸ್ಥಳವನ್ನು ಬೇಕಾದಾಗ ತಮ್ಮ ತಾಬೆಗೆ ತೆಗೆದುಕೊಂಡು ರಸ್ತೆ ಮಾಡಿಸಲೊಲ್ಲರೇಕೆ? ಆ ವರೆಗೂ ನಾನು ಈ ಕೊಳಚೆಯಿಂದ ಬಂದ ರೋಗಗಳಿಗೆ ತುತ್ತಾಗಲೊಲ್ಲೆನೇಕೆ ? ಆದರೆ ಈ ಕೋಣೆಯನ್ನು ಮಾತ್ರ ಬಿಡುವದು ನನ್ನಿಂದ ಸಾಧ್ಯವಿಲ್ಲವೆಂಬ ನಿರ್ಧಾರಕ್ಕೆ ಬಂದಿದ್ದೇನೆ.

ಇಲ್ಲಿ ನನಗೆ ಆಕರ್ಷಕವಾದ ವಸ್ತುವೆಂದರೆ ನಮ್ಮ ಕೋಣೆಯ ಎದುರಿನ ಚಾಳು. ನಮ್ಮ ಸುತ್ತುಮುತ್ತು ನಾಲ್ಕಾರು ಚಾಳುಗಳಿವೆ ನಿಜ. ಆದರೆ ಅಲ್ಲಿ ವಾಸಿಸುವ ಜನರ ಬಗ್ಗೆ ನನಗೇನೂ ಅಷ್ಟು ಕುತೂಹಲವೆನಿಸುವದಿಲ್ಲ ಏನೂ ಸಂಬಂಧವಿರದಿದ್ದರೂ ಸಹ ಕೆಲವೊಮ್ಮೆ ಮಾತ್ರ ಆ ಚಾಳಿನಲ್ಲಿರುವವರ ಬಗ್ಗೆಯೂ ಉಪಯೋಗಕ್ಕೆ ಬಾರದ ಮಾತುಗಳು ಚಕಮಕಿಯಂತೆ ಹಾರಿಹೋಗುತ್ತಿರುತ್ತವೆ. ಆದರೆ ರೂಮಿನ ಎದುರಿಗೇ ಇರುವ ಚಾಳಿನ ಬಗ್ಗೆ ಮಾತ್ರ ನನಗೊಬ್ಬಳಿಗೇ ಏಕೆ! ನನ್ನ ಭೆಟ್ಟಿಗಾಗಿ ಒಂದ್ಹತ್ತು ನಿಮಿಷಗಳು ಮಾತ್ರ ಬಂದ ಜನರಿಗೂ ಕುತೂಹಲ ಹುಟ್ಟುತ್ತದೆ.

ಈ ಚಾಳು ನಾನು ಈ ಕೋಣೆಗೆ ಬಂದನಂತರವೇ ತಲೆ ಎತ್ತಿತು. ಅದು ಮುಗಿ ಮುಗಿಯುವದರಲ್ಲೇ ಅಲ್ಲಿಗೆ ಬಾಡಿಗೆದಾರರೂ ಬಂದರು. ಮೊದಲು ಬಂದವರೆಂದರೆ ಅವರೊಬ್ಬ ಕುಸ್ತಿಗಡಿ. ಅವರಿರುವವರೆಗೂ ನಮ್ಮ ಚಾಳೇಕೆ ? ಅಜು ಬಾಜುವಿನ ಹತ್ತಾರು ಮನೆ, ಚಾಳುಗಳವರು ಹೆದರಿಕೆ ಇಲ್ಲದೆ, ಗುರ್ಖಾ ಜನರ ನೆರವಿಲ್ಲದೆ ರಾತ್ರಿ ಕಳೆಯುತ್ತಿದ್ದರು ಮುಂದೆ ನಾಲ್ಕಾರು ತಿಂಗಳಿಗೊಮ್ಮೆ ಮನೆ ಖಾಲಿ ಬೀ[…] ಭರ್ತಿಯಾಗುವದು ನಡದೇ ಇರುತ್ತಿತ್ತು. ಆಗೇನೂ[…] ಆ ಚಾಳಿನ ಬಗ್ಗೆ ಕುತೂಹಲವಿರುತ್ತಿರಲಿಲ್ಲ. ಇಷ್ಟೆ[…] ಶಾಲೆ, ಪೇಟೆಗಳ ಕೆಲಸ ತೀರಿಸಿ, ಕೋಣೆಗೆ ಬರುವದು[…] ಸ್ವಲ್ಪ ತಡವಾದರೂ ಸಹ ರೂಮಿನಿಂದ ಸ್ವಲ್ಪ ದೂ[…] ಒಂದು ಮನೆಯಿಂದ ಕಳ್ಳತನದಲ್ಲಿ ಸೆರೆ ಕುಡಿದು[…] ಬೀಳುವ ಜನರ ಕೂಗಾಟ ತೂಗಾಟ, ಬಡಬಡಿಕೆ[…] ಹೆದರಿಕೆ ಇಲ್ಲದೆ ಪಾರಾಗಿ ಬರುವದೆಂದರೂ ಸಹ[…] ತೊಂದರೆಯ ಸಂದರ್ಭವೇ ಎನಿಸುತ್ತಿತ್ತು. ಇಂತಹ[…] ಪ್ರಸಂಗಗಳಲ್ಲಿ ಎದುರು ಚಾಳಿನ ಜಟ್ಟಿಗಳೇ ನಮ್ಮ ರ[…] ಇದರಿಂದ ಮೊದಮೊದಲು ನನಗೆ ರೂಮು ಬದ[…] ಮನಸ್ಸಾಗುತ್ತಿತ್ತೇನೋ ನಿಜ, ಆದರೆ, ಈಗೀಗ.......

ಈಗ ಒಂದು, ಒಂದೂವರೆ ವರ್ಷಗಳ ಕೆಳಗೆ […] ದಿನ ನಾನು ಶಾಲೆಯಿಂದ ಆದೇ ಬಂದು ಕುಳಿತಿದ್ದೆ. […] ಮುಂದೆ ಏನೋ ಕಚ, ಕಚ ಚಿಲಿಪಿಲಿ ಎಂಬ ಅರ್ಥವ[…] ಭಾಷೆಯಲ್ಲಿ ತಾರ ಸ್ವರದಿಂದ ಮಾತಾಡುತ್ತಿರುವ ಸದ್ದು […] ಕುತೂಹಲದಿಂದ ಆ ಕಡೆ ನೋಡಿದೆ. ವಿಚಿತ್ರ ರೀ[…] ಉಡುಪು ತೊಡಪುಗಳಿಂದ ಶೋಭಿಸುವ ಏಳೆಂಟು ಜನ […] ಮಕ್ಕಳು ಹತ್ತು ಹದಿನೈದು ಚಿಳ್ಳೆಪಿಳ್ಳೆ ಮಕ್ಕಳೊ[…] ಅನೇಕ ಸಾಮಾನು ಸಲಕರಣೆಗಳೊಂದಿಗೆ ಬೀಗ […] ಚಾಳಿನ ಮನೆಗಳ ಬೀಗ ತೆಗೆದು ಒಳಹೊಗುತ್ತಿ[…] ಮೊದಲೇನೋ ಯಾರೋ ಬಾಡಿಗೆಗೆ ಬಂದಿರಬಹು[…] ಅಲಕ್ಷ್ಯ ಮಾಡಿ, ನನ್ನ ಕೆಲಸದ ಕಡೆ ಮನಹಾಕಿದೆ, […] ಸಂಜೆಯ ಮುಂದೆ ಗೂಡಿಗೆ ತೆರಳುವ ಅನೇಕ ವಿಧ ಪ[…] ಒಂದೇ ಕಡೆ ಗುಂಪಾಗಿ ವಿವಿಧ ಧ್ವನಿಗಳಲ್ಲಿ ಕೂಗ[…] ಕೇಳುವ ಅವರ ಕಿಲಕಿಲ ತಾರಸ್ವರಗಳು ನನ್ನ ಗಮನ[…] ಅವರ ಕಡೆಗೇ ಸೆಳೆಯಿತು. ಅಂದಿನಿಂದ ಇಂದಿನವ[…] ಅವರ ಪ್ರತಿಯೊಂದು ಚಲನವಲನ, ರೀತಿ, ನೀತಿ, ನಡೆ[…] ಕೆಲಸ ಕಾರ್ಯ, ಊಟ, ನೋಟ, ಉಡುಪುತೊಡಪುಗ[…] ಏನೋ ಒಂದು ವಿಚಿತ್ರತೆಯನ್ನು ಕಾಣುತ್ತೇನೆ.

ಇವರು ನಮ್ಮಂತೆ ಕನ್ನಡಿಗರಲ್ಲ ಇಷ್ಟೇ ಅಲ್ಲ, […] ಭಾರತದವರೂ ಅಲ್ಲ. ಕಚ್ಛ ಕಾಠೇವಾಡದ ಜನ[…] ಅಂತೆಯೇ ನಮಗವರ ರೀತಿನೀತಿಗಳು ವಿಚಿತ್ರವೆ[…] ಅಭ್ಯಾಸಮಾಡುವ ಜನರಿಗಿಂತ ಮೊದಲು ಇವರು ನ[…]ಳ ಘಂಟೆಗೇ ಗಂಡು ಹೆಣ್ಣುಗಳಿಬ್ಬರೂ ಎದ್ದು ಮನ[…]ಗಳಲ್ಲಿ ತೊಡಗುತ್ತಾರೆ. ಚಾಳಿನಲ್ಲಿ ನಲ್ಲಿ, ಭಾವಿ[…]

ರಿಂದ ಎದುರುಗಿನ ಮೂರು ಮನೆಗಳ ನೂತರವಿರುವ ಒಂದು ಗುಡಿಯ ಭಾವಿಗೆ ಹೋಗಿ ಗಂಡಸರು ನೀರು ಹೊರುತ್ತಾರೆ. ಅಷ್ಟರಲ್ಲೇ ಹೆಂಗಸರು ಅಡಿಗೆಗಿಟ್ಟು ಒಂದು ಕಿಚ್ಚಡಿ (ಬೇಳೆ, ಜೋಳ ಕೂಡಿ ಬೇಯಿಸಿದ್ದು) ಹಾಗೂ ಕುಟ್ಟಿದ ಚಟ್ನಿ, ಸಾಧ್ಯವಾದರೆ ಗೋದಿ ಚಪಾತಿ ಇಲ್ಲವೇ ಜೋಳದ ಭಕ್ಕರಿ ಮಾಡಿಡುತ್ತಾರೆ. ಸಾಧಾರಣ ಮುಂಜಾನೆ ೬-೬.೩೦ ಎಷ್ಟು ವದರಲ್ಲೇ ಗಂಡಸರೆಲ್ಲರೂ ಉಂಡು ಗಿರಣಿಯಲ್ಲಿ ದುಡಿಯಲು ಹೋಗಿಬಿಡುತ್ತಾರೆ. ಮುಂದೆ ಹೆಣ್ಣುಮಕ್ಕಳಿಗೆ ಒಳಗಿನ ಕೆಲಸವೇನೂ ಅಷ್ಟಾಗಿ ಇರದ್ದರಿಂದ ಬಟ್ಟೆ ಒಗೆಯುವ, ಪಾತ್ರೆ ತೊಳೆಯುವ ಕೆಲಸಗಳನ್ನು ಮುಗಿಸಿಕೊಳ್ಳುತ್ತಾರೆ.

ಇವರ ಹೆಂಗಸರ ಉಡುಪು ಕೇವಲ ಒಂದು ಗಗರಿ (ದಪ್ಪ ಬಟ್ಟೆಯ ಬಹಳ ನಿರಿಗೆ ಇದ್ದ ಪರಕರ) ಲಮಾಣಿಗಳಂತೆ ಒಂದು ಕುಪ್ಪುಸ, ಮೇಲೊಂದು ಓಡಣಿ. ಅದೂ ಮನಬಂದರೆ ಹಾಕುತ್ತಾರೆ, ಇಲ್ಲವಾದರೆ ಸಣ್ಣ ಹುಡುಗಿಯರಂತೆ ಪರಕರ ಕುಪ್ಪುಸಗಳ ಮೇಲೇ ಇರುತ್ತಾರೆ. ಪ್ರತಿ ದಿನವೂ ಒಂದೊಂದು ಮೋಳಿಗೆ ಬಟ್ಟೆ ಒಗೆದರೂ ಸಹ ಇವರು ತೊಟ್ಟ ಬಟ್ಟೆಗಳೆಂದೂ ಸ್ವಚ್ಛವಾಗಿದ್ದುದನ್ನು ನೋಡುವದು ಅಪರೂಪ. ಕಾರಣವೇನೋ? ಒಗೆಯಲು ಒಂದು ದೊಡ್ಡ ಮರದ ಹಲಿಗೆ. ಅದರ ಮೇಲೆ ಬಟ್ಟೆಗಳಿಗೆ ಸೋಪು ಹಚ್ಚಿ, ಬಕೆಟ್ಟಿನಲ್ಲಿ ನೀರಿಟ್ಟುಕೊಂಡು, ಮತ್ತೊಂದು ತುಂಡು ಕಟ್ಟಿಗೆಯಿಂದ ಸೋಪು ಹಚ್ಚಿದ ಬಟ್ಟೆಗೆ ಒಂದೇಸಮನೆ ಬಡಿಯುತ್ತಾರೆ. ನಡುನಡುವೆ ಬಕೆಟ್ಟಿನ ನೀರು ಬಟ್ಟೆಯ ಮೇಲೆ ಚುಮುಕಿಸುತ್ತಾ ಬಡಿಯುತ್ತಾರೆ. ನಂತರ ಹಿಂಡಿ, ರಸ್ತೆಯಲ್ಲೇ ಕಟ್ಟಿದ ಒಂದು ಹಗ್ಗದ ಮೇಲೆ ಒಣಗ ಹಾಕಿ ಬಿಡುತ್ತಾರೆ.

ಇವರ ಹೆಣ್ಣುಮಕ್ಕಳೂ, ಮಕ್ಕಳೂ ಸಹ ಕಷ್ಟ ಸಹಿಷ್ಣುಗಳೂ, ಸಾಹಸಿಗಳೂ ಬಲಶಾಲಿಗಳೂ ಇದ್ದದ್ದು ಕಂಡುತ್ತದೆ. ಇವರ ಈ ಗುಣಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳುವದೆಂದರೆ, ಇವರ ಹೆಂಗಸರು ನೀರು ತರುವ ಕೊಡಗಳನ್ನೂ ಮನೆಯಲ್ಲಿನ ಉಣಿಸು ತಿನಸುಗಳನ್ನೂ ಗಂಡಸರು ತಮ್ಮದೇ ಗಿರಣಿಗಳಲ್ಲಿ ಆಳುಮಕ್ಕಳ ಸಹಾಯವಿಲ್ಲದೆ ದುಡಿಯುವದನ್ನೂ ನೋಡಿದರೆ ಹಾಗೂ ಇವರು ತಮ್ಮ ಮಕ್ಕಳು ಆಟಪಾಟಗಳಲ್ಲಿ ತೊಡಗಿದಾಗ ಅವರು ಎಂತಹದೇ ಆಟವಾಡಲಿ—ತಮ್ಮ ಜೀವಕ್ಕೆ ಅಪಾಯವಾಗುವಂತಹ ಕಂದರಿ ಮುಳ್ಳು ತಂತಿಗಳನ್ನು ಹಿಡಿದು ಜೋತು ಜೀಕುವದು, ಮಾಳಿಗೆಯ ಕಟವಾಂಜನದ ಕಟ್ಟೆಯ ಮೇಲೆ ಕುದುರೆಯಂತೆ ಎರಡೂ ಬದಿಗೆ ಕಾಲುಗಳನ್ನು ಇಳಿಬಿಟ್ಟು ಕೂಡುವದು, ಅಲ್ಲಿಂದ ಬಗ್ಗಿ ನೋಡುವದು ಮುಂತಾದ್ದಲ್ಲದೆ, ಮಹಡಿಯ ಮೆಟ್ಟಲಿಗೆ ಹಾಕಿರುವ ಕಟಕಟೆಯ ಮೇಲ್ಭಾಗದಿಂದ ಜಾರುಬಂಡೆಯಿಂದ ಜಾರುವಂತೆ ಜಾರುವದು, ಮುಂತಾದವುಗಳನ್ನು ಮಾಡಿದಾಗ ಏನನ್ನೂ ಅನ್ನದೆ, ಆ ಬಗ್ಗೆ ಲಕ್ಷ್ಯವೇ ತೋರಿಸದೆ ಇರುವದು, ಸ್ವತಃ ಮನೆಯ ಗೃಹಿಣಿಯರೂ ಸಹ (ಮುದುಕಿ, ನಡುವಯಸ್ಸಿನವರು ಎಲ್ಲರೂ) ಕಟವಾಂಜನದ ಮೇಲೆ ಕುದುರೆಯಂತೆ ಕೂಡುವದನ್ನು ನೋಡಿದರೆ ಇವರೆಷ್ಟು ಧೈರ್ಯವಂತರು, ಕಷ್ಟಸಹಿಷ್ಣುಗಳೂ, ಸಾಹಸಿಗಳೂ, ಬಲಶಾಲಿಗಳೂ ಇರುವರೆಂಬದರ ಅರಿವಾಗುತ್ತದೆ. ಈ ಹೆಂಗಸರ ಪೈಕಿ ಒಬ್ಬ ಹೆಣ್ಣುಮಗಳು ಪ್ರಸವಿಸಿದ ಆನೇ ದಿನಕ್ಕೆ ದೊಡ್ಡ ಕೊಡಹೊತ್ತು ನೀರಿಗೆ ಬಂದಾಗ್ಗೆ ನನಗಾದ ಆಶ್ಚರ್ಯವು ಅಷ್ಟಿಷ್ಟಲ್ಲ. ಹೀಗೆಕೆಂದು ಕೇಳಿದಾಗ ನನ್ನ ಹರಕು ಮುರುಕು ಹಿಂದಿಯಲ್ಲೇ "ಕೆತನಾ ದಿನ ಬೈಠನಾ? ಹಮಾರೆ ಗಾಂವಮೇ ಪಾಂಚ ದಿನಕೋಭೀ ಹಂ ಬಾಹರ ಆತೀ ಹೈ. ಇದರ್‌ಕಾ ಲೋಗ "ವೈಸಾ ಮತ್‌ಕರೋ" ಐಸೇ ಮುಝೆ ಬೋಲೆ. ಇಸಲಿಯೇ ಆಠ ದಿನ್‌ತಕ್ ಘರಮೇ ಬೈಠೀಥಿ," ಎಂದು ಹೇಳಿದಳು. ಇವರೊಬ್ಬ ಹುಡುಗನು ಆಡುವಾಗ ಬಿದ್ದು, ಸಿಕ್ಕಾಪಟ್ಟೆ ಕಟ್ಟಿರುವ ಮನೆಯ ಮಹಡಿ ಮೆಟ್ಟಲಿನ ಒಂದು ಕಂಬಿಗೆ ಕಾಲು ಸಿಗಹಾಕಿಕೊಂಡು ತಲೆ ಕೆಳಕಾಗಿ ಜೋತಾಡುತ್ತಿದ್ದಾಗ, ಆ ಹುಡುಗನ ಕಪಾಳಕ್ಕೆ ಒಂದು ಮೊಳೆ ತಗಲಿ, ಒಂದು ಇಂಚಿನಷ್ಟು ಒಳ ಹೊಕ್ಕು ಗಾಯವಾಗಿ ರಕ್ತ ಬೊಂಬಾಳವಾದದ್ದನ್ನು ನನ್ನ ಕೋಣೆಯ ಕಿಟಕಿಯಿಂದ ನೋಡಿ ಓಡಿದೆ. ಮಗುವನ್ನು ಈ ಅಪಘಾತದಿಂದ ಬಿಡಿಸಿ, ಅವರ ತಾಯಿಯನ್ನು ಗಂಟಲು ಹರಿಯುವಂತೆ ಕೂಗಿದಾಗ, ಏನೂ ಆತಂಕವಿಲ್ಲದೆ, ದೊಡ್ಡ ಅಧ್ಯಾತ್ಮಿಯಂತೆ ಬಂದು ನಿರ್ವಿಕಾರಭಾವದಿಂದ ನಿಂತ ಆ ಮಗುವಿನ ತಾಯಿಯನ್ನು ನೋಡಿ ಅಚ್ಚರಿಗೊಂಡೆ. ನಾನೇ ಗಡಬಡಿಸಿ ಆಯಡಿನ್, ಹತ್ತಿ, ಪಟ್ಟಿ ತಂದು ಕಟ್ಟಿ, ದವಾಖಾನೆಗೆ ಒಯ್ಯಲು ತಾಯಿಗೆ ಸೂಚಿಸಿದೆ. ಮುದಿ ಅಜ್ಜಿಯು ಸಹ ಆ ಮಾತು ಈ ಮಾತುಗಳನ್ನಾಡುತ್ತಾ ಅರ್ಧಗಂಟೆ ವೇಳೆ ಕಳೆದ ನಂತರ ಮಗುವನ್ನು ಆಸ್ಪತ್ರೆಗೆ ನಿರ್ವಿಕಾರಭಾವದಿಂದಲೇ ಒಯ್ದಳು. ಮುಂದೆ ಆ ಮಗುವಿನ ಜೀವ ಗಟ್ಟಿ ಇತ್ತೆಂದು ಅದು ಬದುಕಿತು. ಆದರೂ ಗಾಯದ ಕಲೆ ಮಾತ್ರ ಖಾಯಂ ಆಗಿ ಉಳಿಯಿತು.

ಹೆಣಿಕೆ, ಗಗರಿ ಹೊಲಿಯುವದು, ಕಸೂತಿ ಮುಂತಾದ ಕಲೆಗಳಲ್ಲಿ ಈ ಹೆಣ್ಣುಮಕ್ಕಳು ಬಹಳ ಜಾಣರು! ಗಂಡಸರು ಬಹಳ ದಯಾಳುಗಳು. ಮನೆಗೆ ಬಂದ ಭಿಕ್ಷುಕರು ಹೆಣ್ಣು ಮಕ್ಕಳಿಂದ ನಿರಾಶರಾಗಿದ್ದರೂ ಸಹ ಗಂಡಸರು ಬಂದಾಗ ಬಂದರೆ ಆನಂದದಿಂದ ಹಿಂತಿರುಗುವರು. ಬಡಬಗ್ಗರ ಮೇಲೆ ಈ ಗಂಡಸರಿಗೆ ಬಹು ಕರುಣೆ. ತಾವಾದರೂ ಅರೆಹೊಟ್ಟೆ ತಿಂದು, ಬಡವರಿಗೆ ದಾನ ಮಾಡುವ ಬುದ್ಧಿ ಇವರದು.

ಊರಿಂದ ತಮ್ಮ ಬಳಗದವರು ಬಂದರೆಂದರೆ ತೀರಿತು. ತಂತಮ್ಮ ಜಾತಿಯವರು (ಗಂಡಿಗೆ ಗಂಡು, ಹೆಣ್ಣಿಗೆ ಹೆಣ್ಣು) ಅಪ್ಪಿಕೊಳ್ಳುವರು. ತಾರಸ್ವರದಲ್ಲಿ ಮಾತಿಗಾರಂಭಿಸುವರು.

ಓಹೋ! ನೋಡಿ ಅಲ್ಲಿ, ಶುರುವಾಯ್ತು ಗಲಿಬಿಲಿಯ ತಾರಸ್ವರ. ಹೌದು ಯಾರೋ ಅವರ ದೇಶದಿಂದ ಜನ ಬಂದಿದ್ದಾರೆಂದು ಕಾಣುತ್ತದೆ. ನೋಡಿ ನೀವೂ ಕೇಳಿ ಅವರ ಮಾತು. ಏನಾದರೂ ಅರ್ಥವಾಗುವದೇನೋ ನೋಡಿ ಕೇಳಿ ಹಾಂ—! ನಾನಿನ್ನು ಹೋಗುತ್ತೇನೆ. ಕೆಲಸವಿದೆ.

---

# ದೇಹವೇ ದೇವನ ದೇಗುಲ !

ಬಂದಾಶೆ ಕುದಿಕುದಿದು
ಕುದಿಸುತಿಹುದು ನಿನ್ನ
ಮತ್ತೆ ಕಾಡಿ ಕರಗಿಸಿ
ನೀರ ಮಾಡಿಹುದು ನಿನ್ನ !
"ಎಂದು ಕಾಣುವೆ ದೇವ
ನಿನ್ನನಾ ಕಂಣಿಂದ ?"
ಎಂಬಯಕೆ ಬಸರಿಹುದು
ನಿನ್ನಲ್ಲಿ ಎಂದಿಂದ ?
ಅಲೆಯುವೆಯಲ್ಲಿ ದೇಶದೇಶ
ದೇವ ದರುಷನಕಾಗಿ
ಮತ್ತೆಲ್ಲಿ ಇಲ್ಲವವ ನಿನ್ನ
ದೇಹ ಹೊರತಾಗಿ
ಅಲೆಯದಿರು ಅರಸದಿರು
ನಿನ್ನಾ ದೇವನನ್ನು
ಅರಿಯದಿರು-ಮರೆಯದಿರು
ನಿನ್ನಲ್ಲಿರುವವನನ್ನು
ದೇಗುಲಕೆ ಹೋಗಲೆಂದು
ಬಯಸುತಿರುವೆಯಾ ?
ದೇಹವೇ ದೇಗುಲವೆಂದು
ಅರಿಯಲಾರೆಯಾ ?

—ರಾಮದಾಸ, ಹುಬ್ಬಳ್ಳಿ.

---

# ಭೇರಿ

(ಐತಿಹಾಸಿಕ ನಾಟಕ) ಎರಡನೇ ಅಂಕು.

ಲೇ— ರತ್ನಾ ಶಾಸ್ತ್ರೀ.

**ನಿವೇದಕ** : ನರಗುಂದದ ಮಂಗಲ ಭೂಮಿಯ ಮೇಲೆ
ರಣವಾದ್ಯಗಳು ಮೊಳಗಿದುವು. ನರಗುಂದದ ದೊರೆ ಧರ್ಮ
ಸಂರಕ್ಷಣಾರ್ಥವಾಗಿ ಫಿರಂಗಿಗಳೊಡನೆ ಯುದ್ಧಕ್ಕೆ ನಿಂತಿದ್ದಾನೆ,
ಧರ್ಮಸಂರಕ್ಷಣೆಯ ಯುದ್ಧವಾದ್ದರಿಂದ ಹಿಂದು-ಮಾತ್ರರಿಗೆ
ಆಮಂತ್ರಣ ಕಳಿಸಿದ್ದಾನೆ. ಅನೇಕಾನೇಕ ದೇಸಾಯಿ-ಕುಲ
ಕರ್ಣಿಯವರಿಗೆ ಕಟ್ಪೋಲೆಗಳು ಕಳಿಸಲ್ಪಟ್ಟವೆ. ಬ್ರಿಟಿಷರು
ಚಾಣಾಕ್ಷತನದಿಂದ ನರಗುಂದದ ಕೋಟೆಯನ್ನು ಮುತ್ತಿ,
ಉತ್ತರ ಹಿಂದುಸ್ತಾನದ ರಾಜ್ಯಗಳಂತೆಯೇ ದಕ್ಷಿಣದ ಈ ರಾಜ್ಯ
ವನ್ನೂ—ನುಂಗಿ ನೀರು ಕುಡಿಯಲು—ಹವಣಿಸುತ್ತಿದ್ದಾರೆ. ತಹ
ಶೀಲದಾರ ಮುಂಡರಗಿ ಭೀಮರಾಯ, ಸುರಪುರದ ವೆಂಕಟಪ್ಪ
ನಾಯಕ, ರಂಗೋ ಬಾಪೂಜಿ ಇವರು ಈ ಸ್ವಾತಂತ್ರ್ಯ
ಯುದ್ಧದ ಮುಖಂಡತ್ವವನ್ನು ವಹಿಸಿದ್ದಾರೆ. ಸೈನ್ಯಸಂಗ್ರಹ,
ಹಣ ಸಂಗ್ರಹ ಮತ್ತು ಮದ್ದು-ಗುಂಡಿನ ಸಂಗ್ರಹ ರಭಸದಿಂದ
ನಡೆದಿರುವದು. ಹೀಗಿರುವಾಗ ಒಂದು ದಿನ—

— ಕೆರೆಮೇಲೆ —

(ರಸ್ತೆಯ ದೃಶ್ಯ—ಕೃಷ್ಣಾಜಿಪಂತ ಮತ್ತು ಬನ್ಯಾಬಾಪು)
ಪ್ರವೇಶಿಸುವರು)

**ಕೃಷ್ಣಾಜಿಪಂತ**—ಬನ್ಯಾಬಾಪು, ನರಗುಂದದ ದೊರೆಯ
ಬುದ್ಧಿ ಪಂಕಾದಂತೆ-ನನಗೆ ತೋರುವದು- ಚೋಟುದ್ದ
ಇದ್ದ ರಾಜ್ಯವನ್ನು ಬ್ರಿಟಿಷರ ಸ್ವಾಧೀನ ಪಡಿಸಿ, ಐಷಾರಾಮ
ದಲ್ಲಿ ದಿನಗಳನ್ನು ಕಳೆಯುವದನ್ನು ಬಿಟ್ಟು ಅದಕ್ಕಾಗಿ ಹೋರಾ
ಡಲು ಹೊರಟಿದ್ದಾನೆ, ಈ ಹುಚ್ಚು ದೊರೆ! ಝಾಂಸಿ,
ಸಾತಾರಾ ಮೊದಲಾದ ರಾಜ್ಯಗಳು ಬ್ರಿಟಿಷರ ದಬ್ಬಾಳಿಕೆಯ
ಹುಡದಲ್ಲಿ ಸಿಕ್ಕ....ಜಿಬ್ಬಿಜಿಬ್ಬಿಯಾಗಿ ಹೋದವು. ಝಾಂಸಿ
ಲಕ್ಷ್ಮೀಬಾಯಿ, ನಾನಾಸಾಹೇಬ ಪೇಶವೆ, ಬಹಾದೂರಶಹಾ,
ಕುಮರಸಿಂಹ ಇವರು ಬ್ರಿಟಿಷರ ಶಕ್ತಿಯ ಎದುರು ನಿಲ್ಲಲಾರದೆ
ರಾಜ್ಯವನ್ನು ಕಳೆದರು. ಬ್ರಿಟಿಷರ ತೋಫುಖಾನೆ ದೊಡ್ಡದು!
ಸೈನ್ಯ ದೊಡ್ಡದು ! ಯುದ್ಧ ಮಾಡುವ ರೀತಿಯು ಚಾಣಾಕ್ಷ
ತನದಿಂದ ಕೂಡಿದ್ದು ! ಇದಲ್ಲದೆ ವಿಲಾಯತಿಯಿಂದ ಹೇರಳ
ವಾದ ಸೈನ್ಯವನ್ನೂ ಅವರು ತರಿಸಿದ್ದಾರೆ. ಉತ್ತರ ಭಾರತ
ದಲ್ಲಿಯಂತೆ ದಕ್ಷಿಣ ಭಾರತದಲ್ಲಿಯೂ ದಂಗೆಎದ್ದೀತೆಂದು,
ರಾಜಕಾರಣ ಕುಶಲರಾದ ಬ್ರಿಟಿಷರು ಕೊಲ್ಹಾಪುರದಲ್ಲಿ
ಜೇಕಬ್ ಮತ್ತು ಮಾಲಕಮ್ ಈ ಸೈನ್ಯಾಧಿಕಾರಿಗಳನ್ನು
ತಂದಿಟ್ಟಿದ್ದಾರೆ. ಅವರ ಕೈಯಲ್ಲಿಯ ಅಧಿಕಾರಿಯೆಂದರೆ ಈ
ರೆಸಿಡೆಂಟ್ ಮೆನ್‌ಸನ್.... ! ಬನ್ಯಾಬಾಪು, ನಮ್ಮ ರಾಜ್ಯ
ವನ್ನು ಫಿರಂಗಿಗಳು ಸುತ್ತುಗಟ್ಟಿದ್ದಾರೆಂಬುದು ನರಗುಂದದ
ದೊರೆಗೆ ಹೇಗೆ ತಿಳಿಯುವದಿಲ್ಲವೋ ? ಈ ಹುಚ್ಚು ದೊರೆ
ಆಕಾಶಕ್ಕೆ ಪತಿಹಚ್ಚುವ ವ್ಯರ್ಥ ಪ್ರಯತ್ನವನ್ನು ಮಾಡುತ್ತಿ
ದ್ದಾನೆ.... ! ಕಾನಪೂರ, ಬರೇಲಿ ಈ ಊರುಗಳಲ್ಲಿ ಫಿರಂಗಿ
ಗಳು ತಮ್ಮ ಶಕ್ತಿ-ಸಾಹಸಗಳ ಪ್ರದರ್ಶನವನ್ನು ಚನ್ನಾಗಿಯೇ
ಮಾಡಿದ್ದಾರೆ! ಆದರೆ ನಮ್ಮ ಮೂರ್ಖದೊರೆ ಜಂಗು ತಿಂದ
ಖಡ್ಗಗಳ ಆಧಾರದ ಮೇಲಿಂದ, ಹಾಳು ಬಿದ್ದ ಕೋಟೆ
ಕೊತ್ತಳಗಳ ಭರವಸೆಯ ಮೇಲಿಂದ ಫಿರಂಗಿಗಳೊಡನೆ
ಯುದ್ಧಕ್ಕೆ ಬನ್ನಿರೆಂದು ದೇಸಾಯಿ-ಕುಲಕರ್ಣಿ ಇವರಿಗೆ
ಕಟ್ಪೋಲೆಗಳನ್ನು ಕಳಿಸಿದ್ದಾನೆ. ರಣವಾದ್ಯಗಳು ಮೊಳ
ಗಿದವು ! ಮಾರಿಗೆ ಔತಣ....ಕಳಿಸಲ್ಪಟ್ಟಿದೆ....! ಫಿರಂಗಿಗಳೊ
ಡನೆ ಯುದ್ಧ ಮಾಡುವದೆಂದರೆ ಈ ದೊರೆ ಏನೆಂದು ಭಾವಿ
ಸಿರುವನೋ ಯಾರಿಗೆ ಗೊತ್ತು ? ಅಮಾತ್ಯರು ಮುಂದಾಗಿ
ಮಾರಿಗೆ ಔತಣವನ್ನು ಕಳಿಸಿದ್ದಾರೆ! ಅಬ್ಬಾ....! ಎಷ್ಟೊಂದು
ಅಹಂಭಾವ ಈ ನರಗುಂದದ ಅಮಾತ್ಯನಿಗೆ! ಅಮಾತ್ಯರ
ಅಹಂಭಾವವೇ ನರಗುಂದದ ರಾಜ್ಯವನ್ನು ಹಾಳುಮಾಡುತ್ತಿರು
ವದೆಂಬುದು—ಮಹಾರಾಜರಿಗೆ ತಿಳಿಯದು ! ತಿಳಿಯುವದೂ
ಕಠಿಣ! ಯಾಕಂದರೆ ಈ ಮಹತ್ವಾಕಾಂಕ್ಷಿ ಅಮಾತ್ಯ,
ನರಗುಂದದ ದೊರೆಯನ್ನು ತನ್ನ ಕೈಗೊಂಬೆಯನ್ನಾಗಿ ಮಾಡಿ

ಕೊಂಡಿದ್ದಾನೆ. ಅಮಾತ್ಯ ಕುಣಿಸಿದಂತೆ—ಮರ್ಕಟಪ್ರಾಯವಾಗಿ ಈ ನರಗುಂದದ ದೊರೆ ಕುಣಿದಾಡುತ್ತಾನೆ. ಇತ್ತೀಚೆಗಂತೂ ಅಮಾತ್ಯ ತಾನೆಂದರ ಪ್ರತಿದೊರೆಯೆಂದೇ ಭಾವಿಸಿದ್ದಾನೆ.

ಬನ್ನ್ಯಾಬಾಪು— ಅಹುದು ಕೃಷ್ಣಾಜಿಪಂತರೆ, ಅಮಾತ್ಯರ ಸೊಕ್ಕು ಅಹಂಭಾವಗಳೇ ನರಗುಂದದ ಸಿಂಹಾಸನವನ್ನು ಈ ಪರಿಸ್ಥಿತಿಗೆ ತಂದು ಮುಟ್ಟಿಸಿರುವವು. ಅಮಾತ್ಯರು ಹೇಳಿದಂತೆ ನಮ್ಮ ಮಹಾರಾಜರು ಕೇಳುತ್ತಾರೆ.

ಕೃಷ್ಣಾಜಿಪಂತ— ಅದ್ದರಿಂದಲೆ ಮಹಾರಾಜರು ಒಳ್ಳೆಯವರಾರು ? ಕೆಟ್ಟವರಾರು ? ಎಂಬುದನ್ನು ಅರಿತುಕೊಳ್ಳುವದಕ್ಕೆ ಅಸಮರ್ಥರಾಗಿ ಹೋಗಿದ್ದಾರೆ. ಅಮಾತ್ಯರ ಈ ಮನೋವೃತ್ತಿಯು ದಿನದಿನಕ್ಕೆ ಬೆಳೆದುಕೊಂಡು ಬರುತ್ತಿರುವದು.

ಬನ್ನ್ಯಾಬಾಪು— ಈ ಮನೋಭೂಮಿಕೆಯ ಮೂಲಕ ಅಮಾತ್ಯರು ರಾಜಗದ್ದುಗೆಯ ಎದುರಿನಲ್ಲಿ ರಾಜನಿಷ್ಠರ ಅಪಮಾನವನ್ನು ತಮ್ಮಿಷ್ಟದಂತೆ ಮಾಡುತ್ತಿದ್ದಾರೆ. ರಾಜ್ಯದ ಅಧಿಕಾರದ ಸೂತ್ರಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ಮನಬಂದಂತೆ ರಾಜಾಜ್ಞೆಗಳನ್ನು ಹೊರಡಿಸುತ್ತಿದ್ದಾರೆ. ಪಹರೆಯವರಂತೂ ಕಣ್ಣಿನಲ್ಲಿ ಎಣ್ಣೆ ಹಾಕಿಕೊಂಡು ಪಹರೆಮಾಡುತ್ತಿದ್ದಾರೆ. ಅದ್ದರಿಂದ ನಮ್ಮ ಕಾರ್ಯಕ್ಕೆ ತುಂಬ ವಿಘ್ನ ಬಂದೊದಗಿರುವದು ! ಕಣ್ಣುಚ್ಚಿಕೊಂಡು ಒಂದೊಂದು ಹೆಜ್ಜೆಯನ್ನು ಮುಂದಿಡುವ ಪ್ರಸಂಗವನ್ನು ಎಮ್ಮಮೇಲೆ ನರಗುಂದದ ಅಮಾತ್ಯರು ತಂದೊಡ್ಡಿದ್ದಾರೆ !

ಕೃಷ್ಣಾಜಿಪಂತ— ಇದಲ್ಲದೆ ದತ್ತಕ ಪ್ರಕರಣದಲ್ಲಿ—ಅಮಾತ್ಯರೇಪ್ರಮುಖ ಪಾತ್ರವಹಿಸಿ—ರಾಜ್ಯದ ಹೀನಾವಸ್ಥೆಗೆ ಕಾರಣೀಭೂತರಾಗಿದ್ದಾರೆ. ರಾಜಕಾರಣಪಟುಗಳಾದ ಮಹಾರಾಜರು ಇದನ್ನು ತಿಳಿದುಕೊಳ್ಳುವದಕ್ಕೆ ಅಸಮರ್ಥರು. ಅದ್ದರಿಂದಲೆ ಅಮಾತ್ಯರು ಮೊನ್ನಿನ ಖಾಸಗೀ ಸಭೆಯಲ್ಲಿ ತಮ್ಮದನ್ನೇ ಕೊನೆಯವರೆಗೆ ನಡಿಸಿದರು

ಬನ್ನ್ಯಾಬಾಪು— ಅಧಿಕಾರ ಸೂತ್ರಗಳು ಅವರ ಕೈಯಲ್ಲಿವೆ ಆಡಿದಂತೆ ಮಾಡಿತೋರಿಸುವದಕ್ಕೆ ಸೈನ್ಯಬಲದ ಬೆಂಬಲವಿದೆ ! ಅಂದ ಮೇಲೆ—ಅವರೇಕೆ ಹಾಗೆ ಮಾಡಬಾರದು ? ಅದ್ದರಿಂದ ಖಾಸಗೀ ಸಭೆಯಲ್ಲಿ ನಿಮ್ಮ ಮಗನ ವಿಷಯದಲ್ಲಿ ಬಾಯಿಗೆ ಬಂದಂತೆ ಆಡಿಕೊಂಡರು.

ಕೃಷ್ಣಾಜಿಪಂತ— ಬನ್ನ್ಯಾಬಾಪು, ಅದರ ನೆನಪಾಯಿತೆಂದರೆ ನನ್ನ ಮೈಯುರಿಯುತ್ತದೆ. ಹೊಟ್ಟೆಯಲ್ಲಿಯ ಕಿಚ್ಚನ್ನು ತೀರಿಸಿಕೊಳ್ಳಲು ರಟ್ಟೆಯಲ್ಲಿ ಬಲವಿರದ್ದರಿಂದಸುಮ್ಮನೆ ಕುಳಿತುಕೊಂಡಿದ್ದೇನೆ. ಅಧಿಕಾರದಿಂದ ಮಧಾಂಧರಾದ ಅಮಾತ್ಯರು ನರಗುಂದದ ಸಿಂಹಾಸನದಮೇಲೆ ಯಾರನ್ನು ಕೂಡ್ರಿಸುವ ವಿಚಾರವನ್ನು ನಡಿಸಿದ್ದಾರೋ ತಿಳಿಯದು ! ಸಿಂಹಾಸದಮೇಲೆ ಕುಳಿತುಕೊಳ್ಳುವದಕ್ಕೆ ನನ್ನ ಮಗ ಅಸಮರ್ಥನಂತೆ ! ಹೇಡಿಯಂತೆ ! ಅವನಿಗೆ ರಾಜಕಾರಣ ಗೊತ್ತಿಲ್ಲವಂತೆ ! ಅದ್ದರಿಂದ ನರಗುಂದದ ದೊರೆ ನನ್ನ ಮಗನನ್ನು ದತ್ತಕ ತೆಗೆದುಕೊಳ್ಳುವದಕ್ಕೆ ಸಿದ್ಧನಿಲ್ಲವಂತೆ ! ಬನ್ನ್ಯಾಬಾಪು, ಇದೇನು ಕಡಿಮೆ ಅಪಮಾನವೆ ? ಈ ಅಪಮಾನವು ಲಾವಾರಸದಂತೆ ನನ್ನ ಹೊಟ್ಟೆಯಲ್ಲಿ ಕುದಿಯುತ್ತಿರುವದು. ಯಾವ ಗಳಿಗೆಯಲ್ಲಿ ಇದರ ಸ್ಫೋಟಾದೀತು ಇದು ತಿಳಿಯದು ! ಅಪಮಾನ ! ಅಪಮಾನದ ಸೇಡನ್ನು ತೀರಿಸಿಕೊಳ್ಳದ ಹೊರತು ನನ್ನ ಜೀವಕ್ಕೆ ಶಾಂತಿಯಿಲ್ಲ !

ಬನ್ನ್ಯಾಬಾಪು— ಬರಿಗೈಯಿಂದ ಮೊಳಹಾಕುವ ಮೂಢರಂತೆ ನಿಮ್ಮ ವಿಚಾರಗಳು.

ಕೃಷ್ಣಾಜಿಪಂತ—(ಕೋಪದಿಂದ) ಬನ್ನ್ಯಾಬಾಪು, ನರಗುಂದದ ಸಿಂಹಾಸನದ ಮೇಲೆ ನನ್ನ ಮಗ ವಿರಾಜಮಾನನಾದುದನ್ನು ಈ ಕಣ್ಣಿನಿಂದ ನೋಡುತ್ತೇನೆ. ನರಗುಂದದ ದೊರೆಗೆ, ರಾಮರಾಯನಿಗೆ ನೋಡಲಿಕ್ಕೆ ಹಚ್ಚುತ್ತೇನೆ....! ಮುಯ್ಯಕ್ಕೆ ಮುಯ್ಯ ! ಸೇಡಿಗೆ ಸೇಡು ! ಸೇಡು ತೀರಿಸಿಕೊಳ್ಳದ ಹೊರತು ಅನ್ಯಗತ್ಯಂತರವಿಲ್ಲ. ಇದಕ್ಕಾಗಿ ಬೇಕಾದಂತಹ ಬೆಲೆಯನ್ನು ಕೊಡಲು ನಾನು ಸಿದ್ಧನಿದ್ದೇನೆ.

ಬನ್ನ್ಯಾಬಾಪು— ಕೃಷ್ಣಾಜಿಪಂತ, ನರಗುಂದದ ದೊರೆಗಳ ವಿರುದ್ಧ ........

ಕೃಷ್ಣಾಜಿಪಂತ— ಯುಕ್ತಿಯಿಂದಲೆ ನಿಲ್ಲಬೇಕಾಗಿರುವದು. ಮಾಡುವದೆಲ್ಲವು ತೆರೆಯ ಮರೆಯಲ್ಲಿ—! ಧರ್ಮಾಂಧನಾದ ಮತ್ತು ರಾಜ್ಯಾಂಧನಾದ ದೊರೆ ಮೆನ್‌ಸನ್ನನ ಸೈನ್ಯಬಲವನ್ನು ನಮ್ಮ ಕಾರ್ಯಕ್ಕೆ ಉಪಯೋಗಿಸಿಕೊಳ್ಳೋಣ.

ಬನ್ನ್ಯಾಬಾಪು— ಅದು ಹೇಗೆ ?

ಕೃಷ್ಣಾಜಿಪಂತ—ರಾಜಕಾರಣವೆಂದರೆ ಹೀಗೆಯೇ ಇರುವದು. ನಿನ್ನೆ ಮೆನ್‌ಸನ್ನ ಸಾಹೇಬನಿಗೆ ಭೆಟ್ಟಿಯಾಗಿ ಎಲ್ಲ ವ್ಯವಸ್ಥೆಯನ್ನು ಮಾಡಿದ್ದೇನೆ. ನಮ್ಮ ಮಾತಿಗೆ ಅವರು ಹಿಂದು ಮುಂದಿನ ವಿಚಾರವನ್ನು ಮಾಡದೆ ಒಪ್ಪಿಕೊಂಡಿದ್ದಾರೆ.

ಬನ್ನ್ಯಾಬಾಪು— ಅಂದ ಮೇಲೆ ನಮ್ಮ ಕಾರ್ಯವಾದಂತಾಯಿತು.

ಕೃಷ್ಣಾಜಿಪಂತ— ಈಗ ಕಾರ್ಯಾರಂಭವಾಗಿರುವದು

ಾರ್ಯ ಸಾಧನೆಯು ದೃಷ್ಟಿಯಿಂದ ಮೆನ್‍ಸನ್ ದೊರೆಗೆ ಮ್ಮ ರಾಜ್ಯದ ಭಾಂಡಾರದ ವಿಷಯದಲ್ಲಿ, ಸೈನ್ಯ ಬಲದ ಷಯದಲ್ಲಿ, ಮದ್ದು-ಗುಂಡಿನ ಸಂಗ್ರಹದ ವಿಷಯದಲ್ಲಿ ಇದ ದೆ ಪ್ರತಿನಿತ್ಯ ನಮ್ಮ ಪತ್ರವ್ಯವಹಾರವು ಸರಿಯಾಗಿ ನಡೆಯು ಂದು ಒಂದೆರಡು ಕೋಟೆಯು ಆಾಂಕಟ್ಟಿನ ಸ್ಥಳಗಳ ಗ್ಗೆಯೂ ಹೇಳಿದ್ದೇನೆ ಬನ್ಯಾಬಾಪು, ಉಬ್ಬಿದ-ಕೊಬ್ಬಿದ ರಗುಂದದ ದೊರೆಯು ಸೊಕ್ಕನ್ನು ಮುರಿಯಲು ಈ ರೆಸಿಡೆಂಟ ೆನ್‍ಸನ್‍ನೇ ಯೋಗ್ಯನೆಂದು ಆತನ ಆಯ್ಕೆಯನ್ನು ನಾನು ಾಡಿದ್ದೇನೆ. ಕೊಬ್ಬಿದ ಎರಡು ಕೋಣಗಳು ಸಮರಾಂಗ ದ ಬೈಲಲ್ಲಿ ವೈಯಲ್ಲಿಯ ಹಸಿಯು ಆರುವವರೆಗೆ ಕಾದಾ ಲಿ !

ಬನ್ಯಾಬಾಪು— ಕಾದಾಡುವವರು ಕಾದಾಡಲಿ ! ಆದರೆ ಸಿಡೆಂಟ್ ಮೆನ್‍ಸನ್ ನಿಮ್ಮ ಮಗನನ್ನೇ ನರಗುಂದದ ಂಹಾಸನದ ಮೇಲೆ ಕೂಡ್ರಿಸುವೆನೆಂದು ಹೇಳಿದ್ದಾನಲ್ಲವೇ ?

ಕೃಷ್ಣಾಜಿಪಂತ— ಹೌದು. ಹೇಳಿರುವದಷ್ಟೇ ಅಲ್ಲದೆ ಾಗಿ ವಚನವನ್ನು ಕೊಟ್ಟಿದ್ದಾನೆ.

ಬನ್ಯಾಬಾಪು— ಕೃಷ್ಣಾಜಿಪಂತ, ವಚನಗಳ ಬೆಲೆ ಾರತೀಯರಿಗೆ ! ವಚನದ ಬೆಲೆಯನ್ನು ಈ ಫಿರಂಗಿಗಳು ರಿಯರು! ಅರಿತವರೇ ಆಗಿದ್ದರೆ—ನರಗುಂದದ ಮಹಾರಾಜ ಗೆ ಕೊಟ್ಟ ವಚನವನ್ನು ಈ ಮೆನ್‍ಸನ್ ಎಂದಿಗೂ ಮುರಿ ಯುತ್ತಿದ್ದಿಲ್ಲ.

ಕೃಷ್ಣಾಜಿಪಂತ— ಇದಕ್ಕೇ ರಾಜಕಾರಣವೆಂದು ಅನ್ನು ತ್ತಾರೆ ಬನ್ಯಾಬಾಪು ! ರಾಜಕಾರಣದಲ್ಲಿ ಅಡಿಗಡಿಗೆ ಹೀಗೆ ಾಡಬೇಕಾಗುವದು.

ಬನ್ಯಾಬಾಪು— ಆದಾಗ್ಯೂ ಬಾಯಿಂದಾಡಿದ ಮಾತು ಳು ಕಾಗದ-ಪತ್ರದಲ್ಲಿ — ಕಾಣಿಸಿಕೊಳ್ಳುವದುಚಿತವೆಂದು ನಗೆ ಅನಿಸುವದು. ಈ ಕೆಂಪು ಜನರ ಮೇಲೆ ಎಳ್ಳಷ್ಟೂ ಶ್ವಾಸವಿಡುವದು ಒಳಿತಲ್ಲ !

ಕೃಷ್ಣಾಜಿಪಂತ— ಮೆನ್‍ಸನ್ ಸಾಹೇಬರೆಂದರೆ ನೀವು ಆದಿರುವಿರಾದರೂ ಯಾರೆಂದು ? ಇವರು ನಮ್ಮ ನರಗುಂದದ ೊರೆಗಳಂತಲ್ಲ—! ಅಂಥವರ ವಿಷಯದಲ್ಲಿ ಅವಿಶ್ವಾಸವನ್ನು ೋರಿಸುವದು ಒಳಿತಲ್ಲ. ಅವರು ಎಷ್ಟಾದರೂ ಫಿರಂಗಿಗ ದ್ದಾರೆ !

ಬನ್ಯಾಬಾಪು— ಆದ್ದರಿಂದಲೆ ಅವರ ಮೇಲೆ ವಿಶ್ವಾಸ ಡಬೇಡಿರೆಂದು ನಾನು ಹೇಳುವದು. ಫಿರಂಗಿಗಳು ವಿಶ್ವಾಸ ಡಲು ಅನರ್ಹರು ! ಅಪಾತ್ರರು ! ಭಾರತೀಯರಂತೆ— ಫಿರಂಗಿಗಳಲ್ಲ ! ಮೆನ್‍ಸನ್ ದೊರೆ ಬಾಯಿಂದಾಡುವದನ್ನು ಕಾಗದ ಪತ್ರದಲ್ಲಿ ಮಾಡಿಕೊಡಲಿ ! ಆ ಮೇಲೆ ನರಗುಂದದ ಕಿಲ್ಲೆಯನ್ನು ಆತನ ಸ್ವಾಧೀನಕ್ಕೆ ಕೊಡೋಣ ! ಅಲ್ಲಿಯವರೆಗೆ ನರಗುಂದದ ವಿಷಯದಲ್ಲಿ ಒಂದು ಶಬ್ದ ಕೂಡ ಆತನಿಗೆ ತಿಳಿದು ಪ್ರಯೋಜನವಿಲ್ಲ. ಈ ಕಾರ್ಯದಲ್ಲಿ ನಾವು ಸೋತರೆ ಎರಡೂ ಕಳೆದುಕೊಂಡು ಹುಚ್ಚರಾಗುವ ಪ್ರಸಂಗ ಬಂದೀತು ಕೊನೆಗೆ! ಕೃಷ್ಣಾಜಿಪಂತ.... ಈ ಫಿರಂಗಿಗಳ ಮೇಲೆ ನಾನೆಂದಿಗೂ ವಿಶ್ವಾಸ ವಿಡಲಾರೆ ! ಅವರು ಎಷ್ಟಾದರೂ ಫಿರಂಗಿಗಳು !

ಕೃಷ್ಣಾಜಿಪಂತ— ಬನ್ಯಾಬಾಪು, ನೀವೂ ನರಗುಂದದ ದೊರೆಯಂತೆ ಮಾತಾಡುವದಕ್ಕೆ ಆರಂಭಿಸಿದಿರಲ್ಲ—!

ಬನ್ಯಾಬಾಪು— ಎಷ್ಟಾದರೂ ಅವರ ಅನ್ನವನ್ನು ನಾನು ತಿಂದಿದ್ದೇನೆ ! ಅಂದ ಮೇಲೆ....

ಕೃಷ್ಣಾಜಿಪಂತ— ಹುಚ್ಚರಂತೆ ಮಾತಾಡಬೇಡಿರಿ. ಬನ್ಯಾಬಾಪು ! ಅನ್ನವನ್ನು ತಿಂದರೇನಾಯಿತು ? ಅವರಂತೆ ಮಾತಾಡಬೇಕೆಂದು ಎಲ್ಲಿ ಹೇಳಿರುವದು ? ನನ್ನ ಮಗ ನರಗುಂದದ ಸಿಂಹಾಸನದ ಮೇಲೆ ವಿರಾಜಮಾನನಾಗಲಿ. ಸಹಸ್ರಸಹಸ್ರ ಭೋಜನ ಮಾಡಿಸುವೆ ! ಆನೆಯ ಮೇಲಿಂದ ಸಕ್ಕರೆ ಹಂಚುವೆ ! ದೀಪೋತ್ಸವ ನಡಿಸುವೆ ! ಬನ್ಯಾಬಾಪು, ಇವೆಲ್ಲವು ದೊರೆ ಮೆನ್‍ಸನ್‍ನ ಸಹಾಯದಿಂದನಡೆಯಬೇಕು. ಅವನೆಂದರೆ ನಮ್ಮ ಪಾಲಿಗೆ ದೇವರು.

ಬನ್ಯಾಬಾಪು—ದೇವರೋ, ದಾನವರೋ ಅದರದಿನ್ನೂ ನಿರ್ಧಾರವಾಗಬೇಕಾಗಿರುವದು. ಕೃಷ್ಣಾಜಿಪಂತ, ಸಾರಾಂಶ ರೂಪದಲ್ಲಿ ಹೇಳುವದಾದರೆ—ಬುರುಡೆಯನ್ನು ನಂಬಿ ಹೊಳೆ ಯಲ್ಲಿ ಬಿದ್ದವರಂತೆ ನಮ್ಮ ಪರಿಸ್ಥಿತಿಯಾಗಬಾರದು....!

ಕೃಷ್ಣಾಜಿಪಂತ— ಅಷ್ಟೊಂದು ಧೂರ್ತತನವಿಲ್ಲದೆಯೇ ಈ ಕಾರ್ಯಕ್ಕೆ ಕೈಹಾಕಿರುವೆನೆಂದು ನಿಮ್ಮ ಅಭಿಪ್ರಾಯವೆ ?

ಬನ್ಯಾಬಾಪು— ಹಾಗೆಂದು ಸ್ಪಷ್ಟವಾಗಿ ಹೇಳಲಿಕ್ಕಾಗ ದಿದ್ದರೂ ಫಿರಂಗಿಗಳ ಜೊತೆಯಲ್ಲಿ ರಾಜಕಾರಣವಾಡುವದಿದೆ ಯೆಂಬುದನ್ನು ಮರೆಯಬೇಡಿರಿ ! ಅವರಷ್ಟು ಮೋಸತನ, ಕುಹಕತನ ಭಾರತೀಯರಿಗೆ ಬರದು !

ಕೃಷ್ಣಾಜಿಪಂತ— ರಾಜಕಾರಣದಲ್ಲಿಯ ನನ್ನ ಬುದ್ಧಿಯ ಚಪಲತೆಯನ್ನು ಅರಿಯದ ಮಹಾರಾಜರು ನನ್ನನ್ನು ಮದ್ದಿ ನುಗ್ರಾಣದ ಅಧಿಕಾರಿಯನ್ನಾಗಿ ಮಾಡಿದರು. ಇಲ್ಲದಿದ್ದರೆ ನರಗುಂದದ ಅಮಾತ್ಯನನ್ನಾಗಿ ಮಾಡಿಕೊಳ್ಳುತ್ತಿದ್ದರು. ಬುದ್ಧಿಯ ಚಮಕನ್ನು ತೋರಿಸುವ ಕಾಲ ತಾನಾಗಿಯೇ ಪ್ರಾಪ್ತವಾಗಿರುವದು. ಈ ಸುಸಂಧಿಯನ್ನು ಕಳೆದುಪ್ರಯೋ ಜನವಿಲ್ಲ.

ಬನ್ಯಾಬಾಪು— ರಾಮರಾಯರ ಉಸಿರಿರುವವರೆಗೆ—ನರಗುಂದದ ಅಮಾತ್ಯಪದ ಅವರಿಗೆ ಮೀಸಲು! ಅದು ಅವರ ಪಾಲಿಗೆ ಮೇರು ಪರ್ವತದಷ್ಟು ಉಚ್ಚವಾಗಿರುವದು.

ಕೃಷ್ಣಾಜಿಪಂತ— ಯಾರು ಕೊಟ್ಟಿದ್ದಾರೆ ಅವರಿಗೆ ಈ ಅಮಾತ್ಯಪದವನ್ನು ?

ಬನ್ಯಾಬಾಪು— ಯಾರೆಂದರೆ ಮಹಾರಾಜರು.

ಕೃಷ್ಣಾಜಿಪಂತ— ಅಮಾತ್ಯ ಪದವು ಒಬ್ಬರಿಗೇ ಮೀಸಲಾದ ಸೊತ್ತಲ್ಲ! ಅದು ನಾಡಿನ ಸೊತ್ತು. ಅದನ್ನು ಯೋಗ್ಯರಾದವರು, ಸಮರ್ಥರಾದವರು ಪಡೆಯಬಹುದು. ಈ ನರಗುಂದದ ಸಿಂಹಾಸನವನ್ನೇ ಬುಡಮೇಲು—ಮಾಡದಹೊರತು ನನ್ನ ಮನಸ್ಸಿಗೆ ಶಾಂತಿಯಿಲ್ಲ.

ಬನ್ಯಾಬಾಪು— ಆದಾದಮೇಲೂ ನಿಮ್ಮ ಮನಸ್ಸಿಗೆ ಶಾಂತಿ ಉಳಿಯದು ಕೃಷ್ಣಾಜಿಪಂತ !

ಕೃಷ್ಣಾಜಿಪಂತ— ಬನ್ಯಾಬಾಪು, ನನ್ನಂತರಂಗದಲ್ಲಿ ಪ್ರಜ್ವಲಿತವಾದ ಸೇಡಿನ ಕಿಡಿಯು ನರಗುಂದದ ಸಿಂಹಾಸನವನ್ನು ಸುಟ್ಟು ಬೂದಿಮಾಡದೆ ಬಿಡಲಿಕ್ಕಿಲ್ಲ.

ಬನ್ಯಾಬಾಪು— ಸೇಡು, ಮುಯ್ಯಿ ಇವುಗಳ ಬೆನ್ನು ಹತ್ತಿದ ಮಾನವನು ಈ ಪ್ರಪಂಚದಲ್ಲಿ ಕುರುಡನಂತೆ ವರ್ತಿಸುತ್ತಾನೆ. ಇವು ಆತನನ್ನು ಅಂಧನನ್ನಾಗಿ ಮಾಡುತ್ತವೆ. ಆಗ ತಾನು ಏನು ಮಾಡುತ್ತೇನೆಂಬ ಅರಿವು ಸಹ ಆತನಿಗೆ ಉಳಿಯುವದಿಲ್ಲ. ಕೃಷ್ಣಾಜಿಪಂತ, ಸೇಡು ತೀರಿಸಿಕೊಳ್ಳಲು ಹೊರಟ ನೀವು, ನಿಮ್ಮ ಮಗ ವಿರಾಜಮಾನನಾಗಲಿರುವ ನರಗುಂದದ ಸಿಂಹಾಸನವನ್ನು ಸಹ ಸುಟ್ಟು ಹಾಳುಮಾಡುವಿರಿ.

ಕೃಷ್ಣಾಜಿಪಂತ— ಅಹುದು....ಬನ್ಯಾಬಾಪು ಅಹುದು! ಆಷ್ಟೊಂದು ಕೋಪದ ಉದ್ವೇಗ ಬರುವದು ನನಗೆ ! ಅದಕ್ಕೆ ನಾನಾದರೂ ಏನು ಮಾಡಲಿ ? ಆ ಅಪಮಾನದಿಂದ ನನ್ನ ಹೊಟ್ಟೆ ಉರಿದೆದ್ದಿದೆ ! ಅಪಮಾನದ ಕಲ್ಪನೆ ನಿಮಗಿರದ್ದರಿಂದ ನೀವು ಹಾಗೆ ಭಾವಿಸುವದು ಸಹಜ ! ನನ್ನ ಪ್ರತಿಯೊಂದು ಉಸಿರು ಅಪಮಾನದ—ಸೇಡನ್ನು ಯಾವ ಬಗೆಯಾಗಿ ತೆಗೆದುಕೊಳ್ಳಬೇಕೆಂಬುದರ ಎಣಿಕೆಯನ್ನು ಹಾಕುತ್ತಿರುವದು. ಪ್ರಸಂಗೋಪಾತ್ ನನ್ನ ಸರ್ವಸ್ವವನ್ನು ಈ ಕಾರ್ಯಕ್ಕೆ ಧಾರೆಯೆರೆದು ಬಿಡಬಹುದು ನಾನು !

ಬನ್ಯಾಬಾಪು— ಕೃಷ್ಣಾಜಿಪಂತ, ರಾಜಕಾರಣಿ ಪುರುಷರೆಂದೆಣಿಸಿಕೊಳ್ಳುವವರು ಬಹಳ ಶಾಂತ ಸ್ವಭಾವದವರಿರುತ್ತಾರಂತೆ ! ಎಂತಹ ಪ್ರಸಂಗ ಬಂದೊದಗಿದರೂ ಕೋಪಗೊಳ್ಳುವದಿಲ್ಲವಂತೆ! ಧೀರ-ಗಂಭೀರರಾಗಿ ಪ್ರಸಂಗಕ್ಕೆ ಎದುರಾಗಿ ನಿಲ್ಲುವರಂತೆ !

ಕೃಷ್ಣಾಜಿಪಂತ— ಅಂದರೆ....ನಾನು ಮಾಡುವ ಕಾರ್ಯದಲ್ಲಿ ನಿಮ್ಮದು ವಿಶ್ವಾಸವಿಲ್ಲವೆ? ನನ್ನ ಮಾತಿನಲ್ಲಿ ಭರವಸೆಯಿಲ್ಲವೆ ?

ಬನ್ಯಾಬಾಪು— ವಿಶ್ವಾಸವಿದ್ದುದರಿಂದಲೇ ನಿಮ್ಮ ಬೆನ್ನು ಹತ್ತಿದ್ದೇನೆ. ನನ್ನ ಒಳಿತು-ಕೆಡಕುಗಳ ಸಂಪೂರ್ಣ ಹೊಣೆಗಾರಿಕೆಯನ್ನು ನಿಮಗೊಪ್ಪಿಸಿದ್ದೇನೆ. ಕೃಷ್ಣಾಜಿಪಂತ, ಹೀಗೆ ತಲೆಕಾಯಿಸಿಕೊಂಡು ವರ್ತಿಸಿದರೆ ಎಳ್ಳಷ್ಟೂ ಪ್ರಯೋಜನವಿಲ್ಲ. ತುಂಬ ಎಚ್ಚರಿಕೆ ವಹಿಸಿ ನಾವು ವರ್ತಿಸಬೇಕು !

ಕೃಷ್ಣಾಜಿಪಂತ— ಅದರ ಕಲ್ಪನೆ ನನಗಿರುವದು.

ಬನ್ಯಾಬಾಪು— ನಿಮಗಿಲ್ಲ ! ಸ್ಪಷ್ಟವಾಗಿ ಮಾತಾಡುತ್ತಿರುವೆನೆಂದು ಕ್ಷಮಿಸಿರಿ !

ಕೃಷ್ಣಾಜಿಪಂತ— ಯಾವ ವಿಷಯವಾಗಿ ಮಾತಾಡುವಿರಿ....ಬನ್ಯಾಬಾಪು.... ?

ಬನ್ಯಾಬಾಪು— ಪ್ರಸ್ತುತ ಪ್ರಸಂಗದ ಮೇಲೆ ಮಾತಾಡುತ್ತಿದ್ದೇನೆ. ಕೃಷ್ಣಾಜಿಪಂತ, ಆ ಭದ್ರವಾದ ತಳಹದಿಯ ಮೇಲೆ ನೀವು ನಿಮ್ಮ ಕನಸಿನ ಕಟ್ಟಡವನ್ನು—ಕಟ್ಟುತ್ತೀರೆಂಬುದರ ಕಲ್ಪನೆ ನಿಮಗಿರಲಿಕ್ಕಿಲ್ಲ. ನಿಮಗೆ ಅಪಮಾನದ ಸೇಡು ತೀರಿಸಿಕೊಳ್ಳುವದೊಂದೇ ಗೊತ್ತು ! ಗಂಭೀರ ಪ್ರಸಂಗದ ಕಲ್ಪನೆಯಿಲ್ಲ....ನಿಮಗೆ... ! ಎದುರಾಗಿ ಬರುವ ಪ್ರತಿಯೊಂದು ಕಠಿಣ ಪ್ರಸಂಗವನ್ನು ನನಗೆ ಎದುರಿಸಬೇಕಾಗುವದು ! ನಿಮಗಲ್ಲ! ಎಷ್ಟೋ ಪ್ರಸಂಗಗಳಲ್ಲಿ ಅಂಗೈಯಲ್ಲಿ ಜೀವವನ್ನು ಹಿಡಿದುಕೊಂಡು ನಿಲ್ಲಬೇಕಾಗುವದು ನನಗೆ ! ನಮ್ಮ ಕೃತ್ಯದ ಬಗ್ಗೆ ಸಂಶಯ ಬಂದರೆ ಸಾಕು—ಅಮಾತ್ಯರು ನಮ್ಮನ್ನು ತೋಫಿನ ಬಾಯಿಗೆ ಕಟ್ಟಿದರೆಂದೇ ತಿಳಿಯಿರಿ !

ಕೃಷ್ಣಾಜಿಪಂತ— ನಿಮ್ಮಲ್ಲಿ ಆ ರೀತಿಯ ಕೌಶಲ್ಯವಿದೆಯೆಂದೇ ನಿಮ್ಮನ್ನು ನನ್ನ ಸಹಾಯಕರೆಂದು ನಾನು ತೆಗೆದುಕೊಂಡಿದ್ದೇನೆ. ನರಗುಂದದ ದೊರೆಗೆ ನಿಮ್ಮ ಬುದ್ಧಿಯ ಅರಿವಿರದಿದ್ದರೂ ನನಗೆ ಸಂಪೂರ್ಣವಾಗಿರುವದು. ಕೈಯಲ್ಲಿ ಹಿಡಿದ ಕೆಲಸವನ್ನು ಅಚ್ಚುಕಟ್ಟಾಗಿ ಮಾಡುವ ನಿಮ್ಮ ಗುಣವು ಹೊಗಳತಕ್ಕಂಥದ್ದೇ ಇರುವದು ! ಬನ್ಯಾಬಾಪು, ಹಾಗೆ ಒಮ್ಮೆಲೆ ಜೀವದ ಜೊತೆಯಲ್ಲಿ ಆಟವಾಡುವದಕ್ಕೆ ಹೋಗಬೇಡಿರಿ ! ಸಂಕಟಗ್ರಸ್ತರಾದರೆ ಅದರ ಅರಿವನ್ನು ನಮಗೆ ನೀವು ಮಾಡಿಕೊಡಬೇಕು ! ಕೈಕೊಂಡ ಕಾರ್ಯದ ಯಶದಲ್ಲಿ ನೀವು ಹೇಗೆ ಪಾಲುಗಾರರೋ ಹಾಗೆ ಕಾರ್ಯಸಾಧನೆಯಲ್ಲಿ ಬರುವ ಸಂಕಟಗಳಲ್ಲಿಯೂ ಪಾಲುಗಾರರೆಂಬುದನ್ನು ಮರೆಯಬೇಡಿರಿ ! ಆದ್ದರಿಂದ ಅನ್ನುತ್ತೇನೆ—ನರಗುಂದದ ರಾಜ್ಯದ ವಿಷಯದಲ್ಲಿ, ಕೋಟೆಯ ವಿಷಯದಲ್ಲಿ ನನಗಿಂತಲೂ ನೀವು ಹೆಚ್ಚಾಗಿ ಬಲ್ಲವರಿದ್ದೀರಿ....!

[ ಮುಂದುವರಿದುದು

# ಮರಳಿ ಮನೆಗೆ

ಅನು— ಸರೋಜಿನಿ ಕೊ.

ಫತಿಕ್ ಚಕ್ರವರ್ತಿಯು ತನ್ನ ಹಳ್ಳಿಯ ಮಕ್ಕಳಲ್ಲಿ ಕಿಡಿಗೇಡಿ ಮುಂದಾಳು. ಅಂದು ಅವನ ತಲೆಯಲ್ಲಿ ಹೊಸದೊಂದು ಚೇಷ್ಟೆಯು ಹೊಳೆಯಿತು. ನದಿಯ ದಂಡೆಯ ಮೇಲೆ ದೋಣಿಗಾಗಿ ಇಟ್ಟಿದ್ದ ಭಾರವಾದ ತೊಲೆಯೊಂದು ಕೆಸರಿನಲ್ಲಿ ಬಿದ್ದಿತ್ತು. ಅದನ್ನು ಅದಿರುವ ಜಾಗದಿಂದ ತಾವೆಲ್ಲ ಮಕ್ಕಳೂ ಕೂಡಿ, ಒಂದೇ ಉತ್ಸಾಹದಿಂದ ಹೊರ ತೆಗೆದು, ದೂರ ಉರುಳಿಸಬೇಕೆಂದು ನಿಶ್ಚಯಿಸಿದರು. ಇದರಿಂದ ಆ ತೊಲೆಯ ಮಾಲಕನು ಸಿಟ್ಟಾಗಬಹುದು. ಮತ್ತು ತಾವೆಲ್ಲರೂ ಈ ತಮಾಶೆಯಿಂದ ಆನಂದಿತರಾಗಬಹುದೆಂದು ತನ್ನ ಗೆಳೆಯರಿಗೆ ಹೇಳಿದನು. ಪ್ರತಿಯೊಬ್ಬರೂ ಇದಕ್ಕೆ ಅನುಮೋದಿಸಲಾಗಿ ಠರಾವು ಒಮ್ಮತದಿಂದ ಪಾಸಾಯ್ತು.

ಆದರೆ ಈ ತಮಾಶೆಯು ಪ್ರಾರಂಭವಾಗುವ ಕ್ಷಣದಲ್ಲೇ ಫತಿಕನ ತಮ್ಮ ಮಖಾನನು ಸಾವಕಾಶವಾಗಿಬಂದುಏನೊಂದೂ ಮಾತಾಡದೆ ಆ ತೊಲೆಯ ಮೇಲೆ ಎಲ್ಲರೆದುರಿಗೆ ಕುಳಿತುಬಿಟ್ಟನು. ಮಕ್ಕಳಿಗೆ ಒಂದು ಗಳಿಗೆಯ ವರೆಗೆ ಏನೂ ತಿಳಿಯದಂತಾಯ್ತು. ಅವರಲ್ಲಿಯ ಒಬ್ಬ ಹುಡುಗನು ಅವನಿಗೆ ಏಳಲು ಹೇಳಿದ ಆದರೆ ಮಖಾನನು ಅದು ತನಗೇನೂ ಸಂಬಂಧವಿಲ್ಲದಂತೆ ಸುಮ್ಮನೆ ಕುಳಿತ. ಆಗ ಅವನು "ಈ ಆಟದಲ್ಲಿ ಏನೂ ಅರ್ಥವಿಲ್ಲವೆ"ಂದು ಹೇಳುವ ಬಾಲ ತತ್ವಜ್ಞಾನಿಯಂತೆ ಕಾಣುತ್ತಿದ್ದ. ಫತಿಕನಿಗೆ ಸಿಟ್ಟು ಬಂತು. "ಏ ಮಖಾನ! ನೀನು ಈ ಕ್ಷಣ ಕೆಳಗಿಳಿಯದಿದ್ದಲ್ಲಿ ನಾನು ನಿನ್ನನ್ನು ತಳ್ಳುವೆ!" ಎಂದು ಕೂಗಿಕೊಂಡ. ಆದರೆ ಮಖಾನನು ತನಗೆ ಸ್ಥಳವು ಇನ್ನು ಹೆಚ್ಚು ಸೌಕರ್ಯವಾಗುವಂತೆ ಸರಿದು ಕುಳಿತನು ಅಷ್ಟೇ.

ಈಗ ಫತಿಕನಿಗೆ ಸಾರ್ವಜನಿಕರ ಮುಂದೆ ತನ್ನ ಉದಾರತೆಯನ್ನು ತೋರಿಸಿದರೆ ಅದರಲ್ಲಿ ತನ್ನ ಅಧೈರ್ಯವನ್ನು ತೋರಿಸಿಕೊಂಡಂತಾಗುವದು ನಿಶ್ಚತವೆಂದು ಅನಿಸಿತು. ಆದರೆ ಅವನ ಧೈರ್ಯವು ಆ ಸಂದಿಗ್ಧ ಕ್ಷಣದಲ್ಲಿ ಕಳೆದುಹೋಯ್ತು. ಅವನ ಫಲವತ್ತಾದ ಮೆದುಳು ತನ್ನ ತಮ್ಮನಿಗೆ ಸೋಲು ಬರುವಂತಹ ಹಾಗೂ ಗೆಳೆಯರಿಗೆ ಮೋಜೆನಿಸಬಹುದಾದಂತಹ ಒಂದು ಹೊಸ ಉಪಾಯವನ್ನು ಕೂಡಲೆ ಹೇಗೋ ಕಂಡುಕೊಂಡಿತು. ಅವನು, ಮಖಾನನು ಕೂತಿದ್ದಂತೆಯೇ ಆ ತೊಲೆಯನ್ನುರುಳಿಸಲು ಆಜ್ಞಾಪಿಸಿದನು. ಮಖಾನನಿಗೆ ಈ ಆಜ್ಞೆಯು ಕೇಳಿಸಿತಾದರೂ ಅವನು ತನ್ನ ಮೂಲ ಉದ್ದೇಶಕ್ಕೆ ಅಂಟಿಕೊಳ್ಳಲೇ ಬೇಕಾಗಿತ್ತಾದ್ದರಿಂದ, ಅವನು, ತಾನು ಬೇರೆ ವಿಚಾರದಲ್ಲೇ ಮುಳುಗಿದವನಂತೆ ತೋರಿಸಿಕೊಂಡ ಹುಡುಗರು "ಒಂದೋ! ಎರಡೋ!! ಮೂ........ರೋ!!! ಹುಂ" ಎನ್ನುತ್ತಾ ತೊಲೆಯನ್ನು ಎತ್ತಿ "ಹುಂ! ಹೋಗು" ಎಂದು ತಳ್ಳಿದೊಡನೆ ತೊಲೆ ಸರಿಯಿತು. ಅದರೊಡನೆ ಮಖಾನನ ತತ್ವ ಮತ್ತು ಪ್ರಭಾವವೂ ಸರಿಯಿತು.

ಉಳಿದೆಲ್ಲ ಹುಡುಗರೂ ಆನಂದದಿಂದ ತಮ್ಮ ಗೊಗ್ಗರ ಧ್ವನಿಯಲ್ಲಿ ಕೂಗಾಡತೊಡಗಿದರು. ಆದರೆ ಫತಿಕನು ಸ್ವಲ್ಪ ಹೆದರಿದನು. ಮುಂದಾಗುವದು ಅವನಿಗೆ ಗೊತ್ತಿತ್ತು.

ಮಖಾನನು ಫತಿಕನ ಬಳಿ ಸಾರಿ, ಅವನ ಮುಖ ಪರಚಿ ಕಡಿದು ತಿವಿದು, ತಾನೇ ಅಳುತ್ತಾ ಮನೆ ಕಡೆಗೆ ತೆರಳಿದನು. ಇಲ್ಲಿಗೆ ಆ ನಾಟಕದ ಮೊದಲಂಕ ಸಮಾಪ್ತವಾಯ್ತು.

ಮುಂದೆ ಫತಿಕನು ತನ್ನ ಮುಖ ಒರೆಸಿಕೊಂಡು, ದಂಡೆಯಲ್ಲಿದ್ದ ದೋಣಿಯೊಂದರ ತುದಿಗೆ ಕುಳಿತನು. ಅದೇ ವೇಳೆಗೆ ನಿಲ್ದಾಣಕ್ಕೆ ಬಂದ ಹಡಗೊಂದರಿಂದ, ಹೊಳೆಯುವ ಕೂದಲುಳ್ಳ, ಕರಿಯ ಗುಡ್ಡದ ಮಧ್ಯ ವಯಸ್ಸಿನ ಗಂಡಸೊಬ್ಬನು ದಂಡೆಗಿಳಿದನು. ದಂಡೆಯಲ್ಲಿ ಯಾವ ಕೆಲಸವನ್ನು ಮಾಡದೆ, ಸುಮ್ಮನೆ ಕುಳಿತ ಈ ಹುಡುಗನನ್ನು ನೋಡಿ "ಚಕ್ರವರ್ತಿಗಳು ಇರುವದೆಲ್ಲಿ?" ಎಂದು ಕೇಳಿದನು. ಫತಿಕನು ಹುಲ್ಲನ್ನು ಅಗಿಯುತ್ತಾ "ಅಲ್ಲಿಯೇ ಮೇಲೆ"

ಎಂದು ಹೇಳಿದನು. ಆದರೆ ಅವನು ತೋರಿಸಿದ ಸ್ಥಳವು ಇಂಥಲ್ಲಿಯೇ ಎಂದು ನಿಶ್ಚಿತವಾಗಿ ತಿಳಿಯುವದು ಕಠಿಣವಾಗಿತ್ತಾದ್ದರಿಂದ ಆ ಅಪರಿಚಯಸ್ಥನು ಮತ್ತೊ ಒಮ್ಮೆ ಅದೇ ಪ್ರಶ್ನೆ ವಿಚಾರಿಸಿದನು. ಫತಿಕನು ದೋಣಿಯಲ್ಲಿ ತನ್ನ ಕಾಲನ್ನು ಹಿಂದುಮುಂದಾಡಿಸುತ್ತಾ, "ಹೋಗಿ ಹುಡುಕಿರಿ" ಎಂದು ಹೇಳಿ ಮೊದಲಿನಂತೆಯೇ ಹುಲ್ಲನ್ನು ಅಗಿಯತೊಡಗಿದನು.

ಆದರೆ ಅಷ್ಟರಲ್ಲಿಯೇ ಒಬ್ಬ ಆಳುಮಗನು ಬಂದು ಫತಿಕನಿಗೆ "ತಾಯಿಯು ಕರೆದಿದ್ದಾಳೆ ಬಾ" ಎಂದು ಕರೆದನು. ಫತಿಕನು ಹೋಗಲು ನಿರಾಕರಿಸಿದನು. ಆಳುಮಗನು ಆ ಸಂದರ್ಭದಲ್ಲಿ ಆ ಹುಡುಗನಿಗೆ ತಾನೇ ಒಡೆಯನಾಗಿ (ಶಿಕ್ಷಕನಾಗಿ) ಅವನನ್ನು ರಭಸದಿಂದ ಎಳೆದೊಯ್ದನು.

ಫತಿಕನು ಮನೆಗೆ ಬಂದೊಡನೆಯೇ ಅವನ ತಾಯಿಯು ಅವನನ್ನು ನೋಡಿ ಸಿಟ್ಟಿನಿಂದ "ನೀನು ಮಖಾನನಿಗೆ ಮತ್ತೆ ಹೊಡೆದೆಯಾ?" ಎಂದು ಒದರಿದಳು.

"ಇಲ್ಲ, ನಾನು ಹೊಡೆದಿಲ್ಲ. ಹೊಡೆದೆನೆಂದು ಯಾರು ಹೇಳಿದರು?" ಫತಿಕನು ಸಿಟ್ಟಿನಿಂದ ಕೇಳಿದನು.

ತಾಯಿಯು "ಸುಳ್ಳಾಡಬೇಡ! ನೀನೇ ಹೊಡೆದಿರುವಿ" ಎಂದಳು.

ತಕ್ಷಣವೇ ಫತಿಕನು "ನಾನೂ ಹೇಳುತ್ತೇನೆ. ಅವನನ್ನು ನಾನು ಹೊಡೆದಿಲ್ಲ. ಬೇಕಾದರೆ ನೀನೇ ಮಖಾನನಿಗೆ ಕೇಳು!" ಎಂದು ಉತ್ತರಿಸಿದ.

ಆದರೆ ಮಖಾನನು ತಾನು ತನ್ನ ಮೊದಲಿನ ಮಾತಿಗೇ ಅಂಟಿಕೊಳ್ಳುವದು ಒಳ್ಳೆಯದೆಂದು ತಿಳಿದು, "ಹೌದು, ಫತಿಕನು ನನ್ನನ್ನು ಹೊಡೆದನು" ಎಂದು ತಾಯಿಗೆ ಹೇಳಿದ. ಫತಿಕನ ತಾಳ್ಮೆ ಮೀರಿತು. ಅವನು ಅಪವಾದವನ್ನು ಹೊತ್ತುಕೊಳ್ಳಲಾರದಾದನು. ಅವನು ಮಖಾನನೆಡೆಗೆ ಧಾವಿಸಿ ಅವನನ್ನು ತನ್ನ ಕೈಲಿದ್ದ ಕೋಲಿನಿಂದ ಬಡಿಯುತ್ತಾ "ತೆಗೆದುಕೋ ಇದನ್ನು, ಸುಳ್ಳು ಹೇಳುವಿಯಾ?" ಎಂದು ಕೂಗತೊಡಗಿದನು.

ಅವನ ತಾಯಿಯು ಆ ಕ್ಷಣದಲ್ಲಿ ಮಖಾನನ ಬದಿಗಾಗಿ ಫತಿಕನನ್ನು ಎಳೆಯುವಾಗ ತಾಯಿಯ ಕೈಯನ್ನೇ ಕಚ್ಚತೊಡಗಿದನು. ಫತಿಕನು ಅವಳನ್ನು ಎಳೆದಾಗ ಅವಳು "ಏನು! ನೀನು ಸಣ್ಣವನಾದರೂ ಕೆಟ್ಟವ! ತಾಯಿಗೇ ಕಚ್ಚುವಿಯಾ" ಎಂದು ಕೂಗಾಡಹತ್ತಿದಳು.

ಈ ಸಂದಿಗ್ಧ ಸಮಯದಲ್ಲಿಯೇ ಆ ವಿಚಿತ್ರ ಹೊಳೆಯುವ ಕೂದಲಿನ ಮನುಷ್ಯನು ಅಲ್ಲಿ ಬಂದು ನಡೆದದ್ದೇನು ಎಂದು ವಿಚಾರಿಸಿದನು. ಫತಿಕನು ಅವನನ್ನು ಕುರಿಯಂತೆ ನೋಡಿ ನಾಚಿಕೊಂಡನು.

ಆದರೆ ಅವನ ತಾಯಿಯು ಹಿಂದೆ ಹೋಗಿ ಆ ವಿಚಿತ್ರ ವ್ಯಕ್ತಿಯನ್ನು ನೋಡಿದೊಡನೆ ಅವಳ ಸಿಟ್ಟು ಆಶ್ಚರ್ಯದಲ್ಲಿ ತಿರುಗಿತು. ಕಾರಣ ಅವಳು ತನ್ನ ಸೋದರನನ್ನು ಗುರುತಿಸಿದಳು ಮತ್ತು "ಏನು ಅಣ್ಣಾ! ಎಲ್ಲಿಂದ ಈಗ ಬಂದಿರುವಿ?" ಎಂದು ಕೇಳುತ್ತಾ ಬಾಗಿ ಅವನ ಪಾದಮುಟ್ಟಿ ನಮಸ್ಕರಿಸಿದಳು. ಅವಳ ಅಣ್ಣನು ಅವಳ ಮದುವೆಯಾದೊಡನೆಯೇ ದೂರ ದೂರಿಗೆ ಹೋಗಿದ್ದನು. ಮುಂಬೈಯಲ್ಲಿ ಉದ್ಯೋಗವನ್ನು ಕೈಕೊಂಡಿದ್ದನು. ಅವನು ಮುಂಬೈಯಲ್ಲಿದ್ದಾಗಲೇ ಅವನ ತಂಗಿಯು ತನ್ನ ಗಂಡನನ್ನು ಕಳೆದುಕೊಂಡಿದ್ದಳು. ಬಿಶಂಬರನು ಮರಳಿ ಕಲಕತ್ತೆಗೆ ಬಂದು ತನ್ನ ತಂಗಿಯ ಬಗೆಗೆ ವಿಚಾರಿಸಿದನು. ಅವಳನ್ನು ನೋಡಲು ಗಡಬಡಿಸಿ ಅವಳಿರುವ ಸ್ಥಳವನ್ನು ಹುಡುಕಿ ತೆಗೆದನು.

ಮುಂದಿನ ಕೆಲವು ದಿನಗಳು ಹರ್ಷದಿಂದಲೇ ತುಂಬಿತ್ತು. ಅಣ್ಣನು ಆ ಎರಡು ಮಕ್ಕಳ ವಿದ್ಯಾಭ್ಯಾಸದ ಸಲುವಾಗಿ ವಿಚಾರಿಸಿದನು. ಅವಳು ಫತಿಕನು ಯಾವಾಗಲೂ ಉಪದ್ರವ ಕೊಡುತ್ತಾನೆ, ಅವನು ಹೇಳಿದ್ದನ್ನು ಕೇಳದವ ಹಾಗೂ ಕ್ರೂರಿ ಇರುವನೆಂದೂ ಆದರೆ, ಮಖಾನನು ಬಂಗಾರದಂತೆ ಒಳ್ಳೆಯವನೂ, ಕುರಿಯಂತೆ ಶಾಂತ ಸ್ವಭಾವದವನೂ, ಮತ್ತು ವಿದ್ಯಾಭ್ಯಾಸದಲ್ಲಿ ಅಭಿರುಚಿ ಉಳ್ಳವನೂ ಎಂದು ಹೇಳಿದಳು. ಬಿಶಂಬರನು ಕರುಣೆಯಿಂದಲೇ ಫತಿಕನನ್ನು ತನ್ನ ತಂಗಿಯಿಂದ ಕರೆದುಕೊಂಡು ಕಲಕತ್ತೆಗೆ ಹೋಗಿ ಅಲ್ಲಿಯೇ ಅವನ ವಿದ್ಯಾಭ್ಯಾಸವನ್ನು ತನ್ನ ಮಕ್ಕಳೊಡನೆ ಮಾಡಿಸಬೇಕೆಂದು ಬಯಸಿದನು. ಆ ವಿಧವೆ ತಾಯಿಯು ಅದಕ್ಕೊಪ್ಪಿದಳು. ಫತಿಕನಿಗೆ ನೀನು ಬರುವಿಯಾ ಎಂದು ಕೇಳಿದೊಡನೆ ಅವನೂ ಸಂತೋಷದಿಂದಲೇ ಒಪ್ಪಿಕೊಂಡನು.

ಫತಿಕನನ್ನು ಅವಳಿಂದ ಬಿಡಿಸಿದ್ದು ಅವಳಿಗೆ ತುಂಬಾ ಸಹಾಯವಾದಂತಾಯಿತು. ಆದರೆ ಅವಳಿಗೆ ಅವನ ಬಗ್ಗೆ ಮನಸ್ಸು ರೋಸಿ ಹೋಗಿತ್ತಾದರೂ, ಆ ಇಬ್ಬರೂ ಅಣ್ಣತಮ್ಮಂದಿರ ಬಳಿ ತನ್ನಲ್ಲಿದ್ದ ಪ್ರೇಮವು ಮಾತ್ರ ಕಡಿಮೆಯಾಗಿರಲಿಲ್ಲ. ಅವಳು, ಫತಿಕನು ಎಂದಾದರೊಂದು ದಿನ ಮಖಾನನನ್ನು ನದಿಯಲ್ಲಿ ತಳ್ಳಿ ಬಿಡಬಹುದು, ಇಲ್ಲವೆ ಜಗಳದಲ್ಲಿ ಅವನ ತಲೆಯೊಡೆದು ಬಿಡಬಹುದು, ಅಥವಾ ಮತ್ತಾವದಾದರೂ ಗಂಡಾಂತರಕ್ಕೆ ತಳ್ಳಬಹುದು ಎಂದು ಹೆದರಿದ್ದಳು ಮಾತ್ರ. ಆದರೂ ಅದೇ ವೇಳೆಯಲ್ಲಿ ಅವಳು ಫತಿಕನನ್ನು

ಟ್ಟಿರಲೂ ಸ್ವಲ್ಪ ದುಃಖಿಸಿದಳು. ಫತಿಕನನ್ನು ಮಾವ
ೂಡನೆ ಹೋಗುವದು. ನಿಶ್ಚಿತವಾದ ಮೇಲೆ ಅವನು ಪ್ರತಿ
ನಿಟಿಗೂ ಯಾವಾಗ ಹೊರಡುವದೆಂದು ಮಾವನಿಗೆ ಕೇಳ
ತ್ತಿದನು. ಫತಿಕನಿಗೆ ಹೊರಡುವ ಲವಲವಿಕೆಯಲ್ಲಿ ಎಷ್ಟೋ
ತ್ರಿಗಳಲ್ಲಿ ನಿದ್ರೆಯು ಹತ್ತಿರಲಿಲ್ಲ. ಅವನು ಮಖಾನನಿಗೆ
ನ್ನ ಆಸ್ತಿಯಾದ ಮೀನು ಹಿಡಿಯುವ ಗಾಳ, ದೊಡ್ಡ ಗಾಳಿ
ಟ ಗೋಲಿ ಗುಂಡುಗಳನ್ನು ಶಾಶ್ವತವಾಗಿ ಬರೆದುಕೊಟ್ಟನು.
ಜವಾಗಿಯೂ ಈ ಹೊತ್ತಿನಲ್ಲಿ ಅವನ ಉದಾರತ್ವವು ಮಖಾ
ನ ವಿಷಯಕ್ಕೆ ಮಿತಿ ಇಲ್ಲದೆ ಹರಿಯಿತು.

ಕಲಕತ್ತೆಯನ್ನು ಮುಟ್ಟಿದೊಡನೆ ಫತಿಕನು ಮೊದಲು
ತ್ತೆಯನ್ನು ಗುರುತಿಸಿಕೊಂಡನು. ಅವಳಿಗೆ ತನ್ನ ಕುಟುಂಬ
ಲ್ಲಿ ಅವಶ್ಯಕವಿಲ್ಲದೆ ಇವನು ಬಂದುದು ಸಂತೋಷವನ್ನುಂಟು
ಾಡಲಿಲ್ಲ. ತನ್ನ ಮೂರು ಮಕ್ಕಳಿಗೆ ಏನೂ ಕೊರತೆ ಇಲ್ಲ
ಂತೆ ವ್ಯವಸ್ಥೆ ಮಾಡುವದರೊಳಗೇ ಸಾಕಾಗುತ್ತಿತ್ತು. ಆದ
ಲ್ಲಿ ಹಳ್ಳಿಯ ೧೪ ವರ್ಷದ ಇವನನ್ನು ತಂದದ್ದು ಅವಳಿಗೆ
ರಿ ಬರಲಿಲ್ಲ. ಬಿಶಂಬರನು ಈ ತಿಳಿಗೇಡಿತನ ಮಾಡುವ
ೂದಲೇ ಒಂದೆರಡು ಸಲ ವಿಚಾರ ಮಾಡಬೇಕಾಗಿತ್ತು.

ಈ ಜಗತ್ತಿನಲ್ಲಿ ೧೪ ವರ್ಷದ ಹುಡುಗನನ್ನು ಹಿಡಿಯುವ
ಕ್ಕಿಂತ ಬಹಳ ಕಠಿಣವಾದದ್ದು ಬೇರೊಂದಿಲ್ಲೆಂಬುದನ್ನು
ಮನುಷ್ಯನು ತಿಳಿಯಬೇಕಾದ ಸಂಗತಿ. ಚಿಕ್ಕವನೆಂದು ಅವನ
ಮೇಲೆ ಮಮತೆ ತೋರಿಸುವದೂ ಸಾಧ್ಯವಿಲ್ಲ. ಆದರೆ ಅವನ
ರೀತಿ ತೋರಿಸಬೇಕೆಂಬ ದಾರಿಯಲ್ಲಿಯೇ ಹೋಗುತ್ತಿರು
ನೆ. ಅವನು ಸಣ್ಣವನಂತೆ ಮಾತಾಡಿದರೆ ಮಗುವೆಂದೂ,
ೂಡ್ಡವನಂತೆ ಮಾತನಾಡಿದರೆ ಗರ್ವಿಷ್ಟನೆಂದೂ ಅನ್ನುತ್ತಾರೆ.
ವನು ಮಾತಾಡಿದ್ದನ್ನು ನಿರಾಕರಿಸುವದೇ ಜಾಸ್ತಿ, ಇದಲ್ಲದೆ
ಗ ಅವನ ಬೆಳವಣಿಗೆಯೂ ಅನಾಕರ್ಷಕವಾದದ್ದಿರುತ್ತದೆ,
ನಗಾಗಿ ಹೊಲಿದ ಬಟ್ಟೆಯು ಹಿಡಿಸಲಾರದಷ್ಟು ಒಮ್ಮೆಲೆ
ಳೆಯುತ್ತಾನೆ. ಅವನ ಧ್ವನಿಯು ಬೆಳೆದು ಗೊಗ್ಗರಾಗು
ದೆ ಮತ್ತು ಒಡೆಯುತ್ತದೆ ಹಾಗೂ ನಡಗುತ್ತದೆ ಮುಖವು
ಗೋಣ ಕೋನ ಕೋನವಾಗಿ ಬೆಳೆದು, ನೋಡಲು ಅಸಹ್ಯ
ರುತ್ತದೆ. ಹುಡುಗನು ತನ್ನ ಅರಿವಿಗಾಗಿ ತುಂಬಾ ನೊಂದು
ಳ್ಳುವಂತಾಗುತ್ತದೆ. ಅವನು ದೊಡ್ಡ ಮನುಷ್ಯರೊಡನೆ
ಮಾತಾಡಿದರೆ, ತನಗೆ ಸಲ್ಲದ ರೀತಿಯಲ್ಲಿ ತುಂಬಾ ಮುಂದೊರೆ
ಯುತ್ತಾನೆನ್ನುತ್ತಾರೆ. ಹಿಂದುಳಿದರೆ ನಾಚುಗುಳಿ ಎನ್ನುತ್ತಾರೆ.

ಆದರೂ ಈ ವಯಸ್ಸಿನಲ್ಲಿಯೇ ಅವನ ಹೃದಯದಲ್ಲಿ
ರುಣ ಹುಡುಗರ ಗುರುತನ್ನು ಹಚ್ಚಿಕೊಳ್ಳುವದು, ಮತ್ತು
ಪ್ರೀತಿಸುವದನ್ನು ಬಯಸುತ್ತಾನೆ. ತನಗೆ ಮಾನ ಮರ್ಯಾದೆ
ಕೊಡುವವರು, ಒಪ್ಪಿಸಿದ ಕೆಲಸವನ್ನು ಮಾಡುತ್ತಾನೆ. ಆದರೆ
ಯಾರೂ ಅವನನ್ನು ಪ್ರತ್ಯಕ್ಷವಾಗಿ ಪ್ರೀತಿಸುವದಿಲ್ಲ. ಅದರ
ಬದಲಾಗಿ ಅಚ್ಛೆಯನ್ನು ಮಾಡಿ ಅವನನ್ನು ಕೆಡಿಸಿ ಬಿಡುತ್ತಾರೆ.
ಆದರೆ ಬಯ್ಯುವದರಿಂದಲೂ ಗದರಿಸುವದರಿಂದಲೂ ಅವನು
ಒಡೆಯನಿಲ್ಲದ ಅನಾಥ ನಾಯಿಯಂತಾಗುವನು.

೧೪ ವರ್ಷದ ಹುಡುಗನಿಗೆ ಅವನ ಮನೆಯೇ, ಅವನಿಗೆ
ಸ್ವರ್ಗ ಬೇರೊಬ್ಬರ ಮನೆಯಲ್ಲಿ ಬೇರೊಬ್ಬರೊಡನೆ ಇರುವದು
ತುಂಬಾ ತ್ರಾಸಿನದೇ ಆಗಿರುತ್ತದೆ. ಅವನಿಗೆ ಕರುಣೆ ತೋರಿ
ಸುವ ತಾಯಿಯ ಅವಶ್ಯಕತೆ ಆಗ ಬಹಳಿರುತ್ತದೆ.

ಸ್ವಾಗತವಿಲ್ಲದೆ ಮಾವನ ಮನೆಗೆ ಬಂದು ಅತಿಥಿಯಾ
ಗಿದ್ದ ಫತಿಕನಿಗೆ ಅದೊಂದು ಮಾನಸಿಕ ವ್ಯಥೆಯಾಗಿತ್ತು. ಪ್ರತಿ
ಯೊಂದು ಸಂದರ್ಭದಲ್ಲೂ ಅತ್ತೆಯು, ಸ್ವಲ್ಪವಾದರೂ ವಿರೋಧಿ
ಸುತ್ತಿದ್ದಳು. ಅವಳು ಯಾವಾಗಲಾದರೂ ತನಗಾಗಿ ಏನಾ
ದರೂ ಹೇಳಿದಳೆಂದರೆ ಅವನು ಅತಿಸಂತೋಷಿತನಾಗಿಮಾಡುವ
ಕೆಲಸವನ್ನು ಅತಿಯಾಗಿ ಮಾಡುತ್ತಿದ್ದ. ನಂತರ ಅವಳು ಇವ
ನಿಗೆ ಅತಿ ಮೂರ್ಖನಂತೆ ಮಾಡಬೇಡ ಎಂದು ಹೇಳಬೇಕಾಗು
ತ್ತಿತ್ತು.

ಈ ವಾತಾವರಣದಲ್ಲಿ ಅವನು ಆ ಮನೆಯಲ್ಲಿ ಕೃಚಿ
ತ್ತಾಗಿ ಉಸುರಾಡಿಸುವದೂ ಕಷ್ಟವೆಂದು ತಿಳಿದನು. ಅವನಿಗೆ
ಬಯಲಿನಲ್ಲಿ ಸ್ವತಂತ್ರವಾಗಿ ಉಸುರಾಡಿಸುವದು ಬೇಕಾಗಿತ್ತು.
ಆದರೆ ಅಲ್ಲಿ ಆ ಸ್ವತಂತ್ರತೆ ಇರಲಿಲ್ಲ. ಸುತ್ತಲೂ ಕಲಕತ್ತೆಯ
ಮನೆಗಳು, ಗೋಡೆಗಳು ತುಂಬಿತ್ತು. ದಿನಾಲು ಅವನು ಕನ
ಸಿನಲ್ಲಿ ಹಳ್ಳಿಯ ತನ್ನ ಮನೆಯನ್ನು ಕಾಣುತ್ತಿದ್ದನು. ಅಲ್ಲಿಗೆ
ಹೋಗಲು ಬಯಸುತ್ತಿದ್ದನು. ಅವನಿಗೆ ತಾನು ಗಾಳಿಪಟ,
ಹಾರಿಸುತ್ತಿದ್ದ ಹೊಳೆಯುವ ಆಕಾಶ, ಬಯಲು, ತಾನು ಇಡೀ
ದಿನ ಹಾಡುತ್ತ ಕೂಗುತ್ತ ಕಳೆಯುತ್ತಿದ್ದ. ವಿಶಾಲವಾದ
ನದಿಯ ದಂಡೆ, ಬೇಕೆನಿಸಿದಾಗ ಈಜುವಕೊಳ ಎಲ್ಲವೂ ನೆನ
ಪಾಗುತ್ತಿತ್ತು. ತನ್ನ ಗೆಳೆಯರ ಗುಂಪು, ಪ್ರೀತಿಸುವ ತಾಯಿ
ಎಲ್ಲರಿಗಾಗಿ ವಿಚಾರಿಸುತ್ತಿದ್ದ. ಹಗಲು ರಾತ್ರಿ ಎನ್ನದೆ ಪ್ರಾಣಿ
ಗಳ ಸ್ವಾಭಾವಿಕ ಪ್ರೀತಿ, ಪ್ರೀತಿಸುವವರಲ್ಲಿ ಹೋಗಬೇಕೆಂಬಾಶೆ
ತಾಯಿಯ ಮೂಕ ವೇದನೆ, ಕಳೆದು ಹೋದ ಕರುವಿಗಾಗಿ
ಅದರ ತಾಯಿಯು ಪಡುವ ಆತಂಕ, ತೊಂದರೆಗಳು, ಕುರೂಪಿ
ಹುಡುಗನು ಪ್ರೀತಿಗಾಗಿ ಹಂಬಲಿಸುವದು ಯಾರಿಗೂ ತಿಳಿ
ಯಲು ಅಸಾಧ್ಯ. ಇದಕ್ಕಾಗಿ ಅವನು ದಿನವಿಡೀ ಯೋಚಿಸು
ತ್ತಿದ್ದ.

ಫತಿಕನಷ್ಟು ಹಿಂದುಳಿದ ಹುಡುಗರು ಶಾಲೆಯಲ್ಲಿ ಯಾರೂ ಇರಲಿಲ್ಲ. ಶಿಕ್ಷಕರು ಪ್ರಶ್ನಿಸಿದಾಗ ಸುಮ್ಮನೆ ಮೌನವಾಗಿರುತ್ತಿದ್ದ. ಭಾರ ಹೊತ್ತು ತ್ರಾಸಾದವರಂತೆ ಮಾತಾಡುತ್ತಿದ್ದ. ಮೌನವಾಗಿಯೇ ಕಷ್ಟವನ್ನು ಸಹಿಸುತ್ತಿದ್ದ. ಹುಡುಗರೆಲ್ಲ ಆಟ ಆಡಲು ಹೊರಗೆ ಹೋದೊಡನೆ ಕಿಡಕಿ ಹತ್ತಿರ ಬಂದು ದೂರದಲ್ಲಿ ಕಾಣಿಸುವ ಮನೆಗಳ ಛತ್ತನ್ನು ನೋಡುತ್ತ ನಿಲ್ಲುತ್ತಿದ್ದ. ಶಾಳಿಗೆಯ ಮೇಲೆ ಅಕಸ್ಮಾತ್ತಾಗಿ ಆಡುವ ಹುಡುಗರನ್ನು ಕಂಡರೆ ಅವನ ಮನಸ್ಸು ಅಲ್ಲಿಗೆ ಹೋಗಲು ಹವಣಿಸುತ್ತಿತ್ತು.

ಅವನೊಂದು ದಿನ ತನ್ನೆಲ್ಲ ಧೈರ್ಯವನ್ನೂ ಉಪಯೋಗಿಸಿ ಮಾವನಿಗೆ ತಾನು ಎಂದು ಮನೆಗೆ ಹೋಗುವದೆಂದು ಕೇಳಿದನು.

ಮಾವನು ಸೂಟಿಯ ದಿನಗಳು ಬರುವವರೆಗೆ ಕಾಯಲು ಹೇಳಿದನು. ಆದರೆ ಸೂಟಿಯ ದಿನಗಳಿಗಾಗಿ ನವ್ಹಂಬರ ತಿಂಗಳು ಬರುವವರೆಗೂ ಕಾಯಬೇಕಾಗಿತ್ತು. ಬರಲು ತುಂಬಾ ದಿನಗಳಿದ್ದವು.

ಒಂದು ದಿನ ಅವನು ತನ್ನ ಪಠ್ಯಪುಸ್ತಕವನ್ನು ಕಳೆದುಕೊಂಡನು. ನಿಜವಾಗಿಯೂ ಆ ಪುಸ್ತಕದ ಸಹಾಯದಿಂದ ಸಹ ಅವನಿಗೆ ಅಭ್ಯಾಸ ಮಾಡುವದು ಕಠಿಣವೆಂದು ಕಂಡಿದ್ದನು. ಈಗಂತೂ ಅಭ್ಯಾಸ ಸಾಧ್ಯವೇ ಇಲ್ಲ. ದಿನ ಕಳೆಯುತ್ತಿದ್ದಂತೆ ಶಿಕ್ಷಕರು ದಯೆ ಇಲ್ಲದೆ ಅವನನ್ನು ಬೆತ್ತದಿಂದ ಹೊಡೆಯಹತ್ತಿದರು. ಅವನ ಈ ಸ್ಥಿತಿಯಿಂದಾಗಿ ಅವನ ಮಾವನ ಮಕ್ಕಳು ನಾಚಿಕೆ ಪಡುವಂತಾಯ್ತು. ಅವರು ಅವನನ್ನು ಅಪಮಾನಗೊಳಿಸಲು ಪ್ರಾರಂಭಿಸಿದರು. ಅವನು ಒಂದು ದಿನ ಅತ್ತೆಯ ಹತ್ತಿರಹೋಗಿ ತನ್ನ ಪುಸ್ತಕ ಕಳೆದಿರುವದಾಗಿ ತಿಳಿಸಿದನು. ಅವಳು ತುಟಿಯನ್ನು ಮೊದಲು ಸಿಟ್ಟಿನಿಂದ ಮುಚ್ಚಿ, ನಂತರ ಅವನಿಗೆ "ನೀನು ಹಳ್ಳಿಯ . ತಿಂಗಳಿಗೆ ೪-೫ ಸಲ ನಿನಗೆ ಪುಸ್ತಕ ಕೊಡಿಸಿದರೆ ಅದ್ಹೇಗೆ ನಮ್ಮ ಸಂಸಾರ ನಡೆಯಬೇಕು." ಎಂದು ಕೂಗಾಡ ಹತ್ತಿದಳು.

ಆ ರಾತ್ರಿ ಶಾಲೆಯಿಂದ ಬರುವ ಕಾಲಕ್ಕೆ ಫತಿಕನಿಗೆ ತೀರ ಕೆಟ್ಟದಾದ ತಲೆನೋವು, ಕಾಲುನಡುಗುವದು ಸುರುವಾಯಿತು. ಅವನು ತನಗೆ ಚಳಿಜ್ವರ ಬರುತ್ತದೆ ಎಂದು ತಿಳಿದನು. ಅವನು ಅತ್ತೆಯ ಸಲುವಾಗಿ ತುಂಬಾ ಹೆದರುತ್ತಿದ್ದನು.

ಮರುದಿನ ಬೆಳಗ್ಗೆ ಫತಿಕನು ಎಲ್ಲಿಯೂ ಕಾಣದಾದನು. ಎಷ್ಟು ಹುಡುಕಿದರೂ ಸಿಗಲಿಲ್ಲ. ರಾತ್ರಿಯೆಲ್ಲ ಮಳೆ ಸುರಿಯುತ್ತಿತ್ತು., ಹುಡುಕಲು ಹೋದವರು ಮಳೆಯಲ್ಲಿ ತೋಯಿಸಿಕೊಂಡು, ನಿರಾಶರಾಗಿ ಮರಳಿದರು. ನಂತರ ಬಿಶಂಬರನು ನಿರುಪಾಯನಾಗಿ ಪೋಲೀಸರ ಸಹಾಯ ಬೇಡಿದನು.

ಆ ದಿನದ ಕೊನೆಗೆ ಒಂದು ಪೋಲೀಸ ಗಾಡಿಯು ಬಾಗಿಲಿನ ಎದುರು ಬಂದು ನಿಂತಿತು. ಆಗಲೂ ಇನ್ನೂ ಮಳೆ ಸುರಿಯುತ್ತಲೇ ಇತ್ತು. ಇಬ್ಬರು ಕಾನಸ್ಟೇಬಲರು ಫತಿಕನನ್ನು ಕರೆದುಕೊಂಡು ಬಂದು ಬಿಶಂಬರನ ಎದುರು ನಿಲ್ಲಿಸಿದರು. ಅವನು ತಲೆಯಿಂದ ಕಾಲಿನವರೆಗೂ ತೋಯ್ಸಿಕೊಂಡಿದ್ದನು. ಮೈಯೆಲ್ಲ ಕೆಸರಿನಿಂದ ತುಂಬಿತ್ತು. ಕಣ್ಣುಗಳು ಜ್ವರದಿಂದ ಕೆಂಪಾಗಿದ್ದವು. ಬೆರಳುಗಳು ನಡುಗುತ್ತಿದ್ದವು. ಬಿಶಂಬರನು ಅವನನ್ನು ತನ್ನ ಕೈಯ್ಯಲ್ಲಿ ತೆಗೆದುಕೊಂಡು, ಒಳಗಡೆ ಹೋದನು. ಅತ್ತೆಯು ಇವನ ಈ ಸ್ಥಿತಿಯನ್ನು ನೋಡಿ "ಏನು, ಈ ಹುಡುಗನಿಂದಾಗಿ ನಮಗೆಷ್ಟು ತ್ರಾಸಾಗುತ್ತಿದೆ! ಸುಮ್ಮನೆ ಇವನನ್ನು ಮನೆಗೆ ಕಳಿಸಬಾರದೇ ?" ಎಂದು ಕೂಗಾಡ ತೊಡಗಿದಳು.

ಫತಿಕನು ಅವಳ ಈಮಾತನ್ನು ಕೇಳಿ, "ಮಾವಾ, ನಾನು ಈಗ ನನ್ನ ಮನೆಗೇ ಹೋಗುತ್ತಿದ್ದೆ, ಆದರೆ ಇವರು ನನ್ನನ್ನಿಲ್ಲಿ ಮರಳಿ ಎಳೆದು ಕೊಂಡು ಬಂದರು." ಎಂದು ಬಿಕ್ಕಳಿಸಿ ಹೇಳಿದನು.

ಅಂದು ಜ್ವರ ಬಹಳ ಏರಿತು. ಹುಡುಗನು ಬಡಬಡಿಸತೊಡಗಿದ. ಬಿಶಂಬರನು ಡಾಕ್ಟರರನ್ನು ಕರೆಸಿದನು. ಫತಿಕನು ಜ್ವರದಲ್ಲಿ ಕಣ್ ಕಣ್ ಬಿಡುತ್ತ ಛತ್ತಿನ ಕಡೆಗೆ ದೃಷ್ಟಿ ಇಟ್ಟು "ಮಾವಾ, ರಜೆಯು ಬಂದಿತು? ನಾನಿನ್ನು ಮನೆಗೆಹೋಗಲೆ?" ಎಂದು ಆಳವಾದ ಧ್ವನಿಯಲ್ಲಿ ಕೇಳಿದ.

ಬಿಶಂಬರನಿಗೆ ಅಳುವಂತಾಯ್ತು. ಫತಿಕನ ಸುಡುತ್ತಿರುವ ಕೈಗಳನ್ನು ತನ್ನ ಕೈಯ್ಯಲ್ಲಿ ತೆಗೆದುಕೊಂಡು ಹತ್ತಿರವೆ ಕುಳಿತು ರಾತ್ರಿ ಇಡೀ ಕಳೆದನು. ಹುಡುಗನು ಮತ್ತೆ ಕೆ ಸ್ವರದಲ್ಲಿ ಮಾತಾಡತೊಡಗಿದ. ಕೊನೆಗೆ ಅವನ ಧ್ವನಿಗೆ ದ ವಾಯ್ತು. "ಅಮ್ಮಾ ! ನನ್ನನ್ನು ಈ ರೀತಿ ಹೊಡೆಯ ಬೇಡ ಅಮ್ಮಾ ! ನಾನು ನಿಜವನ್ನೇ ಹೇಳುತ್ತಿದ್ದೆನೆ." ಎಂದು ಬ ರಿದ. ಮರುದಿನ ಅವನಿಗೆ ಸ್ವಲ್ಪ ಪ್ರಜ್ಞೆ ಬಂದಿತು. ಅದಾ ಬರುವಿಗಾಗಿಯೋ ಎದುರು ನೋಡುವಂತೆ, ಅವನು ಕೋಣೆ ತುಂಬೆಲ್ಲಾ ಕಣ್ಣು ಹೊರಳಿಸಿದನು. ಕೊನೆಗೆ ನಿರಾಶೆ ಉಸಿರ್ಗರೆದು, ತಲೆ ಹಿಂದೆ ಸರಿಸಿ ತಲೆ ದಿಂಬಿನ ಮೇಲಿಟ್ಟು ದೀರ್ಘಶ್ವಾಸದೊಂದಿಗೆ ಮುಖವನ್ನು ಗೋಡೆಯ ಕಡೆ ಹೊರಳಿಸಿದನು.

ಬಿಶಂಬರನು ಅವನ ಮನೋಗತವರಿತು, ಅವನ ಹತ್ತಿರ ಬಾಗಿ "ಫತಿಕ, ನಾನು ನಿನ್ನ ತಾಯಿಗೆ ಹೇಳಿ ಕಳಿಸಿರುವೆನೆಂದು ಕಿವಿಯಲ್ಲಿ ಮೆಲ್ಲನೆ ಹೇಳಿದ. ದಿನಗಳುರುಳಿದವು. ಡಾಕ್ಟರರು ಇವನ ಸ್ಥಿತಿಯು ಚಿಂತಾಜನಕವಾಗಿದೆ ಎಂದು ತಿಳಿಸಿದರು. ಒಂದು ದಿನ ಜ್ವರದಲ್ಲಿ ಫತಿಕನು ಹುಂ! ಮೂರು ಆಳು ಉದ್ದ, ಹುಂ! ನಾಲ್ಕು ಆಳು ಉದ್ದ ಹುಂ! ಎನ್ನ ತೊಡಗಿದ ನದಿಯಲ್ಲಿ ಅಂಬಿಗರು ಡೋಣಿ ಹಾಯಿಸುವ ಸಮಯದಲ್ಲಿ ನೀರಿನ ಆಳವನ್ನು ಗುರ್ತಿಸುವಾಗ ಕೂಗುತ್ತಿದ್ದುದನ್ನು ಫತಿಕನು ಕೇಳಿದ್ದನು. ಆದರೆ ಈಗ ಅವನು ಸ್ವತಃ ತಾನೇ ಆಳಕೆ ಇಲ್ಲದಷ್ಟು ಆಳದ ಸಮುದ್ರಕ್ಕೆ ಹೊರಟಿದ್ದನು. ಕೊನೆಗೊಮ್ಮೆ ಫತಿಕನ ತಾಯಿಯು ಚಕ್ರವಾತ (ಸುಳಿಗಾಳಿ) ದಂತೆ ಕೋಣೆಯೊಳಗೆ ನುಗ್ಗಿ ಫತಿಕನನ್ನು ಹೊರಳಾಡಿಸುತ್ತ ದೊಡ್ಡಧ್ವನಿ ತೆಗೆದು ಅಳತೊಡಗಿದಳು.

ಬಿಶಂಬರನು ಅದೆಷ್ಟು ಸಮಾಧಾನ ಹೇಳಿದರೂ ಅವಳು ಮಗನ ಹಾಸಿಗೆಯ ಮೇಲೆ ಬಿದ್ದು "ಫತಿಕಾ! ನನ್ನ ಪ್ರೀತಿಯ ಫತಿಕಾ ನನ್ನ ಪ್ರೀತಿಯ ಮಗುವೇ" ಎಂದೂ ಕೂಗಾಡಿ ಅಳ ಹತ್ತಿದಳು. ಆದರೆ ಅದೇಕೊ ಫತಿಕನು ತನ್ನನರಳುವಿಕೆಯನ್ನು ಆಕ್ಷಣ ಕಡಿಮೆಮಾಡಿದನು ಕೈಗಳನ್ನು ಮೇಲೆ ಕೆಳಗೆ ಬಡಿಯುತ್ತಾ "ಹಾಯ್" ಎಂದನು. ತಾಯಿಯು ಪುನಃ "ಮಗುವೇ" ನನ್ನ ಪ್ರೀಯ ಮಗುವೇ ಎಂದು ಕೂಗ ತೊಡಗಿದಳು. ಫತಿಕನು ಬಹಳ ಸಾವಕಾಶವಾಗಿ ತನ್ನ ತಲೆಯನ್ನು ಹೊರಳಿಸಿ ಯಾರ ಕಡೆಗೂ ನೋಡದೆ "ಅಮ್ಮಾ, ರಜೆಯ ದಿನಗಳು ಬಂದವು. ನಾನು ಮನೆಗೆ ಬರುತ್ತೇನೆ' ಎಂದು ಕ್ಷೀಣವಾಗಿ ಅಂದು ಕಣ್ಣುಮುಚ್ಚಿದನು.

---

ರವೀಂದ್ರರ Hungry Hones & Other stories ದಿಂದ ಆಯ್ದ Home Comming ದ ಸ್ವೈರ ಅನುವಾದ

# ಕವಿತೆ–ಛಂದಸ್ಸು

ಕವಿತೆಗೆ ಛಂದೋ ಬಂಧನವಿರುವದು
　　ಕವಿತೆಯ ನಡೆಗಾಗಿ
ಛಂದೋ ಬಂಧನವೆಂಬದು ಕವಿತೆಗೆ
　　ಬಂಧನವಿಲ್ಲ ತಿಳಿ ॥
ಛಂದೋ ಬಂಧನ ಕವಿತೆಯ ಓಟಕೆ
　　ಎಂದಿಗು ತೊಡಕಲ್ಲ
ಪ್ರೀತಿಯ ಮಾತೆಯ ತೋಳೊಳ ಮಗುವಿಗೆ
　　ಬಂಧನವೆನ್ನುವರೆ?
ಕುದುರೆಯು ನಾಗಾಲೋಟದಿ ನೆಗೆಯುತ
　　ಖುರಪುಟ ಧ್ವನಿಗೈಯ್ಯೇ
ಲಟಲಟ ತದಿಕಿಟ ಖುರಪುಟನಾದವ
　　ಕೇಳುವೆ ಮೈಮರೆತು

ನಾಗಾಲೋಟದ ಪರಿಯನು ಪೇಳ್ವೆಯ
　　ಮಿಗೆ ಬಂಧನವೆಂದೂ?
ಅಂತೆಯೆ ಕವಿತೆಯು ತಿಳಿದಿರು ಮಾತಿನ
　　ಸಂತೆಯದಲ್ಲ ಬರಿದೆ ॥
ಬಯಲಲೊ ಕೊಳಲಲೊ ನಾದವು ಬರುವದು
　　ವಾಯುವು ಸುಳಿದೊಡನೇ
ನಾದ ಕೊಳಲದು ಅಡ್ಡಿಯಗೈವುದು
　　ಎಂದರೆ ಸರಿಯೇನು?
ಕವಿತೆಯು ಮಾತಿನ ನರ್ತನವಯ್ಯ
　　ಕವಿಬರಿ ನರ್ತಕನು
ಛಂದಸ್ಸಿನಲಯ ತಾಳಕೆ ಲೇಖನಿ
　　ಅಂದುಗೆ ಕುಣಿಸುವೆನು

—ಚಿ. ವ. ಜಯತೀರ್ಥ.



# ತಾಯಿ

ಅನು— "ಅನಂತ" ಧಾರವಾಡ.

ಸ್ತ್ರೀವಾಚಕ ಶಬ್ದಗಳಲ್ಲಿ ತಾಯಿ ಎಂಬ ಶಬ್ದವು ಅತಿ ಪೂಜನೀಯವಾದದ್ದು. ತಾಯಿ ಎಂಬ ಭಾವ ಪೂರಿತವಾದ ಶಬ್ದದ ಹಿಂದೆ, ಅನೇಕ ವಿಸ್ತೃತ ಅರ್ಥಗಳು ಕೂಡಿ ಕೊಂಡಿವೆ ಅವು ತ್ರಿಕಾಲಾಬಾಧಿತವಾಗಿವೆ. ಭೂಮಿ ತಾಯಿ, ಹಡೆದ ತಾಯಿ, ಪಡೆದ ತಾಯಿ, ಪಾಲನೆಗೈವದಾಯಿ ಹೀಗೆ, ತಾಯಿಗೆ ಅನೇಕ ನಾಮಗಳಿವೆ. ಆದರೆ ತಾಯಿ ಮಾತ್ರ ಒಬ್ಬಳೆ, ಅವಳ ಕರ್ತವ್ಯಗಳು ಹಲವು. ತಾಯಿಯು ಜಗದ ತುಂಬೆಲ್ಲ ತುಂಬಿ ಕೊಂಡಿರುವಳು. ಅವಳಿಗೆ ಈ ಪರಿಯ ಸ್ಥಾನವನ್ನು ಕೊಡಲು, ಅವಳ ಪರಿಪಾಲನೆಯ, ಪೋಷಣೆಯ ಪರಾಕಷ್ಠೆಯ ಫಲವೇ ಸೈ. ತಾಯಿಯನ್ನು ಹೊಗಳದ ಕವಿಗಳಿಲ್ಲ. ಮಹಾಪುರುಷ ರಿಲ್ಲ. ಗರತಿಯರಿಲ್ಲ, ಎಲ್ಲರೂ ತಾಯಿಯ ಸ್ತುತಿಯನ್ನು ಮಾಡಿರುವರು.

ಹೆಂಗಸರಲ್ಲಿ ಎರಡುವಿಧ ಎಂದು ಪಂಡಿತರು ಹೇಳುವರು. ಅವರಲ್ಲಿ ಪ್ರಧಾನಪಾತ್ರ ತಾಯಿಯದು, ತಾಯಿಯು ಜಲದಾನ ಮಾಡುವಳು, ಫಲದಾನ ಮಾಡುವಳು, ಊರ್ಧ್ವಲೋಕದಿಂದ ತನ್ನನ್ನು ಪ್ರವಹಿಸುವಳು....ಎಂದು ಕವಿ ರವೀಂದ್ರರು ಒಂದೆ ಡೆಗೆ ಹೇಳಿದ್ದಾರೆ. ಆದಕ್ಕಾಗಿಯೇ ತಾಯಿಯೆಂದರೆ, ವರ್ಷ ಋತುವಿದ್ದಂತೆ. ಎಲ್ಲ ರೀತಿಯಿಂದಲೂ ಆನಂದ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಒಂದು ಅಚಲವಾದ ಅಗ್ಗಳಿ ತೆಯ ಸ್ಥಾನವನ್ನು ಗಳಿಸಿಕೊಂಡಂಥ ಮಹಾಕವಿ ಕುವೆಂಪು ಅವರು, ಅಮ್ಮಾ ನನಗೆ ಚಿನ್ನದ ಒಡವೆಗಳು ಬೇಡ, ಬಣ್ಣದ ಬಟ್ಟೆಗಳೂ ಬೇಡ, ಆದರಿಂದ ನನಗೆ ಆನಂದವಿಲ್ಲ ನೋಡುವ ವರಿಗೆ ಆನಂದ, ಆನಂದ ನಿನ್ನೀತಾಯ್ತನ. ನನ್ನೀ ಶಿಶುತನ ಎರಡೇ ಪರಸ್ಪರ ಆನಂದವೀಯುವ ಒಡವೆಗಳು ಎಂದು ಹಾಡಿ ದ್ದಾರೆ

ಎಲ್ಲ ಪ್ರಾಣಿಮಾತ್ರಗಳಿಗೂ ಜನನದಿಂದ ಮರಣದ ವರೆ ಗಿನ ಅವಧಿಯಲ್ಲಿ ತಾಯಿ ಬೇಕು. ಅಂದರೇನೇ ಅದು ಬದುಕು, ಬಾಳುವೆ. ತಾಯಿಯಿಂದ ಹುಟ್ಟಿ ಅವಳತೊಡೆಯ ಮೇಲೆಯೇ ಶಿಸು ಅವಸ್ಥೆಯನ್ನು ಕಳೆಯುವೆವು. ಆದರಂತೆ ಮುಂದಿನ ಅವಸ್ಥೆಯಾದ ಬಾಲ್ಯ ಅಥವಾ ಓದುವ ಕಾಲದಲ್ಲಿಯೂ ಕೂಡ ತಾಯಿ ಬೇಕು ಇಲ್ಲದಿದ್ದರೆ ಆ ಓದು ವ್ಯರ್ಥ.

ಮನೆಯ ಮೊದಲು ಪಾಠಶಾಲೆ,
ಜನನಿತಾನೆ ಮೊದಲು ಗುರುವು
ಜನನಿಯಿಂದ ಪಾಠಕಲಿತ ಜನರು ಧನ್ಯರು.

ಎಂದು ಒಬ್ಬ ಕವಿಗಳು ಅಂದಿದ್ದಾರೆ. ಅದು ಯೋಗ್ಯವೂ ಇದೆ. ಬಾಳುವೆಯನ್ನು ಹಾಳು ಮಾಡದಂತಹ ವಿದ್ಯೆಯು ಕೈ ವಶವಾಗಬೇಕಾದರೆ ತಾಯಿಯ ಪ್ರಶಸ್ತಿ ಪತ್ರಿಕೆ ಆವಶ್ಯಕ ಅವಳ ಶಿಕ್ಷಣವು ನೂರು ಒಳ್ಳೆಯ ಗುರುಗಳು ಕಲಿಸಿದ ವಿದ್ಯೆ ಗಿಂತ, ಜೀವಂತವಿದ್ಯೆ.

ತಾಯಿಗೆ ಬೌದ್ಧಿಕ ದೃಷ್ಟಿಯಲ್ಲಿ ಇದ್ದ ಸ್ಥಾನಕ್ಕಿಂತ ಹೆಚ್ಚಿನ ಸ್ಥಾನವು ಹೆಣ್ಣು ಮಕ್ಕಳ ದೃಷ್ಟಿಕೋನದಲ್ಲಿದೆ. ಇದರ ಪ್ರತೀಕವಾಗಿಯೇ ಗರತಿಯರ ಹಾಡುಗಳು ನಿರ್ಮಾಣವಾದವು

ಹೆಣ್ಣು ಮಕ್ಕಳುಗಳು ತಮ್ಮ ಜೀವನದಲ್ಲಿ ಹೇಗೆ ಜೀವ ತುಂಬಿಕೊಳ್ಳಬೇಕು. ಪರರ ಮನೆಯಲ್ಲಿ ಹೇಗೆ ನಡೆದುಕೊಳ್ಳ ಬೇಕು ? ಮುಂತಾದ ವಿಷಯಗಳಿಂದ ತಾಯಿಯು ಗರತಿಯ ರಿಗೆ ಅತಿ ಸಾಮಿಪ್ಯಳಾಗಿದ್ದಾಳೆ. ತತ್‌ಪರಿಣಾಮವಾಗಿ ಅವರು ತಮ್ಮ ಹಾಡುಗಳಲ್ಲಿ ತಾಯಿಯ ಮಹಿಮೆಯನ್ನು ರೂಪಿಸಿ ದ್ದಾರೆ. ಆದರಿಂದ ಆ ಹಾಡುಗಳಿಗೆ ಅಷ್ಟು ಬೆಲೆ.

ಬಂಧು-ಬಳಗದಲ್ಲಿ ತಾಯಿಯಷ್ಟು ಹಿರಿಯರಾರಿಲ್ಲ ಅವಳಷ್ಟು ಯೋಗ್ಯತೆಯುಳ್ಳವರಿಲ್ಲ, ಎಂಬುದಕ್ಕೆ ಕೆಳಗಿನ ಪದ್ಯವು ನಿದರ್ಶನ.

ಯಾರು ಇದ್ದರು ನನ್ನ ತಾಯವ್ವ ನ್ಹೋಲರ !
ಸಾವಿರ ಕೊಳ್ಳಿ ಒಲಿಯಾಗ। ಇದ್ದರ।
ಜ್ಯೋತಿ ನಿನ್ಹ್ಯಾರು ಹೋಲರ ॥

ಗರತಿಯರಿಗೆ, ತಾಯಿ ಎಂದರೆ ಒಂದು ಬಾಳಜ್ಯೋತಿ ಅದರಿಂದಲೇ ಅವರಿಗೆ ಪ್ರಕಾಶ ದೊರೆತು, ಬಾಳ್ವೆ ಸುಲಲಿತವಾ ಗುವದು. ಉಳಿದ ಬಂಧುಗಳೆಂದರೆ, ಕೊಳ್ಳಿಗಳ ಸಮಾನ ಅವರಿಂದ ಕೊಳ್ಳಿಯಷ್ಟೇ ಉಪಯೋಗ. ಕೊಳ್ಳಿಗಳ

ಜ್ಯೋತಿಯ ಉದಾರತೆಯು ಎಂದಿಗೂ ಬಾರದು. ತಾಯಿಯ ಸ್ಥಾನಮಾನ ಅವಳದೇ. ಹೃದಯದ ಪ್ರಣತಿಯನ್ನು ಉದ್ದೀಪನಗೊಳಿಸುವವಳು ಅವಳೇ.

ತಾಯಿಯು ಅಮೂಲ್ಯವಾದ ವಸ್ತು. ಉಳಿದ ವಸ್ತುಗಳು ಕಳೆದರೆ ಅಥವಾ ನಾಶ ಹೊಂದಿದರೆ, ತಿರುಗಿ ಪಡೆಯಬಹುದು. ಆದಕ್ಕಾಗಿ ಶ್ರಮಪಡಬಹುದು. ಒಮ್ಮೆ ಪರದೇಶಿಯಾದವರಿಗೆ ತಾಯಿ ಎಲ್ಲಿ ದೊರೆವಳು ? ಇದು ಅಸಾಧ್ಯವಾದದ್ದು, ಅಘಟಿತವಾದದ್ದು.

ಉಂಗೂರು ಉಡದಾರ ಮುರಿದರ ಮಾಡಿಸಬಹುದು ।
ಮಡದಿ ಸತ್ತರ ತರಬಹುದು । ಹಡೆದಂಥ ।
ತಂದೆ ತಾಯಿ ಎಲ್ಲಿ ಸಿಕ್ಕ್ಯಾರ ॥

ಬಂಗಾರದಿಂದ ನಾನಾತರದ ಆಭರಣಗಳನ್ನು ಅವಶ್ಯವೆನಿಸಿದಾಗ ಮಾಡಿಸಲು ಬರುವದು. ಒಂದು ಆಭರಣವನ್ನು ಕರಗಿಸಿ, ಹೊಸ ಆಭರಣವನ್ನು ಪುನಃ ಮಾಡಿಸಬಹುದು. ಮಡದಿ ಮಡಿದರೆ, ಮತ್ತೊಬ್ಬಳನ್ನು ಬಾಳಸಂಗಾತಿಯಾಗಿ ವರಿಸಬಹುದು ಆದರೆ ತಂದೆ ತಾಯಿ ?

ಹಿಪ್ಪಿ ಹೂವಿಗಾಗಿ ಹೆತ್ತ ತಾಯನ ಕೊಂದು ।
ಮತ್ತ ಕೋಗಿಲ ಮರನೇರಿ । ಕೂಗಿದರ ।
ಹೆತ್ತವ್ವ ಎಲ್ಲಿ ದೊರೆವಳು ॥

ತಾಯಿ ಇರುವಾಗ ಅವಳ ಬೆಲೆಯನ್ನು ಅರಿಯದೆ ಅವಳು ನಮಗಾಗಿ ಮಾಡಿದ ಬೆಟ್ಟದಷ್ಟು ಕಷ್ಟವನ್ನು ಮನ್ನಿಸದೆ, ಹುಂಬರಾಗಿ ಅಂಡಲೆದರೆ ಕೊನೆಗೆ ಆ ದುಡುಕಿನ ಫಲವಾಗಿ ಮಿಡುಕ ಬೇಕಾಗುತ್ತದೆ.

ಮಹಾತಾಪಸಿ ವಿದ್ಯಾರಣ್ಯರು ವಿಜಯನಗರದ ಸಾಮ್ರಾಜ್ಯವನ್ನು ಕಟ್ಟುವಾಗ ಕನಕ ವೃಷ್ಟಿಯಾದದು ಭೂವನೇಶ್ವರಿಯ ಕೃಪೆಯಿಂದ.

ಮಹಾಪುರುಷನಾದ ಶಿವಾಜಿಯು ಧರ್ಮರಾಜ್ಯವನ್ನು ಕಟ್ಟಿದ್ದು ಜೀಜಾಮಾತೆಯ ಶಿಕ್ಷಣದಿಂದ ಹಾಗು ಅಂಬಾ ಭವಾನಿಯ ಕೃಪಾ ಛತ್ರದಿಂದ.

— ಸಿರಿಗನ್ನಡಂಗೆಲ್ಗೆ ಹಿರಿಗನ್ನಡಂಗೆಲ್ಗೆ —
ಜಯತು ಜೈ ಭೂವನೇಶ್ವರಿ

ಹೀಗೆ ತಾಯಿಯು ಜಗದಲ್ಲಿಯ ಮಹಾಕಾರ್ಯಗಳಿಗೆ ಕಾರಣೀಭೂತಳಾಗಿದ್ದಾಳೆ.

---

೮ನೇ ಪುಟದಿಂದ ಬಂದುದು.

" ದತ್ತಕ ವಿಧಾನವು ಶಿವಲಿಂಗರುದ್ರ ಸರ್ಜರು ಜೀವಿಸಿರುವಾಗ ಆಗಿಲ್ಲ. ಆದಕ್ಕಾಗಿ ಅದು ಸುಳ್ಳು. ವಿಧವೆ ಚೆನ್ನಮ್ಮನಿಗಾಗಲಿ ಅವಳ ಸೊಸೆಗಾಗಲಿ ದತ್ತಕ ತೆಗೆದುಕೊಳ್ಳಲು ಬರಲಾರದು."

ಚೆನ್ನಮ್ಮ— ( ಕೋಪನಿಟ್ಟುಸಿರುಗಳಿಂದ ) ಅಂತೂ ಕೊನೆಗೆ ಘಾತವಾಯ್ತು. ಕಂಪನಿಯವರ ಕುಟಿಲನೀತಿಗೆ ಕಿತ್ತೂರು ಆಹುತಿಯಾಯ್ತು !…………ಏನೇ ಆಗಲಿ. ಜೀವಿಸಿರುವವರೆಗೆ ನಾನು ಕಿತ್ತೂರಿನ ನನ್ನ ಮಕ್ಕಳನ್ನು ಆ ಕೆಂಪು ಮೋತಿಯವರ ಕೈಗೆ ಒಪ್ಪಿಸಲಾರೆ……ಇನ್ನು ನಮ್ಮವರೇ ವಿಶ್ವಾಸಘಾತ ಮಾಡಿದರೆ…………ನಮ್ಮದೇ ವಿಶ್ವಾಸಘಾತ ಮಾಡಿದರೆ !

ನಿವೇದಕ— ಚೆನ್ನಮ್ಮನ ಪ್ರತಿಜ್ಞೆಯನ್ನು ಕೇಳಿ ಥ್ಯಾಕರೇ ತನ್ನ ದಂಡನ್ನು ಕಳಿಸಿಕೊಟ್ಟನು. ಪುಣೆಯಲ್ಲಿದ್ದ ಬ್ರಿ. ಪ್ರತಿನಿಧಿಯ ಕಡೆಗೆ ಕಿತ್ತೂರಿನಿಂದ ಸಂಧಾನಕ್ಕಾಗಿ ವಕೀಲನನ್ನು ಕಳಿಸಿಯೂ ಪ್ರಯೋಜನವಾಗಲಿಲ್ಲ. ಥ್ಯಾಕರೇ ಸಾಹೇಬನ ಸಿಪಾಯಿಗಳು ಕಿತ್ತೂರಿನ ಖಜಾನೆಯನ್ನು ಕಾಯಲು ಬಂದರು. ಊರ ಶಾಂತತೆಯ ರಕ್ಷಣೆಗಾಗಿ ಥ್ಯಾಕರೆ ಜನರಿಂದ ಜಾಮೀನು ಬೇಡಿದರಂತೆ. ಚೆನ್ನಮ್ಮನ ಆಜ್ಞೆಯಿಲ್ಲದೆ ಕಿತ್ತೂರಲ್ಲಿ ಕಡ್ಡಿಯೂ ಚಲಿಸದು ಎಂದು ಜನ ಥ್ಯಾಕರೇಸಾಹೇಬನಿಗೆ ತಿಳಿಸಿದರು.

ಅಕ್ಟೋಬರ ೨೨ನೆಯ ತಾರೀಖು ಚೆನ್ನಮ್ಮ ಕೋಟೆಯ ಬಾಗಿಲಗಳನ್ನಿಕ್ಕಿ ಭದ್ರವಾಗಿರಿಸಿ ಸುಸಜ್ಜಿತಳಾಗಿದ್ದಾಳೆ. ಥ್ಯಾಕರೇ ಸಾಹೇಬರ ದಂಡು ಹೊರಗೆ ಕಾದಿದೆ. ದೂತನು ಬಂದು ಚೆನ್ನಮ್ಮನಿಗೆ ಸಂದೇಶವನ್ನು ತಲುಪಿಸುತ್ತಾನೆ.

ದೂತ— ಮಹಾರಾಣಿಯವರಿಗೆ ಜಯವಾಗಲಿ. ಥ್ಯಾಕರೇ ಸಾಹೇಬರು ತಮ್ಮನ್ನು ಕಾಣಬೇಕೆಂದಿರುವರಂತೆ.

ಚೆನ್ನಮ್ಮ— (ಸ್ವಗತ) ಕಂಪನಿಯವರ ಕುಹಕವನ್ನು ತಿಳಿಯುವದು ಸಾಧ್ಯವೇ ಇಲ್ಲ. ಮತ್ತಾವ ಮೋಸ ನನಗಾಗಿ, ರಾಜ್ಯಕ್ಕಾಗಿ ಕಾದಿದೆಯೋ ! ಶಿವಾಜಿ ಅಫಝುಲಖಾನರ ಸಂದರ್ಶನವನ್ನು ಇತಿಹಾಸ ಹೇಳುತ್ತಿರುವಾಗ ಮತ್ತೆ ಇದಕ್ಕೆ ಒಪ್ಪಲೇ ? ಈ ಸಂದರ್ಶನದಲ್ಲಿಯೇ ರಾಜ್ಯದ ಆಗುಹೋಗುಗಳು ಅಡಗಿದ್ದರೆ! ಆದುದಾಗಲಿ. (ಪ್ರಕಾಶವಾಗಿ) ರಾಣಿಯವರಿಗೆ ನೋಡಲು ಸಮಯವಿಲ್ಲೆಂದು ತಿಳಿಸು.

ದೂತ— ತಾಯಿಯವರ ಅಪ್ಪಣೆ (ನಿಷ್ಕ್ರಮಣ)

(ಹಿನ್ನೆಲೆಯಲ್ಲಿ ಸೈನ್ಯದ ಗಜಬಿಜಿ) " ೨೦ ನಿಮಿಷದಲ್ಲಿ ಕೋಟೆಯ ಬಾಗಿಲನ್ನು ತೆಗೆಯದಿದ್ದರೆ, ಕೋಟೆಯನ್ನೊಡೆದು

ಒಳಸೇರುತ್ತೇವೆ," ಎಂಬ ಇಂಗ್ಲೀಷ ಸೈನಿಕರ ಕೂಗು ಕೋಟೆಯ ಬಾಗಿಲು ತೆಗೆಯಲಿಲ್ಲ. ಇಂಗ್ಲೀಷರ ತೋಫಿನಿಂದ ಕೋಟೆಯ ಬಾಗಿಲು ಒಡೆದು ಪುಡಿಯಾಯಿತು. ಬ್ರಿಟಿಷ ಮುಂದಳಕ್ಕೂ ಕಿತ್ತೂರಿನ ಸೈನಿಕರಿಗೂ, ಯುದ್ಧವಾಗಿ ಕಿತ್ತೂರಿನ ಸೈನಿಕರು ಬ್ರಿಟಿಷ ದಳವನ್ನು ಇಬ್ಭಾಗಿಸಿ ಹಿಂದ ಕ್ಕಟ್ಟಿದನು. ಥ್ಯಾಕರೇ ಸಾಹೇಬನೇ ಕುದುರೆಯನ್ನೇರಿ ಮುನ್ನುಗ್ಗಿದ. ಬಿಚ್ಚುಗತ್ತಿ ಹಿಡಿದ ಚೆನ್ನಮ್ಮ ರಾಣಿ ಅಶ್ವಾರೂಢಳಾಗಿ ಹೊರಬಂದಳು. ರಾಣಿಯ ವೈಗಾವಲಿಗಿದ್ದ ಅಮಟೂರ ಬಾಳಪ್ಪ ಕೂಗಿಕೊಂಡ.)

ಬಾಳಪ — ತಾಯೀ ತಾಯೀ ವೈರಿಗಳ ತುಬಾಕಿಗಳು ನಮ್ಮ ಕಡೆಗೇ ಗುರಿಯಾಗಿವೆ. ತಡಬೇಡ ತಾಯೀ ಅಪ್ಪಣೆ ಕೊಡಿರಿ.

ಚೆನ್ನಮ್ಮ— (ಆವೇಶದಿಂದ) ನುಗ್ಗು, ಮುನ್ನುಗ್ಗು, ವೀರನಾಗಿ ಹೋರಾಡಿ ಮಡಿ.

ನಿವೇದಕ— ಬಂದೂಕಿನ ಗುಂಡು ಹಾರಿತು. ಥ್ಯಾಕರೇ ಸಾಹೇಬನ ರುಂಡ ಕೆಳಕ್ಕುರುಳಿತು. ವಿಶ್ವಾಸ ಘಾತಕರು ಆನೆಯ ಕಾಲಿಗೆ ಸಿಕ್ಕು ಚಿಬ್ಬಿಯಾದನು. ಕೈಸೆರೆಯಾದ ಬ್ರಿಟಿಷ ಮಕ್ಕಳನ್ನು ಕಿತ್ತೂರಿನ ಸೈನಿಕರು ತಂದು ರಾಣಿಯ ಎದುರು ನಿಲ್ಲಿಸಿದರು.

ಚೆನ್ನಮ್ಮ—(ವ್ಯಂಗ್ಯವಾಗಿ) ಏನು ನಿಮ್ಮ ಶೌರ್ಯ ! ಕಿತ್ತೂರಿನ ಸೈನಿಕರ ಶೌರ್ಯ ; ಮಕ್ಕಳನ್ನು ಸೆರೆಹಿಡಿಯಲು ಉಪಯೋಗಿಸಲ್ಪಟ್ಟಿತೇ ! ಹೋಗಿರಿ " ನಿಮ್ಮ ಮಕ್ಕಳು ಇಲ್ಲಿ ಸುಖವಾಗಿವೆ ಎಂದು ಅವರ ತಾಯಿತಂದೆಗಳಿಗೆ ಸುದ್ದಿ ಮುಟ್ಟಿಸಿರಿ. ಆ ಮಕ್ಕಳಿಗೆ ಏನೂ ತೊಂದರೆಯಾಗದಂತೆ ವ್ಯವಸ್ಥೆ ಮಾಡಿರಿ."

ನಿವೇದಕ— ಡಿಸೆಂಬರ ೩ನೆಯ ದಿನ ಕಿತ್ತೂರು ಕದನದ ಕಣವಾಯ್ತು, ಕಮಿಶನರ್ ಚಾಪ್ಲಿನ್ ದೊರೆ ಕಿಡಿಕಿಡಿಯಾಗಿ, ನುರಿತ ಸೈನ್ಯ ಬಲದೊಡನೆ ಏರಿಬಂದನು. ರಾಣಿ ಚೆನ್ನಮ್ಮ ಸೈನಿಕರನ್ನು ಹುರಿದುಂಬಿಸಿದಳು.

ಚೆನ್ನಮ್ಮ—ಕಿತ್ತೂರಿನ ಪ್ರಜೆಗಳೇ, ರಾಜ್ಯದ ನಿಷ್ಠಾವಂತ ಸೈನಿಕರೇ, ಮಹಾಸಾಮಂತರೇ, ಸೇನಾಧಿಪತಿಗಳೇ ಕಿತ್ತೂರಿನ ಗೌರವದ ರಕ್ಷಣೆಯಭಾರ ನಿಮ್ಮದಿದೆ. ಸ್ವಾಭಿಮಾನ, ಸ್ವಾತಂತ್ರ್ಯಕ್ಕಿಂತ ಮಿಗಿಲಾದ ಗೌರವ ಯಾವುದಿದೆ ? ಕನ್ನಡ ನಾಡಿನ ಧವಲ ಕೀರ್ತಿಗೆ ಕಲಂಕ ತಟ್ಟದಂತೆ ನೋಡಿಕೊಳ್ಳುವ ಕಲಿತನ ನಿಮ್ಮಲ್ಲಡಗಿದೆ. ಶಿರಿಗಳಿಂದ ಹೊರಬೀಳುವ ಹರಿತಾದ ಖಡ್ಗಗಳು ಅರಿಗಳ ಶಿರಗಳನ್ನು ಪರಿಪರಿಹೊಟ್ಟಲಿ ! ಜಯಲಕ್ಷ್ಮಿ ನಿಮ್ಮವಳು : ಪಾರತಂತ್ರ್ಯದ ಕಲಂಕ ನಮ್ಮ ನಾಡಿಗೆ ತಟ್ಟದಿರಲಿ. ವೀರರೇ, ಭುಜಬಲ ಪರಾಕ್ರಮಿಗಳೇ ಏಳಿರಿ ! ನುಗ್ಗಿರಿ !! ಮುನ್ನುಗ್ಗಿರಿ !!!

(ಚೆನ್ನಮ್ಮ ರಾಣಿಯವರಿಗೆ ಜಯವಾಗಲಿ, 'ಜಯಭುವನೇಶ್ವರಿ ' ಕೂಗು ರಣರಂಗವನ್ನೆಲ್ಲ ವ್ಯಾಪಿಸಿತು.)

ನಿವೇದಕ— ಅಕ್ಷಯ ಕ್ಷಾತ್ರತೇಜಸ್ಸಿನಿಂದ ಬೆಳಗುತ್ತಿದ್ದ ಕಿತ್ತೂರಿನ ಅಶ್ವಾರೂಢಳಾಗಿ ಕತ್ತಿಯನ್ನು ಬರೆಯಿಂದ ಕಿದು ರಣರಂಗದಲ್ಲಿ ಧುಮುಕಿದಳು.

(ಹಿನ್ನೆಲೆಯಲ್ಲಿ ಖಡ್ಗಗಳ ತಾಕಲಾಟ ಗಜಿಬಿಜಿ)

"ಚಂಡಿಯೋ, ಚಾಡಿಯೋ, ಮಾರಿಯೋ, ಮಸಣಿಯೋ ! ಖಂಡಿತ ಮಾನವಳಿವಳಲ್ಲ ಗಂಡುಗಲಿಗಳ ಮಿಾರಿ ರುಂಡವ ತರಿವಳು, ಮಹಾಮಾಯಿಯಲ್ಲದೆ ಬ್ಯಾರಲ್ಲ ! ಪುಂಡ ರಕ್ಕಸರ ಹಿಂಡು ಮುರಿದ ಚಾಮುಂಡಿಯೆ ಈಕೆಯು ಸುಳ್ಳಲ್ಲ ! ಚಂಡ ಪ್ರಚಂಡರ ತಂಡವೆ ಕುಂದಿತು. ಎಂಬುವ ಶಬ್ದವೆ ರಣವೆಲ್ಲ"

ನಿವೇದಕ— ಬಿಚ್ಚುಗತ್ತಿಯಿಂದ ಹೋರಾಡುತ್ತಿದ್ದ ಚೆನ್ನಮ್ಮ ಗಕ್ಕನೆ ನಿಂತಳು. ತೋಫಿನ ದಳದವರು ಉಪಾಯಗಾಣದಾದರು. ಮದ್ದಿನಲ್ಲಿ ಬೆರಕೆಯಾಗಿತ್ತು. ಕದನದ ಕಣ ರಕ್ತದ ಮಡುವಾಯ್ತು.

ಚೆನ್ನಮ್ಮ— ( ನಿಟ್ಟುಸಿರಿಟ್ಟಳು ) ಘಾತವಾಯ್ತು ! ನಮ್ಮವರೇ... ನಮ್ಮವರೇ ಘಾತಮಾಡಿದರು !

ನಿವೇದಕ— ಚೆನ್ನಮ್ಮ ನೊಂದುಕೊಂಡಳು. ಕೂಡಲೆ ಜರಿಗಂಡಿಯಿಂದ ಪಾರಾಗಿ ಸಂಗೊಳ್ಳಿಯ ಮಾರ್ಗವಾಗಿ ಧಾವಿಸಿದಳು. ಬ್ರಿಟಿಷ ಸೈನಿಕರು ಬೆನ್ನತ್ತಿ ಮುತ್ತಿದರು. ಕಿತ್ತೂರಿನ ರಾಣಿ ಸೆರೆ ಸಿಕ್ಕಳು. ಕೋಟೆ ಬಿದ್ದಿತು. ನಾಡು ವಶವಾಯಿತು ! ಆರು ವರ್ಷಗಳ ಕಾಲ ಬೈಲಹೊಂಗಲದ ಕೋಟೆಯಲ್ಲಿ ಸ್ಥಾನ ಬದ್ಧತೆಯಲ್ಲಿದ್ದ ಕಿತ್ತೂರಿನ ರಾಣಿ ಸ್ವಾಂತತ್ರ್ಯ ಸ್ವಪ್ನವನ್ನು ಕಾಣುತ್ತ ಮಾಡಿದ ಗುಪ್ತ ಪ್ರಯತ್ನವೂ ನಿಷ್ಫಲವಾಯ್ತು. ಕಿತ್ತೂರಿನ ಸ್ವಾತಂತ್ರ್ಯವನ್ನು ಪುನಃ ಪಡೆಯಲು ಹೋರಾಡಿದ ರಾಯನಾಯಕನೂ ಸೆರೆಸಿಕ್ಕ. ಕಿತ್ತೂರಿನ ಸ್ವಾತಂತ್ರ್ಯ ಸಂಪತ್ತು ಹೇಳ ಹೆಸರಿಲ್ಲದಾಯ್ತು. ಕಿತ್ತೂರಿನ ಸ್ವಾತಂತ್ರ್ಯ ಸಮರಕ್ಕೆ ಸಾಕ್ಷಿಯಾದ ಮಲಪ್ರಭೆ ಇನ್ನೂ ಹರಿಯುತ್ತಿದೆ. ಚೆನ್ನಮ್ಮನ ಶೌರ್ಯದ ಕುರುಹವ ಥ್ಯಾಕರೇ ಸಾಹೇಬನ ಗೋರಿ ಧಾರವಾಡದಲ್ಲಿ ಇನ್ನೂ ಎತ್ತರವಾಗಿ ನಿಂತಿದೆ. ಅದರ ಸುತ್ತು ರಾಣಿ ಚೆನ್ನಮ್ಮನ ತೋಟ ಬೆಳೆದು ಮುತ್ತಿದೆ.

---

* ಅ. ಭಾ. ಆಕಾಶವಾಣಿ ಧಾರವಾಡದಿಂದ ಬಿತ್ತರಗೊಂಡುದು.

# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ, ಅಕ್ಕನ ಪೆಟ್ಟಿಗೆ ' ಗೆ ಓಲೆಗಳನ್ನು ಕಳುಹಿಸಬಹುದು; ಮತ್ತು ನೀವೇ ಬರೆದ ಸಣ್ಣ ಕತೆ, ಕವನ, ಆಟ ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ. ನೀವೇ ತೆಗೆದ ಅಂದವಾದ ಚಿತ್ರವಿದ್ದರೆ ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು ' ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲಾ ಬರೆದು, ಪಾಕೇಟಿನಲ್ಲಿ ಹಾಕಿ, ಕಳಿಸಿಬಿಡಿ. ' ಅಕ್ಕನ ಪೆಟ್ಟಿಗೆ'ಗೆ ಈಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರುವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರದ (ಬ್ಲಾಕ) ಕಳಿಸಿದರೆ,ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದ ಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

**ಅಕ್ಕನ ಪೆಟ್ಟಿಗೆ**

**ವೀರಮಾತಾ ಕಾರ್ಯಾಲಯ,**

ವನಿತಾಸೇವಾ ಸಮಾಜ ಧಾರವಾಡ.

**ಧಾರವಾಡ.**

**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು ..................................................

ವಯಸ್ಸು ಮತ್ತು ಓದುತ್ತಿರುವ ಶರಗತಿ..................................................

ಅಲ್ಪ ಪರಿಚಯ..................................................

ಪೂರ್ಣ ವಿಳಾಸ..................................................

..................................................(ಮನೆ ನಂಬರ ಸಹಿತ)..................

೨ ಆಣೆ ಸದಸ್ಯತ್ವದ ಫೀಯನ್ನು ಕೊಟ್ಟು ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು ಇಂದಿನಿಂದ ನಾನು ಸದಸ್ಯನಾ/ಳಾಗಿದ್ದೇನೆ.

ತಾರೀಖು ..........  ಸಹಿ

**ಈ ತಿಂಗಳ ಹೊಸ ಸದಸ್ಯರು—**

೧. ಪುಂಡಲೀಕ ಅ ಕೊಡಕೊಳ್ಳುವರ ಹಾವೇರಿ, ವಯಸ್ಸು ೧೫ ವರ್ಗ ಇಂಗ್ಲಿಷ್ ೪, ಪರಿಚಯುವನ್ನೇನೂ ಹೆಚ್ಚಿಗೆ ತಿಳಿಸಿಲ್ಲ.

೨. ಪ್ರಭಾಕರ ಹೆಗಡೆ ದೊಡ್ನಳ್ಳಿ, ವಯಸ್ಸು ೮, ವರ್ಗ ಕನ್ನಡ ೪. ಓದಿನಲ್ಲಿ ಆಸಕ್ತಿ, ತನ್ನ ಹಳ್ಳಿಯಲ್ಲಿ ಅಭ್ಯಾಸವು ಸರಿಯಾಗಿ ಆಗುವದಿಲ್ಲವೆಂದು ಧಾರವಾಡದಲ್ಲಿರುವ ತನ್ನ ದೊಡ್ಡಮ್ಮನ ಮನೆಗೆ ಬಂದಿದ್ದಾನೆ ಈ ವಯಸ್ಸಿನಲ್ಲೇ ! ಇದರ ಮೇಲಿಂದ ಅಕ್ಕನಪೆಟ್ಟಿಗೆಯ ಸದಸ್ಯರಿಗೆಲ್ಲ ಇವನ ಓದಿನ ಬಗ್ಗೆ ಇರುವ ಆಸಕ್ತಿ ತಿಳಿಯಬಹುದು.

೩. ಚಂದ್ರಕಲಾ ಗಂಗಾವತಿ ವರ್ಷ ೭, ವರ್ಗ ೨ ಇವಳಿಗಾದರೂ ಓದಿನಲ್ಲಿ ಆಸಕ್ತಿ. ಆದರೆ ಓದಿಗಿಂತ ಚೇಷ್ಟೆಯ ಕಡೆಗೆ ಹೆಚ್ಚು ಆಸಕ್ತಿ ಇರುವ ಮೂಲಕ ಓದು ಅಷ್ಟಾಗಿ ತೃಪ್ತಿಕರವಾಗಿಲ್ಲವಂತೆ.

೪. ಸುಮನ್ ಆ. ಭೇಂಡೆ ಮುಂಬಯಿ ವರ್ಷ ೫, ವರ್ಗ ಶಾಲೆಗೆ ಹೋಗುವ ವಿಚಾರವೇ ಇಲ್ಲ. ಸ್ವತಃ ನೃತ್ಯ ಮಾಡುವ ಹಂಬಲವಿದ್ದರೂ ಮಾಡಲು ಬಲು ನಾಚಿಗೆಯಂತೆ. ಹಾಗೆಂದು ತಾನೇ ತನ್ನದೇ ಆದ ಭಾಷೆಯಲ್ಲಿ ಅಕ್ಕನಿಗೆ ತಿಳಿಸಿದ್ದಾಳೆ ಈ ಮುದ್ದು ಹುಡುಗಿ. ಆದರೆ ನಡೆದಾಡುವಾಗ ಮಾತಾಡುವಾಗ ಸಹ ನೃತ್ಯ ಭಂಗಿಯಲ್ಲೇ ಎಲ್ಲವನ್ನೂ ಮಾಡುತ್ತಾಳೆ.

೫. ಕು. ಮೋಹನ ಭಟ್ಟ, ವರ್ಷ ೫, ವರ್ಗ— ಬಾಲವಾಡಿ. ಈಗಲೇ ಅ, ಆ, ಇ, ಈ ಚನ್ನಾಗಿ ಬರೆಯುತ್ತಾನೆ. ಕೋಪ ಬಂದಿತೆಂದರೆ ಅವನು ಓಡಿ ಬಂದು ನೆಲಕ್ಕಪ್ಪಳಿಸಿ, ಕಾಲು ಎರಡೂ ಬದಿಗೆ ಚಾಚಿ, ರಪರಪ ಬಡಿಯುತ್ತಾ ಕೆಂಪಗೆ ಮುಖ ಮಾಡಿ ಅಳುವಾಗ ನೋಡಬೇಕು ಇವನ ಸೌಂದರ್ಯ. ಅದೇ ಗಳಿಗೆಯಲ್ಲೇ ಹಿರಿಯ ಹುಡುಗಿಯರು ಗೇಲಿ ಮಾಡಿ ಅವನಿಗೆ ನಗೆ ಬರುವಂತೆ ಚೇಷ್ಟೆ ಮಾಡಿದಲ್ಲಿ, ಬಾಯಿಯಲ್ಲೇ ನಗುವಾಗ ನೋಡಬೇಕು ಇವನ ಬಿನ್ನಾಣ. ಇವೆಲ್ಲವನ್ನೂ ಬರೆಯೆಂದು ನಿನ್ನೆ ತಾನೇ ನನ್ನ ಮುಂದೆ ಬಂದು ಹೇಳಿದ್ದಾನೆ. ಈ ಪುಟ್ಟ ಭೋಟು ಭಟ್ಟ.

---

**ಸದಸ್ಯರ ಪತ್ರಗಳಿಗೆ ಉತ್ತರ—**

ಪ್ರಿಯ ಸೋದರ ಸೋದರಿಯರೇ,

ಈ ಎರಡು ಮೂರು ತಿಂಗಳುಗಳಿಂದ ಕೆಲವು ಅನಿವಾರ ಅಡೆತಡೆಗಳ ಮೂಲಕ ವೀರಮಾತೆಯು ನಿಮ್ಮಾರ ಕೈಯ್ಯಾ ಸೇರಲಿಲ್ಲ. ಮುಂದೆ ಸಮಯ ಬಂದಾಗ ಹಿಂದಿನ ಸಂಚಿಕೆಗಳೆಲ್ಲವೂ ನಿಮ್ಮ ಕೈಸೇರಬಹುದು. ಇದರಿಂದಾಗಿ ನಿಮ್ಮ ನಮ್ಮ ವ್ಯವಹಾರವೆಲ್ಲವೂ ಕಟ್ಟಾದಂತಾಗಿದೆ. ಮುಂದಿನ ಸಾರೆಯಿಂದ ನಮ್ಮಲ್ಲಿಯ ವ್ಯವಹಾರಗಳನ್ನು ಪುನಃ ಮೊದಲಿನಂತೆ ಪ್ರಾರಂಭಿಸೋಣವಲ್ಲವೇ ?

ಮೊದಲಿನಂತೆ ಇನ್ನು ನೀವು ನಿಮ್ಮ ಸೋದರ ಸೋದರಿಯರಿಂದ ಅಕ್ಕನಪೆಟ್ಟಿಗೆಯ ಹೊಸ ಸದಸ್ಯರನ್ನು ಮಾಡಲು ಫಾರ್ಮ ತುಂಬಿ ಕಳಿಸಲು ನೆರವಾಗುವಿರಲ್ಲವೆ ? ಒಗಟು, ಉತ್ತರ, ನಗೆಹನಿ, ಸ್ಪರ್ಧೆಗಳಲ್ಲೆಲ್ಲ ಭಾಗವಹಿಸುವಿರಿ ತಾನೆ ? ಈ ಸಾರೆ ತಮ್ಮ ತಂಗಿಯರಿಂದಲೇ ರಚಿತವಾದ ಯೋಗ್ಯ ಸ್ಪರ್ಧೆ, ಒಗಟುಗಳಿಲ್ಲದಿದ್ದುದರಿಂದ ಆ ವಿಭಾಗವನ್ನು ಪ್ರಕಟಿಸಿಲ್ಲ. ಮುಂದಿನ ಸಾರೆ ಅದಕ್ಕಾಗಿ ಒಂದು ಪುಟ ಹೆಚ್ಚಿಗೆ ಮೀಸಲಿಟ್ಟಿದ್ದೇನೆ.

ಮುಂದಿನ ಸಂಚಿಕೆಗೆ, ನೀವು ಗಜಾನನನ ಹಬ್ಬವನ್ನು ಹೇಗೆ ಆಚರಿಸಿದಿರಿ, ಬರಲಿರುವ ನಾಡಹಬ್ಬಕ್ಕಾಗಿ ಏನೇನು ತಯಾರಿ ನಡೆಸಿರುವಿರಿ ಎಂಬ ವಿಷಯದ ಬಗ್ಗೆ ಸ್ವಾರಸ್ಯವಾದ ಲೇಖನವನ್ನು ಬರೆದು ಕಳುಹಿಸಲು ಪ್ರಯತ್ನಿಸಿರಿ. ಗಜಾನನನ ಮೇಲೆ ಕವನಗಳನ್ನು ಉತ್ಕೃಷ್ಟವಾಗಿ ಬರೆದು ಕಳಿಸಿರಿ, ಹಾಂಽಽ ! ಇದರಲ್ಲಿ ಒಳ್ಳೆಯ ಲೇಖನಕ್ಕೆ ಮೊದಲು ಪ್ರಕಟವಾಗುವ ಸಂಧಿ ಸಿಗುತ್ತದೆ ತಿಳಿಯಿತೇ ?

ಇತಿ ನಿಮ್ಮ ಪತ್ರಾಗಮನದ ನಿರೀಕ್ಷೆಯಲ್ಲಿರುವ

ನಿಮ್ಮ ಹಿರಿಯಕ್ಕ.

---

# ಆರೋಗ್ಯ ಭಾಗ್ಯ

ಲೇ— ಗೋಪಾಲ ಸೀ. ಭಟ್ಟ ಸುಗಾವಿ.

ಈ ಜಗತ್ತಿನಲ್ಲಿ ಜನ್ಮವೆತ್ತ ಪ್ರತಿಯೊಬ್ಬ ಜೀವಿಯೂ ಸುಖವನ್ನು ಬಯಸುತ್ತಾನೆಯೇ ವಿನಃ ದುಃಖವನ್ನು ಬಯಸುವದಿಲ್ಲ. 'ಸುಖ' ಎನ್ನುವ ಈ ವಸ್ತುವು ಮೂಲತಃ ಒಂದೇ ಆಗಿದ್ದರೂ ಕೂಡಾ ಅದು ನಮಗೆ ನಾನಾ ರೀತಿಯಿಂದ ದೊರೆಯುತ್ತದೆ. ಪ್ರತಿಯೊಬ್ಬರೂ ಸುಖವನ್ನೇ ಇಷ್ಟಪಡುವದು ಸಹಜ ಹಾಗೂ ಸ್ವಾಭಾವಿಕವೇ ಆಗಿದೆ; ಪರಂತು ಅದನ್ನು ಸಂಪಾದಿಸಬೇಕಾದರೆ ಯಾವ ರೀತಿಯಾಗಿ ವರ್ತಿಸಬೇಕು ಎಂಬುದನ್ನು ತಿಳಿದುಕೊಂಡವರು ಅತಿ ವಿರಳ. ಇಂದಿನ ನಮ್ಮ ಸಮಾಜದಲ್ಲಿ ಬಲಹೀನರೂ ಹಾಗೂ ಬುದ್ಧಿಶೂನ್ಯರೂ ಆದ ಅನೇಕ ಜನವ್ಯಕ್ತಿಗಳು ಹಾಗೂ ಮಹಾಶಯರು ನಮ್ಮ ದೃಷ್ಟಿಗೆ ಗೋಚರಿಸುತ್ತಾರೆ. ಇವರೆಲ್ಲರೂ ಈ 'ದುರ್ದೆಸೆಗೆ ಬಿದ್ದ ಕಾರಣವೆಂದರೆ ಇಂದಿನ ಸಿನೇಮಾ ಪ್ರಪಂಚವೆಂದು ನಾನು ಧಾರಾಳವಾಗಿ ಸ್ವಾನುಭವದಿಂದ ಬರೆಯುತ್ತಿದ್ದೇನೆ. ಇದನ್ನು ನಮ್ಮ ರಾಷ್ಟ್ರದ ಮುಂದಾಳುಗಳು ಸಾರಿಸಾರಿ ಹೇಳುತ್ತಿದ್ದಾರಲ್ಲವೇ; ಚಲನಚಿತ್ರ ತಯಾರಕರಲ್ಲಿ ಒಳ್ಳೆಯ ಪ್ರಭಾವಕಾರೀ ಚಿತ್ರವನ್ನು ತಯಾರಿಸಿರಿ ಎಂದು ಬಿನ್ನಯಿಸುತ್ತಿದ್ದಾರೆ. ಸಿನೇಮಾವನ್ನು ನೋಡಿ ಮಹಾತ್ಮಾ ಗಾಂಧೀಜಿಯವರ ಮನಸ್ಸು ಬದಲಾಗಿ ಹೋಯಿತಂತೆ. ಅವರು ನೋಡಿದ್ದು "ಸತ್ಯ ಹರಿಶ್ಚಂದ್ರ" ಎಂಬ ಚಲನಚಿತ್ರವಾಗಿತ್ತಂತೆ. ಅದರಲ್ಲಿ ಸತ್ಯ ಹರೀಶ್ಚಂದ್ರನು ಸತ್ಯಮಾರ್ಗವನ್ನು ಅನುಸರಿಸುವದಕ್ಕಾಗಿ ಎಂಥ ಅದ್ಭುತವಾದ ಕಷ್ಟನಷ್ಟಗಳನ್ನು ಅನುಭವಿಸಿದನು, ಎಂಬುದನ್ನು ನೋಡಿ ಪೂಜ್ಯ ಬಾಪೂಜಿಯವರೂ ಕೂಡ ಸತ್ಯ ಮಾರ್ಗವನ್ನು ಅನುಸರಿಸಿದರಂತೆ. ಅಂದಿನಿಂದ ಅವರು ಸುಳ್ಳಾಡುವದನ್ನೇ ಬಿಟ್ಟರಂತೆ. ಕೊನೆಗೊಮ್ಮೆ ಅವರು ರಾಷ್ಟ್ರಪಿತಾ ಮಹಾತ್ಮಾ ಗಾಂಧಿ ಎಂದು ಅನಿಸಿಕೊಂಡರು. ಹಾಗೂ ಸತ್ಯ ಅಹಿಂಸೆ ಎಂಬ ಮಾರ್ಗವನ್ನೇ ಹಿಡಿದು ಗುಲಾಮಗಿರಿಯಲ್ಲಿ ಒಳಲುತ್ತಿದ್ದ ಭಾರತವನ್ನು ಬಿಡುಗಡೆ ಮಾಡಿಸಿದರು ಅರ್ಥಾತ ನಮಗೆ ಸ್ವಾತಂತ್ರ್ಯವನ್ನು ಕೊಡಿಸಿದರು, ನಿಜ. ಆದರೆ ಇಂದಿನ ತರುಣರನ್ನು ನೋಡಿದರೆ ಇದರ ವಿರುದ್ಧ ಆಗಿ ಬಿಟ್ಟಿದ್ದಾರೆ. ಅದರಲ್ಲಿಯ ಒಳ್ಳೆಯ ಗುಣಗಳನ್ನು ಬಿಟ್ಟುಕೊಟ್ಟು ದುರ್ಗುಣಗಳನ್ನು ಅನುಸರಿಸುತ್ತಿದ್ದಾರೆ. ಸಾಮಾನ್ಯವಾಗಿ ಇಂದಿನ ಬಾಲಕಬಾಲಿಕೆಯರಿಗೆ ಸಿನೇಮಾವೆಂದರೆ ಅತಿ ಹಿಗ್ಗು. ಸಿನೇಮಾ ಎಂದರೆ ಊಟ ಉಡಿಗೆ ನಿದ್ರೆಯನ್ನು ಕೂಡಾ ಬಿಡಲು ಸಿದ್ಧರಾಗುತ್ತಾರೆ. ೬-೮ ವರ್ಷದ ಮಗು ಹಟ ಮಾಡುತ್ತಿದ್ದರೆ ಸಿನೇಮಾದ ಸುದ್ದಿಯನ್ನು ಹೇಳಿದರೆ ಹಟ ಮಾಡುವದನ್ನು ಬಿಟ್ಟು ತೃಪ್ತವಾಗುತ್ತದೆ. ಪಾಪ! ಅದಾದರೂ ಏನು ಮಾಡುತ್ತವೆ? "ಸಂಗತಿ ಸಂಘ ದೋಷ" ಎನ್ನುವ ಹಾಗೆ ಅವರ ಪಾಲಕರ ಚಟಗಳೇ ಅವರಲ್ಲಿ ನೆಲೆಗೊಳ್ಳುತ್ತವೆ.

ಅಂತೂ ಇಂದಿನ ಸಮಾಜವು ದುರ್ಗತಿಗೆ ಇಳಿಯುತ್ತ ಹೊರಟ ಕಾರಣವೆಂದರೆ ಸಿನೇಮಾ. ಉಕ್ಕುತ್ತಿರುವ ತಾರುಣ್ಯದಲ್ಲಿ ಮುದುಕರಂತೆ ತೋರುವ ಅನೇಕ ವ್ಯಕ್ತಿಗಳು ಇಂದು ಸಮಾಜದಲ್ಲಿ ಕಷ್ಟನಷ್ಟಗಳನ್ನು ಸಹಿಸುತ್ತ ದುಶ್ಚಟಗಳಿಗೆ ಬಲಿಯಾಗಿ ದಿನಗಳನ್ನು ಕಳೆಯುತ್ತಿದ್ದಾರೆ.

ಸಿನೇಮಾವನ್ನು ನೋಡುವದರಿಂದ ಪರಸ್ತ್ರೀಯರನ್ನು ಚೋರ ದೃಷ್ಟಿಯಿಂದ ನೋಡುವದು; ಬೀಡಿ ಸಿಗಾರೇಟುಗಳನ್ನು ಸೇದುವದು, ಚಹಾ ಕಾಫಿ ಮುಂತಾದ ಪೇಯಗಳನ್ನು ಕುಡಿಯುವದು, ತಂದೆ ತಾಯಿಗಳ ಮಾತನ್ನು ಮೀರುವದು. ವಿದ್ಯೆ ಶೂನ್ಯವಾಗಿದ್ದರೂ ಶೃಂಗಾರವನ್ನು ಮಾಡಿಕೊಂಡು ಮುಖದ ಮೇಲೆ ದೊಡ್ಡಸ್ತಿಕೆಯ ಲಕ್ಷಣಗಳನ್ನು ತೋರಿಸುತ್ತ ಮೆರೆಯುವದು. ಉಡಾಳರಾಗುವದು ಇವೇ ಮೊದಲಾದ ಹೇಸು ಕೃತ್ಯಗಳನ್ನು ಮಾಡಲು ಪ್ರಾರಂಭಿಸುತ್ತಾರೆ. ಈ ರೀತಿ ಮಾಡಿದರೆ ಆರೋಗ್ಯವನ್ನು ಸಂಪಾದಿಸುವದೆಂತು?

ಆರೋಗ್ಯವನ್ನು ಸಂಪಾದಿಸಿ ಬುದ್ಧಿವಂತನೂ,ತ್ರಿಲೋಕ ವಂದ್ಯನೂ ಆಗಬೇಕಾದರೆ ಅವನು ಈ ಕೆಳಗಿನ ನಿಯಮ ಗಳನ್ನು ಅವಶ್ಯವಾಗಿ ಅನುಸರಿಸಬೇಕಾಗುತ್ತದೆ.

(೧) ಪವಿತ್ರ ಮಾತೃಭಾವ ದೃಷ್ಟಿ.
(೨) ಬೇಗನೇ ಮಲಗಿ ಬೇಗನೇ ಏಳುವದು
(೩) ದುಃಶ್ಚಟಗಳಿಂದ ದೂರಾಗಿರುವದು.
(೪) ಸತತ ಕಾರ್ಯನಿರತನಾಗಿರುವದು.
(೫) ಪ್ರಾತಃಶೀತ ಜಲಸ್ನಾನವನ್ನು ಮಾಡುವದು.
(೬) ನಿಯಮಿತ ವ್ಯಾಯಾಮ ಮಾಡುವದು.
(೭) ಸಾದಾ ಜೀವಿಯಾಗಿರುವದು.
(೮) ಶುದ್ಧ ಹಾಗೂ ಸಾದಾ ಪೌಷ್ಟಿಕ ಅಹಾರವನ್ನು ಸೇವಿಸುವದು.
(೯) ಸ್ವಚ್ಛ ವಾಯು ಸೇವನೆ ಮಾಡುವದು (walking)
(೧೦) ಮನೋನಿಗ್ರಹಿಯಾಗಿರುವದು.

ಈ ವರೆಗೆ ಎಷ್ಟೇ ಹಾನಿಯಾಗಿದ್ದರೂ ಈ ಎಲ್ಲ ನಿಯಮ ಗಳನ್ನು ಮಾಡುತ್ತ ಹೋದಲ್ಲಿ ಅವರು ಸುಖಿಗಳೂ ಆರೋಗ್ಯ ವಂತರೂ ದೀರ್ಘಾಯುಷಿಗಳೂ ಆಗುವದರಲ್ಲಿ ಸಂದೇಹವೇ ಇಲ್ಲ. ಆದರೆ ಒಂದು ದಿನ ಮಾಡುವದು ನಾಲ್ಕುದಿನ ಬಿಡುವದು ಮಾಡಿದರೆ ಏನೂ ಪರಿಣಾಮಕಾರಿಯಾಗುವದಿಲ್ಲ ವೆಂದು ನನಗನಿಸುತ್ತದೆ. ಈ ಎಲ್ಲ ನಿಯಮಗಳನ್ನು ಪಾಲಿಸುತ್ತ ನಡೆದಾಗ ತಿಂಗಳು ಅಥವಾ ಹದಿನೈದು ದಿನಗ[ಳ] ಬದಲಾವಣೆ ಕಾಣದಿದ್ದರೂ ಕ್ರಮೇಣ ಅವರು ಸುಧ[ಾರಿ]ಸುತ್ತಾ ಹೋಗುತ್ತಾರೆನ್ನುವ ಮಾತು ನಿಶ್ಚಯವೂ ಸತ್ಯ[ವೂ] ಆಗಿರುತ್ತದೆ.

ಇಲ್ಲಿ ಹೇಳಿದ ನಿಯಮಗಳು ಒಂದು ಬಿಲ್ಲಿಯ ಖರ್ಚ[ು ಇ]ದಿಲ್ಲದ್ದರಿಂದ ಪ್ರತಿಯೊಬ್ಬರೂ ಇದನ್ನು ಅನುಸರಿಸಬಹು[ದಾ]ಗಿದೆ, ಹಾಗೂ ಪ್ರತಿಯೊಂದು ನಿಯಮವು ಲಕ್ಷಗಟ್ಟ[ಲೆ] ರೂಪಾಯಿ ಬಾಳುವಷ್ಟು ಬೆಲೆವುಳ್ಳದ್ದಾಗಿರುತ್ತವೆ. "ಶರ[ೀರ] ಮಾದ್ಯಂ ಖಲುಧರ್ಮ ಸಾಧನಂ" ಎನ್ನುವಂತೆ ಶರೀರ ಸಂ[ಪ]ತ್ತನ್ನು ಬೆಳೆಸಿಕೊಳ್ಳಲು ಅತಿ ಮಹತ್ವವಾದ ನಿಯಮಗಳ[ಾ]ಗಿರುತ್ತವೆ. ಕೊನೆಗೆ ಎಂಥ ಕಾರ್ಯ ಬಂದರೂ ಹೆದ[ರದೆ] ಕಾರ್ಯವನ್ನು ನಿರ್ವಹಿಸುವ ಶಕ್ತಿಯು ಅವರಲ್ಲಿ ಸಹಜವಾ[ಗಿ] ಪ್ರಾಪ್ತವಾಗಿರುತ್ತದೆ. ಈ ಹಿಂದೆ ಆಗಿ ಹೋದ ವ್ಯಕ್ತಿಗ[ಳು] ಈ ಎಲ್ಲ ವಿಚಾರಗಳನ್ನು ಅನುಸರಿಸಿದ್ದರಿಂದಲೇ ಮಹಾ ವ್ಯ[ಕ್ತಿ]ಯೆಂದು ಹೆಸರಿಗೆ ಪಾತ್ರರಾಗಿದ್ದಾರೆ. ಹಾಗೂ ಇಂಥವ[ರಿಂ]ದಲೇ ಶ್ರೇಷ್ಠವಾದ ಕಾರ್ಯವು ಸಾಧಿಸಲ್ಪಡುತ್ತದೆ. ಮತ[್ತು] ಈ ರೀತಿಯ ಜನರು ಸಾಮಾನ್ಯ ವ್ಯಕ್ತಿಗಳಿಗೂ ಭಗವ[ಂತ]ನಿಗೂ ಪ್ರೀತಿ ಪಾತ್ರರಾಗುತ್ತಾರೆ.

— ಜೈ ಜಗತ್ —

---

## ನಗೆಹನಿ

೧. ಹೆಂಡತಿ— ಏನ್ರೀ ನೀವು ನಿಮ್ಮವ್ವನ ಲಗ್ನದಲ್ಲಿ ಗ್ಯಾಸ ಹೊತ್ತಿದ್ದಿರಂತೆ ಅಹುದೇ?

ಗಂಡ— ಆ ಗ್ಯಾಸಿಗೆ ಪಿನ್ನು ಮಾಡಾಕ ನೀನೇ ಬಂದಿದ್ದಿಯಲ್ಲ, ನೆನಪಿಲ್ಲವೇನೇ?

೨. ಗುರುಗಳು— ರಂಗಾ ಗುರುವಾರ ಹೇ[ಳಿದ] ಪಾಠ ಯಾವದು?

ರಂಗ— ನೀವೇ ಹೇಳಿದ ಪಾಠ ನೀವೇ ಮರೆತಿರಾ-

—ಪು. ಅ. ಕೊಡಕೊಳ್ಳ[...]

# ಟಿಕೆಟ್ ಇಲ್ಲದೆ ಪ್ರಯಾಣ

ಲೇ : ಚಿದಂಬರ ಕುಲಕರ್ಣಿ.

ಆನೆಗೆ ಆನೆ ಹೋಗುತ್ತಿದ್ದರೂ ಬಾಲಕ್ಕೆ ಬಡಿದಾಡುವರು ಕೆಲವು ಜನ ಜಗತ್ತಿನಲ್ಲಿ. ಬೇಕಾದಷ್ಟು ಹಣವಿದ್ದರೂ ವಿಲಾಸಕ್ಕಾಗಿ ಖರ್ಚು ಮಾಡುವರೇ ವಿನಃ ತಮಗಾಗಿಯೇ ಆಗಲಿ ಸದ್ವಿನಿಯೋಗಕ್ಕೆ ಉಪಯೋಗಿಸುವವರು ತೀರ ಕಡಮೆ.

ಇಂಥ ಜನರಲ್ಲಿಯೇ ನನ್ನ ಗೆಳೆಯ ಕೇಶವನೊಬ್ಬ. ಅವನಿಗೆ ಶ್ರೀಮಂತಿಕೆಯು ಇರದಿದ್ದರೂ ಚೈನಿಗೆ, ಡ್ರೆಸ್ಸಿಗೆ ಕೊರತೆಯಿರಲಿಲ್ಲ. ಚನ್ನಾಗಿ ಡ್ರೆಸ್ಸು ಮಾಡಿಕೊಂಡು ಸಂಜೆಯ ಮುಂದೆ ಹೊರಹೊರಟನೆಂದರೆ ಎಡಕ್ಕೆ ಬಲಕ್ಕೆ ಅವನನ್ನು ನೋಡುವ ಜನ ಬಹಳ. ಅವನ ಅರಿವೆಯನ್ನು ನೋಡಿಯೇ ಹಿಗ್ಗಬೇಕು. ಅಂದು ಅವನಲ್ಲಿ ರೊಕ್ಕ ಕೇಳಿದರೆ Cleen soot empty pocket ಎಂದು ಹೇಳುವ, ಇದಕ್ಕಾಗಿ ಅವನ್ನು ನಾವು ಅಂದೇ ಮಾತಾಡಿಸುತ್ತಿದ್ದುದು. ಅಂದರೇನೇ ಹಾದಿಯೊಳಗಿರುವ ಆಸಾಮಿ, ಅವನಿಗೆ ಇನ್ನೊಂದು ಚಟವೇನಂದರೆ ಪ್ರವಾಸಮಾಡಿ ಪರಊರಿಗೆ ಹೋಗಿ ಸಿನೇಮಾ ನೋಡಿಕೊಂಡು ಬರುವದು, ಅದಕ್ಕಾಗಿ ಅವನು ಎಷ್ಟೋ ಸಾರೆ ಕಷ್ಟ ಬಟ್ಟಿದ್ದಾನೆ. ಆದರೂ ಸಿನೇಮಾ ಮಾತ್ರ ತಪ್ಪಿಸುವವನಲ್ಲ. ಜೇಬಿನಲ್ಲಿ ೮ ಆಣೆ ಇದ್ದರೆ ಸಾಕು. ಹೋಗುವಾಗಲೂ without ticket ಮತ್ತು ಬರುವಾಗಲೂ without ticket ಅಲ್ಲಿ III classಗೆ ಹೋಗಿ (ಯಾಕಂದರೆ ಅಲ್ಲಿ ಯಾರೂ ಗುರುತಿನವರು ಇರುವದಿಲ್ಲ). ೧ ಆಣೆ ಚಹ ಕುಡಿದು ೧ ಆಣೆ ಪ್ಲಾಟಫಾರ್ಮ್ ತಿಕೆಟು ಕೊಂಡು ಸ್ಟೇಶನ್ನಿನೊಳಗೆ ಬಂದನೆಂದರೆ ತೀರಿತು. ನೆಟ್ಟಗೆ ಊರು ಸೇರುವಂತೆಯೇ. ಇನ್ನೊಂದು ಸುದ್ದಿ ಏನಂದರೆ ಅವನು ಮಹಾ ಘಾಟಿ ಚಾಲಾಖಿ ತೋರಿಸುತ್ತಿದ್ದ. ಅದು ಯಾವ ಸಿನಿಮಾದಲ್ಲಿ ನೋಡಿದ್ದನೋ ದೇವರೇ ಬಲ್ಲ. ಗಾಡಿ cabin ಹತ್ತಿರ ಬರುವಾಗ ಸ್ವಲ್ಪ ಸಾವಕಾಶವಾಗಿ ಬರುತ್ತದೆ. ತೀರಿತು ಆಗಲೇ ಗಾಡಿಯಿಂದ ಹಾರಿ, ಗಾಡಿ ಸ್ಟೇಶನ್ನಲ್ಲಿ ನಿಲ್ಲುವದರಲ್ಲಿಯೇ ಅವನು ಸ್ಟೇಶನ್ನಿನ ಹೊರಗೆ ಇರುತ್ತಿದ್ದ. ನಾನು ಎಷ್ಟೋ ಸಾರೆ ಬೇಡವೆಂದು ಹೇಳಿದರೂ ಕೇಳುತ್ತಿರಲಿಲ್ಲ. ಎಂದಾದರೂ ನೀನು ತಲೆ ಒಡೆದುಕೊಳ್ಳುತ್ತೀ, ಇಲ್ಲವಾದರೆ ಕಾಲು ಮುರಿದುಕೊಳ್ಳುತ್ತಿ ಎಂದು ಹೇಳುತ್ತಿದ್ದೆ. ಆಗ ನನ್ನನ್ನೇ ಗೇಲಿ ಮಾಡುತ್ತಿದ್ದ. ತಿರುಗಿ ನನಗೆ ಮಾತಾಡುವದಾಗುತ್ತಿರಲಿಲ್ಲ.

ಒಂದು ವೇಳೆ ಬಂತು. ಅಥವಾ ದೇವರೆ ಅವನಿಗೆ ಬುದ್ಧಿ ಕಲಿಸಿದ ಎಂದು ಹೇಳಬಹುದು. ಒಂದುಸಾರೆ ಯಾವದೋ ಮನೆಗೆಲಸದ ಸಲುವಾಗಿಯೇ ಅವನಿಗೆ ತಮ್ಮ ಸಳಬಂಧಿಕರ ಸಂಗಡ ಅದೇ ಊರಿಗೆ ಹೋಗಬೇಕಾಯಿತು. ಆದ್ದರಿಂದ ಅವನಿಗೆ ಸಂತೋಷಕ್ಕೆ ಮೇರೆ ಇಲ್ಲ, ಕೆಲಸವೆಂದರೆ ಇಷ್ಟೇ; ಅವರ ಸಂಗಡ ಹೋಗಿ ಅವರನ್ನು ಬಿಟ್ಟು ತಿರುಗಿ ಬರುವದು, ಆಯಿತು. ಜಂಬದ ಕೋಳಿ ಹೊರಟ ಹಾಗೆ ಹೋದ. ಅವರ ಊರು ಮುಟ್ಟಿದ. ತಿರುಗಿ ಹೊರಡುವದು ಬೇಗ ಆಗಲಿಲ್ಲ, ಕಾರಣ ಇಷ್ಟೆ. ಆ ಊರಿಗೆ ಯಾರೊ ಒಬ್ಬರು ದೊಡ್ಡ ಮಾನ್ಯ ಮಂತ್ರಿಗಳು ಬಂದಿದ್ದಾರೆಂದು ಗೊತ್ತಾಯಿತು. ಊರೆಲ್ಲ ಅತಿ ಸೌಂದರ್ಯದಿಂದ ಕಾಣುತ್ತಿತ್ತು. ರಸ್ತೆಯ ಮೇಲಿನ ಎಷ್ಟೋ ದಿನದ ಕೊಳೆಯು ಹೋಗಿ ಅಂದು ಸ್ವಚ್ಛವಾಗಿದ್ದವು. ಮೂಲೆ ಮೂಲೆಗಳೂ ಸ್ವಚ್ಛವಾಗಿದ್ದವು. ಮೂಲೆಗಳನ್ನು ಮಂತ್ರಿಗಳು ನೋಡುತ್ತಿರಲಿಲ್ಲ. ಆ ಮಾತಿರಲಿ! ಮತ್ತು ತಳಿರು ತೋರಣಗಳಿಂದ ಎಲ್ಲ ಆಫೀಸು ರಸ್ತೆಗಳು ಕಂಗೊಳಿಸುತ್ತಿದ್ದವು, ಕಾರಣ ಇಷ್ಟೇ ಮಾನ್ಯಮಂತ್ರಿಗಳು ಶಹರದ, ಸಿಂಹಾವಲೋಕನ ಮಾಡಲು ಇಚ್ಛಿಸಿದ್ದರಂತೆ, ಅದರಂತೆ ಮಂತ್ರಿಗಳ ಆಗಮನವೂ ಆಗಿತ್ತು. ಅವರ ಸಿಂಹಾವಲೋಕನವು ನಡೆದಿತ್ತು. ಇದರಿಂದಾಗಿ ಎಲ್ಲ ಜನರಲ್ಲಿಯೂ ಅಂದು ಚಟುವಟಿಕೆ ಇರಲೇ ಬೇಕಲ್ಲವೆ, ವಿಶೇಷವಾಗಿ ನಗರರಕ್ಷಕ ಪೋಲೀಸರು, ಪ್ರತಿದಿನ ದೊಡ್ಡ ದೊಡ್ಡ ಕೂಟುಗಳಲ್ಲಿಯೂ ಕಾಣದ ಪೋಲಿಸರು ಅಂದು ಸಣ್ಣ ಸಣ್ಣ ಸಂದಿ ಹೊರಳುವಲ್ಲಿಯೂ ಒಬ್ಬಿಬ್ಬರು

ಇದ್ದರೆಂದು ಹೇಳಬಹುದು. ಅಂದು ಎಲ್ಲ ಡಿಪಾರ್ಟಮೆಂಟ
ನಲ್ಲಿಯೂ Special duty and very strict.

ಮಾನ್ಯ ಮಂತ್ರಿಗಳೂ ಪ್ರೋಸೆಶನ್ ಮುಗಿಸಿ ಅಂದರೆ ಸಿಂಹಾವಲೋಕನ ಮುಗಿಸಿ ತಮಗಾಗಿ ಕಾದಿಟ್ಟ ಬೈಲಿನಲ್ಲಿ ಬಂದು ಹಂದರದ ಕೆಳಗೆ ಗಾರ್ಲಂಡ ಸ್ವೀಕರಿಸುತ್ತ ಕೆಲವುವೇಳೆ ಜನರಿಗೆ “ ನಾನು ಇಲ್ಲಿ ಬಂದದ್ದು ನಿಮಗೆ ತಿಳಿದದ್ದೇ ಇದೆ. ಆದರ ಬಗ್ಗೆ ನಾನೇನು ಹೆಚ್ಚಿಗೆ ಹೇಳುವ ಕಾರಣವಿಲ್ಲ ”ಎಂದು ಏನೇನೋ ಹೇಳಿ ಭಾಷಣ ಮುಗಿಸಿದರು ಎಂದು ಕಾಣುತ್ತೆ. ಅಂತೂ ಇಂತೂ ಮಂತ್ರಿಗಳು ಬಂದ ಕಾರ್ಯ ಮುಗಿದಿತ್ತು. ನಮ್ಮ ಕೇಶವ ಇಂಥ ಸಂದರ್ಭ ಕಳೆದುಕೊಳ್ಳಲಿಲ್ಲ. ಮಂತ್ರಿಗಳನ್ನು ನೋಡಿದ. ಆದರೂ ಸಿನೇಮಾ ನೋಡಲು ಮರೆಯಲಿಲ್ಲ. ಇಷ್ಟರಲ್ಲಿಯೇ ಸಂಜೆ ಏಳುಏಳೂವರೆಯಾಗುತ್ತ ಬಂದಿತ್ತು. ಇನ್ನು ತಿರುಗಿ ಊರಿಗೆ ಬರಬೇಕು, ಟ್ರೇನು ಸರಿಯಾಗಿ ೮ ಘಂಟೆಗೆ ಹೊರಡುತ್ತಿತ್ತು ಅಂತೂ ಸ್ಟೇಶನ್ನಿಗೆ ಬಂದ. ಅಲ್ಲಿಯ ಪರಿಸ್ಥಿತಿಯೂ ಅಂದು ಇವನಿಗೆ ಸ್ವಲ್ಪ ವಿಷಾದಕರವೇ ಇರಬೇಕಲ್ಲವೆ ! ಅಂದು ಅಲ್ಲಿಯೂ Special chekking ಇತ್ತು. ಮೊದಲು ಸ್ವಲ್ಪ ಹೆದರಿದ ಅಂತ ಕಾಣುತ್ತದೆ, ಟಿಕೆಟು ತೆಗಿಸಿಬಿಡೋಣವೇನು ? ಎಂದು ತನ್ನ ಷ್ಟಕ್ಕೇ ವಿಚಾರ ಮಾಡಿದ. ಯಾಕೆಂದರೆ ಅಂದು ಗಾಡಿ ಖರ್ಚು ತನ್ನದಾಗಿರಲಿಲ್ಲ ಅಷ್ಟೇ ಅಲ್ಲದೇ ಚಹಕ್ಕಾಗಿಯೂ ಮೇಲೆ ನಾಲ್ಕಾಣೆ ಬಂದಿದ್ದವು. ಆದರೂ ಅವನ ಕೆಟ್ಟ ಮನಸ್ಸು ಅದಕ್ಕೊಪ್ಪಲಿಲ್ಲಿ. ಏನೇ ಆಗಲಿ ಎಂದು ೧ ಆಣೆ ಕೊಟ್ಟು ಪ್ಲಾಟಫಾರ್ಮ್ ತಿಕೇಟು ಕೊಂಡು ಗಾಡಿ ನಿಲ್ಲುವ ಸ್ಥಳಕ್ಕೆ ಬಂದ ಅಗಲೇ ಇಬ್ಬರು Ticket checkerರು ತನ್ನ ಬರುವಗಾಡಿಗೆ ಕಾದು ನಿಂತಾಗಲೇ ಅವನ ಎದೆಯಲ್ಲಿ ನಡುಗು ಹುಟ್ಟಿತು. ಆದರೂ ಸಾಹಸಮಾಡಿ ಹೋದ. ಗಾಡಿಬಿಡಲು ಗಂಟೆಬಡೆಯಿತು. ಗಾಡಿಯೂ ಸಿಳ್ಳು ಹಾಕಿತು. ಆದರೂ ಟಿ. ಚಕ್ಕರ ಇನ್ನೂ ಪ್ಲಾಟಫಾರ್ಮ ಮೇಲೆ ನಿಂತಿದ್ದರಿಂದ ತಾನೂ ನಿಂತುಕೊಂಡಿದ್ದ ಗಾಡಿ ಸ್ವಲ್ಪ ವೇಗದಿಂದ ಹೋಗತೊಡಗಿತು. ಚಕ್ಕರು ಬೇರೆ ಡಬ್ಬಿಯಲ್ಲಿ ಹತ್ತಿದರು, ಓ ದೇವರೇ ಎಂದು ಲಗು ಬೇರೆ ಡಬ್ಬಿಯಲ್ಲಿ ಕುಳಿತ. ಕೆಲವು ಹೊತ್ತು ಹಾಗೇ ಕಳೆಯಿತು. ನಡುವೆ ಇನ್ನೊಂದು ಸ್ಟೇಶನ್ ಬರುವದು ಇನ್ನೂ ಬಹಳ ದೂರ ಇತ್ತು, ಎಂದು ಆರಾಮು ಕುಳಿತ ದೊಡ್ಡ ಮನುಷ್ಯರಂತೆ. ಆದರೂ ಕಳ್ಳನ ಮನಸ್ಸು ಹುಳ್ಳುಳ್ಳಗೆ ಎಂಬ ಶಾಸ್ತ್ರವಿಲ್ಲವೇ ? ಅವನ ಎದೆಯಲ್ಲಿ ಧಡ್ ಧಡ್ ಬಡೆತ ಜೋರಿನಿಂದ ಇತ್ತೇ ಇತ್ತು. ಇಷ್ಟಾಗುವದರಲ್ಲಿಯೇ ಯಾಕೋ ಗಾಡಿಯ ವೇಗ ನಿಂತಿತು. ಕಾರಣ ಇಷ್ಟೇ, ಅಲ್ಲಿ ಎಲ್ಲೋ ಪೂಲ ಕಟ್ಟುತ್ತಿದ್ದಾರೆಂದು ಕಾಣುತ್ತದೆ. ಹೊರಗೆ ಇಣಿಕಿ ನೋಡಿದ ಚಕ್ಕರು ತನ್ನ ಡಬ್ಬಿಗೆ ಬರುವದು ನೋಡಿ ಎದೆ ಝಲ್ಲೆಂದಿತು ಇನ್ನೊಂದು ಬಾಜುವಿನಿಂದ ಹೊರಗೆ ಇಳಿಯಬೇಕೆಂದ ಜೋರಿನಿಂದ ಹೋದ. ಆದರೆ ಅದೃಷ್ಟ, ಆ ಬಾಗಿಲಿಗೆ ಕೀಲಿಬ ದಿತ್ತು. ಅಷ್ಟರಲ್ಲಿ ticket checker ಒಳಗೆ ಬಂದೇ ಬಂದ ಗಾಡಿಯು ವೇಗವಾಗಿ ಚಲಿಸಹತ್ತಿತು. ಆಗಲೇ ರಾಯ ಮೋರೆ ಕೆಂಪೇರಿತು. ಕಾಲುಗಳಲ್ಲಿ ಎರಡರ ಚಳಿ ಬಂದ ಗಿತ್ತು. chekker ಬಂದವನೆ chekkingಗೆ ಪ್ರಾರಂಭಿಸಿದ ಇವನದು ಎರಡನೇ ನಂಬರ ಆಗಿತ್ತು, ಏನು ಮಾಡುವದ ಎಂದು, ಏನೋ ಸುಳ್ಳು ಹೇಳಹೋದ. ಆದರೆ ಎಷ್ಟೋ ದಿ ಗಳಿಂದ ಕೆಲಸ ಮಾಡುತ್ತಿರುವ ರೇಲ್ವೆ ಕೆಲಸಗಾರರಿಗೆ ಇಂ ವರ ಚೆರ್ಯೆ ತಿಳಿಯದೆ. ಅವ ನೆಟ್ಟಗೆ Don't bluf m if you dont have ticket give me extr charge ಎಂದ. ಅನಿರ್ವಾಹಪಕ್ಷ ಬಂತು. ಕಿಸಿಯೆಲ್ಲ ಹುಡು ದರೂ ಇನ್ನೂ extra chargeಗೆ ೪ ಆಣೆ ಕಡಿಮೆ ಬೀಳ ತ್ತಿತ್ತು. ಇಷ್ಟೇ ಇವ I am very sorry ಎಂದ ಎಷ್ಟೇಹೇಳಿದರೂ ಅವ ಅಧಿಕಾರಿ, ಏನೂ ಕೇಳಲಿಲ್ಲ ಇದ್ದಷ್ಟೆ ರೊಕ್ಕಾ ಇಸಿದುಕೊಂಡು ಮುಂದಿನ ನಿಲ ಣವೇ ನೀನು ಇಳಿಯುವ ನಿಲ್ದಾಣ. ಅಲ್ಲಿ ಇಳಿದ ನನ್ನನ್ನು ಬೆಟ್ಟಿಯಾಗು ಎಂದು ಹೇಳಿ, ಆಗಲೇ ನಿಂ ಒಂದು ಸಣ್ಣ ನಿಲ್ದಾಣದಲ್ಲಿ ಇಳಿದು ಹೊರಟೇ ಹೋದ. ಅ ಹೊರಟುಹೋದ ಮೇಲೆ ಈ ಆಸಾಮಿ ದೊಡ್ಡ ಶ್ವಾಸ ತೆಗೆದ ಕೊಂಡ. ಆಗಲೇ ಯೋಚನೆ ಪ್ರಾರಂಭವಾಯಿತು. ಇನ ಹೇಗೆ ಮಾಡುವದು ? ನಮ್ಮ ಊರಲ್ಲಿಯೇ ವಿಚಾರಣೆ ನಡೆದ ಅವಮಾನವಾಗುತ್ತದೆ ಕಾರಣ ಪ್ರತಿಸಲದಂತೆ ರಾ ಯಾದರೂ ಚಿಂತೆಯಿಲ್ಲ. ಹತ್ತಿರವೇ ಜಿಗಿದುಬಿಡೋ ಎಂದು ವಿಚಾರಿಸುತ್ತಿರುವಾಗಲೆ ಅವನ ಕಾಲುಗಳು ಬಾಗಿ ಹತ್ತಿರ ಹೋದವು.

ಮತ್ತೆ ಕೆಲವು ವೇಳೆ ಕಳೆಯಿತು. ಊರು ಸಮೀ ಬಂದಂತೆ ಹೃದಯದ ಬಡೆತವೂ ಹೆಚ್ಚಾಗ ಹತ್ತಿತು, ಅಂತ ಇಂತೂ ಊರು ಬಂತು, out Signals ದಾಟಿ ಗಾಡಿ ತ ವೇಗ ಕಡಿಮೇ ಮಾಡುತ್ತಿರಬೇಕು. ಇನ್ನು Cabin ಬಹ ದೂರವಿರಬೇಕು; ಇವನಿಗೆ ಕತ್ತಲೆಯಲ್ಲಿ ಕಾಣಿಸಲಿಲ್ಲ ವೇ ಕಡಿಮೆಯಾದಂತೆ ಆ ನಿಲ್ದಾಣ ಸಮೀಪಕ್ಕೆ ಬಂತೆಂ

ಬಾಗಿಲ ತೆಗೆದು ಮೆಟ್ಟಿಲ ಮೇಲೆ ಕಾಲಿಟ್ಟು ಮೆಲ್ಲಗೆ ಇಳಿಯ ಹೋಗಲು ಕಾಲು ಜಾರಿತು. ಕಾಲು ನೆಲಮುಟ್ಟಿತು. ಕೈ ಇನ್ನೂ ಗಾಡಿಯನ್ನು ಹಿಡಿದಿದ್ದವು. ಕೇಳಬೇಕೆ! ಗಾಡಿ ಇವ ನನ್ನು ದರದರನೆ ಎಳೆದೊಯ್ಯತೊಡಗಿತು. ಗಾಬರಿಯಾಗಿ ಕೈಬಿಟ್ಟ. ದೊಪ್ಪನೆ ಜೋಲಿ ತಾಳಲಾರದೆ ನೆಲದ ಮೇಲೆ ಬಿದ್ದ. ತಲೆಗೆ ಬಲವಾದ ಪೆಟ್ಟು, ಆಗದಿದ್ದರೂ ತಡೆಯಲಾರದಂತಹ ಗಾಯಗಳಾಗಿದ್ದವು. ರಕ್ತ ಸೋರಹತ್ತಿತು. ಎಚ್ಚರಿಕೆ ತಪ್ಪ ವಂತೆ ತಲೆ ತಿರುಗಹತ್ತಿತು. ಕೈಕಾಲು ನಡುಗುತ್ತಿದ್ದವು. ಎದೆಯ ಬಡಿತ ತೀವ್ರವಿತ್ತು. ಆದರೂ ಅಲ್ಲಿ ಯಾರೂ ಇರ ಲಿಲ್ಲ. ರಾತ್ರಿಹೊತ್ತು, ಜೋಲಿ ಹಾಕುತ್ತ ಪ್ರಜ್ಞೆ ತೆಗೆದುಕೊಳ್ಳುತ್ತ ಕುಂಟುತ್ತ ಬೀಳುತ್ತ ರಕ್ತವನ್ನು ಕರವಸ್ತ್ರದಿಂದ ಹಿಡದು ಕೊಳ್ಳುತ್ತ ಅಂತೂ ಇಂತೂ ಅಡ್ಡದಾರಿ ಹಿಡಿದು ಸ್ಟೇಶನ್ ಹೊರಗೆ ಬರುವದರಲ್ಲಿ ಪುನರ್ಜನ್ಮಬಂದಂತಾಗಿತ್ತು. ಮುಂದೇನು ಮಾಡುವದು. ರಸ್ತೆಯಗುಂಟವೂ ಲೈಟಿನ ಕಂಬ ಬಂದಾಗ ದೂರ ಸರಿಯುತ್ತಾ ಕತ್ತಲೆಯ ಮರೆಯಲ್ಲಿಯೇ ನಡೆದು ರೂಮು ಮುಟ್ಟಿದ ಕೀಲಿ ತೆಗೆದು ಮೊದಲು ತನ್ನ ಮುಖವನ್ನು ನೋಡುವ ಕುತೂಹಲ ಹುಟ್ಟಿ ಕನ್ನಡಿಯ ಎದುರಿಗೆ ನಿಂತ. ಅಕರಾಳ ವಿಕರಾಳ ಮುಖ! ರಕ್ತ ಸೋರಿ ಒಣಗಿ ಬಾರು ಬಿದ್ದಿದ್ದವು. ಯಾರದೋ ಖೂನಿ ಮಾಡಿ ಬಂದವರಂತೆ ಅರಿವೆ ಎಲ್ಲ ರಕ್ತಮಯವಾಗಿದ್ದವು, ಆಯಿತು ಅವನ ಡಿಸೆಕ್ಶನ್ ಬಾಕ್ಸ ತೆಗೆದು ಅದರಲ್ಲಿಯ ತರತರದ ಪೊರಸೆಪ್ಸ (ಚಿವಟಿಗೆ) ಗಳಿಂದ ಅರಳೆಯಿಂದ ಗಾಯಗಳನ್ನು ಸ್ವಚ್ಛವಾಗಿರಿಸಿ ಏನೊ ಐಡಿಯನ್ನೊ ವರಸಿದ ಔಸಧ ಹಚ್ಚಿ ಪಟ್ಟಿಬಿಗಿದು ಮಲಗಿದ ಆಸಾಮಿ.

ಬೆಳಗಾಯಿತು. ಬಹಳ ಆಯಾಸವಾದ್ದರಿಂದ, ಮುಂಜಾನೆ ೯ ಗಂಟೆಯ ವರೆಗೂ ಎಚ್ಚರವಾಗಲಿಲ್ಲ. ಅಷ್ಟರಲ್ಲಿ ನಾನು ಯಾವದೋ ಕೆಲಸದ ಸಲುವಾಗಿ ಅವನಲ್ಲಿಗೆ ಬಂದೆ. ಅವನ ಪರಿಸ್ಥಿತಿ ನೋಡಿ ಗಾಬರಿಗೊಂಡರೂ ಕಾರಣ ಕೇಳಿದೆ. ನನ್ನ ಮುಂದೇನೂ ಮುಚ್ಚಿಡದಿದ್ದರೂ, ಅಂದು ಆದರ ಕಾರಣ ಕೇಳಿ ದವರಿಗೆಲ್ಲ ಏನೇನೋ ಸುಳ್ಳೇ ಕಾರಣ ಹೇಳುತ್ತ ಅಡ್ಡಾಡಿದ ಅಷ್ಟೇ ಮುಂದೆ ಪ್ರತಿದಿನ ದವಾಖಾನೆಯಲ್ಲಿ ಡ್ರೆಸಿಂಗ ನಡೆದೇ ಇತ್ತು. ಆದರೆ ಒಮ್ಮೆ ಬಲವಾದ ಪೆಟ್ಟಿನಿಂದ ಕೇಶವನು ಮುಂದೆ ಮತ್ತೆಂದೂ ಇಂತಹ ಕೆಲಸಕ್ಕೆ ಕೈಹಾಕಲಿಲ್ಲವೆಂಬ ಸುದ್ದಿಯೂ ಬಂತು.

# ಸಂಜೀವಿನಿ

ಸುಖಕರದ ಬಾಳ್ ಸಾಗರವ ಸೇರಿದೆನು ನಿನ್ನ
ಪ್ರೇಮ ಸಂಜೀವಿನಿಯ ಸವಿದು
ದುಗುಡ ದುಮ್ಮಾನಗಳು ದೂರವಾದವು ಕೆಳದಿ
ನಿನ್ನ ನೇಹದ ಕೊಳದಿ ನಲಿದು !!
ನನ್ನ ಎಣಿಕೆಯು ಭದ್ರವಾಯ್ತು ನಿನ್ನೊಲುವಿಂದ
ಧೃವತಾರೆ ಎನ್ನೆದೆಗೆ ನೀನು !
ನಿನ್ನ ಸೌಂದರ್ಯದಲಿ ಮಡಗಿ ನಾನಾಡುವೆನು
ಕಲ್ಪನೆಯು ಇಮ್ಮಡಿಸಿ ರಸನಿಧಿಯನದಕಿರಿಸಿ
ಭಾವ ಸರಿದೂಗಿಸಲು ನಿಂತೆ
ಕನಸಲ್ಲಿ ನನಸೆಂದು ನನ್ನ ಬಳಿಯಲಿ ನಿಂದು
ತಿಳಿಸಿದೆಯೇ ಈ ಬಾಳಕಂತೆ !!
ನಿನ್ನಿಂದ ನಾನಿರುವೆ ಜಗದಲ್ಲಿ ನೆಲೆಸಿರುವೆ
ಗುಪ್ತಗಾಮಿನಿಯಂತೆ ಬಳಿಸಿ !
ಗಿರಿ-ಸಾನು, ಬಾನ್ ಬಯಲು ಮುಗಿಲದ ಮಿಳಿತದಲಿ
ಸಮುಭಾಗಿ ನೀನೆನಗೆ ಎನಿಸಿ !!
ನಿಂತಿಹುದು ನಿನ್ನೆದೆಯ ಮೃದು ತಲ್ಪ ನನಗಾಗಿ
ಭೀಬತ್ಸ ಜೀವನಕೆ ಎಂತು ?
ಬಳಿಸಬಹುದೆನ್ನ ಘನ ರೂಪಿ ಚೇತನದರುವೆ
ನೀನಿರದ ಬಾಳ್ ಬದುಕದೆಂತು ?
ಓ ಎನ್ನ ಮಂಗಳೆಯೆ ಮಾನಸಾರಾಧನೆಯೆ
ಮೃತ್ಯುವಿಗೆ ಸಂಜೀವಿನೆನಗೆ !
ಪ್ರಾಣ ಪ್ರಮದೆಯೆ ನೀನು ಪರತತ್ವದಲ್ಲಿರಿಸಿ
ನನ್ನ ದಾರಿಯ ದೀಪವಾಗೆ !!
ಆವಾವ ದಾರಿಯಲಿ ನೀ ಸುತ್ತಿ ಬಂದರೂ
ನಿನ್ನ ಪ್ರೇಮಿಸುವೆ ಸಂಜೀವಿನಿ
ವಿಶ್ವಾಸ ಸ್ಫುರಣದಲಿ ಉಕ್ಕುವದು ಮನವಿಂದು
ಚೇತನದ ಚಿರವಾಹಿನಿ !!

ಕುಮಾರ ಎಸ್. ವ್ಹಿ. ಪಾಟೀಲ ಚುಳಕಿ.

# ಸೂಚನೆ

* ಲೇಖನಗಳು, ಅಸ್ಪಷ್ಟ ರೀತಿಯಲ್ಲಿ ಬರೆದವು ಬರುತ್ತಿದ್ದು, ಮುದ್ರಣ ಕಾರ್ಯಕ್ಕೆ ತುಂಬಾ ತೊಂದರೆಯಾಗುತ್ತದೆ ಲೇಖಕರು ಸುಸ್ಪಷ್ಟ ರೀತಿಯಲ್ಲಿ ಬರೆದ ಲೇಖಗಳನ್ನು ಸಂಪಾದಕರ ವಿಳಾಸಕ್ಕೆ ಕಳುಹಿಸಬೇಕು.

* ಇನ್ನೂ ವರೆಗೂ ಚಂದಾ ಹಣವನ್ನು ಕಳಿಸದ ಚಂದಾದಾರರು ಅದಷ್ಟು ಕೂಡಲೆ ಕಾರ್ಯದರ್ಶಿ 'ವೀರಮಾತೆ' ವನಿತಾ ಸೇವಾ ಸಮಾಜ, ಧಾರವಾಡ. ಈ ವಿಳಾಸಕ್ಕೆ ಚಂದಾಹಣವನ್ನು ಕಳುಹಿಸಿಕೊಡಬೇಕು.

* ಚಂದಾದಾರರು, ತಮ್ಮ ವಿಳಾಸ ಬದಲಾದಲ್ಲಿ, ಹಾಗೆ ತಿಳಿಸಿದರೆ, 'ವೀರಮಾತೆ' ಯು ತ್ವರಿತವಾಗಿ ಮುಟ್ಟುವಂತೆ ದಕ್ಷತೆ ವಹಿಸಲಾಗುವದು.

* ಲೇಖಕರು ಅಥವಾ ವಾಚಕರು, ಲೇಖ ಕಳಿಸುವದಾಗಲಿ ಉಳಿದ ಯಾವದೇ ಪತ್ರವ್ಯವಹಾರ ಮಾಡುವಾಗ ತಮ್ಮ ವಿಳಾಸವನ್ನು ಸ್ಪಷ್ಟ ರೀತಿಯಲ್ಲಿ ಬರೆದು ತಿಳಿಸಲು ಮರೆಯಬಾರದು.

* ಹೊಸದಾಗಿ ಚಂದಾದಾರರಾಗಬಯಸುವವರು, ಚಂದಾ ಹಣವನ್ನು ಮೊದಲು ಕೊಟ್ಟು ಕಳಿಸಿದರೆ, ಮಾಸಿಕವನ್ನು ಅವರ ವಿಳಾಸಕ್ಕೆ ಕಳಸುವತ್ತ ಗಮನಿಸಲಾಗುವದು.

* ಸೋದರ, ಸೋದರಿಯರು, ಅಕ್ಕನಟ್ಟಿಗೆಯ ವಿಭಾಗದಲ್ಲಿ ಬರುವ ಸ್ಪರ್ಧೆಗಳಿಗೆ ಉತ್ತರಗಳನ್ನು ಪ್ರತಿತಿಂಗಳ ೧೦ ನೇ ತಾರೀಖಿನ ಒಳಗಾಗಿ ಕಳುಹಿಸಬೇಕು.

* * * * * *



## ಜಾಹಿರಾತಿಗಾಗಿ ಕಾದಿರಿಸಿದೆ.

### ದರಗಳು

| | ೧ ವರ್ಷಕ್ಕೆ | ಅರ್ಧ ವರ್ಷಕ್ಕೆ | ೩ ತಿಂಗಳಿಗೆ | ೧ ತಿಂಗಳಿಗೆ |
|---|---|---|---|---|
| ಪೂರ್ಣ ಪುಟ .... | ೮೦ ರೂ. .... | ೪೫ ರೂ. .... | ೨೫ ರೂ. .... | ೧೫ರೂ |
| ಅರ್ಧ ಪುಟ .... | ೪೫ ,, .... | ೨೫ ,, .... | ೧೫ ,, .... | ೧೦ ,, |
| ಕಾಲು ಪುಟ .... | ೨೫ ,, .... | ೧೫ ,, .... | ೧೨ ,, .... | ೮ ,, |

# ವೀರ ಮಾತೆ

S.G.Badiger.

ಸಂಪುಟ ೮ ] ನವ್ಹಂಬರ ೧೯೫೯ [ ಸಂಚಿಕೆ ೬

# 'VEERAMATE' WOMEN'S VOICE

The Largest Circulated

KANNADA MONTHLY

## ಸಂಪಾದಕ ಮಂಡಲ

ಶ್ರೀಮತಿ ಸರೋಜಿನಿ ಮಹಿಷಿ M. A. LL B. ಮುಖ್ಯ ಸಂಪಾದಿಕೆಯರು.
,, ವೆಂಕಮ್ಮಾ ಕೊಯಿಮತ್ತೂರ ಸಹ ಸಂಪಾದಿಕೆಯರು.
ಶ್ರೀಯುತ ಹಳಪೇಟಿ ಚಿಂತಾಮಣಿರಾಯರು ಸದಸ್ಯರು
,, ನಾರಾಯಣ ಶರ್ಮಾ ,,
,, ಹೊನ್ನಾಪುರಮಠ ಚಂ. ಗ. B.A.,LL.B. ,,
,, ಬಿ. ಎಸ್. ಮಾವಿನಕುರ್ವೆ ಅಡ್ವೋಕೇಟ, ಸರಕಾರಿ ವಕೀಲರು ಕಾರವಾರ ,,

## ಕಾರ್ಯ ನಿರ್ವಾಹಕ ಮಂಡಲ

ಶ್ರೀಯುತ ಕುರಡಿ ನಾರಾಯಣಾಚಾರ್ಯರು ಅಧ್ಯ
ಶ್ರೀಮತಿ ಸರೋಜಿನಿ ಮಹಿಷಿ M. A.,LL B. ಉಪಾಧ
ಶ್ರೀಯುತ ಲ. ರಂ. ಪುರಾಣಿಕ ಕಾರ್ಯದರ್ಶಿ ಪ್ರಕಾಶಕರು, ಕೋಶಾಧ್ಯ
,, ಎಸ್. ವ್ಹಿ. ಮೆಳ್ಳೇಗಟ್ಟಿ B.A. LL. B. ಸದ
ಶ್ರೀಮತಿ ವೆಂಕಮ್ಮಾ ಕೊಯಿಮತ್ತೂರ ,,
,, ಕೃಷ್ಣಾಬಾಯಿ ಕರ್ಣಿಕ ,,

---

ರಜಿಸ್ಟ್ರೇಶನ್ ಆಫ್ ನ್ಯೂಜ ಪೇಪರ್ಸ (ಸೆಂಟ್ರಲ್) ರೂಲ್ಸ ೧೯೫೬ರ ಆರನೇ ನಿಯಮಕ್ಕೆ ಸಂಬಂಧಿಸಿದಂತೆ "ವೀರಮಾತೆ" ಮಾಸಪತ್ರಿಕೆಯ ಸ್ವಾಮಿತ್ವ ಮತ್ತು ಇತರ ವಿಷಯುಗಳ ಬಾಬತ ವಿವರ:—

| | |
|---|---|
| ೧. ಪ್ರಕಾಶನ ಸ್ಥಳ— | ವನಿತಾ ಸೇವಾ ಸಮಾಜ ಧಾರವಾಡ. |
| ೨. ನಿಯಮಿತ ಕಾಲಿಕತೆ— | ಮಾಸಪತ್ರಿಕೆ |
| ೩. ಮುದ್ರಕರ ಹೆಸರು— | ರಾಮರಾವ ಕುಲಕರ್ಣಿ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವೀರಮಾತೆ ಕಾರ್ಯಾಲಯ ಧಾರವಾಡ |
| ೪. ಪ್ರಕಾಶಕರ ಹೆಸರು— | ಲ. ರಂ. ಪುರಾಣಿಕ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವನಿತಾ ಸೇವಾ ಸಮಾಜ ಧಾರವಾಡ |
| ೫. ಸಂಪಾದಕರ ಹೆಸರು— | ಸರೋಜನಿ ಮಹಿಷಿ ಎಮ್. ಎ. ಎಲ್‌ಎಲ್. ಬಿ. |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ಲೈನಬಝಾರ ಧಾರವಾಡ |
| ೬. ಪತ್ರಿಕಾ ಸ್ವಾಮಿತ್ವ ವಿಳಾಸ— | ಕಾರ್ಯಕಾರಿ ಮಂಡಳ |
| ಮತ್ತು ಬಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ— | ವನಿತಾ ಸೇವಾ ಸಮಾಜ ಧಾರವಾಡ |

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣೀಕನಾದ ನಾನು ಮೇಲಿನ ವಿವರಗಳಲ್ಲಿಯ ಎಲ್ಲ ವಿಷಯುಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣೀಕ.

# ಪ ರಿ ವಿ ಡಿ

# ವನಿತಾ ಸೇವಾ ಸಮಾಜದಲ್ಲಿ

## ಗೋಕುಲಾಷ್ಟಮಿಯಂದು ನಡೆದ ಶ್ರೀ ಕೃಷ್ಣ ಜಯಂತ್ಯುತ್ಸವದ ವರದಿ

ರಾಮಾಯಣ ಮಹಾಭಾರತಗಳು ಭಾರತೀಯ ಧರ್ಮ ಗ್ರಂಥಗಳಾಗಿವೆ. ಮಹಾಭಾರತವನ್ನು ಪಂಚಮ ವೇದ ಎಂದು ತಿಳಿಯಲಾಗುತ್ತಿದೆ. ಭಾರತೀಯ ಈ ಮಹಾ ಪುರಾಣಗಳ ಶ್ರೀರಾಮ ಹಾಗೂ ಶ್ರೀ ಕೃಷ್ಣರು ಭಾರತೀಯರಿಗಷ್ಟೆ, ಅಲ್ಲ ನೆರೆಯ ಸಾಗರೋತ್ತರ ದೇಶಗಳವರಿಗೂ ಸಹ ಪರಮದೈವತರಾಗಿರುವರು. ಇವರ ಐತಿಹಾಸಿಕತೆಯ ಬಗ್ಗೆ ವಾದ ವಿವಾದಗಳೇನೇ ಇದ್ದರೂ ಶ್ರೀ ರಾಮ ಹಾಗೂ ಶ್ರೀ ಕೃಷ್ಣರು ಭಗವದವತಾರರು ಎಂಬ ನಂಬುಗೆ ದೃಢವಾಗಿಯೇ ಇದೆ. ರಾಮಾಯಣ ಮಹಾಭಾರತಗಳು ಭಾರತೀಯ ಜೀವನದ ಹಾಸುಹೊಕ್ಕುಗಳಾಗಿವೆ. ಶ್ರೀರಾಮ ಶ್ರೀ ಕೃಷ್ಣರನ್ನು ಮನೆ ಮನೆಯಲ್ಲಿ ಪೂಜಿಸಲಾಗುತ್ತಿದೆ. ಉತ್ತರ ಹಾಗೂ ದಕ್ಷಿಣ ಭಾರತಗಳೆರಡರಲ್ಲೂ ಶ್ರೀರಾಮ ಶ್ರೀ ಕೃಷ್ಣರ ಜನ್ಮ ದಿನದ ಜಯಂತ್ಯುತ್ಸವವನ್ನು ಬಹು ವಿಜೃಂಭಣೆಯಿಂದ ಆಚರಿಸಲಾಗುತ್ತಿದೆ.

ಇಂದು ದಿ (೨೬-೮-೫೯) ಗೋಕುಲಾಷ್ಟಮಿ, ಎಂದರೆ ಭಗವಾನ್ ಶ್ರೀಕೃಷ್ಣನು ಜನಿಸಿದ ದಿನವಾದ್ದರಿಂದ ವನಿತಾ ಸೇವಾ ಸಮಾಜದಲ್ಲಿ ಶ್ರೀ ಕೃಷ್ಣ ಜಯಂತ್ಯುತ್ಸವವನ್ನು ಎಂದಿನಂತೆ ಉತ್ಸಾಹದಿಂದ ಆಚರಿಸಲಾಯಿತು. ಇಂತಹ ಸಮಯಗಳಲ್ಲಿ ವನಿತಾ ಸೇವಾ ಸಮಾಜವು ಹೊರಗಣಿಂದ ಗಣ್ಯರಾದ ಮಹನೀಯರನ್ನು ಮುಖ್ಯಾತಿಥಿಗಳನ್ನಾಗಿ ಬರಮಾಡಿಕೊಳ್ಳುವ ರೂಢಿಯಿರುವದಾದರೂ ಈ ಬಾರಿ ಹೊರಗಣಿಂದಾರನ್ನೂ ಕರೆತರದೆ ವನಿತಾ ಸೇವಾ ಸಮಾಜದೊಳಗಣವರೂ ಗಣ್ಯ ವ್ಯಕ್ತಿಗಳಾಗಿದ್ದ ಶ್ರೀಮತಿ ಯಮುನಾಬಾಯಿ ನಾಡಕರ್ಣಿ ಪ್ರಾಧ್ಯಾಪಿಕೆಯರು ವನಿತಾ ಟ್ರೇನಿಂಗ ಕಾಲೇಜ ಧಾರವಾಡ ಅವರ ಹಿರಿಯತನದಲ್ಲಿಯೇ ಈ ಬಾರೆಯ ಶ್ರೀ. ಕೃಷ್ಣ ಜಯಂತ್ಯುತ್ಸವದ ಆಚರಣೆಯು ನಡೆದುದು ಒಂದು ವೈಶಿಷ್ಟ್ಯವೇ ಆಗಿದ್ದಿತು. ಶ್ರೀ ಕೃಷ್ಣ ಜಯಂತ್ಯುತ್ಸವದ ಸಲುವಾಗಿ ವನಿತಾ ಸೇವಾ ಸಮಾಜದ ವಿಶಾಲವಾದ ಸಭಾಂಗಣದ ವೇದಿಕೆಯ ಮೇಲೆ ಶ್ರೀಕೃಷ್ಣನ ಪ್ರತಿಮೆಯನ್ನಿರಿಸಿ ಅಲಂಕರಿಸಿ ಪೂಜಿಸಲಾಗಿದ್ದಿತು. ಮಧ್ಯಾಹ್ನ ೩ ಗಂಟೆಯಿಂದ ೬ ಗಂಟೆಯವರೆಗೆ ವನಿತಾ ಸೇವಾ ಸಮಾಜದ ವನಿತಾ ಪ್ರಾಯೋಗಿಕ ಮಾಧ್ಯಮಿಕ ಶಾಲೆಗಳ ಬಾಲಿಕೆಯರಿಂದ ಶ್ರೀಕೃಷ್ಣ ಪರಮಾತ್ಮನ ಲೀಲೆಗಳನ್ನು ಪ್ರತಿನಿಧಿಸುವ ವಿವಿಧ ವಿನೋದಾವಳಿಗಳ ಕಾರ್ಯಕ್ರಮಗಳು ನಡೆದುವು. ಸಭಾಂಗಣವು ವನಿತಾ ಸೇವಾ ಸಮಾಜದ ಕಾರ್ಯಕರ್ತರು ವಿದ್ಯಾರ್ಥಿನಿಯರು ಶಿಕ್ಷಕ ವೃಂದದಿಂದ ಕಿಕ್ಕಿರಿದು ತುಂಬಿದ್ದಿತು. ನೃತ್ಯ ಗಾಯನಗಳಿಂದ ಕೋಲಾಟದಿಂದ ಭಗವಾನ್ ಶ್ರೀ ಕೃಷ್ಣಪರಮಾತ್ಮನ ಲೀಲೆ ವಿವಿಧ ಭಂಗಿಗಳನ್ನೆತ್ತಿ ತೋರುತ್ತಿದ್ದ ಈ ಕಾರ್ಯಕ್ರಮಗಳು ಮನಸೆಳೆಯುವವಾಗಿದ್ದವು ಕು. ಪ್ರತಿಭಾ ವಿದ್ಯಾರ್ಥಿನಿ ದಿವಾಣಗಳು ಶ್ರೀಮದ್‌ಭಗವದ ಗೀತೆಯ ಪ್ರಥಮೋಧ್ಯಾಯವನ್ನು ಮುಖೋದ್ಗತವಾಗಿ ಅಂದುದು ಈ ಕಾರ್ಯಕ್ರಮಗಳಿನ ಒಂದು ವಿಶೇಷವಾಗಿದ್ದಿತು. ಬಾಲಕರು ಗೀತಾಧ್ಯಾಯನವನ್ನು ಕಡೆಗಣಿಸುತ್ತ ನಡೆವ ಪ್ರವೃತ್ತಿಯುಳ್ಳವರಾಗುತ್ತಿರುವ ಕಾಲದಲ್ಲಿ ಬಾಲಿಕೆಯರು ಗೀತಾಭ್ಯಾಸದಲ್ಲಿ ಲವಲವಿಕೆಯುಳ್ಳವರಾಗುತ್ತಿರುವದು ಶುಭ ಚಿಹ್ನವೆಂದೇ ಹೇಳಬೇಕು. ಈ ಬಾರೆಯ ಶ್ರೀಕೃಷ್ಣ ಜಯಂತ್ಯುತ್ಸವದ ಆಚರಣೆಯ ಇನ್ನೊಂದು ವಿಶೇಷವೆಂದರೆ ಉದ್ದುದ್ದ ಭಾಷಣಗಳಿರಲಿಲ್ಲ ವಲ್ಲದೆ ಉತ್ಸವದ ಕಾರ್ಯಕ್ರಮದ ಹೊಣೆಯನ್ನು ವನಿತಾ ಸೇವಾ ಸಮಾಜದ ಕಾರ್ಯಕರ್ತರು ಅಥವಾ ಶಿಕ್ಷಕರಲ್ಲೊಬ್ಬರು ತಾವೇ ವಹಿಸದೆ ವಿದ್ಯಾರ್ಥಿನಿಯರಲ್ಲೊಬ್ಬರು—ಶ್ರೀ ಪ್ರೇಮಾ ಮಂಗಳೂರ ವಹಿಸಿದರು.

ಶ್ರೀ ಕೃಷ್ಣ ಜಯಂತ್ಯುತ್ಸವದ ನಿಮಿತ್ತವಾದ ವಿವಿಧ ವಿನೋದಾವಳಿಗಳ ಕಾರ್ಯಕ್ರಮಗಳು ಮುಗಿದ ನಂತರ ಶ್ರೀ ದಾದಾ (ವನಿತಾ ಸೇ. ಸ. ಕಾರ್ಯದರ್ಶಿಗಳಾದ ಶ್ರೀ. ಲ. ರ. ಪುರಾಣಿಕ,) ಅವರು ವನಿತಾ ಮಾಧ್ಯಮಿಕ ಶಾಲೆಯ ಪ್ರಾಧ್ಯಾಪಕರಾದ ಶ್ರೀ ಓಂಕಾರ ಕೃಷ್ಣಮೂರ್ತಿ ಅವರನ್ನು ಬಿನ್ನವಿಸಲಾಗಿ ಭಗವಾನ್ ಶ್ರೀ ಕೃಷ್ಣ ಪರಮಾತ್ಮನ ಮಹಿಮೆಯ ಬಗೆಗೆ ಸಮಯೋಚಿತವಾದ ನಾಲ್ಕು ಮಾತುಗಳನ್ನವರಾಡಿದರು. ಇಂದಿನ ಉತ್ಸವದ ಆಚರಣೆಗೆ ಅಧ್ಯಕ್ಷಿಣಿಯರಾಗಿದ್ದ ಶ್ರೀ ಯಮುನಾಬಾಯಿ ನಾಡಕರ್ಣಿ ಅವರು ಸಮಾರೋಪವನ್ನು ಮಾಡುತ್ತ ಚಿಕ್ಕಭಾಷಣವನ್ನು ಮಾಡಿದರೂ ಭಗವಾನ್ ಶ್ರೀಕೃಷ್ಣನ ಬೋಧೆಯ ಸಾರವೆಲ್ಲವು 'ಕರ್ಮಣ್ಯೇವಾಧಿಕಾರಸ್ತೇ ಮಾಫಲೇಷು ಕದಾಚನ' ಎಂಬ ಭಗವದ್ಗೀತೆಯಲ್ಲಿಯ ಉಕ್ತಿಯಲ್ಲಡವಾಗಿದೆ ಎಂಬುದನ್ನು ಬಿಂಬಿಸುತ್ತ ಹೇಳಿದರು. ಅನಂತರ ಶ್ರೀ ಕೃಷ್ಣ ಮಂಗಲಾರತಿ ಪೂಜೆ ನಡೆದು ಪ್ರಸಾದ ವಿತರಣೆ, 'ವಂದೇ ಮಾತರಂ' ಗೀತೆಯಾಗಿ ಇಂದಿನ ಶ್ರೀಕೃಷ್ಣ ಜಯಂತ್ಯುತ್ಸವದ ಕಾರ್ಯಕ್ರಮಗಳು ಕೊನೆಗೊಂಡುವು.

# ವೀರಮಾತೆ






ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಾದ
ಕನ್ನಡ ಮಾಸಪತ್ರಿಕೆ

ಟ ೮ | ನವ್ಹಂಬರ | ಸಂಚಿಕೆ ೬




## ಸಂಪಾದಕೀಯ



ಮಹಿಳೆಯರ ಶಿಕ್ಷಣವನ್ನು ಪ್ರತ್ಯೇಕವಾಗಿಯೇ ಪರಿಶೀ
ಕೆಂದು ಶ್ರೀಮತಿ ದುರ್ಗಾಬಾಯಿ ದೇಶಮುಖರ ಅಧ್ಯಕ್ಷತೆ
ರಚಿತವಾದ ಸಮಿತಿಯು ಅಭಿಪ್ರಾಯ ಪಟ್ಟಿತು.
ಾನ್ಯವಾಗಿ ಈಗ ದೊರೆಯುತ್ತಿರುವ ಶಿಕ್ಷಣದ ಹಿನ್ನೆಲೆ
ಯೇ ಯೋಚಿಸಿದರೆ ಸಾಕಾಗದು. ಆದೊಂದು ಅಖಿಲ
ಪ್ರಶ್ನೆಯೆಂದು ಪ್ರತ್ಯೇಕವಾಗಿಯೇ ವಿಮರ್ಶಿಸಬೇಕು.
ೊಬ್ಬ ಮಹಿಳೆಯು ಶಕ್ತಿಯನ್ನು ಪಡೆದು ಸ್ವತಂತ್ರವಾಗಿ
ದರೆ ಮಾತ್ರ ಅವಳ ಅನೇಕ ಸಮಸ್ಯೆಗಳು ದೂರವಾಗ
ದು ಎಂದು ಶ್ರೀಮತಿ ದುರ್ಗಾಬಾಯಿಯವರು
ಪ್ರಾಯಪಟ್ಟಿದ್ದಾರೆ ಗಳಿಸುವ ಸಾಮರ್ಥ್ಯ ಪಡೆಯುವ
ೇ ಒಳ್ಳೆಯದೇ! ಆದರೆ ಇಂದಿದ್ದ ಸಮಸ್ಯೆಗಳು ಹೋಗಿ
ದಕ್ಕೆ ಹೊಸ ಸಮಸ್ಯೆಗಳು ತುಂಬಿಕೊಳ್ಳುವದೂ ಅಷ್ಟೇ
ಗಳಸಬಾರದು, ಎಂಬ ಕಾರಣಕ್ಕಾಗಿ ಉಂಟಾಗಿದ್ದ
ಸ್ಯೆಗಳು ಹೋಗಬಹುದು.

ಸಾಮಾಜಿಕರ ವಿಚಾರದ ರೀತಿ ಹಾಗೂ ಅವರು
ನ ಸಾಮಾಜಿಕ ಶೈಕ್ಷಣಿಕ ನೀತಿಗಳಲ್ಲಿ ಕ್ರಾಂತಿಕಾರಕ
ವ್ಯತ್ಯಾಸಗಳಾಗಬೇಕಾಗಿವೆ. ಬಹು ಸಂಖ್ಯಾಕ ಮಹಿಳೆಯರು
ಶಿಕ್ಷಣ ಪಡೆದು ಗೃಹಿಣಿಯರೂ, ತಾಯಂದಿರೂ ಆಗಿ ಬಾಳ
ಬೇಕಾದ್ದರಿಂದ ಗೃಹವಿಜ್ಞಾನ, ಶಿಶುಸಂಗೋಪನ ಇವುಗಳನ್ನು
ಕುರಿತ ಶಾಸ್ತ್ರೀಯವಾದ ಶಿಕ್ಷಣ ಅಗತ್ಯ ಎಂದು ಬಹು ಜನರು
ಅಭಿಪ್ರಾಯ ಪಡುತ್ತಾರೆ. ಅದೂ ನಿಜ. ಒಟ್ಟು ಕುಟುಂಬದ
ಪರಂಪರೆ ಅಸ್ತಿತ್ವದಲ್ಲಿದ್ದಾಗ ಗೃಹನಿರ್ವಹಣೆಯ ಜ್ಞಾನವು
ಬಾಲಿಕೆಗೆ ದೊರೆಯುತ್ತಿತ್ತು. ಶಾಸ್ತ್ರೀಯವಾದ ಜ್ಞಾನ ಆದಾ
ಗಿರದಿದ್ದರೂ ರೂಢಿಜನ್ಯ ಜ್ಞಾನವಾಗಿರುತ್ತಿತ್ತು. ಆದರೆ
ಇಂದಿನ ಪರಿಸ್ಥಿತಿಯಲ್ಲಿ ಎಸ್. ಎಸ್. ಸಿ. ವರೆಗೆ ಅಭ್ಯಾಸ
ಮಾಡಿದರೂ ಬಾಲಿಕೆಗೆ ಗೃಹನಿರ್ವಹಣೆಯ ಜ್ಞಾನ ಹೆಚ್ಚಾಗಿ
ದೊರೆಯಲಿಕ್ಕಿಲ್ಲ.

ಯಾವದಾದರೊಂದು ನೌಕರಿ ಮಾಡಬೇಕಿದ್ದರೆ ವಿಶಿಷ್ಟ
ಶಿಕ್ಷಣ ಅರ್ಹತೆಗಳು ಬೇಕಾಗುತ್ತವೆ. ಆದರೆ ತಾಯಿ ತಂದೆ
ಗಳಾಗಿ ಹೊಣೆಯನ್ನು ಹೊರಲು ಯೋಗ್ಯ ಶಿಕ್ಷಣ ಅರ್ಹತೆ
ಗಳು ಬೇಕಾಗುತ್ತವೆಯೆಂದು ನಮ್ಮ ಜನ ನಂಬುವದಿಲ್ಲ.
“ಇದೇನು ಮಹಾ! ತಾನೇ ಬರುತ್ತದೆ.” ಎಂದು ತಿಳಿಯು

ತ್ತಾರೆ. ಇಂದಿನ ಬಹುಸಂಖ್ಯಾಕ ಅಜ್ಞಾನಿ ಪಾಲಕರನ್ನು ನೋಡಿದರೆ ಈ ಮಾತಿನ ಸತ್ಯಾಸತ್ಯತೆ ಕಂಡು ಬರುತ್ತದೆ. ಜೀವನ ಶಿಕ್ಷಣ ಕೈಗಾರಿಕೆ ಮೊದಲಾದವುಗಳಿಗೆ ಪ್ರಾಥಮಿಕ ಮಟ್ಟದಲ್ಲಿ ಹೇಗೆ ಪ್ರಾಧಾನ್ಯ ದೊರೆತಿದೆಯೋ ಹಾಗೆ ಗೃಹ ವಿಜ್ಞಾನ ಮೊದಲಾದವುಗಳಿಗೂ ಪ್ರಾತ್ಯಕ್ಷಿಕೆ ಸಹಿತ ದೊರೆಯ ಬೇಕಾದ್ದು ಅತ್ಯವಶ್ಯ !

ಮಗುವಿಗೆ ಶಿಕ್ಷಣ ಕೊಡುವ ಅವಶ್ಯಕತೆ, ಅದರಲ್ಲಿಯೂ ಹೆಣ್ಣು ಮಗುವಿಗೆ ಶಿಕ್ಷಣ ಕೊಡುವ ಅವಶ್ಯಕತೆ ಬಹುಜನರಿಗೆ ಭಾಸವಾಗುವದಿಲ್ಲ. ಆದರೆ ಯಾವುದೇ ಬಿಕ್ಕಟ್ಟಿನ ಪರಿಸ್ಥಿತಿ ಬಂದಾಗ ಎರಡಕ್ಷರ ಕಲಿತಿದ್ದರೆ ಒಳ್ಳೇದಾಗುತ್ತಿತ್ತು. ಎಂದು ಅವರಿಗೇ ಅನಿಸುತ್ತದೆ. ಇಂದು ಪರಿತ್ಯಕ್ತೆಯರ ಹಾಗೂ ವಿಧವೆಯರ ಹಾಗೂ ಅಸಹಾಯ ಸ್ಥಿತಿಯಲ್ಲಿದ್ದವರ ಪ್ರಶ್ನೆ ದಿನೇ ದಿನೇ ತೀವ್ರವಾಗುತ್ತಿದೆ. ಎಲ್ಲ ಅಂತಹ, ಸ್ಥಿತಿಗಳಲ್ಲಿದ್ದ ಮಹಿಳೆಯರಿಗೂ ವಿವಿಧ ರೀತಿಯ ತರಬೇತಿಗಳನ್ನು ಕೊಡುವ ಯೋಜನೆಗಳನ್ನು ಮಾಡಲಾಗುತ್ತಿದೆ. ಇಪ್ಪತ್ತು ಹಾಗೂ ಮೂವತ್ತೈದು ವಯಸ್ಸಿನ ನಡುವಿದ್ದ ಅಸಹಾಯ ಸ್ಥಿತಿಯ ಮಹಿಳೆಯರಿಗೆ ಎರಡು ವರ್ಷಗಳ ಅಲ್ಪಾವಧಿ ತರಬೇತಿಯನ್ನು ಕೊಟ್ಟು, ಅವರನ್ನು ಗ್ರಾಮಾಂತರ ಪ್ರದೇಶಗಳಲ್ಲಿ ಗ್ರಾಮ ಸೇವಕಿಯರೆಂದು ನಿಯಮಿಸಲಾಗುವದು. ಗ್ರಾಮಗಳಲ್ಲಿ ವಾಸಿಸುತ್ತಿದ್ದ ಮಹಿಳೆಯರಿಗೇ ಈ ತರಬೇತಿಯಲ್ಲಿ ಪ್ರಾಶಸ್ತ್ಯ ಕೊಡಲಾಗುವದು. ಇಲ್ಲದೇ ಹೋದಲ್ಲಿ ಪಟ್ಟಣದಲ್ಲಿ ವಾಸಿಸುವಂಥವರು ಹಳ್ಳಿಗಳಲ್ಲಿ ಹೋಗಿ ವಾಸಿಸಲು ಒಪ್ಪುವದಿಲ್ಲ. ಅದೇ ರೀತಿ ಸೂಲಗಿತ್ತಿಯರ ಶಿಕ್ಷಣವನ್ನೂ ಅನೇಕ ಮಹಿಳೆಯರಿಗೆ ಕೊಟ್ಟು ಅವರನ್ನು ಸೇವೆ ಸಲ್ಲಿಸುವದಕ್ಕಾಗಿ ಗ್ರಾಮಾಂತರ ಪ್ರದೇಶಗಳಿಗೆ ಕಳಿಸಲಾಗುತ್ತಿದೆ. ಇವೆಲ್ಲ ಈ ಸಂಧಿಕಾಲದಲ್ಲಿ ಪ್ರೌಢರಿಗೋಸುಗ ಕೈಕೊಳ್ಳಬೇಕಾದ ತರಬೇತಿಯ ಸೌಕರ್ಯಗಳು- ಇವೆಲ್ಲವುಗಳಿಗಿಂತ ಹೆಚ್ಚಾಗಿ ಇಂದು ಪ್ರೌಢಮಹಿಳೆಯರು ಯಾವುದೋ ಒಂದು ಬಿಕ್ಕಟ್ಟಿನ ಪರಿಸ್ಥಿತಿಯಿಂದ ಹೊರಬರುತ್ತಿದ್ದಾಗ ತಮ್ಮಂಥ ದುರ್ದೈವಿಗಳು ಜಗತ್ತಿನಲ್ಲಿಯೇ ಇಲ್ಲ ಎಂಬ ಭಾವನೆಯನ್ನು ತೆಗೆದೇ ಬಿಡುತ್ತಾರೆ. ತಾವು ಹೊರಗೆ ಬಂದು ಸೇವೆ ಸಲ್ಲಿಸಬೇಕಾಗಿ ಬಂದಿರುವದು ಒಂದು ಪಾಪ, ಅಪರಾಧ ಅನ್ನುವ ರೀತಿಯಲ್ಲಿ ನೋಡಿಕೊಳ್ಳುತ್ತಾರೆ. ಈ ಭಾವನೆ ಅವರಿಂದ ತೊಲಗಬೇಕು. ಅವರನ್ನು ಬರಮಾಡಿಕೊಳ್ಳುವ ಸಮಾಜದಿಂದ ತೊಲಗಬೇಕು.

ಸ್ತ್ರೀಯರೇ, ಸೇವೆ ಸಲ್ಲಿಸಬೇಕಾದಂಥ ಕ್ಷೇತ್ರಗಳೂ ಇಂದು ವಿಸ್ತಾರವಾಗಿವೆ. ಪ್ರಾಥಮಿಕ ಶಿಕ್ಷಣ, ಪೂರ್ವ ಪ್ರಾಥಮಿಕ ಶಿಕ್ಷಣ, ವೈದ್ಯಕೀಯ ಕ್ಷೇತ್ರ, ಗ್ರಾಮಾಂತರ ಅಭ್ಯುದಯ ಇತ್ಯಾದಿಗಳಲ್ಲೆಲ್ಲ ಸೇವೆ ಸಲ್ಲಿಸಲು ಅ[illegible] ಸ್ತ್ರೀಯರು ಬೇಕಾಗುತ್ತಿದ್ದಾರೆ. ತೃತೀಯ ಪಂಚವಾ[illegible] ಯೋಜನೆಯಲ್ಲಿ ಬೇಕಾದ ಇವರ ಸಂಖ್ಯೆ ತುಂಬ ದೊ[illegible] ಗಿದೆ: ಅಷ್ಟು ಜನ ಸ್ತ್ರೀಯರನ್ನು ತರಬೇತಿಗೊಳಿಸ[illegible] ಸಾಧ್ಯವೇ ? ಎಂಬ ಪ್ರಶ್ನೆಯೂ ಎದ್ದು ನಿಲ್ಲಬಹುದು.

ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ [illegible] ಕೋಟಿ ರೂಪಾಯಿಗಳನ್ನು ಮಹಿಳೆಯರ ಶಿಕ್ಷಣಕ್ಕಾಗ[illegible] ಲಾಗಿಡಬೇಕೆಂದು ಪ್ರಯತ್ನ ನಡೆಸಲಾಗಿದೆ. ವಿವಿಧ ಯೋ[illegible] ಗಳು ರೂಪಿಸಲ್ಪಡುತ್ತಿವೆ. ಅವುಗಳ ಲಾಭವನ್ನು [illegible] ಕೊಳ್ಳಲು ಮಹಿಳೆಯರೇ ಮುಂದೆ ಬರಬೇಕು.

---

## ಕರ್ನಾಟಕ ವಿಶ್ವವಿದ್ಯಾಲಯದ ಶ್ರೀ. ಡಿ ಸಿ. ಪಾ[illegible] ಇವರ ಹೀರಕ ಮಹೋತ್ಸವ

ಮುಂಬಯಿ ರಾಜ್ಯದ ಶಿಕ್ಷಣಾಧಿಕಾರಿಗಳಾಗಿ ರ್‍ಯಾ[illegible] ಶ್ರೀ. ಡಿ. ಸಿ. ಪಾವಟೆಯವರು ಸೇವೆಸಲ್ಲಿಸಿದರು. [illegible] ಅನುಭವದ ಇನ್ನೂ ಆಳವಾದ ಲಾಭ ಅವರು ಕರ್ನಾ[illegible] ವಿಶ್ವವಿದ್ಯಾಲಯದ ವ್ಹೈಸ್ ಚಾನ್ಸಲರರಾದ ಜನತೆಗೆ [illegible] ಯಿತು. ವಿಶ್ವವಿದ್ಯಾಲಯ ಹೊಸದು : ಕರ್ನಾಟಕ [illegible] ಪುನರ್ಘಟನೆಯ ತರುವಾಯ ಕರ್ನಾಟಕ ವಿಶ್ವವಿದ್ಯಾಲ[illegible] ಕಕ್ಕೆ ಇನ್ನೂ ದೊಡ್ಡವಾಯಿತು. ಇಂತಹ ಸಂದರ್ಭ[illegible] ಉದ್ಭೂತವಾದಅನೇಕ ಸಮಸ್ಯೆಗಳನ್ನು ಎದುರಿಸಿಶ್ರೀ. ಪಾ[illegible] ಯವರು ವಿಶ್ವವಿದ್ಯಾಲಯವನ್ನು ಕಟ್ಟಿದರು. ಕಟ್ಟಡವನ್[illegible] ಇಲ್ಲ ಕನ್ನಡ ನಾಡಿನ ಯುವಕ ಜನಾಂಗವನ್ನು ಹೊಸ[illegible] ಕಟ್ಟಿದರೆನ್ನಬೇಕು.

ದೂರದ ಥೋಟಾ ಮಹಾಬಳೇಶ್ವರ ಕಾಡಿನ ಮಧ್[illegible] ಸುಂದರ ಕಟ್ಟಡಗಳಿಂದ ವಿದ್ಯಾಮಂದಿರಗಳಿಂದ ಸುಶೋ[illegible] ವಾಗಿದೆ. ಎಲ್ಲೆಲ್ಲಿಂದಲೋ ವಿದ್ವಾಂಸರು ಬಂದು ಅಲ್ಲಿ[illegible] ಸಿದ್ದಾರೆ. ಅಲ್ಲಿಯ ವಾತಾವರಣವನ್ನು ನೋಡಿದರೆ ಹಿ[illegible] ಋಷಿಗಳ ಗುರುಕುಲದ ನೆನಪಾಗುತ್ತದೆ ಇದಕ್ಕೆಲ್[illegible] ಕಾರಣ ಉಪಕುಲಗುರು ಶ್ರೀ. ಪಾವಟೆಯವರ ತ[illegible] ಅವರ ಕರ್ತೃತ್ವ ಶಕ್ತಿ : ಇನ್ನೊಬ್ಬರಿಂದ ಕೆಲಸ ತೆಗೆದು[illegible] ಬಲ್ಲ ಅವರ ಸಹಿಷ್ಣುತೆ!

ಶ್ರೀಮಾನ್ ಪಾವಟೆಯವರ ಹೀರಕ ಮಹೋತ್[illegible] ಇದೇ ನವ್ಹೆಂಬರ ೭ ರಂದು ರಾಷ್ಟ್ರಾಧ್ಯಕ್ಷ ಡಾ. ರಾಜೆ[illegible] ಪ್ರಸಾದ ಇವರ ಹಿರಿತನದಲ್ಲಿ ನೆರವೇರಲಿದೆ. ದೇಶ[illegible] ಗಳಿಂದ ವಿದ್ವಾಂಸರು, ಶಿಕ್ಷಣ ತಜ್ಞರು ಸಮಾರಂಭಕ್ಕೆ [illegible] ಸಲಿದ್ದಾರೆ. ಶಿಕ್ಷಣ ಪ್ರೇಮಿಗಳಿಗೆ ಅಂದೊಂದು ಹಬ್ಬ !

ಶ್ರೀ. ಪಾವಟೆಯವರು ಶ್ರೀ ಸರಸ್ವತಿಯರ [illegible] ಪಾತ್ರರಾಗಿ ಚಿರಕಾಲ ಬಾಳುವಂತೆ ಅನುಗ್ರಹಿಸಲಿ [illegible] ಪರಮಾತ್ಮನಲ್ಲಿ ನಮ್ಮ ಪ್ರಾರ್ಥನೆ.

# ಮೈಸೂರ ಪಶ್ಚಿಮ ಭಾಗದ ಮಹಿಳೆಯರ ಪರಿಷತ್ತು

ದಿನಾಂಕ:— ೧೩–೧೦–೫೯ **ಪರಿಷತ್ತಿನ ವರದಿ** ವೇಳೆ : ೪ ರಿಂದ ೬

ಮೈಸೂರ ಪಶ್ಚಿಮ ಭಾಗದ ನಾಲ್ಕೂ ಜಿಲ್ಹೆಗಳ ಮಹಿಳೆಯರ ಪ್ರಾದೇಶಿಕ ಪರಿಷತ್ತು ಇಂದು ೧೩–೧೦-೫೯ ರಂದು ಮಧ್ಯಾನ್ಹ ಮಹಿಳಾ ಮಂಡಳದ ಆಶ್ರಯದಲ್ಲಿ, ಶ್ರೀಮತಿ ಶಾರದಾ ಹಾನಗಲ್ಲ ಇವರ ಸ್ವಾಗತ ಗೀತೆಯೊಂದಿಗೆ ಪ್ರಾರಂಭವಾಯ್ತು. ಮಂಡಳದ ಅಧ್ಯಕ್ಷಿಣಿಯರೂ, ಸ್ವಾಗತ ಸಮಿತಿಯ ಅಧ್ಯಕ್ಷಿಣಿಯರೂ ಆದ ಶ್ರೀಮತಿ ಸರೋಜಿನಿ ಮಹಿಷಿಯವರು ಪರಿಷತ್ತಿನಅಧ್ಯಕ್ಷಣಿಯರಾದ ಶ್ರೀಮತಿ ಗಿರಿಜಾದೇವಿ ಪಾವಟೆ ಹಾಗೂ ಉದ್ಘಾಟಕಿಯರಾದ ಶ್ರೀಮತಿ ಮೀರಾಬಾಯಿ ನಾಯಕರನ್ನು, ಹಾಗೂ ಬೇರೆ ಬೇರೆ ಮಂಡಲಗಳ ಪ್ರತಿನಿಧಿಗಳನ್ನು, ಸಭಿಕರನ್ನು ಸ್ವಾಗತಿಸಿ ಪರಿಷತ್ತಿನ ಉದ್ದೇಶವನ್ನು ವಿವರಿಸಿದರು. ತರುವಾಯ ಶ್ರೀಮತಿ ನಾಯಕರವರು ಪರಿಷತ್ತನ್ನು ಉದ್ಘಾಟಿಸುತ್ತ ಇಂದಿನ ಸ್ವತಂತ್ರ ಭಾರತದಲ್ಲಿ ಪ್ರತಿಯೋರ್ವ ಸ್ತ್ರೀಯೂ ಒಂದು ಸಮಸ್ಯೆಯನ್ನು ಬಗೆ ಹರಿಸಲು ಪ್ರಯತ್ನಿಸುತ್ತಾಳೆ. ಪೌರ್ವಾತ್ಯ ಸಂಸ್ಕೃತಿ ಒಳ್ಳೆಯದೋ ಅಥವಾ ಪಾಶ್ಚಿಮಾತ್ಯ ಸಂಸ್ಕೃತಿ ಒಳ್ಳೆಯದೋ, ಎಂದು ನಿರ್ಣಯಿಸಲು ಅಸಮರ್ಥಳಾಗಿದ್ದಾಳೆ. ಇವೆರಡರ ಸಮನ್ವಯವೊಂದೇ ನಮ್ಮ ಪ್ರಗತಿಯನ್ನು ಸಾಧಿಸಬಲ್ಲದೆಂದು ಹೇಳಿದರು. ಅಧ್ಯಕ್ಷಿಣಿಯರಾದ ಶ್ರೀಮತಿ ಗಿರಿಜಾದೇವಿ ಪಾವಟೆಯವರು, ಹಿಂಸೆಗೆ ಹಿಂಸೆ ಉತ್ತರವಲ್ಲ. ಕ್ಷಮಾಶೀಲರಾದ ಮಹಿಳೆಯರು, ತಾವು ಅಬಲೆಯರೆಂಬ ಮೂಢ ನಂಬಿಕೆಯನ್ನು ಬಿಟ್ಟು ಸಮಾಜದಲ್ಲಿ ಉದ್ಭವಿಸಿರುವ ಸಮಸ್ಯೆಗಳನ್ನು ಎದುರಿಸಲು ಕಂಕಣಬದ್ಧರಾಗಬೇಕು ಎಂದು ಹೇಳಿದರು. ಪಾಕ ಪ್ರದರ್ಶನದಲ್ಲಿ ಬಹುಮಾನ ಪಡೆದವರಿಗೆ, ಅಧ್ಯಕ್ಷರ ಹಸ್ತದಿಂದ ಪಾರಿತೋಷಕ ವಿತರಣವಾಯ್ತು. ಅಲ್ಲದೆ ಪರಿಷತ್ತು ಕೆಳಗಿನ ಗೊತ್ತುವಳಿಗಳನ್ನು ಪಾಸು ಮಾಡಿತು.

೧) ನವ ಮೈಸೂರ ರಾಜ್ಯವನ್ನು ಕರ್ನಾಟಕ ರಾಜ್ಯವೆಂದು ಕರೆಯಬೇಕು.

೨) ಕರ್ನಾಟಕ ವಿಶ್ವವಿದ್ಯಾಲಯದ ಕಕ್ಷೆಯಲ್ಲಿ ಗೃಹವಿಜ್ಞಾನದ ವಿದ್ಯಾಲಯವೊಂದನ್ನು ತೆರೆಯಬೇಕು

೩) ಚಲನ ಚಿತ್ರಗಳ ತಯಾರಿಕೆ ಹಾಗೂ ಕಥಾವಳಿಗಳ ಬಗ್ಗೆ ಸರಕಾರವು ಹೆಚ್ಚು ಲಕ್ಷ್ಯವನ್ನು ಪೂರೈಸಬೇಕು.

೪) ಸರ್ಟಿಫಾಯಿಡ ಸ್ಕೂಲಿನಲ್ಲಿ ಬಾಲಕರು ತರಬೇತಿ ಪಡೆದು ಹೊರಗೆ ಹೋದ ಮೇಲೆ ಅವರಿಗೆ ಸಚ್ಚು ಸಂಖ್ಯೆಯಲ್ಲಿ ಆಶ್ರಯ ಮಂದಿರವನ್ನು ತೆರೆಯಬೇಕು.

೫) ಪ್ರಾಥಮಿಕ ಶಾಲೆಯ ೫-೬-೭ ನೇ ಇಯತ್ತೆಗಳಲ್ಲಿ ಉಚಿತ ಶಿಕ್ಷಣವನ್ನು ಕೊಡಬೇಕು.

೬) ಸಮಾಜ ಸೇವೆ ಶಾಸ್ತ್ರದಲ್ಲಿ ಹೆಚ್ಚಿನ ಅಭ್ಯಾಸಕ್ಕಾಗಿ ಸೋಸಿಯಲ್ ಸಾಯನ್ಸಿನ ವಿದ್ಯಾಲಯವೊಂದನ್ನು ಇಲ್ಲಿ ತೆರೆಯುವದು ಅವಶ್ಯವಾಗಿದೆ

೭) ಕರ್ನಾಟಕ ಹಾಗೂ ಮೈಸೂರ ವಿಶ್ವವಿದ್ಯಾಲಯದ ಸಿಂಡಿಕೇಟುಗಳಲ್ಲಿ ಸ್ತ್ರೀಯರಿಗೆ ಪ್ರಾತಿನಿಧ್ಯ ಕೊಡಬೇಕು.

೮) ಹೆಣ್ಣುಮಕ್ಕಳಿಗೆ ಚಿತ್ರಕಲೆಯು ಅವಶ್ಯವಾಗಿರುವದರಿಂದ ಅದನ್ನು ಕಾಲೇಜಿನಲ್ಲಿ ಐಚ್ಛಿಕ ವಿಷಯವನ್ನಾಗಿ ಅಭ್ಯಾಸಕ್ರಮದಲ್ಲಿ ಸೇರಿಸಬೇಕು.

೯) ಚಿಕ್ಕ ಉಳಿತಾಯ ಯೋಜನೆಯ ಕೆಲಸವನ್ನು ಮಹಿಳಾ ಮಂಡಳದ ಎಲ್ಲ ಶಾಖೆಗಳೂ ವಹಿಸಿಕೊಳ್ಳಬೇಕು. ರಾಷ್ಟ್ರ ನಿರ್ಮಾಣದ ಕಾರ್ಯಕ್ಕೆ ನೆರವಾಗಬೇಕು.

೧೦) ಸಾಹಿತ್ಯ ಅಕ್ಯಾಡಮಿಯಲ್ಲಿ ಮಹಿಳೆಯರಿಗೆ ಹೆಚ್ಚಿನ ಪ್ರಾತಿನಿಧ್ಯ ದೊರೆಯಬೇಕು.

೧೧) ಅಶ್ಲೀಲ ಸಾಹಿತ್ಯವನ್ನು ಸರಕಾರವು ತಡೆಗಟ್ಟಬೇಕು.

ಶ್ರೀಮತಿಯರಾದ, ಸುಶೀಲಾಬಾಯಿ, ಸರ್ವಮಂಗಳಮ್ಮ ಒಡೆಯರ, ಸರೋಜಿನಿ ಮಹಿಷಿ, ಲಕ್ಷ್ಮೀಬಾಯಿ ಗೋಠೆ, ಶ್ಯಾಲಿನಿಬಾಯಿ ಹಲಗಿ, ವಿಠಾಬಾಯಿ ಬಟ್ಟ, ಸೋನು ಆನೆಖಿಂಡಿ, ಸುಶೀಲಾಬಾಯಿ ಹಳಪೇಟಿ, ನಿರ್ಮಲಾ ಕೊಪ್ಪಳ, ಸಾವಿತ್ರಿ ಜೋಶಿ, ಸುಶೀಲಾಬಾಯಿ ಪಂಡಿತ, ಸರೋಜಿನಿ ಕುಸನೂರ, ಸುಲೋಚನಾಬಾಯಿ ಹಿರೇಮಠ, ವಿಮಲಾ ಚಿನ್ನಮುಳಗುಂದ, ಗಂಗು ಪಾಟೀಲ, ಸರಲಾಬಾಯಿ ಖೋತ, ಶಾಂತಾದೇವಿ ಮಾಳವಾಡ, ಗಿರಿಜಾದೇವಿ ಪಾವಟೆ, ಪ್ರಮಿಳಾ ರಾಜಣ್ಣವರ, ವಿಜಯಾ ಕುಲಕರ್ಣಿ, ಸರಸ್ವತಿದೇವಿ ಗೌಡರ, ಜಾನಕಿ ನಾಡಗೀರ ಜಯಾ ಅಯ್ಯರ ಇವರೆಲ್ಲ ಚರ್ಚೆಯಲ್ಲಿ ಭಾಗವಹಿಸಿದ್ದರು.

ರಾಷ್ಟ್ರೀಯ ವಿಸ್ತರಣ ಯೋಜನೆಯ ಗೃಹವಿಜ್ಞಾನಶಾಖೆ ವನಿತಾ ಸೇವಾ ಸಮಾಜ, ಹಾನಗಲ್ಲ, ಮಹಿಳಾಮಂಡಳ, ಸಿದ್ದಾಪೂರ ಮಹಿಳಾ ಮಂಡಳಗಳೆಲ್ಲ ಭಾಗವಹಿಸಿ ಕೊನೆಯಲ್ಲಿ ತುಂಬ ಯಶಸ್ವಿಯಾಗಿ, ಮನರಂಜನೆ ಕಾರ್ಯಕ್ರಮ ನಡೆಯಿತು ಆಭಾರ ಮನ್ನಣೆ, ವಂದೇ ಮಾತರಂ ಗೀತೆಯೊಂದಿಗೆ ಪರಿಷತ್ತು ಮುಕ್ತಾಯಗೊಂಡಿತು.

**ಸಾವಿತ್ರಿ ಜೋಶಿ**
ಗೌ. ಕಾರ್ಯದರ್ಶಿನಿ

* ಅಕ್ಟೋಬರ ೨೫ ರಂದು ಮಂಗಳೂರು (ಮುಲ್ಕಿ) ಯಲ್ಲಿ ನಡೆದ ಮಹಿಳಾ ಪರಿಷತ್ತಿಗೆ ಶ್ರೀಮತಿ ಸರೋಜಿನಿ ಮಹಿಷಿಯವರು ಮುಖ್ಯ ಅತಿಥಿಗಳಾಗಿ ತೆರಳಿದ್ದರು.

# ಸಣ್ಣ ಮಾತಿಗೆ, ದೊಡ್ಡ ಸಂಕಟವೇ?

ಲೇಖಕ : ಆರ್. ಎಸ್. ಸಾಲಿಮಠ 'ಚಾಚಾ"

ಒಂದು ಊರಲ್ಲಿ ರಂಗರಾಯರೆಂಬ ಶ್ರೀಮಂತರಿದ್ದರು. ಅವರು ಮೇಲಿಂದ ಮೇಲೆ ಬಡವರಿಗೆ ದಾನಧರ್ಮವನ್ನು ಮಾಡುತ್ತಿದ್ದರು. ಹಾಗೂ ಪರರಿಗೆ ಕೊಟ್ಟ ವಚನವನ್ನು ಮೀರುತ್ತ ಇರಲಿಲ್ಲ. ಅದಕ್ಕಾಗಿ ಊರಲ್ಲಿಯ ಜನವೆಲ್ಲ ಅವರಿಗೆ ದಾನವೀರ ರಂಗರಾಯರೆಂದು ಕರೆಯುತ್ತಿದ್ದರು.

ಒಂದು ದಿನ ರಂಗರಾಯರು ತಮ್ಮ ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತಿದ್ದರು. ಅಲ್ಲಿಯೇ ಭೀಮರಾಯರ ಮಗು ಆಟುತ್ತಿರುವದನ್ನು ಕಂಡು, ಅದನ್ನು ಹತ್ತಿರ ಕರೆದರು. ಮತ್ತು ಮನೆಗೆ ಹೋಗಿ ನಿಮ್ಮ ತಂದೆಯನ್ನು ಕರೆದುಕೊಂಡು ಬಾರಪ್ಪ ಎಂದು ಹೇಳಿದರು. ಆಗ ಅದು ಅವರ ಮಾತನ್ನು ನಿರಾಕರಿಸಿತು.ಮತ್ತೆರಂಗರಾಯರು ಹೋಗಪ್ಪ ನಿನಗೆ ತಿನ್ನಲು ಬಹಳಷ್ಟು ಬೆಲ್ಲ ಕೊಡುವೆ.ಎಂದು ಆಶೆತೋರಿಸಿದರು. ನಂತರ ಆ ಮಗುಹೋಗಿ ತನ್ನ ತಂದೆಯನ್ನು ಕರೆದುಕೊಂಡು ಬಂದಿತು. ರಂಗರಾಯರಿಗೆ ತಿನ್ನಲು ಬೆಲ್ಲವನ್ನು ಬೇಡಿತು. ಆಗ ರಂಗರಾಯರು ಒಂದು ಸಣ್ಣ ಹರಳು ಬೆಲ್ಲವನ್ನು ತಂದುಕೊಟ್ಟರು. ಆಗ ಅದು ನಿರಾಕರಿಸಿ, ಹೂಂ, ಹೂಂ, ನನಗೆ ಬಹಳಷ್ಟು ಬೇಕು ನೀವು ಬಹಳಬೆಲ್ಲ ಕೊಡುತ್ತೇನೆಂದು ಹೇಳಿದ್ದಿರಿ ಎಂದು ಅಂದಿತು., ಆಗ ರಾಯರು ಮತ್ತೆ ಒಳಗೆ ಹೋಗಿ ಕಾಗದದಲ್ಲಿ ಪಾವಸೇರದಷ್ಟು ಬೆಲ್ಲ ತಂದುಕೊಟ್ಟರು. ಆಗ ಮಗು ಅದನ್ನು ನಿರಾಕರಿಸಿತು. ರಂಗರಾಯರು ಮಗುವನ್ನು ಅಂಗಡಿಗೆ ಕರೆದುಕೊಂಡು ಹೋಗಿ ಸೇರು ಐದು ಸೇರು ಅಲ್ಲದೇ ಒಂದು ಮಣದವರೆಗೆ ಬೆಲ್ಲ ಕೊಡಿಸಿದರೂ ಆ ಮಗು ಇನ್ನೂ ಬಹಳ ಬೆಲ್ಲ ಬೇಕು ಎಂದಿತು. ಆಗ ರಾಯರು ಅಂಗಡಿಯಲ್ಲಿದ್ದ ಬೆಲ್ಲ ಆಗುವವರೆಗೆ ಬೆಲ್ಲವನ್ನು ಕೊಡಿಸಿದರು. ಆದರೂ ಆ ಹುಡು[ಗ]ಗನು ಸಮಾಧಾನವಾಗಲಿಲ್ಲ. ಕಡೆಗೆರಾಯರಿಗೆ ತಮ್ಮ ವಚನ ಎಲ್ಲಿ ಮುರಿಯುವದೊ ಎಂಬ ಶಂಕೆಯುಂಟಾಯಿತು. ನೆರೆ[ದ] ಜನರಿಗೆಲ್ಲ ಮೋಜಾಗಿತ್ತು.

ಅಷ್ಟರಲ್ಲಿ ಆ ಹುಡುಗನ ತಂದೆ ಭೀಮರಾಯರೂ ಅಲ್ಲಿಗೆ ಬಂದರು. ಅಂಗಡಿಯ ಮುಂದೆ ಜನರು ನೆರೆದಿರುವದು ಅವರಿಗೆ ಆಶ್ಚರ್ಯ ಆಯಿತು. ಅಲ್ಲಿ ನಡೆದಿರುವ ಸಂಗತಿಯೆಲ್ಲ ಭೀಮರಾಯರಿಗೆ ತಿಳಿಯಿತು. ತಮ್ಮ ಮಗನ ವಿಚಿತ್ರ ನಟನೆ ಕಂಡು ಅವರಿಗೂ ಆಶ್ಚರ್ಯವಾಯಿತು. ಇದಕ್ಕೆ ಉಪಾಯ ಏನು ಮಾಡಬೇಕು ? ಎಂದು ವಿಚಾರ ಮಾಡ[ಲಾ]ಲಾಗಿ ಅವರಿಗೊಂದು ವಿಚಾರ ಹೊಳೆಯಿತು. ತಮ್ಮ ಮಗು[ವ]ವನ್ನು ಮುಂದಕ್ಕೆ ಕರೆದು ಏನು ಬೇಕೆಂದು ಕೇಳಿದರು. "ನನಗೆ ಬಹಳಷ್ಟು ಬೆಲ್ಲ ಕೊಡತೇನಂತ ಹೇಳಿದ್ದಾರೆ." ಎಂದು ಹೇ[ಳಿ]ದನು. ಆಗ ಭೀಮರಾಯರೂ ತಕ್ಕಡಿಯನ್ನು ಒಂದು ಪಾವ[ು] ಸೇರು ಬೆಲ್ಲವನ್ನು ತಕ್ಕೊಂಡು, ಒಂದು ಪರಡಿಯಲ್ಲಿ ಸ್ವಲ್ಪ ಬೆಲ್ಲಮವತ್ತು ಮತ್ತೊಂದು ಪರಡಿಯಲ್ಲಿ ಬಹಳ ಬೆಲ್ಲ ಹಚ್ಚಿ ತೂಕಮಾಡಿದರು. ಆಗ ಭೀಮರಾಯರು " ಹೂಂ ! ಹೇಳು ಇದರಲ್ಲ ಯಾವದು ಬಹಳಿದೆ. ಮತ್ತು ಅದನ್ನು ತಕ್ಕೊಂಡು ಹೋಗು." ಎಂದು ಹೇಳಿದರು. ಮಗು ಮಾತಾಡದೇ ಬಹಳ ಬೆಲ್ಲ ಇದ್ದದ್ದನ್ನು ತಕ್ಕೊಂಡು ಹೋಯಿತು. ಅಲ್ಲಿದ್ದ ಜನರಿಗೆಲ್ಲ ಆಶ್ಚರ್ಯವಾಯಿತು. ಭೀಮರಾಯರ ಜಾಣತನವನ್ನು ಪ್ರಾಮಾಣಿಕತನವನ್ನೂ ಹೊಗಳಿದರು. ಮತ್ತು ರಂಗರಾಯ[ರ] ದಾನವನ್ನು ಹೊಗಳಿದರು.

# ಶ್ರೀ ಗಜಾನನ ಸ್ತುತಿ

ರಚಿಸಿದವರು : ಡಾ. ಆರ್. ಕೆ. ಹಾನಗಲ್ಲ

ಶ್ರೀ ಗಜವದನನೆ
ಸಾಗಿಸು ಕೃತಿಯನು
ಬಾಗುವೆ ನೊದಲಿಗೆ ಮುದದಿಂದ।
ನೀಗಿಸು ವಿಘ್ನವು।
ತಾಗದಂತೆ ನಿಗ–।
ಮಾಗಮುದುಗವುವು ನಿನ್ನಿಂದ ||೧||

ಕರಿವದನನೆ ಪದ–।
ಕೆರಗುವೆ ಇಂದೀ।
ನೆರೆದ ಪಂಡಿತರ ಸಭೆಯೊಳಗೆ ||
ನಿರಸ ನುಡಿಯ ನು–।
ಚ್ಚರಿಸದಂತೆ ನೀ।
ಕರುಣಿಪು ದೆನ್ನಯ ಕೃತಿಯೊಳಗೆ ||೨||

ನಾದ ಬಿಂದು ಕಳೆ –।
ಗಾದಿಯಾದ ನಿನ।
ವೇದವು ತಿಳುಪುವದೆಲ್ಲಿಂದ ||
ಭೇದವಳಿದು ಬ್ರ-।
ಹ್ಮಾದ ಮಾಯೆಯೊಳು।
ವೋದದಿ ಜನಿಸಿದೆ ಮನದಿಂದ ||೩||

ಕುವರನಾಗಿ ಶಾಂ।
ಭವಿಗೆ ಬಂದ ನಿಜ!
ಭವನ ತೆಡೆದು ಶಿರವನು ನೀಗಿ ||
ತವಕದಿ ಗಜಮುಖ।
ದವ ನೆನಿಸುತ ಲೀ–।
ಭುವನಕಾದಿ ಪೂಜಿತನಾಗಿ ||೪||

( ಇಳವು )

ಕವನವನ ಪಡೆದು ಮೂಜಗದಿ। ಮೊದ
ಲಿರುವೆ ಪೂಜೆಯೊಳು ಮುದದಿ। ಪರಿ।
ಹರಿಸೆ ವಿಘ್ನವನು ತ್ವರದಿ। ಮನ।
ದಣಿವಿನಾತಿರುವೆ ಮನದಿ।
ಲಂಬೋದರ ನ।

ಕ್ರಾಂಬರಧರ ಧವ।
ಲಾಂಬುಜದಂಗಚ್ಛವೆಯಿಂದ।
ಅಂಬಾಸುತ ರವಿ!
ಬಿಂಬ ತೇಜದಲಿ।
ಕಾಂಬುದು ಚಲ್ವಿಕೆಯದು ಚಂದ ||೫||

ಹರಿಹರ ಬ್ರಹ್ಮಾ।
ದ್ಯರಿಗೆ ಲಭಿಸದಾ।
ಪರಮು ಸಿದ್ಧಿವೃದ್ಧಿಗಳೆಂಬ।
ಜರೆ ಮರಣಾದಿಗ।
ಳಿರವಿಲ್ಲದ ಸತಿ –।
ಯರ ಸೇವೆಯ ನಿರುತದಿಕೊಂಬ ||೬||

ಮಂಗಳ ಮೂರುತಿ।
ಕಂಗಳು ಸಾಲದೊ।
ಬಂಗಾರದ ಕಾಲ್ತೊಡವಿಟ್ಟು ||
ಕಂಗೊಳಿಸುವ ಮು।
ಧ್ಯಾಂಗ ಸೂತ್ರಮಣಿ
ಹೊಂಗದಿರನು ನಿಂದೊಲು ನಟ್ಟು ||೭||

ರತ್ನಗಳನು ಬಹು।
ಜತ್ನವಾಗಿ ನೆರೆ।
ಕೆತ್ತಿದ ಕಂಠಾಭರಣದಲಿ।
ಮುತ್ತಿನ ಸರ ತಲೆ।
ಎತ್ತಿ ಹೊಳಿವುದನು।
ಎತ್ತ ಬಣ್ಣಿಸಲಿ ಶಬ್ದದಲಿ ||೮||

ಇಳವು

ಗಣ। ನಾಥ ನಿನ್ನ ವೈಭವವು।
ಸುರ। ನಾಥ ನಿಂಗೆ ದುರ್ಲಭವು।
ಬಜ್ಜರದ ಕರ್ಣಕುಂಡಲವು।
ನಿರ್ಜರರ ಐಸಿರಿಯ ಧ್ವಜವು। ||೯||
ನವರತ್ನಗಳನು।
ತವೆ ಕೆಚ್ಚಿದ ಶಾಂ।
ಭವಿಸುತ ನಿನ್ನಯ ಮಕುಟ ||

ದಿವಸಾದಿಯೊಳಿಹ ।
ರವಿ ಶತಬಿಂಬ – ।
ಚ್ಛವಿಯ ಪೋಲುವದು ನಿಕಟ ॥ ೧೦ ॥
ಮೂಷಕ ವಾಹನ ।
ದೋಷ ನಿವಾರಣ ।
ದೂಷಿಪ ಸುರನರ ಪೆನ್ನಗರ ।
ನಾಶಗೊಳಿಪ ಸ – ।
ರ್ವೇಶ ಶಕ್ತಿಯನು ।
ಲೇಶ ಬಣ್ಣಿಪೆನು ಪಾಶಧರ । ॥ ೧೧ ॥
ಭದ್ರ ಭಾದ್ರಪದ ।
ಶುದ್ಧ ಚತುರ್ಥಿಯೊ - ।
ಳಿದ್ದು ಬಂದು ಭೂಲೋಕದಲಿ ॥
ಇದ್ದು ಭಕ್ತಜನ !
ಶಿದ್ಧ ಪೂಜೆಗೊಂ ।
ಡುದ್ಧರಿಸುತ - ಕಾರುಣ್ಯದಲಿ ॥ ೧೨ ॥
ತುಷ್ಟನಾಗಿ ಮೃ ।
ಷ್ಟಾನ್ನ ಮೋದಕದಿ ।
ಶ್ರೇಷ್ಟ ಮೂಷಕನ ನೀನೇರಿ ।
ಬಟ್ಟೆಯೊಳಿರಲದು ।
ದೃಷ್ಟಿಸಿ ಸರ್ಪನ ।
ಥಟ್ಟನೆ ಉರುಳಿತು ತಾ ಬೆದರಿ ॥ ೧೩
ಇಳವು
ನೀ ನೊಡನೆ ಬೀಳುವನಿಯಲೀ ।
ಹೊ । ಟ್ಟೊಡಿದು ಮೋದಕಗಳುರಳೀ
ಎಡೆ । ಬಿಡದೆ ತುಂಬುತಿರೆ ಮರಳಿ ।
ನಗೆ । ನುಡಿಯೆ ಚಂದಿರನು, ಹೊರಳಿ ॥ ೧೪
ಸಿಟ್ಟಿನಿಂದ ಕ್ಷಯ ।
ಹುಟ್ಟಲಿ ಲೋಕದಿ ।
ದೃಷ್ಟಿಸಬಾರದು ನಿನಗೆಂದು ।
ಕೊಟ್ಟೊಡೆ ಶಾಪವ ।
ಕೆಟ್ಟೆನೆಂದು ಪದ ।
ಮುಟ್ಟಿ ಕ್ಷಮೆಯು ಬೇಡಿದನಿಂನು ॥ ೧೫
ಕರುಣದಿ ವೃದ್ಧಿಸು ।
ತಿರು ಪಕ್ಷದಿ ನಿನ ।
ನಿಕಿರುಸದಿರಲೀ ದಿನವೆಂದೂ ।
ವರವನಿತ್ತ ಪರ ।
ತರ ದೇವನೆ ಶುಭ ।
ಕರವಿಡು ರಾಮವಿಠಲಗಿಂದು ॥ ೧೬

ಧಾರವಾಡ ರೇಡಿಯೋ ಸ್ಟೇಶನ್‌ದಲ್ಲಿ ಕಾವ್ಯ ಕರ್ತರಿಂದ ಹಾಡಲ್ಪಟ್ಟಿದೆ.

# ಸೇಡು ತೀರಿತು

ಲೇ— ಕುಮಾರ **ಎಲ್. ಎಸ್. ಹಳಕಾರ** ಗಿಬ್ಬ ಹಾಯಸ್ಕೂಲ ಕುಮಟಾ.

ಅವಳಿರಿದು ಬಿಟ್ಟಳವನೆದೆಗೆ
ಅವಳ್ ಸೇಡು ತೀರಿತಿಂದಿಗೆ
ಅವಳು ಧಾವಿಸುತೋಡಿದಳು ನದಿಯೆಡಗೆ
ಅಳುಕದೆಯೆ ಹಾರಿದಳು ನೀರಿನೊಳಗೆ
ಅಮ್ಮಾ ಎನುತೋಡಿತು ಪುಟ್ಟ ಮಗು ಅವಳೆಡೆಗೆ
ಅವಳಣ್ಣ ಧಾವಿಸುತೋಡಿಬಂದ ನದಿಯೆಡೆಗೆ
ಅಕ್ಕರೆಯ ತಂಗಿಯನೆಳೆತರಲು ಮನೆಗೆ
ಅವಳಣ್ಣ ನದಿಯೆಡೆಗೆ ಬರುವವರೆಗೆ
ಅವಳ ಪ್ರಾಣ ಹೋಗಿತ್ತು ಸ್ವರ್ಗದೆಡೆಗೆ
ಅವಳ ಕಳೇಬರ ಮರಳಿತು ದಂಡೆಯೆಡೆಗೆ
ಅಣ್ಣನತ್ತನು ಜನ ಬರುವವರೆಗೆ
ಅವಳ್ಹೆಣ ಹೋಯಿತು ಮಸಣದೆಡೆಗೆ
ಅನಂತಾಮಗು ಉಳಿಯಿತು ಮಾವನೆಡೆಗೆ

‡ ‡ ‡

ನಡು ಮಾರ್ಗದಲಿ ಬಿದ್ದಿಹನು ಮಾಧವನು
ನವ ವಧುವಿನಾ ಕೈಹಿಡಿಯಲೆಂದ್ಹೊರಟವನು
ನರರ ಮಧ್ಯದಲಿ ನೀತಿಗೆಟ್ಟಿಹನವನು
ನಟ್ಟಿದಾ ಚಾಕುವನು ಕೈಯಲ್ಲಿ ಹಿಡಿದಿಹನು
ನಡೆವವರೆಲ್ಲ ನೋಡುತಿಹರು ಪಾಪಿಯನು
ನಟ್ಟ ಚಾಕುವಿನಿಂದ ನೆತ್ತರವಸುರಿಸುತಿಹನು
ನರಳುತ್ತ ನಡುದಾರಿಯಲಿ ಬೊಬ್ಬಿಡುವನು
[illegible] ಹಿಡಿದಿಹರು ಅವನನ್ನು
ನಡಿಯಿರೋ ಇಲ್ಲಿಂದವೆಂದು ಕೂಗುತಿಹನು
ನಾ ಪಾಪಿ ಶಿಕ್ಷೆಯಾಯಿತು ಬಿಡಿರಿ ನನ್ನನ್ನು
ನಾ ಹೋಗುವೆನು ನರಕಕ್ಕೆಂದ್ಹೇಳುವನು
ನಾ ದವಾಖಾನೆಗೆ ಬರಲಾರೆನೆನ್ನುವನು

‡ ‡ ‡

ಕೊಂಡೊಯ್ದರವನ ದವಾಖಾನೆಗೆ
ಕೊಂಡೊಯ್ದರುಪಚರಿಸಲವಗೆ
ಕೋಣೆಯಲಿ ಮಲಗಿಸಿದರು ಕಿಟಕಿಯೆಡೆಗೆ
ಕೋಣೆಯಿಂ ನೋಡುವನು ನದಿಯೆಡೆಗೆ
ಕೋಮಲಾಂಗಿ "ಪಾರ್ವತಿ" ಯೋಡಿದೆಡೆಗೆ
ನೋವಂ ಮಾಡಿ ಕೊನೆಗಾಣಿಸಿಲ್ಲೆನಗೆ
ಕೊನೆಗೂ ಕಳಿಸಲಿಲ್ಲ ಯಮನೆಡೆಗೆ
ಕೊನೆಗು ಮರಳಿತು ನೆನಪು ಮಿದುಳಿಗೆ
ಕೋಣೆಯಾ ಕಿಡಕಿಯಡ್ಡಬಂತವನೆಡೆಗೆ
ಪಾರ್ವತಿಯ ರೂಪಕೆ ನಾ ಮೋಹಗೊಂಡೆ
ಪಾಪವರಿಯದವಳ ನನಗೆ ಬೇಕೆಂದು ಕೊಂಡೆ
ಪಾರುವ ದಿಟ್ಟಿಸಿ ನೋಡಿ ಛೀ ಹಾಕಿಸಿಕೊಂಡೆ
ಪರಮೇಶ್ವರನ ಗುಡಿಯಲ್ಲಿ ಆತಿಟ್ಟುಕೊಂಡೆ
ಪರಸತಿಯಲಿ ಕೀಳ್ಮನವ ತೋರಿಸಿ ನಿಂತು ಕೊಂಡೆ
ಬಿಡು ನೀನನ್ನಣ್ಣ ಎಂದ್ಹೇಳಿದಳವಳು ಆಗ
ಬಿಡೆನು ನೀ ಬೇಕೆಂದು ಕೊಂಡೆನಾನು
ಬಣ್ಣದಾ ಸೀರೆಯ ನಿನಗಾಗಿ ತಂದಿಹನು
ಬಂಡು ಮಾಡಬೇಡೆನ್ನಾಶೆಯೆಂದೆನು
ಬಾ ಬೇಗ ನನ್ನನನುಸರಿಸಿ ಎಂದೇಳಿದೆನು
ಪರಮೇಶ್ವರ ಕಾಪಾಡೆಂದತ್ತಳು ಗುಡಿಯಲ್ಲಿ
ಪತಿವ್ರತೆಯ ಬಾಳುವೆಯ ಬಿಡೆನೆನುತಲಿ
ಫಳಿರನೇ ಎರಡೇಟು ಬಿಗಿದಳು ಕೆನ್ನೆಯಲಿ
ಪರಮೇಶ್ವರಾ ಎನುತೋಡಿದಳು ಗುಡಿಯಿಂದಲಿ

× × ×

ಆದರೂ ಅವಳ ಮೇಲಿನ ಮೋಹಹೋಗಲಿಲ್ಲ
ಆಳವಾಗಿವಳ ಹುಡುಕ ಹತ್ತಿದೆನು ದಿನವೆಲ್ಲ

ಅವಳ ಮರೆಯಬೇಕೆಂದು ಯೋಚಿಸಿದೆ ದಿನವೆಲ್ಲ
ಸಂಪಿಗೆಯಸಳಿನಂತೋರುವಾ ಮೂಗು
ಶ್ವೇತ ಕನುಲದಲ್ಲಿ ಕುಳಿತ ಭ್ರಮರದಂತೋರುವಾಕಣ್ಣು
ಮಲ್ಲಿಗೆಯ ದಂಡೆಯಂತಿರುವಾ ದಂತಪಂಕ್ತಿ
ಮುರಳಿನಾದವ ಗೆಲ್ಲುವಾ ಕೋಮಲಕಂಠ
ಅವಳೊಬ್ಬ ಸುಂದರಿ ಎಂದು ತೋರಿಸುತ್ತಿತ್ತು
ಹೇಗೆ ಮರೆಯಲಿ ಆ ರೂಪರಾಶಿಯನು
ಪಡೆದೇ ತೀರುವೆನೆಂದು ಪಣತೊಟ್ಟನವನು
ಪಡೆವೆನೆಂಬ ಹಠದಿಂದ ಏನೋ
ಭೆಟ್ಟಿಯಾದನವನಿಗೆ ಮಳಿಯಾಳಿ ಪಂಡಿತನು
ತಲೆಗೆ ಹಚ್ಚೆಂದು ಕೊಟ್ಟನು ಮೆಚ್ಚುಮದ್ದನು

§　§　§

ಆ ದಿನ ತಲೆ ಕಿಡಿಕಿಯಲ್ಲಿಟ್ಟು ನಿದ್ದೆಗೈತಿರುವಾಗ
ಕಾಕ ದೃಷ್ಟಿಮಾಧವನು ನೋಡಿದನಾಗ
ಮೆಲ್ಲನೆ ಅಡಿಯಿಡುತ ಹೊರಟ ಕಿಡಕಿ ಬಳಿಯಾಗ
ಮೆಚ್ಚು ಮದ್ದತಲೆಗೆ ಸುರಿದು ಕೈಯಿಟ್ಟು ನೆತ್ತಿಯಾಗ
ಸಾವಧಾನದಿ ತಿಕ್ಕ ಹತ್ತಿದ ಶಿರದತುಂಬೆಲ್ಲಾ ಕೈಯಾಗ
ಕಣ್ಣತೆರೆದು ನೋಡಿದಳು ಸಾವಕಾಶದಿ ಕಿಡಕಿಯಾಗ
ಮಾಧವ ಹೌಹಾರಿದ ಪಾರ್ವತಿಯು ಕಂಡಾಗ
ಹೆದರಿ ಕಂಬಿ ಕಿತ್ತನು ಅಲ್ಲಿಂದಾಗ
ನೆತ್ತಿಯ ಮೇಲೆ ಕೈಯಿಟ್ಟು ಹೆದರಿದಳಾಗ

ಅಯ್ಯೋ ಮೆಚ್ಚು ಮದ್ದನು ಹಚ್ಚಿಹೋದನುದುಷ್ಟನೀಗ
ಹಾಳಾಯ್ತು ನನ್ನ ಬಾಳು ಇಂದಿನಿಂದಲೇ ಬೇಗ
ಎಂಥ ನೀಚರು ಗಂಡಸರೆಂಬುದು ಹೊಳೆಯಿತಾಗ
ಏನು ಮಾಡಲಿ ಮುಂದೆಂದು ಗೋಗರೆದಳು ಮನದಾಗ
ನೀತಿಗೆಟ್ಟು ಹಾಳಾಗುವೆ ಮುಂದೆ ನಾನು
ಅಯ್ಯೋ ಪತಿ ದ್ರೋಹಿಯಾಗುವೆನು
ಕೊನೆಗು ವಿಧಿ ಹಾಳು ಮಾಡಿತು ನನ್ನನು
ಮುಂಡೆಯಾದವಳ ಪ್ರೇಮ ಬಯಸಿದನವನು

‡　§　‡

ಸೇಡು ನೆತ್ತಿಗೇರಿ ಕಿಡಿ ಕಿಡಿಯಾದಳು ಪಾರ್ವತಿ
ಸೇಡು ತೀರಿಸಲು ಹಾತೊರೆದಳು ಸತಿ
ವೈರಕ್ತ ಕುದಿಯಿತು ಹೊರ ಹೊಮ್ಮಲು
ತೀರಿತು ಅಂದೇ ಅವಳ ಸೇಡು
ಹೊರಟದ್ದ ಮಾಧವನು ದಿಬ್ಬಣವನೊಳಗೊಂಡು
ದಿಬ್ಬಣದೊಳಗಿಂದ ಬಂದಳು ಪಾರ್ವತಿ ಚೇತನಗೊಂಡು
ನೀಚಾ ಅಧಮಾ ಬಂತು ಮರವೆಂದು ಕೊಂಡು
ಎದೆಗಿರಿದಳು ಚಾಕುವನು ಮೇಲೆತ್ತಿಕೊಂಡು
ಸುಪ್ತವಾಗಿದ್ದ ಹಾಲಾಹಲಸ್ತ್ರೋಮ ಒಡೆಯಿತಂದು
ಅಂದು ಹಿಂದಿನ ಸೇಡು ತೀರಿಸಿ ಕೊಂಡೆನೆಂದು
ಇನ್ನೂ ತನ್ನ ಬಾಳೇಕೆಂದು ಹಾರಿದಳು ನದಿಯಲ್ಲಿ
ಹದಿಬದೆಯಾಗಿ ಸತ್ತಳು ಬಿದ್ದು ನದಿಯಲ್ಲಿ



# ಯಾರ ಮಗು (ಸತ್ಯ ಚಿತ್ರ)

ಲೇ— ವೆಂ. ಕೊ.

" ರಾಯರೇ ಇದು ನನ್ನ ಮಗು "

" ವಕೀಲರೇ, ನಾನು ಸುಳ್ಳು ಹೇಳುತ್ತೇನೇನು ? ಇದು
ಗೇ ಸೇರಿದ ಮಗು."

" ನಿನಗೆ, ಸೇರಿದ ಮಗುವಾದರೆ, ನನಗೆ ಹೊಟ್ಟೆಯಲ್ಲಿ
ಟ್ಟಿದ ಮಗು "

" ಹೊಟ್ಟೆಯಲ್ಲಿ ಹುಟ್ಟಿದ್ದಾದರೇನು ? ನಾಲ್ಕು ದಿನಗಳ
ಯನ್ನು ಮನೆಗೆ ಒಯ್ದು, ಪಕ್ಷಿಯು ಮರಿಗೆ ಗುಟುಕು
ಡುವಂತೆ ಕೊಟ್ಟು, ಹತ್ತು ವರ್ಷಗಳವರೆಗೆ ಅಂಗೈಯಲ್ಲಿಟ್ಟು
ಂಗೈಮುಚ್ಚಿ ಜೋಪಾನ ಮಾಡಿದವಳು ನಾನು."

" ಏನೋ ಒಂದು ಪ್ರಸಂಗ ಬಂತೆಂದು ಆಗ ಮಗು
ನ್ನ ಕೊಟ್ಟೆನಷ್ಟೆ. ಆದರೆ ಈಗ ನಾನು ಅದನ್ನು ಕರೆದೊ
ಯ್ಯುವವಳೇ !"

" ನಿನಗೇನಿದೆ ಅದರ ಮೇಲೆ ಹಕ್ಕು. ಹೇಗೆ ಒಯ್ಯುತ್ತೀ
ಡುತ್ತೇನೆ."

" ಉಶ್ — ಹುಶ್ — ಗದ್ದಲ ಹಾಕಬೇಡಿ, ವಿಚಾರ
ಡಿ ನೋಡೋಣ " ವಕೀಲರೆಂದರು.

ರಾಯರು ಅವರಿಬ್ಬರಿಗೂ ಬೇರೆಬೇರೆಯು ಒಂದೊಂದು
ಕೊಟ್ಟು, ಮತ್ತೊಮ್ಮೆ ಬಂದು ಭೆಟ್ಟಿಯಾಗಲು ಹೇಳಿ
ಹಿಸಿಕೊಟ್ಟರೆಂದು ತೋರುತ್ತದೆ. ಇಬ್ಬರೂ ಅವನ ಮನೆ
ದ ಹೊರಬಿದ್ದು ಹೊರಟು ಹೋದರು. ನಾನು ಬೇಸಿ
ಬಿಡುವಿಗೆಂದು ಊರಿಗೆ ಹೋದಾಗ ನೆರೆಮನೆ ವಕೀಲ
ಮೇಲಿನಂತೆ ಮಾತುಕತೆಗಳು ನಡೆದಿದ್ದವು. ಆ ಬಗ್ಗೆ
ವಿಚಾರ ಮಾಡುವ ಕುತೂಹಲ ಹುಟ್ಟಿ, ತಾಯಿಯನ್ನು
ವಿಷಯಕ್ಕೆ ಕೇಳಿದೆ. ಅದಕ್ಕವಳು " ಸರಿ, ನಿನಗ್ಯಾವಾ
ಇಲ್ಲದ ಪಂಚಾಯತಿ. ನೆರೆಮನೆಯಲ್ಲಿ ನಡೆದ ವಿಷ
ಕ್ಕೆ ನಿನಗೇಕಿಷ್ಟು ಕುತೂಹಲ, ನೀರು ಕಾದಿದೆ. ಸ್ನಾನ
ಡಿ, ಕಾಫಿ ತೆಗೆದುಕೋ ಬಾ, ವೇಳೆಯಾಯ್ತು." ಎಂದು
ನ್ನು ಗದರಿಸಿದ್ದರಿಂದ ಅನಿವಾರ್ಯ ಆ ವಿಷಯವನ್ನು ಬಿಟ್ಟು
ಕೆಲಸಕ್ಕೆ ಹೊರಟೆ.

ಮುಂದೆ ಅದೇ ಏಳೆಂಟು ದಿನ ದಾಟಿರಬಹುದು. ನಮ್ಮ ಪಡಸಾಲೆ ಕಟ್ಟೆಯ ಮೇಲೆ ಕುಳಿತು ನಾವು ಅಣ್ಣತಂಗಿಯರೆಲ್ಲಾ ಏನೋ ಹರಟುತ್ತಿದ್ದೆವು. ಸಂಜೆ ಸುಮಾರು ೪ ಘಂಟೆ ಇರಬಹುದು. ಮಧ್ಯವಯಸ್ಸಿನ ಆದರೆ ಚಲುವೆಯಾದ ಹೆಣ್ಣು ಮಗಳೊಬ್ಬಳು, ಸ್ವಲ್ಪ ಬೆಲೆಯು ಆದರೂ ದೇಹಕ್ಕೆ ಒಪ್ಪುವಂತೆ ಸೀರೆಯುಟ್ಟು ವಕೀಲರ ಮನೆಯಕಡೆಗೇ ಬರುತ್ತಿದ್ದುದ ನೋಡಿದೆ. ಕೂಡಲೇ ನನಗೇಕೋ ಈಗೆಂಟು ದಿನಗಳಕೆಳಗೆ ನಡೆದ ಸಂಭಾಷಣೆಯ ಬಗ್ಗೆ ನೆನಪಾಗಿ, ಅವರೀರ್ವರಲ್ಲಿಯೇ ಇವಳೊಬ್ಬಳೇನೋ ಎಂಬ ವಿಚಾರ ಬಂದು ಅಣ್ಣತಮ್ಮಂದಿರಿಗೆ ಸುಳ್ಳು ನೆವ ಹೇಳಿ, ಕೋಣೆಯಕಡೆಗೆ ಹೋದೆ. ನನ್ನ ಕೋಣೆಗೂ ವಕೀಲರ ಆಫೀಸಿಗೂ ನಡುವೆ ಒಂದೇ ಗೋಡೆ ಇದ್ದುದರಿಂದ ಅಲ್ಲಿ ನಡೆಯುವ ಮಾತುಕತೆಗಳೆಲ್ಲಾ ಸ್ಪಷ್ಟವಾಗಿ ಕೇಳಿಸುತ್ತಿದ್ದವು.

" ರಾಯರೇ, ನಿಜವಾಗಿ ನನಗೆ ಈ ಮಗುವನ್ನು ಬಿಟ್ಟಿರಲು ಸಾಧ್ಯವೇ ಇಲ್ಲ. ಹೆರಿಗೆ ಆಸ್ಪತ್ರೆಯಿಂದ ನಾಲ್ಕುದಿನಗಳ ಎಳೆ ಬತ್ತಿಯನ್ನು ತಂದು ಈ ಹತ್ತು ವರ್ಷಗಳವರೆಗೆಜೋಪಾನ ಮಾಡಿದ್ದೇನೆ. ಈಗ ಹೇಗೆ ಬಿಟ್ಟಿರಲಿ? ನೀವೇ ಹೇಳಿ! " ಹೆಣ್ಣುಧ್ವನಿ ಕೇಳಿಸಿತು. ಬಹಳಮಾಡಿ ಈಗ ಬಂದ ಹೆಣ್ಣು ಮಗಳೇ ಆಡುತ್ತಿರಬೇಕು ಈ ಮಾತು ಎನ್ನಿಸಿತು.

" ಹೌದು, ಅದು ನಿಜ. ಆದರೆ ಆ ಮಗುವು ತನ್ನದೆಂದೂ ಕೆಲವು ದಿನಗಳ ಮಟ್ಟಿಗಾದರೂ ತನ್ನ ಊರಿಗೆ ಕಳುಹಿಸಬೇಕೆಂದೂ ಆ ಹೆಣ್ಣುಮಗಳು ಅಂಗಲಾಚುತ್ತಿದ್ದಾಳಲ್ಲ. ಮಗುವು ಅವಳ ಬಳಿ ಹೋಗಲು ಒಪ್ಪಿದರೆ ನಿವೇನು ಮಾಡುವಿರಿ ? ಮಗುವಿನ ಇಚ್ಛೆಯ ವಿರುದ್ಧ ನೀವು ಅವಳನ್ನು ಹೇಗೆ ಮನೆಯಲ್ಲಿ ಇಟ್ಟುಕೊಳ್ಳುವಿರಿ ? " ವಕೀಲರ ಪ್ರಶ್ನೆ.

" ಇಲ್ಲ ರಾಯರೇ, ಆ ಮಗುವೆಂದಿಗೂ ಹಾಗೆ ಅನ್ನಲು ಸಾಧ್ಯವಿಲ್ಲ. ಅವಳು ನನ್ನ ಬಿಟ್ಟಿರಲು ಎಂದೂ ಮನಸ್ಸು ಮಾಡಲಾರಳು " ನಿರ್ಧಾರದ ಹೆಣ್ಣುಧ್ವನಿ. ಇದೇ ರೀತಿ ಒಂದು ಒಂದೂವರೆ ಗಂಟೆಯವರೆಗೆ ಇಬ್ಬರಿಗೂ ಮಾತುಕತೆಗಳಾಗಿ,

ಮುಂದೆ ಆ ಹೆಣ್ಣುಮಗಳು ಕಣ್ಣು ಒರೆಸುತ್ತ ಹೊರಗೆ ಹೋದದ್ದು ಕಾಣಿಸಿತು.

ನನ್ನ ರಜಾದಿನಗಳು ಮುಗಿದು ಶಾಲೆ ಪ್ರಾರಂಭವಾಗಲು ಎರಡೇ ದಿನಗಳುಳಿದಿದ್ದರಿಂದ ಊರಿಗೆ ಹೊರಡುವ ಗಡಿಬಿಡಿಯಲ್ಲಿದ್ದೆ, ನನ್ನ ಕೋಣೆಯಲ್ಲಿ ಕುಳಿತು ಸಾಮಾನುಗಳನ್ನು ಜೋಡಿಸುತ್ತಿದ್ದಾಗಲೇ ಪಕ್ಕದ ಮನೆಯಿಂದ ಅಳುವ ಹೆಣ್ಣು ಸ್ವರವೊಂದು ಕೇಳಿಸಿತು. ಅದರೊಂದಿಗೆ ಆ ಹೆಣ್ಣುಮಗಳು "ವಕೀಲರೇ, ನಾನು ಯಾವದೋ ಒಂದು ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಮಾನಕ್ಕಾಗಿ ಅಂಜಿ ಮಗುವನ್ನು ಬೇರೆಯವರಿಗೆ ಕೊಟ್ಟು ಬಿಟ್ಟೆ, ಆದರೆ ತಿಂಗಳಿಗೊಮ್ಮೆಯಾದರೂ ನನಗೆ ಮಗುವನ್ನು ಕಾಣದಿದ್ದರೆ ಜೀವಕ್ಕೆ ಸುಖ ಸಿಗುವದಿಲ್ಲ. ಹೇಗಾದರೂ ನೆವ ಮಾಡಿ, ಮಗುವಿರುವ ಮನೆಯ ಅಕ್ಕಪಕ್ಕದಲ್ಲಿ ಹೋಗಿ, ಮಗುವನ್ನು ನೋಡಿ ಬರುತ್ತಿರುತ್ತೇನೆ. ಈಗ ಮಗುವು ದೊಡ್ಡದಾಗಿದೆ, ನಾಳೆ ಆದರ ಸಾಕುತಾಯಿಯು, ತನಗಿಚ್ಛೆ ಬಂದವರೊಂದಿಗೆ ಲಗ್ನಮಾಡಿ, ದೂರದೂರಿಗೆ ಕೊಟ್ಟುಬಿಟ್ಟರೆ ನಾನು ಹೇಗಿರಲಿ? ನನ್ನದೂ ಕರುಳಲ್ಲವೆ ವಕೀಲರೇ?" ಎಂದು ಅಂಗಲಾಚಿ ಬೇಡುತ್ತಿದ್ದಳು.

ನನಗೆ ಆ ದಿನವೆಲ್ಲಾ ಆ ಇಬ್ಬರು ಹೆಣ್ಣುಮಕ್ಕಳೂ ಒಂದೇ ಮಗುವಿನ ಸಲುವಾಗಿ ತೋರಿಸುವ ತಮ್ಮ ತಮ್ಮ ವಾತ್ಸಲ್ಯ, ಆದರೂ ಇಬ್ಬರಿಗೂ ಆ ಮಗುವು ಸಿಗಲಾರದಂತಹ ಈ ಸಂದಿಗ್ಧ ಸಮಯದಿಂದಾಗಿ ಆ ಮಗುವಿನ ಮೇಲೆ ಆಗಬಹುದಾದ ಪರಿಣಾಮ ಇವುಗಳ ವಿಚಾರವೇ ವಿಚಾರ. ಅದಕ್ಕಾಗಿ ಅಂದು ತಾಯಿಯಕಡೆಯಿಂದ ಬೈಸಿಕೊಂಡು, ಮನಸಿಲ್ಲದ ಮನಸ್ಸಿನಿಂದ ಊಟ ತೀರಿಸಿ ಹಾಸಿಗೆ ಕಂಡೆ. ರಾತ್ರಿ ಇಡೀ ನಿದ್ರೆಯಲ್ಲೆಲ್ಲ ಅದೇ ಕನಸು. ಮಸಕು ಮಸಕಾಗಿ ಆ ಮಗುವಿನ ಮುಂದಿನ ಭವಿಷ್ಯ ಕಣ್ಣೆದುರು ಹಾಯತೊಡಗಿತು.

* * *

ಅಂದು ಶ್ರಾವಣ ಸೋಮವಾರ. ಶಾಲೆಗೆ ಬಿಡುವು. ೧೦-೧೨ ವರ್ಷದ ಹುಡುಗಿಯೊಂದಿಗೆ ಒಬ್ಬ ಪೋಲೀಸ ಕಾನಸ್ಟೇಬಲನು ನಮ್ಮ ಆಶ್ರಮದ ಕಾರ್ಯಾಲಯಕ್ಕೆಬಂದಿದ್ದಾನೆ ನಾನೂ ಯಾವದೋ ಕೆಲಸಕ್ಕಾಗಿ ಅಲ್ಲೇ ಕಾರ್ಯಾಲಯದಲ್ಲಿ ಕುಳಿತಿದ್ದೆ ಕಾರ್ಯದರ್ಶಿಗಳೊಂದಿಗೆ ಮಾತಾಡುತ್ತಾ ಆಶ್ರಮದಲ್ಲಿ ಹೆಣುಮಕ್ಕಳ ಶೀಲ, ವಿದ್ಯೆ ಇವುಗಳಿಗಾಗಿ ಸುವ್ಯವಸ್ಥೆ ಇರುವದೆಂದು, ಸರಕಾರವು ಇಲ್ಲಿನ ವಸತಿಗೃಹದಲ್ಲಿ 'ರಿಮಾಂಡ್ ಹೋಂ' ಹುಡುಗಿಯರನ್ನು ಇಡಬಹುದೆಂದು ಮನ್ನಣೆ ಕೊಟ್ಟದೆ.

ಆದ್ದರಿಂದ ಆ ಹುಡುಗಿಯನ್ನು ಇಲ್ಲಿಡಲು ಸರ್ಕಾ ಒಬ್ಬ ಕಾನಸ್ಟೇಬಲನೊಂದಿಗೆ ಅವಳನ್ನು ಕಳುಹಿಸಿತ್ತು. ಹ ಗಿಯು ಚುರುಕು ಬುದ್ಧಿಯವಳಂತೆ ಕಂಡಳು. ಇಲ್ಲಿಗೆ ಬ ಕೆಲವೇ ದಿನಗಳಲ್ಲಿ ಚನ್ನಾಗಿ ಓದಲು ಬರೆಯಲು ಕಲಿತ ಅವಳ ಓರಿಗೆಯ ಅನೇಕ ಮಕ್ಕಳು ಸರ್ಕಾರದ ಮುಖಾಂ ಇಲ್ಲಿಗೆ ಬಂದಿದ್ದರು. ಆಶ್ರಮದಿಂದ ಜರಗುವ ಎಲ್ಲ ಆಟಪಾ ಗಳದ ಭಾಗವಹಿಸಿ, ಈ ಹುಡುಗಿಯೂ ಮುಂದಾಗಿದ್ದಳು.

ಹೀಗೇ ದಿನಗಳು ಕಳೆಯುತ್ತಿದ್ದವು. ಆ ಹುಡುಗಿ ಬಂದು ನಾಲ್ಕಾರು ತಿಂಗಳುಗಳಾಗಿರಬಹುದು. ಅ ತಾಯಿಯು ಒಮ್ಮೆ ಅವಳ ಭೆಟ್ಟಿಗಾಗಿ ಆಶ್ರಮಕ್ಕೆ ಬಂದ ನನಗೆಲ್ಲೋ ಆ ಹೆಣ್ಣುಮಗಳನ್ನು ನೋಡಿದ ನೆನಪಾಗುತ್ತಿ ಆದರೆ ಎಲ್ಲೆಂಬದು ಸ್ಪಷ್ಟವಾಗಿ ನೆನಪಾಗಲಿಲ್ಲ. ಅವ ಒಂದೆರಡು ದಿನಗಳಿದ್ದು ಪುನಃ ತನ್ನೂರಿಗೆ ಹೊರಟುಹೋದ ಮುಂದೆ ಮೇಲಿಂದ ಮೇಲೆ, ತಿಂಗಳಿಗೆ ಎರಡುತಿಂಗಳಿಗೊ ಮಗಳ ಭೆಟ್ಟಿಗೆ ಬರತೊಡಗಿದಳು. ಹಾಗೇ ಅವಳೊಂ ಮಾತುಕತೆಯಾಡುತ್ತಾ ಆಡುತ್ತಾ ಇರುವಾಗ, ಅವ ಮಂದಿಯ ಮನೆಯಲ್ಲಿ ಅಡಿಗೆಮಾಡುತ್ತಿರುವದಾಗಿ ತಿಳಿಯಿ ಮುಂದೆ ಕೆಲವೇ ದಿನಗಳಲ್ಲಿ ಮತ್ತೊಮ್ಮೆ ಊರಿಗೆ ಬಂದ ತಾನು ಇನ್ನುಮುಂದೆ ನನ್ನೂರಿಗೆ ಹೋಗುವದಿಲ್ಲವೆಂ ತನಗೆ ಇಲ್ಲೇ ಎಲ್ಲಾದರೂ ಅಡಿಗೆ ಮಾಡಲು ಒಂದು ಮ ಹುಡುಕಿಕೊಡಬೇಕೆಂದೂ ಕೇಳಿಕೊಂಡಳು. ನಾವು ತೋ ಕೊಟ್ಟ ಅವರಿವರ ಮನೆಗಳಲ್ಲಿ ನಾಲ್ಕಾರು ದಿನಗಳವ ಕೆಲಸಮಾಡಿ, ಎಲ್ಲೂ ತನಗೆ ಸರಿಬೀಳಲಿಲ್ಲವೆಂದು ಪುನಃ ನ ಬಳಿಗೇ ಬರುತ್ತಿದ್ದಳು. ಹೀಗಾಗಿ ಮುಂದೆ ಅವಳನ್ನು ಬೇ ನಿಲ್ಲಿಸಿದರೂ ನಿಲ್ಲಲಾರಳೆಂದು ಮನವರಿಕೆಯಾಗಿ, ನಮ್ಮ ಅಡಿಗೆಗೆಂದು ಇಟ್ಟುಕೊಂಡೆವು. ಈಗ ೨ ವರ್ಷಗಳಿಂದ ಯಾ ತಕರಾರೂ ಇಲ್ಲದೆ ಕೆಲಸಸಾಗುತ್ತ ನಡೆದಿದೆ.

ಹೀಗೇ ಒಂದುದಿನ ನಾನು ನಮ್ಮಕಾರ್ಯಾಲಯದಲ್ಲಿ ಯುತ್ತಾ ಕುಳಿತಿದ್ದಾಗ ಆ ಅಡಿಗೆಯ ಹೆಣ್ಣುಮಗಳು ಬಂ ಆ ಮಾತು, ಈ ಮಾತು ಆಡುತ್ತಾ ಕುಳಿತಾಗ, ಅವಳು ತ ಮಗಳ ಭವಿಷ್ಯದ ಬಗ್ಗೆ ನನ್ನ ಬಳಿ ವಿಚಾರಮಾಡ ತೊ ದಳು.

ನನಗೂ ಅಂದು ಶಾಲೆಗೆ ಬಿಡುವಿದ್ದುದರಿಂದ ಆ ಬಗ್ಗೆ ಹೆಚ್ಚಿಗೆ ವಿಚಾರ ಮಾಡುವ ಕುತೂಹಲ ಉಂಟಾಯ

"ಬಾಯರೇ, ಇನ್ನೂ ನನ್ನ ಸುಧೆಯು ಎಷ್ಟು ಕ ಕಲಿತರೆ ಅವಳ ಇಂಗ್ಲೀಷ್ ಶಾಲೆ ಮುಗಿಯುವದು?

ಂದು ಸರಕಾರದಿಂದಬಿಡುಗಡೆಯಾಗುವಳು? ಅವಳುಬಿಡುಗಡೆ
ಾಗುವದರಲ್ಲೇ ಅವಳ ಓದೆಲ್ಲಾ ಮುಗಿಯುವದೋ ಹೇಗೆ?
ವಳನ್ನು ಟ್ರೇನಿಂಗ್ ಕಾಲೇಜಿಗೆ ಕಳಿಸಿ ಶಿಕ್ಷಕಿಯನ್ನಾಗಿ
ಾಡಬೇಕಾದರೆ ಎಷ್ಟು ದಿನಗಳು ಬೇಕಾಗುವದು
ಯರೇ?" ಎಂದು ಒಂದೇ ಉಸುರಿನಲ್ಲಿ ನಾಲ್ಕಾರು ಪ್ರಶ್ನೆ
ನ್ನು ಆತುರದಿಂದ ಕೇಳಿದಳು. ಆಗ ಈ ತಾಯಿಯು
ಗಳ ಬಳಿಯೇ ಇಷ್ಟು ಬೆಂಗಾವಲಾಗಿದ್ದು ಮಂದಿಯಮನೆ
ಲ್ಲಿ ದುಡಿದು ಮಗಳನ್ನು ಸಾಕುವಷ್ಟು ಆ ತಾಯಿಯಲ್ಲಿ
ಾಮರ್ಥ್ಯವಿದ್ದೂ ಮಗಳನ್ನು ಬಿಟ್ಟಿರುವದೆಂದರೆ ಈ
ಯಿಯ ಜೀವಕ್ಕೆ ಬಹಳ ಬೇಸರದ ಕೆಲಸವಾಗಿದ್ದೂ ಸಹ
ಹುಡುಗಿಯು ಸರ್ಕಾರದ ಕೈಯಲ್ಲಿ ಹೇಗೆ ಸಿಕ್ಕಿತು?'
ಬುದೇ ನನಗೆ ಆಶ್ಚರ್ಯದ ಪ್ರಶ್ನೆಯಾಯ್ತು. ಮೇಲಾಗಿ
ೋಡಿದರೆ ಬ್ರಾಹ್ಮಣವರ್ಗದ, ಸುಧಾರಿಸಿದ, ಗಂಡನುಳ್ಳ
ಣ್ಣು ಮಗಳು.

" ಕಮಲಾಬಾಯಿ, ನಿನ್ನ ಮಗಳು ಈಗಿನ್ನೂ ಕನ್ನಡ
ೇ ವರ್ಗದಲ್ಲಿದ್ದಾಳೆ. ಅವಳು ಮುಲ್ಕಿ ಪಾಸಾಗಿ ಟ್ರೇನಿಂಗ್
ಗಬೇಕಾದರೆ ಇನ್ನೂ ಮೂರು ವರ್ಷಗಳು ಬೇಕು.
ಾಟ್ರಿಕ್ ಕಲಿತು ಮುಗಿಸುವದಾದರೂ ಐದುವರ್ಷಗಳು
ೇಕು. ಅವಳು ಸರ್ಕಾರದವರಿಂದ ಬಿಡುಗಡೆ ಹೊಂದಬೇಕಾ
ರೆ ಇನ್ನೂ ಮೂರು ವರ್ಷಗಳುಳಿದಿವೆ. ಅಷ್ಟರಲ್ಲಿ ಅವಳ
ೇನಿಂಗ್ ಮುಗಿಯುವದು. ಹುಂ, ಅದಿರಲಿ, ನೀವು ಇಷ್ಟೆಲ್ಲ
ಗಳಸಲುವಾಗಿ ಚಿಂತೆ ಮಾಡುತ್ತಿದ್ದರೂ ಸಹ ಅವಳು ಸರ್ಕಾರ
ದರ ಕೈಗೆ ಹೇಗೆ ಹೋದಳು? ಎಂದೆ.

'' ಬಾಯರೇ, ಏನ್ಹೇಳ್ಲಿ ನನ್ನ ಚರಿತ್ರೆ! ಈ ಮಗು ನನ್ನ
ಲ್ಲ. ನಾನು ಸಾಕಿದ್ದು" ಎಂದಳು.

' ಹಾಂ, ನೀನು ಸಾಕಿದ್ದು? ಹಾಗಾದರೆ ಎಲ್ಲಿಯ
ಡುಗಿ ಇವಳು?" ಆಶ್ಚರ್ಯ ಕುತೂಹಲಗಳಿಂದಲೇ ಕೇಳಿದೆ.

" ಇವಳೂ ನಮ್ಮೂರಿನವಳೇ ಹೌದು. ಆದರೆ ಆಸ್ಪತ್ರೆ
ಲ್ಲಿ ಹುಟ್ಟಿದ ಈ ಮಗುವನ್ನು ಇವಳ ತಾಯಿಯು ಯಾರಿ
ಗಾದರೂ ಕೊಟ್ಟು ಬಿಡಲು ಹವಣಿಸಿದಳು. ಅದು ನನಗೆ
ಗೊತ್ತಾಗಿ ನಾನಿದನ್ನು ಕೇವಲ ನಾಲ್ಕು ದಿನಗಳ ಶಿಶು
ವಿದ್ದಾಗ ಕರೆತಂದೆ. ಜೋಪಾನ ಮಾಡಿದೆ. ೧೦-೧೧
ವರ್ಷಗಳ ವರೆಗೆ ಅಂಗೈಲಿಟ್ಟು ಮುಂಗೈಲಿ ಮುಚ್ಚಿ ಬೆಳೆಸಿದೆ.
ದರೆ ಮುಂದೆ ಇದರ ತಾಯಿಯು ಜಗಳ ತೆಗೆದು, ಮಗು
ನ್ನು ತಾನು ಕರೆದೊಯ್ಯುವದಾಗಿ ಹಠ ಹಿಡಿದಳು. ನ್ಯಾಯವು
ಕೀಲರ ಕಡೆಗೆ ಹೋಯಿತು. ಅಲ್ಲಿಂದ ವಕೀಲರ ಮಾರ್ಫತ್
ಕೇಸು ಕೋರ್ಟಿನ ವರೆಗೂ ಹೋಗಿ, ಅಲ್ಲಿ ಹುಡುಗಿಯ ಇಚ್ಛೆ
ಇದ್ದರೆ ಅವಳು ಕೆಲವು ದಿನಗಳಮಟ್ಟಿಗಾದರೂ ತನ್ನ ಸ್ವಂತ
ತಾಯಿಯ ಕಡೆಗೆ ಹೋಗಬೇಕೆಂದು ತೀರ್ಪಾಯ್ತು. ಅಂತೂ
ಇಂತೂ ನನ್ನ ಕರುಳನ್ನೇ ಹಿರಿದು ಪರರಿಗೆ ಕೊಡುತ್ತಿರುವೆ
ನೇನೋ ಎನ್ನುವಷ್ಟು ಸ್ಥಿತಿಯಿಂದ ಮಗುವನ್ನು ಅವರ ಮನೆಗೆ
ಕಳುಹಿಸಿದೆ.''

" ಅಂದರೇss, ಅವಳು ತಾನು ಹೋಗಲು ಒಪ್ಪಿದ
ಳೇನು ?"

" ಇಲ್ಲ ಬಾಯರೇss ಆ ಮಗು ಮೂಕ ಸ್ವಭಾವ
ದವಳು. ಫಕತ್ ಅಳುತ್ತಾ ನಿಂತಳು ಮಾತ್ರ. ಕೊನೆಗೆ
ವಕೀಲರೇ ರಮಿಸಿ, ಅವಳನ್ನು ಅವಳ ತಾಯಿಯ ಮನೆಗೆ
ಕಳುಹಿಸಿದರು. ಅವಳು ಹೋಗುವಾಗಿನ ದೃಶ್ಯ ನನಗೆ
ನೋಡಲಾಗದ್ದರಿಂದ ನಾನು ಮನೆಗೆ ಹೊರಟು ಹೋದೆ.
ಮತ್ತೆ ಮಾರನೆಯ ಬೆಳಗ್ಗೆ ಎನ್ನುವದರೊಳಗಾಗಿ ಹುಡು
ಗಿಯು ಅಳುತ್ತಾ ವಕೀಲರ ಮನೆ ಬಾಗಿಲಿಗೆ ಬಂದು ನಿಂತಿ
ದ್ದಳಂತೆ. ವಕೀಲರು ನನ್ನ ಕರೆಸಿದರು. ನನ್ನನ್ನು ನೋಡಿ
ದೊಡನೆ ಆ ಬಾಲೆಯು ಬಿಕ್ಕಿ ಬಿಕ್ಕಿ ಅಳುತ್ತಾ ಬಂದು ನನ್ನ
ತೆಕ್ಕೆ ಬಿದ್ದಳು. ನನಗೂ ತಡೆಯಲಾರದಷ್ಟು ದುಃಖವಾಗಿ
ನಾನು ಅತ್ತೆ. ಅಷ್ಟರಲ್ಲೇ ಹುಡುಗಿಯನ್ನು ಹುಡುಕುತ್ತಾ
ಅವಳ ತಾಯಿಯೂ ಬಂದಳು. ಹುಡುಗಿ ಪುನಃ ಅವಳಲ್ಲಿ
ಹೋಗಲು ಒಲ್ಲೆನೆಂದಳು. ಹೇಗೆ ಬರುವದಿಲ್ಲ ನಾನು
ನೋಡುತ್ತೇನೆಂದು ಅವಳ ತಾಯಿಯ ಹಠ. ನಮ್ಮೂರು
ಬಹಳ ಕೆಟ್ಟ ಊರವಾದ್ದರಿಂದ ಅವಳ ವಿರುದ್ಧ ನಾನು ಬಾಲೆ
ಯನ್ನು ಮನೆಗೊಯ್ದರೂ ಸಹ, ಮುಂದೇನಾದರೂ ಮಾಟ
ಮಂತ್ರ ಮಾಡಬಹುದೆಂಬ ಹೆದರಿಕೆಯಿಂದ ನಾನೂ ಅವಳ
ವಿರುದ್ಧ ಮಾತಾಡಿ ಬಾಲೆಯನ್ನು ಕರೆದೊಯ್ಯಲು ಹವಣಿಸ
ಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ವಕೀಲರಿಗೆ ಏನೂ ತೋಚದೆ
ಸ್ವಲ್ಪಹೊತ್ತು ಯೋಚಿಸಿ, ನನ್ನನ್ನು " ಈ ಮಗುವನ್ನು
ಬೇರೆ ಊರಿನಲ್ಲಿ ಶಾಲೆಗೆ ಕಳಿಸಲು ನೀವು ತಯಾರಿದ್ದೀರಾ ?"
ಎಂದು ಕೇಳಿದರು. ಮೊದಲು ನಾನು ಸ್ವಲ್ಪ ಹಿಂದುಮುಂದೆ
ನೋಡಿದೆನಾದರೂ ಮಗಳು ಎಲ್ಲಾದರೂ ಚನ್ನಾಗಿದ್ದರೆ
ಸಾಕು, ನಾನೂ ಅವಳಿರುವಲ್ಲಿಗೇ ಹೋದರಾಯ್ತೆಂಬ ವಿಚಾರ
ದಿಂದ " ಹುಂ " ಎಂದು ಒಪ್ಪಿಗೆ ಕೊಟ್ಟೆ. ಮುಂದೆ ಎಂಟು
ಹತ್ತು ದಿನಗಳೆನ್ನುವದರಲ್ಲೇ ಇವಳನ್ನು 'ರಿಮಾಂಡ್
ಹೋಂ' ಗೆ ಸೇರಿಸಿ, ನಮ್ಮಲ್ಲಿಗೆ ಕಳಿಸಿದರು. ಕೆಲವು ದಿನಗಳ
ವರೆಗೆ ನಾನು ನಮ್ಮೂರಿನಲ್ಲಿಯೇ ಇದ್ದಂತೆ ಮಾಡಿ, ಮುಂದೆ

ಅಲ್ಲಿ ನನಗೆ ಮುಂದಿಯ ಮನೆ ಕೆಲಸ ಸರಿಬರಲಿಲ್ಲವೆಂದು ನೆವ ತೆಗೆದು ನಮ್ಮೂರಿಗೇ ಬಂದೆ. ಇಲ್ಲೂ ನಾಲ್ಕಾರು ಮನೆಗಳಲ್ಲಿ ಕೆಲಸಕ್ಕೆ ನಿಂತರೂ ಸಹ, ದಿನವೂ ಮಗಳ ಭೆಟ್ಟಿಗೆ ಬರಲಾಗದ್ದರಿಂದ ಎಲ್ಲರಲ್ಲೂ ಏನಾದರೂ ನೆವ ತೆಗೆದು ಕೆಲಸ ಬಿಟ್ಟು ಬಂದೆ. ಮುಂದೆ ನಿಮ್ಮಲ್ಲೇ ಕೆಲಸಕ್ಕೆ ನಿಲ್ಲುವ ಯೋಗಾಯೋಗ ಬಂದದ್ದರಿಂದ ನನಗೆ ಒಂದು ಸಂಧಿ ಸಿಕ್ಕಂತಾಗಿ ಸಮಯದ ಉಪಯೋಗ ಮಾಡಿಕೊಂಡೆ ಬಾಯರೇ, ನಿಜವಾಗಿ ನನ್ನ ಮಗಳನ್ನು ಒಂದು ದಿನ ನೋಡದಿದ್ದರೂ ನನಗೆ ಸಮಾಧಾನವಿಲ್ಲ" ಎಂದು ಕಣ್ಣೊರಸಿದಳು ಕಮಲಾಬಾಯಿ.

"ಅಳಬೇಡ ಕಮಲಾಬಾಯಿ, ನಿನಗೆಲ್ಲವೂ ಸರಿಯಾಗಿಯೇ ಆಯ್ತಲ್ಲ! ಆದರೆ ನಿನ್ನ ಗಂಡನೆಲ್ಲಿದ್ದಾನೆ? ಎಂದು ಮತ್ತೆ ಕುತೂಹಲದಿಂದ ಕೇಳಿದೆ.

"ಆಯ್ಯೊ ಬಾಯಿ, ಅದೊಂದು ಕತೆ. ನನ್ನ ಲಗ್ನವಾಗಿ ವರ್ಷದೊಳಗೇ ನಾನು ಸಣ್ಣವಳೆಂದು ಮತ್ತೊಬ್ಬ ದೊಡ್ಡ ಹುಡುಗಿಯನ್ನು ಲಗ್ನವಾದ ನನ್ನ ಗಂಡ. ಮುಂದೆ ಅವಳೊಂದಿಗೂ ನ್ಯಾಯ ಹೂಡಿ ಮೂರನೇಯವಳನ್ನು ಲಗ್ನವಾದ. ಅವಳೂ ಒಂದೆರಡು ವರ್ಷಗಳಲ್ಲೇ ಸತ್ತು ಹೋದ್ದರಿಂದ ನಾಲ್ಕನೇಯವಳೊಬ್ಬನನ್ನು ಕಟ್ಟಿಕೊಂಡು ಎಲ್ಲಿಗೋ ಹೋಗಿಬಿಟ್ಟ. ನನ್ನ ತಂದೆಯ ಮನೆಯವರು ಬಡವರಾದರೂ ಮರ್‍ಯಾದಸ್ಥರು. ನನಗೆ ಹೊರಗೆ ಬಿಡಲು ಆವರು ತಯಾರಿರಲಿಲ್ಲ. ಮುಂದೆ ತಾಯ್ತಂದೆಯರು ತೀರಿಕೊಂಡ ನಂತರ, ಅಣ್ಣತಮ್ಮಂದಿರ ಹೆಂಡಿರ ಕೈಕೆಳಗೆ ಸುಖವಾಗಿ ಉಸಿರಾಡಿಸುತ್ತ ಓಡಾಡುವದೂ ತೊಂದರೆಯ ಕೆಲಸವಾಗಿ ಪರಿಣಮಿಸಿದ್ದರಿಂದ ಮೆಲ್ಲಗೆ ತೌರಿನಿಂದ ಹೊರಬಿದ್ದು, ಮಂದಿಯ ಮನೆಯಲ್ಲಿ ದುಡಿದು ಹೊಟ್ಟೆ ಹೊರೆಯತೊಡಗಿದೆ. ಇದೇ ರೀತಿ ಒಬ್ಬಂಟಿಗಳಾಗಿ ಸಾಧಾರಣ ಮೂವತ್ತೈದು ವರ್ಷಗಳನ್ನು ಕಳೆದೆ. ಮುಂದೆ ನನಗೆ ಈ ಮಗು ಸಿಕ್ಕು ನನ್ನ ಮಾಯವನ್ನು ಕೊಂಡುಕೊಂಡು ಬಿಟ್ಟಿತು. ಹೀಗಾಗಿ ಈಗ ನನಗೆ ಇವಳೊಬ್ಬಳ ಹೊರತು ಜಗತ್ತೆಲ್ಲವೂ ಶೂನ್ಯ ಕಾಣಿಸುತ್ತದೆ ಅದರ ಹೊರತಾಗಿ ಗಳಿಗೆ ಜೀವದಿಂದಿರಲಾರೆ ಬಾಯರೇ" ಎಂದಳು.

"ಕಮಲಾಬಾಯಿ, ನಿನ್ನಂತೆಯೇ ಅವಳೂ ನಿನ್ನನ್ನು ಪ್ರೀತಿಸುತ್ತಾಳೇನು? ಒಂದು ವೇಳೆ ಮುಂದೆ ಅವಳಿಗೆ ತನ್ನ ತಾಯಿಯ ಮೇಲೆ ಮಾಯೆ ಹುಟ್ಟಿದರೆ ನೀನೇನು ಮಾಡುವಿ?" ಚೇಷ್ಟೆಯಿಂದಲೇ ವಿಚಾರಿಸಿದೆ.

"ಅಯ್ಯೋ ಬಾಯರೇ, ಅದನ್ನ ಹೇಗ್ಹೇಳ್ಲಿ! ನನ್
ತೆಯೇ ಅವಳಿಗೂ ನನ್ನ ಮೇಲೆ ಮಾಯೆ ಮಾಡೆಂದು ನಾ
ಹೇಗೆ ಹೇಳಲಿ? ಅದನ್ನು ಅಪೇಕ್ಷೆಯಾದರೂ ಏಕೆ ಮಾಡಲಿ
ನಾಳೆ ಅವಳಿಗೆ ತನ್ನ ಸ್ವಂತ ತಾಯಿಯ ಮೇಲೇ ಹೆಚ್
ಪ್ರೀತಿ ಬಂದರಾದರೂ ನಾನೇನು ಮಾಡಲಿ? ಏನೇ ಮಾಡ
ಅವಳು ನಾನಂತೂ ಏನೂ ಮಾತಾಡುವದಿಲ್ಲ. ಆದರೆ ನ
ಪ್ರೀತಿಯನ್ನು ಮಾತ್ರ ಕಡಿಮೆ ಮಾಡಲು ಸಾಧ್ಯವಿಲ್ಲ. ಸಾಕ
ಕರ್ತವ್ಯಕ್ಕೆ ಪ್ರೀತಿಯನ್ನು ಧಾರೆ ಎರೆದೆ. ಅದರ ಉಪಯೋ
ಮಾಡಿಕೊಳ್ಳುವದೂ ಬಿಡುವದೂ ಅವಳ ಕೈಲಿದೆ, ಹೌದೋ
ಅಲ್ಲವೋ ಬಾಯರೇ!" ಎಂದು ಒಳ್ಳೇ ತಾತ್ವಿಕವಾಗಿ ಮಾತಾ
ದಳು. ಅವಳ ಈ ವಿಚಾರ ಕಂಡು ನಿಜವಾಗಿ ಬೆರಗಾದೆ.

"ಕಮಲಾಬಾಯಿ ಈ ವರೆಗೂ ಏನೇನೋ ಮಾತ
ಡಿದೆ. ಮುಖ್ಯ ನಿನ್ನ ಊರು ಮಗಳನ್ನು ಇಲ್ಲಿಗೆ ಕಳಿಸಿ
ವಕೀಲರ ಹೆಸರನ್ನು ಕೇಳುವದನ್ನೇ ಮರೆತೆನಲ್ಲಾ! ಏನೋ
ನೆನಪಾಗಿ ಕೇಳಿದೆ.

"ಹೌದು, ಬಾಯರ ನನ್ನದು ಸಮುದ್ರ ಕಿನಾರಿಯ
ರುವ ಒಂದು ಸಣ್ಣ ಹಳ್ಳಿ. ನಿಮಗದರ ಹೆಸರು ಹೇಳಿದ
ತಿಳಿಯೋ ಹಂಗಿಲ್ಲ. ನಮ್ಮ ವಕೀಲರ ಹೆಸರು...."

ಸಮುದ್ರ ಕಿನಾರೆಯಲ್ಲಿರುವ ಹಳ್ಳಿ ಎಂಬ ಮಾ
ಕೇಳಿದೊಡನೆ ಎಲ್ಲವೂ ನೆನಪಾದಂತಾಗಿ ಅವಳು ತನ್ನ ಮಾ
ಮುಗಿಸುವದರೊಳಗೇ "ಓಹೋ, ನನಗೇನು ನಿಮ್ಮೂ
ಹೆಸರು ತಿಳಿಯೋ ಹಾಂಗಿಲ್ಲವಾ? ನಾನೂ ಅಲ್ಲೇ ಹುಟ್ಟಿ ಬೆ
ದವಳು. ಹೇಳು ಹೇಳು ನಿಮ್ಮ ವಕೀಲರ ಹೆಸರನ್
ಎಂದು ಆತುರದಿಂದ ಕೇಳಿದೆ.

ಆಗ ಅವಳು ಹೇಳಿದ ಹೆಸರು ನಮ್ಮೂರ ಒಳಿಯ ಹ
ಹಾಗೂ ನಮ್ಮ ಪಕ್ಕದ ಮನೆಯ ವಕೀಲರ ಹೆಸರು.

ಮೂರನೆಯ ದಿನವೇ ನಾನು ನಮ್ಮ ತಾಯಿಗೆ "ಅಂ
ನೀನು ನನ್ನನ್ನು ಗದರಿಸಿದ ದಿನದ ಪ್ರಕರಣದ ವಿಷಯವು
ಗೆಲ್ಲ ಸಂಪೂರ್ಣ ತಿಳಿಯಿತು ಅದೆಲ್ಲವನ್ನು ಇಲ್ಲಿ ವಿವರಿಸಿದ್ದ
ಹೆಣ್ಣುಮಕ್ಕಳ ಸ್ಥಿತಿ, ಅದರಿಂದ ಸಣ್ಣ ಮಕ್ಕಳ ಮೇಲಾಗ
ಪರಿಣಾಮ ಎಲ್ಲವೂ ಏನೇನಿರುವದೆಂಬದನ್ನು ನೋಡು. ನ
ಬಯ್ಯ ಬೇಡ. ಆ ಮಗುವಿನ ಬಗ್ಗೆ ನನಗಂದು ಮಸಕು
ಕಾಗಿ ಕಾಣಿಸಿದ ಭವಿಷ್ಯಕ್ಕಿಂತ ಇಂದವಳ ಭವಿಷ್ಯವು
ಬೇರೆಯಾಗಿಯೇ ಇದೆ. ಮುಂದವಳ ಜೀವನವು ಉ
ವಾಗುವದರಲ್ಲಿ ಸಂದೇಹವಿಲ್ಲ" ಮುಂತಾಗಿ ಸುದೀರ್ಘ
ದೊಂದು ಓಲೆ ಬರೆದೆ.

# ತಂಗಿಯರೆ ಕೇಳುವಿರಾ ನನ್ನದಿಷ್ಟು ಕಥೆ !

ಬರೆದವಳು— **ಸತ್ಯವಾದಿನಿ.**

**೩ನೇ ಪ್ರಕರಣ.** ಇನ್ನೇನು ಗತಿ !

[ ೧೫ನೇ ಅಕ್ಟೋಬರ ಸಂಚಿಕೆಯಿಂದ ಮುಂದೆ ಸಾಗಿದ್ದು. ]

**ಕಥೆಯ ಸಾರಾಂಶ:—** ನಾನೋರ್ವ ಭಾವಸಾರ ಕ್ಷತ್ರಿಯ ಬಡಕುಟುಂಬದಲ್ಲಿ ಹುಟ್ಟಿದವಳು. ಓರ್ವ ತೇಜೋಹೀನ, ಹೇಡಿ, ಕುರೂಪಿ ಆಪ್ತನನ್ನು ಲಗ್ನವಾಗಿದ್ದು ತಂದೆ ಮತ್ತು ಗಂಡ ಇಬ್ಬರು ಕುಡುಕರು. ಆದ್ದರಿಂದ ಮನೆಯಲ್ಲಿ ಸ್ವಾಸ್ಥ್ಯವಿಲ್ಲ. ನಾನು ಸಾಧಾರಣ ಚಲುವೆ, ಚುರುಕು ಬುದ್ಧಿಯವಳು. ಸಂಘಟನಾಚತುರಳು, ಮಾತುಗಾರಳು ಆಕರ್ಷಕಳು ಇದ್ದ ಮೂಲಕ ಎಲ್ಲರು ನನ್ನನ್ನು ವಿಶೇಷವಾಗಿ ತರುಣರು ಪ್ರೀತಿಸುತ್ತಿದ್ದರು. ಓರ್ವ ಸೆಕ್ರೆಟರಿ ಬಲೆಯೊಳಗೆ ಸಿಕ್ಕಬಿದ್ದೆನು. ಗಂಡನು ಸಂಶಯ ಪಿಶಾಚಿಗೆ ಬಲಿಬಿದ್ದನು. ಕೊನೆಗೆ ಓರ್ವ ಮೋಟಾರ ಡ್ರಾಯಿವ್ಹರನ ಕೂಡ ಓಡಿ ಹೋಗಿದ್ದಕ್ಕೆ ನನ್ನನ್ನು ಒಂದು ಹೆಣ್ಣುಮಕ್ಕಳ ಸಂಸ್ಥೆಯಲ್ಲಿ ಆ ಸೆಕ್ರೆಟರಿಯು ತಂದುಬಿಟ್ಟನು. ಸಂಸ್ಥೆಯು ಆಗಲೇ ಪ್ರಾರಂಭವಾಗಿದ್ದರಿಂದ ನೋಡಲು ಭವ್ಯವಾಗಿದ್ದಿಲ್ಲ. ಎಲ್ಲವು ಅಸ್ತವ್ಯಸ್ತ. ಮೂವರು ವ್ಯವಸ್ಥಾಪಿಕೆಯರಿದ್ದರೂ ಒಬ್ಬರಿಗೊಬ್ಬರಿಗೆ ತಾಳು ಮೇಳಿಲ್ಲ. ಕುರುಡ ದಂತಿಪಗಳ ಕೂಡ ಇರುವಿಕೆ. ಮೊದಲೆ ಮನಸಿನ ಮೇಲೆ ಸಂಸ್ಥೆಯ ಬಗ್ಗೆ ಅನಾದರ ಹುಟ್ಟಿ ಇರಬಾರದೆಂಬ ಭಾವನೆ ಹುಟ್ಟಿದ್ದು. ಆ ಸೆಕ್ರೆಟರಿಯ ದುಷ್ಟ ಮಾತುಗಳಿಂದ ಮನಸು ನೊಂದಿದ್ದರೂ ಚಡುಪಡಿಕೆಯಿಂದ ಸಂಸ್ಥೆಯಲ್ಲಿ ನಿರುಪಾಯವಾಗಿ ಇರಬೇಕಾಯಿತು

ಪೂರ್ವ ಪರಿಚಯದಿಂದ ದುಷ್ಟ ವಾತಾವರಣವು ಸಹ್ಯವಾಗುತ್ತದೆ ಆದರೆ ಪರಿಚಯವಿಲ್ಲದ ಒಳ್ಳೆಯ ವಾತಾವರಣಕ್ಕೂ ಮನಸು ಭಯಪಡುತ್ತದೆ. ತಂದೆ ಮತ್ತು ಗಂಡನ ಕುಡುಕತನ, ದಾರಿದ್ರ್ಯ, ಊರೊಳಗಿನ ನಿಂದಾಸ್ಪದ ವಾತಾವರಣ, ತರುಣರ ಮೋಸಗಾರಿಕೆ, ಸೆಕ್ರೆಟರಿಯ ತಾತ್ಸಾರ ಇವುಗಳಿಗೆ ಮನಸ್ಸು ಬೇಸತ್ತು ಹೇಸಿದ್ದರೂ ಕೂಡ ಅದನ್ನು ಬಿಟ್ಟು ಬಂದದ್ದಕ್ಕೆ ಮನಸು ಬೇಜಾರಗೊಂಡಿತ್ತು. ಸಂಸ್ಥೆಯ ವಾತಾವರಣವಾದರು ಆಕರ್ಷಕವೆನಿಸಲಿಲ್ಲ. ಎಲ್ಲಿಯೋ ಒಂದು ಗುಡ್ಡಗಾಡದಲ್ಲಿ ಬಸರಿಯು ಮಹಾಸಾಧ್ವೀ ಸೀತಾದೇವಿಯನ್ನು ಒಂಟಿಗಳನ್ನಾಗಿ ಬಿಟ್ಟಂತಾಯಿತು ನನ್ನ ಗತಿ! ಅಯ್ಯೋ! ಇನ್ನೇನು ಗತಿ! ಇಲ್ಲಿ! ಈ ಹಾಳು ಸಂಸ್ಥೆಯಲ್ಲಿ ಹೇಗೆ ಇರಲಿ! ಎಲೋ ಸೇಕ್ರೇಟರಿ! ನೀನು ಹೇಗೆ ಇದ್ದರು, ಎಷ್ಟೇ ತಿರಸ್ಕಾರ ತಾತ್ಸಾರ ಮಾಡಿದರು ನಿನ್ನ ಹಿಂದಿನ ಪ್ರೇಮಲಾಪಗಳನ್ನು ಸ್ಮರಿಸುತ್ತ ನಿನ್ನ ದಾಸಿಯಾಗಿ ನೀನು ಹಾಕಿದ್ದು ತಿಂದು ನೀನು ಕೊಟ್ಟಿದ್ದು ಉಟ್ಟು ಅಲ್ಲಿಯೇ ಕಾಲ ಕಳೆಯುತ್ತಿದ್ದೆನಲ್ಲ! ಇಲ್ಲೇಕೆ ಈ ಹಾಳು ಭಾವಿಯಲ್ಲಿ ತಂದು ನನ್ನನ್ನು ಬೀಸಾಡಿದೀ! ಅಯ್ಯೋ! ತಂದೆಯುವರೆ! ತಾಯಿ ಸತ್ತ ಮೇಲೆ ನೀವು ಕುಡುಕರಿದ್ದರು ನಶೆ ಇಳಿದ ಮೇಲೆಯಾದರು ಎಷ್ಟು ನನ್ನನ್ನು ಪ್ರೀತಿಸುತ್ತಿದ್ದಿರಲ್ಲ! ಈಗ ಆ ನಿಮ್ಮ ಪ್ರೀತಿಯು ಎಲ್ಲಿ ಹಾಳಾಗಿ ಹೋಯಿತು! ನನ್ನನ್ನು ತಮ್ಮ ಮುಸುಕಿನಲ್ಲಿ ಪ್ರೀತಿಯಿಂದ ದಬ್ಬಿಕೊಂಡು ತಾಯಿಯಂತೆ ಸಮಾಧಾನ ಹೇಳುತ್ತಿದ್ದಿರಲ್ಲ! ಇನ್ನೆಂದು ನಾನು ಕಾಣಬೇಕು ತಮ್ಮ ವಾತ್ಸಲ್ಯದ ಪ್ರಚೀತಿ! ಅಯ್ಯೋ! ಏನು ಮಾಡಲಿ ಹೇಗೆ ಸಹಿಸಲಿ! ತಂದೆಯೆ! ನಿನ್ನನ್ನು ಅಗಲಿ ಹೇಗೆ ಇರಲಿ! ನಾನು ಅತ್ತಾಗ ಸಮಾಧಾನ ಹೇಳುವರಾರು! ಬಡೆದುಕೊಂಡು ಬಡೆದುಕೊಂಡು ದೈವವನ್ನು ಹಳಿಯುತ್ತಿರುವಾಗ ನನ್ನ ಕೈ ಹಿಡಿದು 'ಅಳಬೇಡಮ್ಮ' ಎಂದು ಯಾರು ಸಂತಯಿಸುವರು! ಸಂಶಯ ಪಿಶಾಚಿ ದವಡಿಯಲ್ಲಿ ಸಿಕ್ಕ ಎಲೆ ಹೇಡಿ ಗಂಡನೆ! ನನ್ನನ್ನು ಕಾಡಲಾದರು ನೀನು ಬರಬಾರದೆ! ಅದರಲ್ಲಿಯು ನನಗೊಂದು ಮಾದರಿ ಸಮಾಧಾನ! ನಿನ್ನ ಕೂಡ ಜಗಳಾಡುವದರಲ್ಲಿಯು ಒಂದು ಮಾದರಿ ಸಮಾಧಾನದಿಂದ ವೇಳೆಯು ಹೋಗುತ್ತಿತ್ತು! ಈರ್ಷೆ ಅಸೂಯೆ

ಸಿಟ್ಟು ಸಂತಾಪ, ಬೈಗಳಿಂದ ರೇಗಿಸುವದು, ಪ್ರತಿಭಟಿಸುವದು ಇದರಲ್ಲಿಯು ಒಂದು ಮಾದರಿ ವಿಕಾರದ ಸುಖ! ಹಾ! ಹಾ! ಹಾ! ಅವು ಸಹ ನನ್ನ ಪಾಲಿಗೆ ಇಲ್ಲಿ ಸಿಗುತ್ತಿರುವದಿಲ್ಲವಲ್ಲ! ಇನ್ನೇನು ಮಾಡಲಿ! ಎಲೆ ತರುಣ ಪ್ರಿಯಕರರೆ! ನೀವೆಲ್ಲಿ! ನನ್ನ ಮನೆಯ ಮೂಲೆಯಲ್ಲಿಯ ಗಿಡದ ಬುಡದಲ್ಲಿ ನಿಂತು ತಾಸುಗಟ್ಲೆ ನನ್ನ ದಾರಿಯನ್ನು ಇನ್ನು ತಾವು ನೋಡುವಿರಲ್ಲಾ? ನಾನು ಎಲ್ಲರ ಮೋರೆ ತಪ್ಪಿಸಿ ಝುಣ್ಣ! ಝುಣಕ್ಕೆಂದು ಬಂದ ಕೂಡಲೆ ನಿಮಗೆಷ್ಟು ಹಿಗ್ಗು! ಸಹಾಸ್ಯದಿಂದ ನೀವು ಮಾಡಿದ ನನ್ನ ಸ್ವಾಗತವನ್ನು ಎಷ್ಟೆಂತ ನೆನೆಯಲಿ! ಇನ್ನು ಮುಂದೆ ಎಂದಾದರು ಅದು ನನಗೆ ಲಭಿಸೀತೆ! ನಾಮುಂದೆ ನೀ ಮುಂದೆ ಯೆಂದು ನನ್ನನ್ನು ಸಂತೈಸಲು ಸವಿಸವಿ ಮಾತುಗಳೊಡನೆ ಉಂಡಿಯ ತಿಂಡಿಯನ್ನು ಕೊಡಲು ಚಾಚಿದ ಕೈಗಳು ಎಲ್ಲಿ ಇಲ್ಲಿ! ಪ್ರಿಯಕರರೇ! ಎಲ್ಲಿ ತಾವು ಈಗ! ನನ್ನ ಸಲುವಾಗಿ ದಾರಿ ಕಾದು ಕಾದು ಬೇಸತ್ತು ಬೇಜಾರ ಗೊಳ್ಳುತ್ತಿರುವಿರಲ್ಲ! ಇಲ್ಲಿಂದ ನಾನು ಓಡಿ ಬರಲಾ! ಮನಸು ಹಾತೊರೆದರು ಈ ಜೇಲಿನೊಳಗಿಂದ ಹಾರಿ ಬರುವದು ಈ ದೇಹಕ್ಕೆ ಸಾಧ್ಯವೆ! ಎಲ್ಲಿ ಆ ಗೋಪಾಳನು! ಎಲ್ಲಿ ಆ ಪಾಂಡುರಂಗನು! ಹೆಂಡತಿಯನ್ನು ಪೀಡಿಸಿ ಅವಳ ಆಭರಣಗಳನ್ನು ಒಂದು ಕ್ಷಣವಾದರೂ ನನಗೆ ಹಾಕಲು ಕೊಟ್ಟವನು ನೀನಲ್ಲವೆ ಗೋಪಾಳಾ! ಇನ್ನು ಯಾರಸಲುವಾಗಿ ನೀನು ಈ ಸಾಹಸ ಮಾಡುವಿ! ತಾಯಿಯನ್ನು ಪೀಡಿಸಿ, ಒದ್ದು ನನಗಾಗಿ ತಿಂಡಿಯನ್ನು ತಂದ ಎಲೆ ಪಾಂಡುರಂಗಾ ಏನು ಮಾಡುತ್ತಿರುವಿ ಈಗ! ಏಕೆ ನನ್ನನ್ನು ಕರೆದುಕೊಂಡು ಹೋಗುತ್ತಿಲ್ಲ! ಅಯ್ಯೋ! ಈ ಎಲ್ಲ ನೆನಪುಗಳನ್ನು ಹೇಗೆ ಸಹಿಸಲಿ! ಗೆಳತಿಯರೆ! ನೀವಾದರು ನನಗೆ ನೆರವಾಗಲು ಬರಬಾರದೆ! ಆಗೆಷ್ಟು ನೀವೆಲ್ಲರೂ ನಿಮ್ಮೆಲ್ಲ ಚಂದಾಚಂದ ಉಡುಪುಗಳನ್ನು ನನಗೆ ತಂದು ಕೊಟ್ಟು ನಾನು ಧರಿಸಿದ್ದನ್ನು ನೋಡಿ ಎಷ್ಟು ಆನಂದದಿಂದ ಕೇಲಿ ಇಡುತ್ತಿದ್ದಿರಿ! ಅದೆಲ್ಲವು ಈಗೆಲ್ಲಿ! ನೆನಪಾದರು ನನ್ನದು ಈಗಾಗುತ್ತಿರುವದೆ! ಅಯ್ಯೋ! ಎಂಥ ಹತಭಾಗ್ಯಗಳು ನಾನು! ಎಲ್ಲಿ ಬಂದು ಬಿದ್ದೆ! ಇನ್ನೆನು ನನ್ನ ಗತಿ! ಎಷ್ಟೆಂತ ಎದೆ ಬಡೆದುಕೊಂಡರು ಏನಾಗುವದು! ಆ ದ್ರೌಪದಿಗೆ, ಸಾಧ್ವಿಶಿರೋಮಣಿಗೆ ನೆರವು ಕೊಡಲು ಬಂದ ಆ ಕೃಷ್ಣನು ಬರುವನೆ ಈ ಪಾಪಿಷ್ಠಳು ಅಭಾಗಿನಿಯಾದ ನನಗಾಗಿ! ಛೆ! ಹುಚ್ಚಿ! ತನ್ನ ಮೇಲೆ ಭಕ್ತಿ ಮಾಡಿ ಪ್ರಾಣಾರ್ಪಣೆ ಮಾಡಲು ಸಿದ್ಧರಿದ್ದ ಆ ೧೬ ಸಾವಿರ ಗೋಪಿಕೆಯರಿಗಾಗಿ ಧಾವಿಸಿಬಂದ ಆ ಕೃಷ್ಣನು ನಿನಗಾಗಿ ಬರುವದು ಶಕ್ಯವೆ! ರೂಢಿಗೆ ಬಲಿ ಬಿದ್ದು ದಾಸರಾಗಿ ಅವನು ಬಂದಾಗ ಬರಲೆಂದು ಧ್ಯಾನ ಮಾಡುವದರಲ್ಲಿ ಮಗ್ನರಾದ ಗೋಪಿಕೆಯರಂತೆ ನಾನೆಲ್ಲಿ ಸಿದ್ಧಳೆಂದು ಆ ಕೃಷ್ಣನು ನನಗಾಗಿ ಬರಬವುದು! ತಮ್ಮ ತಮ್ಮ ಸ್ವಾರ್ಥಕ್ಕಾಗಿ ತಮ್ಮ ತಮ್ಮ ತತ್ವಕ್ಕಾಗಿ, ಸುಖಕ್ಕಾಗಿ, ಮನರಂಜನೆಗಾಗಿ ಬಲಿ ಬಿದ್ದವರನ್ನೆ ಎಲ್ಲರು ಕಾಪಾಡುವರು, ಸಂತೈಯಿಸುವರಲ್ಲವೆ! ಕೃಷ್ಣನಂತೆ ಸಾವಿರಾರು ಕೃಷ್ಣನ್ನು ಧ್ಯಾನಿಸುವ ನನ್ನಂಥ ಪಾಪಿಗೆ ಕೃಷ್ಣನು ನೆರವಾಗುವಂಥ ಪುಣ್ಯಶಾಲಿಯೆ ನಾನು! ತಮ್ಮ ವಿರುದ್ಧ ಇದ್ದರು ತಮ್ಮಂತೆ ನಡೆಯುವವರ ಹಿನ್ನೆಲೆಯಾಪದೆಂದು ಕಂಡುಹಿಡಿದ ಪುಣ್ಯಾತ್ಮರು ಈ ಜಗತ್ತಿನಲ್ಲಿ ಯಾರಾದರು ಸಿಗುವರೆ! ಭವಭೂತಿ ಮಹಾನ ಕವಿಯು ಹೇಳಿದಂತೆ ಈ ವಿಶಾಲವಾದ ವಿಶ್ವದಲ್ಲಿ ಅಪರಂಪಾರವಾದ ಕಾಲಗತಿಯಲ್ಲಿ ಯಾವನಾದರು ಸಮಾನ ಧರ್ಮ ಕವಿ ಇರಲಿ ಅಥವಾ ಮುಂದೆ ಹುಟ್ಟಲಿ ಅವನು ನನ್ನ ಮರ್ಮ ತಿಳಿದುಕೊಂಡಾನು? ಎಂದು ಹೇಳಿದಂತೆ ಕೃಷ್ಣನಂತೆ ನಡೆದಂಥ ಕೃಷ್ಣೆಯನ್ನು ಪ್ರೀತಿಸುವ ಜನಾಂಗವು ಹುಟ್ಟೀತು! ಆ ಕಾಲವು ಬಂದೀತು! ಅಲ್ಲಿಯ ವರೆಗೆ ನಮ್ಮಂಥ ಪಾಪಿಗಳು ಅಜ್ಞಾನಮಯ ಪಾಪದಲ್ಲಿ ತೊಳಲಾಡಬೇಕಾಗುವದು, ಮರುಗಬೇಕಾಗುವದು, ರವರವ ನರಕ ಅನುಭವಿಸಬೇಕಾಗುವದು! ಇಲ್ಲವಾದರೆ ತತ್ವಜ್ಞಾನವನ್ನು ಹೇಳುವ, ನೀತಿ ಅನೀತಿಯ ಸ್ವಾರಸ್ಯ ತಿಳಿಸುವ, ಸಾವಿರಾರು ಹೆಂಡಂದಿರನ್ನು ಧರ್ಮಸಾಕ್ಷಿಯಾಗಿ ಮಾಡಿಕೊಳ್ಳುವದಲ್ಲದೆ ರಹಸ್ಯವಾಗಿ ಸಾವಿರಾರು ಅಧಾರ್ಮಿಕವಾಗಿ ಉಪಹೆಂಡಂದಿರನ್ನು ಮಾಡಿಕೊಂಡ ರಾಜರಾಗಲಿ, ಧರ್ಮಗುರುಗಳಾಗಲಿ ಊರ ಪ್ರಮುಖರಾಗಲಿ, ಪ್ರತಿಭಾಶಾಲಿ ಕವಿಗಳಾಗಲಿ, ಕೀರ್ತನಕಾರರಾಗಲಿ, ಪುರಾಣಿಕರಾಗಲಿ, ದೇವರಾಗಲಿ, ಡಾಕ್ಟರರಾಗಲಿ, ವಕೀಲರಾಗಲಿ, ಧನವಂತರಾಗಲಿ ಅವರಂತೆ ನಾವು ಹೆಣ್ಣುಮಕ್ಕಳು ನಡೆದುಕೊಂಡರೆ ನಮ್ಮ ಅಧೋಗತಿ ಏಕೆ! ಗಂಡಸರ ಊರ್ಧ್ವಗತಿಗೆ ಆತಂಕವಿಲ್ಲವೇಕೆ? ಇದರ ಮರ್ಮವು ಎಂದು ನಾವು ಹೆಣ್ಣುಮಕ್ಕಳು ಅರಿತುಕೊಳ್ಳುವೆವು, ಅಂದೆ ನಮ್ಮ ನಿಜವಾದ ಉನ್ನತಿ! ಈ ಮರ್ಮ ನಿಜವಾಗಿ ಅಜ್ಞಾನ ಬಲದಲ್ಲಿದೆ. ಪರಂಪರಾಗತವಾಗಿ ಬಂದ ಕೂಡಿ ದಾಸ್ಯ ಶೃಂಖಲೆಯನ್ನು ಹೊರದೊಗೆಯುವದರಲ್ಲಿದೆ. ಸೃಷ್ಟಿ ನಿಯಮಗಳಂತೆ ಹೆಣ್ಣುಗಂಡುಗಳ ಸ್ವಭಾವ ಭೇದ, ವೈಶಿಷ್ಟ್ಯ, ಸ್ವರೂಪವನ್ನು ಅರಿತು ಅವುಗಳಿಗನುಸಾರವಾಗಿ ಸಮಾಜ ರಚನೆಯನ್ನು ಬದಲಾಯಿಸುವದರಲ್ಲಿದೆ ಎಂಬ ಮಾತು ನನ್ನಂಥ ಅಜ್ಞಾನಿ ಪಾಮರಳುತಿಳಿಯಬಲ್ಲೆನೆ! ಅದು ಈ ಸಂಸ್ಥೆಯಲ್ಲಿ ನನಗೆ ದೊರೆಯಿತು.

ನಿಜವಾದ ಜ್ಞಾನ ಕೃಷ್ಣನ ಗೀತೆಯಲ್ಲಿಯು ಆಧಾರದಿಂದ ಚ್ಚಿನ ಕೃಷ್ಣನು ಎಲ್ಲಿ ಸಿಕ್ಕನೆಂಬ ಈ ಅನುಭವಜನ್ಯ ಜ್ಞಾನವು ಈ ಮೊದಲೆ ನನಗಾಗಿದ್ದರೆ ನಾನೆಂದಾದರು ಇಷ್ಟು ಳಲುತ್ತಿದ್ದೇನೆ! ಇರಲಿ ತಂಗಿಯರೆ ಅದು ಹೇಗೆ ದೊರೆ ತು, ತೊರಕುವದು ನಿಮಗೆ ಮುಂದೆ ತಿಳಿದೀತು! ಸಬೂರ ಳಿರಿ! ಈ ಪ್ರಕಾರವಾಗಿ ದಿನಾಲು ಅಳುತ್ತ, ಮರಗುತ್ತ, ರಿ ಜಿರಿ ಜಿರಿಯುತ್ತ ಕಾಲಕಳೆಯಹತ್ತಿದೆನು. ಸೂಕ್ಷ್ಮ ರನಾಗಿ ಎಡಬಲಕಿನವರ ಅರಿವು ಮಾಡಿಕೊಳ್ಳಹತ್ತಿ ೕನು. ಎಂಥ ಪ್ರಸಂಗ ಬಂದರು ಇಲ್ಲಿಯದಂತು ಬಿಡವು ಾಧ್ಯವಿಲ್ಲದಾಗ ಮೇಲೆ ಇಲ್ಲಿಯೆ ಬದುಕಿ ಬಾಳುವದು ಹೇಗೆಂ ದರ ಅಭ್ಯಾಸ ನಡೆಸಿದೆನು. ಯಾವ ಯಾವ ವ್ಯಕ್ತಿಗಳ ಂಪರ್ಕವು ಹೇಗೆ ಹೇಗೆ ಬರುವದು ಅವರವರ ಸ್ವಭಾವಗಳ ಭ್ಯಾಸವನ್ನು ನನ್ನ ಚುರುಕು ಬುದ್ಧಿಯಿಂದ ನಡೆಸಿದೆನು. ಾವ ಕುರುಡ ದಂಪತಿಗಳ ಜೊತೆಯಲ್ಲಿ ನನಗೆ ೨೪ ತಾಸು ರಬೇಕಾಗುತ್ತಿತ್ತೊ ಅವರ ಸ್ವಭಾವದ ಅಭ್ಯಾಸ ಮಾಡಿ ಕುರುಡನಿಗೆ ನಸೆ ಚಹಾ ಕಾಫಿ ಬೇಕಾಗುತ್ತಿತ್ತು. ಸಂಸ್ಥೆಯ ುಮದ ಪ್ರಕಾರ ಅದು ಇಲ್ಲಿ ಸಾಧ್ಯವಿರಲಿಲ್ಲ. ಮೊದ ದಲು ನನ್ನನ್ನು ನೋಡಿ ಬಯ್ಯುತ್ತಿದ್ದಳೊ! ತಿರಸ್ಕರಿಸು ್ದಳೋ! ಆ ಕುರುಡನ ಹೆಂಡತಿಯು ಮನಸಿನ ಆಳವನ್ನು ಡುಹಿಡಿದು ಅದರಲ್ಲಿ ಸೇರಲು ಯತ್ನಿಸಿದೆನು. 'ಅಮ್ಮ ೕನು ನನ್ನಂಥ ವಿದ್ಯಾರ್ಥಿಣಿಯಲ್ಲ! ಇಲ್ಲಿಯು ಕೆಲಸವನ್ನು ು ನೋಡಿಕೊಳ್ಳುತ್ತೇನೆ. ನಮಗೆ ಹೊರಗೆ ಹೋಗಲು ಧನ. ನಿಮಗೆ ಸ್ವಾತಂತ್ರ್ಯ. ಊಟವಂತು ನಮಗೆಲ್ಲ ಇಲ್ಲಿ ಸಿಗುವದು. ಇಲ್ಲಿಯ ಸಂಚಾಲಕರಿಗೆ ತಿಳಿಸದೆ ್ಮ ಮುಕಾಟಲೆ ಹೊರಗೆ ಸ್ವಲ್ಪಹೊತ್ತು ಕೆಲಸ ಮಾಡಿ, ಂದ ನಾಲ್ಕು ದುಡ್ಡು ಸಿಕ್ಕು ನಿಮ್ಮ ಯಜಮಾನರಿಗೆ ಚಹಾ ಕಾಫಿ ತಿಂಡಿ ತಿನಸು ತರಲು ಅನುಕೂಲವಾಗು . ಎಂದು ಹೇಳಿದಾಕ್ಷಣ ಅವಳು ನನ್ನನ್ನು ಪ್ರೀತಿಸ ಹತ್ತಿದಳು. ಅವಳ ಹೆಣ್ಣುಮಕ್ಕಳಿಗೆ ಕಥೆ, ಸವಿ ಸವಿ ಮಾತು ಗಳನ್ನು ಹೇಳುತ್ತ ಪ್ರೀತಿಸುತ್ತ ಹೋಗಹತ್ತಿದ್ದರಿಂದ ಅವರು ಪ್ರೀತಿ ಾಡಹತ್ತಿದರು. ಸೇವೆ ಶುಶ್ರುಷೆಯಿಂದ ಕುರುಡ ಪ್ರೀತಿ ಮಾಡಹತ್ತಿದನು. ಈ ಹೊರಗಿನ ದುಡ್ಡಿನಿಂದ ಆ ದಂಪತಿಗಳು ಸುಖಿಯಾಗುತ್ತ ನಡೆದಂತೆ ಹೊಸ ಹೊಸ ಸಾಮಾನುಗಳು, ತಿನಸು ತಿಂಡಿಗಳು ಉಡುಪು ತೊಡವುಗಳು ಬರಹತ್ತಿದ್ದ ವಾಸನೆಯು ಮೊದಮೊದಲು ನಮ್ಮ ವಸತಿ ಗೃಹದ ಸಂಚಾಲಿಕೆಯರಾದ ಅಸುಯಾಬಾಯಿಯವರಿಗೆ ಹತ್ತಿತು. ಅವರು ನನ್ನನ್ನು ಕರೆದು "ಅಮ್ಮಾ! ಈ ಎಲ್ಲ ಸಾಮಾನುಗಳು ಎಲ್ಲಿಂದ ಬರುತ್ತಿವೆ! ಇಲ್ಲಿಯ ನಿಯಮಗಳು ನಿನಗೆ ಗೊತ್ತಿವೆ! ಹೀಗಿದ್ದರೂ ನಾವು ಕೊಡದಿದ್ದ ಸಾಮಾನು ಗಳ ಸುಳುವು ಮುಖ್ಯ ಸಂಚಾಲಕರಾದ ಮಹಾ ಮಾಯಿಗೆ (ಮುಖ್ಯ ಸಂಚಾಲಿಕೆಯರು) ಹತ್ತಿದರೆ ಅವರೇನು ಅಂದಾರು! ಅವರ ಸ್ವಭಾವವು ಬಹಳ ಸಿಟ್ಟಿನದು. ಇಂಥ ಸಂಗತಿಗಳು ಅವರಿಗೆ ಸೇರುವದಿಲ್ಲ. ಚಾಚಾ (ಕಾರ್ಯದರ್ಶಿಗಳು) ಇವರ ಸ್ವಭಾವವು ಹಾಗಿಲ್ಲ. ಅವರು ಎಲ್ಲವನ್ನು ತಡೆದುಕೊಳ್ಳು ವರು. ಅವರದೇನು ಅಷ್ಟು ಭಯವಿಲ್ಲ"ಂದು ಹೇಳಿದರು. ಇದನ್ನು ಕೇಳಿ ನಾನು ಎಲ್ಲ ಸಂಗತಿಗಳನ್ನು ಸ್ವಲ್ಪ ಉಪ್ಪು ಕಾರ ಹಚ್ಚಿ ಅಸೂಯಾಬಾಯಿಯವರ ಮುಂದೆ ನನ್ನ ಛಾಪು ಅವರ ಮೇಲೆ ಬೀಳುವಂತೆ ಹೇಳಿದೆನು. ಅಂದಿನಿಂದ ನನ್ನ ಕಪಟ ನಾಟಕಕ್ಕೆ ಪ್ರಾರಂಭವಾಯಿತು. ನನ್ನ ಜಾಣತನ ದಿಂದ, ಚುರುಕು ಬುದ್ಧಿಯಿಂದ ಯಾರಾರ ಸ್ವಭಾವವು ಹೇಗಿದೆ! ಯಾರ ಮುಂದೆ ಯಾವ ಯಾವ ಮಾತುಗಳನ್ನಾಡಿ ದರೆ ನನ್ನ ಬೇಳೆ ಬೇಯುವದು, ನನ್ನ ಮೇಲೆ ಪ್ರೀತಿಯುಂ ಟಾಗುವದು ಇದನ್ನು ಅರಿತುಕೊಂಡು ನಡೆಹತ್ತಿದ್ದರಿಂದ ನನ್ನ ಇಲ್ಲಿಯ ಬಾಳುವೆ ಸಹ್ಯವಾಗುತ್ತ ನಡೆದು ನಾನೊಬ್ಬಳು ಇಲ್ಲಿಯ ನಾಟ್ಯರಂಗದೊಳಗಿನ ಮುಖ್ಯ ಪಾತ್ರಳಾಗುತ್ತ ನಡೆದನು.



## ಕನ್ನಡ ನಾಡಗೀತೆ

( ರಾಷ್ಟ್ರಗೀತೆಯ ಧಾಟಿ )

ಜನ ಗಣ ಮನದಧಿನಾಯಕಿ ದೇವೀ।
ಜನಿಜಯ ಭುವನೇಶ್ವರಿಯೇ ॥ಪಲ್ಲ॥

ಮೈಸೂರುತ್ತರ ದಕ್ಷಿಣ ಕನ್ನಡ,
ಮುಂಬೈ ಹೈದ್ರಾಬಾದೂ।
ಮೀಸಲ ದಶದ್ವಯ ಚೌತ್ರಯ ಜಿಲ್ಹೆಯ,
ಇದುವೆಮ್ಮಯ ಕರುನಾಡೂ॥

ಭೀಮೆ ಕೃಷ್ಣೆ ಕಾವೇರೀ,
ನೇಮದಿ ಘನ ಶುಭ ಸೇರೀ,
ಸಾಮದಿ ತವಯಶ ಪಾಡೀ॥
ಸನ್ನುತಿಪರು ಜನವೆಲ್ಲರು ಕೂಡೀ,
ಕರ್ನಾಟಕ ಕುಲ ತಾಯೇ॥
ನಡೆಗೇ, ನುಡಿಗೇ, ನಲ್ಗೇ,
ಸಿರಿಗನ್ನಡ ವಿದುಗೆಲ್ಗಿ॥

ಸೀಮಾಮಾ.
ಲಿಂಗಸುಗೂರು.

# ಭೇರಿ

(ಐತಿಹಾಸಿಕ ನಾಟಕ) ಎರಡನೇ ಅಂಕು.

ಲೇ— ರತ್ನಾ ಶಾಸ್ತ್ರೀ.

[ಅಕ್ಟೋಬರ ಸಂಚಿಕೆಯಿಂದ ಮುಂದುವರೆದದ್ದು.]

ಬನ್ಯಾಬಾಪು— ಬಲ್ಲವನಿದ್ದರೂ ಬಲವಿಲ್ಲದವನಾಗಿದ್ದೇನೆ.

ಕೃಷ್ಣಾಜಿಪಂತ— ಅಂಜಬೇಡಿರಿ ಬನ್ಯಾಬಾಪು, ಫಿರಂಗಿಗಳ ಬಲ ನಮ್ಮ ಬೆನ್ನು ಹಿಂದೆ ಇದೆ !

ಬನ್ಯಾಬಾಪು— ಕೃಷ್ಣಾಜಿಪಂತ, ಮಳೆಯ ನೀರಿಗೆ ಕೈಯೊಡ್ಡುವದನ್ನು ಬಿಟ್ಟು ಮಂಜಿನ ಹನಿಗೆ ಕೈಯೊಡ್ಡುಗರಂತೆ ನಮ್ಮ ಗತಿಯಾಗಬಾರದು ವಿಷ್ಣು ಸರ್ವ ಬದಿಯಿಂದಲೂ ನಮ್ಮ ಕಾರ್ಯದಲ್ಲಿ ವಿಘ್ನವನ್ನು ತಂದೊಡ್ಡುತ್ತಿದ್ದಾನೆ. ಮಹಾರಾಜರು ಮತ್ತು ಅಮಾತ್ಯರು ಅವನಿಗೆ ಸಂಪೂರ್ಣ ಅಧಿಕಾರವನ್ನು ಕೊಟ್ಟಿದ್ದಾರೆ. ಆದ್ದರಿಂದ ರಾತ್ರಿ ಅಪರಾತ್ರಿ ಕೋಟೆ ಕೊತ್ತಳಗಳ ಮೇಲೆ ಬಂದು ನಿಂತು ದುರುಗುಟ್ಟುವ ದೃಷ್ಟಿಯಿಂದ ಎಲ್ಲದರ ಕಡೆಗೆ ನೋಡುತ್ತಾನೆ. ಆತನ ದೃಷ್ಟಿಗೆ ಪಹರೆಯವರು ಅಂಜಿ ನಡಗುತ್ತಾರೆ.

ಕೃಷ್ಣಾಜಿಪಂತ— ವಿಷ್ಣು ! ಎಂ ! ಈ ಹುಚ್ಚು ಕುನ್ನಿಯು ಅಧಿಕಾರದ ದುರುಪಯೋಗವನ್ನು ಮಾಡಿಕೊಳ್ಳುತ್ತ ತಿರುಗಾಡುತ್ತಿರುವದು. ಬನ್ಯಾಬಾಪು ಎಷ್ಟಾದರೂ ಹುಚ್ಚು ಕುನ್ನಿ ! ಕೋಟೆ ಕೊತ್ತಳಗಳ ಮೇಲೆ ದಂಡೆಗುಂಟ ತಿರುಗಾಡಲಿ....! ನೀವು ಅದಕ್ಕೆ ಕಲ್ಲು ಮಾತ್ರ ಎಸೆಯಬೇಡಿರಿ! ಪ್ರಸಂಗೋಪಾತ್ ತುಬಾಕಿಯ ಉಪಯೋಗವನ್ನೆ ಮಾಡೋಣ.

ಬನ್ಯಾಬಾಪು— ಅದರ ಎಚ್ಚರಿಕೆಯನ್ನು ನಾನು ಮೊದಲಿನಿಂದಲೂ ವಹಿಸಿದ್ದೇನೆ.

ಕೃಷ್ಣಾಜಿಪಂತ— ಒಳ್ಳೆಯದನ್ನು ಮಾಡಿದ್ದೀರಿ. ಇದಲ್ಲದೆ ಮಹಾರಾಜರ ಗುಪ್ತ ಸಂಗತಿಗಳನ್ನು ನಾವು ದುರ್ಲಕ್ಷಿಸಿ ನಡೆಯುವಂತಿಲ್ಲ. ಅವು ನಮ್ಮ ಕಾರ್ಯಕ್ಕೆ ಕಾರಕವಾಗಿಯೆ ಪರಿಣಮಿಸಬಹುದು. ಮಾರಕವಾಗಿ ಎಂದಿಗೂ ಪರಿಣಮಿಸಲಾರವು. ಅವರ ಪ್ರತಿಯೊಂದು ಉಸಿರು ನಮಗೆ ಗೊತ್ತಿರಬೇಕು. ಅದರಂತೆಯೆ ರಾಜಮಹಲಿನಲ್ಲಿಯ ಸಂಗತಿಗಳನ್ನೂ ನಾವು ಅರಿತಿರಬೇಕು. ಮತ್ತು ಇವು ಪ್ರತಿನಿತ್ಯ ನಮ್ಮಿಂದ ಮೆನ್‌ಸನ್ ದೊರೆಗೆ ತಿಳಿಯಬೇಕು.

ಬನ್ಯಾಬಾಪು— ಅದರ ಚಿಂತೆಯನ್ನು ಬಿಡಿರಿ ! ರಾಜಮಹಲಿನಲ್ಲಿಯ ಮತ್ತು ಅನ್ಯ ಸ್ಥಳಗಳಲ್ಲಿಯ ಸೇವಕ ಸೇವಕಿಯರ ಕೈ ಬೆಚ್ಚಗೆ ಮಾಡಿಸಿದ್ದೇನೆ. ಸಮಯಕ್ಕೆ ಸರಿಯಾಗಿ ನಮಗೆ ಎಲ್ಲ ಸಂಗತಿಗಳೂ ತಿಳಿಯಬಹುದು.

ಕೃಷ್ಣಾಜಿಪಂತ— ಕುಲಸ್ವಾಮಿ ಶ್ರೀ ವೆಂಕಟರಮಣನು ನಿಮ್ಮ ಕಾರ್ಯಸಾಧನೆಯಲ್ಲಿ ಯಶವನ್ನು ಕೊಡಲಿ ! ಕೊಪ್ಪಳ ಕೋಟೆಯ ಯುದ್ಧದ ಸೇನಾನಾಯಕತ್ವವನ್ನು ಯಾರು ವಹಿಸುತ್ತಾರೆಂಬುದು ನಮಗೆ ತಿಳಿಯುವದು ಅತ್ಯಗತ್ಯ ! ನಮ್ಮ ಕಾರ್ಯಸಾಧನೆಯ ದೃಷ್ಟಿಯಿಂದ ಕೊಪ್ಪಳ ಕೋಟೆಯ ಯುದ್ಧವು ಮಹತ್ವಪೂರ್ಣವಾಗಿರುವದು. ಮುಂಡರಗಿ ಭೀಮರಾಯ, ಸುರಪುರದ ವೆಂಕಟಪ್ಪನಾಯಕ ! ಮತ್ತು ವಿಷ್ಣು ಕುಲಕರ್ಣಿ ಇವರು ಮಾಡುವ ಕೃತ್ಯಗಳೆಡೆಗೆ ನಾವು ತೆರೆದ ಕಣ್ಣುಗಳಿಂದ ನೋಡಬೇಕು. ಮುಂಡರಗಿ ಭೀಮರಾಯನೆಂದರೆ ಪ್ರತ್ಯಕ್ಷ ಭೀಮನ ಅವತಾರ ! ನಮ್ಮ ಪಾಲಿಗೆ ಯಮ ! ಆತನು ಸಾಮಾನ್ಯ ಪುರುಷನಲ್ಲ ! ಈ ಹುಲಿಯನ್ನು ಚಾಣಾಕ್ಷತನದಿಂದ ಹಿಡಿದು ಬಲಿಯಲ್ಲಿ ಇರಿಸಬೇಕಾಗಿದೆ. ರಕ್ತದ ಒಂದು ಹನಿಯು ನರಗುಂದದ ಸೀಮೆಯಲ್ಲಿ ಬೀಳದೆ ನಮ್ಮ ಕೋಟೆಯನ್ನು ಮೆನ್‌ಸನ್‌ನ ಕೈಯಲ್ಲಿ ಕೊಡಬೇಕೆಂದು ನಾನು ನಿರ್ಧರಿಸಿದ್ದೇನೆ. ಯುದ್ಧವಿಲ್ಲ! ಯುದ್ಧವಿಲ್ಲವೆಂದ ಮೇಲೆ ಪ್ರಾಣಹತ್ಯೆಯಿಲ್ಲ! ಪ್ರಾಣಹತ್ಯೆಯಿಲ್ಲದೆ ನಮ್ಮ ಕಾರ್ಯಸಾಧನೆ ಈ ತೆರದಿ ಆಗುವದು.

ಮುಂದೆ! ಕೆಲವೊಂದು ಸಾರೆ ಹಿಂದಿನಿಂದಲೆ ಸಮರಾಂಗಣದಿಂದ ಈ ಫಿರಂಗಿಗಳು ಪಲಾಯನಗೈದಿದಾರೆ.

ರಾಮರಾಯ— ಇದಕ್ಕೆ ರಾಜಕಾರಣವೆಂದು ಅನ್ನುವರು.

ಯಮುನಾಬಾಯಿ— ಆದರೆ ಭಾರತದಲ್ಲಿ ಇದು ಹೇಡಿತನವೆಂದು ಎಣಿಸಲ್ಪಡುವದು. ಇದು ಭಾರತೀಯರ ರಾಜಕಾರಣವಲ್ಲ. ಉತ್ತರ ಭಾರತದಲ್ಲಿಯ ಸ್ವಾತಂತ್ರ್ಯ ಯುದ್ಧವನ್ನು ಈ ಕುಹಕ ವೃತ್ತಿಯ ಆಧಾರದ ಮೇಲಿಂದ ಇವರು ನೇಮಿಸಿದ್ದಾರೆ. ಅದರ ಪ್ರಯೋಗವನ್ನು ನಮ್ಮ ರಾಜ್ಯದ ಮೇಲೂ ಮಾಡುವದಕ್ಕೆ ಆರಂಭಿಸಿದ್ದಾರೆ. ನಿಶ್ಚಿತ ಕಾರ್ಯವು ಭಾವನೆಯ ಉದ್ವೇಗದ ಮೂಲಕ ಕಾಲಾವಧಿಯ ಮುನ್ನವೆ ಜರುಗದಂತೆ ನಾವು ನೋಡಿಕೊಳ್ಳಬೇಕು. ಯಾಕಂದರೆ ಉತ್ತರ ಹಿಂದುಸ್ಥಾನದಲ್ಲಿಯ ನಮ್ಮ ಸ್ವಾತಂತ್ರ್ಯಯುದ್ಧಕ್ಕೆ ಅಪಯಶ ಬರಲು ಇದು ಪ್ರಬಲವಾದ ಕಾರಣವಾಗಿದೆ. ಮಂಗಲವಾಡಿಯಂತಹ ಜನರೂ ನಮ್ಮ ರಾಜ್ಯದಲ್ಲಿದ್ದಾರೆ ಇಂಥವರ ಬಗ್ಗೆ ನಾವು ಮುನ್ನೆಚ್ಚರ ವಹಿಸಬೇಕು. ಅಮಾತ್ಯರೆ, ಬಾಬಾಸಾಹೇಬ ಚಿಕ್ಕವ. ಆತನಿಗೆ ರಾಜಕಾರಣದ ಆಚುಪೇಚುಗಳು ಅಷ್ಟೊಂದು ಗೊತ್ತಿಲ್ಲ. ನೀವು ಮುಂದಾಗಿ ಈ ಪ್ರಸಂಗದಲ್ಲಿಂದ ನರಗುಂದದ ರಾಜ್ಯವನ್ನು ಉಳಿಸಿಕೊಳ್ಳಬೇಕು.

ರಾಮರಾಯ—ನನ್ನ ಮತಿಯಿಂದ ಶಕ್ತಿಮೀರಿ ಪ್ರಯತ್ನ ನಡಿಸಿದ್ದೇನೆ.

ಯಮುನಾಬಾಯಿ—ನರಗುಂದದ ಸಿಂಹಾಸನಕ್ಕೆ ನೀವು ಸಲ್ಲಿಸಿದ ಸೇವೆ ಅಪಾರವಾದುದು! ಅಮಾತ್ಯರೆ, ನರಗುಂದದ ಸಿಂಹಾಸನದ ಮೇಲೆಯೆ ಸಂಕಟದ ಮಳೆಯೇಕೆ ಸುರಿಯುತ್ತಿದೆ? ರಾಹು–ಕೇತುಗಳಂತೆ ಕೋಲ್ಹಾಪುರದಲ್ಲಿ ಮಾಲಕಮ್ ಮತ್ತು ಜೇಕಬ್ ಇವರು ನಮ್ಮ ರಾಜ್ಯವನ್ನು ನುಂಗಲೆಂದು ಬಂದು ಕುಳಿತುಕೊಂಡಿರುವರು. ಇದು ಧರ್ಮಸಂರಕ್ಷಣೆಯ ಯುದ್ಧವಿದೆಯೆಂದು, ರಾಜ್ಯದ ಪ್ರತಿಯೊಂದು ಘಟಕಕ್ಕೆ ತಿಳಿಯುವಂತೆ ರಾಜಾಜ್ಞೆಯನ್ನು ಹೊರಡಿಸಿರಿ. ಈ ಪುಣ್ಯಭೂಮಿಯಲ್ಲಿ ಧರ್ಮಸಂರಕ್ಷಣೆಯ ಕಾರ್ಯಕ್ಕೆ ದೇವರು ಸ್ವತಃ ಜನ್ಮತಾಳಿ ಬರುವನೆಂದಮೇಲೆ ನಮ್ಮ ಪ್ರಜೆಗಳು ಎಂದಿಗೂ ಸುಮ್ಮನೆ ಕೂಡ್ರಲಿಕ್ಕಿಲ್ಲ. ಸಾಧು ಸತ್ಪುರುಷರಿಂದ ಪುನೀತವಾದ, ರಾಜಮಹಾರಾಜರಿಂದ ಸಂರಕ್ಷಿತವಾದ, ಕೋಟ್ಯಾನುಕೋಟಿ ಜನರಿಂದ ವಂದಿತವಾದ ಈ ಪರಮ ಪೂಜ್ಯ ಭಗವಾ ಧ್ವಜವನ್ನು ಸಂರಕ್ಷಿಸುವದು ನಮ್ಮ ಆದ್ಯ ಕರ್ತವ್ಯವಾಗಿರುವದೆಂದು ರಾಜಾಜ್ಞೆಯಲ್ಲಿ ನಮೂದಿಸಿರಿ.

ರಾಮರಾಯ— ಒಳ್ಳೇದು.

ಯಮುನಾಬಾಯಿ— ಇದಲ್ಲದೆ ಔರಂಗಾಬಾದದ ರಂಗೋ ಬಾಪೂಜಿ ಇವರಿಗೂ ಒಂದೋಲೆ ಬರೆದು ಸಹಾಯಕ್ಕೆ ಬರುವಂತೆ ಕೇಳಿಕೊಳ್ಳಿರಿ. ಹಿತಚಿಂತಕರು ಎಲ್ಲಿದ್ದರೇನು? ತಾವಾಗಿಯೆ ಬರುವರು!

ರಾಮರಾಯ— ಸದ್ಯದ ವಿಚಿತ್ರ ಪರಿಸ್ಥಿತಿಯಲ್ಲಿ ಏನನ್ನೂ ಹೇಳಲಿಕ್ಕೆ ಬರುವದಿಲ್ಲ. ಈ ಶರೀರದಲ್ಲಿ ಜೀವವಿರುವವರೆಗೆ ಈ ಸಿಂಹಾಸನದ ರಕ್ಷಣೆಯನ್ನು ನಾನು ಮಾಡುವೆನು. ಮಹಾರಾಜರ ಉಪಕಾರದ ಋಣ ತೀರಿಸದಷ್ಟಿದೆ....! ತೀರಿಸಲು ಹೋದರೆ ಏಳು ಏಳು ಜನ್ಮಗಳಲ್ಲಿಯೂ ತೀರದು. ಈ ಗದ್ದುಗೆಯ ಸೇವೆಯನ್ನು ಮಾಡುತ್ತ ಮಾಡುತ್ತ ಧಾರಾತೀರ್ಥದಲ್ಲಿ ನನ್ನ ದೇಹ ಬಿದ್ದರೆ ನನ್ನ ಜನ್ಮದ ಸಾರ್ಥಕತೆಯಾಯಿತೆಂದು ನನ್ನ ಭಾವನೆ! ನಮ್ಮ ಬಲದ ಜೊತೆಯಲ್ಲಿ ನಮ್ಮ ದೈವ ಬಲವೂ ಜೋಡಿಯಾಗಿ ನಿಂತರೆ ಈ ಫಿರಂಗಿಗಳು ನಾಳೆಯೆ ಈ ದೇಶವನ್ನು ಬಿಟ್ಟು ಹೋಗುವಂತೆ ಮಾಡುತ್ತೇನೆ ಎಷ್ಟಾದರೂ ವ್ಯಾಪಾರಕ್ಕಾಗಿ ಈ ಫಿರಂಗಿಗಳು ನಮ್ಮ ದೇಶಕ್ಕೆ ಬಂದಿದ್ದಾರೆ. ಯುದ್ಧ ಮಾಡುವದಕ್ಕಾಗಿ ಅಲ್ಲ.

ಯಮುನಾಬಾಯಿ— ಅಮಾತ್ಯರೆ, ಅವರ ಕೈಯಲ್ಲೀಗ ತಕ್ಕಡಿಯಿಲ್ಲ. ಖಡ್ಗ, ತುಬಾಕಿ ಮತ್ತು ತೋಫುಗಳಿವೆ! ಅವರೇನು ಯುದ್ಧ ಮಾಡುವರೆಂದು ಭಾವಿಸಬೇಡಿರಿ! ಅವರೀಗ ಭಾರತೀಯರ ಶೀಲ, ಧರ್ಮ ಮತ್ತು ಸಂಸ್ಕೃತಿಯ ವ್ಯಾಪಾರವನ್ನು ನಡಿಸಿದ್ದಾರೆ. ಅವರು ನೀಡುವ ಬೆಲೆಗೆ ಬೆಲೆಯಿಲ್ಲ! ಅಧಿಕಾರದ, ಹಣದ........ಸೂರೆ ಸೂರೆ ನಡಿಸಿದ್ದಾರೆ! ಇವರು ಪಸರಿಸಿದ ಮೋಸದ ಜಾಲದಲ್ಲಿ ಸಾವಿರಾರು ನಮ್ಮ ದೇಶಬಾಂಧವರು ಸಿಕ್ಕುಬಿದ್ದಿದ್ದಾರೆ!

ರಾಮರಾಯ— ಇದೆಲ್ಲವೂ ನನಗೆ ಗೊತ್ತಿದೆ. ಈಗಿನ ಪ್ರಸಂಗದಲ್ಲಿ ಇದನ್ನು ತಡೆದು ಹಿಡಿಯುವದು ಯಾರಿಂದಲೂ ಆಗದು! ಹಿಂದಿನ ಕಾಲ ಬೇರೆಯಿದ್ದಿತು...! ಈಗಿನಂತೆ ಮನೆಮನೆಗೆ ಶತ್ರುಗಳಿದ್ದಿಲ್ಲ. ಉದಯಹೊಂದುವ ಪ್ರತಿದಿನವು ನರಗುಂದದ ಸಿಂಹಾಸನದ ವಿಷಯದಲ್ಲಿ ಎಷ್ಟೊಂದು ಮಹಾಭಯಂಕರ ಭವಿಷ್ಯವನ್ನು ತನ್ನ ಉದರದಲ್ಲಿಟ್ಟುಕೊಂಡು ಬರುವದೋ ಎಂದು ನಾನು ವಿಚಾರಿಸುತ್ತೇನೆ. ಯಾಕಂದರೆ ಫಿರಂಗಿಗಳು ನಮ್ಮರಾಗಿದ್ದವರನ್ನು ತಮ್ಮವರನ್ನಾಗಿ ಮಾಡಿಕೊಂಡಿದ್ದಾರೆ! ಮಲಿಕಕಾಫರರಂತಹ ಜನರು ನಮ್ಮ ರಾಜ್ಯ

( ಮುಂದುವರೆಯುವದು )

# ಸಮಾಜದಲ್ಲಿ ಹೆಣ್ಣುಮಕ್ಕಳ ಸ್ಥಾನ

ಲೇ— ಎಚ್. ಆರ್. ಬಂಡೀವಡ್ಡರ, ಹಾರೋಬೆಳವಡಿ.

**ಪುರುಷರು ಸ್ತ್ರೀಯರು:—** ನಮ್ಮ ಸಮಾಜವು ಹೀನಾವಸ್ಥೆಯಲ್ಲಿ ಬರಲು ನಮ್ಮ ಹೆಣ್ಣುಮಕ್ಕಳ ಅಜ್ಞಾನವೇ ಕಾರಣವೆಂಬುದನ್ನು ಎಲ್ಲರೂ ಒಪ್ಪಲೇಬೇಕಾದುದು. ಹೆಣ್ಣುಮಕ್ಕಳ ಅಜ್ಞಾನದಿಂದ ಬಾಳಿನ ಹೊಂದಾಣಿಕೆ, ಆರೋಗ್ಯ, ಶಿಕ್ಷಣ, ಹಾಗೂ ಆಹಾರ ಇವುಗಳ ಸರಿಯಾದ ತಿಳುವಳಿಕೆ ಇರುವದಿಲ್ಲ. ಆದರಿಂದ ಸಮಾಜ ಅಂಟುರೋಗದಿಂದ ಬಳಲುತ್ತಿರುವದು. ಅವರನ್ನು ಪುರುಷರು ತಮ್ಮ ಸಂಕುಚಿತ ಮನೋವೃತ್ತಿಯಿಂದ ತಮ್ಮ ಕೈಗೊಂಬೆಯನ್ನಾಗಿರಿಸಿಕೊಂಡಿರುವರೆಂಬುದು ನಿರ್ವಿವಾದ ಮಾತು. ಸ್ತ್ರೀಯರು ಕೇವಲ ಮನೆಯ ಮಾಮೂಲ ಆಳು. ಅವಳು ಸ್ವತಂತ್ರನಾಗಿ ಸಮಾಜದಲ್ಲಿ ಬೆರೆಯಲಾಗದು. ಅವಳು ಶಿಕ್ಷಣ ಪೊಂದಿದರೆ ಅನೀತಿವಂತಳಾಗುವಳು ಎಂಬ ಕೀಳು ಕಲ್ಪನೆಯಿಂದ ಅವಳನ್ನು ಬಂಧನದಲ್ಲಿ ಇರಿಸಿರುವದು ವಿಷಾದನೀಯ. ನಾವು ಇಂದು ಸ್ತ್ರೀಯ ಬಗ್ಗೆ ವೇದೋಪನಿಷತ್ತುಗಳ ಉದಯದಿಂದ ಪರಿಗಣಿಸಿ, ವಿವೇಚಿಸಿ ನೋಡಿದಲ್ಲಿ ಆರ್ಯ ಕಾಲದಲ್ಲಿ ಸ್ತ್ರೀಗೆ ತಕ್ಕ ಮಾನ-ಮನ್ನಣೆ ಸಮಾಜದಲ್ಲಿ ಇತ್ತೆಂಬುದು ತಿಳಿದು ಬರುವದು. ಸ್ತ್ರೀಯು ಸರ್ವ ರಂಗಗಳಲ್ಲಿ ತನ್ನದೇ ಆದ ವೈವಿಧ್ಯ ಪೂರ್ಣ ಪಾತ್ರ ಮಾಡಿ ಸಮಾಜದ ತನ್ಮೂಲಕ ರಾಷ್ಟ್ರದ ಅಭಿವೃದ್ಧಿಗೆ ಕಾರಣೀಭೂತಳಾಗಿದ್ದಾಳೆ. ಸ್ತ್ರೀ ಅಧ್ಯಾತ್ಮದಲ್ಲಿ ಪಳಗಬಾರದು, ರಾಜಕೀಯದಲ್ಲಿ ಧುಮುಕಬಾರದು, ಸಮಾಜದಲ್ಲಿ ಮನೆಬಿಟ್ಟು ಹೊರಗೆ ಕಾಲಿಡಬಾರದು ಎಂದು ಆಧುನಿಕರ ಅಭಿಪ್ರಾಯವಾಗಿರಲು ಸಾಕು. ಸ್ತ್ರೀ ಅಧ್ಯಾತ್ಮರಹಿತಳಾದರೆ ಅವಳು ಶೂದ್ರಳೇ ಎಂಬ ಮಾತು ನಿಶ್ಚಿತವೇ? ಸ್ತ್ರೀ ಶೂದ್ರಳು ಎಂದು ನಿರ್ಧರಿಸಿದಾಗ ಅವಳ ಹೊಟ್ಟೆಯಲ್ಲಿ ಹುಟ್ಟುವ ಮಾನವರೂ ಶೂದ್ರರಾದಂತಲ್ಲವೇ? ಇಂಥ ಹೀನ ಮನಸ್ಥಿತಿಯ ಪುರುಷವರ್ಗ ತಮ್ಮ ಬಗೆ ಗಣ್ಣಿಸುವದು ಸ್ತ್ರೀಯ ಯೋಗ್ಯತೆಯನ್ನು ಅಳೆದು ನೋಡಲಿ. ಹೆಣ್ಣು ಅಬಲೆಯಲ್ಲ. ಅವಳು ಪ್ರಬಲೆ, ಕ್ಷಾತ್ರ ತೇಜಸ್ವಿದೆ. ಜಗತ್ತನ್ನೇ ಆಳುವ ಸಾಮರ್ಥ್ಯ ಅವಳ ಕೈಯಲ್ಲಿದೆ. ಇದಕ್ಕೆ ಸಾಕ್ಷಿ ಚಿತ್ರಗಳು ನಮ್ಮ ಇತಿಹಾಸದಲ್ಲಿ ಸಾಕಷ್ಟು ಸಿಕ್ಕುತ್ತಿವೆ. ಆಧ್ಯಾತ್ಮದಲ್ಲಿ ಮಾರ್ಗದರ್ಶಿಗಳಾಗಿದ್ದಾರೆ. ರಣರಂಗದಲ್ಲಿ ರಣಚಂಡಿಯರಾಗಿ ಹೋರಾಡಿದ್ದಾರೆ. ಜಗತ್ತಿಗೆ ಪೂಜ್ಯ ವ್ಯಕ್ತಿಗಳೆಂದು ಹೆಸರು ಪಡೆದವರಿಗೆ ಜನ್ಮವಿತ್ತಿದ್ದಾರೆ. ತೆರದ ಮನಸ್ಸಿನಿಂದ ವಿಚಾರಿಸಿ ನೋಡಿರಿ. ಪುರುಷ ಜೀವನದ ಆಧಾರ ಸ್ತ್ರೀ. ಸ್ತ್ರೀಯರಿಲ್ಲದ ಪುರುಷನ ಬಾಳು ಬಾಳೇ? ಯಾವದೇ ರಾಷ್ಟ್ರ, ರಾಜ್ಯ ಸದ್ವಿಚಾರದಿಂದ ಬಾಳಬೇಕೆಂಬ ಅಭಿಲಾಷೆಯುಳ್ಳದ್ದಾಗಿದ್ದರೆ ಅದಕ್ಕೆ ಮೂಲ ಹೇತು ಸ್ತ್ರೀ. ಸ್ತ್ರೀ ಅನೈತಿಕಳಾದರೆ ರಾಷ್ಟ್ರವೇ ಹಾಳು. ಸ್ತ್ರೀಯರು ಸೀತೆಯಂತೆ, ದ್ರೌಪದಿಯಂತೆ ಆಗಬೇಕೆಂದು ಪುರುಷರ ಹಿರಿಯಾಶೆ. ಆದರೆ ಪುರುಷರಿಗಿಲ್ಲವೇನು ನೀತಿ, ಕಟ್ಟಳೆ. ಪುರುಷರು ರಾಮನಂತೆ ಧರ್ಮರಾಜನಂತೆ ಆಗಬೇಕಾಗಿಲ್ಲವೇ?

ಇಂದು ಜನಜೀವನದಲ್ಲಿ ಅನುಕರಣೀಯ ಪ್ರವೃತ್ತಿ ಹೆಚ್ಚಿದೆ. ನೋಡಿ ಕಲಿಯುವದು ಸಾಂಪ್ರದಾಯಿಕವಾಗಿರುವದು. "ತಾನು ಹೇಗೋ ಹಾಗೇ ಜಗತ್ತು" ಎಂಬ ಮಾತೇನು ಸುಳ್ಳಲ್ಲ. ಸಮಾಜ ಭದ್ರತೆಗಾಗಿ ಸ್ತ್ರೀ ನೀತಿಯನ್ನು ಆಧಾರವಾಗಿರಿಸಿಕೊಂಡರೆ, ಸಮಾಜ ರಕ್ಷಣೆಯ ಭಾರ ಪುರುಷರದೆಂಬುದನ್ನು ಮರೆಯಬಹುದೇ? ಪುರುವನ ನೀತಿ, ಶೀಲ, ಚಾರಿತ್ರಗಳು, ಸ್ತ್ರೀ ನೀತಿ, ಶೀಲ, ಚಾರಿತ್ರಗಳ ರಕ್ಷಾ ಕವಚ. ಇಲ್ಲಿ ಸ್ತ್ರೀ–ಪುರುಷರು ದೇಹದ ಎರಡು ಕೈಗಳಂತೆ ಒಂದಕ್ಕೊಂದು ಪರಸ್ಪರ ಪೋಷಕವು. ಸ್ತ್ರೀಯರ ಶೀಲ–ಚಾರಿತ್ರ್ಯಗಳನ್ನು ಬಯಸುವ ಪುರುಷ ವರ್ಗ, ತಮ್ಮ ಶೀಲ–ಚಾರಿತ್ರ್ಯದ ಕಡೆಗೆ ಲಕ್ಷಿಸಬೇಕು. ಅಂದಿಗೆ ಎಲ್ಲವೂ ಸರಿ. ಧರ್ಮ ಉಳಿಸಲು ಸ್ತ್ರೀಯ ಚಾರಿತ್ರ್ಯ ಕಾರಣವೆಂಬ ಮಾತು ಸತ್ಯವೆನ್ನೋಣ! ಪುರುಷರೆಲ್ಲ ರಾವಣ–ದುರ್ಯೋಧನರಂತೆ

ಆದಾಗ ಸ್ತ್ರೀಯರ ಚಾರಿತ್ರ್ಯ ಉಳಿದಿತೇ ? ಶೀಲ ಕೆಡದಿದ್ದಿತೇ ? ಇಲ್ಲ ಧರ್ಮ ರಕ್ಷಣೆಗಾಗಿ ಸ್ತ್ರೀಯಷ್ಟೇ ಮುಖ್ಯ ಪಾತ್ರಧಾರಿಯೇ ? ಹಾಗಾದರೆ ಪುರುಷ !

**ಸ್ತ್ರೀ ಸುಧಾರಣೆ ಎಂತು ?**

ಸ್ತ್ರೀಯರ ಸುಧಾರಣೆಯು ಆಗಬೇಕೆಂದು ಕೂಗು ಎದ್ದಿರುವದು. ಅದರಂತೆ ಕಾರ್ಯಕಾರಿಗೊಳಿಸಲು ಇಂದು ಅನೇಕ ಸ್ತ್ರೀಯರು ಬದ್ಧಕಂಕಣರಾಗಿದ್ದಾರೆ. ಕೇವಲ ಬಾಯಿ ಪುರಾಣದಿಂದ ಸ್ತ್ರೀ ಸುಧಾರಣೆಯಾದೀತೇ ? ಪುರುಷ ಸಮಾಜವು ಸ್ತ್ರೀ ಎಂದರೆ ದಾಸಿಯಂತೆ ತಿಳಿದಿರುವಾಗ ಹೇಗಾದೀತು? ಮೊಟ್ಟ ಮೊದಲು ಬಾಲ್ಯದಲ್ಲಿ ಹೆಣ್ಣುಮಕ್ಕಳಿಗೆ ವಿದ್ಯೆಯನ್ನು ಕಲಿಸಬೇಕು. ಬಾಲ್ಯದ ಹಂತ ಮೀರಿದ ಮೇಲೆ ನೈತಿಕ ಶಿಕ್ಷಣ, ಗೃಹಜೀವನ, ಸಮಾಜ ಜೀವನಗಳ ಬಗ್ಗೆ ಸರಿಯಾದ ಶಿಕ್ಷಣ ಕೊಡುತ್ತ ಹೋದರೆ ಕೆಲ ದಿನಗಳಲ್ಲಿ ನಾವಿಂದು ಕಟ್ಟುವ ಕನಸಿನ ಸುಧಾರಣೆಯು ನನಸಾಗಿ ನೈಜರೂಪದಿಂದಾಗುವದೆಂಬದನ್ನು ಬೇರೆ ಹೇಳಬೇಕಾಗಿಲ್ಲ.

ಸಮಾಜದಲ್ಲಿ ಸ್ಥಾನ— ಇಂದು ಸಮಾಜದಲ್ಲಿ ಸ್ತ್ರೀಯರಿಗೆ ಯಾವ ಸ್ಥಾನವಿರುವದಿಲ್ಲ. ಸ್ಥಾನವೆಂದ ಮಾತ್ರಕ್ಕೆ ಸಮಾಜದಲ್ಲಿ ಪ್ರತ್ಯೇಕ ಗದ್ದುಗೆ ಕಟ್ಟಿ ಹತ್ತಿಸುವದಲ್ಲ. ಮಾನ-ಮನ್ನಣೆಗಳು ಸಾಮಾಜಿಕ ರಂಗಗಳಲ್ಲಿ ಸ್ತ್ರೀ ಮುಂದೆ ಬರಬೇಕು. ಜನಜೀವನ ಒಳತಿರಳು ತಿಳಿದಿರಬೇಕು. ಕೇವಲ ಅಡುಗೆಯ ಮನೆಯ ಅಧಿಕಾರಿಯನ್ನಾಗಿ ಮಾಡದೇ ವಿಶಾಲ ವಾತಾವರಣದಲ್ಲಿ ಸ್ತ್ರೀಯು ಬೆಳೆಯಬೇಕು. ಇದರಿಂದ ಅವಳಲ್ಲಿರುವ ತಪ್ಪು ಭಾವನೆ, ಸಂಕುಚಿತ ಮನೋವೃತ್ತಿಗಳು ಮಾಯವಾಗಿ ಮನಸ್ಸು ವಿಸ್ತೃತಗೊಳ್ಳುವದು. ಇದರಿಂದ ತನ್ನ ಮಕ್ಕಳನ್ನು ವಿಶಾಲ ಮನೋಭಾವದವರನ್ನಾಗಿ ಮಾಡಲು ಸಾಧ್ಯವಾಗುವದು. ಇಲ್ಲಿ ಹೆಣ್ಣಿಗೆ ಸ್ವಾತಂತ್ರ್ಯ ಬೇಕು. ಸ್ವಾತಂತ್ರ್ಯ ವೇಶ್ಯಾವೃತ್ತಿಯದಲ್ಲ. ಕ್ರಿಯಾತ್ಮಕವಾಗಿ ಶೀಲ ಚಾರಿತ್ರ್ಯಗಳನ್ನು ಕಾಪಾಡಿಕೊಳ್ಳುವಂಥ ದಿಟ್ಟ ಮನೋವೃತ್ತಿ, ಸಮಾಜ ಹಿತವೇ ತನ್ನ ಹಿತವೆಂಬ ಉತ್ಕೃಷ್ಟ ಭಾವನೆಯುಳ್ಳ ಸ್ವಾತಂತ್ರ್ಯವು. ಸಮಾಜಿಕ ಚಟುವಟಿಕೆಗಳಲ್ಲಿ ತನ್ನದೇ ಆದ ಕಾರ್ಯವನ್ನು ಮನ ಮುಟ್ಟಿ ಸ್ತ್ರೀಯರು ಮಾಡತೊಡಗಿದಾಗ ಮಾತ್ರ ಸಮಾಜದ, ರಾಷ್ಟ್ರದ ಉನ್ನತಿ ಸಾಧ್ಯವು. ಸ್ತ್ರೀಯರು ತಮ್ಮ ಒಳಗಣ್ಣು ತೆರದು ಸಮಾಜದ ಬಗ್ಗೆ ತಿಳಿದು ನೋಡದ ಹೊರತು ಸಮಾಜ ಬೆಳೆಯದು. ಪುರುಷರು ಆ ನೋಟವನ್ನು ಸ್ವತಂತ್ರ ರೀತಿಯಿಂದ ಬೀರಲು, ತಿಳಿಯಲು ಸಮಾಜದಲ್ಲಿ ಸ್ತ್ರೀಯರಿಗೆ ಸ್ಥಾನ ಕೊಡದ ಹೊರತು ಸಮಾಜ ವೃದ್ಧಿಯಾಗದು. ಸಮಾಜದ, ಜಗತ್ತಿನ, ಜನತೆಯ ಸಂಪರ್ಕವಿಲ್ಲದ ಕೋಣೆಯ ಕೂಸಾಗಿ ಬಾಳುವವರೆಗೆ ಸ್ತ್ರೀಯರ ಉನ್ನತಿ ಅಸಾಧ್ಯ. ಮತ್ತು ಸಮಾಜದ ಪ್ರಗತಿ ಕುಂಠಿತ.

**ಕೊನೆಯ ಮಾತು:—**

ಸ್ತ್ರೀಯರ ಸುಧಾರಣೆಯು ಸಮಾಜ ಪ್ರಗತಿಗೆ ಆಧಾರವೆಂಬ ಮಾತಿನಂತೆ ಸ್ತ್ರೀಯರ ಸುಧಾರಣೆಯಾಗಲು ಯೋಗ್ಯ ಶಿಕ್ಷಣ ಹಾಗೂ ಸಮಾಜದಲ್ಲಿ ಯೋಗ್ಯ ಸ್ಥಾನಮಾನಗಳು ಅವಶ್ಯವಾದವುಗಳು. ಆದರಲ್ಲಿ ಇಂದಿನ ಶಿಕ್ಷಣ ಕ್ರಮದಲ್ಲಿ ಕರ್ತವ್ಯ, ಶೀಲ, ಚಾರಿತ್ರ್ಯಗಳು ಹೆಚ್ಚಾಗಿರುವವು. ಸಮಾಜ ಸಮಾಜ ಜನರಲ್ಲಿ ವಿಷಮತೆಯ ನಂಜು ನೃತ್ಯವಾಡುತ್ತಿರುವದು. ಅದನ್ನು ಬೇರು ಸಹಿತ ಉರುಳಿಸಲು ಇಂದಿನ ಶಿಕ್ಷಣ ಕ್ರಮ ಸಿದ್ಧವಾಗಿದೆ. ಆಧ್ಯಾತ್ಮಿಕ ರಂಗದಲ್ಲಿ ಭಾರತದಷ್ಟು ಪಾತ್ರ ಮಾಡಿದ ದೇಶಗಳು ಬೇರೊಂದಿರುವದಿಲ್ಲ. ನಾವಿಂದು ಚೇತರಿಸಿಕೊಂಡು ಮೇಲೇಳಲೇಬೇಕು. ನೀತಿವಂತರಾಗ ಬೇಕಾಗಿರುವದು. ಅದಕ್ಕಾಗಿ ಸ್ತ್ರೀಯರಿಗೆ ಸ್ಥಾನಮಾನಗಳನ್ನು ಸಮಾಜ ದಯಪಾಲಿಸಿದಾಗ ಸ್ತ್ರೀಯರು ಹೊಣೆಗಾರಿಕೆಯಿಂದ ಮುಂದುವರಿಯಬೇಕು. ಉತ್ತಮ ಸಮಾಜ, ಉತ್ಕೃಷ್ಟ ರಾಷ್ಟ್ರವಾಗಲು ಸ್ತ್ರೀಯರ ಏಕೈಕ ಉನ್ನತಿಯಿಂದ ಸಾಧ್ಯವೆಂದು ಹೇಳಬಯಸುವೆ



ಲೇಖಾಂಕ ೪

# ನಮ್ಮ ದಾದಾ !

ಲೇ— ಉಪ-ವಾಸಿನ್.

[೧೯೫೬ನೇ ಅಕ್ಟೋಬರ-ನವೆಂಬರ ಸಂಯುಕ್ತ ಸಂಚಿಕೆಯಿಂದ ಮುಂದುವರಿದದ್ದು.]

ಕೆಟ್ಟದ್ದಕ್ಕು ಒಳ್ಳೆಯದಕ್ಕು ಸರಿ ಹಚ್ಚಲು ಬರುವಂಥ 'ಎಳೆ ಸಿಕ್ಕರೆ ಹಚಡ ನುಂಗುವ' ತತ್ವದಂತೆ ತಮ್ಮ ಸೂಕ್ಷ್ಮ ಸಂವೇದನಾಶೀಲತೆಯಿಂದ ಮಾಯಿಯವರು ಸ್ವಲ್ಪ ದೋಷ ಕಂಡರೆ ಕಡ್ಡಿಯಷ್ಟು ದೋಷವಿದ್ದರೆ ಅದನ್ನು ಗುಡ್ಡದಷ್ಟು ಮಾಡಿ ಅದರ ನಿರ್ಮೂಲನಕ್ಕೆ ಹೊರಡುವರು. ಗುಡ್ಡದಷ್ಟು ದೋಷವನ್ನು ಕಡ್ಡಿಯಷ್ಟು ತಿಳಿಯುವವರು ದಾದಾ ನೀವು. ಇದರಿಂದನಮ್ಮಂಥ ಸಾಮಾನ್ಯಜನರ ಪರಿಸ್ಥಿತಿಯು ನಿಮ್ಮಿಬ್ಬರ ಮಧ್ಯದಲ್ಲಿ ಸಿಕ್ಕು ಬಳಳಿ ವಿಚಿತ್ರವಾಗುವದು ಸಹಜ. ಯಾರ ಬೆಂಬಲವಿಲ್ಲದ್ದಾಗ ದುಷ್ಟರಿಗೆಅಂಜಿಕೊಂಡು ಸುಮ್ಮನಿರುವವರು ಬೆಂಬಲವಿದ್ದಾಗ ಸಿಂಹಿಣಿಯಂತೆ ಪ್ರತಿಪಕ್ಷಿಯ ಮೇಲೆ ಏರಿ ಹೋಗುವವರು ಮಾಯಿಯವರು- ದುಷ್ಟರಿರಲಿ ಸುಷ್ಟರಿರಲಿ ನಿಮ್ಮ ದೃಷ್ಟಿಯಲ್ಲಿವಿರುದ್ಧಕಂಡಲ್ಲಿ ಹೆಚ್ಚಿಗೆ ಜಗಳ ಬೆಳೆಸುವದು ಬೇಡವೆಂದು ಸುಮ್ಮನಿದ್ದು, ನಿರೀಕ್ಷಣೆ ಮಾಡಿ ಸ್ವಭಾವದ ಮಟ್ಟು ಅಳಿಯುತ್ತ ಮುಂದಿನ ಧೋರಣೆ ಕಟ್ಟುವವರು ನೀವು. ಈ ನಿಮ್ಮ ಸೌಮ್ಯತನವೇ ಪ್ರತಿಪಕ್ಷಿಯಲ್ಲಿ ಹೆದರಿಕೆ, ನಾಚಿಕೆ, ಸೋಲಿನ ಭಾವನೆ ಹುಟ್ಟಿಸುತ್ತದೆ. ಇಂಥ ಪರಿಸ್ಥಿತಿಯಲ್ಲಿ ಉಚ್ಚ ಗುರಿ ಇಲ್ಲದ ಮಹಾ ಅಭಿಮಾನಿಯಾದ, ತನ್ನ ಹೇವಕ್ಕಾಗಿ ಬೇಕಾದ ಮಾಡಲು ಹಿಂಜರಿಯದ ಆ ನಾರದ ಮುನಿಯು (ಅನ್ನರಿ ಬೇಕಾದರೆ ಒಂದರ್ಥದಲ್ಲಿ) ವಸತಿಗೃಹದಲ್ಲಿಯ ಬಹುತರ ವಿದ್ಯಾರ್ಥಿನಿಯರ ಬೆಂಬಲ ಪಡೆದು ಮಾಯಿಯವರನ್ನು ಜಬರಿಸಹತ್ತಿದನು. ಒಂದು ದಿನ ಸಂಜೆಯಲ್ಲಿ 'ನೀವೆನೆಂದು ತಿಳಿದಿರುವಿರಿ! ನಾನು ಸರಕಾರಿ ಸೀ. ಆಯ. ಡಿ. (ಗುಪ್ತ ಪೋಲೀಸ) ಖಾತೆಯಲ್ಲಿರುವೆನು! ನೀವೆಲ್ಲ ಮಾಡುತ್ತಿರುವ ಕೃತ್ಯಗಳು ನನಗೆ ಗೊತ್ತುಂಟು! ನಿಮ್ಮನ್ನ ನಿಮ್ಮ ದಾದಾವರನ್ನು ಬೇಡಿ ಹಾಕಿಸಿ ಊರತುಂಬ ಮೆರೆಸುವೆನು! ನಿಮ್ಮ ಕೈಸರ-ಈ-ಹಿಂದ ಪೊಳ್ಳ ಪದಕವು ನಿಮಗೆ ಬೆಂಬಲ ಕೊಡಲಾರದು! ನಿಮ್ಮಂಥ ಪೊಳ್ಳ ಗೊಡ್ಡ ವ್ಯಕ್ತಿಯು ನನ್ನ ಅಪಮಾನ ಮಾಡುವದೆಂದರೇನು! ನಾನು ಕೆಟ್ಟವನಲ್ಲವೆ! ನನ್ನ ಮೇಲೆ ಪಾಳತಿ ಇಟ್ಟು ಏನು.......... ವಿರಿ!' ಎಂದು ಗದ್ದರಿಸಹತ್ತಿದಾಗ ಏನು ಅರಿಯದ ಬಡ ಪಾಯಿಯಾದ ಮಾಯಿಯವರು ಗದಗದ ನಡಗಹತ್ತಿದರು. ಒಂದು ಮಾದರಿ ಸಂತಾಪ, ಭಯ, ಅಂಜಿಕೆಯಿಂದ ಮತ್ತು ಸಮಾಜದ ಗತಿಯೇನೆಂದು ಕಣ್ಣೀರು ಸುರಸಹತ್ತಿದರು. 'ಏನು ಮಾಡುತ್ತಿ ಮಾಡ ಮಹಾರಾಯಾ' ಏನು ಪುಣ್ಯ ಕಟ್ಟಿಕೊಳ್ಳುತ್ತಿ, ಕಟ್ಟಿಕೊ ಈ ಹೆಣ್ಣುಮಕ್ಕಳ ಘಾತಮಾಡಿ!' 'ಗೊತ್ತ. ಅದೆನೆ ನೀನೆಷ್ಟು ಆ ಹೆಣ್ಣುಮಕ್ಕಳ ಕಲ್ಯಾಣ ಮಾಡುತ್ತಿ!' ಎಂದನು ಆ ನಾರದನು ಅಣಕವಾಗಿ. ಇಷ್ಟು ಹೊತ್ತಿನ ವರೆಗೆ ಸುಮ್ಮನಿದ್ದ ನೀವು 'ಮಾಯಿಯವರೆ ಈಗ ನೀವು ಹೋಗಿರಿ! ಇವರ ಅಂಬೋಣವನ್ನು ಕೇಳುತ್ತೇನೆ! ಮುಂದೆ ಮಾಡುವದನ್ನು ಮಾಡುವಾ! ಅವರದಾದರು ಕೆಟ್ಟ ಉದ್ದೇಶವಿಲ್ಲ! ಹುಡುಗಿಯರೆ ಕೆಲವರು ಕೆಟ್ಟವರಿರುವರು! ಅವರ ಫಜೀತಿ ಮಾಡಿ ಅವರನ್ನು ದಾರಿಗೆ ತರುವದೆ ಇವರದಾದರು ಉದ್ದೇಶವಿದೆ!' ಎಂದು ಅಂದ ಕೂಡಲೆ ಮಾಯಿಯವರು ಹೋದರು. ಮತ್ತು ಆ ನಾರದ ಮುನಿಯು ಬೆಪ್ಪಾದನು ಈ ನಿಮ್ಮ ಮಾತಿನಿಂದ. ಅವನು ತನ್ನ ಸೋಲು ಒಪ್ಪದೆ ಹೆಮ್ಮೆಯಿಂದ 'ದಾದಾ ಅವರೆ! ಹೇಳಿರಿ! ನನ್ನದೆಷ್ಟು ಸಾಮರ್ಥ್ಯವಿದೆ ತೋರಿಸಬೇಕೋ ಹೇಗೆ! ನನ್ನ ಹತ್ತಿರ ಸಾಕಷ್ಟು ಪುರಾವೆಗಳಿವೆ ನಿಮಗೆ ಬೇಡಿಹಾಕಿಸಿ ನಾಲ್ಕುದಿನಗಳ ವರೆಗೆ ಲಾಕಪ್ಪಿನಲ್ಲಿಡಿಸುವಷ್ಟು! ಚಿಕ್ಕಮಕ್ಕಳ ಮೇಲೆ ಬಲಾತ್ಕಾರ ಮಾಡುವಿರಲ್ಲವೆ! ಹೊರಗೆಡವಲೇನು ನಿಮ್ಮ ಬಿಂಗುಗಳನ್ನೆಲ್ಲ!' ಎಂದು ಗದ್ದರಿಸಹತ್ತಿದನು ಆ ನಾರದ ಮುನಿಯು ಬಿಂಕದಿಂದ. ಆದರು ಮುಖಮುದ್ರೆಯಲ್ಲಿಯಾಗಲಿ ಮನಸಿನಲ್ಲಿಯಾಗಲಿ ಯಾವ ಹೆದರಿಕೆಯ ಚಿನ್ಹಗಳನ್ನು ನಿಮ್ಮಲ್ಲಿ ಕಾಣದೆ ಒಂದು ಮಾದರಿಯ ಗಂಭೀರ ಭಾವ ಮತ್ತು ಮುಗುಳ ನಗೆಯನು

ಕಂಡು ನಾರದ ಮುನಿಯು ಗಾಬರಿಗೊಂಡನು ಮತ್ತು ತಮ್ಮ ಮಾತುಗಳನ್ನು ಕೇಳಿ ಬೆಪ್ಪಾದನು. 'ಸ್ವಾಮಿ! ನಿಮಗೇನು ಮಾಡುವದಿದೆ ಮಾಡಿ! ನೀವು ರಾಜಕಾರಣಿಗಳು ಹೇಗೆ ನಿಮ್ಮ ರಾಜಕಾರಣ ಸಾಧಿಸಲು ಬೇಕಾದ ತ್ಯಾಗ ಮಾಡಲು ಸಿದ್ಧ ರಿರುವಿರಿ, ಜೇಲಾಗಲಿ ಗಲ್ಲಾಗಲಿ, ಆಸ್ತಿಪಾಸ್ತಿ ಹೋಗಲಿ, ಅಪಮಾನವಾಗಲಿ ಸಹಿಸುವಿರೋ ಅದರಂತೆ ಸಮಾಜ ಕಾರಣ ಕ್ಕಾಗಿ ನಾನಾದರು ಸಿದ್ಧನಿರುವೆನು. ಬಲಾತ್ಕಾರದ ಆರೋಪ ಅಪವಾದ ಒತ್ತಟ್ಟಿಗಿರಲಿ, ಪ್ರತ್ಯಕ್ಷ ಗರ್ಭಪಾತವಾಗಿ ಆ ಕಂದಮ್ಮ ನನ್ನ ಮುಂದೆ ಸತ್ತುಬಿದ್ದಾಗ ಆ ಪೋಲಿಸರು ಮುದ್ದೆ ಮಾಲು ಸಹಿತ ನನ್ನನ್ನು ಸೆರೆಹಿಡಿದು ಮೆರೆಸಿದ್ದನ್ನು ನೋಡಬೇಕೆಂದು ನನ್ನ ಹೆಬ್ಬಯಕೆಯುಂಟು! ನಿಮ್ಮ ಪೊಳ್ಳು ಬೆದರಿಕೆಯಿಂದ ನನಗೇನು ಹೆದರಿಕೆ ಬರದೆ ನಗು ಬರುತ್ತದೆ! ಆದರು ನೀವಂದಂತೆ ನಿಮ್ಮ ಸಾಮರ್ಥ್ಯವು ಏನು ಬೇಕಾದ್ದು ಮಾಡಬಲ್ಲದೆಂದು ನಾನು ಬಲ್ಲೆ ಮಹಾರಾಯಾ! ಈ ನಿನ್ನ ಅಚಾಟ ಶಕ್ತಿಯ ಉಪಯೋಗವನ್ನು ಸಮಾಜಕ್ಕೆ ಕೆಡಕು ಮಾಡುವ ಬದಲು ಒಳ್ಳೆಯದನ್ನು ಏಕೆ ಮಾಡುವದಿಲ್ಲೆಂದ ಕೂಡಲೆ ಇದೆ ದಾದಾ ನಿಮ್ಮ ಚಾತುರ್ಯ ನಿರ್ದಾರವೆಂದು ತಿಳಿಯದೆ ಆ ನಾರದಮುನಿಯು ನಿಮ್ಮ ಸೋಲು ತನ್ನ ಗೆಲವೆಂದು ತಿಳಿದು ಸೌಮ್ಯನಾದನು ಮತ್ತು "ಹಂಗಾರೆ ನೀವೊಂದು ಅರ್ಜಿ ಕೊಡಿರಿ ಪೋಲಿಸ ಅಧಿಕಾರಿಗಳಿಗೆ! ನಮ್ಮಲ್ಲಿ ವಿದ್ಯಾರ್ಥಿನಿಯರು ಬಂಡು ಮಾಡಿರುವರು! ಅದರ ಬಂದೋಬಸ್ತ ಮಾಡಿರೆಂದು" ಅಂದನು. ಅದಕ್ಕೆ ನೀವು ಶಾಂತವಾಗಿ 'ಅರ್ಜಿ ಬಿರ್ಜಿ ಏನು ಬೇಡ! ನಿಮ್ಮ ವರ್ಚಸ್ಸವು ಪೋಲಿಸ ಖಾತೆಯಲ್ಲಿದ್ದರೆ ಖಾಸಗಿ ರೀತಿಯಲ್ಲಿ ಒಬ್ಬಿಬ್ಬ ಪೋಲೀಸರನ್ನು ಕರೆಯಿಸಿ ಬೆದರಿಸಿ ನೋಡಿ. ವಿದ್ಯಾರ್ಥಿನಿಯರೇನು ಅಷ್ಟು ಕೆಟ್ಟವರಿಲ್ಲ!' ಈ ಅನಪೇಕ್ಷಿತವಾದ ಮತ್ತು ಅನಿರೀಕ್ಷಿತವಾದ ಉತ್ತರದಿಂದ ಅವನಿಗೇನು ತೋಚತೆ ಕ್ಷಣ ಹೊತ್ತು ವಿಚಾರ ಮಗ್ನನಾದನು. ತೀರ ಒಳಹೊಕ್ಕವನಂತೆ 'ಇದು ನೋಡಿರಿ! ಹೀಗೆ ಮಾಡಿದರೆ ಹೇಗೇ! ಒಬ್ಬಿಬ್ಬ ಮುಖಂಡ ಬಂಡಖೋರ ಹುಡುಗಿಯರನ್ನು ಅವರ ಪಾಲಕರಿಂದ ಜಡ್ಡು ಮಣ್ಣು ಎಂದು ತಂತಿ ತರಿಸಿ ಅಟ್ಟಿ ಬಿಡೋಣ! ಮಿಕ್ಕ ಪೆದ್ದುಗಳೆಲ್ಲ ಹೇಳಿದಂತೆ ಕೇಳುವವು' ಎಂದು ಹೊಸ ಹೊಂಚು ಸೂಚಿಸಿದನು. ಇದರಿಂದೇನು ಪ್ರಯೋಜನವಾಗುವದಿಲ್ಲೆಂದು ನಿಮಗೆ ಮನವರಿಕೆಯಾಗಿದ್ದರು ಅವನ ಪೂರ್ಣ ಸತ್ವಪರೀಕ್ಷೆ ಮಾಡಲು ಕೆಲವೊಂದು ಹಣ ಅವನಿಗೆ ಕೊಟ್ಟಿರಿ. ಆದರೆ ಅವನು ಆಪುಂಡ ಹುಡಗಿಯರಿಗೆ ನಿಮ್ಮ ಹೆಸರಿಲ್ಲ ಖೊಟ್ಟೆ ತಂತಿ ಕಳಿಸುವೇನು ನೀವೇನು ಸೊಪ್ಪು ಹಾಕಬೇಡಿರೆಂದು ಮುಂಗಡ ಸೂಚನೆ ಕೊಟ್ಟು ಇಟ್ಟದ್ದರಿಂದ ಆ ತಂತಿ ಇವರೇ ಕೊಟ್ಟಿರುವಿರೆಂದು ಆ ಹುಡುಗಿಯರ ಕಲ್ಪನೆಯು ಆಗಿ ಅವರು ಮತ್ತಿಷ್ಟು ಕುಣಿಯ ಹತ್ತಿದರು. ಅವನಿಗೆ 'ತಾನು ಹೇಗೆ ಸೇಡು ತೀರಿಸಿಕೊಂಡೆನಲ್ಲ' ಎಂದು ಆನಂದವಾಯಿತು. ಇಷ್ಟೆಲ್ಲ ಗೊಂದಲ ನಡೆದರೂ ತಾವು ದೈವವಾದಿಗಳೆನ್ನಬೇಕೆ! ದೈವದ ಮೇಲೆ ಭಾರ ಹಾಕಿ ಸುಮ್ಮನೆ ಕೂಡಲು ಆದರೆ ತಾವು ದೈವವಾದಿಗಳಲ್ಲ. ನಿರಾಶಾವಾದಿಗಳೆನ್ನಬೇಕೆ ನಿರಾಶೆಯಿಂದ ತಾವು ಹತಬುದ್ಧರಾಗಿದ್ದು ಕಾಣಲಿಲ್ಲ. ಪ್ರಯತ್ನವಾದಿಯನ್ನಬೇಕೆ! ತಾವು ಯಾರಿಗಾದರು ಭೆಟ್ಟಿಯಾಗಿ ಯಾವ ಪ್ರಯತ್ನವು ಮಾಡಿದ್ದು ಕಂಡುಬರಲಿಲ್ಲ. ಇಷ್ಟು ಹುಡುಗಿಯರು ಅವನ ಬೆಂಬಲದಿಂದ ಇಷ್ಟು ಗೊಂದಲ ಹಾಕಿ ಅವಾಚ್ಯ ಶಬ್ದಗಳಿಂದ ನಿಮ್ಮ ಮೇಲೆ ಅಪವಾದದ ಸುರಿಮಳೆಗರಿಸುತ್ತಿದ್ದರು ಅಪಕೀರ್ತಿಯದಾಗಲಿ ಕಾರ್ಯನಾಶದ್ದಾಗಲಿ ಯಾವ ಮಾದರಿಯ ಹೆದರಿಕೆಯ ಚಿನ್ಹಗಳು ತಮ್ಮ ಮುಖಮುದ್ರೆಯಲ್ಲಿಯಾಗಲಿ, ನುಡಿನಡೆಗಳಲ್ಲಾಗಲಿ ಕಂಡು ಬಾರದ್ದನ್ನು ನೋಡಿ ನಾವೆಲ್ಲರು ಬೆಪ್ಪಾಗಿ ಹೋದೆವು. 'ಯಾವ ಆಧಾರದಿಂದ ಇವರಿಷ್ಟು ಶಾಂತಿ ತಾಳಿರುವರು! ಇಷ್ಟು ಕಷ್ಟದಿಂದ ನಿಲ್ಲಿಸಿದ ಸಂಸ್ಥೆ ಹಾಳಾದರು ಇವರಿಗೇನು ಅನಿಸುತ್ತಿರಲಿಲ್ಲವೆ' ಎಂದು ನಾವೆಲ್ಲರು ಮರಗುತ್ತ ಮಾಮಲೇದಾರರಿಗೆ, ಫೌಜದಾರರಿಗೆ, ಕಾರ್ಯಕಾರಿ ಮಂಡಲದವರಿಗೆ ಊರ ಪ್ರಮುಖರಿಗೆ ಮೊರೆ ಹೋಗುತ್ತಿದ್ದೆವು. ಕ್ರೋಧಾದಿ ಷಡ್ರಿಪುಗಳಿಂದ ಹೌಹಾರುವಂತೆ ಕುಣಿದಾಡುತ್ತಿದ್ದೆವು. ಆದರೆ ನಾನೇನು ಕೆಡಕ ಮಾಡದೆ, ಕೆಡಕ ಮಾಡುವ ಬುದ್ಧಿಯು ಸಹ ನನ್ನಲ್ಲಿ ಇಲ್ಲದಿರುವಾಗ ಯಾವ ಕೆಡಕವು ಆಗುವದು ಶಕ್ಯವಿಲ್ಲ. ಎಲ್ಲರು ಒಂದಿಲ್ಲೊಂದು ನಿಜ ಅಥವಾ ಕಾಲ್ಪನಿಕ ಸಂಕಟ ಅಥವಾ ಬಂಧನದಿಂದ ಪಾರಾಗಲು ಹವಣಿಸುತ್ತಿರುವರೆಂದು ತಮ್ಮ ತಮ್ಮ ಕೃತಿಗಳ ಪರಿಣಾಮಗಳಿಂದ ಬುದ್ಧಿ ಕಲಿಯುವರೆಂಬ ಒಂದೆ ಒಂದು ಆತ್ಮವಿಶ್ವಾಸದಿಂದ ತಾವು ಈ ತಾಳ್ಮೆಯನ್ನು ತಳೆಯುತ್ತಿರುವಿರೆಂಬ ಮಾತು ನಾವೆತ್ತ ಬಲ್ಲೆವು! 'ತೊಟ್ಟಿಲವು ತೂಗಿ ತೂಗಿ ತನ್ನ ಸ್ಥಳಕ್ಕೆ ನಿಲ್ಲುವದು.' 'ತಟಸ್ಥವಾಗಿ ನಿಂತು ನೋಡುವವರಾದರು ಸಹಾಯಕರೆ.' (They also serve who stand & wait.) ಎಂಬಂತೆ 'ತನ್ನಂತೆ ಬಗೆದರೆ ಕೈಲಾಸಂ'ಬ ತತ್ವದಕ್ಕಿಂತ ಎಲ್ಲರು ತಮ್ಮ ತಮ್ಮ ದೃಷ್ಟಿಕೋನದಂತೆ ಅದು ಸ್ವಾರ್ಥದ್ದೆ ಇರಲಿ ಪರಮಾರ್ಥದ್ದೆ ಇರಲಿ— ಹೇಗೆ ನೋಡುತ್ತಾರೆ, ಅದರಲ್ಲಿ ಸಂಘಟನೆಯಾಗಲು ತೊಂದರೆ ಯಾವದು ಸ್ವಾರ್ಥವು

ಆಕುಂಚಿತ ಅಥವಾ ದೂರಾನ್ವಯದ್ದಾಗಲಿ(Far fatched) ಆದು ನೈಸರ್ಗಿಕ ಕೊರತೆಗಳನ್ನು ಹೋಗಲಾಡಿಸಲು (ಹಸಿವು, ಪ್ರಜೋತ್ಪಾದನದ ಇಚ್ಛೆ(Sex desire) ಮುಂತಾದ ಇಲ್ಲವೆ ಲೌಕಿಕದ್ದು ಕೀರ್ತಿ, ಅಧಿಕಾರ ಮುಂತಾದ ಕೃತ್ರಿಮ ಪ್ರಪಂಚದ ಸಾಮುದಾಯಿಕ ಸ್ವರೂಪದ್ದಿರಲಿ, ಆತ್ಮರಕ್ಷಣೆಗಾಗಿರುವದು ಎಂದು ನಿಮ್ಮ ಶ್ರದ್ಧೆ, ನಿಷ್ಠೆ ಇರುವದರಿಂದ ನಿಮಗೆ ಯಾವ ವ್ಯಕ್ತಿಯದು ಯಾವದು ತಪ್ಪೆ ಕಾಣುವದಿಲ್ಲ. ಆದರಿಂದ ನಿಮಗೆ ವ್ಯಭಿಚಾರಿ ಕೊಲೆಗಡಕರಲ್ಲಿ ಸಹದೋಷಾವದು ಕಾಣದೆ ಯಾರು ವೈರಿಗಳಲ್ಲ. ಎಲ್ಲರು ಮಿತ್ರರೆ ಆದರಲ್ಲಿಯು ಹೆಣ್ಣುಮಕ್ಕಳನ್ನು ಅಜ್ಞಾನದಲ್ಲಿಟ್ಟದ್ದರಿಂದ ಅವರ ನೀತಿ ನಿಯಮಗಳ ಬೇರೆ ಗಂಡಸರಿಗೆ ಹಚ್ಚುವ ನಿಯಮಗಳೆ ಬೇರೆ. ಗಂಡಸರು ಹೆಂಗಸರ ಅಜ್ಞಾನದ ಲಾಭ ಪಡೆದು ಅವರಿಂದ ಸಾಮಾಜಿಕ ತಪ್ಪುಗಳುಂಟಾಗುವಂತೆ ಅಂದರೆ ವ್ಯಭಿಚಾರ, ಸಣ್ಣಪುಟ್ಟವಾಗಲಿ ದೊಡ್ಡ ತಪ್ಪುಗಳಾಗಲಿ ಅಂದರೆ ಗರ್ಭಪಾತ, ಸವತಿ ಮತ್ಸರ, ವೈಭವದ ಲಾಲಸೆ ಮೊದಲಾದವುಗಳು ಘಟಿಸುವಂತೆ ಕೃತ್ರಿಮ ಸಮಾಜ ರಚನೆ ಮಾಡಿಟ್ಟದ್ದರಿಂದ ಹೆಂಗಸರಿಂದ ಘಟಿಸುವ ತಪ್ಪುಗಳು ಪಾಪಗಳು ತಪ್ಪುಗಳಲ್ಲ ಪಾಪಗಳಲ್ಲ' ಎಂದು ನಿಮ್ಮ ದೃಢಭಾವನೆ ಇರುವದರಿಂದ ಅವರ ಎಂಥ ತಪ್ಪುಗಳನ್ನು ಸಹ ನೀವು ಮನ್ನಿಸುವದಿಲ್ಲ. ಆದರೆ ಲೌಕಿಕ ಕೃತ್ರಿಮ ಸಾಮುದಾಯಿಕ ಸಂಘಟನೆಯು ಮನುಷ್ಯನ ಬಾಳುವಿಗೆ ಅತ್ಯಗತ್ಯ ಇರುವದರಿಂದ ಅದನ್ನು ಸಾಧಿಸಲು ನೀವು ನಿರಪೇಕ್ಷಬುದ್ಧಿಯಿಂದ ಅಲಿಪ್ತ ಬುದ್ಧಿಯಿಂದ ನಿರಹಂಕಾರ ವೃತ್ತಿಯಿಂದ ಸ್ವಾರ್ಥ ಪರಮಾರ್ಥ ಎಂಬ ಭೇದವನ್ನೆಣಿಸದೆ ಪ್ರಸಂಗ ಬಿದ್ದರೆ ಹೆಣ್ಣುಮಕ್ಕಳ ಪಕ್ಷಪಾತಿಯೆಂದು ದೋಷಕ್ಕೆ ಪಾತ್ರರಾಗಿ ನೀವು ದುಡಿಯುತ್ತೀರಿ ಎಂಬ ಬಾತು ಯಾರಿಗೆ ತಾ ನೆಹೊಳೆದೀತು! ಎಲ್ಲ ಸಾಧು ಸಂತರಾದರು ರಾಜಕಾರಣಿಗಳು ಮಹಾತ್ಮರು ಇದೇ ಮಾಡುತ್ತ ಬಂದಿರುವರೆಂಬ ಅರಿವು ನಮ್ಮಂಥ ಗಂಡಸರಿಗೆ ಹೆಂಗಸರಿಗೆ ತಿಳಿಯುವದು ಹೇಗೆ ತಾನೆ ಶಕ್ಯ! ಕಾರ್ಲೈಯ್ಲ ಹೇಳಿದಂತೆ A Hero at ene point is a Hero at all points ಅಂದರೆ ಒಂದು ಧ್ಯೇಯ ಸಾಧಿಸಲು ಬೇಕಾಗುವ ತ್ಯಾಗ, ಕಷ್ಟ ಸಹಿಷ್ಣುತೆ ದೀರ್ಘ ಮತ್ತು ಸತ್ವ ಪ್ರಯತ್ನ ಇವೇ ಗುಣಗಳು ಯಾವದೇ ಧ್ಯೇಯ ಸಾಧಿಸಲು ಬೇಕಾಗುವವು. ಆದರೆ ಗತಾನುಗತಿಕವಾದ ಅಂದರೆ ರಾಜಕಾರಣ, ಧರ್ಮಕಾರಣ, ಅರ್ಥಕಾರಣ ಇವೇ ಧ್ಯೇಯಗಳಿದ್ದಲ್ಲಿ ಲೌಕಿಕ, ಕೀರ್ತಿ ಅಧಿಕಾರ ಬೇಗನೆ ಸಿಗುವದು. ಆದರೆ ಅಷ್ಟೆ ಉತ್ಕಟ ತ್ಯಾಗ ಸಾಹಸ ಮಾಡಬೇಕಾಗುವದು. ಒಬ್ಬರು ಸಾಹಸ ತ್ಯಾಗ ಮಾಡಿದರೆ ಲಾಭವು ಅವರ ಅನುಯಾಯಿಗಳಿಗೆ ಅಥವಾ ಕ್ಷಣದಲ್ಲಿ ಮತಾಂತರ ಮಾಡಿದವರಿಗೆ ಸಿಗುವದು. ಮೊದಲು ಮೊದಲು ದೂಷಿಸಲ್ಪಟ್ಟ ಭೌತಿಕ ಶಾಸ್ತ್ರವು ಶಾಸ್ತ್ರಜ್ಞರ ಸಾಹಸಾದಿಗಳಿಂದ ಪ್ರತ್ಯಕ್ಷವಾಗಿ ಜನತೆಗೆ ಲಾಭದಾಯಕ ಸುಖಕಾರಕವೆಂದು ಕಂಡು ಬಂದಿದ್ದರಿಂದ ಭರದಿಂದ ರಾಜಕಾರಣ ಮತ್ತು ಧರ್ಮಕಾರಣವನ್ನು ಹಿಂದೂಡಿ ಮುಂದೆ ಭರದಿಂದ ಸಾಗಿತು. ಅದರಂತೆಯೆ ಸಮಾಜ ಕಾರಣ ಅಂದರೆ ಅಸ್ಪೃಶ್ಯತೆ ನಿವಾರಣೆ ಸ್ತ್ರೀಯರ ಏಳಿಗೆಯ ಪ್ರಶ್ನೆಗಳು (Problems) ಬುದ್ಧ್ಯಾಪೂರ್ವಕವಾಗಿ ಸಂಬಂಧಿಸಿದ ವ್ಯಕ್ತಿಗಳನ್ನು ಸ್ತ್ರೀಯರು ಶೂದ್ರರು ಇವರನ್ನು ಅಜ್ಞಾನಾಂಧಃಕಾರದಲ್ಲಿ ಎಷ್ಟೋ ಸಾವಿರ ವರ್ಷಗಟ್ಲೆ ಇಟ್ಟದ್ದರಿಂದ ಅವರು ಸ್ವಾವಲಂಬಿಯಾಗಿ ಬುದ್ಧಿವಂತ ಮತ್ತು ಶ್ರೀಮಂತರಾಗಿ ತಮ್ಮ ಕಾರಣ ಸಾಗಿಸುವವರೆಗೆ ಅವರ ಕಾರಣ ಕೀರ್ತಿ ಒತ್ತಟ್ಟಿಗಿರಲಿ ಅಪಕೀರ್ತಿ ಅಪಮಾನ ಸಾಹಿಸಬೇಕಾದರು ನೀವು ನಡೆಸಿದ್ದು ಯಾರಿಗೆ ತಾನೇ ಗೊತ್ತಾಗುವದು! ನಾವೆ ಹೆಣ್ಣುಮಕ್ಕಳೆ ಕೂಡಿ ನಿಮಗೆ ಅರುವಿಲ್ಲದೆ ಕಲಂಕ ಹಚ್ಚುತ್ತಿರುವೆವು.

(ಮುಂದುವರೆಯುವದು)

 

# ಕೋಲಾಟದ ಒಂದು ಪದ



ಜಾಣ:— ದೂದಕೇರಿ ಊರಿನೊಳೆ ಹಸಿರು ಮುಡಿ ಉಟ್ಟೆರೊಳೆ
ಪೂ ಮುಡಿ ಕಟ್ಟೆರೊಳೆ । ಕೇಳಮ್ಮ ಜಾಣೆ
ಪೂ ಮುಡಿ ಕಟ್ಟೆರೊಳೆ ।

ಜಾಣೆ:— ಹೇಳು ಹೇಳಯ್ಯ ಜಾಣ ನಮ್ಮ ಮನಿಗೆ ಯಾಕ ಬಂದೆ
ನಿನ್ನ ಮದುವೆ ಆಗಿಲ್ಲೇನೊ । ಹೇಳಯ್ಯ ಜಾಣ
ನಿನ್ನ ಮದುವೆ ಆಗಿಲ್ಲೇನೋ ।

ಜಾಣ:— ನನ್ನ ಮದುವೆ ಆಗಿಲ್ಲಿನ್ನು ಯಾರು ಕೊಡುವರು ನನಗೆ ಹೆಣ್ಣು
ಎಲ್ಲಿ ತರಲಿ ಹಿಡಿಹೊನ್ನು । ಹೇಳಮ್ಮ ಜಾಣೆ
ಎಲ್ಲಿ ತರಲಿ ಹಿಡಿ ಹೊನ್ನು

ಜಾಣೆ:—ಅಯ್ಯೋ ಪಾಪ ಮರುಗಬೇಡ ಮನದೊಳಿನ್ನು ಕೊರಗಬೇಡ
ನಿನ್ನ ಕೈಯನಾ ಹಿಡಿವೆ । ಕೇಳಯ್ಯ ಜಾಣ
ನಿನ್ನ ಕೈಯ ನಾ ಹಿಡಿವೆ

ಜಾಣ:— ದೊರೆಯುವದೇನೆ ಅಂಥ ಭಾಗ್ಯ ನಾನು ವರನೆ ನಿನಗೆ ಯೋಗ್ಯ
ಒಪ್ಪುವದೇನೆ ನಿನ್ನ ಬಳಗ । ಹೇಳಮ್ಮ ಜಾಣೆ
ಒಪ್ಪುವದೇನೆ ನಿನ್ನ ಬಳಗ

ಜಾಣೆ:— ಸುವಿಶಾಲ ಹೃದಯದ ಯುವಕ ಎಂದು ನಿನಗೆ ಹೇಳುತಿಹರು
ತಂದೆ ತಾಯಿಗೆ ಬಹಳ ಪ್ರೀತಿ । ನಿನ್ನ ಕಂಡರ
ತಂದೆ ತಾಯಿಗೆ ಬಹಳ ಪ್ರೀತಿ

ಬಡತನವನ್ನು ಎಣಿಸಲಾರೆ ನಿನ್ನ ಗುಣಗಳ ತೆಗಳಲಾರೆ
ಇಬ್ಬರೂ ಕೂಡಿ ದಿನವು ದುಡಿಯೋಣ । ಕೇಳಯ್ಯ ಜಾಣ
ಸುಖದುಃಖ ಬೆರೆಸಿ ಉಣ್ಣೋಣ

ಜಾಣ:— ನಡುವೆ ಅಡ್ಡಗುಡ್ಡದಂತೆ ಎದ್ದು ನಿಂತ ಕಟುಕನೊಬ್ಬ
ನಮ್ಮ ಮೇಲೆ ಹಲ್ಲು ಕಡಿದರೆ । ಹೇಗಮ್ಮ ಜಾಣೆ
ನಮ್ಮ ಮೇಲೆ ಹಲ್ಲು ಕಡಿದರೆ

ಜಾಣೆ:— ಹಲ್ಲು ಕಡಿದರೇನು ಹೊಟ್ಟೆ ಉರಿದು ಸತ್ತು ಹೋಗಲೇನು
ದೇವಿ ಕರುಣೆ ಬೆಂಗಾವಲು । ಕೇಳಯ್ಯ ಜಾಣ
ದೇವಿ ಕರುಣೆ ಬೆಂಗಾವಲು

—"ರಜನೀರತ್ನ" ಗಂಗಾವತಿ ಗ್ರಾಮಸೇವಕ ಲಕ್ಷ್ಮೇಶ್ವರ

# ನೆರೆಮನೆಯವರು

ಅನು: ಶ್ರೀಮತಿ **ಸುಮಿತ್ರಾ ಅಸುಂಡಿ**

ಅಂದು ಯಾವ ದಿಕ್ಕಿಗೆ ಬೆಳಗಾಯ್ತೋ ದೇವರಿಗೆಗೊತ್ತು. ಅಂತೂ ನಮ್ಮ ನೆರೆಮನೆಗೆ ಬಾಡಿಗೆದಾರರು ಬಂದರು ಆದರೆ ಮಾತ್ರ ಅಂದಿನಿಂದ ನನ್ನ ಸುಖಜೀವನ ಕ್ರಮಕ್ಕೆ ಕೊನೆ ಬಂದಂತಾಯ್ತು ನಿಜ !

ಒಂದು ದಿನ ನಾನು ಮುಂಜಾನೆ ಎದ್ದು ನೋಡುವದ ರಲ್ಲೇ ಅಲ್ಲಿ ಅಂಗಳದಲ್ಲಿ ಗಾಡಿತುಂಬಿ ಸಾಮಾನು ಬಂದಿತ್ತು. ಆ ಸಾಮಾನಿನಲ್ಲಿ ಅತಿ ಸಣ್ಣ ಸಣ್ಣ ಮೂಳೆಗಳು ಸಹ ಇದ್ದದ್ದು ಕಾಣಿಸುತ್ತಿತ್ತು. ನಾನಂದುಕೊಂಡೆ, ಹೊಸದಾಗಿ ಬಂದ ನೆರೆಯವರು ಬಹಳ ಜಿಗುಟರಿರುವರೆಂದು, ಆ ದಿನ ವಿಡೀ ಸಾಮಾನುಗಳ ಖಡಖಡ ಶಬ್ದವು ಕೇಳಿಸುತ್ತಲೇ ಇತ್ತು.

ಮಾರನೇ ದಿನ ಆ ಯಜಮಾನಿಯು ನಮ್ಮಲ್ಲಿಗೆ ಬಂದಳು. ಅವಳ ಮಾತಿನ ಮೇಲಿಂದ ಆ ಮನೆಯಲ್ಲಿ ಅವ ಳೊಬ್ಬಳೇ ಇದ್ದಳೆಂದು ತೋರುತ್ತಿತ್ತು. ಅವಳು ಬಂದವಳೇ 'ಧೋತ್' ಎಂದು ಕೋಚಿನ ಮೇಲೆ ಕುಳಿತಳು—ಆದರೆ ಆ ಕೋಚಿನ ಆಯುಷ್ಯದ ಹಗ್ಗವು ಇನ್ನೂ ಗಟ್ಟಿ ಇತ್ತೆಂದು ಕಾಣುತ್ತದೆ, " ನನಗೆ ಸ್ವಲ್ಪ ಚಹಾ ಮಾಡಿ ಕೊಡಿ ! ನನ್ನೊ ಬ್ಬಳಿಗೆ ಚಹಾ ಮಾಡಲು ಬೇಸರ ಬಂದಿದೆ " ಎಂದು ಹೇಳಿ ದಳು. "ಐದು ನಿಮಿಷ ತಡೆಯಿರಿ. ಈಗಿಟ್ಟು ಮಾಡುತ್ತೇನೆ" ಎಂದು ಹೇಳಿ, ಒಲೆ ಹೊತ್ತಿಸಿ ಚಹಾಕ್ಕಿಟ್ಟು ಹೊರಗೆ ಬಂದೆ.

" ಅನ್ವಯ್ಯಾ, ನಿಮ್ಮ ಮನೆಯಲ್ಲಿ ಹಾರ್ಮೋನಿಯಂ ಇದೆ ಏನು ? ಅದನ್ನು ಬಾರಿಸಲು ನನಗೆ ಬಲು ಇಷ್ಟ, ಐದು ನಿಮಿಷ ಕೂತಾದರೂ ಕೂಡ್ರಲ್ಲಾ" ಎಂದು ಹೇಳಿ ಆ ಭವಾ ನಿಯು ಬಾರಿಸಲು ಪ್ರಾರಂಭಿಸಿಯೇ ಬಿಟ್ಟಳು. ಹಾಗೂ ತನ್ನ ಸುಶ್ರಾವ್ಯ (?) ಕಂಠದಿಂದ ಹಾಡಲಾರಂಭಿಸಿದಳು.

" ನನ್ನ ಹೆಸರು ಮೈನಾ ! ನನ್ನ ತಾಯಿಗೆ ಸಂಗೀತ ವೆಂದರೆ ಬಲು ಪ್ರೀತಿ. ಆದರೆ ನನ್ನ ಹಾಡು ಕೇಳಲು ಅವಳು ಬದುಕಿ ಉಳಿಯಲಿಲ್ಲ ! ಬಾಕಿ ನನ್ನ ಕಂಠವು ನಾರಾಯಣ ರಾವ್ (ಬಾಲಗಂಧರ್ವ) ರ ಕಂಠದಂತೆಯೇ ಇದೆ ! ನಾನೂ ಸಹ ಗಂಧರ್ವಳೇ ಆಗಬೇಕಾಗಿತ್ತು ಆದರೆ ಏನು ಮಾಡಲಿ ! ನನಗೆ ಎಂದೂ ಸಂಧಿಯೇ ಸಿಗಲಿಲ್ಲ ಹಾಡಲು" ಎಂದಳು ಮೈನಾಬಾಯಿ.

ನಾನು ಮನಸ್ಸಿನಲ್ಲೇ " ಒಳ್ಳೇದಾಯ್ತು ತಾಯಿ, ನಿನ್ನ ಅವ್ವನು ಬದುಕಿರದಿದ್ದದ್ದು. ಇಲ್ಲವಾದರೆ ಮಗಳ ಹಾಡನ್ನು ಕೇಳಿಯೇ ಆ ಮುದುಕಿಯು ಪಟಕ್ಕದೆ ಪ್ರಾಣಬಿಡುತ್ತಿದ್ದಳು. ಹಾಡಲು ಸಂಧಿ ಸಿಗದಿದ್ದು ಮಾತ್ರ ಬಹಳ ಒಳ್ಳೆಯದಾಯ್ತು! ಇಲ್ಲವಾದರೆ ಆ ರಸಿಕರು ಗಾಯನ ಗೃಹಬಿಟ್ಟು ಓಡುತ್ತಿದ್ದರು! ಎಂದು ಅಂದುಕೊಂಡೆ

"ನಿಮಗೆ ಅಡಿಗೆಯ ಅವಸರವಿಲ್ಲವೇ ? ನಾನು ನಿಮಗೆ ಒಂದು ಕಾಯ್ದಿಡತಕ್ಕ ವಸ್ತುವನ್ನು ತೋರಿಸುತ್ತೇನೆ." ಎಂದಳು ಮೈನಾ ಮುಂದೆ ಆ ಮಹಾಕಾಳಿಯು ಹಾಡಹತ್ತಲು ನನ್ನ ಕಿವಿಯ ಮೇಲಾಗುವ ಅತ್ಯಾಚಾರವನ್ನು ಸಹಿಸಿಕೊಂಡು, ಒಂದು ಗಂಟೆಯವರೆಗೆ ಬುದ್ಧಿಹೀನಳಾಗಿ ಕುಳಿತಿದ್ದೆ. ಹಾಡು ಮುಗಿದ ನಂತರ ನಾನೇ ಎದ್ದು ಹೋಗಿ ಚಹಾ ತಂದುಕೊಟ್ಟೆ. ನಂತರ ಅಡಿಕೆಯ ಡಬ್ಬಿಯನ್ನು ಮುಂದೆ ಇಟ್ಟೆ, "ಅವ್ವಯ್ಯಾ ಈ ಶ್ರೀವರ್ಧನ ಅಡಿಕೆಯು ನನಗೆ ಬಲು ಸೇರಿಕೆ." ಎಂದು ಹೇಳುತ್ತಾ ಮೈನಾಳು ಅಡಿಕೆಯ ಡಬ್ಬಿಯನ್ನೇ ಬಾಯಿಗೆ ಬಗ್ಗಿಸಿಕೊಂಡು ಬಿಟ್ಟಳು.

ಅವಳು ಮನೆಯಿಂದ ಹೊರಟು ಹೋದ ಮೇಲೆ ನನಗೆ ಹಾಯ್ ಎನಿಸಿತು !

ಎರಡನೇ ದಿನದ ಗಮ್ಮತ್ತು ! ಏಯ್, ಅವ್ವಾ ಗುಲಾಬಿ ಹೂವ್ವನ್ನೇಕೆ ಕೊಯ್ಯುತ್ತೀ ?" ಎಂದು ಆಳುಮಗಳು ಮಂಜುಳಾ ಒದರಿದಳು.

" ಅಲ್ಲೇ ! ನಾನೇನು ನನ್ನ ಸಲುವಾಗಿ ಹೂ ಕೊಯ್ಯು ತ್ತೀನೇನು ? ದೇವರ ಪೂಜೆಗೆ ಹೂ ಬೇಕಾಗುತ್ತದೆ. ನಿಮ್ಮ ಲ್ಲೇನೂ ದೇವರಿಲ್ಲ. ಅಂದ ಮೇಲೆ ಹೂ ತೆಗೆದುಕೊಂಡು ನಿಮಗೇನು ಮಾಡಬೇಕಾಗಿದೆ ? ಅಂತ್ಹೇಳಿಯೇ ನನ್ನ ಮನೆ ದೇವರಿಗೆ ನಾಲ್ಕು ಹೂ ಹರಿಯುತ್ತೇನೆ. ಹತ್ತಿದರೆ ನಿಮಗೂ ನಿಮ್ಮ ಯಜಮಾನಿಗೂ ಪುಣ್ಯವೇ ಹತ್ತುತ್ತದೆ!'' ಎಂದು ಮೈನಾಬಾಯಿ ಸ್ಥಿತಪ್ರಜ್ಞಳಂತೆ ಹೇಳಿದ ಮಾತು ಕೇಳಿಬಂತು.

ಮುಂದೆ ನಾನು ಎಷ್ಟೋ ವೇಳೆಯವರೆಗೆ, ಬರಿದಾಗಿ ಉಳಿದ ನನ್ನ ಪ್ರೀತಿಯ ಗುಲಾಬಿ ಗಿಡದ ಕಡೆಗೆ ನೋಡುತ್ತ ಕುಳಿತಿದ್ದೆ !

ಒಟ್ಟಾರೆ ಆ ಹೆಣ್ಣುಮಗಳು ಬಹಳೇ ನಿಸ್ಸಂಕೋಚ ವೃತ್ತಿಯವಳಾಗಿ ಕಂಡಳು. ಪ್ರತಿದಿನ ನಮ್ಮ ಅಗಸರವಳು ಒಗೆಯುವ ಬಟ್ಟೆ ಒಯ್ಯಲು ಬಂದಾಗ "ಏ ಅವ್ವಾ, ಇಲ್ಲಿ ತೆಗೆದುಕೋ ನನ್ನ ಸೀರೆ, ನೀನು ನಿನ್ನ ಯಜಮಾನಿಯ ಎಷ್ಟೋ ಸೀರೆಗಳನ್ನು ಒಗೆಯುತ್ತಿ, ಅದರಲ್ಲಿ ಈ ನನ್ನ ಎರಡು ಸೀರೆಗಳೇನೂ ನಿನಗೆ ಭಾರವಾಗುವದಿಲ್ಲ." ಎಂದು ಹೇಳುವಳು. ಇವಳ ಈ ವರ್ತನದಿಂದ ಇವಳಿಗೆ, ಮುಖದ ಮೇಲೆ ಒಳ್ಳೊಳ್ಳೆಯ ಮಾತಾಡು; ಆದರೆ ಅಂತರ್ಯದಲ್ಲಿ ಕೊಳಕು ಬುದ್ಧಿಯಿದ್ದದ್ದು ನನಗೆ ಕಂಡು ಬರುತ್ತದೆ. ಇದೇ ಮಾತ್ರ ಪಾತ್ರೆಗಳ ಬಗ್ಗೆಯೂ.

ನಾನು 'ಬಿನಾಕಾ' ಗೀತಮಾಲೆ ಇಲ್ಲವೇ ರೇಡಿಯೋ ಸಿಲೋನ್ ಹಚ್ಚಿ ಕೇಳುತ್ತಿದ್ದರೆ, ವೈನಾಬಾಯಿಯು ಬಂದು 'ಇಶ್ಶ್ಯ್' ! ಇದೇನು ನಿಮ್ಮಂಥವರು ಕೇಳುವ ಹಾಡೇನು ? ಭಜನೆಯನ್ನು ಹಚ್ಚಿರಿ" ಎನ್ನುತ್ತಾಳೆ. ಆ ಮಾಯೆಗೆ ನಿದ್ರೆ ಬರುವವರೆಗೂ ಇಲ್ಲವೇ ರೇಡಿಯೋ ಬಂದಾಗುವವರೆಗೂ ನನಗೆ "ಜ್ಞಾನೋಬಾ ತುಕಾರಾಂ, ಜ್ಞಾನೋಬಾ ತುಕಾರಾಮ" ಕೇಳುವದಾಗುತ್ತಿತ್ತು.

ನಾನು ಅಲ್ಲಿಯ ನೀರನ್ನು ತರುತ್ತಿದ್ದರೆ "ಏನ್ರಿ, ಇಷ್ಟು ನೀರನ್ನು ನೀವು ತುಂಬ್ತೀರಿ ನನಗೂ ನಾಲ್ಕು ಬಕೆಟ್ ತಂದು ಸುರಿದು ಬಿಡಿರಲ್ಲಾ" ಎನ್ನುತ್ತಿದ್ದಳು ವೈನಾಬಾಯಿ. ಈಗ ನಾನು ಪ್ರತಿ ದಿವಸ ಅವಳಿಗೆ ನಾಲ್ಕು ಬಕೆಟ್ ನೀರು ತಂದು ಕೊಡಬೇಕು ಎಂಬದು ಅಲಿಖಿತ ದಂಡವೇ ಆಗಿ ಕುಳಿತಿದೆ.

ಸಂತೆಯಿಂದ ತರಕಾರಿ ತಂದೆನೆಂದರೆ ತೀರಿತು, ಅವಳು ಬಂದು ನಾಲ್ಕು ಹಸಿಮೆಣಸಿನಕಾಯಿ, ನಾಲ್ಕೇ ಕೋತಂಬರಿ ಕಡ್ಡಿಗಳನ್ನು ಒಯ್ಯುತ್ತಿದ್ದಳು. ಊಟವಾದೊಡನೆ ನಮ್ಮಲ್ಲಿರುವ ಶ್ರೀವರ್ಧನ ಅಡಿಕೆ ಪುಡಿ ತನಗೆ ಬಹಳ ಸೇರುತ್ತದೆ ಎಂದು ಹೇಳುತ್ತಾ ಬಂದು, ಆ ಅಡಿಕೆ ಪುಡಿ ತಿಂದು ಹೋಗುತ್ತಾಳೆ. ಊಟಕ್ಕೇ ನಮ್ಮ ಕಡೆಗೆ ಬರುವದಿಲ್ಲ, ಅದೇ ಒಂದು ದೊಡ್ಡ ಸುದೈವ ನನ್ನದು ! ಇನ್ನು ಕೈಗಡ ತೆಗೆದುಕೊಂಡು ಹೋದ ವಸ್ತು ? ಅದಂತೂ ಎಂದಿಗೂ ಬರುವದೇ ಕಾಣುವದಿಲ್ಲ. ನಾನೇ ತುಂಬಿದ ಅಂದವಾದ ಟೇಬಲ್ ಕ್ಲಾಥ್, ಪ್ರೀತಿಯಿಂದ ತಂದ ಗ್ಲಾಸುಗಳು ಇವುಗಳನ್ನು ಕೂಡ ಈ ಹೆಣ್ಣುಮಗಳು ತೆಗೆದುಕೊಂಡು ಹೋಗುತ್ತಾಳೆ. ಮತ್ತು ಹೊಲಸು ಮಾಡಿ ತಂದು ಕೊಡುತ್ತಾಳೆ. ಏನೇ ಇರಲೊಲ್ಲದ್ಯಾಕೆ ? ತಿರುಗಿ ತಂದು ಕೊಡುತ್ತಾಳೆ ಇದೇನು ಕಡಿಮೆಯಾಗಲಿಲ್ಲವಲ್ಲ ? ಉಪ್ಪಿನಿಂದ ಹಿಡಿದು ರವೆಯವರೆಗೆ, ಸಕ್ಕರೆಯಿಂದ ಹಿಡಿದು 'ಖವಾ'ದ ವರೆಗೂ ಅವಳಿಗೆ ಕೈಗಡ ತರಬೇಕಾಗುತ್ತದೆ. ಹಾಗೂ ತಿರುಗಿ ನನಗೆಂದಿಗೂ ಸಿಗುವದಿಲ್ಲ. ನನ್ನ ನನ್ನ ಸುಂದರವಾದ ಜಮಖಾನವನ್ನು ತನ್ನ ಹಸಿಯಾದ, ಕೆಸರಿನ ಕಾಲಿನಿಂದ ಬಂದು ತುಳಿದು ಹೊಲಸು ಮಾಡಿಬಿಟ್ಟಿದ್ದಾಳೆ. ಈ ಹೆಣ್ಣುಮಗಳಿಂದ ನನ್ನ ಮನೆ ಎಂದರೆ ಅಂಗಡಿ ಆಗಿದೆಯೋ ಹೇಗೆಂಬ ಭಾವನೆಯು ನನಗೆ ಬರುತ್ತಿದೆ. ದಿನ ವಿಡೀ ಈ ಹೆಣ್ಣುಮಗಳ ವಾಸವು ನಮ್ಮ ಮನೆಯಲ್ಲೇ ಇರುತ್ತದೆ. ಅದರಿಂದ ಮನೆಯಿದ್ದು ಸಹ ನನಗೆ ಬೇಡವೆನಿಸುತ್ತದೆ. ಮನೆಯಿದ್ದೂ ಸಹ ನಾನು ನಿರ್ವಾಸಿತಳಾಗಿದ್ದೇನೆ.

ಪರಮೇಶ್ವರನ ಈ ಜಗತ್ತಿನಲ್ಲಿ ನ್ಯಾಯವಿಲ್ಲವೆಂಬುದನ್ನು ಸಿದ್ಧ ಮಾಡಲಿಕ್ಕೆ ಸೃಷ್ಟಿಯಲ್ಲಿಯ ಉತ್ಪಾತವೇ ಏಕೆ ಬೇಕು ? ಅದನ್ನು ಸಿದ್ಧ ಮಾಡಲು ಇಂತಹ ನೆರೆಮನೆಗಳಿರುತ್ತವಲ್ಲಾ ! ಇಂತಹ ಹೆಚ್ಚಿನ ಸಂಭಾವಿತ ನೆರೆಯವರಿಗಿಂತ, ಜಗಳಗಂಟ ನೆರೆಯವರೇ ಪರವಾಗಿಲ್ಲ

ದೇವಾ ! ಭಗವಂತಾ !! ಪರಮೇಶ್ವರಾ !!! ನಿನ್ನ ಈ ಜಗತ್ತಿನಲ್ಲಿ ನ್ಯಾಯವೆಂಬುದಂತೂ ಇಲ್ಲವೇ ಇಲ್ಲ, ಆದರೂ ಸ್ವಲ್ಪವಿಲ್ಲ ಸ್ವಲ್ಪ ಉಳಿದಿದ್ದರೂ ಅದೂ ಇಂತಹದು.

## (ಕವನ)

ದೀನ ದರಿದ್ರರೂ ದೀಪವ ಹಚ್ಚಲಿ !
ಹಾಡುತ ಕುಣಿಯುತ ಹಬ್ಬವ ಮಾಡಲಿ !
ವರುಷಕ್ಕೊಮ್ಮೆ ಬರುವಾ ಹಬ್ಬವು ಸುರ-
ಳಿತ ಸಾಗಲಿ ಎಲ್ಲರೂ ನಲಿಯಲಿ !

ಕು. ಪುಷ್ಪಾ ಜೋಶಿ (ಬಾಗೇವಾಡಿ)




## ಸರ್ವಜ್ಞನ ಅಮರ ಸಂದೇಶ

"ಮಿಂಚಿನ ಬಳ್ಳಿ" ಪ್ರಕಟನೆಯಿಂದ ಪ್ರಕಟವಾದ ಕ್ರೌನ ಸಾಯಿಜಿನ ೩ ಪುಟದ ೧೫೦ ಪೇಜಿನ ಗದ್ಯ ಪದ್ಯಾತ್ಮಕ ಗ್ರಂಥ ಬರೆದವರು ದೇಶಪಾಂಡೆ ಮನೋಹರರಾಯರು ಎಂ.ಎ. ಬೆಲೆ ಉತ್ತಮ ಪ್ರತಿ ೨.೫೦, ಸಾಧಾ ಪ್ರತಿ ೨-೦-೦, ಮಿಂಚಿನ ಬಳ್ಳಿಯ ೩ನೇ ವರ್ಷದ ಕೊನೆಯ ಕುಡಿ ಸಂಪಾದಕರು ಹಾಗೂ ಪ್ರಕಾಶಕರು ಬಾರ್ಲಿ ಬಿಂದುಮಾಧವ, ಧಾರವಾಡ.

ಸರ್ವಜ್ಞನ ಅಮರವಾದ ಸಂದೇಶವು ಆವ ಕಾಲದಲ್ಲಿಯಾದರೂ ಪೂರ್ಣ್ಯವೇ ಜಾತ್ಯಾತೀತ ಭಾರತವಾಗಬೇಕೆಂಬ ಸದ್ಯದ ಜನತಾ ರಾಜ್ಯಧೋರಣೆಗೆ ಸರ್ವಜ್ಞನ ಸಂದೇಶವು ಸರ್ವತೋಮುಖ ಪ್ರಯೋಜನಕಾರಿಯಾಗಿರುದನ್ನು ಶ್ರೀ. ದೇಶಪಾಂಡೆ ಮನೋಹರರಾಯರು. ಒಳ್ಳೇ ಪರಿಶ್ರಮದಿಂದ ವಚನಗಳನ್ನು ಆಯ್ದುಕೊಂಡು ಕನ್ನಡ ವಾಚಕರ ಮುಂದೆ ಇರಿಸಿದ್ದಾರೆ. ಸಂಪೂರ್ಣ ಹೊತ್ತಿಗೆಯಲ್ಲಿ ಎರಡು ಭಾಗವಾಗಿ ವಿಂಗಡಿಸಿರುವರು ೧ನೇಯದು, ದುಂದುಭಿ ರವ. ೨ನೇಯದು ವಚನ ದುಂದುಭಿ, ಸರ್ವಜ್ಞನ ವಚನಗಳ ಆಧಾರದಿಂದಲೇ ಅವನ ಹೃದ್ಗತವನ್ನು ಶ್ರೀ. ದೇಶಪಾಂಡೆಯವರು ಕವಿಗಣ್ಣಿನಿಂದ ನೀರೀಕ್ಷಿಸಿ ವಿಮರ್ಶಾತ್ಮಕವಾಗಿ ೧ನೇ ಭಾಗದಲ್ಲಿ ವಿವೇಚಿಸಿದ್ದಾರೆ. ಪ್ರತಿಯೊಂದು ಭಾಗದಲ್ಲಿಯೂ ಐದು ಅಲೆಗಳಿವೆ. ಮೊದಲಿನ ಐದು ಅಲೆಗಳ ದುಂದುಭಿರವವು (ಧ್ವನಿಯು) ಓದುಗರ ಕುತೂಹಲವನ್ನು ಕೆರಳಿ ಹೃದಯ ದ್ರಾವಕವಾದ ಈ ರವವನ್ನು ಬೀರುವ(ವಚನ ದುಂದುಭಿಯನ್ನು)(೨ನೇ ಭಾಗವನ್ನು) ನೀರೀಕ್ಷಿಸಲು ಸಹಜವಾಗಿ ಹಚ್ಚುತ್ತಿದೆ. ನುರಿತ ಲೇಖಕರಾದ ಶ್ರೀ. ದೇಶಪಾಂಡೆಯವರ ವಿವೇಚನಾಚಾತುರ್ಯವೇ ಇದಕ್ಕೆ ಕಾರಣ.

ಎರಡನೇ ವಿಭಾಗದಲ್ಲಿ ಆಯ್ದುಕೊಂಡ ಸರ್ವಜ್ಞವಚನಗಳು ಸಾಮಾನ್ಯ ಜನಜೀವನಕ್ಕೆ ಜೀವಾಳದಂತಿವೆ. ನೈತಿಕ ಧಾರ್ಮಿಕ ಆಧ್ಯಾತ್ಮಿಕ ವಿವೇಚನೆಯನ್ನು ತಿಳಿಗನ್ನಡ ಕಿರಿಪದ್ಯದಲ್ಲಿ ಸರ್ವಜ್ಞನು ಜನರ ಮನ ಮೆಚ್ಚುವಂತೆ ಹೇಳಿದ್ದನ್ನು ಗ್ರಂಥಕರ್ತರು. ಒಳ್ಳೇ ಪರಿಶ್ರಮಪಟ್ಟು ಹುಡುಕಿತೆಗೆದಿದ್ದಾರೆ. ಸರ್ವಜ್ಞ ವಚನಗಳು ಅಸಂಖ್ಯವಾಗಿದ್ದು ಅದರ ನೆಲೆಯು ಪೂರ್ಣವಾಗಿ ಇನ್ನೂ ಸಂಶೋಧಕರಿಗೆ ಸಿಕ್ಕಿಲ್ಲ. ಸಿಕ್ಕವುಗಳಲ್ಲಿ ಸಾರವನ್ನು ತೆಗೆತೆಗೆದು ಸಂಕ್ಷಿಪ್ತವಾಗಿ ಮಾಡಲೆಳಸುವ ಈಗಿನ ವಾತಾವರಣಕ್ಕೆ ಶ್ರೀ. ದೇಶಪಾಂಡೆಯವರ ಪ್ರಯತ್ನವು ಅಚ್ಚುಮೆಚ್ಚಾಗುವದರಲ್ಲಿ ಸಂದೇಹವಿಲ್ಲ.

—ನಿರೀಕ್ಷಕ.

# ಭಾವ ಗೀತೆ

ಬಂತು ಬಂತು ಬಂತು ಧೈರ್ಯವಿಂದು ಮನಸಿಗೆ ॥
ಕಂತುಜನಕನಿಟ್ಟನಾವು ದೊರೆಯಿತಿಂದಿಗೆ॥ ॥ ಪಲ್ಲ ॥

ಕಲ್ಲು ಕಟ್ಟಿ ಶರಧಿಯೊಳಗೆ।
ಚಲ್ಲಿ ಕೊಟ್ಟ ಬ್ರಹ್ಮ ಕಟುಕ।
ನಲ್ಲೆ ? ಇಂಥವೆನಿತೊ ಗೈದ ಪಾಪವವನಿಗೆ।
ಸಲ್ಲಿತೆಂದೆ ಕೊಯ್ಸಿಕೊಂಡ ಶಿರವ ಮೊದಲಿಗೆ ॥೧॥

ಹಿರಿಯ ಮಗನು ಎಂದು ಇವಗೆ।
ಹಿರಿಯತನವ ಕೊಟ್ಟರಿಂತು।
ಕರುಣವಿಲ್ಲದೇನೊ ಮಾಳ್ಪನೆನ್ನುತವರಿಗೆ। ತನ್ನ।
ಸ್ಮರಣೆ ನಾವೆಯನ್ನು ಇಟ್ಟ ಹರಿ, ಭವಾಬ್ಧಿಗೆ ॥ ೨॥

ಇಟ್ಟ ನಾವೆ ಸಿಗುವ ತನಕ।
ರೂಟ್ಟಿಯೊಳಗೆ ಶಕ್ತಿಯನ್ನು।
ಕೊಟ್ಟ ಈಸಲೆನಗೆ ದೇವ ಜಾನಕೀಶನು। ಬಂಡೆ।
ಕಟ್ಟದಿರ್ದಕ ಜನ ನಮಿಪೆ ರಾಮವಿಠಲನು ॥ ೩ ॥

---

**ಧಾರವಾಡ ಜಿಲ್ಹಾ ಮಹಿಳಾ ಮಂಡಳ, ಧಾರವಾಡ**

**ಸೋದರಿಯರೆ,**

ಇದೇ ನವ್ಹಂಬರ ದಿನಾಂಕ ೫ ರಂದು ಮಧ್ಯಾನ್ಹ ೪ ಗಂಟೆಗೆ ಧಾರವಾಡ ಜಿಲ್ಹಾ ಮಹಿಳಾ ಮಂಡಳದಲ್ಲಿ ದೀಪಾವಳಿಯ ನಿಮಿತ್ತ ಸದಸ್ಯೆಯರಿಗೆಲ್ಲ ಆಟಗಳನ್ನೇರ್ಪಡಿಸಲಾಗಿದೆ.

**ಶ್ರೀಮತಿ ಎಸ್. ಫಿಲಪೋಜ,** B. A. B. T. DP. Ed DBE.

ಇವರ ನೇತೃತ್ವದಲ್ಲಿ ಜರಗುವವು. ಎಲ್ಲ ಮಹಿಳೆಯರಿಗೂ ಆಮಂತ್ರಣವಿದೆ.

ದಿನಾಂಕ ೧೪ ರಂದು ಮಧ್ಯಾನ್ಹ ೩ ಗಂಟೆಗೆ ಮಹಿಳಾಮಂಡಳದಲ್ಲಿ ಮಕ್ಕಳ ದಿನಾಚರಣೆಯನ್ನು ವಿಜೃಂಭಣೆಯಿಂದ ಆಚರಿಸಲಾಗುವದು. ಎಲ್ಲ ಮಕ್ಕಳಿಗೂ ಮಿಠಾಯಿಯನ್ನು ಹಂಚಲಾಗುವದು.

ಇವೆರಡೂ ಕಾರ್ಯಕ್ರಮಗಳಲ್ಲಿ ವಿವಿಧವಿನೋದಾವಳಿಗಳಿವೆ.

ಭಾವಗೀತೆ, ನೃತ್ಯ, ಕೋಲಾಟ, ನಾಟಕ ಮುಂತಾದವುಗಳಿವೆ.

ಪಾವಟೆಯವರ ವಜ್ರೋತ್ಸವ ನಿಧಿಗೆ ಮಹಿಳಾ ಮಂಡಳದ ದೇಣಿಗೆಯನ್ನು ಕೊಡಬೇಕೆಂದು ನಿರ್ಧರಿಸಲಾಗಿದ್ದು ೧ ರೂ. ಅದಕ್ಕೂ ಹೆಚ್ಚಿಗೆ ಕೊಡುವವರು ' ಕಾರ್ಯದರ್ಶಿನಿ ಮಹಿಳಾ ಮಂಡಳ ' ಇವರ ಕಡೆಗೆ ದಿನಾಂಕ ೫ ರ ಒಳಗಾಗಿ ಮುಟ್ಟಿಸಬೇಕು. ಸದಸ್ಯೆಯರಾಗಲಿಚ್ಛಿಸುವವರು ತಮ್ಮ ಹೆಸರುಗಳನ್ನು ಕಾರ್ಯದರ್ಶಿನಿ ಮಹಿಳಾ ಮಂಡಳ ಎಂಬ ವಿಳಾಸಕ್ಕೆ ತಿಳಿಸಬೇಕು.

**ಶ್ರೀಮತಿ ಸರೋಜಿನಿ ಮಹಿಷಿ**
ಅಧ್ಯಕ್ಷಿಣಿಯರು

**ಸೌ ವಿಜಯಾ ಕುಲಕರ್ಣಿ**
**,, ಸಾವಿತ್ರಿ ಜೋಶಿ**
ಗೌರವ ಕಾರ್ಯದರ್ಶಿನಿಯರು.

**ವಿ. ಸೂ :—** ದಯವಿಟ್ಟು ತಮ್ಮ ಸದಸ್ಯತ್ವದ ಹಣವನ್ನು ತರಬೇಕಾಗಿ ಬಿನ್ನಹ.

# ಅಕ್ಕನ ಪೆಟ್ಟಿಗೆ

---

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ, ಅಕ್ಕನ ಪೆಟ್ಟಿಗೆ ' ಗೆ ಓಲೆಗಳನ್ನು ಕಳುಹಿಸಬಹುದು; ಮತ್ತು ನೀವೇ ಬರೆದ ಸಣ್ಣ ಕತೆ, ಕವನ, ಆಟ ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ. ನೀವೇ ತೆಗೆದ ಅಂದವಾದ ಚಿತ್ರವಿದ್ದರೆ ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು ' ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲಾ ಬರೆದು, ಪಾಕೇಟಿನಲ್ಲಿ ಹಾಕಿ, ಕಳಿಸಿಬಿಡಿ. ' ಅಕ್ಕನ ಪೆಟ್ಟಿಗೆ'ಗೆ ಈಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರುವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರದ (ಬ್ಲಾಕ) ಕಳಿಸಿದರೆ,ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದ ಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

**ಅಕ್ಕನ ಪೆಟ್ಟಿಗೆ**

**ವೀರಮಾತಾ ಕಾರ್ಯಾಲಯ,**

**ವನಿತಾಸೇವಾ ಸಮಾಜ ಧಾರವಾಡ.**

**ಧಾರವಾಡ.**

---

**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು ....................................................................

ವಯಸ್ಸು ಮತ್ತು ಓದುತ್ತಿರುವ ಇರಗತಿ ....................................................................

ಅಲ್ಪ ಪರಿಚಯ ....................................................................

ಪೂರ್ಣ ವಿಳಾಸ ....................................................................

....................................................................(ಮನೆ ನಂಬರ ಸಹಿತ)....................

೨ ಆಣೆ ಸದಸ್ಯತ್ವದ ಫೀಯನ್ನು ಕೊಟ್ಟು ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು ಇಂದಿನಿಂದ ನಾನು ಸದಸ್ಯನಾ/ಳಾಗಿದ್ದೇನೆ.

ತಾರೀಖು ಸಹಿ

## ಈ ತಿಂಗಳ ಹೊಸ ಸದಸ್ಯರು

೧ ಸಂಗಮೇಶ್ವರ ಸಿದ್ರಾಮಪ್ಪ ಜೈನಾಪೂರ ವಯಸ್ಸು ೧೪ ಓದುವ ತರಗತಿ ೧೦ ನೇ ಇಯತ್ತೆ. ಅಭ್ಯಾಸದ ಕಡೆಗೆ ವಿಶೇಷ ಅಭಿರುಚಿ. ಪತ್ತೆ ಎಸ್. ಸಿ. ಜೈನಾಪೂರ ವನೆ ನಂಬರ ಶಾಲೆಯ ಮುಖ್ಯಾಧ್ಯಾಪಕರು. ಅಥಣಿ ಮ. ನ. ೧೪೪೮.

೨ ಅರ್ಜುನ ಧರ್ಮಣ್ಣಾ ಪರವಾಪೂರ, ವಯಸ್ಸು ೧೨ ಓದುವ ತರಗತಿ ೮ ನೇ ಇಯತ್ತೆ ಗಾಯನದಲ್ಲಿ ಓದುವದರಲ್ಲಿ ಹೆಚ್ಚು ಅಭಿರುಚಿ. ವಿಳಾಸ ಜನತಾ ಹಾಯಸ್ಕೂಲ ಕಲಘಟಗಿ ಜಿ. ಧಾರವಾಡ

೩ ಅನಂತ ರಾಮಚಂದ್ರ ಶಾಸ್ತ್ರೀಸೂರಿ, ವಯ ೧೧ ಓದುವ ತರಗತಿ ೭. ವಿಳಾಸ— ಪೋ. ಕರ್ಕಿ ವ್ಹಾಯಾ ಕುಮಠಾ ಮುಕ್ಕಾಂ ನಡುಬಿಚ್ಚಿ.

೪ ಜಯಶ್ರೀ. ಶ್ರೀಪಾದರಾವ ಶೆಟ್ಟಿ ಬ್ಯಾಡಿಗಿ ವಯ ೮ ಓದುವ ತರಗತಿ ೩ ಕತೆ ಬರೆಯುವದರಲ್ಲಿ ಚಿತ್ರ ತೆಗೆಯುವದ ರಲ್ಲಿ ಆಸಕ್ತಿ. ವಿಳಾಸ— ಕನ್ನಡ ಕನ್ಯಾಸ್ಕೂಲ ಬ್ಯಾಡಗಿ.

## ಸದಸ್ಯರ ಪತ್ರಕ್ಕೆ ಉತ್ತರ

೧ ಎಮ್. ಆರ್. ಗುರವ ತಮ್ಮ ನಿನ್ನ ವಿಜಯಾ ದಶಮಿಯ ಬನ್ನಿ ಬಂಗಾರದ ಓಲೆಯು ತಲುಪಿತು. ಅತ್ಯಾನಂದನಾಯಿತು. ಓರಿಗೆಯ ಗೆಳೆಯರೆಲ್ಲರೂ ಅಕ್ಕರತೆಯಿಂದ ಅಕ್ಕನಿಗೂ ಬಂಗಾರವನ್ನು ಸಲ್ಲಿಸಿದ್ದು ಗೆಳೆಯರ ಬಳಗಕ್ಕೆನೇ ಭೂಷಣಾಸ್ಪದವಾಗಿದೆ. ನಿಮ್ಮ ಬಳಗಕ್ಕೆಲ್ಲ ಅಕ್ಕನ ಶುಭಾಶೀರ್ವಾದಗಳು.

ನಿಮ್ಮ ಹಿರಿಯಕ್ಕ.

೨ ಪು. ಆ. ಕೊಡಕೊಳ್ಳು, ಹಾವೇರಿ ತಮ್ಮಾ, ನಿನ್ನ ಪತ್ರವು ತಲುಪಿತು. ಹಿಂದೆ ಸದಸ್ಯನಿದ್ದದ್ದು ಪುನಃ ಹೊಸ ವರುಷಕ್ಕೆ ಮತ್ತೆ ತೆಗೆದುಕೊಂಡಿರಬಹುದು. ಅದೇನು ಅಷ್ಟೊಂದು ಮಹತ್ವದ ವಿಷಯವಲ್ಲ. ನಿನ್ನ ನಗೆಹನಿಗಳು ಅಷ್ಟೊಂದು ಸರಿಯಾಗಿಲ್ಲ. ಕಾರಣ ಮುದ್ರಿಸಿಲ್ಲ. ಚುಟುಕು ಗಳನ್ನು ಸಣ್ಣ ಲೇಖನ ಕವಿತೆಗಳನ್ನು ಕಳಿಸು ಮುದ್ರಿಸಿಲ್ಲ ವೆಂದು ಉತ್ಸಾಹಗುಂದಬೇಡ.

ನಿನ್ನ ಮಮತೆಯ
ಹಿರಿಯಕ್ಕ

೩ ನಬಿ ಸಾಹೇಬ ಮೌಲಾಅಲಿ ನದಾಫ. ತಮ್ಮಾ ನಿನ್ನ ಪತ್ರ ತಲುಪಿತು. ಸದಸ್ಯನಾಗಲು ೨ ಆಣೆ ಪೋ. ಸ್ಟಾಂಪು ಗಳನ್ನು ಇಟ್ಟು ಫಾರ್ಮು ತುಂಬಿ ಕಳುಹಬೇಕು. ಫಾರ್ಮು ವೀರಮಾತೆಯ ಸಂಚಿಕೆಯಲ್ಲಿ ಮುದ್ರಿತವಾದದ್ದು ಇದೆ. ನೋಡಿಬೇರೆ ಕೈ ಬರಹದಲ್ಲಿ ತುಂಬಿದರೂ ನಡೆಯುವದು.

ನಿನ್ನ ಹಿರಿಯಕ್ಕ

## ಒಗಟಗಳು

(೧) ೧+೨= ಎರಡನೆಯವರೆಂದೂ
೩+೨+= ಗಿಡವೆಂದೂ ಅರ್ಥದ
ಶಬ್ದವೇನು ? ಯಾವದು ?

* * * *

(೨) ೧+೨= ಹಾಡುವವನೆಂದು
ಅಥವಾ ಕವಿತೆಗಳನ್ನು ಕಟ್ಟುವವನೆಂದೂ ಸಂಧಿ ಬಿಡಿಸಿದರೆ ಕವಿಗಳಲ್ಲಿ ಶ್ರೇಷ್ಠನಾದವನೆಂದು ಅರ್ಥದ ಶಬ್ದ ಯಾವದು ?

* * * *

(೩) ೧=೨ ಎಂದೂ
೨+೩= ೧೦ ಎಂದೂ
ಹಾಗೂ ಎಲ್ಲ ಕೂಡಿಸಿ ಅರ್ಥಮಾಡಿದರೆ ೧೨ ಎಂದು ಅರ್ಥ ವಾಗುವ ಶಬ್ದ ಯಾವದು ?

* * * *

(೪) ಇದು ಒಂದು ರಾಶಿ. ಇದರ ಇನ್ನೊಂದು ಅರ್ಥ ಕೊಡವೆಂದೂ ಆದರೆ ಆ ಶಬ್ದ ಯಾವದು?

* * * *

(೫) ಇದು ಒಂದು ರಾಶಿ.
೧+೩= ಗಿಡ ಎಂದೂ
೨+೩= ಆಕಳ ಮರಿ ಎಂದೂ
ಅರ್ಥವಾಗುವ ರಾಶಿ ಯಾವದು ?

* * * *

(೬) ೧+೨= ಹೊಲಸು ಎಂದು
೧+೩= ಕೂಸು ಎಂದೂ
೧+೨+೩= ನಿದ್ರೆಮಾಡು, ಎಂದು
ಅರ್ಥದ ಶಬ್ದ ಯಾವದು ?

* * * *

(೭) ಇದರಲ್ಲಿ ದಿನಾಂಕ, ವಾರ, ಪಳ,
ಪಂಚ+ಅಂಗ= ಮುಹೂರ್ತ ಇರುತ್ತವೆ.
ಇದನ್ನು ಬಿಡಿಸಲಾಗಿ ೧+೩= ೫ ಎಂದೂ

೩+೪=ಶರೀರ ಎಂದೂ
ಅರ್ಥ
೧+೨+೩=೫ ಅಂಗಗಳಿಂದ ಕೂಡಿದ ವಸ್ತು ಎಂದು ಅರ್ಥ ಆದರೆ ಅದಾವದು ?

* * * *

(೮) ಇದರ ಅರ್ಥ "ಜಗತ್ತು" ಎಂದೂ ಇನ್ನೊಂದು ಅರ್ಥ "ಸಂಸಾರ" ಎಂದೂ ಅಲ್ಲದೆ ಒಂದುವಾರ ಪತ್ರಿಕೆಯ ಹೆಸರೂ ಇದೆ. ಆದರೆ ಅದಾವುದು ?

* * * *

(೯) ಇದು ಮೂಲ ಸಂಸ್ಕೃತ ಶಬ್ದ.
೧+೩= ಮಾತಾಡದವನು ಎಂದು ಒಂದು ಅರ್ಥ ಇದೆ. ಆದರೆ ೧+೨+೩= ಇಲಿ ಎಂದು ಕನ್ನಡದಲ್ಲಿ ಅರ್ಥವಾಗುತ್ತದೆ. ಅದಾವುದು ?

* * * *

(೧೦) ೧+೩= ರಕ್ಷಕ ಎಂದೂ
೧+೨= ಬರೆಯುವ ಕರಿ ವಸ್ತುವೆಂದೂ
೧+೨+೩= ಒಂದು ಅಡ್ಡ ಹೆಸರು ಎಂದು ಅರ್ಥವಾಗುವ ೨ ಅಕ್ಷರಿನ ಶಬ್ದ ಯಾವದು ?

* * * *

(೧೧) ಹಿಂದಿಯಲ್ಲಿಯು ಅರ್ಥಗಳಿಂದ ಬರೆದಿದಿದ್ದೇನೆ.)
೧+೨+೩+೪= ಮುತ್ತು ಎಂದೂ (ಜವಾಹರ) ಹಿಂದಿ
೫+೬= ಕೆಂಪು ಎಂದು (ಲಾಲ) (ಹಿಂದಿ)
೧+೬= ನೀರು ಎಂದೂ (ಕನ್ನಡದಲ್ಲಿ)
೩+೪= ದೇವರು ಎಂದೂ (ಕನ್ನಡ)
ಎಲ್ಲವನ್ನೂ ಕೂಡಿಸಿದರೆ ಅಂದರೆ ೯ ಅಕ್ಷರಗಳ ಅರ್ಥ ಇಡೀ ಹಿಂದುಸ್ತಾನದ ಮುಖ್ಯ ಸಚಿವರೆಂದೂ, ಶಾಂತಿದೂತರೆಂದು ಪಸಿದ್ಧಿ ಪಡೆದಿರುವರು. ಆದರೆ ಅವರಾರು ?

* * * *

(೧೨) ೧+೨= ಇಚ್ಛೆ ಎಂದೂ
೩+೪= ಕೊಡುವದು.
೧+೨+೩+೪= ಇಚ್ಛಿಸಿದ್ದನ್ನು ಕೊಡುವಂತಹರು ಎಂದರ್ಥ ಆದರೆ ಅದಾವುದು ? ಮತ್ತು ಮಾಸಿಕ ಪತ್ರ ಇದೆ.

* * * *

(೧೩) ೧+೨= ಪ್ರಜೆಗಳೆಂದೂ
೩+೪= ಒಡೆಯನೆಂದೂ
೧+೨+೩+೪= ದೇವರು ಎಂದೂ ಅರ್ಥವಾಗುವ ೪ ಅಕ್ಷರಿನ ಶಬ್ದ ಯಾವದು ?

ಕು. ಎಮ್. ಆರ್. ಗುರವ

# ಕೋಲಿನ ಹಾಡು

ಶ್ರೀ ರನ್ನದ ಕೋಲಿ ಚಿನ್ನದ ಕೋಲಿ
ಕೋಲೆಂದು ಪಾಡಿರೆ. ಈ ಊರ ಈರಣ್ಣನ ನ್ಯಾಲಿ
ಸೈ, ಸೈ, ಅಂತರಲೆ ಹಾರುವದು ಹದ್ದು,
ಈ ಊರ ಬಾಲೇರು ತುಂಬ್ಯಾರ ಕೋಲಿಗೆ ಮುದ್ದು
ಈ ಊರ ಹನುಮಪ್ಪ ಬರತಾನ ಎದ್ದು ॥ ೧ ॥

ಕೈಲಾಸದೊಳು ಶಿವ ಗಿರಿಜೆಯರಿದ್ದು
ಅವರ ಪಾದದೊಳು ನಮ್ಮೂರ ಬಸವಣ್ಣನಿದ್ದು
ಪಾದದೊಳಿರುವ ನಮ್ಮೂರ ಬಸವಣ್ಣ
ಬರತಾನ ಎದ್ದು ॥ ೨ ॥

ನಮ್ಮೂರ ಯಲಿವಾಳ ಗ್ರಾಮವೇ ಮುದ್ದು
ನಾರಿಯರು ಎಲ್ಲಾರು ಮಿಂದು !
ಕೋಲಿನಾಟಕ ಬರತಾರ ಇಂದು
ಹುಣ್ಣಿಮೆ ದಿವಸ ಕೂಡುವದಿದೊಂದು ಸಂದು ॥ ೩ ॥

**'ರಾಮಲಿಂಗ ಪೂಜಾರ'**
**ಯಲಿವಾಳ (ಧಾರವಾಡ)**

---

# ಚಂದಿರ

ನೀಲಿಯ ಬಾನಲಿ ನೋಡದ ತೆರೆಯಲಿ
ಓಡುತಲಿರುವನು ಚಂದಿರ !
ತಾರೆಗಳೊಡನೆ ಕೆಲೆಯುತ ನಲಿಯುತ
ಬೆಳಕನು ಬೀರುವ ಸುಂದರ !!
ಕುಂದದೆ ಕುಗ್ಗದೆ ಬೆಳ್ನೊರೆ ಎರೆಯುತ !
ತೇಲುವ ಚಕ ಚಕ ಚಂದಿರ !
ಜಗದ್‌ಜನಮನ ಅಂದವ ಸೂಸುತೆ ॥
ಕಾಂತಿಯ ಕೋಮಲ ಸುಂದರ !!
ಹುಣ್ಣಿವೆಯೆಂದರೆ ಹೂವಿನ ರಾಶಿಯು
ಬಾನಿನ ಬನದಲಿ ಚೆಲ್ಲರಿದು !

ಸಾಗರದೆದೆಯನು ಉಕ್ಕಿಸುತಿರುವನು !
ಮಂಗಳ ಮೂರುತಿ ಸೊಗವೆರೆದು !
ಥಳಥಳ ಹೊಳೆಯುತ ಮಿರಿ ಮಿರಿ ಮಿಂಚುತ
ರೋಹಿಣಿಯರಸನು ಚಂದಿರ !
ಚಚ್ಚಕೋರಕೆ ಚೇತನವೀಯುತ !
ಹಾಡಲು ಹಚ್ಚಿದ ಚಂದಿರ !
ಇಂದುಧರನ ಮುಡಿಗಂಧವ ಬೆರೆಸಿದ
ಮಂದಸ್ಮಿತನಾ ಚಂದಿರ !
ನನ್ನೆದೆ ಪೀಠದಿ ಮೂಡಿಸಿ ಭಾವದ
ಚೇತನಕೆಳೆದನು ಸುಂದರ !

**ಕು. ಲಕ್ಷ್ಮೀಬಾಯಿ ನಿಡವಣಿ ಹಾಲಕುಸೂಗಲ್ಲ**

## ಸೂ ಚ ನೆ

* ಲೇಖನಗಳು, ಅಸ್ಪಷ್ಟ ರೀತಿಯಲ್ಲಿ ಬರೆದವು ಬರುತ್ತಿದ್ದು, ಮುದ್ರಣ ಕಾರ್ಯಕ್ಕೆ ತುಂಬಾ ತೊಂದರೆಯಾಗುತ್ತದೆ. ಲೇಖಕರು ಸುಸ್ಪಷ್ಟ ರೀತಿಯಲ್ಲಿ ಬರೆದ ಲೇಖಗಳನ್ನು ಸಂಪಾದಕರ ವಿಳಾಸಕ್ಕೆ ಕಳುಹಿಸಬೇಕು.

* ಇನ್ನೂ ವರೆಗೂ ಚಂದಾ ಹಣವನ್ನು ಕಳಿಸದ ಚಂದಾ ದಾರರು ಅದಷ್ಟು ಗೂಡಲೆ ಕಾರ್ಯದರ್ಶಿ 'ವೀರಮಾತೆ' ವನಿತಾ ಸೇವಾ ಸಮಾಜ, ಧಾರವಾಡ. ಈ ವಿಳಾಸಕ್ಕೆ ಚಂದಾಹಣವನ್ನು ಕಳುಹಿಸಿಕೊಡಬೇಕು.

* ಚಂದಾದಾರರು, ತಮ್ಮ ವಿಳಾಸ ಬದಲಾದಲ್ಲಿ, ಹಾಗೆ ತಿಳಿಸಿದರೆ, 'ವೀರಮಾತೆ' ಯು ತ್ವರಿತವಾಗಿ ಮುಟ್ಟುವಂತೆ ದಕ್ಷತೆ ವಹಿಸಲಾಗುವದು.

* ಲೇಖಕರು ಅಥವಾ ವಾಚಕರು, ಲೇಖ ಕಳಿಸುವದಾಗಲಿ ಉಳಿದ ಯಾವದೇ ಪತ್ರವ್ಯವಹಾರ ಮಾಡುವಾಗ ತಮ್ಮ ವಿಳಾಸವನ್ನು ಸ್ಪಷ್ಟ ರೀತಿಯಲ್ಲಿ ಬರೆದು ತಿಳಿಸಲು ಮರೆಯಬಾರದು.

* ಹೊಸದಾಗಿ ಚಂದಾದಾರರಾಗಬಯಸುವವರು, ಚಂದಾ ಹಣವನ್ನು ಮೊದಲು ಕೊಟ್ಟು ಕಳಿಸಿದರೆ, ಮಾಸಿಕವನ್ನು ಅವರ ವಿಳಾಸಕ್ಕೆ ಕಳಸುವತ್ತ ಗಮನಿಸಲಾಗುವದು.

* ಸೋದರ, ಸೋದರಿಯರು, ಅಕ್ಕನಟ್ಟಿಗೆಯ ವಿಭಾಗದಲ್ಲಿ ಬರುವ ಸ್ಪರ್ಧೆಗಳಿಗೆ ಉತ್ತರಗಳನ್ನು ಪ್ರತಿತಿಂಗಳ ೧೦ ನೇ ತಾರೀಖಿನ ಒಳಗಾಗಿ ಕಳುಹಿಸಬೇಕು.

* * * * * *

---

Reg. No. B 6410 ... ೧೯೫೫ ನವೆಂಬರ ಬೆಲೆ: ೩೭ ನಯೆ ಪೈಸೆ

'ಸಮಾನಾಧಿಕಾರ' ಕೃತಿಯಲ್ಲಿ ಬರಬೇಕಿದ್ದರೆ
ಮಹಿಳೆಯರ 'ಬೌದ್ಧಿಕ ಉನ್ನತಿ' ಅತ್ಯವಶ್ಯವಾದುದು
ಜ್ಞಾನ, ಮನೋರಂಜನೆಗಾಗಿ ವಿವಿಧ ಲೇಖಗಳಿದ್ದ
ಪ್ರಗತಿಪರ ವಿಚಾರಗಳಿಂದೊಡಗೂಡಿದ
ಮಹಿಳೆಯರ ಮಾಸಪತ್ರಿಕೆ



ಸಂಪಾದಕರು: [illegible] ಸರೋಜಿನಿ ಮಹಿಷಿ,
ಎಂ. ಎ., ಎಲ್‌ಎಲ್. ಬಿ.

ಸ್ತ್ರೀಯರ ವಿಕಾಸಕ್ಕಾಗಿ ಮೀಸಲಾಗಿಟ್ಟ

**ಮಾಸಪತ್ರಿಕೆ**

ವಾರ್ಷಿಕ ಚಂದಾಹಣ ೫ ರೂಪಾಯಿ
ಬಿಡಿಸಂಚಿಕೆ [illegible] ನ. ಪೈ. ಮಾತ್ರ

ಮನೆಮನೆಯಲ್ಲಿ [illegible] ಗಳನ್ನು
ಬೀರಬಲ್ಲ ಕನ್ನಡ ಮಾಸಪತ್ರಿಕೆ

[ ಮುಂಬಯಿ, ಮೈಸೂರು ಮತ್ತು ಮದ್ರಾಸ
ಸರಕಾರಗಳಿಂದ ಮಾನ್ಯತೆ ದೊರೆತಿದೆ.]

To,
ಶ್ರೀ.



ಮುದ್ರಕರು : ಶ್ರೀಯುತ ಕುಲಕರ್ಣಿ ರಾಮರಾಯರು
ಸ್ಥಳ : ವನಿತಾ ಪ್ರಿಂಟಿಂಗ ಪ್ರೆಸ್, ಧಾರವಾಡ
ಪ್ರಕಾಶಕರು : ಶ್ರೀ. ಲ. ರಂ. ಪುರಾಣಿಕ
ಸ್ಥಳ : ವನಿತಾ ಸೇವಾ ಸಮಾಜದಲ್ಲಿಯ ಕಾರ್ಯಾಲಯ, ಧಾರವಾಡ





ಸಂಪುಟ ೮ ]

ಡಿಶಂಬರ ೧೯೫೯

[ ಸಂಚಿಕೆ ೭


# 'VEERAMATE' WOMEN'S VOICE

The Largest Circulated

KANNADA MONTHLY

---


ರಜಿಸ್ಟ್ರೇಶನ್ ಆಫ್ ನ್ಯೂಜ ಪೇಪರ್ಸ (ಸೆಂಟ್ರಲ್) ರೂಲ್ಸ ೧೯೫೬ರ ಅನೇ ನಿಯಮಕ್ಕೆ ಸಂಬಂಧಿಸಿದಂತೆ "ವೀರಮಾತೆ" ಮಾಸಪತ್ರಿಕೆಯ ಸ್ವಾಮಿತ್ವ ಮತ್ತು ಇತರ ವಿಷಯಗಳ ಬಾಬತ ವಿವರ:—

| | |
|---|---|
| ೧. ಪ್ರಕಾಶನ ಸ್ಥಳ— | ವನಿತಾ ಸೇವಾ ಸಮಾಜ ಧಾರವಾಡ. |
| ೨. ನಿಯಮಿತ ಕಾಲಿಕತೆ— | ಮಾಸಪತ್ರಿಕೆ |
| ೩. ಮುದ್ರಕರ ಹೆಸರು— | ರಾಮರಾವ ಕುಲಕರ್ಣಿ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವೀರಮಾತೆ ಕಾರ್ಯಾಲಯ ಧಾರವಾಡ |
| ೪. ಪ್ರಕಾಶಕರ ಹೆಸರು— | ಲ. ರಂ. ಪುರಾಣಿಕ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವನಿತಾ ಸೇವಾ ಸಮಾಜ ಧಾರವಾಡ |
| ೫. ಸಂಪಾದಕರ ಹೆಸರು— | ಸರೋಜನಿ ಮಹಿಷಿ ಎಮ್. ಎ. ಎಲ್ಎಲ್. ಬಿ. |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ಲೈನಬಝಾರ ಧಾರವಾಡ |
| ೬. ಪತ್ರಿಕಾ ಸ್ವಾಮಿತ್ವ ವಿಳಾಸ— ಮತ್ತು ಬಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ— | ಕಾರ್ಯಕಾರಿ ಮಂಡಳ ವನಿತಾ ಸೇವಾ ಸಮಾಜ ಧಾರವಾಡ |

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣಿಕನಾದ ನಾನು ಮೇಲಿನ ವಿವರಗಳಲ್ಲಿಯ ಎಲ್ಲ ವಿಷಯಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣಿಕ.

# ಪರಿವಿಡಿ

# ವನಿತಾ ಸೇವಾ ಸಮಾಜದಲ್ಲಿ ದೀಪಾವಳಿ ಸಮಾರಂಭ

ಧಾರವಾಡ, ದಿ. ೩-೧೧-೫೯ : ಜೀವನವನ್ನು ಬೆಳಗಿಸಿ ಹಸನುಗೊಳಿಸುವ ಹಬ್ಬ ದೀಪಾವಳಿ. ಅದು ಆಶ್ವಿಜ ವದ್ಯ ೧೪ ( ನರಕ ಚತುರ್ದಶಿ ಎಂದರೆ ನರಕಾಸುರನ ವಧೆ ಆದ ದಿನ ) ರಿಂದ ಪ್ರಾರಂಭವಾಗುತ್ತದೆ. ಹಿಂದಿನ ದಿನದ ರಾತ್ರಿಯಲ್ಲಿಯೇ ನೀರು ತುಂಬುವ ಹಬ್ಬದಿಂದ ದೀಪಾವಳಿಯ ಹಬ್ಬದ ಸಮಾರಂಭವು ಪ್ರಾರಂಭವಾಗುತ್ತದೆ. ಮುಂದೆ ನಸುಕಿನಲ್ಲಿ ಆರತಿ ಬೆಳಗುವದು, ತೈಲಾಭ್ಯಂಗ ಸ್ನಾನ, ಗುರುಹಿರಿಯರಿಗೆ ವಂದನೆ ಇಷ್ಟದೇವತಾರ್ಚನೆ, ಫಲಾಹಾರ, ಸವಿರುಚೀನ ಭೋಜನ ಮುಂತಾದುವು ಮನೆಮನೆಗಳಲ್ಲಿ ಉತ್ಸಾಹದಿಂದ ನಡೆಯುವವು. ಮುಂದೆ ಅಮಾವಾಸ್ಯೆಯಂದು ಶ್ರೀ ಲಕ್ಷ್ಮೀಪೂಜೆ. ಇದನ್ನು ಮನೆಗಳಲ್ಲಿ ಅಲ್ಲದೆ ವೃತ್ತಿ ವ್ಯವಸಾಯಗಳ ಅಂಗಡಿಗಳಲ್ಲೂ ವಿಜೃಂಭಣೆಯಿಂದ ಆಚರಿಸಲಾಗುವದು. ಮರುದಿನ ಎಂದರೆ ಕಾರ್ತಿಕ ಶುದ್ಧ ಪ್ರತಿಪದೆ (ಬಲಿಪಾಡ್ಯ) ಪಾಂಡವರನ್ನು ಪೂಜಿಸಲಾಗುವದು. ಅಂದು ದನದ ಹಟ್ಟಿಯನ್ನು ಶೃಂಗರಿಸಿ ಪೂಜಿಸಲಾಗುವದು. ದನಕರುಗಳನ್ನು ಎತ್ತುಗಳನ್ನು ಶೃಂಗರಿಸಿ ಅವುಗಳೊಡನೆ ಆಟ ಮೇಲಾಟಗಳಲ್ಲಿ ಹಳ್ಳಿಗರು ಅಮಿತಾನಂದವನ್ನು ಹೊಂದುತ್ತಿರುವದು ಕಣ್ಣಿಗೊಂದು ಹಬ್ಬ. ಮುಂದೆ ಪಂಚಮಿಯ ವರೆಗೆ ಜನರು ಮೃಷ್ಟಾನ್ನಗಳನ್ನು ಯಥಾನುಸಾರವಾಗಿ ಸೇವಿಸಿ ಉತ್ಸಾಹಗಳಲ್ಲಿ ನೆಲೆಯುವರು. ಪಟ್ಟಣಗಳಲ್ಲಿ ಈಚೆ ಬಾಣಬಿರುಸುಗಳನ್ನು ಸುಟ್ಟು ನಲಿವರು. ದೀಪಾವಳಿ ಹಬ್ಬವನ್ನು ಹಳ್ಳಿಗರು ಹಟ್ಟಿಹಬ್ಬ ಎನ್ನುವದು ಯಥಾರ್ಥವಾಗಿದೆ. ಅಂತು ದೀಪಾವಳಿಯ ಹಬ್ಬದ ಹಿನ್ನೆಲೆ ಎಂತೇ ಇರಲಿ ಉಳಿದೆಲ್ಲ ಭಾರತರಾಷ್ಟ್ರೀಯ ಹಬ್ಬಗಳಂತೆಯೇ ಶಾಸ್ತ್ರೀಯವಾಗಿದ್ದು ಜೀವನೋತ್ಸುಕತೆಯನ್ನು ಸೂಚಿಸುವದಾಗಿದೆ. ಆದ್ದರಿಂದ ಭಾರತದಲ್ಲೆಲ್ಲ ಸಾರ್ವತ್ರಿಕವಾಗಿದೆ. ಹಿಂದೀಯರಲ್ಲದೆ ಉಳಿದವರೂ ದೀಪಾವಳಿ ಹಬ್ಬದಲ್ಲಿ ತಮ್ಮ ಮಂಡಿ (ಅಂಗಡಿ) ಗಳನ್ನು ಅಲಂಕರಿಸಿ ಅತಿಥಿಗಳನ್ನು ಸತ್ಕರಿಸುವದನ್ನು ನಾವು ಕಾಣಬಹುದು. ಮೊಹರಮ್‌ನಲ್ಲಿ ಹಿಂದಿಯರು ಮುಹಮ್ಮದೀಯರಂತೆಯೇ ' ಅ(ಎ)ಲ್ಲಾ' ದೇವರಿಗೆ ನಡೆದುಕೊಳ್ಳುವದು ಜಗಜ್ಜನಿತವಿದೆ. ಈ ಬಗೆಯ ಸಾಮರಸ್ಯವು ಭಾರತೀಯ ಜೀವನದ ವೈಶಿಷ್ಟ್ಯವಾಗಿದೆ.

ಎಂದಿನಂತೆ ಈ ಬಾರೆಯೂ ದೀಪಾವಳಿ ಹಬ್ಬವನ್ನು ವನಿತಾಸೇವಾ ಸಮಾಜದಲ್ಲಿ ಕ್ರಮಪ್ರಾಪ್ತವಾಗಿ ಆಚರಿಸಲಾಯಿತು. ಈ ಸಮಯದಲ್ಲಿ ಧಾರವಾಡಕ್ಕಾಗಮಿಸಿದ್ದ ಖನ್ನೂರ ಗಣಪತಿ ಮಹಾರಾಜರ ಶಿಷ್ಯಂದಿರಾದ ಬೆಂಗಳೂರಿನ ಶ್ರೀ ಸಂಪತ್‌ಕುಮಾರ ಅಯ್ಯಂಗಾರ ಅವರಿಂದ ಭಗವನ್ನಾಮ ಕೀರ್ತನ ಕಾರ್ಯಕ್ರಮವನ್ನು ಅಕ್ಕನ ತದಿಗೆ ಅಂದು ವನಿತಾ ಸೇವಾ ಸಮಾಜದಲ್ಲಿ ಏರ್ಪಡಿಸಲಾಗಿತ್ತು. ಶ್ರೀ ಮಂಗಳ ಗೌರಿಯ ಮಹಾತ್ಮ್ಯವನ್ನವರು ತಮ್ಮ ಕೀರ್ತನದಿಂದ ಹೃದ್ಯವಾಗಿ ಬಣ್ಣಿಸಿದರು. ಆದಿಶಕ್ತಿಯಾದ ಮಂಗಳ ಗೌರಿಯು ವಚನಕ್ಕೆ ಸಿಕ್ಕಿ ಅಷ್ಟಾವಕ್ರನನ್ನು ವರಿಸುವಂತಾಗಿ ಅವಳು ಲೋಕ ಕಲ್ಯಾಣವನ್ನು ಗೈದ ಬಗೆಯನ್ನು ವೇದ್ಯವಾಗಿ ಅವರು ಅರುಹಿದರು.

## ಶ್ರೀ ತುಲಸೀ ಸಮಾರಂಭ

ಕಾರ್ತಿಕ ವದ್ಯ ದ್ವಾದಶಿಯು ಶ್ರೀರಾಧಾಕೃಷ್ಣದಾಮೋದರ ಶ್ರೀ ತುಲಸೀ ಲಗ್ನದ ಹಬ್ಬವು. ಇದು ನಮ್ಮ ನಾಡಿನಲ್ಲಿ ಹಿಂದುಗಳು ಮನೆಮನೆಯಲ್ಲಿ ಆಚರಿಸುವ ಹಬ್ಬವಾಗಿದೆ. ನಮ್ಮ ಹಿರಿಯರು ಪೌರಾಣಿಕ ಹಿನ್ನೆಲೆಯೊಂದಲ್ಲದೆ ಆರೋಗ್ಯವಿಜ್ಞಾನವನ್ನು ಗಮನಿಸಿ ಋತುಮಾನಗಳಿಗನುಸಾರವಾಗಿ ಹಬ್ಬ ಹುಣ್ಣಿಮೆಗಳ ಸಮಾರಂಭಗಳ ಆಚರಣೆಯನ್ನು ಮನೆಮನೆಗೆ ರೂಢಿಸಿರುವದು ವೇದ್ಯವಾಗಿದೆ. ಈಚೆಗಿನ ತಲೆಮಾರುಗಳವರಾದ ನಾವೂ ಅವುಗಳ ಮಹತಿಯನ್ನು ಮರೆತುಸಾಗುತ್ತಿದ್ದೇವೆ. ಆರೋಗ್ಯಕಲ್ಪವಾದ ತುಲಸೀ ವೃಕ್ಷವನ್ನಂತೂ ಮನೆಮನೆಗೆ ವೃಂದಾವನದಲ್ಲಿರಿಸಿ ಪ್ರತಿನಿತ್ಯ ಪೂಜಿಸುವದನ್ನು ವಿಧಿಸಿರುವರು ನಮ್ಮ ಹಿರಿಯರು. ಹಬ್ಬಹುಣ್ಣಿಮೆಗಳ ಸದಾಚರಣೆಯಿಂದ ನಮ್ಮ ಜೀವನದಲ್ಲಿ ಒಂದು ಗುರಿ ಮತ್ತು ಅದಕ್ಕಾಗಿ ಶಿಸ್ತು ಸಂಯಮ ತ್ಯಾಗ ಬುದ್ಧಿಗಳು ರೂಪುಗೊಂಡು ನೆಲೆಗೊಳ್ಳುತ್ತಿವೆ ಎಂಬುದನ್ನು ನಾವಿಂದು ಮರೆಯುತ್ತಲಿದ್ದೇವೆ ಆದ್ದರಿಂದ ನಮ್ಮ ಹಿರಿಯರು ರೂಢಿಸಿದ್ದ ಹಬ್ಬಗಳ ಇಂಗಿತದ ಅರಿವಾಗಲೆಂದು ಸುಮಾರಾಗಿ ವನಿತಾಸೇವಾ ಸಮಾಜದಲ್ಲಿ ಎಲ್ಲ ಹಬ್ಬಗಳನ್ನು ಆಚರಿಸಲಾಗುತ್ತಿದೆ. ಅಂತೆಯೆ ಕಾರ್ತಿಕ ಬಹುಳ ದ್ವಾದಶಿ (೧೨-೧೧-೫೯) ಅಂದು ಶ್ರೀ ತುಲಸೀ ಲಗ್ನಸಮಾರಂಭವನ್ನು ಆಚರಿಸಲಾಯಿತು.

ಆ ಕಾಲಕ್ಕೆ ಶ್ರೀ ದಾದಾ (ಲ. ರ. ಪುರಾಣಿಕ) ಅವರು ತುಲಸಿಯ ಉಪಯುಕ್ತತೆ, ಔನ್ನತ್ಯ, ಮಹಿತಿಗಳನ್ನು ತಿಳಿಸಿ ಹೇಳಿ ಮನೆಮನೆಗಳಲ್ಲಿ ತುಳಸಿಯ ವೃಂದಾವನವನ್ನು ನಿರ್ಮಿಸುವದರ ಅವಶ್ಯಕತೆಯನ್ನು ಒತ್ತಿ ಹೇಳಿದರು.

## ಸ್ತ್ರೀ ಧರ್ಮದ ಬಗ್ಗೆ ಗೋಷ್ಠಿ

ದಿನಾಂಕ ೧೬-೧೧-೫೯ ರಂದು ತತ್ವಾನ್ವೇಷಣ ಸಂಘಗಳ (ಕನ್ನಡ ರಾಜ್ಯದ) ನೇತಾರರಾದ ಶ್ರೀ ರಾಚಪ್ಪನವರು ಸ್ತ್ರೀ ಧರ್ಮದ ಬಗೆಗೆ ಉಪನ್ಯಾಸವನ್ನೂ ಮರುದಿನ ಗೋಷ್ಠಿಯನ್ನೂ ನಡೆಯಿಸಿಕೊಟ್ಟರು. ವಿವರಗಳನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವದು.

# ವೀರಮಾತೆ







**ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಾದ**
**ಕನ್ನಡ ಮಾಸಪತ್ರಿಕೆ**

ಸಂಪುಟ ೮ | ಡಿಶಂಬರ | ಸಂಚಿಕೆ ೭


## ಸಂಪಾದಕೀಯ

ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಶ್ರೀ ಪಾವಟೆಯವರ ಷಷ್ಟ್ಯಬ್ಧಿ ಪೂರ್ತಿಯ ಸಮಾರಂಭದಲ್ಲಿ ಭಾಗವಹಿಸಲೆಂದು ಆಗಮಿಸಿದ ರಾಷ್ಟ್ರಾಧ್ಯಕ್ಷ ಶ್ರೀ ರಾಜೇಂದ್ರ ಪ್ರಸಾದರನ್ನು ಕನ್ನಡ ಜನತೆ ಹಾರ್ದಿಕ ಸಂಭ್ರಮದಿಂದ ಸ್ವಾಗತಿಸಿತು. ತಮ್ಮ ಅನಾನುಕೂಲತೆಗಳೇನಿದ್ದರೂ, ಅವರು ಇಲ್ಲಿ ವಿವಿಧ ಸಂಸ್ಥೆಗಳ ಉತ್ಸವಗಳಲ್ಲಿ ಭಾಗವಹಿಸಿದರು. ಅರ್ಧ ಶತಮಾನದ ಸಾಮಾಜಿಕ, ರಾಜಕೀಯ ಮೂಲ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದ ಅವರು ಮಹಿಳೆಯರ ಪ್ರಗತಿ, ಶಿಕ್ಷಣವನ್ನು ಕುರಿತು ಹೇಳಿದ ಮಾತುಗಳು ಗಮನಾರ್ಹವಾಗಿವೆ. ದೇಶದ ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಲಕ್ಷ್ಯ ಪೂರೈಸಬೇಕಾದುದು ಅತ್ಯಗತ್ಯವಾಗಿದೆ. ಸ್ತ್ರೀ ಶಿಕ್ಷಣಕ್ಕಾಗಿ ಶಿಕ್ಷಣ ಪದ್ಧತಿಯಲ್ಲಿ ಅನೇಕರ ಅಭಿಪ್ರಾಯಗಳು ಅನೇಕವಾಗಿವೆ. ಬೇರೆ ಬೇರೆಯವರು ಬೇರೆ ಪದ್ಧತಿಗಳನ್ನು ಪ್ರತಿಪಾದಿಸುತ್ತಾರೆ. ಜೀವನ ನಿರ್ವಹಣೆಗೆ ಸ್ತ್ರೀಯರನ್ನು ಹೇಗೆ ಅಣಿಗೊಳಿಸುವದೆಂಬ ಬಗ್ಗೆ ಅನೇಕ ವಿಚಾರಗಳಿವೆ. ಮಾನವನ ಉನ್ನತಿಗಾಗಿ, ಮನೆಯಲ್ಲಿಯ ಸೌಖ್ಯಕ್ಕಾಗಿ ಸ್ತ್ರೀಯರಿಗೆ ಶಿಕ್ಷಣ ಅಗತ್ಯವೆಂಬ ಮಾತನ್ನು ಮಾತ್ರ ಎಲ್ಲರೂ ಒಪ್ಪುತ್ತಾರೆ. ಮಗುವು ತಾಯಿಯ ಹಾಲಿನ ಜೊತೆಯಲ್ಲಿ ಅವಳಿಂದ ಸುಂದರ, ಸುಸಂಸ್ಕೃತ ವಿಚಾರಗಳನ್ನು ಪಡೆಯಬೇಕಾದರೆ ಸ್ತ್ರೀಯರಿಗೆ ಶಿಕ್ಷಣ ಅಗತ್ಯ.

ಸ್ತ್ರೀಯರಿಗೆ ದೊರೆಯಬೇಕಾದ ಉಚ್ಚ ಶಿಕ್ಷಣವು ಸ್ತ್ರೀಯೋಚಿತ ಕರ್ತವ್ಯ ನಿರ್ವಹಣೆಗೆ ಸಹಾಯವಾಗುವಂತಿರಬೇಕು. ವ್ಯಕ್ತಿ ಹಾಗೂ ಸಮಾಜ ಎರಡಕ್ಕೂ ಒಳ್ಳೆಯದನ್ನು ಮಾಡುವಂತಹ ಶಿಕ್ಷಣವೇ ನಿಜವಾದ ಶಿಕ್ಷಣವಾದ್ದರಿಂದ, ಕುಟುಂಬ ಕುಟುಂಬಗಳ ಗುಂಪೇ ಸಮಾಜವೆನಿಸುವದರಿಂದ, ಕುಟುಂಬದಲ್ಲಿನ ಮುಖ್ಯಪಾತ್ರ ಸ್ತ್ರೀಯೇ ಇರುವದರಿಂದ, ಸ್ತ್ರೀಯು ಸುಶಿಕ್ಷಿತಳಾಗಿ ತನ್ನ ಕುಟುಂಬವನ್ನು ಒಳ್ಳೇ ರೀತಿಯಿಂದ ನಡೆಸಿಕೊಳ್ಳುವ ಶಿಕ್ಷಣ ಪಡೆದಲ್ಲಿ ಸಮಾಜಕ್ಕೆ ಒಳ್ಳೆಯ ರೂಪು ಬಂದೇ ಬರುತ್ತದೆ. ಕೇವಲ ಅಕ್ಷರಜ್ಞಾನದಿಂದ ಕೆಲಸವಾಗುವದಿಲ್ಲ. ಅನೇಕ ನಿರಕ್ಷರಿಗಳೂ ಸಹ ತಿಳುವಳಿಕೆಯುಳ್ಳವರಿದ್ದಾರೆ. ಶಿಕ್ಷಣವು ಅವರ ತಿಳುವಳಿಕೆಗೆ ಹೆಚ್ಚಿಗೆ ಚಾಲನೆ ಕೊಟ್ಟು, ಅದನ್ನು ವಿಶಾಲವಾಗಿಸಲು ಸಹಾಯವಾಗುವಂತಹದ್ದಿರಬೇಕು ಅಷ್ಟೆ.

# ಆರ್ಥಿಕ ಸ್ವಾತಂತ್ರ್ಯದಿಂದ ಸ್ತ್ರೀಯು ಸ್ವತಂತ್ರಳಾಗಬಲ್ಲಳೇ?

ಹೆಂಡಿರು ದುಡಿವ ಹಣದಿಂದ ಜೀವಿಸುವ ಗಂಡಂದಿರೂ ಇರುವರು. ಆದರೆ, ಸ್ತ್ರೀಯು ಅದನ್ನು ತಡೆಯಲಾರಳು! ಕುಟುಂಬಕ್ಕಾಗಿ ದೊಡ್ಡ ತ್ಯಾಗಮಾಡುವ, ಸಹಿಸುವ ಸ್ತ್ರೀಗೆ–ಇನ್ನೂ ಶ್ರೇಯಸ್ಸು ಬಂದಿಲ್ಲ! ಅವಳಿಗೆ ಸ್ವಾತಂತ್ರ್ಯವಿದೆಯೇ? ಅಸ್ತಿತ್ವವಿದೆಯೇ? ಆರ್ಥಿಕ ಸ್ವಾತಂತ್ರ್ಯವು ಸ್ವಾವಲಂಬನವೆನಿಸಬಲ್ಲುದೇ?

**ಲೇಖಿಕಾ : ರಾಧಾಕುಮಾರಿ, ಧಾರವಾಡ**

ಯಾವ ತೆರನಾಗಿ ನಮ್ಮ ಸ್ತ್ರೀ ಜೀವನವು ರಚಿಸಲ್ಪಡಬೇಕೆಂದು ನಮ್ಮ ವಿಚಾರವಿದೆಯೋ ಅದೇ ತೆರದಂತೆ ನಮ್ಮಲ್ಲಿ ಧೈರ್ಯವೂ ಬೇಕು. ಪ್ರಾಮಾಣಿಕವಾದ ತಮ್ಮ ಮತವನ್ನು ಹೊರಗೆಡಹಲು ಎಳ್ಳಷ್ಟೂ ಹಿಂಜರಿಯಬಾರದು. ಜೀವನದಲ್ಲಿ ಯಾವುದಕ್ಕೂ ಹೆಗಲು ಕೊಡುವ ಸಮಯ ಬಂದಲ್ಲಿ, ಅಲ್ಲಿಂದ ಜಾರಬಾರದು. ಆ ಧೈರ್ಯವೂ ನಮ್ಮಲ್ಲಿ ಬೇಕು. ಆ ಧೈರ್ಯವನ್ನೆ ಇಂದಿನ ವರೆಗೂ ನಾವು ತೋರಿಸದಿದ್ದುದಕ್ಕೆ ನಮ್ಮ ಹಲವು ಕಾರ್ಯಗಳು ಸಫಲವಾಗಲಾರದಾಗಿವೆ.

ಕಲಿಸಿದ ಮಾತು ಮತ್ತು ಇಟ್ಟ ನೀರು, ಎಷ್ಟು ದಿನದ ವರೆಗೆ ನಿಲ್ಲಬಹುದು? ಸ್ತ್ರೀಯು ಸ್ವತಃ ಸ್ವಾತಂತ್ರ್ಯವನ್ನು ಪಡೆದು ಜೀವನದ ಝುಂಝಾಟದಲ್ಲಿ ಬಂದ ಕಷ್ಟಗಳನ್ನು ನಗುಮೊಗದಿಂದ ಎದುರಿಸಲು ಶಕ್ಯಳಾಗಬೇಕು. ಅಂಥ ಧೈರ್ಯವು ನಮ್ಮಲ್ಲಿ ಬಂದರೆ ಆಗ ನಮ್ಮ ಹಾದಿಯನ್ನು ಯಾರೂ ಅಡ್ಡಗಟ್ಟಲಾರರು.

ಸ್ವಾತಂತ್ರ್ಯವನ್ನು ಪಡೆಯಲು ನಾವು ಯಾರಲ್ಲಿಯೂ ಯಾಚಿಸಬೇಕಾಗಿಲ್ಲ. ನಮ್ಮ ಹೋರಾಟದಲ್ಲಿ ನಾವೇ ಎದ್ದು ನಿಂತು ಹೋರಾಡಬೇಕು; ಪರ್ಯಾಯದಿಂದ ನಾವು ಸ್ವಾವಲಂಬನ ಸಾಧಿಸಬೇಕು. ಯಾವುದೇ ರಾಷ್ಟ್ರವಿರಲಿ ಸಮಾಜವಿರಲಿ, ಅಥವಾ ವ್ಯಕ್ತಿಯೇ ಇರಲಿ,–ಸ್ವಾವಲಂಬನದ ಮೊದಲನೇ ಪಾಠವನ್ನು ಕಲಿಯಲು ಬೇಕು. ಪರಾವಲಂಬನವೆಂದರೆ ಸ್ವನಾಶ ಎಂದರ್ಥ. ಈ ಮಾತಿನ ಅರ್ಥವನ್ನು ನಮ್ಮ ಜನರು ಪೂರ್ಣತಿಳಿದಿಲ್ಲ. ಪರಾವಲಂಬನದ ಎಚ್ಚರಿಕೆಯು ನಮ್ಮಲ್ಲಿ ಎಲ್ಲಿಯ ವರೆಗೆ ಉಳಿದಿಲ್ಲವೋ, ಬೇರೆಯವರ ಅನ್ನಬಟ್ಟೆಗಳಿಗೆ ನಾವು ಎಲ್ಲಿಯ ವರೆಗೆ ದಾಸಾನುದಾಸರಾಗಿರುವೆವೋ ಅಲ್ಲಿಯ ವರೆಗೆ ನಮ್ಮ ಮೇಲೆ ಅನ್ಯಾಯವು ನಡೆದೇ ನಡೆಯುವುದು—ಎಂಬುದನ್ನು ನಾವು ನಮ್ಮ ಇತಿಹಾಸದಿಂದ ಕಂಡುಕೊಂಡಿಲ್ಲವೇ? ಇಂಥ ಸಮಯದಲ್ಲಿ ಸ್ತ್ರೀಯರು ತಮ್ಮ ಕಣ್ಣುಗಳನ್ನು ಮುಚ್ಚಿ ಕುಳಿತುಕೊಳ್ಳುವುದು ಸಾಧ್ಯವೇ? ನಮ್ಮನ್ನು ಈ ನಿದ್ದೆಯಿಂದ ಎಚ್ಚರಿಸುವವರಾರು? ಘೋರವಾದ ಗರ್ಜನೆಯನ್ನಾದರೂ ಮಾಡಿ ಈ ನಿದ್ದೆಯಿಂದವರನ್ನು ಎಚ್ಚರಿಸಬೇಡವೇ? ಇಲ್ಲದಿದ್ದರೆ ಆ ನಿದ್ದೆಯಲ್ಲೇ ಅವರ ಕೊನೆಯಾಗದೇ?

ನನ್ನ ಈ ಎಲ್ಲ ಮಾತಿನ ಅರ್ಥವೇನಂದರೆ ಇಷ್ಟೆ: ಎಲ್ಲಿಯವರೆಗೆ ನಮ್ಮ ವಿಷಯಕವಾದ ಪೂರ್ಣ ಹೊಣೆಗಾರಿಕೆಯನ್ನು ಪುರುಷರ ಮತ್ತು ಸಮಾಜದ ಮೇಲೆ ಹೊರಿಸಿ ನಡೆಯುವೆವೋ ಅಲ್ಲಿಯ ವರೆಗೆ ನಾವು ಸ್ವಾವಲಂಬಿಗಳಾಗಲು ಸಾಧ್ಯವಿಲ್ಲ. ನಾವು ಏನನ್ನೂ ಮಾಡಲಾರೆವಾದರೆ, ನಾವು ಪೂರ್ಣ ಅಬಲೆಯರೇ ಆಗಿದ್ದರೆ, ಬೇರೆಯವರು ಎಷ್ಟು ದಿನಗಳ ವರೆಗೆ ನಮ್ಮನ್ನು ಕೈಹಿಡಿದು ನಡೆಸಬಲ್ಲರು?

ನಮಗೆ ಸರಿಯಾದ ಹಕ್ಕುಬೇಕೆಂದು ಹೋರಾಡುವೆವು. ಆದರೆ, ಟ್ರಾಮಿನಲ್ಲಾಗಲಿ, ಗಾಡಿಯಲ್ಲಾಗಲಿ ಸ್ಥಳಸಿಗುವ ಕ್ಷುಲ್ಲಕವಾದ ಮಾತಿನ ವಿಷಯ ಸಹ ಪುರುಷರು ತಮ್ಮ ಸ್ಥಳವನ್ನು ಖಾಲಿಮಾಡಿ ಸ್ತ್ರೀದಾಕ್ಷಿಣ್ಯವನ್ನು ತೋರಿಸಬೇಕೆಂದು ನಮ್ಮ ಸ್ತ್ರೀಯರ ಅಪೇಕ್ಷೆ ಇರುತ್ತದೆ.

ಈ ವರೆಗೆ ಸ್ತ್ರೀಯು ಅನೇಕ ಅನ್ಯಾಯಗಳನ್ನು ಸಹಿಸಿದಳು. ತನ್ನ ಕುಟುಂಬಕ್ಕಾಗಿ ಅತಿ ದೊಡ್ಡದಾದ ತ್ಯಾಗವನ್ನು ಮಾಡಿದಳು. ಆದರೆ, ನಮ್ಮ ದುರ್ದೈವದಿಂದ ಆ ತ್ಯಾಗಕ್ಕೆ ಶ್ರೇಯಸ್ಸು ಬರಲಿಲ್ಲ. ಅದರ ಮಹತ್ವವನ್ನು ಯಾರೂ ತಿಳಿಯಲು ಶಕ್ಯರಾಗಲಿಲ್ಲ. ಅವಳಿಗೆ ಅಸ್ತಿತ್ವವಿದೆ; ಸ್ವಾತಂತ್ರ್ಯ ಬೇಕು. ಅದನ್ನೇ ನಾವು ಇಂದು ಗಳಿಸಬೇಕಾಗಿದೆ.

ಅಬಲೆಯರ ಸ್ವಾರ್ಥತ್ಯಾಗದ ಕಡೆಗೆ ಸಮಾಜದ ಲಕ್ಷ್ಯವಿದೆಯೇ? ಧನವಂತರು ಒಂದು ವೇಳೆ ಯಾವುದಾದರೊಂದು ಸಂಸ್ಥೆಗೆ ಒಂದು ಸಾವಿರ ರೂಪಾಯಿಗಳನ್ನು ಕೊಟ್ಟ ಪಕ್ಷದಲ್ಲಿ ಅವರ ಸತ್ಕಾರವು ಆಗುವುದು ಸಹಜವೇ ಇದೆ; ಆದರೆ, ದೇಶಕ್ಕಾಗಿ ಯುದ್ಧದಲ್ಲಿ ಮರಣಹೊಂದಿದ ಸೈನಿಕರ ಶವವನ್ನು ಸಹ ತೆಗೆಯಲು ಶಕ್ಯವಿಲ್ಲ. ಈ ಸತ್ಯವನ್ನು ನಮ್ಮ ಕಣ್ಣಿನಿಂದ ದೂರೀಕರಿಸಬಹುದೇ? ದೇಶಭಕ್ತಿಯ ವಿಷಯವಾಗಿ ಆ ಧನವಂತನಿಂದ ಅಪ್ಪಿತಪ್ಪಿಯಾದರೂ ಉಚ್ಚಾರವು ಬರಲಾರದು. ಆದರೆ, ಬಡವನೊಬ್ಬನು ಎಷ್ಟೇ ದೇಶಭಕ್ತನಿರಲಿ, ದೇಶಕ್ಕಾಗಿ ತನ್ನ ಪ್ರಾಣವನ್ನೇ ನೀಡಿರಲಿ, ದೇಶಕ್ಕಾಗಿ ತನ್ನ ಕುಟುಂಬವೇ ನಾಶವಾಗಗೊಟ್ಟಿರಲಿ— ಅವನ ದೇಶಭಕ್ತಿಯ ಮಹತ್ವವು ಭಿಕಾರಿಯು ರಾಜ್ಯದಾನ ಮಾಡಿದಂತೆ ಆಗುತ್ತದೆ.

ಕೇವಲ ಆರ್ಥಿಕ ಸ್ವಾತಂತ್ರ್ಯ ಎಂದರೆ ಸ್ವಾವಲಂಬನವಲ್ಲ. ಆರ್ಥಿಕ ಸ್ವಾವಲಂಬನವು ಸ್ತ್ರೀಯ ಅನೇಕ ಆಸಕ್ತಿಯನ್ನು ದೂರೀಕರಿಸುತ್ತದೆ; ಅದ್ದರಿಂದಲೇ ಅದರ ಮಹತ್ವವಿದೆ. ದುಡ್ಡನ್ನು ಗಳಿಸುವ ಸ್ತ್ರೀಯು ತನ್ನ ಕುಟುಂಬದ ಆರ್ಥಿಕ ದೃಷ್ಟಿಯಿಂದ ಸ್ವರೂಪವನ್ನು ಧರಿಸಬಲ್ಲಳೆಂಬುದು ನಿಜವಿದೆ. ಆದರೆ, ಮನಸ್ಸಿನಿಂದ ಅವಳು ದುರ್ಬಲಳಿದ್ದರೆ ಆ ಹಣದ ಉಪಯೋಗವನ್ನು ಅವಳು ಸ್ವಂತದ ಕಲ್ಪನೆಯಂತೆ ಸಹ ಮಾಡಲು ಅಶಕ್ಯಳಾಗುವಳು

ಹಲವು ಗಂಡಸರಿಗೆ ಜೂಜು, ಸಟ್ಟಾ, ಮೊದಲಾದ ಚಟಗಳು ಇರುತ್ತವೆ. ಸ್ವಂತದ ಕಷ್ಟದಿಂದ ಅವರು ಹಣವನ್ನು ಗಳಿಸರು. ಹೆಂಡತಿಯು ದುಡಿದು ತಂದ ಹಣವನ್ನು ತೆಗೆದುಕೊಂಡು ಹೋಗುವವರಿದ್ದಾರೆ, ತಮ್ಮ ಸುಖಕ್ಕಾಗಿ! ಇನ್ನು ಮುಂದೆ ಸ್ತ್ರೀಯರ ಮುಂದೆ ಇಂತಹ ಸಂಗತಿಗಳು ಬರಲಾಗದು. ತನ್ನ ಹಣವನ್ನು ಪತಿಯು ತೆಗೆದುಕೊಂಡು ಹೋಗುವುದನ್ನು ಸ್ತ್ರೀಯು [illegible] ಬೇಕು, ಅದು ನ್ಯಾಯವೂ ಆಗದು. ಆದರೆ ಕೇವಲ ಆರ್ಥಿಕ ಸ್ವಾತಂತ್ರ್ಯದಿಂದ ಧೈರ್ಯವು ಮೈಯಲ್ಲಿ [illegible]. ಅದಕ್ಕೆ ಮನಸ್ಸಿನ ಬಲವೂ ಬೇಕು. ನಮಗೆ ಸಹ ಅದರಿಂದ ಅನ್ಯಾಯವು ಆಗಬಾರದು. ಈ ಭಾವನೆಯು ಸ್ತ್ರೀಯ ಅಂತರಂಗದಲ್ಲಿ ನೆಲೆಸಿರಬೇಕು.

ಬುದ್ಧಿಯುಳ್ಳ ಅನೇಕ ಜನರು ಜಗತ್ತಿನಲ್ಲಿ ಹಿಂದೆ ಬೀಳುತ್ತಾರೆ. ಏಕೆಂದರೆ, ಅವರಿಗೆ ಮನಸ್ಸಿನ ದುರ್ಬಲತೆ ಇರುತ್ತದೆ. ತನ್ನ ನಿಜವಾದ ಮತ್ತು ಶಕ್ಯವಿರುವ ಮಾತುಗಳನ್ನು ಎದೆ ಬಿಚ್ಚಿ ಧೈರ್ಯವಾಗಿ ಜನರಲ್ಲಿ ಹೇಳಬೇಕಾಗುವುದು ಇದಕ್ಕೆ ಪ್ರಾಮಾಣಿಕತನವೂ ಸಹಕಾರಿಯಾಗಬೇಕು. ಜಗತ್ತಿನ ಪ್ರತಿಯೊಬ್ಬ ಮನುಷ್ಯ ಪ್ರಾಣಿಗೆ ಅನ್ನ, ವಸ್ತ್ರ, ನೀರು, ಸಂಸಾರಿಕ ಸುಖ ದೊರಕಿಸಿಕೊಳ್ಳುವ ಹಕ್ಕು ಇದೆ. ಅವರು ಬುದ್ಧಿಯಿಂದ ದುರ್ಬಲರಿರಲಿ, ಅಥವಾ ಸಬಲರಿರಲಿ, ಎಲ್ಲರಿಗೂ ಸಂಸಾರದಲ್ಲಿ ಅನ್ನ–ವಸ್ತ್ರಗಳ ಪೂರೈಕೆಯಾಗಲೇಬೇಕು

ನಾವು ನಮ್ಮ ಮನಸ್ಸಿಗೆ ಆರ್ಥಿಕ ಶಿಕ್ಷಣ ಕೊಡುತ್ತಲಿದ್ದೇವೆ. ಅದರಂತೇ ಬೇರೆ ಶಿಕ್ಷಣವನ್ನೂ ಕೊಡಬೇಕು. ಅದು ಯಾವುದು ತಿಳಿಯಿತೇ?— ಸ್ತ್ರೀಯರ ಮತ್ತು ಪುರುಷರ ಹಕ್ಕು ಬಾಧ್ಯತೆಗಳು.

ಸ್ತ್ರೀಯ ಮೇಲೆ ಮಾತೃತ್ವದ ಜವಾಬ್ದಾರಿ ಇದೆಯೆಂಬುದರಿಂದ ಅವಳು ಭೋಗ ವಸ್ತುವಾಗಿಯೇ ಉಳಿಯಲಾರಳು. ಅವಳು ಸದಾ ಅಬಲೆಯೆಂದೇ ಸಮಾಜದಿಂದ ತಿಳಿಯಲ್ಪಡಬಾರದು. ಈ ಬಿಕ್ಕಟ್ಟನ್ನು ಬಿಡಿಸಬೇಕಾದರೆ, ಅವಳು ಸ್ವತಃ ಕಾರ್ಯಕರ್ತಳಾಗುವ ಹಾದಿಯು ಬೇಕು. ಅದಕ್ಕವಳು ಉತ್ತಮವಾದ ಶಿಕ್ಷಣವನ್ನು ಪಡೆಯಲೇಬೇಕು. ಹಾಗಾದರೆ ಅವಳೇ ಪುರುಷರಿಗಿಂತಲೂ ಅಧಿಕ ದುಃಖಿಯಾಗುವ ಕಾರಣವು ಸಹ ಉಳಿಯಲಾರದು.

ಆದರೆ, ಆ ಮಾತಿನಲ್ಲಿ ನಾವೆಲ್ಲರೂ ಅರ್ಧಮರ್ಧರಾಗಿ ಕುಳಿತುಕೊಂಡಿದ್ದೇವೆ. ಇದಕ್ಕೆ ಮುಖ್ಯ ಕಾರಣವೆಂದರೆ, ನಮ್ಮ ಜೀವನದತ್ತ ನೋಡುವ ವಿಶಾಲ ದೃಷ್ಟಿಯೂ ಪ್ರಾಮಾಣಿಕತೆಯೂ, ನಿಸ್ವಾರ್ಥ ಮತ್ತು ನ್ಯಾಯವೂ ಇಲ್ಲದಿರುವದು ಒಂದು ವೇಳೆ ಹುಡುಗಿಯು ಬುದ್ಧಿಯುಳ್ಳವಳಿದ್ದರೂ ಅವಳು ತನ್ನ ಜಾಣತನದ ಉಪಯೋಗವನ್ನು ತನ್ನ ಸಮಾಜಕ್ಕಾಗಿ, ರಾಷ್ಟ್ರದ ಸಲುವಾಗಿ ಮಾಡಲು ಅವಳ ಮಹತ್ವಾಕಾಂಕ್ಷೆಯು ಉಳಿದಿಲ್ಲ. ಇಂತಹ ಮಹತ್ವಾಕಾಂಕ್ಷೆಯನ್ನು ಹಿಡಿದರೆ, ಸ್ವಂತದ ಪ್ರಾಮಾಣಿಕ ಮತದ ಆಗ್ರಹವನ್ನು ಹಿಡಿದು ಕುಳಿತುಕೊಂಡರೆ, ಅದು ಸಮಾಜದಲ್ಲಿ ಜರಗಲು ಒಮ್ಮೊಮ್ಮೆ ಸಾಧ್ಯವಾಗಲಾರದು. ಹುಡುಗನ ಆಯುಷ್ಯದ ಕಡೆಗೆ ಅವರು ತಮ್ಮ ಸ್ವಂತ ಸುಖದ ಕಲ್ಪನೆಯಿಂದ ಕಾಣುತ್ತಾರೆ.

ಈ ತೆರನಾಗಿ ಸ್ವಾರ್ಥಿ ಇದ್ದಾಗ್ಯೂ ನಾವು ಅವನ ನ್ಯಾಯ—ಅನ್ಯಾಯದ ಬಗ್ಗೆ ವಿಚಾರಿಸುವುದಿಲ್ಲ. ಏಕೆಂದರೆ, ಸ್ವಾರ್ಥಿ ದೃಷ್ಟಿಗೆ ನ್ಯಾಯಾನ್ಯಾಯದ ತೊಡಕು ಇರಲು ಶಕ್ಯವಿಲ್ಲ. ಜಗತ್ತಿನ ಎಲ್ಲ ಭಾಗಗಳಲ್ಲೂ ಈ ರೀತಿ ನಡೆಯುವುದೆಂದು ನನ್ನ ಭಾವನೆಯಿದೆ. ಆದರೆ, ಸಮಾಜದಲ್ಲಿ ಈ ವೃತ್ತಿಯು ಅಷ್ಟು ಕೈ ಚಾಚಿದೆ ಎಂದು ನಾನು ಹೇಳಲಾರೆ. ಅದಕ್ಕಾಗಿಯೇ ಜೀವನ ದತ್ತ ನೋಡುವ ನಮ್ಮ ಕಣ್ಣುಗಳು ಮಹತ್ವಾಕಾಂಕ್ಷೆಯ ಮತ್ತು ಪ್ರಾಮಾಣಿಕತನದ ನಿಸ್ವಾರ್ಥ ಮತ್ತು ನ್ಯಾಯದಿಂದ ಒಳಗೊಂಡಿರುವುದಿಲ್ಲ. ಪುರುಷರೇ ತಮ್ಮ ಕಡೆಗೆ ನ್ಯಾಯ ಸಿಗುವಂತೆ ಪ್ರಯತ್ನವನ್ನಿಟ್ಟುಕೊಂಡಿದ್ದಾರೆ. ಆದರೆ, ಸ್ತ್ರೀಗೆ ಮಾತ್ರ ನ್ಯಾಯವು ಸಿಗಲಾರದು. ಏಕೆಂದರೆ, ಸ್ತ್ರೀಯು ಇದಕ್ಕಾಗಿ ಹೆಣಗಾಡಲಿಲ್ಲ. ಇನ್ನು ಮುಂದೆ ಯಾದರೂ ಅವಳು ತನ್ನ ನ್ಯಾಯಕ್ಕಾಗಿ ಹೆಣಗಾಡಲು ಸಿದ್ಧಳಾಗಲೇಬೇಕು.

[ "ಸ್ತ್ರೀಯರ ಜೀವನ" ಎಂಬ ವಸುಂಧರಾ ಪಟವರ್ಧನ ಇವರಿಂದ ಬರೆಯಲ್ಪಟ್ಟ ಮರಾಠಿ ಪುಸ್ತಕದ ಆಧಾರದಿಂದ.]

---

## ಬೇಡ.......

ಜಗಕೆಲ್ಲ ಬೆಳಕಿತ್ತು ಬೆಳಗುತಿಹ ಕವಿರವಿಗೆ  
ಕೀರ್ತಿಕಾಮುಕನೆಂದು ಜರೆಯ ಬೇಡ  
ಸದ್ಬೋಧ ಚಂದ್ರಿಕೆಯ ಪಸರಿಸುವ ಚಂದ್ರಮಗೆ  
ಜಂಬ ಬಡಿಯುವನೆಂದು ಇರಿಯಬೇಡ  
ಅವನು ಸುರಿಸುವ ಅಮೃತ ಸಿರಿಯ ನೋಡ ॥ ೧ ॥

'ಗುಂಡು' ಸವಿಯುಂಡಿಯಿಂ ಮನ್ನಿಸದೆ ಬಾಪುವನು  
ಸಾಕ್ರಟೀಸನಿಗೆ ವಿಷ ಖೀರು ಪಾನ  
ಅಣ್ಣ ಬಸವಣ್ಣನನು ಭಕ್ತಿಯಿಂ ಹೊಳೆಗೆಸೆದೆ  
ಏಸುವಿಗೆ ಕೊಟ್ಟಿರುವುದೆಂಥ ಮಾನ  
ಎಲೆ ಜಗವೆ ಇದು ನಿನ್ನ ಪ್ರೇಮ ದಾನ ॥ ೨ ॥

ಮಾಡುವರ ಮಾಡಗೊಡು ನೋಡಿ ಸಂತೋಷಪಡು  
ಕಾರ್ಯವೆಂಬುದು ನಾಡ ಮನೆಯ ದೀಪ  
ಆದಷ್ಟು ತೈಲವೆರೆ ಬೆಳಕಿನಿಂ ನಲಿಯೆ ಧರೆ  
ಆಗು ನೀ ದಯೆಯ ದೊರೆ ದೇವ ರೂಪ  
ಅಳಿದು ಹೋಗಲಿ ಮುನ್ನಗೈದ ಪಾಪ ॥ ೩ ॥

ದುಡಿದುಡಿದು ಸಣ್ಣಾಗಿ ಹಗಲಿರುಳು ಹಣ್ಣಾಗಿ  
ಯಾರಿಗಾಗಿಯೆ ಮಡಿವ ಬಗೆದು ನೋಡು  
ಗಾಣಿಗಗೆ ಸಿಟ್ಟಾಗಿ ಒಣರೊಟ್ಟೆ ಕಡಿಯುವೆಯಾ  
ಆಡು ಅವನೊಡಗೂಡಿ ಕಾರ್ಯ ಮಾಡು  
ಆಗ ಧರೆಯಾಗುವುದು ಸುಖದ ಬೀಡು ॥ ೪ ॥

ಶ್ರೀ. ರಂ. ರಾ. ನಿಡಗುಂದಿ 'ಹರೇರಾಮ' ಗುರುಕುಲ ಕುಕನೂರ  
ಇವರ 'ಓಹೊಹೊ ಪ್ರಗತಿ !!' ಪುಸ್ತಕದಿಂದ

ಲೇಖಾಂಕ ೩

# ಸುಖದ ಶೋಧ

ಲೇ— ಓರ್ವ ಅಜ್ಞಾನಿ

[ ೧೯೫೫ ನೇ ಅಕ್ಟೋಬರ ಸಂಚಿಕೆಯಿಂದ ಮುಂದೆ ಸಾಗಿದ್ದು. ]

ಶಿಷ್ಯ— ಸುಖವಾಗಲಿ ಮುಕ್ತಿಯಾಗಲಿ ಕೊಡಲು ಆಧ್ಯಾತ್ಮ ಮಾರ್ಗವು ಅಸಫಲವಾದ ಮೇಲೆ ನಿರಾಶೆಯಿಂದ ಮಾನವನು ಸುಖದ ಶೋಧ ಮಾಡುವದು ಬಿಟ್ಟು ನಿರಾಶೆಗೊಳಗಾಗಿರುವನೋ ಅಥವಾ ಏನಾದರು ಪ್ರಯತ್ನ ನಡೆಸಿರುವನೋ, ಮತ್ತು ಆ ಪ್ರಯತ್ನವು ಎಷ್ಟರ ಮಟ್ಟಿಗೆ ಯಶಸ್ವಿಯಾಗಿರುವದು !

ಗುರು— ಮೊದಲು ಹೇಳಿದಂತೆ ಇಡೀ ಮಾನವಿ ಪ್ರಪಂಚವೆ ಕೇವಲ ಬುದ್ಧಿವಂತರಾದ ಸ್ವಲ್ಪೇ ಜನರಿಂದ ಮಾರ್ಪಡಿಸಲ್ಪಡುತ್ತದೆ. ಆದರೂ ದಿನದಿನಕ್ಕೆ ಕ್ರಿಯೆಯಷ್ಟೇ ಪ್ರತಿಕ್ರಿಯೆ ಅಂದರೆ Action and Reaction are equal and opposit ಎಂಬಂತೆ ಈ ಸ್ವಲ್ಪ ಜನರಾದ ಸಾಹಿತಿಗಳ ಪ್ರಚಾರದಿಂದುಂಟಾದ ಗೊಂದಲ, ಇದರಿಂದ ಉಂಟಾದ ದುಃಖಗಳು ಇವುಗಳನ್ನು ಪ್ರತ್ಯಕ್ಷವಾಗಿ ಹೋಗಲಾಡಿಸಲು ಶಬ್ದಜಾಲವುಂಟಾಯಿತು. ಈ ಜಂಜಾಟವನ್ನು ಸೂಕ್ಷ್ಮ ರೀತಿಯಿಂದ ಬಣ್ಣಿಸುವ ಶಕ್ತಿಯೇ ಪ್ರತಿಭೆ. ಸಂಸ್ಕಾರಕ್ಕೊಳಪಟ್ಟ ಈ ಮಾನವನ ಮನಸ್ಸು ಈ ಪ್ರತಿಭೆಯಿಂದ ಬೆರಗುಗೊಳ್ಳುವದು, ಮೋಹಿಸುವದು. ಆದರಲ್ಲಿ ದುಃಖವೆ ಹೆಚ್ಚಾಗುವದರಿಂದ, ಆದರ ವರ್ಣನೆಯೆ ಪ್ರತಿಯೊಂದು ವ್ಯಕ್ತಿಗು ತನ್ನ ಅನುಭವದ ಮಾತೇಯೆಂದು ಅನಿಸುವದರಿಂದ, ಅದರಲ್ಲಿ ಶ್ರದ್ಧೆ, ಭಕ್ತಿ ಹೆಚ್ಚಾಗಿ ಹುಟ್ಟುವದು. ಮೊದಲು ಕ್ರಿಸ್ತಧರ್ಮದ ಬಾಯ್ಬಲ್ಲಿನಲ್ಲಿ ಈ ದುಃಖದ ಉತ್ಪತ್ತಿಗೆ ಮಾನವರ ಮೂಲ ಪುರುಷರಾದ ಆದಮ ಈವ್ಹ ಇವರು ಪ್ರತಿಬಂಧಿಸಿದ ಜ್ಞಾನ ವೃಕ್ಷದ ಫಲವನ್ನು ತಿಂದಿದ್ದೆ ಕಾರಣವಾಯಿತು. ದಿನೆ ದಿನೆ ಈ ವೃಕ್ಷದ ಫಲ ಹೆಚ್ಚು ಹೆಚ್ಚು ಜನರು ತಿನ್ನುತ್ತ ನಡೆದರು. ಅಂದರೆ ಹೆಚ್ಚು ಹೆಚ್ಚು ಜನರು ದುಃಖಿಗಳಾಗುತ್ತ ನಡೆದರು. ಎಂದು ಉಲ್ಲೇಖವಿದೆ. ನದಿಯಲ್ಲಿ ದೋಣಿ ಮುಣಗಿತೆಂದರೆ ಅದರಲ್ಲಿದ್ದ ಜನರು ತಮ್ಮ ಪ್ರಾಣ ರಕ್ಷಣಾರ್ಥವಾಗಿ ತಮಗೆ ತೋಚಿದ ದಾರಿಗಳನ್ನು ಹಿಡಿಯುವಂತೆ ಈ ಮಾನವನೇ ನಿರ್ಮಿಸಿದ ದುಃಖಸಾಗರದಲ್ಲಿ ಮನುಷ್ಯನು ದುಃಖ ಮುಕ್ತನಾಗಲು ತನಗೆ ತೋಚಿದ ದಾರಿ ಹುಡುಕಲು ಯತ್ನಿಸುವನು. ತನ್ನ ತೊಂದರೆಗಳ ನಿಮಿತ್ತ ತನ್ನಕಿಂತ ಬುದ್ಧಿವಂತರು ಹೇಳಿದ ಮಾರ್ಗವೆ ಯೋಗ್ಯವೆಂದು ನಂಬ ಹತ್ತಿದನು. ಅಂಧಃ ಅಂಧೇನೇವ ನೀಯಮಾನಾಃ ಅಂದರೆ ಕುರುಡನಿಗೆ ಕುರುಡನೆ ಮಾರ್ಗದರ್ಶಕವೆಂಬಂತೆ ವ್ಯವಸ್ಥೆ ಈ ಪ್ರಪಂಚದಲ್ಲಿಯ ಮಾನವನ ಅವಸ್ಥೆಯಾಗಿದೆ. ಈ ಬುದ್ಧಿವಂತರೆ ನಿರ್ಮಾಣಮಾಡಿದ ದುಃಖವು ಈ ಬುದ್ಧಿವಂತರೆ ನಿರ್ಮಾಣ ಮಾಡಿದ ಅಥವಾ ಸೂಚಿಸಿದ ಉಪಾಯಗಳಿಂದ ಸ್ವಲ್ಪಾದರು ಶಮನವಾಗ ಹತ್ತಿದ್ದರಿಂದ ಜನರ ನಂಬಿಗೆಯು ದೈಹಿಕ ಶಕ್ತಿಗಳಿಗಿಂತ ಮಾನಸಿಕ ಶಕ್ತಿಗಳು ಹೆಚ್ಚು ಹೆಚ್ಚು ಶ್ರೇಷ್ಠವೆಂದು ಭಾವನೆಗಳುಂಟಾಗ ಹತ್ತಿದವು. ಪ್ರಪಂಚದ ಆರಂಭದಲ್ಲಿ ಪಾರ್ಥಿವವೆಂದರೆ ದೈಹಿಕ ಶಕ್ತಿಯೇ ಶ್ರೇಷ್ಠವೆಂದು ಇದ್ದದ್ದು ಬೌದ್ಧಿಕ ಶಕ್ತಿಯೆ ಶ್ರೇಷ್ಠವೆಂದು ಅನುಭವದಿಂದ ಮನಷ್ಯನು ಕಂಡುಹಿಡಿದನು. ಕ್ಷತ್ರಿಯ ಬಲದಕ್ಕಿಂತ ಬ್ರಹ್ಮ ಬಲ ಹೆಚ್ಚೆಂದು ವಿಶ್ವಾಮಿತ್ರ ವಶಿಷ್ಟರು ಜಗಳಾಡಿದಾಗ ಕಂಡು ಬಂದಿತು. ಈ ಬುದ್ಧಿ ಬಲದಿಂದಲೇನೇ ಬ್ರಾಮ್ಹಣ, ಕ್ಷತ್ರಿಯ ವೈಶ್ಯ, ಶೂದ್ರವೆಂಬ ವರ್ಣ ವ್ಯವಸ್ಥೆಯು ಈ ಮಾನವಿ ದುಃಖಗಳನ್ನು ಹೋಗಲಾಡಿಸುವ ಉಪಾಯವೆಂದು ನಿರ್ಮಿಸಲ್ಪಟ್ಟಿತು. ಭಾರತೀಯರಲ್ಲಿದ್ದ ವ್ಯವಸ್ಥೆಯೇ ಸ್ವಲ್ಪ ಹೆಚ್ಚುಕಡಿಮೆ ಪ್ರಮಾಣದಲ್ಲಿ ಇಡೀ ವಿಶ್ವದಲ್ಲಿತ್ತೆಂದು ತಿಳಿದು ಕೊಳ್ಳಲು ಅಡ್ಡಿ ಇಲ್ಲ. ಜನಾಂಗದಲ್ಲಿ ಮೊದಲು ಬ್ರಾಮ್ಹಣರೆ ಬುದ್ಧಿಶಾಲಿ ಇದ್ದ ಪ್ರಯುಕ್ತ ಮಿಕ್ಕ ಮೂರು ವರ್ಣದವರ ಸಹಕಾರದಿಂದ ಅವರವರ ಬುದ್ಧಿಯ ಬೆಳವಣಿಗೆಯ ಪ್ರಕಾರ ಸಮಾಜವನ್ನಾಳು

ತ್ತಿದ್ದರು. ಸಮಾಜದಲ್ಲಿ ಈ ತೆರನಾಗಿ ವ್ಯವಸ್ಥೆಯಾಗಬೇಕಾದರೆ ಎಷ್ಟೋ ಕೋಟಿಗಟ್ಲೆ ವರ್ಷಗಳು ಹತ್ತಿದವು. ಈ ಬ್ರಾಹ್ಮಣರು ದೈಹಿಕ ಶಕ್ತಿಯಕಿಂತ ಮಾನಸಿಕ ಅಥವಾ ಬೌದ್ಧಿಕ ಶಕ್ತಿಯೆ ಹೆಚ್ಚಾಗಿ ಸಮಾಜವನ್ನು ಆಳಬಹುದೆಂದು ಶೋಧದಿಂದ, ಅನುಭವದಿಂದ ಕಂಡುಹಿಡಿದದ್ದರಿಂದ ಅವರ ಬೆಳವಣಿಗೆಯನ್ನು ಹೆಚ್ಚಾಗಿ ಕಷ್ಟದಿಂದ ತ್ಯಾಗದಿಂದ ಮಾಡಿದರು. ಲೌಕಿಕದಲ್ಲಿ ಅದರ ಲಾಭವು ಅವರಿಗೆ ಮೊದಲು ಸಿಕ್ಕಿತು. ಅವರು ತಮ್ಮ ಬುದ್ಧಿ ಸಾಮರ್ಥ್ಯದಿಂದ ಕ್ಷತ್ರಿಯರ ಸಾಮರ್ಥ್ಯದ ಉಪಯೋಗವನ್ನು ಜನಾಂಗವನ್ನಾಳಲು ಉಪಯೋಗಿಸಿದರು. ತಾವು ನಿಜವಾಗಿ ಶ್ರೇಷ್ಠರಾಗಿ ಉಳಿದು ರಾಜರ ಅಂದರೆ ಕ್ಷತ್ರಿಯರ ಬಾಹುಶಕ್ತಿಯ ಉಪಯೋಗವನ್ನು ಮಾಡಿಕೊಂಡು ಅವರ ನಡತೆಯ ಬಗ್ಗೆ, ಜನಾಂಗದವರ ನಡತೆಯ ಬಗ್ಗೆ ಕಾಯಿದೆ ಕಾನೂನುಗಳನ್ನು ಮಾಡಿ ಅವರ ಸಹಾಯದಿಂದ ಜನಾಂಗವನ್ನಾಳಹತ್ತಿದರು. ಈ ಎಲ್ಲ ವ್ಯವಹಾರಗಳಲ್ಲಿ ಇದೆಲ್ಲವನ್ನು ತಾವು ಮಾಡದೆ ಸೃಷ್ಟಿಯಲ್ಲಿ ಒಂದು ಅಚಾಟ ಶಕ್ತಿ ಇದೆ ಏತಕ್ಕೆ ನಾವು ದೇವರೆಂದು ಕರೆಯಬಹುದು ಅದೆ ಆಳುತ್ತದೆಂದು ಹೆಸರಿನಲ್ಲಿ ಇಷ್ಟೆಲ್ಲ ಮಾಡಿದರು. ಇದನ್ನು ಸಾಧಿಸಿಕೊಳ್ಳಲು ತಮಗೆಇಷ್ಟವಾದ ಗುಣಗಳನ್ನು ಯಾವು ಸಂಸ್ಕಾರ ಅಥವಾ ವಿದ್ಯೆಯಿಂದ ಬರುವವೋ ಅಂಥ ವಿದ್ಯೆಯನ್ನು ಕ್ಷತ್ರಿಯರಿಗೆ ಕೊಟ್ಟು ಅವರು ಅಜ್ಞಾನದಿಂದ ಆದರೆ ಬ್ರಾಹ್ಮಣರಲ್ಲಿ ಅವರ ಪ್ರತಿಭಾಶಾಲಿ ಪ್ರಭಾವಕ್ಕೆ ಮರುಳಾಗಿ ಬ್ರಾಹ್ಮಣರು ಹಿಂನಿದೆಂತು ತಮಗೆಬೇಕಾದ ಸಂಸ್ಕಾರಗಳನ್ನು ಮಾಡಿದ್ದರಿಂದ ಆ ಗುಣಗಳಲ್ಲಿ ಶ್ರದ್ಧೆಯನ್ನಿಟ್ಟು ಅವುಗಳನ್ನೆ ಬೆಳಸಿ ಲೋಕಾಚಾರದಲ್ಲಿ ಆಚರಿಸಿ ತೋರಿಸಿದರು. ರಾಮ, ಕೃಷ್ಣ, ಪ್ರಲ್ಹಾದ, ದಶರಥ, ಉತ್ತಾನಪಾದ, ಪ್ರತಾಪಸಿಂಹ, ಶಿವಾಜಿ ಮುಂತಾದ ಅರಸರು ಈ ಬ್ರಾಹ್ಮಣರು ಹಾಕಿಕೊಟ್ಟ ನಿಯಮಗಳಂತೆ ನಡೆದರು. ಬ್ರಾಹ್ಮಣರಲ್ಲಿ ಶ್ರದ್ಧಾಭಕ್ತಿಯನ್ನು ಇಟ್ಟು ಅವರನ್ನು ಗುರುಗಳೆಂದು ಭಾವಿಸಿದರು. ಕ್ಷತ್ರಿಯರು ಅವರು ಹೇಳಿದಂತೆ ನಡೆದು ಹಾಕಿಕೊಟ್ಟ ಲೌಕಿಕ ಸಿದ್ಧಾಂತಗಳನ್ನು ಅಕ್ಷರಶಃ ಪಾಲಿಸಿ ಅವರನ್ನೇ ದೇವರನ್ನಾಗಿ ಭಾವಿಸುವಷ್ಟು ಸಹಕಾರ ನೀಡಿದರು. ಇದರಿಂದ ಸಾಮಾನ್ಯ ಜನರಲ್ಲಿ ಬ್ರಾಹ್ಮಣರಿಗೆ ಇಷ್ಟವೆನಿಸಿದ ಅಥವಾ ಅವರು ಶೋಧಿಸಿದ ಅಥವಾ ಕಂಡು ಹಿಡಿದ ತತ್ವಗಳ ಪ್ರಚಾರ ಮಾಡಲು ಅನುಕೂಲವಾಯಿತು. ಯಾರಾರು ಅವರ ತತ್ವಗಳನ್ನು ನಿಷೇಧಿಸಿದರು ಅವರಿಗೆ ರಾಕ್ಷಸರೆಂದು ಹೆಸರಿಟ್ಟು ಅವರ ನಿರ್ಮೂಲನ ಮಾಡಲು ಹೆಣಗಿದರು. ಹತ್ತರಿದ್ದವರ ಮೇಲೆ ವಿಚಾರವಂತ ಅಥವಾ ಬುದ್ಧಿವಂತರ ಸಂಸ್ಕಾರಗಳು ಆಗುವದು ಸ್ವಾಭಾವಿಕ. ಅದರಂತೆ ಕೆಲವೊಂದು ಅಪವಾದಗಳನ್ನು ಬಿಟ್ಟರೆ ಬ್ರಾಹ್ಮಣ ತಂದೆ ತಾಯಿಗಳ ಸಂಸ್ಕಾರಗಳು ಅವರವರ ಮಕ್ಕಳ ಮೇಲೆ ಆಗುವದು ಸ್ವಾಭಾವಿಕ. ಇದರಿಂದ ವಿಚಾರಮಾಡುವ ಮೊದಲಿನ ವಿಶಾಲ ದೃಷ್ಟಿಯು ಮರ್ಯಾದಿತವಾಗಿ ವಿಚಾರಗಳ ಶುದ್ಧೀಕರಣವಾಗುತ್ತ ನಡೆದು ವಿಚಾರ ಧರ್ಮದಕಿಂತ ಆಚಾರಧರ್ಮ ಅಥವಾ ಕರ್ಮಠತ್ವತನವು ಹೆಚ್ಚಾಗಿ ವರ್ಣಭೇದ ಹೋಗಿ ಜಾತಿ ಭೇದ ಬಂದಿತು. ಈ ಆಕುಂಚಿತ ಜಾತಿ ಧರ್ಮದ ಭೇದದ ದೃಷ್ಟಿಯಿಂದ ಇಲ್ಲಿ ವಿಚಾರ ಮಾಡಿರುವದಿಲ್ಲ. ಆದರೆ ಯಾವದೆ ಜಾತಿಯವರಿದ್ದರೂ ಪ್ರಭಾವಶಾಲಿ ಬುದ್ಧಿವಾನ ಸಾಹಿತಿಗಳು ಸಾಮಾನ್ಯ ಜನರೆಂದು ತಿಳಿಯತಕ್ಕದ್ದು. ಈ ದೃಷ್ಟಿಯಿಂದ ಎಲ್ಲ ಜನಾಂಗವನ್ನು ನಾಲ್ಕು ವರ್ಣಗಳಲ್ಲಿ ವಿಭಾಗಿಸಿದರು. ಅದರಲ್ಲಿ ಬ್ರಾಹ್ಮಣರು ಅಂದರೆ ಕೇವಲ ವಿಚಾರ ಮಾಡುವರು ಶ್ರೇಷ್ಠರು. ಅವರಿಗೆ ನೆರವು ಕೊಡುವವರು ೨ನೇ ನಂಬರು. ಇವರು ಸಂಖ್ಯೆಯಿಂದ ಬ್ರಾಹ್ಮಣರಕಿಂತ ಹೆಚ್ಚು ಜನರು. ತರುವಾಯ ವೈಶ್ಯರು ಆ ಮೇಲೆ ಬಹು ಸಂಖ್ಯಾಕರಾದ ಶೂದ್ರರು. ಬುದ್ಧಿವಂತರೆ ಶ್ರೇಷ್ಠರು. ಅವರೇ ಪ್ರತಾಪಶಾಲಿ ದೇಹವನ್ನು ಆಳ ಬಲ್ಲರೆಂದು ಅನುಭವ ಬಂದಂತೆ ಬುದ್ಧಿ ಸಾಮರ್ಥ್ಯದ ಬಗ್ಗೆ ಆಕರ್ಷಣವು ಹೆಚ್ಚಾಗುತ್ತ ನಡೆಯಿತು. ಬುದ್ಧಿ ಪ್ರಭಾವವನ್ನು ಪ್ರಸ್ಥಾಪಿಸಲು ಎಷ್ಟೋ ಕಷ್ಟ ತ್ಯಾಗ ಸತತ ಪ್ರಯತ್ನ ಮಾಡಲಾಯಿತು. ಈ ಬುದ್ಧಿಯ ಪ್ರಭಾವವನ್ನು ಸಂಪರ್ಕದಿಂದ ಅನುಭವದಿಂದ ಕಂಡು ಹಿಡಿಯಲು ಬ್ರಾಹ್ಮಣರ ಸಂಪರ್ಕವು ಯಾರಿಗೆ ಮೊದಲು ಬಂತು ಇಂಥ ಕ್ಷತ್ರಿಯರು ಮೊದಲು ಬುದ್ಧಿವಂತರಾದರು. ಉತ್ಪತ್ತಿ ಸ್ಥಿತಿ ಲಯವು ಸೃಷ್ಟಿಯೊಳಗಿನ ಪ್ರತಿಯೊಂದು ವಸ್ತುವಿಗೆ ಸೃಷ್ಟಿ ನಿಯಮದಂತಿರುವದು. ಈ ನಿಯಮದಂತೆ ಉತ್ಪತ್ತಿಕಾಲದ ಬುದ್ಧಿ ಪ್ರಭಾವವು ಸ್ಥಿತಿಕಾಲದ ಮಟ್ಟಕ್ಕೆ ಬಂದು ಅದರ ಬೆಳವಣಿಗೆ ನಿಂತಿತು. ಉತ್ಪತ್ತಿಕಾಲದ ಬುದ್ಧಿ ವೈಭವ-ಪ್ರಭಾವವನ್ನು ಕಾಪಾಡಿ ತನ್ನ ವರ್ಚಸ್ಸನ್ನುಳಿಸಲು ಬ್ರಾಹ್ಮಣ ವರ್ಗವು ಕ್ಷತ್ರಿಯ ವರ್ಗದ ಕೂಡ ಹೋರಾಡಹತ್ತಿತು. ಈ ತೆರನಾಗಿ ಈ ಪ್ರಪಂಚದಲ್ಲಿ ವರ್ಗಕಲಹವು ಪ್ರಾರಂಭವಾಯಿತು. ಮೊದಮೊದಲು ತಾತ್ವಿಕ ಸ್ವರೂಪದ್ದಾದ ಬ್ರಾಹ್ಮಣರ ಬುದ್ಧಿ ಮತ್ತೆಯೂ ಸ್ಥಿತಿಕಾಲದಲ್ಲಿ ಆಧ್ಯಾತ್ಮಿಕ ಶಕ್ತಿಯನ್ನು ಗಳಿಸುವದನ್ನು ಬಿಟ್ಟು ದೈಹಿಕ ಸೌಕರ್ಯಗಳನ್ನು ಗಳಿಸಲು ಉಪಯೋಗಿಸಲ್ಪಡಹತ್ತಿದ್ದರಿಂದ ಕೆಲವು ದಿನ ಕ್ಷತ್ರಿಯರ ಕೂಡ

(೩೫ ನೇ ಪುಟ ನೋಡಿರಿ)

# ಆವಕೃತಿ ಆವುದಕಿಂಬುಗೊಡುತಿದೆ ?

ಆವಕೃತಿ ಆವುದಕಿಂಬುಗೊಡುತಿದೆ ?
ಜೀವನದಿ ಮಾನವನ ಮನನೆಂತು ನಡೆಯುತಿದೆ?
ಕೆಡುಕಿಂಗೆ ಆಕರ್ಷಕ ಶಕ್ತಿ ಹೆಚ್ಚಿಹುದಿಂದು;
ಹಲವಾರು ಪೆಟ್ಟುಗಳ ತಿಂದ ಮನ ಮತ್ತೆ ನೈರೆಯುವದು

ಆತುರದಿ ಅಬ್ಬರಿಸಿ, ಸಿಡಿದೇಳ್ವ ಕೋಪ—
ಮನದ ನೈರ್ಮಲ್ಯತೆಯುನಳಿವ ದಾರಿ,
ಅತಿಯಾಗಿ ಮೇಳೈಸಿ ಬರುವ ದುರಭಿಮಾನಸ್ವರೂಪು—
ತನುವಿನಲಿಹ ಆತ್ಮನಮರಸತ್ವೈತೆಗೆ ಕುಠಾರಿ.

ಬಹಳವೆಂದೆನುವ ಸ್ನೇಹದ ರೀತಿ—
ಚೋದ್ಯವೆಂಬಪಹಾಸ್ಯಕೆ ಪಾತ್ರ,
ಬಾಳ ಬೇಗುದಿಯೇನೆಂದರಿಯದನುಭವವದು—
ಮೂಡಿ ಮರೆಯಾಗುವ ಕನಸಿನ ಚಿತ್ರ.

ಬದುಕಿಂಗೆ ನೂರಾರು ನೇಮುಗಳನಿರಿಸೆ—
ಚಾಂಚಲ್ಯತೆಗಿಂಬುಗೊಡುವ ಪರಿಯದು,
ಒಂದೆ ದೈವವ ನಂಬದೆ ಇನ್ನೊಂದಕೆ ಪಡುವಾಶೆ—
ಆವ ಗುರಿಯನು ಕಾಣದ ಶೂನ್ಯ ಸ್ಥಿತಿಯದು.

ಬಂದಾಗ ಬಾ ಎಂದು ಸ್ವಾಗತಿಸದವಿವೇಕ—
ಬಂದಾ ಶಕ್ತಿ ಎಂತಹದೆಂದು ತಿಳಿದಾಗ ಆಗುವಿಮೂರ್ಛೆ!
ಆವಕಾಲಕೆ ಬರುವದೊ ಮಹತ್ ಕಾಲ ನಿನ್ನಮನೆತನಕ
ಅಂತೆ ನಿನ್ನ ಮನಕಿರಲಿ ಸದಾ ಜಾಗ್ರತೆಯ ಈ ತರ್ಕ.

ಯೋಜನೆಯ ರೂಪ-ರೇಷೆ- ಕಾಗದದಿ ಗಳಿಸಿತು ದಿಗ್ವಿಜಯುವ?
ಈ ಲಾಭದಿಂದ ಜೀವಂತ ಮನುಷ್ಯನಿಗೇನಾಬೇಕು !
ಅಂತೆ—"ಆ ಕಾರ್ಯ ತಿಳಿದವ, ಈ ಕಾರ್ಯದಿ ಪಳಗಿದವ"—
ಈ ಬಾಯ್ಮಾತು ಸಾಕು, ಕಡ್ಡಿಯಷ್ಟೆ ಆದರೂ ಕೃತಿಬೇಕು !

—ಮು. ಚೆ. ಮುಂಡಾಸದ

# ಹಳೆಗನ್ನಡ ಸಾಹಿತ್ಯ

ಲೇಖಕ:— ಗೋಪಾಲ ಭಟ್ಟ, ಸುಗಾವಿ

"ಸಾಹಿತ್ಯ" ಈ ಶಬ್ದದ ಅರ್ಥವೇ ಅತಿವ್ಯಾಪವಾಗಿರುತ್ತದೆ. ಅದರಲ್ಲೂ ಕನ್ನಡ ಸಾಹಿತ್ಯವು ಅತಿ ವಿಶಾಲವಾದದ್ದಿರುತ್ತದೆ. ನಾನು ಈಗ ಮೊಟ್ಟಮೊದಲನೆಯದಾಗಿ ಆಧುನಿಕ ಸಾಹಿತ್ಯದ ಕಡೆಗೆ ಹೊರಳದೆ ಪ್ರಾಚೀನ ಸಾಹಿತ್ಯದ ವೈಶಾಲ್ಯವನ್ನು ಚಿತ್ರಿಸಬಯಸುತ್ತೇನೆ. ವಾಚಕ ಬಂಧುಗಳು ವಿಶಾಲ ಹೃದಯದಿಂದ ಈಕ್ಷಿಸುವಿರಾಗಿ ಆಶೆ ಪಡುತ್ತೇನೆ.

ಪೂರ್ವ ಕಾಲದಲ್ಲಿ ಈಗಿನಂತೆ ಬರವಣಿಗೆಯ ಸಾಧನಗಳಲ್ಲಿ ಅಷ್ಟೊಂದು ಸುಧಾರಣೆಯಾಗಿರಲಿಲ್ಲ. ಆದರೆ ಆಗಿನ ಕಾಲದ ರಾಜ-ಮಹಾರಾಜರಿಗೆ ಸಾಹಿತ್ಯದಲ್ಲಿ ಅತ್ಯಧಿಕವಾದ ಅಭಿರುಚಿ ಇತ್ತೆಂಬುದು ಈಗ ನಾವು ದೊರಕಿಸಿದ ಶಿಲಾಶಾಸನಗಳು, ತಾಂಬ್ರಪಟಗಳು, ತಾಡೋಲೆಯ ಪುಸ್ತಕಗಳು ಇವುಗಳ ಮೇಲಿಂದ ಊಹಿಸಬಹುದಾಗಿದೆ. ಕನ್ನಡ ಸಾಹಿತ್ಯವು ಇಂಥ ಶತಮಾನದಲ್ಲಿಯೇ ಹುಟ್ಟಿತೆಂದು ನಿರ್ದಿಷ್ಟವಾಗಿ ಹೇಳುವದು ಬಹು ಕಠಿಣ. ಆದರೂ ನಮಗೆ ದೊರಕಿದ ಶಾಸನಗಳ ಮೇಲಿಂದ ಸಾಧಾರಣವಾಗಿ ಎಂಟನೇ ಶತಮಾನದಿಂದಲೇ ಪ್ರಾರಂಭವಾಯಿತೆನ್ನಬಹುದು.

ಅಳಕದಂಬನೆಂಬ ರಾಜನು ವಿಜ ಎಂಬ ಅರಸನಿಗೆ ಎರಡು ಹಳ್ಳಿಗಳನ್ನು ದಾನವಾಗಿಕೊಟ್ಟನು. ಎಂಬ "ಹಲ್ಮಿಡೀ ಶಾಸನ"ವನ್ನು, ನಾವು ಬೇಲೂರಿನ ಬಳಿಯಲ್ಲಿ ಮೊಟ್ಟಮೊದಲನೆಯದಾಗಿ ಕಾಣುತ್ತೇವೆ. ನಂತರ "ಕಲಿಯುಗ ವಿಪರೀತ" ಎಂಬ ಬಿರುದನ್ನು ಪಡೆದಿದ್ದ ಕಪ್ಪೆ ಅರಭಟ್ಟರ ಕೃತಿಯನ್ನು ವಿಜಾಪೂರ ಜಿಲ್ಹೆಯ ಬಾದಾಮಿ ಎಂಬಲ್ಲಿ "ಬಾದಾಮೀ ಶಾಸನ"ವನ್ನು ದೊರಕಿಸುತ್ತೇವೆ. ಆ ಮೇಲೆ "ಶ್ರವಣ ಬೆಳಗೊಳದ ಶಾಸನ"ವನ್ನು ಕಾಣುತ್ತೇವೆ. ಮೊದಮೊದಲಿನ ಈ ಶಾಸನಗಳಲ್ಲಿ, ಈಗಿನ ಸಾಹಿತ್ಯದಲ್ಲಿ ಇಂಗ್ಲಿಷು ಕೂಡಿಕೊಂಡಂತೆ ಸಂಸ್ಕೃತವೂ ಕೂಡಿಕೊಂಡದ್ದನ್ನು ಕಾಣುತ್ತೇವೆ. ಆದರೂ ಈ ಲಿಪಿಯು ಹೆಚ್ಚಾಗಿ ತಮಿಳು ಸಾಹಿತ್ಯವನ್ನೂ ಹೋಲುವ ಹಾಗಿತ್ತು. ನಂತರ ಶಾಸನಗಳನ್ನು ಬಿಟ್ಟು ಪುಸ್ತಕರೂಪದಲ್ಲಿ ದೊರೆಯುವದೆಂದರೆ ನೃಪತುಂಗನು ಬರೆದ 'ಕವಿರಾಜಮಾರ್ಗ' ಈ ಪುಸ್ತಕದಲ್ಲಿ ಪ್ರಾಚೀನ ಸಾಹಿತ್ಯದ ಅನೇಕಾನೇಕ ವಿಷಯಗಳು ಅಡಕವಾಗಿರುತ್ತವೆ. ಇದರಲ್ಲಿ, ಆ ಸಮಯದೊಳಗೆ ಕನ್ನಡ ನಾಡು ಕಾವೇರಿಯಿಂದ ಗೋದಾವರಿಯವರೆಗೆ ಪಸರಿಸಿತ್ತು. ಎಂಬ ವಿಷಯವನ್ನು ನೃಪತುಂಗನು ವಿವರಿಸಿದ್ದಾನೆ. ಈ ಕೃತಿಯಲ್ಲಿ ನೃಪತುಂಗನು ಆಗಿನ ಕಾಲದಲ್ಲಿ ಆಗಿ ಹೋದ ಅನೇಕ ಕವಿಗಳ ಹೆಸರುಗಳನ್ನು ಸೂಚಿಸಿದ್ದಾನೆ. ನೃಪತುಂಗನ ನಂತರ ಬೆಳಕಿಗೆ ಬಂದವನೆಂದರೆ ಪಂಪನು. ಈತನ ಕವಿರಾಜಮಾರ್ಗದ ಸಹಾಯವನ್ನು ಪಡೆದೇ ಪಂಪನು ಅನೇಕ ಸಾಹಿತ್ಯದ ರಚನೆಯನ್ನು ಮಾಡಿದನೆಂದು ಅನೇಕರು ಅಭಿಪ್ರಾಯ ಪಟ್ಟಿದ್ದಾರೆ.

ಕ್ರಿ. ಶ. ೯೪೧ರಲ್ಲಿ ಪಂಪನು ಗ್ರಂಥ ರಚನೆಯನ್ನು ಪ್ರಾರಂಭಿಸಿದನಂತೆ. ಆದಿಪುರಾಣ, ವಿಕ್ರಮಾರ್ಜುನ ವಿಜಯ ಇವೇ ಮೊದಲಾದವು ಇವನ ಕೃತಿಗಳು. ಇದನ್ನೇ ಮೂಲಾಧಾರವನ್ನಾಗಿ ಇಟ್ಟುಕೊಂಡು ಮುಂದಿನ ಕವಿಗಳು ಸಾಹಿತ್ಯ ರಚನೆಯನ್ನು ಮಾಡಿದ್ದರಿಂದ ಈ ಕಾಲಕ್ಕೆ ಪಂಪನ ಯುಗವೆಂದು ಅನ್ನುತ್ತಾರೆ. ಇವನ ನಂತರ ಆಗಿಹೋದ ಕವಿ, ರನ್ನನು. ಅಜಿತ ತೀರ್ಥಂಕರರ ಪುರಾಣ, ಸಾಹಸ ಭೀಮ ವಿಜಯ ಮೊದಲಾದವುಗಳು ಇವನ ಗ್ರಂಥಗಳು. ಆ ಮೇಲೆ ನಾಗವರ್ಮನೆಂಬಾತನು 'ಛಂದೋಂಬುಧಿ' 'ಕಾದಂಬರಿ' ಎಂಬೆರಡು ಗ್ರಂಥಗಳನ್ನು ರಚನೆ ಮಾಡಿದನು. ಈತನು ಬಾಣಕವಿಯ ಸಂಸ್ಕೃತ ಗದ್ಯವನ್ನು ಗದ್ಯಪದ್ಯಾವಲಿಯುಳ್ಳ ಚಂಪೂರೂಪದಲ್ಲಿ ಬರೆದನು. ತನ್ನ ಎಲ್ಲ ಗ್ರಂಥಗಳನ್ನು ಕನ್ನಡದಲ್ಲಿಯೇ ರಚನೆಮಾಡಿದನು. ನಂತರ ನಾಗಚಂದ್ರನೆಂಬ ಒಬ್ಬ ಕವಿಯು ರಾಮಚಂದ್ರ ಚರಿತ ಪುರಾಣ, ಮಲ್ಲಿನಾಥ ಪುರಾಣವೆಂಬ ಎರಡು ಗ್ರಂಥರಚನೆಯನ್ನು ಪಂಪನನ್ನು ಅನುಸರಿಸಿ ಬರೆದು, ಅಭಿನವ ಪಂಪ ಎಂಬ ಹೆಸರನ್ನು ಧರಿಸಿದನು. ಈ ಎಲ್ಲ ಚಂಪೂ ಕಾವ್ಯಗಳು ಮತ ಪ್ರಚಾರವನ್ನು ಮಾಡುತ್ತವೆ. ಆದರೆ ಆಂಡಯ್ಯನೆಂಬ ಕವಿಯು ಇದಕ್ಕೆ ಅಪವಾದವಾಗಿದ್ದಾನೆ. ಈತನು ಸಾಧಾರಣ ೧೩೦೦ರಲ್ಲಿ ಆಗಿಹೋದ ಮಹಾಕವಿಯು. ಅನೇಕ ಜನ ಕವಿಗಳು ಸಂಸ್ಕೃತದ ಸಹಾಯವಿಲ್ಲದೆ ಕಾವ್ಯರಚನೆಯನ್ನು ಮಾಡಲು ಸಾಧ್ಯ

ವಿಲ್ಲೆಂದು ಹೇಳುತ್ತಿದ್ದರು. ಇದನ್ನು ಪ್ರತಿಭಟಿಸುವ ಉದ್ದೇಶದಿಂದ ಇವನು ಸಂಪೂರ್ಣ ಕನ್ನಡ ಶಬ್ದಗಳನ್ನೇ ಉಪಯೋಗಿಸಿ ಕಾವ್ಯರಚನೆಯನ್ನು ಮಾಡಿತೋರಿದನು. ಅದೇ "ಕಬ್ಬಿಗರ ಕಾವ".

೧೧೭೦ರಿಂದ ೧೨೩೫ ರ ಅವಧಿಯಲ್ಲಿ ಜನ್ನ ಕವಿಯು ಕನ್ನಡದಲ್ಲಿ ಗ್ರಂಥ ರಚನೆಯನ್ನು ಮಾಡಿದನು. ಈತನು ಹೊಯ್ಸಳ ಅರಸರ ಆಸ್ಥಾನ ಕವಿಯಾಗಿದ್ದನು. ಈತನು "ಕವಿಚಕ್ರವರ್ತಿ" ಎಂಬ ಬಿರುದಿಗೆ ಪಾತ್ರನಾಗಿದ್ದನು. ಈತನು ಯಶೋಧ ಚರಿತ್ರೆ, ಅನಂತನಾಥ ಪುರಾಣ ಎಂಬ ಎರಡು ಕಾವ್ಯರಚನೆಯನ್ನು ಮಾಡಿದನು. ಇದರಿಂದ ಧರ್ಮದ ಪ್ರಸಾರವು ಬಹಳ ಮಟ್ಟಿಗೆ ಆಯಿತು. ರನ್ನನಲ್ಲಿ ವರ್ಣನಾ ಕುಶಲತೆ ಹಾಗೂ ಪಾತ್ರರಚನಾ ಶಕ್ತಿಯು ಬಹಳವಾಗಿತ್ತೆಂಬುದು ಅವನ ಕೃತಿಯ ಮೇಲಿಂದ ತಿಳಿದು ಬರುತ್ತದೆ. ಇದರ ಮೇಲಿಂದ ಇವನಿಗೆ ಕವಿಚಕ್ರವರ್ತಿ ಎಂಬ ಬಿರುದು ದೊರೆತದ್ದು ಯೋಗ್ಯವೇ ಆಗಿರುತ್ತದೆಯೆಂದು ಅನಿಸುತ್ತದೆ. ಅಂತೂ ಹೇಳಬೇಕಾದರೆ, ಈ ಯುಗದ ಕವಿಗಳೆಲ್ಲ ತಮ್ಮ ಕೃತಿಗಳಲ್ಲಿ ಹೆಚ್ಚಾಗಿ ಸಂಸ್ಕೃತ ಛಂದಸ್ಸುಗಳನ್ನು, ಶಬ್ದಶ್ಲೋಕಗಳನ್ನು ಹೆಚ್ಚಾಗಿ ಬಳಸಿದ್ದಾರೆನ್ನುವದು ಖಂಡಿತ. ಈ ಯುಗದಲ್ಲಿ ಎಲ್ಲರೂ ಪಂಪನಮಾರ್ಗವನ್ನು ಅನುಸರಿಸಿ ಕಾವ್ಯರಚನೆಯನ್ನು ಮಾಡಿದ್ದಕ್ಕೆ ಈ ಯುಗಕ್ಕೆ ಪಂಪನ ಯುಗವೆಂದದ್ದು ಯುಕ್ತವೇ ಆಗಿದೆ.

ಬಸವಣ್ಣನವರು ಇವರ ನಂತರ ಮತ ಪ್ರಚಾರದ ಉದ್ದೇಶವನ್ನಿಟ್ಟುಕೊಂಡು ಸಾಮಾನ್ಯ ಜನರಿಗೆ ತಿಳಿಯುವ ರೀತಿಯಲ್ಲಿ, ಲಲಿತವಾದ ಭಾಷೆಯಲ್ಲಿ ಕಾವ್ಯರಚನೆಯನ್ನು ಮಾಡಿದರು. ತಾನು ರಚಿಸಿದ ಕಾವ್ಯಗಳ ಅರ್ಥವು ಒಬ್ಬ ಸಾಮಾನ್ಯವಾದ ಮನುಷ್ಯನಿಗೂ ಕೂಡಾ ಆಗಬೇಕೆಂಬ ಉದ್ದೇಶದಿಂದ ಅವರು ಲಲಿತ ಕನ್ನಡ ಭಾಷೆಯಲ್ಲಿಯೇ ಸಾಹಿತ್ಯ ರಚನೆಯನ್ನು ಮಾಡಿ ಪ್ರಸಿದ್ಧರಾದರು. ಇವರು ಗದ್ಯರೂಪದಲ್ಲಿ ಕಾವ್ಯರಚಿದರೂ ಅವು ಸುಸ್ವರಯುಕ್ತವಾಗಿ ಹಾಡಲು ಬರುವಂತಿವೆ. ಜನರು ತಮ್ಮ ತಪ್ಪುಗಳನ್ನು ಬಚ್ಚಿಟ್ಟು ಎರಡಸೆಯುವರ ತಪ್ಪನ್ನು ತಿದ್ದಲು ಹೋಗುತ್ತಾರೆ; ಇದು ತಪ್ಪು ಎಂಬುದನ್ನು ಬಸವಣ್ಣನವರು ತಿಳಿಹೇಳಲು "ಜಗದ ಡೊಂಕ ನೀವೇಕೆ ತಿದ್ದುವಿರಿ..........." ಈ ರಚನೆಯನ್ನು ಮುಕ್ತಕಂಠದಿಂದ ಹಾಡಿದ್ದಾರೆ. ಇವರ ಕಾಲದಲ್ಲಿ ಅಕ್ಕಮಹಾದೇವಿಯಂಥ ಅನೇಕ ಕವಿತ್ರಿಯರೂ ಕೂಡಾ ವಚನ ರಚನೆಯನ್ನು ಮಾಡಿದ್ದಾರೆ.

ನಂತರ ೧೨೦೦ ರಲ್ಲಿ ಹರಿಹರನೆಂಬ ಕವಿಯು ಬೆಳಕಿಗೆ ಬಂದನು. ಇವನು ಹಂಪೆಯಲ್ಲಿ ವಾಸವಾಗಿದ್ದನು. ಇವನು "ಗಿರಿಜಾಕಲ್ಯಾಣ" ವೆಂಬ ಚಂಪೂಕಾವ್ಯವನ್ನು ಬರೆದು ರಗಳೆಯ ಕವಿಯೆಂದು ಪ್ರಸಿದ್ಧನಾಗಿದ್ದಾನೆ. ಈ ದೃಷ್ಟಿಯಿಂದ ಇದು ಒಂದು ಹೊಸದಾದ ಮಾರ್ಗವೆಂದೇ ಹೇಳಬಹುದು. ನಂತರ ರಾಘವಾಂಕನು ಕಾವ್ಯರಚನೆಯನ್ನು ಮಾಡುತ್ತಾನೆ. ಇವನು ಹರಿಶ್ಚಂದ್ರಕಾವ್ಯ, ಸಿದ್ಧರಾಮ ಪುರಾಣ ಮೊದಲಾದ ಪದ್ಯಾವಳಿಗಳನ್ನು ಬರೆದು ಪ್ರಕಟಿಸಿದನು. ಈತನ ಸಂಭಾಷಣ ಶೈಲಿಯು ಅತಿ ಶ್ಲಾಘನೀಯವಾದುದು. ಓದುಗರ ಮನಸ್ಸನ್ನು ಸೆರೆ ಹಿಡಿಯುವಂಥಹದು. ಇದೇ ಕಾಲದಲ್ಲಿ ಕುಮಾರವ್ಯಾಸ ಕವಿಯ ಜನನವಾಯಿತು. ಈತನ ಕಾಲ ಸುಮಾರು ೧೪೩೦. ಈತನು ಗದುಗಿನ ವೀರನಾರಾಯಣನ ಸಾನ್ನಿಧ್ಯದಲ್ಲಿ ಸಾಹಿತ್ಯ ರಚನೆಯನ್ನು ಮಾಡಿದನೆಂದು ಹೇಳುತ್ತಾರೆ. ಈತನು ಅನೇಕ ಜನಪ್ರಿಯವಾದ ಕವಿತಾ ರಚನೆಯನ್ನು ಮಾಡಿ ಲೋಕಪ್ರಿಯನಾಗಿದ್ದಾನೆ. ಅಂತೂ ಇವನು ಪಂಪನಿಗಿಂತಲೂ ಹೆಚ್ಚು ಯೋಗ್ಯತೆಯುಳ್ಳವನೆಂದು ನಿಸ್ಸಂದೇಹವಾಗಿ ಹೇಳಬಹುದು. ಆ ಮೇಲೆ ಲಕ್ಷ್ಮೀಶ ಕವಿಯು ಜೈಮಿನಿ ಭಾರತವನ್ನು ವಾರ್ಧಿಕ ಷಟ್ಪದಿಯಲ್ಲಿ ಬರೆದನು. ಈತನಲ್ಲಿ ಕವಿತ್ವಶಕ್ತಿಯು ಬಹಳವಾಗಿತ್ತು. ಕಿವಿಗೆ ಇಂಪಾಗುವಂತೆ ಈತನು ಕವಿತೆಗಳ ರಚನೆಯನ್ನು ಮಾಡಿದ್ದಾನೆ. ೧೬ನೇ ಶತಮಾನದ ವೇಳೆಗೆ ಅನೇಕ ವೈಷ್ಣವ ದಾಸರು ತತ್ವಯುಕ್ತವಾದ ಹಾಡುಗಳ ರಚನೆಯನ್ನು ಮಾಡಿದರು. ಮತ್ತು ಜೊತೆಗೆ ಕೆಲವು ವೀರಶೈವರೂ ಕೂಡಾ ವಚನ ರಚನೆಯನ್ನು ಮಾಡಿದರು. ಪುರಂದರ ದಾಸ, ಕನಕದಾಸ, ವಿಜಯದಾಸ, ಇವರೇ ಮೊದಲಾದವರು. ಜನರಿಗೆ ವೈರಾಗ್ಯವನ್ನು ಬೋಧಿಸಿ ಪರಲೋಕದ ಚಿಂತೆಯನ್ನು ಮಾಡಹಚ್ಚುವದೇ ಇವರ ಸಾಹಿತ್ಯರಚನೆಯ ಮುಖ್ಯ ಗುರಿಯಾಗಿತ್ತು. ಈ ಯುಗದಲ್ಲಿ ಎಲ್ಲರೂ ಹೆಚ್ಚು ಸ್ವತಂತ್ರವಾಗಿ ಅಂದರೆ ಯಾರ ಕಾವ್ಯವನ್ನೂ ಆಧಾರವಾಗಿಟ್ಟುಕೊಳ್ಳದೆ, ಸ್ವಂತ ವಿಚಾರ ಹಾಗೂ ಶೈಲಿಗಳಿಂದ ಸಾಹಿತ್ಯರಚನೆಯನ್ನು ಮಾಡಿದ್ದಕ್ಕೆ ಈ ಯುಗಕ್ಕೆ ಸ್ವಾತಂತ್ರಯುಗವೆಂದು ಅನ್ನಬಹುದು. ಈ ಯುಗದ ನಂತರ ಸಾಮಾನ್ಯವಾಗಿ ವಿಜಯನಗರದ ಅರಸರ ಆಳಿಕೆಯು ನಡೆದಾಗ ಸಾಹಿತ್ಯರಂಗ ಭೂಮಿಯು ಕೆಳಮಟ್ಟಕ್ಕೆ ಇಳಿಯಿತು. ನಂತರ ವೈಷ್ಣವ ಅರಸರಾದ ಚಿಕ್ಕದೇವರಾಜರು ಅನೇಕ ತಿರುಮಲಾಚಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ ಇವರೇ ಮೊದಲಾದ ಕವಿಗಳಿಗೆ ಆಶ್ರಯದಾತರಾಗಿದ್ದರು. ಮತ್ತು ಗೀತಗೋಪಾಲ, ಚಿಕ್ಕದೇವರಾಜ ಬಿನ್ನಹಂ ಎಂಬೆರಡು ಗ್ರಂಥವನ್ನು ರಚಿಸಿರುತ್ತಾರೆ. ಇವರಿಗೆ

ಅಪ್ರತಿಮ ವೀರ ಎಂಬುದೊಂದು ಬಿರುದು ಇತ್ತು. ನಂತರ ಇವರ ಆಸ್ಥಾನದಲ್ಲಿಯೇ ಇದ್ದ ಚಿಕ್ಕುಪಾಧ್ಯಾಯ ಎಂಬ ಬ್ರಾಹ್ಮಣನು ಅನೇಕ ಕನ್ನಡ ಗ್ರಂಥಗಳನ್ನು ಬರೆದು ಸಾಹಿತ್ಯಾಭಿವೃದ್ಧಿಯನ್ನು ಮಾಡಿದನು. ದಿವ್ಯಸೂರಿ ಚರಿತ್ರೆ, ರುಕ್ಮಾಂಗದ ಚರಿತ್ರೆ ಇವೇ ಮೊದಲಾದವುಗಳು ಇವನ ಕೃತಿಗಳು. ಇದೇ ಅವಧಿಯಲ್ಲಿ ಸಿಂಗರಾರ್ಯನೆಂಬ ಕವಿಯು "ಮಿತ್ರವಿಂದಾ ಗೋವಿಂದಾ" ಎಂಬ ನಾಟಕ ರಚನೆಯನ್ನು ಮಾಡಿದ್ದಾನೆ. ಇದೇ ಕನ್ನಡದಲ್ಲಿಯ ಮೊದಲನೆಯ ನಾಟಕ ವೆಂದು ಪ್ರಾಶಸ್ತ್ಯವುಂಟು. ಈ ನಾಟಕವು ಶ್ರೀಹರ್ಷನು ಸಂಸ್ಕೃತದಲ್ಲಿ ಬರೆದ ರತ್ನಾವಳಿಯನ್ನು ಅನುಸರಿಸಿರತ್ತದೆ. ಆ ಮೇಲೆ ಹೊನ್ನಮ್ಮನು "ಹದಿಬದೆಯಧರ್ಮ" ಎಂಬ ಸಾಂಗತ್ಯ ವನ್ನು ಬರೆದಳು. ಪತಿವ್ರತೆಯರು ಯಾವರೀತಿಯಿಂದ ವರ್ತಿಸಬೇಕೆನ್ನುವದೇ ಈ ಗ್ರಂಥದಲ್ಲಿ ಅಡಕವಾಗಿರುವ ಮೂಲ ಸಂಗತಿಯಾಗಿರುತ್ತದೆ. ನಂತರ ೧೬೫೫ರ ವೇಳೆಯಲ್ಲಿ ಷಡಕ್ಷರದೇವನು ವೃಷಭೇಂದ್ರವಿಜಯ, ಶಬರ ಶಂಕರ ವಿಲಾಸ, ರಾಜಶೇಖರ ವಿಲಾಸ ಎಂಬ ಮೂರು ಗ್ರಂಥಗಳನ್ನು ರಚಿಸಿದನು. ಈ ರೀತಿಯಾಗಿ ಕನ್ನಡ ಸಹಿತ್ಯವು ಪುನಃ ಚೇತರಿಸಿ ಕೊಂಡೇಳಲು ಚಿಕ್ಕ ದೇವರಾಜರು ಬಹಳವಾಗಿ ಸಹಾಯವನ್ನು ಮಾಡಿದ್ದಕ್ಕೆ ಈ ಕಾಲವು ಚಿಕ್ಕದೇವರಾಜರ ಕಾಲವೆಂದು ಪ್ರಸಿದ್ಧವಿರುತ್ತದೆ. ನಂತರ ಶ್ರೀ ಮುಮ್ಮಡಿ ಕೃಷ್ಣರಾಜರು ಅನೇಕ ವಿದ್ವಾಂಸರಿಗೆ ಅಶ್ರಯದಾತರಾಗಿದ್ದರು. ಹಾಗೂ 'ಶ್ರೀ ಕೃಷ್ಣರಾಜ ವಾಣೀವಿಲಾಸ ಭಾರತ', ಶಾಕುಂತಲಾ ನಾಟಕ ನವೀನ ಟೀಕೆ, ಇವೇ ಅನೇಕ ಗ್ರಂಥ ಗಳನ್ನು ಸ್ವತಃ ರಚಿಸಿದರು. ಇವರ ಆಸ್ಥಾನದಲ್ಲಿದ್ದ ಕೆಂಪು ನಾರಾಯಣರೆಂಬುವರು ಮುದ್ರಾಮಂಜೂಷವೆಂಬ ಉತ್ತಮ ವಾದ ಗ್ರಂಥವನ್ನು ರಚಿಸಿದರು. ಆ ಮೇಲೆ ಶ್ರೀ ಚಾಮ ರಾಜರ ಅವಧಿಯಲ್ಲಿ ಅನೇಕ ಸಂಸ್ಕೃತ ಗ್ರಂಥ ಗಳು ಕನ್ನಡಕ್ಕೆ ಭಾಷಾಂತವಾದವು. ಬಸಪ್ಪ ಶಾಸ್ತ್ರಿ ಎಂಬ ವರು 'ಶಾಕುಂತಲ' 'ಅಭಿನವ ಕಾಳಿದಾಸ' ಬರೆದದ್ದು ಇವರ ಅವಧಿಯಲ್ಲಿಯೇ. ಆ ಮೇಲೆ ೧೯ನೇ ಶತಮಾನದ ಕೊನೆ ಯಲ್ಲಿ ಮುದ್ದಣನೆಂಬ ಕವಿಯು ಆಗಿ ಹೋದನು. ಈತನ ಹೆಸರನ್ನು ಹೆಚ್ಚಾಗಿ ಎಲ್ಲರೂ ಕೇಳಿರಬೇಕೆಂದು ನನಗೆ ಅನಿಸು ತ್ತದೆ. ಈತನು ಹಳಗನ್ನಡದಲ್ಲಿ ಹಾಸ್ಯ ಭರಿತನಾದ "ರಾಮಾಶ್ವ ಮೇಧ" ಎಂಬ ಸಂಭಾಷಣೆಯನ್ನು ಬರೆದದ್ದು ಜನರ ಮೆಚ್ಚಿ ಗೆಯನ್ನು ಪಡೆದಿದೆ. ಇದಲ್ಲದೆ ಅದ್ಭುತರಾಮಾಯಣ, ರಾಮ ಪಟ್ಟಾಭಿಷೇಕವೆಂಬ ಗ್ರಂಥಗಳನ್ನು ರಚಿಸಿದನು. ನಂತರ ಜನ ಪದ ಸಾಹಿತ್ಯವು ಬಳಕೆಯಲ್ಲಿ ಬಂದದ್ದನ್ನು ನಾವು ಕಾಣ ಬಹುದು. ಇವುಗಳಲ್ಲಿ ಅನೇಕ ತತ್ವ ವಿಚಾರಗಳು ತುಂಬಿ ಕೊಂಡಿರುತ್ತವೆ. ಇದನ್ನು ಯಾರು ರಚನೆ ಮಾಡಿದರೆಂದು ಹೇಳಲು ಆಧಾರವೇ ಇಲ್ಲಾ. ಇವು ಒಬ್ಬರ ಬಾಯಿಂದ ಇನ್ನೊಬ್ಬರ ಬಾಯಿಗೆ ಆನುವಂಶಿಕವಾಗಿ ನಡೆಯುತ್ತ ಬಂದಿತ್ತೆ ವಿನಾ ಯಾರೂ ಪ್ರಕಟಿಸಲು ಹೋಗಿರಲಿಲ್ಲ. ಆದರೆ ಈಗ ಅದರ ಮರ್ಮವನ್ನು ಅರಿತ ಜನರು ಸಂಗ್ರಹಿಸಿ ಪ್ರಕಟಿಸಹತ್ತಿ ದ್ದಾರೆ. ನಂತರ ಸರ್ವಜ್ಞನೆಂಬ ಕವಿಯು ಆಗಿ ಹೋದನು. ಇವನು ಹೆಚ್ಚಾಗಿ ತ್ರಿಪದಿಗಳ ರಚನೆಯನ್ನು ಮಾಡಿದನು. ಕೊನೆಗೆ ಸರ್ವಜ್ಞ ಎಂದು ಬರೆಯುವದು ಇವನ ಪಾಠವು. ಅಂತು ಹೇಳಬೇಕಾದರೆ ಇವನು 'ಆಶುಕವಿ' ಎಂದು ಹೇಳಲು ಸಂಶಯವೇ ಇಲ್ಲ. ಯಾಕಂದರೆ ಇವನು ಜಗತ್ತಿನ ಅನೇಕ ಭಾಗಗಳನ್ನು ತಿರುಗುತ್ತಲೇ ತಾನು ಕಂಡ ಸಂಗತಿಗಳನ್ನು ಆಗಾಗ್ಗೆ ಪದ್ಯರೂಪದಲ್ಲಿ ಬರೆಯುತ್ತಾ ಹೋಗಿದ್ದಾನೆ. ಇವನ ಪ್ರತಿಯೊಂದು ಪದ್ಯವೂ ಬಹು ಅರ್ಥ ಗರ್ಭಿತವಾಗಿರುತ್ತದೆ.

೧೯ನೇ ಶತಮಾನದಿಂದ ಈಚೆಗೆ ನಾವು ಆಧುನಿಕ ಕನ್ನಡ ಸಾಹಿತ್ಯವನ್ನು ಕಾಣಬಹುದು. ಮೊದಲೇ ನಾನು ಹೇಳಿದಂತೆ ಇಂದು ಕನ್ನಡ ಸಾಹಿತ್ಯದಲ್ಲಿ ಇಂಗ್ಲೀಷು ಕೂಡಿ ಕೊಂಡದ್ದನ್ನು ನಾವು ಕಾಣುತ್ತೇವೆ ಈಗಿನ ಕಾಲದಲ್ಲಿ ಕಾದಂಬರಿ, ಕವನ, ವಿಮರ್ಶೆ, ಸಣ್ಣ ಕಥೆ, ಪ್ರಬಂಧ ಹರಟೆ, ಪ್ರಹಸನ ಇವೇ ಮೊದಲಾದ ಕೃತಿಗಳನ್ನು ನಾವು ಕಾಣುತ್ತೇವೆ. ಈಗಿನ ಸರಕಾರವೂ ಕೂಡಾ ಮೊದಲಿನ ರಾಜಮಹಾರಾಜ ರಂತೆ ಕವಿವರ್ಯರಿಗೆ ಪ್ರೋತ್ಸಾಹ ಕೊಡತೊಡಗಿದ್ದು ಬಹಳ ಹೆಮ್ಮೆಯ ವಿಷಯವೇ ಆಗಿರುತ್ತದೆ. ಮೊನ್ನೆ ಮೊನ್ನೆ ದ. ರಾ. ಬೇಂದ್ರೆಯವರು ತಮ್ಮ "ಅರಳು ಮರಳು" ಎಂಬ ಕವನ ಸಂಗ್ರಹಕ್ಕೆ ಬಹುಮಾನವನ್ನು ಪಡೆದು ಗೌರವಿಸಲ್ಪಟ್ಟರೆಂಬ ವಿಷಯವನ್ನು ನಾವೆಲ್ಲರೂ ಬಲ್ಲೆವು. ಇದೇ ರೀತಿಯಾಗಿ ಅ. ನ. ಕೃಷ್ಣರಾಯರು, ಬೆಟಗೇರಿ ಕೃಷ್ಣಶರ್ಮರು, ಗೋಕಾ ಕರು, ಸರೋಜಿನಿ ಮಹಿಷಿ, ಚನ್ನವೀರ ಕಣವಿ ಇವರೇ ಮೊದ ಲಾದವರು ಕನ್ನಡ ಸಾಹಿತ್ಯದ ಬೆಳವಣಿಗೆಗೆ ತಮ್ಮ ಅಪೂರ್ವ ವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಕನ್ನಡ ಪ್ರೇಮಿಗಳೆ ಲ್ಲರೂ ಕನ್ನಡ ಸಾಹಿತ್ಯದ ಅಭಿವೃದ್ಧಿಗೆ ತಮ್ಮ ಸಾಮರ್ಥ್ಯ ವನ್ನು ಮೀರಿ ಸಹಾಯವನ್ನು ಸಲ್ಲಿಸುತ್ತಿದ್ದಾರೆ. ಕನ್ನಡ ಪ್ರೇಮಿಗಳೆಲ್ಲರೂ ಕನ್ನಡ ಸಾಹಿತ್ಯ ಅಕಾಡಮಿಗೆ ಮನಃಪೂರ್ವಕ ವಾಗಿ ಸಹಾಯವನ್ನು ತನು ಮನ ಧನಗಳಿಂದ ಅರ್ಪಿಸುತ್ತ ಹೋದಲ್ಲಿ ಈ ಲಲಿತ ಸಾಹಿತ್ಯವು ಬಿದಿಗೆಯ ಚಂದ್ರನಂತೆ ಊರ್ಜಿತಾವಸ್ಥೆಯನ್ನು ಹೊಂದುವದು ಖಂಡಿತವಾದದ್ದು.

---

# ಕರ್ನಾಟಕ ಪ್ರಾಂತೀಯ
# ಮ ಹಿ ಳಾ ಪ ರಿ ಷ ತ್ತು
## ಹೆಜಮಾಡಿ-ಕೋಡಿ, ಮುಲ್ಕಿ

ಶ್ರೀಮತಿ ಸರೋಜಿನಿ ಮಹಿಷಿ, ಎಂ. ಎ , ಎಲ್ ಎಲ್. ಬಿ.

# ಅಧ್ಯಕ್ಷೀಯ ಭಾಷಣ

೨೫ ಅಕ್ಟೋಬರ, ೧೯೫೯

ವಿಶಾಲ ಕನ್ನಡ ನಾಡಿನ ನನ್ನ ಸಹೋದರಿಯರೇ, ತಾಯಂದಿರೇ,

ತಮಗೆಲ್ಲರಿಗೂ ನನ್ನ ಅನಂತ ವಂದನೆಗಳು. ದಕ್ಷಿಣ-ಕನ್ನಡದ ಈ ಜಿಲ್ಹೆಗೆ ಬರಲು, ತಮ್ಮೆಲ್ಲರನ್ನು ಕಾಣಲು ನನಗೆ ತುಂಬ ಸಂತೋಷ. ಪ್ರಾಂತೀಯ ಮಹಿಳಾ ಪರಿಷತ್ತಿನ ಹೊಣೆಯನ್ನು ನಿರ್ವಹಿಸಿಕೊಂಡು ಹೋಗುವ ಗುರುತರವಾದ ಕಾರ್ಯವನ್ನು ತಾವು ನನಗೆ ಒಪ್ಪಿಸಿದ್ದೀರಿ. ಅದಕ್ಕೆ ನನ್ನ ಯೋಗ್ಯತೆ ಎಷ್ಟೋ! ಈ ಗೌರವವನ್ನು ಕೊಟ್ಟಿರುವದಕ್ಕೆ ತಮಗೆ ನನ್ನಲ್ಲಿರುವ ವಿಶ್ವಾಸ, ಅಂತಃಕರಣಗಳೇ ಕಾರಣ; ಅದು ನನ್ನ ದೊಡ್ಡ ಆಸ್ತಿ. ಅದಕ್ಕೆ ನಾನು ಋಣಿ! ಕಳೆದ ವರುಷ ಧರ್ಮಸ್ಥಳದಲ್ಲಿ ನೆರೆದ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಸ್ಥಾನವನ್ನೂ ಕೊಟ್ಟು ಗೌರವಿಸಿದ್ದೀರಿ. ದಕ್ಷಿಣ-ಕನ್ನಡದವರ ಧಾರಾಳವಾದ ಮನಸ್ಸನ್ನು ನಾನು ಬಲ್ಲೆ. ಈ ವಿಶ್ವಾಸ ಹಾಗು ಆತ್ಮೀಯತೆಗಳಿಂದ ಉಂಟಾಗಿರುವ ನನ್ನ ಮೇಲಿನ ಹೆಚ್ಚಿನ ಹೊಣೆಯನ್ನು, ನಿರ್ವಹಿಸುವ ಶಕ್ತಿ, ನನಗೆ ನಿಮ್ಮೆಲ್ಲರ ಬಲದಿಂದಲೇ ಬರಬೇಕು. ಆ ಶಕ್ತಿಯನ್ನು ದಯ ಪಾಲಿಸಲೆಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇನೆ.

ಬೆಟ್ಟ-ನದಿ-ಕಾಡುಗಳಿಂದ ರಮಣೀಯವಾದ ಪ್ರಕೃತಿಯ ಮಡಿಲಲ್ಲಿ ಹರಡಿದ ದಕ್ಷಿಣ ಕನ್ನಡ ಜಿಲ್ಹೆಯ ಜನರ ಮನಸ್ಸು ಅಷ್ಟೇ ಉದಾತ್ತವಾಗಿದೆ. ಸರ್ವಧರ್ಮಗಳ ಗುರಿಯು ಒಂದೇ ಎಂದು ಸಿದ್ಧಮಾಡಿ ತೋರಿಸಲು ಸರ್ವರಿಂದಲೂ ಸೇವ್ಯನಾದ ಧರ್ಮಸ್ಥಳದ ಮಂಜುನಾಥನು ಎತ್ತರದಲ್ಲಿ ಕಂಗೊಳಿಸುತ್ತಾನೆ. ಹೊರಳಿ ನಿಂತು ಕನಕನಿಗೆ ದರುಶನ ಕೊಟ್ಟ ಉಡುಪಿಯ ಶ್ರೀಕೃಷ್ಣ, ತಾನು ಭಕ್ತಾಧೀನನೆಂದು ಸಾರಿ ಹೇಳುತ್ತಿದ್ದಾನೆ. ಕಾರ್ಕಳದ ಜಿನಭಕ್ತಿಯ ವೈಭವ ಸಹೃದಯರನ್ನು ಸೆರೆಹಿಡಿಯದೆ ಬಿಡಲಾರದು. ಇಂತಹ ಧಾರ್ಮಿಕ, ಆಧ್ಯಾತ್ಮಿಕ ಸಂಪತ್ತಿಗೆ ಉತ್ತರಾಧಿಕಾರಿಗಳಾಗಿ ಬಂದ ನಾವು, ಪಡೆದ ಸಂಪತ್ತಿನ ಬೆಲೆಯನ್ನು ತಿಳಿದುಕೊಳ್ಳಬೇಕಾಗಿದೆ. ವಿವಿಧ ಧರ್ಮಗಳು ಕನ್ನಡ ನಾಡಿನಲ್ಲಿ ತಲೆಯೆತ್ತಿ ಬೆಳೆದರೂ ಸಮನ್ವಯವಿತ್ತೆಂದು ಹೇಳುವ ನಾವು ಇಂದು ಧರ್ಮ, ಜಾತಿಗಳೆಂದು ಹಲವಾರು ತುಂಡುಗಳನ್ನು ಮಾಡಿ ವಿಂಗಡಿಸಿ ಹೋರಾಡುತ್ತಿದ್ದೇವೆ. ಹೊರಾಟಕ್ಕೆ ಘನವಾದ ಉದ್ದೇಶ ಬೇರಾವುದೂ ಇಲ್ಲದಾಗ ಹೀಗೇ ಆಗುವದೇನೊ!

ನಾನಿಲ್ಲಿ ಬಂದುದು ಸಂಘಟಿತರಾದ ತಮ್ಮೆಲ್ಲರನ್ನು–ಕನ್ನಡತಿಯರನ್ನು--ಕಾಣುವ ಹಂಬಲದಿಂದ; ತಮ್ಮ ವಿಚಾರವನ್ನು ತಿಳಿದುಕೊಳ್ಳುವ ಆಶೆಯಿಂದ. ತಮ್ಮಲ್ಲಿ ಹುದುಗಿದ ಅಪಾರವಾದ ಶಕ್ತಿ, ಯಾವ ದಿಕ್ಕಿನಲ್ಲಿ ಹರಿಯುತ್ತಿದೆಯೆಂಬುದನ್ನರಿವ ಹವ್ಯಾಸದಿಂದ!

ರಾಜ್ಯಪುನರ್ಘಟನೆಯ ಪೂರ್ವದಲ್ಲಿ ಮುಂಬಯಿ, ಮದ್ರಾಸು, ಹೈದರಾಬಾದು, ಮೈಸೂರು ಮೊದಲಾದ ಪ್ರಾಂತಗಳಲ್ಲಿ ಹರಿದು ಹಂಚಿಹೋದ ಕನ್ನಡ ನಾಡು, ಆಯಾ ಪ್ರಾಂತಗಳ ಧರ್ಮ, ಭಾಷೆ, ಸಾಹಿತ್ಯ, ಸಮಸ್ಯೆಗಳನ್ನು ಅರಿತು, ಮೈಗೂಡಿಸಿಕೊಂಡು, ಒಂದಾಗಿ ಬದುಕಲು ಯತ್ನಿಸಿತು. ಇಂದು ನಾಡು ಒಂದು ಗೂಡಿದಾಗ ಅದರ ಬಲ ಹೆಚ್ಚಬೇಕು. ಬದುಕುವ ಹೋರಾಟ ಮುಗಿದು, ಒಳ್ಳೇ ರೀತಿಯಲ್ಲಿ ಬದುಕುವ ಹೋರಾಟ ಸಾಗಬೇಕು.

ಸ್ವಾತಂತ್ರ್ಯ ಪೂರ್ವದಲ್ಲಿ ಭಾರತೀಯರಲ್ಲಿದ್ದ ಕೆಚ್ಚು, ಹೋರಾಟಗಳು, ಸ್ವಾತಂತ್ರ್ಯ ಪಡೆದ ತರುವಾಯ ಕಂಡು ಬರುತ್ತಿಲ್ಲವೆಂದು, ಎರಡೂ ಕಾಲಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದ ಜನ ಆಡಿಕೊಳ್ಳುತ್ತಾರೆ. ಅಂದಿನ ಸಂಘಟನೆ, ಶಿಸ್ತು, ಕರ್ತೃತ್ವಶಕ್ತಿ, ತ್ಯಾಗಗಳು, ಅಷ್ಟೇಕೆ-ಇಂದಿನ ಮನುಷ್ಯನಲ್ಲಿಯ ದೈಹಿಕ ಶಕ್ತಿ, ಸಹಿಷ್ಣುತೆಗಳೂ ಕಡಿಮೆಯಾಗಿವೆ ಎಂದು ಹೇಳುತ್ತಾರೆ. ಹಳೆಯದೆಲ್ಲ ಒಳ್ಳೆಯದೆಂದೂ, ಅದನ್ನು ಹೊಗಳಲೇಬೇಕೆಂದೂ ಪ್ರತಿಜ್ಞೆ ಮಾಡಿದ ಜನ ಹೀಗೆ ಹೇಳು

ತ್ತಾರೆಂದು ತಿಳಿಯಬಹುದೇ ಹಾಗಾದರೆ? ಹಾಗಿದ್ದ ಪಕ್ಷದಲ್ಲಿ ನಮ್ಮ ಕಾಲವೂ ಹಳೆಯದಾದ ಮೇಲೆ ಮುಂದಿನ ಪೀಳಿಗೆಯೂ ಇಂದಿನದನ್ನು ಹೊಗಳೀತು ಎಂದು ಆಶೆ ಹಿಡಿದು ಬದುಕೋಣವೇ? ಇದು ದುರ್ಬಲರ ವಾದ, ಸಮರ್ಥನೆ! "ಆರಂಭ ಶೂರಾಃ ಖಲು ದಾಕ್ಷಿಣಾತ್ಯಾಃ"—ಎಂಬುದು, ಯಾರೋ ಮತ್ಸರದಿಂದ ಹೇಳಿದ ಮಾತಾಗಿರಬೇಕು. ಪ್ರಾರಂಭ ಮಾಡುವಾಗೇನೋ ಬಹಳ ಶೌರ್ಯದಿಂದ ಮಾಡುತ್ತಾರೆ ದಾಕ್ಷಿಣಾತ್ಯರು. ಆದರೆ ಅದಕ್ಕಂಟಿಕೊಂಡು, ಮುಗಿಯುವ ವರೆಗೆ ಮಾಡುವವರಲ್ಲ, ಎಂಬ ಮಾತನ್ನು ಅಂದು ಹೇಳಿದ್ದರೆ, ಇಂದಿಗೂ ಅದು ಸತ್ಯವಾಗಿರಬೇಕೆ? ಕನ್ನಡಿಗರ ನಿದ್ದೆ ಬಹಳ ಗಾಢವಾದದ್ದು; ಎದ್ದರೆ ಮಾತ್ರ ಯಾವುದಕ್ಕೂ ವಿಲಂಬವೇ ಇಲ್ಲ; ಆದರೆ ಏಳಲಿಕ್ಕೇ ವಿಲಂಬ ಅಷ್ಟೇ! ಸಾಮ್ರಾಜ್ಯಗಳನ್ನು ಕಟ್ಟಿ ತೋರಿಸಿದ ಕನ್ನಡಿಗರು ಅದನ್ನು ಕೊರೆದೂ ತೋರಿಸಿದ್ದಾರೆ. ಅಂದು ಇತಿಹಾಸವು ಮಾಡಲ್ಪಟ್ಟಿತು; ಇಂದು ಅದು ಓದಲ್ಪಡುತ್ತಿದೆ. ಇಷ್ಟೇ ವ್ಯತ್ಯಾಸ!

ಕರ್ತೃತ್ವಶಕ್ತಿ, ತ್ಯಾಗಗಳು ಅಂದು ರಾಜಕೀಯ ಸ್ವಾತಂತ್ರ್ಯವನ್ನು ಪಡೆಯಲು ಅವಶ್ಯಕವಾಗಿದ್ದರೆ, ಇಂದೂ ಅವು ಅವಶ್ಯಕವಾಗಿವೆ—ಜನರ ಜೀವನ ಒಳ್ಳೆಯದಾಗಲು! ರಾಜಕೀಯ ಸ್ವಾತಂತ್ರ್ಯವು ದೊರೆಯುವ ವರೆಗೆ ಒಂದು ಸಿದ್ಧಿಯಾಗಿದ್ದರೂ, ದೊರೆತ ಮೇಲೆ, ಅದೊಂದು ಸಾಧನವಾಗಿದೆ. ಈ ಸಾಧನದ ಸರಿಯಾದ ಉಪಯೋಗವನ್ನು ಮಾಡಿಕೊಳ್ಳುವ ಜಾಗೃತಿಯನ್ನು ನಾವು ಪಡೆಯಬೇಕಾದ್ದು ಅತ್ಯವಶ್ಯ. ಕರ್ತೃತ್ವಶಕ್ತಿ, ತ್ಯಾಗಗಳ ಬೆಲೆ ಕಡಿಮೆಯಾಗಿಲ್ಲ, ಆಗುವದು ಶಕ್ಯವೂ ಇಲ್ಲ. ನಾವು ನಮ್ಮ ದೌರ್ಬಲ್ಯದಿಂದಾಗಿ ಅದರ ಬೆಲೆಯನ್ನು ಕಡಿಮೆ ಮಾಡುವ ಯತ್ನ ಮಾಡುತ್ತಿದ್ದೇವೆ. ದುರ್ಬಲರ ಅಹಿಂಸೆಗೆ ಯಾವ ಬೆಲೆಯಿದೆ? ಇನೊಬ್ಬರಿಗೆ ಹಿಂಸೆ ಕೊಡಲು ನನಗೆ ಶಕ್ತಿ ಸಾಲದೆಂದು ಸುಮ್ಮನಿದ್ದೇನೆ—ಎನ್ನುವವನನ್ನು ಜನ ವಿಶ್ವಾಸದಿಂದ ಕಾಣಬಹುದೇ? ಅದರಂತೆಯೇ ತ್ಯಾಗ! ತ್ಯಾಗವನ್ನು ಮಾಡಬಯಸುವವನು, ಮೊದಲು ಆ ವಸ್ತುವನ್ನೋ ಶಕ್ತಿಯನ್ನೋ ಗಳಿಸಿಕೊಂಡಿರಬೇಕಲ್ಲವೆ? ಇನ್ನೊಬ್ಬನ ವಸ್ತುವನ್ನು ನಾನು ತ್ಯಾಗ ಮಾಡುತ್ತೇನೆಂಬುವಲ್ಲಿ ಯಾವ ಅರ್ಥವಿದೆ? ಗಳಿಸುವ ಶಕ್ತಿ ಸಾಲದೆ, ತ್ಯಾಗದ ಮಾತನ್ನಾಡಿದರೆ, ಅದು ಬರಿ ಮಾತೇ! ಸತ್ಯ, ಅಹಿಂಸೆ, ತ್ಯಾಗವೆಂಬ ಶಬ್ದಗಳು ಅಂದಿಗೂ ಕೋಶದಲ್ಲಿದ್ದವು, ಇಂದಿಗೂ ಇವೆ. ಅವುಗಳಿಗೆ ಸಜೀವತೆ ಬರಬೇಕಾದದ್ದು, ವ್ಯಕ್ತಿಯ ಜೀವನದಲ್ಲಿ, ರಾಷ್ಟ್ರದ ಜೀವನದಲ್ಲಿ!

ಮಹಿಳೆ ಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿದ್ದರೂ, ಸೇವಾಬುದ್ಧಿ, ತ್ಯಾಗಬುದ್ಧಿಯನ್ನು ಅವಳು ಮೈಗೂಡಿಸಿಕೊಂಡೇ ಇರುತ್ತಾಳೆ. ತನಗಿಲ್ಲದಿದ್ದರೂ ಸರಿ, ತನ್ನ ಪತಿ ಉಂಡರವಳಿಗೆ ಸಮಾಧಾನ, ಮಗು ಉಂಡರೆ ಸಂತಸ! ಅವಳ ಈ ತ್ಯಾಗಬುದ್ಧಿ, ಸಮಾಜದ-ಮಟ್ಟಕ್ಕೂ, ರಾಷ್ಟ್ರಮಟ್ಟಕ್ಕೂ ಸ್ವಲ್ಪ ವಿಸ್ತರಿಸಿದರೆ, ಎಂತಹ ಕ್ರಾಂತಿಯಾದೀತು, ಎಷ್ಟು ಒಳ್ಳೆಯದಾದೀತು! ಮನೆಯ ಜನಕ್ಕಾಗಿ ತ್ಯಾಗ ಮಾಡುವ ಮಹಿಳೆ, ತಾನು ತ್ಯಾಗ ಮಾಡಿದ್ದೇನೆಂಬುದನ್ನು ನೆನೆಯುವದೂ ಇಲ್ಲ; ಇಲ್ಲದೆ ಹೋದರೆ ತ್ಯಾಗದ ಅಹಂಕಾರವನ್ನು ತಾಳಿಕೊಳ್ಳುವದೇ ಕಷ್ಟವಾದೀತು. ಉಳಿದ ಬಗೆಯ ಅಹಂಕಾರಗಳು ಅಲ್ಪಸ್ವಲ್ಪವನ್ನು ಆಹುತಿ ತೆಗೆದುಕೊಂಡರೆ, ತ್ಯಾಗದ ಅಹಂಕಾರವು ಇಡೀ ಸಮಾಜವನ್ನೇ ಬಲಿ ತೆಗೆದುಕೊಂಡೀತು!

ಮಹಿಳೆಯು ಸೇವೆ ಮಾಡಬಲ್ಲಳು, ತ್ಯಾಗ ಮಾಡಬಲ್ಲಳು ಎಂಬುದನ್ನು ಸಮಾಜವು ತಿಳಿಯದೆ ಹೋದರೆ ಅಥವಾ ತಿಳಿದು, ದುರುಪಯೋಗ ಮಾಡಿಕೊಂಡರೆ, ಅ ನಷ್ಟವು ಸಮಾಜಕ್ಕೇ! ತನ್ನ ಶಕ್ತಿ ಎಷ್ಟಿದೆಯೆಂಬುದನ್ನು ಮಹಿಳೆಯೂ ಸ್ವತಃ ತಿಳಿಯಬೇಕಾದ್ದು ಅತ್ಯವಶ್ಯ.

ಬ್ರಿಟಿಶರ ಆಳಿಕೆಯಲ್ಲಿ ಶಕ್ತಿಯನ್ನಳೆಯಲು ಹಲವಾರು ಮಾನದಂಡಗಳನ್ನವರು ಬಳಕೆಯಲ್ಲಿ ತಂದರು. ಮೇಣಬತ್ತಿಯ ಶಕ್ತಿ (Candle power), ಕುದುರೆಯ ಶಕ್ತಿ (Horse-power), ಪುರುಷಶಕ್ತಿ ( Man-power ) ಇವೇ ಮೊದಲಾದವು ಶಕ್ತಿಯನ್ನಳೆಯಲು ಸಾಧನಗಳಾದವು. ಆದರೆ ಸ್ತ್ರೀಯ ಶಕ್ತಿಯನ್ನು ಕುರಿತು ಅವರು ಹೇಳಲೇ ಇಲ್ಲ. ಭಾರತದಲ್ಲಿ ಹೇಳುವದೂ ಅವಶ್ಯವಿಲ್ಲ ಸ್ತ್ರೀ ಇಲ್ಲಿ ಶಕ್ತಿಯ ಅವತಾರವೆಂದು ತಿಳಿಯಲ್ಪಡುತ್ತಾಳೆ.

ಭಾರತದ ಪ್ರಾಚೀನ ಪರಂಪರೆ—ನಮಗೆ ದೊರೆತ ಸಾಂಸ್ಕೃತಿಕ ಸಂಪತ್ತು—ಅಮೋಘವಾಗಿದೆ; ಘೋಷಾ, ವಿಶ್ವಂವಾರಾ, ಅಸಾಲಾ, ಸೂರ್ಯಾ ಇವರು ವೇದಗಳಲ್ಲಿ ಋಕ್ಕುಗಳನ್ನು ರಚಿಸಿದ್ದಾರೆ, ಬ್ರಹ್ಮವಾದಿನಿಯರಾಗಿ ಬದುಕಿದ್ದಾರೆ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ. ಆದರೆ ಇಂದು ಅವರ ಭಗಿನಿಯರಿಗೇ ಆ ವೇದಗಳನ್ನು ಓದುವ ಅಧಿಕಾರವಿಲ್ಲ!

ಎಂಟು ನೂರು ವರುಷಗಳ ಹಿಂದೆಯೇ ಶಿವಶರಣೆಯರು ಮಾಡಿದ ಕ್ರಾಂತಿ ಅವರ ತಪಸ್ಸಿನ ಹಿರಿಮೆಯನ್ನು ತೋರಿಸಿದೆ: ಅಂದು ಮಹಿಳೆಯರ ಕಾರ್ಯ ಕ್ಷೇತ್ರಕ್ಕಿದ್ದುದು ಒಂದೇ ಒಂದು ದಾರಿ—ಅದೇ ಪತಿಭಕ್ತಿ: ಪತಿ ಎಂಥವನಿದ್ದರೂ ಅವನೇ ದೇವರು! ಸತಿಗೆ ಮೋಕ್ಷಕ್ಕೆ ನೇರವಾದ ದಾರಿಯಿಲ್ಲ ಎಂಬ ಅಂದಿನ ಸಾಮಾನ್ಯ ತಿಳುವಳಿಕೆಯನ್ನು ಖಂಡಿಸಿ, ದೇವರೇ

ಪತಿಯೆಂದು ಪರಮಾರ್ಥದಲ್ಲಿ ಪ್ರಪಂಚವನ್ನು ಹೂಡಿದವರು ಶಿವಶರಣೆಯರು; ಜಗತ್ತಿನ ಆಧ್ಯಾತ್ಮಿಕ ಹಾಗೂ ಸಾಮಾಜಿಕ ತಿಳುವಳಿಕೆಗೆ ಅವರು ಸಲ್ಲಿಸಿದ ಕಾಣ್ಕೆ ಮೌಲ್ಯ-ವಾದುದು; ಮಹಿಳಾ ಪ್ರಪಂಚಕ್ಕಂತೂ ಅದು ಅವಿಸ್ಮರಣೀಯ. ''ಹೆಣ್ಣು ರಾಕ್ಷಸಿಯಲ್ಲ, ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ನೋಡಾ" ಎಂದು ಸ್ತ್ರೀಯಲ್ಲಿ ದೇವತ್ವವನ್ನು ಕಂಡ ಶ್ರೇಯಸ್ಸು ಅವರದು; „ಕುಲ–ಸೀಮೆ ಇಲ್ಲದ ನಿಃಸೀಮ ಚೆಲುವಂಗಾನೊಲಿದೆ, ಈ ಮಿಕ್ಕಿನ ಸಾವಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು" ಎಂದು ಹೇಳಿದ ಅಕ್ಕಮಹಾದೇವಿ, ''ಮ್ಹಾರೋ ಚಾಕರ ರಾಖೋ ಜೀ ,, ಎಂದು ರಾಣಾ ಕಳಿಸಿದ ವಿಷದ ಬಟ್ಟಲನ್ನೂ ಕುಡಿದು ಅರಗಿಸಿಕೊಂಡ ಮೀರಾಬಾಯಿಯರು ಮಹಿಳೆಯರ ಕಾರ್ಯಕ್ಷೇತ್ರವನ್ನು ದೈವಭಕ್ತಿಗೂ ಹಬ್ಬಿಸಿದರು.

ಮಾತೃದೇವೋಭವ ಎಂದು ಉಗ್ಗಡಿಸಿದ ನಮ್ಮ ಸಂಸ್ಕೃತಿಯಲ್ಲಿ, ಇಂದು ತಾಯಿಗೆ ಯಾವ ಸ್ಥಾನವನ್ನು ಕೊಟ್ಟಿದ್ದೇವೆ? ಮಹಿಳೆ ಈ ಅಧಿಕಾರವನ್ನು ಕಳೆದುಕೊಳ್ಳುವದಕ್ಕೆ ಮಹಿಳೆಯರೇ ಕಾರಣರಾಗಿದ್ದಾರೆ. ಇನ್ನೊಬ್ಬರ ಮೇಲೆ ತಪ್ಪನ್ನು ಹೊರಿಸಿ ಪಾರಾಗುವದು ಸುಲಭ; ನಮ್ಮ ದೌರ್ಬಲ್ಯಕ್ಕೆ ಅದೊಂದು ದಾರಿ; "ನಾನು ಬಹಳ ಒಳ್ಳೇ ಅಡಿಗೆಯನ್ನು ಮಾಡಬಲ್ಲೆ, ನೂರು ಜನರ ಅಡಿಗೆಯನ್ನು ಒಬ್ಬಳೇ ಮಾಡಬಲ್ಲೆ. ಆದರೆ ಇವತ್ತೇಕೋ ಹೀಗಾಯಿತು,, ಎಂದು ತಮ್ಮ ದೌರ್ಬಲ್ಯಕ್ಕೆ ಮುಸುಕು ಹಾಕುವವರು ಎಷ್ಟೋ ಜನ; ಇದು ಮಹಿಳೆಯರಲ್ಲಿ ಮಾತ್ರ ಇರುವ ದೌರ್ಬಲ್ಯ ಎಂದರ್ಥವಲ್ಲ; ಮನುಷ್ಯರಲ್ಲೇ ಅಡಕವಾಗಿರುವ ದೌರ್ಬಲ್ಯ ಎಂದೆನ್ನಬಹುದು ಈ ದೌರ್ಬಲ್ಯಕ್ಕೆ ಮುಸುಕು ಹಾಕಿ ನಾವು ಇನ್ನೊಬ್ಬರನ್ನು ಕೆಲವು ಕಾಲ ವಂಚನೆ ಮಾಡುವದು ಸಾಧ್ಯವಾದೀತು, ಆದರೆ ಅದೇ ಸಮಯಕ್ಕೆ ನಮ್ಮನ್ನು ನಾವೇ ವಂಚಿಸಿಕೊಳ್ಳುತ್ತೇವೆ, ಎಂಬುದನ್ನೂ ಮರೆತುಬಿಡುತ್ತೇವೆ. ನಮ್ಮಲ್ಲಿದ್ದ ಶಕ್ತಿಯನ್ನು ಒರೆಗಲ್ಲಿಗೆ ಹಚ್ಚದೆ, ನಮ್ಮ ಶಕ್ತಿ ಎಷ್ಟಿದೆ ಎಂಬುದರ ಕಲ್ಪನೆಯೂ ನಮಗೆ ಬರಲಾರದು. ಓದಿ, ಕೇಳಿ, ನೋಡಿ, ತಿಳಿದು, ಕಲ್ಪನೆ ಮಾಡಿ, ಪಡೆದ ಎಲ್ಲ ಬಗೆಯ ಜ್ಞಾನವೂ ಯಾವುದೊಂದು ಕಾರ್ಯದಲ್ಲಿ ಉಪಯುಕ್ತವಾಗಬೇಕು. ಆ ಕಾರ್ಯವನ್ನು ಮಾಡುವಾಗ ಹಾಗೂ ಮಾಡಿದ ಮೇಲೆ ಉಂಟಾಗುವ ಅನುಭವಜನ್ಯ ಜ್ಞಾನ ಹೆಚ್ಚಿನದು ! ಆಗ ಅಧಿಕೃತವಾಗಿ ಅದರ ಬಗ್ಗೆ ಹೇಳುವ ಅಧಿಕಾರ ನಮ್ಮದಾಗುತ್ತದೆ.

ನಮ್ಮ ನಾಜೂಕು ಹಾಗೂ ದೌರ್ಬಲ್ಯಗಳಲ್ಲಿ ಮಹದಂತರವಿದೆ. ಕರ್ತೃತ್ವಶಕ್ತಿ, ಕಾರ್ಯಕ್ಷಮತೆ, ಕಾರ್ಯದಕ್ಷತೆ, ಕರ್ತವ್ಯನಿಷ್ಠೆ ಇವೆಲ್ಲ ದೈವೀ ಶಕ್ತಿಯ ಆವಿಷ್ಕಾರ; ದೌರ್ಬಲ್ಯದಿಂದ ಹುಟ್ಟುವ ಗುಣಗಳಲ್ಲ ಇವು! ತನ್ನ ಕರ್ತೃತ್ವಶಕ್ತಿಯನ್ನು ಜಗತ್ತಿಗೆ ತೋರಿಸಿದ ಝಾಂಸೀರಾಣಿಗೆ ನಯನಾಜೂಕು ಅಂದರೇನೆಂಬುದು ಗೊತ್ತಿರಲಿಲ್ಲವೇನೋ !

ಅದೇ ರೀತಿ ಸುಶಿಕ್ಷಿತತೆಗೂ, ಅಹಂಮನ್ಯತೆಗೂ ನಿಕಟ ಸಂಬಂಧ ಕಂಡಬರುತ್ತಿದೆ ಸಾಮಾನ್ಯರಿಗೆ ನಿಲುಕದಂತೆ ದೂರವಿರುವದೇ ಸುಶಿಕ್ಷಿತರ ಲಕ್ಷಣ ಎಂದು ಮಹಿಳೆಯೂ ತಿಳಿದಿದ್ದಾಳೆ. ಓದಿದ ಹುಡಿಗಿ ತನ್ನೊಡನೆ ಮಾತನಾಡಿದರೆ ಹಿಂದಿನ ಪೀಳಿಗೆಯ ತಾಯಂದಿರಿಗೆ ಆಶ್ಚರ್ಯ; ತುಂಬ ಓದಿದ್ದರೂ ನಮ್ಮೊಡನೆ ಮಾತನಾಡುತ್ತಾಳೆ ಎನ್ನುತ್ತಾರೆ; ಮತ್ತೆ ಓದಿದವಳಂತೆ ಕಾಣುವದೇ ಇಲ್ಲ ಎಂದೂ ಅನ್ನುತ್ತಾರೆ; ಆ ತರಹದ ತಪ್ಪು ತಿಳುವಳಿಕೆಯನ್ನು ಅವರಲ್ಲಿ ಉಂಟು ಮಾಡಿದವರು ಯಾರು ? ನಾವೇ ಅಲ್ಲವೇ ?

ಮಾತೃದೇವೋ ಭವ ಎಂಬ ಗೌರವವನ್ನು ತಾಯಿ ಪಡೆಯಬೇಕಾದರೆ, ಅವಳೂ ತಪಸ್ಸನ್ನಾಚರಿಸಬೇಕಾಗುತ್ತದೆ; ಮಗುವಿಗೆ ಜನ್ಮ ಕೊಟ್ಟ ಮಾತ್ರದಿಂದಲೇ ಅವಳಿಗೆ ಆ ಪದವಿ ದೊರೆಯದು. ಆ ಮಗುವನ್ನು ಮನುಷ್ಯನನ್ನಾಗಿ ಮಾಡುವ ತಪಸ್ಸು ಅವಳದು; ಮಗುವಿನ ದೈಹಿಕ ಬೆಳವಣಿಗೆಯನ್ನಷ್ಟೇ ಅಲ್ಲ, ಸಾಂಸ್ಕೃತಿಕ, ಆತ್ಮಿಕ ಬೆಳವಣಿಗೆಯನ್ನೂ ಅವಳು ನೋಡಬೇಕಾಗುತ್ತದೆ. ಅವಳಿಗೆ ಆ ವಿಚಾರ, ಶಕ್ತಿ ಎಲ್ಲಿಂದ ಬರಬೇಕು ?

ಸಿರಿವಂತ ವರ್ಗದ ಮಹಿಳೆ ತಾನು ಆ ವರ್ಗದಲ್ಲಿ ಹುಟ್ಟಿಬಂದದ್ದು ತನ್ನ ಹೋದ ಜನ್ಮದ ಪುಣ್ಯ ಎಂದು ತಿಳಿಯುತ್ತಾಳೆ. ಮಧ್ಯಮ ವರ್ಗದ ಮಹಿಳೆ ಸಿರಿವಂತ ವರ್ಗದ ಮಹಿಳೆಯನ್ನು ಅನುಕರಿಸಲು ಯತ್ನಿಸುತ್ತಾಳೆ. ಏನಾದರೂ ದುಡಿಯುವ ಪ್ರಸಂಗವೇ ಬಂದರೆ, ಅದಕ್ಕಾಗಿ ನೊಂದುಕೊಳ್ಳುತ್ತಾಳೆ. ನೊಂದುಕೊಳ್ಳುತ್ತಿರುವವಳನ್ನು ದುಡಿಮೆಗೆ ಹಚ್ಚಬೇಕಾಯಿತಲ್ಲ ಎಂದು ಮನೆಯ ಯಜಮಾನನೂ ನೊಂದುಕೊಳ್ಳುತ್ತಾನೆ; ಅವಳನ್ನು ದುಡಿಮೆಗೆ ಹಚ್ಚುವದು ತನ್ನ ದೌರ್ಬಲ್ಯವೆಂದು ಭಾವಿಸುತ್ತಾನೆ ಕೂಲಿಕಾರ ವರ್ಗದ ಮಹಿಳೆ ದುಡಿಯುವದು ತನ್ನಂಥವರಿಗೆ ಬಿಟ್ಟಿದ್ದಲ್ಲ ಎಂದು ತಿಳಿದಿದ್ದಾಳೆ. ದುಡಿಯುವದು, ಅವಳ ಉಸಿರು, ಅದನ್ನು ಮಾಡೆಯೂ ಅವಳ ಜೀವನದ ರೀತಿ, ವೈಯಕ್ತಿಕ ಸುಖ–ಸ್ವಾತಂತ್ರ್ಯಗಳ ಕಲ್ಪನೆ ಭಿನ್ನವಾಗಿವೆ.

ದುಡಿಯುವದು ಪಾಪ ! ಹೋದ ಜನ್ಮದಲ್ಲಿ ಏನಾದರೂ ಪಾಪ ಮಾಡಿ ಬಂದಿದ್ದರೆ, ಈ ಜನ್ಮದಲ್ಲಿ ದುಡಿಯಬೇಕಾಗುತ್ತದೆ; ಪುಣ್ಯ ಮಾಡಿ ಬಂದವರು ಕೂತು ಉಣ್ಣುತಾರೆ ಎಂಬ

ತಿಳವಳಿಕೆ ಅನೇಕರಲ್ಲಿ ಬೇರು ಬಿಟ್ಟಿದೆ; ದೇವರು ಶಕ್ತಿ ಕೊಟ್ಟಿದ್ದಾನೆ, ದುಡಿಯುವದು ಪುಣ್ಯ ಎಂದು ತಾಯಿ–ತಂದೆ ತಿಳಿದು ಆಚರಿಸಿದರಲ್ಲವೇ ಮಕ್ಕಳು ಅದನ್ನು ಕಲಿಯುವದು? ತಾವು ದುಡಿದರೂ, ತಮ್ಮ ಮಕ್ಕಳಾದರೂ ದುಡಿಯದೆ ಸುಖವಾಗಿರಲಿ ಎಂದು ಹಾರೈಸುವದಿಲ್ಲವೇ ಅನೇಕ ತಾಯಿ–ತಂದೆಗಳು? ತಾವು ಒಳ್ಳೆಯದನ್ನು ಮಾಡುತ್ತಿದ್ದೇವೆ ಎಂದು ತಿಳಿದೇ ಅಲ್ಲವೇ ಅವರು ಹಾಗೆ ಹಾರೈಸುವದು?

'ಕಾಯಕವೇ ಕೈಲಾಸ' ಎಂದು ಬಸವಣ್ಣನವರು ಅಂದು ಹೇಳಿದ ಮಾತು ಇಂದಿಗೂ ಸತ್ಯವಾಗಿದೆ. ಈ ಮಾತು ಅಕ್ಷರಶಃ ಆಚರಣೆಯಲ್ಲಿ ಬಂದ ಮೇಲಲ್ಲವೆ ನಾವು ಅನೇಕ ಜನ ಕಾಯಕನಿರತ ಶಿವಶರಣೆಯರನ್ನು ಕಾಣುವದು?

ವೈಜ್ಞಾನಿಕ ಸಂಶೋಧನೆಗಳಿಂದಾಗಿ ಪ್ರಪಂಚ ಇಂದು ಚಿಕ್ಕದಾಗಿದೆ. ಜಗತ್ತಿನಲ್ಲಿಯೇ ಬಂಧುತ್ವ ಬೆಳೆಯುತ್ತಿದ್ದಾಗ ಭಾರತೀಯರೆಲ್ಲರು ಒಂದಾಗಬೇಕು, ಒಂದುಗೂಡಿದ ಕನ್ನಡ-ನಾಡಿನ ಮಹಿಳೆಯರು ಮನಸ್ಸಿನಿಂದ ಇನ್ನೂ ಸಮೀಪಬರಬೇಕು ಎಂದು ಹೇಳಿದರೆ ಪುನರುಕ್ತಿಯಾದೀತು! ಹೇಳುವದಕ್ಕಿಂತ ಆಚರಣೆ ಇಲ್ಲಿ ಪ್ರಧಾನ; ರಾಜಕೀಯ ದೃಷ್ಟಿಯಿಂದ ಒಂದು ಗೂಡಿರುವದು ಇದಕ್ಕೊಂದು ಸಾಧನ ಅಷ್ಟೇ! ನನ್ನ ಮನೆ, ನನ್ನ ನಾಡು ನನ್ನ ರಾಷ್ಟ್ರ ಎಂದು ಕನ್ನಡಿಗನ ಸ್ವಾರ್ಥ ಹಬ್ಬಬೇಕಾಗಿದೆ; ಆತ್ಮೀಯತೆ ಬೆಳೆಯಬೇಕಾಗಿದೆ.

ಜಪಾನು ಚಿಕ್ಕ ರಾಷ್ಟ್ರ. ಯುದ್ಧದಲ್ಲಿ ಭಸ್ಮವಾಗಿದ್ದ ಆ ರಾಷ್ಟ್ರವು ಯುದ್ಧೋತ್ತರ ಕಾಲದಲ್ಲಿ ಪುನಃ ಹೊಸದಾಗಿ ರಚಿತವಾಗಿದೆ ಅದು ಅಲ್ಲಿಯ ಜನ ಪುರುಷರು–ಮಹಿಳೆಯರು ಪಟ್ಟ ಶ್ರಮದಿಂದ; ಜಪಾನಿಗೆ ಹೋದ ಭಾರತೀಯ ಸಂದರ್ಶಕರೊಬ್ಬರು ಬಣ್ಣದ ಕಾರಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಜಪಾನೀ ಮಹಿಳೆಯೊಬ್ಬಳನ್ನು ಕೇಳಿದರಂತೆ, "ಅಮ್ಮಾ ನೀನು ಯಾರಿಗಾಗಿ ದುಡಿಯುತ್ತೀ?" ಜಪಾನೀ ಮಹಿಳೆ ಉತ್ತರಿಸಿದಳಂತೆ, „ನನ್ನ ರಾಷ್ಟ್ರಕಾಗಿ?" ನಮ್ಮಲ್ಲಿ ಎಷ್ಟು ಜನ ಈ ರೀತಿಯಾಗಿ ವಿಚಾರ ಮಾಡಬಲ್ಲರು? ಕಳೆಯುವ ವೇಳೆ ನನ್ನ ಸಂಪತ್ತು, ನನ್ನ ರಾಷ್ಟ್ರದ ಸಂಪತ್ತು ಎಂದು ಯೋಚಿಸಬಲ್ಲೆವೆ? ಒಂದು ಕೆಲಸವನ್ನು ಮುಗಿಸಿಬಿಟ್ಟು ಇನ್ನೊಂದನ್ನು ಮಾಡುವದೇ ವಿಶ್ರಾಂತಿ, ಎಂದು ವಿದೇಶೀಯರು ನಂಬುತ್ತಾರೆ. ಕಣ್ಣು ದುಡಿಯುತ್ತಿದ್ದಾಗ, ಕಾಲಿಗೆ ವಿಶ್ರಾಂತಿ, ಕಾಲು ನಡೆಯುತ್ತಿದಾಗ ಕೈಗೆ ವಿಶ್ರಾಂತಿ ಎಂಬುದು ವಿಶ್ರಾಂತಿತತ್ವ! ಆದರೆ ನಾವು ಕಳೆಯುವ ವೇಳೆಗೆ ಬೆಲೆಯಿದೆಯೇ? ನಮ್ಮ ಭಗಿನಿಯರೆಲ್ಲ ವೇಳೆಯನ್ನು ಪುಕ್ಕಟೆಯಾಗಿ ಕಳೆಯಕೂಡದೆಂದು ಪ್ರತಿಜ್ಞೆ ಮಾಡಿ ಆಚರಿಸಿದರೆ ರಾಷ್ಟ್ರದ ಯಾವ ಯೋಜನೆ ಯಶಸ್ವಿಯಾಗದೆ ಹೋದೀತು?

ವೈಜ್ಞಾನಿಕ ಸಂಶೋಧನೆಗಳು, ರಾಷ್ಟ್ರದ ವಿವಿಧ ಯೋಜನೆಗಳು, ಇವತ್ತು ಭಾರತೀಯ ಮಹಿಳೆ ತಾನು ತಿಳಿದುಕೊಳ್ಳುವದಿಲ್ಲವೆಂದರೂ, ಅವಳನ್ನವು ಬಿಡುತ್ತಿಲ್ಲ; ರಾಷ್ಟ್ರೀಯ ಪ್ರಯೋಗ ಶಾಲೆಯಲ್ಲಿ ಏನು ನಡೆದಿದೆ? ಜೋಗದ ಜಲಪಾತದಿಂದ ಹುಟ್ಟಿದ ವಿದ್ಯುಚ್ಛಕ್ತಿಯೆಷ್ಟು ಎಂಬ ವಿಷಯದಲ್ಲಿ ಅವಳಿಗೆ ವಿಶೇಷ ಆಸ್ಥೆಯಿಲ್ಲದಿದ್ದರೂ, ಗುಂಡಿಯನ್ನೊತ್ತಿದಾಗ ಆ ವಿದ್ಯುದ್ದೀಪಗಳು ತನ್ನ ಮನೆಯನ್ನು ಬೆಳಗಿದಾಗ ಅವಳಿಗೆ ಸಂತೋಷ! ಅದೇ ರೀತಿ ವಿವಿಧ ಯೋಜನೆಗಳ ಫಲ ಅವಳಿಗಿಷ್ಟವಾದರೂ ಅವುಗಳನ್ನು ತಿಳಿದುಕೊಳ್ಳುವದಾಗಲಿ, ಅದಕ್ಕಾಗಿ ದುಡಿಯುವದಾಗಲಿ ಮೊದಮೊದಲು ಅವಳಿಗೆ ಅಷ್ಟು ಸ್ಪೃಹಣೀಯವಾಗಿ ತೋರಲಿಕ್ಕಿಲ್ಲ.

ಆದರೆ ಭಾರತೀಯ ಮಹಿಳೆ ಒಬ್ಬ ನಾಗರಿಕಳು, ಸಮಾಜದ ಒಂದು ಮುಖ್ಯ ಘಟಕ! ಜಾತಿಮತ, ಜನ್ಮಸ್ಥಳ ನಿರಪೇಕ್ಷವಾಗಿ ಸಮಾನ ಹಕ್ಕುಗಳು ರಾಜ್ಯಘಟನೆಯಿಂದಲೇ ಅವಳಿಗೆ ದೊರೆತಿವೆ. ಆದರೆ ಆ ಹಕ್ಕುಗಳ ಜೊತೆಗೆ ಕರ್ತವ್ಯವೂ ಇದೆಯೆಂಬುದನ್ನು ನಾವು ಮರೆಯುವಂತಿಲ್ಲ. ಕರ್ತವ್ಯವನ್ನು ನಿರ್ವಹಿಸಲೂ ಕಲಿಯಬೇಕು, ಹಕ್ಕುಗಳನ್ನು ಉಪಭೋಗಿಸಲೂ ಕಲಿಯಬೇಕು. ಎರಡೂ ಬೇಡ ಎಂಬ ಔದಾರ್ಯ ಬೇರೆ ನಮ್ಮ ಮಹಿಳೆಯರಲ್ಲಿದೆ! ಸ್ವಾತಂತ್ರ್ಯದ ಹೋರಾಟ "ದೇಶಕ್ಕಾಗಿ ನಾವೂ ಸೇವೆಯನ್ನು ಸಲ್ಲಿಸಬಲ್ಲೆವು" ಎಂಬ ಆತ್ಮವಿಶ್ವಾಸವನ್ನು ಪಡೆದ ಮಹಿಳೆಯರದೆಷ್ಟೋ! ಇವತ್ತು ವಿಧಾಯಕ ದೃಷ್ಟಿ, ಆತ್ಮವಿಶ್ವಾಸ ಹೊಸ ಸಮಾಜ ರಚನೆಗಾಗಿ ಮತ್ತೆ ಬೇಕಾಗಿವೆ. ಆತ್ಮವಿಶ್ವಾಸವನ್ನು ಕಳೆದುಕೊಂಡರೆ ಇನ್ನಾವ ಸಂಪತ್ತಿನಲ್ಲಿ ತಾನೇ ನಾವು ವಿಶ್ವಾಸವನ್ನಿಡಬಹುದು?

ಅರ್ಥವಿಲ್ಲದ ವೈಚಾರಿಕ ಪರಂಪರೆಯ ಕೊಳೆಯಿಂದ, ಅಂಧಶ್ರದ್ಧೆಯ ಆಳದಿಂದ ನಮ್ಮ ಮಹಿಳೆಯರು ಹೊರಗೆ ಬರಬೇಕಾಗಿದೆ. ಅಜ್ಜನ ಕಾಲದಲ್ಲಿ ಬಾವಿಯ ಉಪ್ಪು ನೀರನ್ನು ಕುಡಿಯುತ್ತಿದ್ದರೆ ಇಂದೂ ಅದನ್ನೇ ಕುಡಿಯುವದು ಎಂತಹ ಅಭಿಮಾನ! ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಆರ್ಥಿಕ ರಂಗಗಳಲ್ಲಿ ವ್ಯತ್ಯಾಸಹೊಂದುತ್ತಿರುವ ಬೆಲೆಗಳನ್ನು ನಾವು ತಿಳಿದುಕೊಳ್ಳಲು ಶಕ್ತರಾಗಬೇಕು. ನೀತಿಯ ಮೂಲ್ಯಗಳಲ್ಲಿ ಆಗುತ್ತಿರುವ ವ್ಯತ್ಯಾಸವನ್ನು ಗ್ರಹಿಸಬೇಕು. ನಮ್ಮ ಅಜ್ಜಿ ಮನೆಯ ಹೊರಗಿನ ಗೋಡೆಯ ಬಣ್ಣವನ್ನೂ ನೋಡಿರಲಿಕ್ಕಿಲ್ಲ; ನಮ್ಮ ತಾಯಿ ತಾನೇ ನಿಂತು ಆ ಬಣ್ಣವನ್ನು ಹಚ್ಚಿಸಿಬೇಕು; ನನಗೆ ಬೇಕಾದ ಬಣ್ಣವನ್ನು ನಾನೇ ಇಂದು

# ಭೇರಿ

( ಐತಿಹಾಸಿಕ ನಾಟಕ ) ಎರಡನೇ ಅಂಕು.

ಲೇ:— ರತ್ನಾ ಶಾಸ್ತ್ರಿ.

[ ನವ್ಹಂಬರ ಸಂಚಿಕೆಯಿಂದ ಮುಂದುವರೆದದ್ದು. ]

ದಲ್ಲಿ ಹೇರಳವಾಗಿದ್ದಾರೆ. ಈ ಕುಹಕರು ನಮ್ಮ ದೇಶಕ್ಕೆ ಬಂದು—ಇಂತಹ—ನೀಚರ ಸಹಾಯ ಪಡೆದು ನಮ್ಮ ರಾಜ್ಯದ ಮೇಲೆ ಯಾವ ಹೊತ್ತಿನಲ್ಲಿ ಮುಳ್ಳೇರಿಸಿ ಬಿಡುವರೊ ತಿಳಿಯದಾಗಿದೆ.

ಯಮುನಾಬಾಯಿ— ದ್ರೋಹಿಗಳ ದ್ರೋಹದಲ್ಲಿಂದ, ಫಿರಂಗಿಗಳ ಜಾಲದಲ್ಲಿಂದ ಇಂದು ನಮ್ಮ ರಾಜ್ಯ ಉಳಿಯ ಬೇಕಾಗಿರುವದು.

ರಾಮರಾಯ— ರಾಜಮಾತಾ, ಸೇವಕನು ತನ್ನ ಮೆಟ್ಟಲನ್ನು ಬಿಟ್ಟು ಮಾತಾಡುತ್ತಿರುವನೆಂದು ಕ್ಷಮಿಸಿ, ಇಂದಿನ ಪ್ರಸಂಗದಲ್ಲಿ ಸಿಂಹಾಸನವನ್ನು ರಕ್ಷಿಸುವದು ತೀರ ಕಷ್ಟಸಾಧ್ಯ ಸಂಗತಿ ! ಫಿರಂಗಿಗಳ ಶಕ್ತಿಯೆದುರು ನಮ್ಮ ಶಕ್ತಿ ತಡೆ ಹಿಡಿಯದು ! ಅವರ ಕುಹಕತನದ ವಿಚಾರಗಳ ಎದುರು ನಮ್ಮ ಬುದ್ಧಿಯು ಕುಂಠಿತವಾಗುವದು.

ಯಮುನಾಬಾಯಿ— ಅಮಾತ್ಯರೆ ಅಂಜುವಿರೇಕೆ ? ನಮ್ಮ ಪುಣ್ಯ ಪುರುಷರ ಪುಣ್ಯದ ಬಲ ನಮ್ಮ ಬೆನ್ನ ಹಿಂದಿದೆ ! ನಾಡಿನ ಜನತೆಯ ಶಕ್ತಿ ಜನತಾ ಜನಾರ್ದನ ರೂಪವನ್ನು ತಾಳಿ ನಮ್ಮೆದುರು ನಿಂತುಕೊಂಡಿರುವದು.

ರಾಮರಾಯ— ಕ್ಷಮಿಸಿ ಕ್ಷಮಿಸಿ.... ! ಆ ಕಾಲವೀಗ ಉಳಿದಿಲ್ಲ ! ಎಲ್ಲವರ ಸಮಬೆರಿಕೆ ಮಾಡುವ ಕಾಲವೀಗ ಬಂದಿರುವದು. ಎರಡೂ ಶಕ್ತಿಗಳ ಬೆರಿಕೆ ಮಾಡಿ, ಹೊಸದೊಂದು ಶಕ್ತಿಯ ಆಧಾರದ ಮೇಲಿಂದ ನಮಗೆ ಯುದ್ಧಮಾಡಬೇಕಾಗಿರುವದು ! ಮಹಾರಾಜರ ವಿಚಾರಗಳನ್ನು ಕೇಳಿಕೊಂಡ ನಂತರ, ಅವರ ಯೋಜನೆಗಳನ್ನು ತಿಳಿದುಕೊಂಡ ನಂತರ ನಾವು ಮಾಡಬೇಕಾದ್ದನ್ನು ನಿರ್ಧರಿಸುವವರಿದ್ದೇವೆ. ಪ್ರಥಮವಾಗಿ ನಿಮ್ಮ ವಿಚಾರಗಳನ್ನು ಮಹಾರಾಜರಿಗೆ ಹೇಳುತ್ತೇನೆ.

ಯಮುನಾಬಾಯಿ— ಅಮಾತ್ಯರೆ, ಬೇಕಾದಂತಹ ಕಠಿಣ ಪ್ರಸಂಗಗಳಿಗೆ ಎದೆ ತಟ್ಟಿ ನಿಲ್ಲುವ ಪ್ರಸಂಗಬಂದರೂ ನರಗುಂದದ ಸಿಂಹಾಸನವನ್ನು ಉಳಿಸಿಕೊಳ್ಳಿರಿ....!ಲಗ್ನವಾದ ಹೊಸದು ಇಲ್ಲಿಗೆ ನಾನು ಬಂದಾಗ ಎಷ್ಟೊಂದು ಸಂಭ್ರಮವಿದ್ದಿತು ! ಎಷ್ಟೊಂದು ಆನಂದವಿದ್ದಿತು—ಈ ರಾಜವಾಡೆಯಲ್ಲಿ.... ! ಈ ಆನಂದ ಸಂಭ್ರಮಗಳೆಂದರೆ ಸಮವತ್ತಾಗಿ ಪರಿಣಮಿಸಬಾರದು ! ಈ ರಾಜವಾಡೆಯಲ್ಲಿ ಎಷ್ಟೊ ಸುಖದ ಕ್ಷಣಗಳನ್ನು ನಾನು ಕಳೆದಿದ್ದೇನೆ.... ! ಅನೇಕ ಸುಖೋಪಭೋಗಗಳನ್ನು ಭೋಗಿಸಿದ್ದೇನೆ.... ! ನೀವು ಅರಿಯದ ಸಂಗತಿಯು ಯಾವುದೂ ಇರುವದಿಲ್ಲ. ಬಾಬಾಸಾಹೇಬನಿಗೂ ಹೇಳುತ್ತೇನೆ.... ! ನೀವೂ ಪ್ರಯತ್ನಿಸಿರಿ ! ಇದು ನಮ್ಮ ಕೊನೆಯ ಪ್ರಯತ್ನವಿದೆಯೆಂಬುದನ್ನು ನಾನು ಅರಿಯದಿಲ್ಲ. ಇಷ್ಟೇ ಹೇಳುವದಕ್ಕೆಂದು ನಿಮ್ಮನ್ನು ಕರೆಕಳುಹಿದ್ದೆ. ಕೃಷ್ಣಾಜಿ ಪಂತ, ಬನ್ಯಾಬಾಪು ಇವರಿಗೂ ಅವಸರದ ಕರೆಯನ್ನು ಕಳುಹಿದ್ದೆ.... ! ಆದೇತಕ್ಕೆ ಬರಲಿಲ್ಲವೊ ? ನೀವು ಎಲ್ಲರಿಗೂ ಹಿರಿಯರು. ಅವರಿಗೆ ನನ್ನ ವಿಚಾರಗಳನ್ನು ತಿಳಿಸಿಹೇಳಿರಿ. ನರಗುಂದದ ರಾಜ್ಯವನ್ನು ಉಳಿಸುವದು ಮುಗಿಸುವದು ಎಲ್ಲವೂ ನಿಮ್ಮನ್ನೇ ಕೂಡಿರುವದು. ಹೋಗುತ್ತೇನೆ. (ಯಮುನಾಬಾಯಿ ಹೋಗುವರು)

ರಾಮರಾವ—ನರಗುಂದ ಸಿಂಹಾಸನ ಸಂರಕ್ಷಣೆಯನ್ನು ದೇವರೆ ಮಾಡಬೇಕು. ಮಾನವರೆನ್ನಿಸಿಕೊಳ್ಳುವವರಿಂದ ಸಾಧ್ಯವಿಲ್ಲ ! ಕುಲಸ್ವಾಮಿ ವೆಂಕಟರಮಣನೆ ಪ್ರತ್ಯಕ್ಷನಾಗಿ ನಿಂತರೆ ಮಾತ್ರ ಅದು ಸಾಧ್ಯ !

(ಫಿರಂಗಿಗಳ ಕಡೆಗೆ ಓರ್ವ ಸಿಪಾಯಿಯ ರುಂಡದ ಮೇಲೆ ಕೈಯಿಟ್ಟು ನೂಕುತ್ತ ನರಗುಂದದ ಬಾಬಾಸಾಹೇಬ ಪ್ರವೇಶಿಸುವನು.)

ಬಾಬಾಸಾಹೇಬ—ಈ ದ್ರೋಹಿ ನಮ್ಮ ಕಿಲ್ಲೆಯ ಮೇಲೆ ಹೇಗೆ ಬಂದನು ? ಏತಕ್ಕಾಗಿ ಬಂದಿದ್ದಾನೆ ? ಯಾರಿಗೆ ಭೆಟ್ಟಿಯಾಗ ಬಯಸುತ್ತಾನೆ ? ಇಂತಹ ಪೇಚಿನ ಪ್ರಸಂಗದಲ್ಲಿ ಈ ರೀತಿಯ ಸಂಗತಿ ನಡೆದು ಹೋಗುವದೆಂದರೆ ನಾಚಿಕೆಗೇಡುತನ. ಜೀವದ ಮೂಲ್ಯವನ್ನು ಕೊಟ್ಟು ಬರುವ ಪ್ರಸಂಗವನ್ನು ನಾವು ಎದುರಿಸುತ್ತಿದ್ದೇವೆ. ಆದಾಗ್ಯೂ ಹಾಗೆ ನಡೆದು ಹೋಗುವದು ನಮ್ಮ ಹೀನವೃತ್ತಿಯ ಪ್ರತೀಕ! ನಮ್ಮಲ್ಲಿಯ ಒಕ್ಕಟ್ಟಿನ ಅಭಾವವನ್ನು ಚಿತ್ರಿಸುವ ಚಿತ್ರವಿದು ! ನಮ್ಮ ಅಸಮರ್ಥತೆಯನ್ನು ಬೆರಳುಮಾಡಿ ತೋರಿಸುವ ಉದಾಹರಣೆಯಿದು ! ನಮ್ಮ ರಾಜಕಾರಣದ ಮೂಢತನವನ್ನು ನಿಚ್ಚಳವಾಗಿ ತೋರಿಸುವ ಕೈಗನ್ನಡಿಯಿದು ! ನಮ್ಮ ಕೋಟೆಯಲ್ಲಿಯೆ ನಮ್ಮ ಶತ್ರುಗಳಿದ್ದಾರೆಂದು ನಮ್ಮನ್ನು ಎಚ್ಚರಿಸುವ ಸೂಚಕವಿದು. ಅಮಾತ್ಯರೆ, ಈ ಫಿತೂರಿಯ ಬೀಜವು ನಮ್ಮ ಕಿಲ್ಲೆಯಲ್ಲಿ ಯಾರಿಂದ ಬಿತ್ತಲ್ಪಟ್ಟಿತು ? ಯಾವ ಅನ್ನದ್ರೋಹಿಯು ಈ ದ್ರೋಹವನ್ನು ಬಗೆಯಲು ಹೊರಟಿದ್ದಾನೆ ? ಜೀವವನ್ನು ಪಣಕ್ಕೆ ಹಚ್ಚಿ. ನರಗುಂದದ ಸಿಂಹಾಸನವನ್ನು ರಕ್ಷಿಸುವದಕ್ಕಾಗಿ ನಾವು ಹೋರಾಡುತ್ತಿದ್ದೇವೆ ! ಹಗಲು ರಾತ್ರಿಗಳ ಅರಿವಿಲ್ಲ ! ತಿಂದ ಅನ್ನವು ನಮ್ಮ ಮೈಗೆ ಹತ್ತುವದಿಲ್ಲ ! ಯಾವ ದ್ರೋಹಿಯು ಈ ಕೆಲಸಕ್ಕೆ ಕೈಯಿಕ್ಕಿದ್ದಾನೋ ತಿಳಿಯದು ! ಅಮಾತ್ಯರೆ, ಆದಷ್ಟು ಬೇಗ ಇದರ ಶೋಧವಾಗಬೇಕು. ಇನ್ನೂ ಕೋಟೆಯಲ್ಲಿ ಏನೇನು ನಡೆಯುತ್ತಿರುವದೋ ಯಾರಿಗೆ ಗೊತ್ತು ? ವಿಶ್ವಾಸವಿಟ್ಟವರೆ ಹೀಗೆ ದ್ರೋಹವನ್ನು ಮಾಡುವದಕ್ಕೆ ಆರಂಭಿಸಿದರೆ ನರಗುಂದದ ಸಿಂಹಾಸನವನ್ನಷ್ಟೆಯೇಕೆ ಭಾರತವರ್ಷವನ್ನು ಸಹ ಈ ಫಿರಂಗಿಗಳ ದವಡೆಯಲ್ಲಿಂದ ಬಿಡಿಸುವದು ಕಠಿಣ. (ಸೈನಿಕನ ಮೇಲೆ ಏರಿ ಹೋಗಿ) ಹೇಳು ದ್ರೋಹಿ, ಈ ಕಿಲ್ಲೆಯಲ್ಲಿ ಬರುವದಕ್ಕೆ ನಿನಗೆ ಯಾರು ಆಮಂತ್ರಣವನ್ನು ಕೊಟ್ಟಿದ್ದಾರೆ ? ಅಮಾತ್ಯರೆ, ತೀರ ಗುಪ್ತಮಾರ್ಗದಲ್ಲಿಂದ ಈತನು ನಮ್ಮ ಕಿಲ್ಲೆಯಲ್ಲಿ ಪ್ರವೇಶಿಸುತ್ತಿದ್ದನು. ಇದರ ಮೇಲಿಂದ ನೋಡಿದರೆ ರಾಜವಾಡೆಯಲ್ಲಿಯ ಯಾರಾದರೊಬ್ಬರ ಸಂಬಂಧವು ಈತನೊಡನೆ ಇರಬೇಕೆಂದು ನನಗೆ ಸಂಶಯ ಬರುವದು ! ಯೋಗ್ಯಸಮಯದಲ್ಲಿ ವಿಷ್ಣು ಈತನನ್ನು ಬಂಧಿಸಿದನು ! ಅಮಾತ್ಯರೆ, ನಾನು ಮಾತಾಡುತ್ತಿರುವುದೆಲ್ಲ ನಿಮಗೆ ಕೇಳಿಸುವದಿಲ್ಲವೆ ? ನಿಮ್ಮ ಕಿವಿಗಳು ಬಧಿರವಾಗಿಲ್ಲವಲ್ಲವೆ ? ಕಣ್ಣುಗಳು ಕುರುಡಾಗಿಲ್ಲವಲ್ಲವೆ ?

ರಾಮರಾಯ— ಆಗಿದ್ದರೆ ಒಳಿತಾಗುತ್ತಿದ್ದಿತು ಮಹಾರಾಜ ! ದ್ರೋಹಿಗಳ ದ್ರೋಹದ ವೈಲಿಗೆಯು ಕಣ್ಣು ಕಿವಿಗಳಿಗೆ ತಟ್ಟುತ್ತಿದ್ದಿಲ್ಲ.

ಬಾಬಾಸಾಹೇಬ— ಅಮಾತ್ಯರೆ, ನಿಮ್ಮ ಮಾತುಗಳನ್ನು ಕೇಳಿ ನನಗೆ ನಗೆ ಬರುತ್ತಿರುವದು. ಆದರೆ ಇಂದು ನಾವು ಸಮರಾಂಗಣದಲ್ಲಿ ಇಳಿದಿದ್ದೇವೆಂಬುದನ್ನು ಮರೆಯಬೇಡಿರಿ ! ಬೆನ್ನು ತೋರಿಸಿ ಓಡಿ ಹೋಗುವದು ಪೌರುಷದ ಲಕ್ಷಣವಲ್ಲ ! ಜಯಾಪಜಯಪಗಳು ದೈವಾಧೀನ ! ಅದಕ್ಕೆ ನಾವು ಹೊಣೆಗಾರರಲ್ಲ ! ವೀರಾಧಿವೀರರಿಗೆ ಶೋಭಿಸುವಂತೆ ಸಮರಾಂಗಣದಲ್ಲಿ ನಾವು ಯುದ್ಧವನ್ನು ಮಾಡೋಣ. ಸ್ವಾತಂತ್ರ್ಯಯುದ್ಧಕ್ಕೆ ಸ್ವಾತಂತ್ರ್ಯ ಮತ್ತು ಮರಣ ಇವೆರಡೇ ಮುಖಗಳಿರುವವು ! ಅಂ....ಇದೇನು ? ನೀವು ಮಾತಾಡುವದಿಲ್ಲವೇಕೆ ? ನಿಮ್ಮ ಶರೀರ ಕಂಪಿಸುತ್ತಿರುವದೇಕೆ ? ಅಮಾತ್ಯರೆ ಈ ಕೆಂಪು ಸೈನಿಕರನ್ನು ಹೀಗೇಕೆ ನೋಡುವಿರಿ ? ಈತನ ಪರಿಚಯವಿದೆಯೆ ನಿಮಗೆ ? ಇದ್ದರೂ ಇರಬಹುದು ! ಅದನ್ನಾರು ಹೇಳಬಲ್ಲರು ?

ರಾಮರಾಯ—(ಆರ್ತಸ್ವರದಲ್ಲಿ—) ಮಹಾರಾಜ.... (ಇರ್ತಸ್ವರದಲ್ಲಿ) ಮಹಾರಾಜ........

ಬಾಬಾಸಾಹೇಬ— ನರಗುಂದದ ದೊರೆಗೆ ರಾಜಕಾರಣದ ಗಂಧವಿಲ್ಲವೆಂದು ಎಲ್ಲರ ಭಾವನೆಯಾದಂತೆ ತೋರುವದು. ವಿಶ್ವಾಸದಿಂದ ಕುತ್ತಿಗೆಯನ್ನು ಕೊಟ್ಟವರ ರುಂಡಗಳನ್ನು ಚಂಡಾಡಿ ಬಿಡುವ ದ್ರೋಹಿಗಳೂ ನಮ್ಮ ರಾಜ್ಯದಲ್ಲಿದ್ದಾರೆಂದು ಇಂದು ನನಗೆ ತಿಳಿದು ಬಂದಿತು. ರಾಜದ್ರೋಹಿಗಳಿಂದ, ಧರ್ಮದ್ರೋಹಿಗಳಿಂದ ಮತ್ತು ಅನ್ನದ್ರೋಹಿಗಳಿಂದಲೇ ಈ ನರಗುಂದದ ಕಿಲ್ಲೆಯು ತುಂಬಿರುವದೇನು ? ಹಾಗಾಗಿದ್ದಲ್ಲಿ— ಈ ನರಗುಂದದ ಕಿಲ್ಲೆಯು ನನ್ನ ಕಣ್ಣೆದುರಿನಲ್ಲಿ ಸುಟ್ಟು ಭಸ್ಮವಾದರೆ ನನಗೆ ಎಳ್ಳಷ್ಟೂ ಖಂತವೆನಿಸದು ! ಅಮಾತ್ಯರೆ, ಸ್ಪಷ್ಟವಾಗಿ ಹೇಳಿರಿ—ಈ ಫಿರಂಗಿಯು ನಿಮ್ಮನ್ನು ಕಾಣಲಿಕ್ಕೆ ಬಂದಿದ್ದನಲ್ಲವೆ ?

ರಾಮರಾಯ— (ಸುಮ್ಮನಿರುವನು)

ಬಾಬಾಸಾಹೇಬ— ಮಾತಾಡಿರಿ ! ನಿಮ್ಮ ಮೌನದ ಅರ್ಥವನ್ನು ನಾನು ಏನೆಂದು ಭಾವಿಸಬೇಕು ? ಏನೆಂದು ಅರ್ಥಮಾಡಿಕೊಳ್ಳಬೇಕು ? ನೋಡಿದಲ್ಲೆಲ್ಲ ದ್ರೋಹಿಗಳು ! ನರಗುಂದದ ರಾಜ್ಯವು ದ್ರೋಹಿಗಳ ರಾಜ್ಯವಾಗಿದೆ—

ರಾಮರಾಯ— (ಕಂಪಿತಸ್ವರದಲ್ಲಿ) ಪ್ರಭು.....ಪ್ರಭು..

ಬಾಬಾಸಾಹೇಬ— ನನಗೆಲ್ಲವೂ ಗೊತ್ತು ! ಅಮಾ

ತ್ಯರೆ... ಅಮಾತ್ಯರೆ ಮುಪ್ಪಿನ ಕಾಲದಲ್ಲಿ ನಿಮಗೆ ಈ ದುರ್ಬುದ್ಧಿಯೆಲ್ಲಿಂದ ಬಂದಿತು ? ನರಗುಂದದ ಸಿಂಹಾಸನದ ಸೇವಕರು ನೀವು ! ಅವನ್ನು ಮರೆತು ಸಿಂಹಾಸನದ ಮೇಲೆ ಕುಳಿತುಕೊಳ್ಳಬೇಕೆಂದು ಇಚ್ಛಿಸಿದಿರಿ ! ಇಚ್ಛಿಸಿದುದು ಮಹಾಪರಾಧ ! ರಾಜದ್ರೋಹ....! ಇದಕ್ಕೆ ಯೋಗ್ಯ ಶಿಕ್ಷೆಯು ದೊರೆತೇ ತೀರುವದು. ರಾಜಗದ್ದುಗೆಯ ಎದುರಿನಲ್ಲಿ ಎಲ್ಲರೂ ಸರಿಸಮಾನರು ! ಸಿಂಹಾಸನದ ಮೇಲೆ ಕುಳಿತುಕೊಳ್ಳುವ ಇಚ್ಛೆಯು ನಿಮಗಾಗಿದ್ದರೆ ನನ್ನ ಮುಂದೇಕೆ ಹೇಳಲಿಲ್ಲ ! ಈ ವಾಮಮಾರ್ಗದಿಂದ ನಿಮ್ಮ ಮನೀಷೆಯನ್ನು ತೀರಿಸಿಕೊಳ್ಳುವ ಪ್ರಯತ್ನವನ್ನೇಕೆ ನೀವು ಮಾಡಿದಿರಿ? ಸಿಂಹಾಸನಕ್ಕೆ ನೀವು ಸಲ್ಲಿಸಿದ ಸೇವೆಯು ಬೆಲೆಯನ್ನರಿತುಕೊಂಡು, ನಿಮ್ಮನ್ನು ಈ ನನ್ನ ಕೈಗಳಿಂದ, ಎಲ್ಲ ಪ್ರಜೆಗಳ ಎದುರಿನಲ್ಲಿ ನರಗುಂದದ ರಾಜಸಿಂಹಾಸನದ ಮೇಲೆ ವೈಯ್ದು ಕೂಡ್ರಿಸುತ್ತಿದ್ದೆ. ಮುಪ್ಪಿನಕಾಲದಲ್ಲಿ ನೀವು ರಾಜ್ಯಭೋಗವನ್ನು ಭೋಗಿಸುತ್ತಿದ್ದಿರಿ ! ನಿಮ್ಮ ಸ್ಥಾನವನ್ನು ನಾನು ವಹಿಸಿ, ನಿಮ್ಮಂತೆಯೆ ಅಕ್ಷಯವಾದ ಸೇವೆಯನ್ನು ಈ ನರಗುಂದದ ಸಿಂಹಾಸನಕ್ಕೆ ಸಲ್ಲಿಸುತ್ತಿದ್ದೆ. (ಫಿರಂಗಿಯ ಕಡೆಗೆ ತಿರುಗಿ) ಎಲೋ ದ್ರೋಹಿ, ಯಾರಹತ್ತಿರ ನೀನು ಬಂದಿದ್ದೆಯೆಂಬುದನ್ನು ಹೇಳು ! ನಿನಗೆ ಉಡಿಹೊನ್ನು ಕೊಡುತ್ತೇನೆ ! ಕಿಲ್ಲೆಯಲ್ಲಿ ಬರುವ ಮಾರ್ಗವನ್ನು ನಿನಗೆ ಯಾರು ತೋರಿಸಿದರು ?

ಸೈನಿಕ—(ರಾಮರಾಯರನ್ನು ನೋಡಲು ಹತ್ತುವನು)

ಬಾಬಾಸಾಹೇಬ— ಹೀಗೇಕೆ ಅವರ ಕಡೆಗೆ ನೋಡುವೆ ? ಇವನೇ ಎಂದು ಬಾಯಿಂದ ಹೇಳು ! (ಸೈನಿಕ ಸುಮ್ಮನಿರುವನು) ಮಾತಾಡುವದಿಲ್ಲವೇಕೆ ? ರಾಜದ್ರೋಹಿಗಳನ್ನು ವಿಧಾತನು ಈ ಪ್ರಪಂಚದಲ್ಲಿ ಮೂಕರನ್ನಾಗಿ ಹುಟ್ಟಿಸಿರುವನೇನು ? ಎಲೆ ದ್ರೋಹಿ ಬೊಗಳು, ನಮ್ಮ ಕಿಲ್ಲೆಯಲ್ಲಿ ಹೇಗೆ ಬಂದೆ ? ನೀನು ಬಂದ ದಾರಿಯು ರಾಜಮನೆತನದ ಸಂಬಂಧಿಕರಿಗೆ ಮಾತ್ರ ಗೊತ್ತಿರುವದು. ಅನ್ಯರು ಅರಿಯರು ! ಪಹರೆಯವರ ಮೇಲೆ ಅನ್ಯತ್ರರ ಮೇಲೆ ಸಂಶಯ ತಾಳುವದು ಅಪರಾಧ ಬಗೆದಂತೆ ! ಸ್ವಕೀಯರೆಂದೆಣಿಸಿಕೊಳ್ಳುವವರು ತಿಂದ ಅನ್ನಕ್ಕೆ ದ್ರೋಹಬಗೆಯಲು ಹೊರಟಿದ್ದಾರೆಂದ ಮೇಲೆ ನರಗುಂದದ ಸಿಂಹಾಸನದ ಪುಣ್ಯವಿಂದು ಮುಗಿಯಿತು ! (ಸೈನಿಕನ ಚಂಡು ಹಿಡಿದು) ಎಲೆ, ಕೋಟೆಯಲ್ಲಿ ಹೇಗೆ ಬಂದೆಯೆಂಬುದನ್ನು ಹೇಳು ! ಇಲ್ಲದಿದ್ದರೆ ನಿನ್ನ ಕತ್ತುಹಿಚುಕಿ ಬಿಡುತ್ತೇನೆ........! ಬೊಗಳು ಯಾರಿಗೆ ಭೆಟ್ಟಿಯಾಗಲಿಕ್ಕೆ ಬಂದಿದ್ದೆಯೆಂಬುದನ್ನು !

ಸೈನಿಕ—(ಮೌನ-)

ಬಾಬಾಸಾಹೇಬ— ಎಲೋ ಫಿರಂಗಿ, ನಿನಗೆ ನಾನು ಆಡುವ ಭಾಷೆ ತಿಳಿಯುವದಲ್ಲವೆ? ತಿಳಿಯುತ್ತಿರಲೆಬೇಕು! ತಿಳಿಯುತ್ತವೆಂದೇ ಆದ್ರೋಹಿ ಮೆನ್‌ಸನ್ ನಿನ್ನನ್ನು ಈ ಕಿಲ್ಲೆಯಲ್ಲಿ ದ್ರೋಹಬಗೆಯಲು ಕಳಿಸಿಕೊಟ್ಟಿದ್ದಾನೆ. ಫಿರಂಗಿಗಳೆಂದರೆ ಎಲ್ಲರೂ ದ್ರೋಹಿಗಳು ! ನೀಚರು ! ಕುಹಕರು ! ಈ ರೀತಿಯಾಗಿ ಅವರಿಗೆ ನಾವು ಅನ್ನವದುತಮ್ಮ! ಈ ಪುಣ್ಯಭೂಮಿಯಲ್ಲಿ ಅವರು ಹಾಗೆ ವರ್ತಿಸುತ್ತಿದ್ದಾರೆ. ಬ್ರಿಟಿಷರ ಬಗ್ಗೆ ನನಗೆ ಎಷ್ಟೋ ಆದರವಿತ್ತು! ಅಭಿಮಾನವಿದ್ದಿತು! ಆದರೆ ಅದೆಲ್ಲವೂ ನನ್ನ ಹೃದಯದಲ್ಲಿಂದ ತೊಳೆದುಹೋಗಿರುವದು. (ಸೈನಿಕನ ಹತ್ತಿರಹೋಗಿ-ಖಡ್ಗವನ್ನು ಒರೆಯಿಂದಹಿರಿದು) ಮಾತಾಡು ದ್ರೋಹಿ, ಆ ಮೆನ್‌ಸನ್ ಈಗ ಎಲ್ಲಿದ್ದಾನೆ? ಏನನ್ನು ಮಾಡುತ್ತಿದ್ದಾನೆ? ಮಾತಾಡು! ಬೊಗಳು! ಎಲೋ, ನಾವು ಮಾತಾಡುವದೆಲ್ಲವೂ ನಿನಗೆ ತಿಳಿಯುವದಲ್ಲವೆ? ತಿಳಿಯುತ್ತದೆಂದು ಹೇಳುವದಕ್ಕೆ ನಿನ್ನ ಮುಖ ಮುದ್ರೆಯೆ ಸಾಕ್ಷಿ! ನೀನು ಮಾತಾಡದಿದ್ದರೆ ಒಂದೇ ಹೊಡೆತಕ್ಕೆ ನಿನ್ನನ್ನು ಭೂಮಿಯ ಮೇಲೆ ಕೆಡವುತ್ತೆನೆ. (ಒರೆಯಲ್ಲಿರಿಸುವನು-)

ಸೈನಿಕ—(ಇಂಗ್ಲಿಷರು ಕನ್ನಡ ಭಾಷೆ ಆಡುವಂತೆ-) ನನಗೆ ಗೊತ್ತಿಲ್ಲ...! ಗೊತ್ತಿದ್ದರೂ ಹೇಳುವದಿಲ್ಲ! ಇದು ನಮ್ಮ ಧರ್ಮ! ಕರ್ತವ್ಯ!ರಾಜನ ಇಜ್ಞೆ!

ಬಾಬಾಸಾಹೇಬ— ನಮಗೆ ದ್ರೋಹವನ್ನು ಬಗೆಯುವದು ನಿನ್ನ ಧರ್ಮ! ಕರ್ತವ್ಯ......! ಅದು ನಿನ್ನ ರಾಜನ ಆಜ್ಞೆ! ಆದರೆ ಅದು ನಮ್ಮ ದೃಷ್ಟಿಯಿಂದ ರಾಜದ್ರೋಹ! ರಾಜದ್ರೋಹಿಗಳಿಗೆ ನಮ್ಮ ದೇಶದಲ್ಲಿ ಯಾವ ಶಿಕ್ಷೆಯು ವಿಧಿಸಲ್ಪಡುವದೆಂಬುದು ನಿಮಗೆ ಗೊತ್ತೇ ?

ಸೈನಿಕ— ನರಗುಂದದ ಬಾಬಾಸಾಹೇಬರೆ, ನನಗೆ ಬೇಕಾದಂತಹ ಶಿಕ್ಷೆಯನ್ನು ವಿಧಿಸಿರಿ! ಆನಂದದಿಂದ ಸ್ವೀಕರಿಸುವದಕ್ಕೆ ನಾನು ಸಿದ್ಧನಿದ್ದೇನೆ.

ಬಾಬಾಸಾಹೇಬ-- ಭಲೆ ಭಲೆ ಸೈನಿಕನೆ ! ನಿನ್ನ ಗುಣಗಾನವನ್ನು ಈ ನರಗುಂದದ ದೊರೆಯು ಮಾಡುತ್ತಾನೆ. ನಿನ್ನಲ್ಲಿಯ ಈ ಗುಣಗಳನ್ನು ನಮ್ಮವರಿಗೂ ಕಲಿಸು ! ಆದರೆ ಸೈನಿಕನೆ, ನಮ್ಮ ದೃಷ್ಟಿಕೋನವಲ್ಲಿ ನೀನು ದ್ರೋಹಿ ! ದ್ರೋಹಿಗಳಿಗೆ ತೋಫಿನ ಬಾಯಿಗೆ ಕೊಡುವ ಶಿಕ್ಷೆಯನ್ನು ನಮ್ಮ ರಾಜ್ಯದಲ್ಲಿ ಕೊಡುತ್ತೇವೆ.

ಸೈನಿಕ— ಆನಂದದಿಂದ ಸಿದ್ಧನಿದ್ದೇನೆ. (ನಗುವನು)

ಬಾಬಾಸಾಹೇಬ— ಎಲೋ ದ್ರೋಹಿ ನಗುವಿಯಾ ?

ಯಾರೋ ಅಲ್ಲಿ........?

ಸಿಪಾಯಿ— (ಪ್ರವೇಶಿಸಿ) ಮಹಾರಾಜ....

ಬಾಬಾಸಾಹೇಬ— ಈ ದ್ರೋಹಿಯನ್ನು ತತ್‌ಕ್ಷಣ ತೋಫಿನ ಬಾಯಿಗೆ ಕೊಡು! ಇದು ರಾಜಾಜ್ಞೆಯಿದೆ! (ಸೈನಿಕನ ಕುತ್ತಿಗೆ ಹಿಡಿದು ದೂಡುವನು) ನರಗುಂದದ ರಾಜ್ಯ ಸಂರಕ್ಷಣೆಯಾಗಬೇಕಾಗಿದೆಯಲ್ಲವೆ—ಅಮಾತ್ಯರೆ?

ರಾಮರಾಯ— ಹೌದು ಮಹಾರಾಜ....

ಬಾಬಾಸಾಹೇಬ— ಮಹಾರಾಜ ನಾನೋ ನೀವೊ?

ರಾಮರಾಯ— ನೀವು.

ಬಾಬಾಸಾಹೇಬ— ನಾನೇ

ರಾಮರಾಯ— ಹೌದು.

ಬಾಬಾಸಾಹೇಬ— ಇದು ನಿಮಗೆ ಗೊತ್ತಿದ್ದರೂ ರಾಜ ದ್ರೋಹನನ್ನು..........

ರಾಮರಾಯ— (ಸೋತ ದನಿಯಲ್ಲಿ) ಮಹಾರಾಜ.... ಹೀಗೆ ಚುಚ್ಚಿ ಚುಚ್ಚಿ ಗಾಯಗೊಳಿಸಿ ಕೊಲ್ಲುವದಕ್ಕಿಂತ (ಬರಿಯಿಂದ ಖಡ್ಗವನ್ನು ಹಿರಿದು) ಇದೋ ಈ ಖಡ್ಗವನ್ನು ತೆಗೆದುಕೊಳ್ಳಿರಿ! ನಿಮಗೆ ನನ್ನ ವಿಷಯದಲ್ಲಿ ಸಂಶಯಬಂದಿದ್ದರೆ—ಈ ನರಗುಂದದ ರಾಜಸಿಂಹಾಸನದ ಎದುರಿನಲ್ಲಿ ನಿಲ್ಲುತ್ತೇನೆ. ನನ್ನ ರುಂಡವನ್ನು ಚೆಂಡಾಡಿ ಬಿಡಿರಿ! (ಮುಂದಕ್ಕೆ ಹೋಗಿ) ತೆಗೆದುಕೊಳ್ಳಿರಿ ಈ ಖಡ್ಗವನ್ನು! ಈ ಖಡ್ಗಕ್ಕೂ ರಾಜದ್ರೋಹಿಗಳ ರಕ್ತವೀಂಟುವ ಇಚ್ಛೆಯಾಗಿದೆ! ಒಂದೇ ಹೊಡೆತಕ್ಕೆ ಹಣ್ಣಾದ ಈ ದೇಹವು ಭೂಮಿಯ ಮೇಲೆ ಬೀಳಬಹುದು! ಎಂ.... ಹೊಡೆಯಿರಿ! ಸುಮ್ಮನೇಕೆ ನಿಂತುಕೊಂಡಿರಿ? ಓಂ........ಇದೇನು? ರಾಜದ್ರೋಹಿಗಳನ್ನು ಚೆಂಡಾಡುವ ಧೈರ್ಯವೂ ನಿಮಗಿಲ್ಲವೆ? ಹೀಗೇಕೆ ನನ್ನ ಮುಖವನ್ನು ನೋಡುತ್ತ ನಿಂತುಕೊಂಡಿರುವಿರಿ? ಸಿಂಹಾಸನದ ಎದುರಿನಲ್ಲಿ ಮಹಾರಾಜರ—ಕೈಯಿಂದ ಮರಣ ಬಂದರೆ—ಧಾರಾತೀರ್ಥದಲ್ಲಿ ಬಿದ್ದ ಶ್ರೇಯ ನನ್ನ ಪಾಲಿಗೆ ಬರುವದು! ವಿಲಂಬ ಮಾಡಬೇಡಿರಿ! ಮೊದಲು ನನ್ನ ಶಿರಚ್ಛೇದ ಮಾಡಿರಿ! ಬಾಬಾಸಾಹೇಬರೆ, ಮಹಾರಾಜರು ನನಗಿತ್ತ ಈ ಖಡ್ಗವನ್ನು ಕೈಯಲ್ಲಿ ಹಿಡಿದು ಹೇಳುತ್ತೇನೆ— ನಾನು ಯಾವುದೇ ದ್ರೋಹ ಈ ಸಿಂಹಾಸನದ ಜೊತೆಯಲ್ಲಿ ಮಾಡಿಲ್ಲ!

ಬಾಬಾಸಾಹೇಬ— ನಿಮ್ಮ ಎದುರು ನಿಲ್ಲುವದಕ್ಕೆ ಧೈರ್ಯ ಸಾಲದ ನಾನು ನಿಮ್ಮ ಶಿರಚ್ಛೇದವನ್ನು ಎಂದಾದರೂ ಮಾಡುವದಕ್ಕೆ ಸಾಧ್ಯವಿದೆಯೆ? ನಿಮ್ಮಂಥ ರಾಜನಿಷ್ಠರ ಎದುರು ನರಗುಂದದ ದೊರೆ ಶಿರವನ್ನು ತಗ್ಗಿಸುತ್ತಾನೆ. ವಿಕೃತ ಪ್ರಸಂಗದ ಆಘಾತದ ಮೂಲಕ ಆಡಬಾರದ ಮಾತುಗಳನ್ನು ನಾನು ನಿಮಗೆ ಆಡಿರಬಹುದು. ಅದಕ್ಕಾಗಿ ಕ್ಷಮಿಸಿರಿ. (ಬಾಬಾಸಾಹೇಬ— ಬಾಬಾಸಾಹೇಬ ಎಂದು ರಾಮರಾಯರು ಮುಂದೆ ಬರುವರು. ಇಬ್ಬರೂ ಒಬ್ಬರನ್ನೊಬ್ಬರು ಗಾಢವಾಗಿ ಅಪ್ಪಿಕೊಳ್ಳುವರು. ಸ್ವಲ್ಪ ಸಮಯದ ಮೇಲೆ ತೋಫಿನ ಸಪ್ಪಳ ಕೇಳಿಸುವದು.) ರಾಜದ್ರೋಹಿಯೊಬ್ಬ ಹೊರಟು ಹೋದನು.

ರಾಮರಾಯ—ಮಹಾರಾಜ, ಇನ್ನೂ ಅನೇಕ ದ್ರೋಹಿಗಳಿದ್ದಾರೆ.

ಬಾಬಾಸಾಹೇಬ— ಅಮಾತ್ಯರೆ, ಅದರ ಕಲ್ಪನೆ ನನಗಿರುವದು. ಮುಂಡರಗಿ ಭೀಮರಾಯ, ಸುರಪುರದ ವೆಂಕಟಪ್ಪನಾಯಕರಂತಹ ನಿಷ್ಠಾವಂತ ಜನರತ್ತ ನರಗುಂದದ ಸಿಂಹಾಸನವು ಆಶೆಯ ದೃಷ್ಟಿಯಿಂದ ನೋಡುತ್ತಿರುವದು. ಇಂತಹ ಜನರ ಬಲದ ಬೆಂಬಲದ ಮೇಲೆ ಈ ಫಿರಂಗಿಗಳೊಡನೆ ನಾವು ಹೋರಾಡಿದರೆ ಹೋರಾಡಬೇಕು. ಕೋಪದ ಭರದಲ್ಲಿ ನಿಮ್ಮ ಮನಸ್ಸನ್ನು ನೋಯಿಸಿದ್ದಕ್ಕಾಗಿ ಕ್ಷಮಿಸಿರಿ! ನರಗುಂದದ ಸಿಂಹಾಸನವನ್ನು ಉಳಿಸುವ ಹುಚ್ಚಿನಲ್ಲಿ ಇಂಥ ವರ್ತನ ನನ್ನಿಂದ ನಡೆಯಿತು! ವಯೋವೃದ್ಧರು, ಮತ್ತು ಜ್ಞಾನವೃದ್ಧರು ಕ್ಷಮಿಸಬೇಕು.

ರಾಮರಾಯ— ಈ ಫಿರಂಗಿಯು ನಮ್ಮ ಕಿಲ್ಲೆಯಲ್ಲಿ ಹೇಗೆ ಬಂದನೆಂಬುವದನ್ನು ಗೊತ್ತು ಹಚ್ಚುವದು ನಮ್ಮ ಪ್ರಥಮ ಕರ್ತವ್ಯ! ಆ ಮೇಲೆ ಕ್ಷಮೆಯ ವಿಚಾರವನ್ನು ಮಾಡೋಣ!

ಬನ್ಯಾಬಾಪು
ಕೃಷ್ಣಾಜಿಪಂತ } ಮಹಾರಾಜರಿಗೆ ಜಯವಾಗಲಿ.

ರಾಮರಾಯ— ಕೃಷ್ಣಾಜಿಪಂತ, ರಾಜಮಾತೆ ಆಗ್ರಹದ ಕರೆಯೊಂದಿಗೆ ನಿಮ್ಮನ್ನು ಕರೆಕಳುಹಿದರಂತೆ! ನಿಮ್ಮ ದಾರಿಯನ್ನು ನೋಡಿ ಅವರು ಹೊರಟು ಹೋದರು! ಆದರೆ ಒಂದು ಮಾತನ್ನು ನಿಮಗೆ ಹೇಳುವುದಕ್ಕೆ ಹೇಳಿದ್ದಾರೆ!

ಕೃಷ್ಣಾಜಿಪಂತ— (ಸೊಕ್ಕಿನಿಂದ) ಅದೇನು?

ರಾಮರಾಯ— ಇದು ವರೆಗೆ ನೀವು ನರಗುಂದದ ಸಿಂಹಾಸನಕ್ಕೆ ತೋರಿಸಿದ ಭಕ್ತಿ–ನಿಷ್ಠೆಯನ್ನು, ಶ್ರದ್ಧೆ–ವಿಶ್ವಾಸಗಳನ್ನು ಇನ್ನು ಮುಂದೆಯೂ ತೋರಿಸಬೇಕಂತೆ!

ಕೃಷ್ಣಾಜಿಪಂತ— ಇಷ್ಟೇ ಅಲ್ಲವೆ?

ರಾಮರಾಯ— ಹೌದು.

(ಮುಂದುವರೆದುದು)



(ಕಥೆ)

# ವರಪರೀಕ್ಷೆ

ಬರೆದವರು : ಎಸ್. ಜಿ. ಉಳಿಗೆರೆ, ತಲವಾಟ

ಇಂದುಪುರದ ವೆಂಕಟರಾಯರ ಮಗಳು ಅನೂಪಮಾ, ಅವಿವಾಹಿತ ತರುಣರಿಗೆ ಒಂದು ಸಮಸ್ಯೆಯೇ ಆಗಿದ್ದಳು. ಅವಳ ಶಿಕ್ಷಣ ಬಿ. ಎ. ವರೆಗೆ ಆಗಿತ್ತು. ಅಲ್ಲದೆ ಸಾಹಿತ್ಯ, ಸಂಗೀತ ಮುಂತಾದವುಗಳಲ್ಲಿ ಆಳವಾದ ಅಭ್ಯಾಸವಿತ್ತು. ರೂಪದಲ್ಲಿಯಾದರೂ ಸರಿಯೆ. ಎಂತಹ ಪರಮ ಹಂಸನಾದರೂ ಅವಳ ರೂಪ ನೋಡಿ ಬೆರಳು ಕಚ್ಚುವ ಹಾಗಿತ್ತು. ಅನುಪಮಾ ರಾಯರಿಗೆ ಒಬ್ಬಳೇ ಮಗಳು. ರಾಯರಿಗೆ ಮಗಳ ಮೇಲೆ ತುಂಬಾ ಪ್ರೀತಿ. ಎಲ್ಲರಂತೆ ಅವರ ಮಗಳು ರಾಯರಿಗೆ ಅವಳ ಮದುವೆ ವಿಷಯದಲ್ಲಿ ನುಂಗಲಾರದ ತುತ್ತಾಗಿರಲಿಲ್ಲ. ಒಳ್ಳೆಯ ಧನಿಕನಾದ, ಉಚ್ಚ ಶಿಕ್ಷಣ ಪಡೆದ. ರೂಪವಂತ ವರನನ್ನು ಹುಡುಕಿ ಅನುಪಮಳ ಲಗ್ನಮಾಡಲು ಆಶಿಸಿದ್ದರು. ಅನುಪಮಳ ಜಾತಕ ಹೊರಬಿದ್ದಲಾಗಾಯ್ತು ಅನೇಕ ಕನ್ಯಾ ಉಮೇದವಾರರ ಕಾರು, ಜೀಪುಗಳು ರಾಯರ ಮನೆ ಬಾಗಿಲಿಗೆ ಬಂದು ಹೋಗಿದ್ದವು. ಕೆಲವು ವರರು ರಾಯರ ಮನಸ್ಸಿಗೆ ಬಂದಿದ್ದರೂ ಅನುಪಮಳ "ವರ ಪರೀಕ್ಷೆ ವಿಧಾನ" ದಲ್ಲಿ ತೇರ್ಗಡೆಯಾಗಿರದ ಕಾರಣ ಬಿಡ ಬೇಕಾಯಿತು ಅವಳ ವರಪರೀಕ್ಷೆವಿಧಾನ ತುಂಬಾ ವಿಶಿಷ್ಟ ಪದ್ಧತಿಯದಾಗಿತ್ತು. ಆದುದರಿಂದ ಅವಳ ಕೈಹಿಡಿಯ ಬಯಸಿದ ಎಷ್ಟೋ ವರರು ಚಳ್ಳೆಕಾಯಿತಿಂದಿದ್ದರು. ಅನುಪಮಳ ಕೈಹಿಡಿಯ ಬಯಸಿದ ವರಲ್ಲಿ ನನ್ನ ಗೆಳೆಯ ಸದಾಶಿವನೂ ಒಬ್ಬ. ಅವನು ತುಂಬಾ ಧನಿಕ, ರೂಪವಂತ, ಶಿಕ್ಷಣ ಎಂ. ಎ. ವರೆಗೆ ಆಗಿತ್ತು; ಹಿಂದಿಯಲ್ಲಿ"ಸಾಹಿತ್ಯ ರತ್ನ"ವನ್ನು ಪಾಸುಮಾಡಿಕೊಂಡಿದ್ದ. ಅವನ ನನ್ನ ಸ್ನೇಹ ಬಾಲ್ಯದಿಂದಲೂ ನಡೆದು ಬಂದಿದ್ದ ಆ ಸ್ನೇಹದ ನಿದರ್ಶನಕ್ಕಾಗಿ "ಅವನು ಲಗ್ನವಾಗುವಾಗ ನಾನ ಅವನ ಸಂಗಡ ಹೆಣ್ಣು ನೋಡಲು ಬರಬೇಕೆಂದು "ಒಪ್ಪಂದವಾಗಿತ್ತು. ಆ ಪ್ರಕಾರ ನನಗೆ ಅವನ ಸಂಗಡ ಇಂದುಪುರಕ್ಕೆ ಹೋಗಬೇಕಾಗಿ ಬಂತು. ಅನುಪಮಳ "ವರಪರೀಕ್ಷೆ ವಿಧಾನ" ನನಗೆ ಈ ಮೊದಲೇ ತಿಳಿದಿದ್ದರಿಂದ ಅದನ್ನು ಸದಾಶಿವನಿಗೆ ತಿಳಿಸಿದಾಗ "ಬಿಡೊ, ಏನು ಹೇಳ್ತಿಯ, ಅವಳನ್ನು ನನ್ನ ಬಲೆಯಲ್ಲಿ ಹಾಕಿ ಕೊಳ್ಳದಿದ್ದರೆ ನಾನು ಕಾಲೇಜ ಕಲಿತದ್ದು ಸುಳ್ಳೆ ಸರಿ" ಎಂದು ನನ್ನ ಬೆನ್ನು ಚಪ್ಪರಿಸಿದ್ದ.

ನಮ್ಮ ಇಂದುಪುರದಪ್ರೋಗ್ರ್ಯಾಂ ಬೆಳಗಿನ ಹನ್ನೊಂದಕ್ಕಿತ್ತು. ಸಮಯಕ್ಕೆ ಅರ್ಧ ಗಂಟೆ ಮುಂಚೆ ಬೆಳ್ಳಿ ಬಸಪ್ಪನವರ ಆಧುನಿಕ ಮಾದರಿಯ "ಲ್ಯಾಂಡ ಮಾಸ್ತರ" ಕಾರೂ ಬಂತು. ಹಾಗೇ ನಾವಿಬ್ಬರೂ ನಮ್ಮೂರಿನವರೇ ಆದ ರಾಮಣ್ಣನವರೂ ಕಾರನ್ನೇರಿ ಹೊರಟೆವು.

ಕಾರು ಬೆಟ್ಟ ಗುಡ್ಡಗಳ ಮಧ್ಯ ನಿಸರ್ಗ ರಮಣೀಯ ನೋಟದ ಮಧ್ಯ ಹಾದು ಹೋಗುವ ರಸ್ತೆಯಲ್ಲಿ ಭರದಿಂದ ಸಾಗಿತ್ತು. ನಮಗೆ ಅದಾವುದರ ಪರಿವೆ ಇರಲಿಲ್ಲ. ಅನೂಪಪಮಳ "ವರಪರೀಕ್ಷೆ ವಿಧಾನ" ದಲ್ಲಿ ವರನು ವಹಿಸಬೇಕಾದ ಜಾಗ್ರತೆ ಬಗ್ಗೆ ಅವ್ಯಾಹತವಾಗಿ ಮಾತು ಮಾತ್ರ ನಡೆದೇ ಇತ್ತು. ಅನೇಕ ಮೈಲುಕಲ್ಲುಗಳನ್ನು ಕಳೆದು ನಮ್ಮ ಕಾರು ರಾಯರ ಮನೆ ಮುಂದೆ ನಿಂತಿತು. ಸ್ವತಃ ರಾಯರೇ ನಮ್ಮನ್ನು ಸ್ವಾಗತಿಸಿ ಒಳಗೆ ಕರೆದೊಯ್ದರು.

ವಿಶಾಲವಾದ ಹಾಗೂ ಸುಸಜ್ಜಿತವಾದ ಹಜಾರ. ಅರ್ಧ ಹಜಾರವನ್ನೇ ಆವರಿಸಿದ ದುಂಡು ಮೇಜು. ಮೇಜಿನ ಸುತ್ತಲೂ ಕುರ್ಚಿಗಳು. ಕುರ್ಚಿಗಳ ಮೇಲೆ ಕವರ್ ಹಾಕಿದ ದಪ್ಪನೆಯ ಒರಗುದಿಂಬುಗಳು. ಕವರ್ ಮೇಲೆ ಚಿತ್ರವಿಚಿತ್ರವಾಗಿ ಕಸೂತಿ ನೆಯ್ದಿದ್ದರು. ಪಕ್ಕದಲ್ಲಿ "ಮೇಡ ಬೈ-ಅನೂಪಮಾ" ಎಂದು ಬರೆದಿತ್ತು. ಆ ಕಸೂತಿ ನೋಡಿದರೇನೇ ಅನೂಪಮಳ ಕಲಾಕುಶಲತೆ ಎದ್ದು ಕಾಣುತ್ತಿತ್ತು. ನಾವೆಲ್ಲ ಒಂದೊಂದು ಕುರ್ಚಿಹಿಡಿದು ಕುಳಿತುಕೊಂಡೆವು. ಒಂದೆರಡು ನಿಮಿಷದಲ್ಲಿ ಊರಿನವರೆಲ್ಲ ಬಂದು ಸೇರಿದರು.

ವಿಪರೀತ ಬಿಸಿಲಿನಲ್ಲಿ ಬಂದ ನಮಗೆ ತಣ್ಣನೆಯ ಶರಬತ್ತನ್ನು ಕೊಟ್ಟರು. ರಾಮಣ್ಣನವರು ಏನೋ ಮಾತಿಗಾಗಿರಬೇಕು ಒಳಗೆ ಹೋದರು. ನಾವಿಬ್ಬರೂ ರಾಜಾಜಿಯವರ ಸ್ವತಂತ್ರ ಪಕ್ಷದ ಧ್ಯೇಯ ಧೋರಣೆ ಕುರಿತು ಮಾತನಾಡ ಹತ್ತಿದೆವು.

ಅಷ್ಟರಲ್ಲಿ ರಾಯರು ಹಾಗೂ ರಾಮಣ್ಣನವರು ಅನೂಪಮಾ ಹಜಾರಕ್ಕೆ ಬಂದರು. ರಾಯರೂ ಹಾಗೂ ರಾಮಣ್ಣನವ್ರು ಎದುರಿನ ಕುರ್ಚಿಯಲ್ಲಿ ಕುಳಿತುಕೊಂಡರು. ಅನೂಪಮಳು ತಂದೆಯ ಸಮೀಪದಲ್ಲಿ ಕುರ್ಚಿ ಹಿಡಿದು ಕುಳಿತುಕೊಂಡಳು. ಸದಾಶಿವನ ವಾಕ್ ಪರೀಕ್ಷೆ ಮಾಡಲಿರಬೇಕು. ಅನೂಪಮಾ ಅವನೊಡನೆ ಲೋಕಮಾನ್ಯ ತಿಲಕರ "ಆರ್ಕ್‌ಟಿಕ್ ಹೊಂ ಇಂ ದಿ ವೇದಾಸ್" ಗ್ರಂಥವನ್ನು ಕುರಿತು ಚರ್ಚಿಸಹತ್ತಿದಳು. ನಾನೂ ಚರ್ಚೆಯಲ್ಲಿ ಭಾಗವಹಿಸುವವನಿದ್ದೆ. ಆದರೆ ಸದಾಶಿವನ ಪ್ರಭಾವಕ್ಕೆ ಭಂಗಬರಹುದೆಂದು ಸುಮ್ಮನಿದ್ದೆ. ಮಾತು ಮುಗಿದ ನಂತರ ತಂದೆಯ ಸಲಹೆಯ ಮೇರೆಗೆ ನಾಲ್ಕೆಂಟು ಹಾಡುಗಳನ್ನು ಹಾಡಿದಳು. ನಂತರ ಅವಳದೇ ಕೃತಿರತ್ನವಾದ "ಮಂದಾರ ಕುಸುಮ" ದಲ್ಲಿಯ ಕೆಲವು ಭಾವಗೀತೆಗಳನ್ನು ಹಾಡಿ ತೋರಿಸಿದಳು. ಅನುಪಮಳ ರೂಪ, ವಾಕ್‌ಚಾತುರ್ಯ, ಸಂಗೀತ, ಕಾವ್ಯರಸಭಾವ, ಇವೆಲ್ಲ ನೋಡಿ ಸದಾಶಿವ ಮಂತ್ರಮುಗ್ಧನಾಗಿದ್ದ.

ಸಂಗೀತ, ಕಾವ್ಯಾವಲೋಕನೆಯಾದ ನಂತರ ಕಾಫಿ ಬಂತು. ಕಾಫಿ ಕುಡಿಯುವುದು ನಮಗೆ ಒಂದು ಜಟಿಲ ಸಮಸ್ಯೆಗಿಟ್ಟುಕೊಂಡಿತು. ಏಕೆಂದರೆ ಕಾಫಿಯನ್ನು ಸ್ಟೀಲ್ ಬಟ್ಟಲಿನಲ್ಲಿ ಹಾಕಿ ಮೇಲೆ ಸ್ಟೀಲ್ ಪ್ಯಾಲಿಯನ್ನು ಮುಚ್ಚಿ ತಲೆ ಕೆಳಗಾಗಿ ಇಟ್ಟಿದ್ದರು. ತಲೆ ಕೆಳಗಾಗಿದ್ದ ಕಪ್ಪನ್ನು ಮೆಲ್ಲನೆ ಕೈಗೆತ್ತಿಕೊಂಡು ಮೇಲೆ ಮಾಡಿ ಮುಚ್ಚಿದ ಬಟ್ಟಲನ್ನು ತೆಗೆದು ಕಾಫಿ ಕುಡಿಯಬೇಕಾಗಿತ್ತು. ನಮಗಿದು ಹೊಸ ಅನುಭವವಾಗಿತ್ತು. ನಾನು ಸ್ವಲ್ಪ ಜಾಣತನ ಖರ್ಚುಮಾಡಿ ರಾಯರಂತೆ ಮಾಡಿ ಕಾಫಿ ಕುಡಿದೆ. ರಾಮಣ್ಣನವರೂ ರಾಯರನ್ನು ಅನುಕರಿಸಿದರು ಆದರೆ ಸದಾಶಿವನು ಅನುಪಮಳನ್ನು ನೋಡುವ ಭರದಲ್ಲಿ ಬಟ್ಟಲನ್ನು ತೆಗೆಯಲಾರದೆ ಕಾಫಿಯನ್ನು ಬಟ್ಟೆಯ ಮೇಲೆಲ್ಲಾ ಸುರವಿಕೊಂಡ. ಅನುಪಮಳು ಸದಾಶಿವನ ಆ ಭಂಗಿಯನ್ನು ನೋಡಿ ಮುಖಕ್ಕೆ ಪುಸ್ತಕ ಮುಚ್ಚಿಕೊಂಡು ನಗುತ್ತಿದ್ದಳು.

ತಾಂಬೂಲ ಚರ್ವಣದ ನಂತರ ರಾಮಣ್ಣನವರು ಮುಂದಿನ ವಿಷಯದ ಬಗ್ಗೆ ಏನೆಂದು ವಿಚಾರಿಸಿದರು. ರಾಯರು ಇನ್ನೂ ನಾಲ್ಕಾರು ದಿನದಲ್ಲಿ ತಿಳಿಸುತ್ತೇನೆ ಎಂದರು ಹಾಗೆ ಆಗಲೆಂದು ನಾವು ಹೊರಟೆವು. ನಾವು ಹೊರಟಿದ್ದು ಊರಿಗಾದರೂ ನಮ್ಮ ಸದಾಶಿವನ ಮನಸ್ಸು ಅನುಪಮಳತ್ತಲೇ ಧಾವಿಸುತ್ತಿರಬೇಕು. ಏನೂ ಮಾತನಾಡದೆ ಸುಮ್ಮನೆ ಗುಮ್ಮನ ಹಾಗೆ ಕುಳಿತುಕೊಂಡಿದ್ದ. ಮನೆ ಸೇರಿದ ಸದಾಶಿವನಿಗೆ ಅನುಪಮಳ ಚಿಂತೆಯೇ ಚಿಂತೆ. ಅವಳದೇ ಸ್ವಪ್ನ, ಅವಳ ಆ ಸುಂದರ ರೂಪ ಅವನ ಕಣ್ಣು ಮುಂದೆ ನುಸುಳಿ ಮಾಯವಾಗುತ್ತಿತ್ತು. ಅವಳ ವಾಗ್ವೈಖರಿ, ಅವಳ ಸಂಗೀತ, ತಾನೇ ತಾನಾಗಿ ಅವನ ಕಿವಿಗೆ ಕೇಳಿ ಬರುತ್ತಿತ್ತು. ಅವಳು ನನ್ನನ್ನು ಮೆಚ್ಚಿರಬಹುದೇ ? ನಾನವಳ ಕೈಹಿಡಿಯಬಹುದೇ? ಎಂದು ಮುಂತಾಗಿ ಯೋಚಿಸಿದನು. ಒಂದು ಸಲ ಅವಳ ಮುಂದೆ ತನ್ನ ವ್ಯಾಪ್ತಿತ್ವ ಪ್ರದರ್ಶನ, ಘನಗಂಭೀರತೆ, ವಾಕ್ ಸರಣಿ, ಅವಳನ್ನು ಮೋಹಿಸಿದೆ. ಅವಳು ನನ್ನನ್ನು ಮೆಚ್ಚಿದ್ದಾಳೆ. ನಾನವಳ ಭಾವೀ ಪತಿ ! ಅವಳು ನನ್ನ ನೆಚ್ಚಿನ ಮಡದಿ ! ಸದಾಶಿವ-ಅನೂಪಮ ! ಅನೂಪಮ-ಸದಾಶಿವ ! ಎಂತಹ ಸೊಗಸಾದ ಹೆಸರು ! ಎಂತ ಸೊಗಸಾದ ಜೋಡಿ ! ಎಂದು ತನ್ನೊಳಗೆ ಅಂದುಕೊಳ್ಳುವನು. ಮತ್ತೊಂದು ಸಲ, ತಾನು ಮೈಮೇಲೆ ಕಾಪಿ ಸುರವಿಕೊಂಡದ್ದು, ಅದನ್ನು ನೋಡಿ ಅನೂಪಮ ನಕ್ಕಿದ್ದು ಮುಂತಾದ ಘಟನೆಗಳು ಮನಸ್ಸಿಗೆ ಬಂದಾಗ ಭಯ. ನಡುಕ ಅದೊಂದು ಚಿಕ್ಕ ಘಟನೆಯಲ್ಲಿ ಅವಳು ನನ್ನನ್ನು ತಿರಸ್ಕರಿಸಬಹುದೇ ? ಎಂದು ಮುಂತಾಗಿ ಯೋಚಿಸುತ್ತಿದ್ದನು. ಈ ಯೋಚನೆ ಮನಸ್ಸಿಗೆ ಬಂದಾಗ ಅವನ ಮುಖದ ಮೇಲೆ ಎಲ್ಲಿಲ್ಲದ ನೀರವತೆ ಕವಿದುಕೊಳ್ಳುತ್ತಿತ್ತು. ಹೀಗೆ ಅವನು ರಾಯರ ಆ ನಾಲ್ಕಾರು ದಿನಗಳನ್ನು ಹೇಗೆ ಕಳೆದನೋ ಎನ್ನುವದು ದೇವರಿಗೇ ಗೊತ್ತು, ಅವನಿಗೇ ಗೊತ್ತು. ಆವನಾಯಿತು, ಅವನ ಕೋಣೆಯಾಯಿತು.

ಆರನೇ ದಿನ ಮೂರು ಘಂಟೆಯ ಸಮಯ. ಸದಾಶಿವ ರೂಮಿನಲ್ಲಿ ಊಟಮಾಡಿ ಮಲಗಿದ್ದ. ಅವನಿಗೆ ಆ ಹಗಲು ನಿದ್ರೆಯಲ್ಲಿಯೂ ಕನಸು. ಕನಸಿನಲ್ಲಿ ಅನೂಪಮ. ಇದ್ದಕ್ಕಿದ್ದಂತೆ ಬಾಗಿಲಿನಲ್ಲಿ ಅಂಚೆ ಪೇದೆ "ಪೋಸ್ಟ" ಎಂದು ಕೂಗಿದ ಕೂಗು ಅವನ ಕಿವಿಗೆ ಅಪ್ಪಳಿಸಿ ಬಡಿಯಿತು. ಸರ್ರನೆ ಎದ್ದು ಬಂದು ಲಕೋಟೆಯನ್ನು ತೆಗೆದುಕೊಂಡು ನೋಡಿದ. ರಾಯರದೇ ಬರಹ. ಇಂದುಪುರದ ಅಂಚೆ ಮುದ್ರೆ ಇತ್ತು. ರೂಮಿಗೆ ಬಂದು ಒಡೆದು ನೋಡಿದ. "ನಮ್ಮ ನಿಮ್ಮ ಸಂಬಂಧ ಕೂಡಿ ಬಂದಿಲ್ಲ. ಆದಕ್ಕೆ ಋಣಾನುಬಂಧ ಒದಗಿ ಬಂದಿಲ್ಲ" ಎಂದು ಬರೆದಿತ್ತು. ಕೆಳಗಡೆ ವೆಂಕಟರಾಯರ ಮಾರುದ್ದದ ಸಹಿ ಇತ್ತು. ಸದಾಶಿವನಿಗೆ ಆ ಪತ್ರದಲ್ಲಿ ಅನುಪಮಳು ಕಾಣಬಾರದೆ ಪ್ರಳಯ ಭೈರವಿಮೂರ್ತಿ ಗೋಚರಿಸಿದಂತಾಯಿತು. ಅದನ್ನಲ್ಲಿಯೇ ಪರಪರನೆ ಹರಿದು ಹಾಕಿದ.

ನನಗೆ ಈ ವಿಷಯ ತಿಳಿದು ಬಂದಾಗ ಸದಾಶಿವನನ್ನು ತಿರಸ್ಕರಿಸಲು ಕೊಟ್ಟ ಕಾರಣವನ್ನು ತಿಳಿಯಬೇಕೆಂದು ನಮ್ಮೂ

ರಿನಲ್ಲಿಯ ಅನೂಪಮಳ ಗೆಳತಿ ಶ್ಯಾಮಳಲ್ಲಿಗೆ ಹೋದಾಗ ಅವಳು ನನಗೊಂದು ಕಾಗದವನ್ನು ಕೊಟ್ಟಳು. ಅದರಲ್ಲಿ “ಪಾಪ, ನಾನು ಕೊಟ್ಟ ಕಾಪಿಯನ್ನು ಕುಡಿಯಬಾರದೆ ಮೈಮೇಲೆ ಸುರವಿಕೊಂಡ ಮಿಸ್ಟರ್ ಸದಾಶಿವರಾಯರು ನನ್ನ ಪರೀಕ್ಷೆಯಲ್ಲಿ ನಪಾಸಾಗಿದ್ದಾರೆ. ಅದಕ್ಕಾಗಿ ನಾನು ಅವರನ್ನು ತಿರಸ್ಕರಿಸಿದ್ದೇನೆ” ಎಂದು ಬರೆದಿತ್ತು.

---

## “ಹಣ”

೧

ಮಾನವನೆ ನಿನ್ನ ಮನವ ಹೋಹಿಸಿ,
ಜೀವಹಿಂಡಿ ನಿನ್ನ ಸಾಯಿಸಿ,
ನಿನ್ನ ಸಂಸಾರವ ಗಾಳಿಯು ಧೂಳಿಯಾಗಿ ಹಾರಿಸಿ,
ಮನೆಯು ಮಸಣದೋಲ್‌ಗೊಳಿಸಿ,
ನಿನ್ನ ಮೆಟ್ಟಿ ತುಳಿದು ನಿಲ್ಲಬಲ್ಲೆ.
ನಾನೆ ಸರ್ವಕಾರ್ಯಕಾರಣ,
ನಾನೆ ಸರ್ವಕಾರ್ಯ ಹರಣ!

೨

ಆಶೆಯಾಮಿಷಮೋರಿ,–
ಮಾನಮರ್ಯಾದೆ ಕಸಿದುತೂರಿ,
‘ಕಳ್ಳ, ಸುಳ್ಳ–ಕಪಟ ಇವನರಿ,’–
ಎಂದು ಜನತೆಯೊಳುಸುರಿ,
ನಿನ್ನ ಮಾನಹೀನ ಪಶುವನಾಗಿಸಬಲ್ಲೆ.
ನಾನೆ ಸರ್ವಕಾರ್ಯಕಾರಣ,
ನಾನೆ ಸರ್ವಕಾರ್ಯಹರಣ!

೩

ನಗಿಸಿ ನಿನ್ನ ಅಳಿಸಬಲ್ಲೆ,
ನಿನ್ನ ನಲ್ಲೆಯನ್ನು ನಿನ್ನೆದುರಲ್ಲೇ–
ಮಾನಹೀನಗೊಳಿಸಬಲ್ಲೆ,
ನಿನ್ನ ತಲೆಯ ಕೆಡಿಸಿ ಕುಣಿಸಬಲ್ಲೆ,
ಎಲ್ಲ ಬಲ್ಲೆ ನಿನ್ನ ತುಳಿಯಬಲ್ಲೆ.
ನಾನೆ ಸರ್ವಕಾರ್ಯಕಾರಣ,
ನಾನೆ ಸರ್ವಕಾರ್ಯಹರಣ!

೪

ಸುಖವು ಎಂದು ನನ್ನನಪ್ಪುತಿಹೆ,
ಮಾನವನೆ ನೀನೆಂತ ಬೆಪ್ಪನಾಗುತಿಹೆ?
ನನ್ನ ನಂಬಿದವರಾರು–
ನಿಜಸುಖವ ಪಡೆದಿಹರು?
ಸ್ಥಿರವೇನು ನಾ, ಸುಖವ ನೀಡಲು?
ಅಲ್ಲ, ನಿನ್ನಗಾಸಿ ಗೊಳಿಸಲು–
ಮೋಹದೋರಿ ಮೋಜು ನೋಡಬಲ್ಲೆ.

೫

ಜಗದ ಶಕ್ತಿ ನಾನು,
ಜಗದ ಜೀವದುಸಿರು ನಾನು,
ಜಗವು ನಡೆಯುತಿಹುದು,-
ನನ್ನಿಂದಲೇ, ಎನಗೆ ತಲೆಬಾಗಿಹುದು,-
ಜಗದ ಜನವೆಲ್ಲ ಎನಗೆ ದಾಸರಾಗಿ।
ನಾನೆ ಸರ್ವಕಾರ್ಯಕಾರಣ,
ನಾನೆ ಸರ್ವಕಾರ್ಯಹರಣ!
ಝಣ ಝಣತ್ಕಾರ ತಾಣ- ನಾನು ಹಣ!

ಮು. ಚೆ. ಮುಂಡಾಸದ,

# ನಂದನ ಗಿಳಿಯಾಗಿ ಹಾರೇವ

ತೀರದಾಶೆಯ ಮಾಡಿ ಕೊರಗುತಿಹುದೇತಽಕ !
ತೆರೆ ಎದ್ದು ತೀರ ತುಳಿದಂಗಽ ! ಮನದಾಗ !
ಅರುವಿನ ಹಾದಿ ಮುಚ್ಚೀತ !!
ಮನದ ಬಯಕೆಗಳೆಲ್ಲ ದನಿ ಗೂಡಿ ಕೊಂಡಾವ !
ನನಯ ಕಿರಣದ ಕಾಂತಿ ಸೂಸೇದ ! ಪ್ರೇಮಕ !
ಅನುವಿತ್ತು ಪ್ರೀತಿ ಉಳಿಸೇದ !!
ಮುತ್ತಿನಂತಹ ಬರಹ ಮುತ್ತುದುರಿದ್ಹಾಂಗಾಯ್ತು !
ಹೊತ್ತಿನ ಬೆಳಕು ಸುತ್ತೆಲ್ಲ ! ಬಿದ್ದರೆ
ಕತ್ತಲ ದೂರಽ ಸರಿದೀತ !!
ಬರಿ ಮಾತು ಬಳಸಿದರ ಫಲವೇನು ಸಿಕ್ಕೀತು
ಕರಕಿಯು ಕಿತ್ತು ಒಗೆದಂಗ ! ಬಾಯ್ಮಾತು
ಬರಗಾಲ ದಿರುವ ಜನದಾಂಗ !!
ಒಮ್ಮತವ ಬೇಕೀಗ ಭಯ ಸುತ್ತು ಬರದಂಗ !
ಕಮ್ಮಿತದ ಕುಸುಮದೆಸಳಂಗ ! ಬಾಳಿಗೆ
ಸೊಮ್ಮಂತೆ ನೀನು ನನಗೀಗ !!
ಗುಡ್ಡದ ವಾರ್ಯಾಗ ಕುಣಿಯುವ ನವಿಲಂಗ !
ಮುದ್ದಿನ ಪಕ್ಷಿ ಎದೆಯಾಗ ನಿನರೂಪ !
ಸದ್ದಿಲ್ಲದೆ ಕುಳಿತು ಕುಣಿವುಽದ !!
ಚಿನ್ನದಂತಹಬಣ್ಣ ! ನಿನ್ನ ಕಾಡಗಿ ಗಣ್ಣ !
ಹೊನ್ನೀನ ಕಿರಣ ತೂರೇದ ! ಮನಸೀನ
ಬನ್ನವತಿಳಿಸಿ ನಿಂತಽದ !!
ಅಲ್ಲೇನು ಇಲ್ಲೇನು ಅಗಲಿಕೆಯು ಬಹು ದುಃಖ
ಇಲ್ಲದ ಚಿಂತಿ ಎದ್ದೀತ ! ಜೀವಕ !
ನಿಲ್ಲದ ಹಾಂಗ ಮಾಡಿತ !!
ರಥಕೆರಡು ಗಾಲಿಗಳು ಇರುವಂತೆ ! ಸಂತಸಕ
ನಾನೀನು ಜೋಡಿ ಕೂಡೇವಽ ! ಇಬ್ಬರು
ಚಿಂತಿಯ ತುಳಿದು ಹಾಡೇವಽ !
ಒಂದಾಗಿ ಬಾಳಿನ ಹಬ್ಬವ ಮಾಡುತಽ
ಚಂದಾಗಿ ಕನ್ನಡದ ಹಾಡ್ಹೇಳಿ ! ನಗುನಗುತ
ನಂದನ ಗಿಳಿಯಾಗಿ ಹಾರೇವ !!

—ಎಚ್. ಆರ್. ಬಂಡೀವಡ್ಡರ, ಹಾರೋಬೆಳವಡಿ.

# ತಂಗಿಯರೆ ! ಕೇಳುವಿರಾ ನನ್ನದಿಷ್ಟು ಕಥೆ !

ಬರೆದವಳು— **ಸತ್ಯವಾದಿನಿ.**

## **೯ನೇ ಪ್ರಕರಣ.** ಎತ್ತ ನೋಡಿದತ್ತೆಲ್ಲ ಮಾನವ ಸ್ವಭಾವವು ಒಂದೆ !

[ ೧೯೫೫ನೇ ನವ್ಹಂಬರ ಸಂಚಿಕೆಯಿಂದ ಮುಂದೆ ಸಾಗಿದ್ದು. ]

**ಕಥೆಯ ಸಾರಾಂಶ:—** ನಾನೋರ್ವ ಭಾವಸಾರ ಕ್ಷತ್ರಿಯ ಬಡಕುಟುಂಬದಲ್ಲಿ ಹುಟ್ಟಿದವಳು. ಓರ್ವ ತೇಜೋಹೀನ, ಹೇಡಿ, ಕುರೂಪಿ ಆಪ್ತನನ್ನು ಲಗ್ನವಾಗಿದ್ದು ತಂದೆ ಮತ್ತು ಗಂಡ ಇಬ್ಬರು ಕುಡುಕರು. ಆದ್ದರಿಂದ ಮನೆಯಲ್ಲಿ ಸ್ವಾಸ್ಥ್ಯವಿಲ್ಲ. ನಾನು ಸಾಧಾರಣ ಚಲುವೆ, ಚುರುಕು ಬುದ್ಧಿಯುವಳು,. ಸಂಘಟನಾ ಚತುರಳು, ಮಾತುಗಾರಳು, ಆಕರ್ಷಕಳು ಇದ್ದ ಮೂಲಕ, ಎಲ್ಲರು ನನ್ನನ್ನು ವಿಶೇಷವಾಗಿ ತರುಣರು ಪ್ರೀತಿಸುತ್ತಿದ್ದರು. ಓರ್ವ ಸೆಕ್ರೆಟರಿ ಬಲೆಯೊಳಗೆ ಸಿಕ್ಕಬಿದ್ದೆನು. ಗಂಡನು ಸಂಶಯ ಪಿಶಾಚಿಗೆ ಬಲಿಬಿದ್ದನು. ಕೊನೆಗೆ ಓರ್ವ ಮೋಟಾರ ಡ್ರಾಯಿವ್ಹರನ ಕೂಡ ಓಡಿ ಹೋಗಿದ್ದಕ್ಕೆ ನನ್ನನ್ನು ಒಂದು ಹೆಣ್ಣುಮಕ್ಕಳ ಸಂಸ್ಥೆಯಲ್ಲಿ ಆ ಸೆಕ್ರೆಟರಿಯು ತಂದುಬಿಟ್ಟನು. ಸಂಸ್ಥೆಯು ಆಗಲೇ ಪ್ರಾರಂಭವಾಗಿದ್ದರಿಂದ ನೋಡಲು ಭವ್ಯವಾಗಿದ್ದಿಲ್ಲ. ಎಲ್ಲವು ಅಸ್ತವ್ಯಸ್ತ. ಮೂವರು ವ್ಯವಸ್ಥಾಪಿಕೆಯರಿದ್ದರೂ ಒಬ್ಬರಿಗೊಬ್ಬರಿಗೆ ತಾಳು ಮೇಳಿಲ್ಲ. ಕುರುಡ ದಂತಿಪಗಳ ಕೂಡ ಇರುವಿಕೆ. ಮೊದಲೆ ಮನಸಿನ ಮೇಲೆ ಸಂಸ್ಥೆಯ ಬಗ್ಗೆ ಅನಾದರ ಹುಟ್ಟಿ ಇರಬಾರದೆಂಬ ಭಾವನೆ ಹುಟ್ಟಿದ್ದು. ಆ ಸೆಕ್ರೆಟರಿಯ ದುಷ್ಟ ಮಾತುಗಳಿಂದ ಮನಸು ನೊಂದಿದ್ದರೂ ಚಡುಪಡಿಕೆಯಿಂದ ಸಂಸ್ಥೆಯಲ್ಲಿ ನಿರುಪಾಯವಾಗಿ ಇರಬೇಕಾಯಿತು ಹೊತ್ತು ಬಂದಾಗ ಕತ್ತೆ ಕಾಲು ಹಿಡಿದು ಬದಕೆಂಬಂತೆ ಮನೆ ಬಿಟ್ಟು ಅಪರಿಚಿತವಾದ ಸಂಸ್ಥೆಯಲ್ಲಿದ್ದ ಮೂಲಕ ಉಂಟಾದ ಬಳಲುವಿಕೆಯು ದಿನದಿನಕ್ಕೆ .ಕಾಲುಗತಿಗನುಸಾರವಾಗಿ ಕಡಿಮೆಯಾಗುತ್ತ ಹೋಯಿತು. ಮತ್ತು ಇಲ್ಲಿದ್ದವರ ಸ್ವಭಾವಗಳನ್ನು ಕಂಡು ಹಿಡಿದು ನನಗೆ ಬೇಕಾದ ಸೌಕರ್ಯಗಳನ್ನು ಒದಗಿಸಿಕೊಂಡು ಹೇಗೆ ಬಾಳಬೇಕೆಂಬುದನ್ನರಿತು ನಡೆದೆನು. ಇದರಿಂದ ಜೀವಿತವು ಸಹ್ಯವಾಗುತ್ತ ನಡೆಯಿತು.

ಎಲ್ಲಿ ಹೋಗಿ ನೋಡಿದರು 'ಮುತ್ತಲಗಿಡಕ್ಕೆ ಮೂರೆ ಎಲೆಗಳು.' 'ಮನೆಮನೆಯಲ್ಲಿ ಮಣ್ಣಿನ ಒಲೆಗಳೆ'ಂಬಂತೆ ಎಲ್ಲಿ ಹೋದರೂ ಮನುಷ್ಯ ಸ್ವಭಾವವು ಒಂದೇ ಎಂದು ಹೇಳಬಹುದು ನೀವು ಗುಡ್ಡಗಾಡುಗಳಲ್ಲಿ ಹೋಗಿರಿ. ಅಲ್ಲಿ ದನ ಕಾಯುವ ಹುಡುಗ ಕಾಕುಳ್ಳಾರಿಸುವ (ಅಡವಿಯಲ್ಲಿ ತಾನಾಗಿಯೆ ಬಿದ್ದ ಒಣಗಿದ ಶೆಗಣೆಯ ಉಂಡಿಗಳು) ಹೆಣ್ಣು ಇವುಗಳಲ್ಲಿಯ ಸ್ವಾಭಾವಿಕ ಸೃಷ್ಟಿ ಧರ್ಮದ ಆಕರ್ಷಣೆ ಕಂಡು ಬರುವದು. ನೋಟ, ಮುಗುಳನಗೆ, ಕೃತ್ರಿಮ ಸ್ವಾಚ್ಛ್ಯ, ಹರ್ಷ ದುಃಖಗಳ ಉದ್ರೇಕ. ಸಮಾಜವನ್ನು ವಂಚಿಸುವ ಮರೆ ಮಾಟುಗಳು, ಮಾಯಾ ಮಮತೆಗಳು, ಆಶಾ ಆಕಾಂಕ್ಷೆಗಳು, ಕಣ್ಣುಮುಚ್ಚಾಲೆಯ ಆಟಗಳು, ಸಂಸ್ಕಾರವಿಲ್ಲದ ಪದಪದ್ಯಗಳು, ಜಾನಪದಗೀತಗಳು, ಹೆಣ್ಣುಗಂಡುಗಳಲ್ಲಿ ಕಂಡುಬರುವವು. ಪಟ್ಟಣಗಳಲ್ಲಿ ಹೋಗಿರಿ. ಇವೆ ಸಂಗತಿಗಳು, ಬೇರೆ ಸ್ವರೂಪ ಧರಿಸಿದ್ದು ಕಂಡು ಬರುವದು. ತೀರ್ಥಯಾತ್ರೆಗಳಲ್ಲಿ ನೋಡಿರಿ, ಸಂಘಸಂಸ್ಥೆಗಳಲ್ಲಿ ನೋಡಿರಿ ಸಂಸ್ಕೃತಿ, ಧ್ಯೇಯ ಸ್ವರೂಪದಲ್ಲಿ ಇವೇ ಸಂಗತಿಗಳು ಒಡಮೂಡುವವು. ಸ್ವಾಭಾವಿಕವಾದ ಸೃಷ್ಟಿಧರ್ಮದ ಪಶುವೃತ್ತಿಯಿಂದ ಅಂದರೆ ಅನಾಗರಿಕರಾದ ಆದಿವಾಸಿಗಳಿಂದ ಸುಧಾರಿಸಿದ ನಾಗರಿಕರವರೆಗೆ, ಅತಿಮಾನುಷ ಅಮಾನುಷ, ಸಿದ್ಧಪುರುಷ, ದೇವಕೋಟಿಯವರೆಗೆ ಬ್ರಹ್ಮನು ಸ್ತ್ರೀ ಪುರುಷರಲ್ಲಿ ಮಾದರಿ ಆಕರ್ಷಣವನ್ನು ಕೆಲವು ಕಡೆಗೆ ಹೋಳಿ ಹುಣ್ಣಿವಿ ಬಿಚ್ಚಿ ಮುಗ್ಗಿಯಂತೆ, ಕೆಲವು ಕಡೆಗೆ ಕೃತ್ರಿಮತನವು ಬೆಳೆದು

ಸುಧಾರಣೆಯಾದಂತೆ ದಾಂಭಿಕತನದ ಮುಚ್ಚು ಮಗ್ಗಿಯಂತೆ, ದಾಂಭಿಕತನದ ಮುಸುಕಿನಲ್ಲಿ ಕಾಯದೆ ಕಾನೂನಗಳ ಬೆಂಬಲವಿದ್ದಂತೆ ಶಿಕ್ಷೆಗೆ ಪಾತ್ರವಾಗಿ ಅಥವಾ ಆಗದಿರದೆ. ಅವರವರ ಜ್ಞಾನಬಲ, ಸಂಸ್ಕಾರಗಳಂತೆ ಪಶ್ಚಾತ್ತಾಪಕ್ಕೆ ಗುರಿಯಾಗಿ ಅಥವಾ ಆಗದೆ ಸುಖ ದುಃಖಗಳನ್ನು ಅನುಭವಿಸುತ್ತ ಈ ಆಕರ್ಷಣದ ಪ್ರವಾಹವು ಭರದಿಂದ ಕಾಲಗತಿಗನುಸಾರವಾಗಿ ವಿವಿಧ ರೂಪಗಳನ್ನು ತಾಳುತ್ತ ಅಕುಂಠಿತವಾಗಿ ಸಾಗಿದೆ. ಇದನ್ನು ತಡೆಹಿಡಿಯಲು ಯಾರಿಗೂ ಸಾಧ್ಯವಾಗಿಲ್ಲ. ಆದರು ಅದನ್ನು ತಡೆಯಲು ಇಷ್ಟೆ ಅಲ್ಲ ಅದನ್ನು ಬೇರುಸಹಿತ ಕಿತ್ತಿ ಒಗೆಯಲು ಬುನಾದಿಯಿಂದ ವಿದ್ವಾಂಸರ ಹಾಗೂ ವಿಜ್ಞಾನಿಗಳ ಪ್ರಯತ್ನವು ನಡೆದಿದೆ. ಆಹಾರ ನಿದ್ರಾ ಭಯ ಮೈಥುನಾನಿ। ಸಾಮಾನ್ಯ ಮೇತತ್ ಪಶುಭಿರ್ನರಾಣಾಮ್ ॥ ಎಂಬ ತತ್ವವು ಸಾಮಾನ್ಯವಾಗಿ ಎಲ್ಲರಿಗೂ ಒಪ್ಪಿಗಿದ್ದಾಗ್ಯೂ, ವೇಗಗಳನ್ನು (ಸ್ವಾಭಾವಿಕವಾದ ಪ್ರವೃತ್ತಿಗಳನ್ನು) ತಡೆ ಹಿಡಿದರೆ ವಿವಿಧ ತೆರನಾದ ರೋಗಗಳುಂಟಾಗುವವು. ಎಂಬ ಅನುಭವ ಇದ್ದಾಗ್ಯೂ ಮನುಷ್ಯರಲಿಯ ವಿದ್ವಾಂಸರು ಅಂದರೆ ಸಾಹಿತಿಗಳು (ಇದರಲ್ಲಿ ಸಾಮಾನ್ಯ ಮನುಷ್ಯನನ್ನು ಹಿಡಿದು ಉಚ್ಚ ಕೋಟಿಗೇರಿದ ಅತಿಮಾನುಷ ದೇವತೆಗಳ ವರೆಗೆ ಯಾಗಾರು ಮನುಷ್ಯನು ನಿರ್ಮಿಸಿದ ಮಾನವ ಕೃತ್ರಿಮ ಸಂಸ್ಕೃತಿಯನ್ನು ನಿರ್ಮಿಸಲು ಕಾಪಾಡಲು ಹೆಣಗಿರುವರೊ ಹೆಣಗುತ್ತಿರುವರೋ ಅವರೆಲ್ಲರೂ ಅಡಕವಾಗಿರುವರು.) ಕಾಮಾಕರ್ಷಣವನ್ನು ತೀರ ಕೀಳವೆಂದು ಪ್ರಚಾರ ಮಾಡಿರುವರು. ಸೃಷ್ಟಿನಿಯಮಗಳನ್ನು ಹಾಗು ಕೃತ್ರಿಮ ನಿಯಮಗಳನ್ನು ಬಲ್ಲ ಕೆಲವು ಚಾಣಾಕ್ಷ ಬುದ್ಧಿವಂತರನ್ನು ಬಿಟ್ಟರೆ ಮಿಕ್ಕ ಜನಾಂಗವೆಲ್ಲವು ಈ ಸಾಂಸ್ಕೃತಿಕ ಪದ್ಧತಿಯ ದಾಸರಾಗಿರುವದು ಪರೋಪದೇಶೆ ಪಾಂಡಿತ್ಯಂ। ಎಂಬಂತೆ ಬಹುಜನ ಸಮಾಜವು ದಾಂಭಿಕವಾಗಿ.ಕೆಲವು ನಿಷ್ಠಾವಂತರು ಈ ಸುಸಂಸ್ಕೃತ ಪದ್ಧತಿಯನ್ನು ದೇವರ ಹೆಸರಿನಿಂದ ಕಾಪಾಡಲು ಸದ್ಬುದ್ಧಿಯಿಂದ ಬೇಕಾದ ಕಷ್ಟಗಳನ್ನು ಅನುಭವಿಸಿ ಆ ಸಂಸ್ಕೃತಿಯೊಳಗಿನ "ಗುಹ್ಯಂಚ ಗೂಹತಿ ಗುಣಾನ್ ಪ್ರಕಟೀ ಕರೋತಿ" ಎಂಬಂತೆ ದೋಷಗಳನ್ನು ಬಚ್ಚಿಟ್ಟು ಗುಣಗಳ ಪ್ರಚಾರವನಷ್ಟೆ ಮಾಡಿದ್ದರಿಂದ.ಅದರೊಳಗಿನ ದೋಷದ ಪರಿಣಾಮಗಳನ್ನು ತಾವು ಅನುಭವಿಸುವದಲ್ಲದೆ ಸಾಮಾನ್ಯ ಜನರಿಗೆ ಅನುಭವಿಸಲು ಹಚ್ಚಿ, ಅವರನ್ನು ದುಃಖಿಗಳನ್ನಾಗಿ ಮಾಡಿ ಬಿಟ್ಟಿದ್ದಾರೆ. ಸುಧಾರಣೆ ಎಂಬ ಹೆಸರಿನ ಕೆಳಗೆ ತಮ್ಮ ತಪ್ಪುಗಳು ಇತರರಿಗೆ ಕಾಣದಂತೆ ಹೊಂಚು ಹಾಕಿ ಈ ಪ್ರಪಂಚವನ್ನು ಸಾಗಿಸಿದ್ದಾರೆ. ಧರ್ಮಗುರುಗಳು ಸಾಧುಸಂತರು ಈ ಕಾಮಾಕರ್ಷಣವನ್ನು ಹಳಿದು ತಮ್ಮ ವಿದ್ವತ್ತೆಯ ಬಲದಿಂದ, ಶಿಷ್ಯವರ್ಗವನ್ನು ನಿರ್ಮಿಸಿ, ಗುರುಮಂತ್ರದ ನೆವದಿಂದ ತಮ್ಮ ಕಾಮ ತೃಪ್ತಿಯನ್ನು ಸಂತಯಿಸಿಕೊಳ್ಳುತ್ತಿದ್ದಾರೆ. ರಾಜರು (ಇವರಲ್ಲಿ ಸಂಸ್ಕೃತಿಯನ್ನು ಕಾಪಾಡಲು ಹೊರಟ ಎಲ್ಲ ಅಧಿಕಾರಿಗಳು) ಸತ್ತಾಬಲದಿಂದ ತಮಗಿಷ್ಟವಿದ್ದಂತೆ ಕಾಯದೆ ಕಾನೂನುಗಳ ಉಪಯೋಗದಿಂದ ತಮ್ಮ ತೃಪ್ತಿಯನ್ನು ಮಾಡಿಕೊಳ್ಳುತ್ತಿರುವರು. ವೈದ್ಯರು, ಡಾಕ್ಟರರು ತಮ್ಮ ವಿಶಿಷ್ಟ ಜ್ಞಾನಬಲದಿಂದ ಹಣ ಮತ್ತು ಹೆಣ್ಣಿನ ದುರುಪಯೋಗ ಮಾಡಿಕೊಳ್ಳುತ್ತಿರುವರು. ಸೃಷ್ಟಿ ಧರ್ಮದಂತೆ ಹೆಣ್ಣಿನಲ್ಲಿ ಪ್ರಜೋತ್ಪಾದನದ ಕುರುಹು ಮಾತ್ರ ಕಾಣಬೇಕಾದ್ದರಿಂದ ಗಂಡಸು ಪಾರಾಗಿ ಹೋಗುವನು. ಮತ್ತು ಇನ್ನ ಅವನು ತೀರಾ ಹಾಳಾಗಿಲ್ಲವೆನ್ನಿರಿ, ಅಥವಾ ತನ್ನ ಸಹಕಾರಿಯಾದ ಹೆಣ್ಣನ್ನು ತುಂಬಾ ಕೊಲ್ಲಲು ಸಿದ್ಧವಿಲ್ಲೆನ್ನಿರಿ, ಗರ್ಭಪಾತ ಮಾಡಿಸಿ ಸಂಸ್ಕೃತಿ ಕಾಪಾಡುವ ದಾಂಭಿಕತನದ ನಿಮಿತ್ತದಿಂದ ಹೆಣ್ಣನ್ನು ಹೆಚ್ಚಿಗೆ ದುಃಖಿ ಮಾಡಲು ಹೊರಟಿದ್ದಾನೆ. ಈಗಂತೂ ಕುಟುಂಬದಯೋಜನೆಯನ್ನು ಮಾಡಿ ಸುಪ್ರಜಾನಿರ್ಮಾಣ ಮಾಡಲು ಸರಕಾರ ಮನ್ನಣೆಯಿಂದ ಸಮಾಜವು ಹೊರಟಿದೆ. ವಿ ಜ್ಞಾ ನ ಬಲದಿಂದ. ನೋಡಬೇಕು. ಇನ್ನು ಯಾವಯಾವ ಅನಾಹುತಗಳು ಹೆಣ್ಣಿನಕಿಂತ ಗಂಡಿನ ಸೌಕರ್ಯಕ್ಕಾಗಿ ನಡೆಯುವದು. ಗಂಡಸೇ ಹೆಣ್ಣಿನಕಿಂತ ಈ ಕೃತಿಮ ಪ್ರಪಂಚದಲ್ಲಿ ಮುಂದೊರೆದಿದ್ದರಿಂದ ತಾನು ತನ್ನದು ಮೊದಲೆಂಬಂತೆ ಹೆಚ್ಚು ವಿಚಾರ ಮಾಡುತ್ತ ಬಂದಿದ್ದರಿಂದ, ಅಜ್ಞಾನಿ, ಪರಾವಲಂಬಿ. ಅಸಹಾಯಕಳಾದ ಹೆಣ್ಣಿಗೆ ಹೆಚ್ಚು ಪೆಟ್ಟುಗಳು ಬೀಳುತ್ತಲಿವೆ ಎಂಬುದರ ವಿಚಾರ ಮಾಡುವವರೇ ಇಲ್ಲ. ಗಂಡಸಿಗೆ ಪ್ರತ್ಯಕ್ಷವಾಗಿ ಭೋಗಿಸಬೇಕಾದರು ಅಜ್ಞಾನದ ಪರಾವಲಂಬನದ ನಿಮಿತ್ತ ಹೆಣ್ಣು ವಿಚಾರಮಾಡಲು ಶಕ್ತಳಿಲ್ಲ. ಸ್ವಾಭಾವಿಕ ಪ್ರವೃತ್ತಿಗಳ ತೃಪ್ತಿ ಮತ್ತು ಕೃತ್ರಿಮ ಚಟಗಳ ತೃಪ್ತಿ, ಇವೆರಡು ಒಂದೆ ಎಂಬ ಭಾವನೆಯು ಎಲ್ಲರಲ್ಲಿ ಒಡಮೂಡಿದೆ. ಕಾಮ ತೃಪ್ತಿ ಶರೆ ಶಿಂದಿ ಚಹಾ ಕಾಫಿ ಮುಂತಾದ ಕೃತ್ರಿಮ ಚಟಗಳ ತೃಪ್ತಿ ಒಂದೆ ಮಾದರಿಯದೆಂಬ ತಪ್ಪ ಭಾವನೆಯು ಸಮಾಜದಲ್ಲಿ ಎಲ್ಲ ವರ್ಗಗಳಲ್ಲಿ ಕಂಡು ಬರುತ್ತದೆ. ಸ್ವಲ್ಪ ತೊಂದರೆಯನ್ನು ಅನುಭವಿಸಿದರೆ ಕೃತಿಮ ಚಟಗಳು ಹೇಗೆ ಪೂಯವಾಗಿ ಲಾಭಸಿಗುವದೊ ಅದರಂತೆ ಬ್ರಹ್ಮಚರ್ಯ ಪಾಲಿಸುವದರಿಂದ ಕಾಮಪ್ರವೃತ್ತಿ ನಷ್ಟಾಗಿ ಲಾಭ ಸಿಗುವದೆಂಬ ತಪ್ಪುಕಲ್ಪನೆಯು ಆಮೂಲಾಗ್ರವಾಗಿ

ಎಲ್ಲರಲ್ಲಿ ಹರಡಿದೆ. ಗಂಡಸರ ದಾಂಭಿಕತನದ ನಿಮಿತ್ತ, ಸೃಷ್ಟಿ ನಿಯಮಗಳ ವ್ಯತ್ಯಾಸದ (ಗಂಡುಹೆಣ್ಣಿನಲ್ಲಿಯ) ನಿಮಿತ್ತ ಗಂಡಸು ಪ್ರಧಾನವಾದ ಈ ಕೃತ್ರಿಮ ಪ್ರಪಂಚದ ಪದ್ಧತಿಯ ನಿಮಿತ್ತ, ಈ ಕಲ್ಪನೆಯ ದುಷ್ಪರಿಣಾಮಗಳನ್ನು ಹೆಣ್ಣಿಗೆ ಹೆಚ್ಚಾಗಿ ಅನುಭವಿಸಬೇಕಾಗಿದೆ. ಏಕೆಂದರೆ ಗಂಡು ಹೆಣ್ಣಿನ ಸಮಸ್ಯೆಗಳನ್ನು ಬಿಡಿಸುವ ಅಧಿಕಾರವೆಲ್ಲ ಗಂಡಸಿನ ಕೈಯಲ್ಲಿ. ಅವನೆ ಸರ್ವಾಧಿಕಾರಿಯು. ಈ ಎಲ್ಲ ತತ್ವಗಳ ವಿಚಾರ ನನಗೇಕೆ ಬಿಡಿರಿ. ಗಂಡಸು ಪ್ರಧಾನ ಕೃತ್ರಿಮ ಪ್ರಪಂಚದ ರೂಢಿ ರಾಕ್ಷಸವೆನ್ನಿ ಇಲ್ಲವೆ ದೇವತೆಯೆನ್ನಿ ಅದಕ್ಕೆ ಬಲಿಯಾದ ಓರ್ವ ಅಜ್ಞಾನಿ ಹೆಣ್ಣಾದ ನನಗೆ ವಿಚಾರಮಾಡಿ ಏನು ಮಾಡಬೇಕಾಗಿದೆ ಇದನ್ನೆಲ್ಲ ಕೀರ್ತಿಗೆ ಯೋಗ್ಯರಾದ ವಿದ್ವಾಂಸರ ಕಡೆಗೆ ಬಿಟ್ಟು ನನ್ನ ಕತೆಯ ಕಡೆಗೆ ತೆರಳುವೆನು. ಮುತ್ತಲ ಗಿಡಕ್ಕೆ ಮೂರೆ ಎಲೆಗಳು ಎಂಬಂತೆ ಜ್ಞಾನ ಬಲ ದಿಂದ ಸಂಸ್ಕಾರಗಳನ್ನು ಮಾಡಿ ತಿದ್ದುವ ಕಷ್ಟದಾಯಕ ಮಾರ್ಗವನ್ನು ಬಿಟ್ಟು ಬಂಧನ, ಶಿಕ್ಷೆ, ವಾತಾವರಣದಲ್ಲಿಯ ಬದಲಾವಣೆಯ ನಿಮಿತ್ತ ಹೆಣ್ಣು ಮಕ್ಕಳನ್ನು ಅನೀತಿಮಾರ್ಗ ದಿಂದ (ಲೋಕ ರೂಢಿಗನುಸರಿಸಿದ್ದ ಅನೀತಿ ಮಾರ್ಗದಿಂದ) ಕಾಪಾಡಲು ಇಡಿ ಜನಾಂಗವು, ಕಾಯದೆಗಳು ಧರ್ಮಗಳು ಯತ್ನಿಸುತ್ತಲಿವೆ. ಇದರ ಪೈಕಿ ಲಗ್ನ ಒಂದು ಮಾರ್ಗ. ಗಂಡ ಕೆಟ್ಟವನಿರಲಿ. ಚಲೋ ಇರಲಿ, ಒಮ್ಮೆ ಹೆಣ್ಣಿನ ಲಗ್ನ ಮಾಡಿ ಬಿಟ್ಟರೆ ಅವಳ ವ್ಯಭಿಚಾರ ದೋಷವು ಬೈಲಿಗೆ ಬೀಳಲಾರದು. ಮೇಲಾಗಿ ಒಬ್ಬ ಹೆಣ್ಣಿಗೆ ಒಬ್ಬ ಗಂಡನ ಕಾವಲಿಟ್ಟರೆ ವ್ಯಭಿ ಚಾರ ದೋಷಗಳು ಕಡಿಮೆಯಾಗಬಹುದು. ಈ ಎಲ್ಲ ಸದೋಷ ಮಾರ್ಗಗಳಿಂದ ನಮ್ಮಂಥ ಅಜ್ಞಾನಿ ಹೆಣ್ಣು ಮಕ್ಕ ಳನ್ನು ನೀತಿವಂತರನ್ನಾಗಿ ಮಾಡಲು ಇಡಿ ಜನಾಂಗವು ಎಲ್ಲ ದೇಶಗಳಲ್ಲಿ ಹವಣಿಸುತ್ತಿರುವದು ಅದರಿಂದೇನು ಪ್ರಯೋಜನ ವಾಗದೆ ಈ ವ್ಯಭಿಚಾರ ದೋಷದಿಂದುಟಾಗುವ ಬಾಲಕರ ನಾಶ ಗರ್ಭಪಾತ ಮುಂತಾದವುಗಳು ಮಿತಿಮೀರಿ ಬೆಳೆದಿವೆ. ಡಾಕ್ಟರ, ನರ್ಸ, ವೈದ್ಯ ಮುಂತಾದವರಿಗೆ ಬಡ. ಶ್ರೀಮಂತ ಮೊದಲಾದ ವರನ್ನು ಸುಲಿಯಲು ಇದೊಂದು ಸಾಧನವಾಗಿದೆ. ಈ ದೋಷ ಗಳನ್ನು ಹೊರಗೆಡಹುವಂಥ ಸಾಕ್ಷಿದಾರರ, ಅಧಿಕಾರಿಗಳ ಹಿರಿ ಯರ, ಗಂಡ ಹೆಂಡಂದಿರ ಕೊಲೆಪಾತಕಗಳು ನಡೆದೇ ಇವೆ. ಇರಲಿ ಇದನ್ನೆಲ್ಲ ನಾನು ಹೇಳುತ್ತ ಕೂತರೆ ನನ್ನ ಕಥೆ ಕೇಳುವ ನಿಮ್ಮ ಕುತೂಹಲವು ಕಮರಿ ಹೋಗಿ ನಿಮಗೆ ಬೇಸರ ಬರ ಬಹುದು. ಮತ್ತು ನಾನು ಹೇಳಬೇಕೆನ್ನುವದು ಅಲ್ಲಿಯೇ ಉಳಿಯಬಹುದು. ಹೆಣ್ಣು ಮಕ್ಕಳನ್ನು ತಿದ್ದುವ ಮಾರ್ಗ ಗಳಲ್ಲಿ ದೇಶಾಂತರವು ಒಂದು ಮಾರ್ಗ. ಇದರಿಂದ ನಾಲ್ಕು ದಿನ ತಿದ್ದಿದಂತೆ ಹೊಸ ಮಾರ್ಗ ತನ್ನ ಧ್ಯೇಯಸಾಧಿಸಲು ಸಿಗುವವರೆಗೆ ಕಂಡರು ಸಹ ನಿಜವಾಗಿ ತಿದ್ದಿದಂತಾಗದು. ಏಕೆಂದರೆ ತಿದ್ದಲು ಬಾರದಂಥ ವಾತಾವರಣವು ಎಲ್ಲೆಡೆಗೆ ಇದ್ದೇ ಇರುವದು ಹೆಣ್ಣು ಗಂಡಿನ ಆಕರ್ಷಣಕ್ಕೆ ಇಂಬಿರದ ಸ್ಥಳವೆ ಜಗತ್ತಿನಲ್ಲಿಲ್ಲ. ನಮ್ಮ ಸಂಸ್ಥೆಯ ಮಹಾಡಿಗೆ ಹೋಗಲಿದ್ದ ಚೆನ್ನಗೆ ರಸ್ತೆಯ ಬದಿಗೆ ಒಂದು ಕಿಡಕಿ ಇತ್ತು. ಅಲ್ಲಿ ಒಬ್ಬ ತರುಣ ಇರುತ್ತಿದ್ದನು. ಮೊದಲು ಮೊದಲು ಅವನ ಲಕ್ಷ್ಯವು ನನ್ನ ಕಿಡಕಿಯ ಕಡೆಗೆ ಇರಲಿಲ್ಲ. ಒಂದು ದಿನ ಆಕಸ್ಮಿಕವಾಗಿ ನಾನಲ್ಲಿ ನಿಂತಿದ್ದು ಅವನು ಕಂಡನು. ನಾಲ್ಕಾರು ಸಲ ರಾತ್ರಿ ವೇಳೆಯಲ್ಲಿ ಯಾರು ಇಲ್ಲದ ಸಂಧಿಯನ್ನು ಸಾಧಿಸಿ ನಾನು ಅವನನ್ನು ನೋಡುತ್ತ ನಿಂತಿರುತ್ತೇನೆಂದು ಕಂಡ ಕೂಡಲೆ ಒಂದು ಬೇಟೆ ಸಿಕ್ಕಿತೆಂದು ಆ ತರುಣನಿಗೆ ಬಹಳ ಹಿಗ್ಗಾಯಿತು. ಅವನು ಅವಿವಾಹಿತನಿದ್ದನು. ಇಷ್ಟೆಲ್ಲವಾ ದರು ಸಂಪರ್ಕ ಬೆಳೆಸುವ ಬಗೆ ಎತ್ತ ! ಆ ತರುಣನ ಗೆಳೆ ಯನು ನಮ್ಮ ವಸತಿಗೃಹದ ಮೇಲ್ವಿಚಾರಕರಾದ ಅಸೂಯಾ ಬಾಯಿಯವರ ಗಂಡನಾಗಿದ್ದನು. ಅವನ ಮುಖಾಂತರ ಚೀಟಿ ಚಪಾಟಿಗಳು ನಡೆದವು. ಪ್ರಕರಣವು ಬಲಿತ ತರುವಾಯ ಈ ದೋಷ ತನ್ನ ಹೆಂಡತಿಯ ಮೇಲೆ ಎಲ್ಲಿ ಬರಬಹುದೆಂದೋ ಅಥವಾ ಮೊದಲು ಆ ತರುಣನು ಕೊಡುತ್ತಿದ್ದ ಪುರಸ್ಕಾರ (ಸಂಭಾವನೆ, ಲಂಚ) ಕಡಿಮೆ ಮಾಡಿದ್ದರಿಂದಲೇನೋ ಅವನು ವಿಶ್ವಾಸಘಾತಮಾಡಿ ಆ ತರುಣನ ಪತ್ರವನ್ನು ತಂದು ಅಸೂಯಾಬಾಯಿಯವರ ಕೈಯಲ್ಲಿ ಕೊಟ್ಟು 'ನೀನು ವಸತಿ ಗೃಹದ ಮೇಲ್ವಿಚಾರಕಳಿರುವಿ. ಈ ಪ್ರಕರಣ ಈಗ ಕೈಮೀರಿ ಹೋಗುತ್ತಲಿದೆ. ಇದು ನಿಮ್ಮ ಮಹಾಮಾಯಿಗೆ ತಿಳಿದರೆ ನಿನ್ನ ಫಜೀತಿಗೆ ಪಾರವಾರವೆ ಇಲ್ಲ. ನೀನು ನನಗೆ ಬೇಡಿ ದಷ್ಟು ಹಣ ಕೊಡುವಿಯೋ ! ಏನು ? ನಿನ್ನ ಹರಲಿ ನಾನೆ ಮಾಡಬೇಕೋ ! ಎಂದು ಬೆದರಿಕೆ ಹಾಕಿದನು. ಇಂಥ ಪ್ರಸಂಗವು ಒದಗುವದೆಂಬ ಕಲ್ಪನೆಯು ಸಹ ಇರದ ಅಸೂಯಾಬಾಯಿಯವರು ಗಾಬರಿಗೊಂಡು ಹೌಹಾರಿ ನಿಂತಂಥ ಪರಿಸ್ಥಿತಿಯಲ್ಲಿ, ಕದ್ದು ಕೇಳುತ್ತಿದ್ದ ಆ ಕುರುಡನ ಹೆಂಡತಿ ಮಕ್ಕಳು ತಮ್ಮ ಮೇಲೆ ಏನಾದರೂ ಪ್ರಕರಣ ಬಂದೀ ತೆಂಬ ಹೆದರಿಕೆಯಿಂದ ಅಸೂಯಾಬಾಯಿಯ ಮುಂದೆ ನನ್ನನ್ನು ದೂರಹತ್ತಿದರು ಏಕೆಂದರೆ ಆ ಕುರುಡನ ಮಗಳದೊಂದು ಪ್ರಕರಣವೆ ಆಗಿದ್ದು ಅವಳು ೧೬–೧೭ ವರ್ಷದ ವಿಧವೆ ಇದ್ದು ನಮ್ಮಲ್ಲಿ ಹೊಲಿಗೆಯ ಶಿಕ್ಷಕಣಿಯ ಬೆನ್ನುಹತ್ತಿ ರಾತ್ರಿ ಹಗಲು

ಸಂಧಿ ಸಿಕ್ಕಾಗೆಲ್ಲ ಸಂಸ್ಥೆಯಿಂದ ಮಾಯವಾಗುತ್ತಿದ್ದಳು. ಇದನ್ನು ನಾನೆಲ್ಲಿ ಹೊರಗೆಡುಹುವೇನೋ ಎಂಬ ಹೆದರಿಕೆಯಿಂದ ಮುಂದೆ ನನ್ನೆದುರು ಹೇಳಿದರೆ ಅದನ್ನು ಯಾರೂ ನಂಬ ಬಾರದೆಂದು ನನ್ನನ್ನು ಮೊದಲೆ ಖೊಟ್ಟಿ ಮಾಡಿಡಲು ಸಂಧಿ ಸಾಧಿಸಿದರು. ಇಂಥ ಪ್ರಸಂಗದಲ್ಲಿ ಆಕಸ್ಮಿಕವಾಗಿ ಮಹಾಮಾಯಿಯವರು ರಾತ್ರಿವೇಳೆ ಇದ್ದರು ಸಂಸ್ಥೆಗೆ ಬಂದು ಬಿಟ್ಟರಾ. ಇನ್ನೇನಾಗುವದೆಂದು ಎಲ್ಲರ ಎದೆಗಳು ಬುಗು ಬುಗು ಎನ್ನ ಹತ್ತಿದವು! ಎಲ್ಲರು ಹೌಹಾರಿ ಬೆಪ್ಪಾಗಿ ನಿಂತೆವು ನನ್ನ ಕಣ್ಣು ಮುಂದೆ ಕಗ್ಗತ್ತಲೆ ಕವಿದು ತಲೆ ತಿರುಗಹತ್ತಿತು.

## ಸುಪ್ರಭಾತ (ಕವನ)

ಬಂದ ರವಿಯು ಮಂದಿರದೊಳು, ಚಂದ್ರಕಾಂತಿ ಕುಂದಿಸಿ ॥
ಮಂಜು ಮುಸಕು ತೆರೆದು ಸರಸರ ಗಂಧ ಪುಷ್ಪ ಅರಳಿಸಿ ॥ ೧ ॥

ದಿನಪನುದಯವನ್ನು ಕಂಡು ಹೂಗಳೆಲ್ಲವು ॥
ಮನದಿ ಹರುಷತಾಳಿ ವನದಿ ನಗುತಲಿರುವವು ॥ ೨ ॥

ಗಿಳಿಯು ಕೋಕಿಲೆಗಳು ಮರದಿ, ಎಳೆಯ ಚಿಗುರು ಸವಿಯುತಾ ॥
ಸುಳಿವಗಾಳಿ ಬೀಸುತಿರಲು ಮಧುರ ಸ್ವರವಗೈಯುತಾ ॥ ೩ ॥

ನಸುಕಿನಲ್ಲಿ ಎದ್ದು ಚಿಕ್ಕ ಸೊಸೆಯರೆಲ್ಲರು ॥
ಕಸವ ತೆಗೆದು ಹಸನ ಮಾಡಿ ಮೊಸರು ಕಡೆವರು ॥ ೪ ॥

ನೀರು ತರಲು ನದಿಗೆ ಪೋದ, ನಾರಿ ವೃಂದವು ॥
ಬರುತಲಿಹುದು ಕರದಿ ಪಿಡಿದ ಕೊಡಗಳಂದವು ॥ ೫ ॥

ಹೊತ್ತು ಏರುವದಕೆ ಮುನ್ನ ಒಕ್ಕಲಿಗರು ॥
ಎತ್ತುಗಳನು ಬಿಟ್ಟುಕೊಂಡು ಹೊರಡುತಿರುವರು. ॥ ೬ ॥

ಗೋವುಗಳನು ಅಟ್ಟಿಕೊಂಡು ಗೋಪರೆಲ್ಲರು ।
ಸಾವಕಾಶ ಮುರಲಿ ಊದುತಾಗ ನಡೆವರು ॥ ॥ ೭ ॥

ಇಂಥ ಸು ಪ್ರಭಾತ ಸಮಯಲ್ಲಿ ಗೊಲ್ಲನು ॥
ನಿಂತು ಕೊಳಲ ನೂದುತಿರುವ ! ಚಲುವ ಕೃಷ್ಣನು ॥ ೮ ॥

—ಶಾಲಿನಿಬಾಯಿ ಹಾಲಗಿ

ಡಾ. ಆರ್. ಕೆ. ಹಾನಗಲ್ಲರವರು (ಪ್ರಕೃತಿ ಭಾವದಲ್ಲಿ) ಬರೆದ ಸ್ತ್ರೀ ಸ್ವಾತಂತ್ರ್ಯದ ಧ್ವಜಾರೋಹಣೆ ಎಂಬ ಪದದ

# ಭಾ ವ ನಿ ರೀ ಕ್ಷ ಣೆ

### ಲೇಖಾಂಕ:— ೧

ಭಾರತ ಮಾತೆಯ ವೀರಪುತ್ರಿಯರೆ ಸ್ವಾತಂತ್ರ್ಯದ ಧ್ವಜವೇರಿಸುವ ॥ ಪ ॥
ಪಾರತಂತ್ರ್ಯದೀ ಮೂಢ ರೂಢಿಯನು ಮೀರಲೆಂದು ಸಂಕಲ್ಪಿಸು ॥ ಅ. ಪ ॥
ಸತ್ಯ ಶ್ರದ್ಧೆ ವಿದ್ಯೆಗಳ ಪಡೆದು ಸರ್ವಾರ್ಥ ಕಾಮ ಫಲ ದೊರಕಿಸುವ ॥
ಸ್ವಾರ್ಥ ಭೋಗಕೆಡೆಗೊಡದಲೆ ಸಂತಾನಾರ್ಥವಾಗಿ ತಾನು ಸಲ್ಲಿಸುವ ॥ ೧ ॥

ಭಾರತವು ಪವಿತ್ರವಾದ ದೇಶ. ಭಾರತ ಮಹಿಳೆಯರು ಮಿಕ್ಕ ದೇಶದ ಮಹಿಳೆಯರಂತೆ ರಣಹೇಡಿಗಳಲ್ಲ. ಶಾಪಾದಪಿ ಶರಾದಪಿಗಳಂತೆ ಜೀವನದ ಯಾವ ರಂಗದಲ್ಲಿಯಾದರೂ ಯಶಸ್ವಿಗಳಾಗುವಂತೆ ಹೋರಾಡುವದು ಅವರ ಸ್ವಭಾವ ಗುಣವೇ ಆಗಿದೆ. ಅದಕ್ಕಾಗಿ ಅವರಿಗೆ ವೀರ ಪುತ್ರಿಯರೆಂದು ಕವಿಗಳು ಸಂಬೋಧಿಸಿದ್ದು ಸಾರ್ಥಕವೆಂದೇ ಹೇಳಲು ಅಡ್ಡಿಯಿಲ್ಲ. ವೀರತ್ವವು ಕೇವಲ ಯುದ್ಧ ಭೂಮಿಯಲ್ಲಿಯೇ ಅಲ್ಲ. ವ್ಯವಹಾರದ ಪ್ರತಿಯೊಂದು ಕೆಲಸದಲ್ಲಿಯೂ ಸಹ ಅದು ಅಡಕವಾಗಿರುವದು. ಹಿಡಿದದ್ದನ್ನು ಬಿಡಕೂಡದೆಂಬ ಹಟದಿಂದ ಬಂದ ಎಡರುಗಳೊಡನೆ ಹೋರಾಡಿ ಯಶಸ್ವಿಯಾಗುವ ಸ್ವಭಾವವು ನಮ್ಮ ಭಾರತ ಪುತ್ರಿಯರಿಗೆ ಅತ್ಯಂತ ಹಸ್ತಗತವಾದ ಗುಣವಾಗಿದೆ. ಪ್ರಪಂಚವು ಒಮ್ಮೆ ನಂದನವನವಾಗಿಯೂ ಮತ್ತೊಮ್ಮೆ ದಾರಿದ್ರ್ಯ ಶತ್ರುವನ್ನು ಎದುರಿಸುವ ಕುರುಕ್ಷೇತ್ರವಾಗಿಯೂ ಪರಿಣಮಿಸಿ ಜೀವನದ ಸತ್ವವನ್ನು (ವೀರತ್ವ) ಪರೀಕ್ಷೆಗೆ ಇಡುವ ವೇಳೆಯು ಎಷ್ಟೋ ಸಲ ಪ್ರಾಪ್ತವಾಗಬಹುದು. ಇಂತಹ ವೇಳೆಯಲ್ಲಿ ಕ್ಷಣಿಕ ಸುಖದಾಸೆಗೆ ಬಿದ್ದು ಕುಟುಂಬ ಪರಿತ್ಯಾಗ ಮಾಡದೆ ಕಷ್ಟದಲ್ಲಿದ್ದ ಪತಿಪುತ್ರರೊಡನೆ, ದಾರಿದ್ರ್ಯ ಶತ್ರುವಿನೊಡನೆ ಹೋರಾಡಿ ಯಶವನ್ನು ದೊರಕಿಸುವ ಪತಿವ್ರತೆಯರಾದ ಮಹಿಳೆಯರು ನಮ್ಮ ಭಾರತದ ವಿನಾ ಅನ್ಯದೇಶಗಳಲ್ಲಿ ದೊರೆಯುವದು ಅತಿ ವಿರಲ. ಅಂದ ಮೇಲೆ ಇಂಥಹ ಭಾರತದ ಮಹಿಳೆಯರಿಗೆನೇ "ವೀರ" ವಿಶೇಷಣವು ಸರಿಯಾಗುವದೆಂದು ಅವರನ್ನು ವೀರಪುತ್ರಿಯರೆಂದು ಸಂಬೋಧಿಸಿದ್ದು ಅತ್ಯಂತ ಮಹತ್ವದ ವಿಶೇಷಣವಾಗಿದೆ.

ಇಂತಹ ವೀರಪುತ್ರಿಯರಿಗೆ ಸ್ವಾತಂತ್ರ್ಯದ ಧ್ವಜವನ್ನು ಏರಿಸಲು ಕವಿಗಳು ಹುರಿದುಂಬಿಸಿದ್ದಾರೆ, ಸತಿಯರೆಂದರೆ ಮಾನವಕುಟುಂಬ ಜೀವನದಲ್ಲಿ ಅತ್ಯಂತ ಮಹತ್ವದಪಾತ್ರವಹಿಸಿದವರೆಂದು ಅಂದರೆ ಯಾರು ಅಲ್ಲಗಳೆಯಲಿಕ್ಕಿಲ್ಲ. ಇಂತಹ ಪಾತ್ರ ವಹಿಸಿದವರು ತಮ್ಮ ಪಾತ್ರದ ನಟನೆಗೆ ತಾವು ಸ್ವತಂತ್ರರಾಗಿರಲು ಅಪೇಕ್ಷಿಸುವದು ಸ್ವಾಭಾವಿಕವೇ ಆಗಿದೆ. ತಮ್ಮ ಕಾರ್ಯವನ್ನು ತಾವು ಯಶಸ್ವಿಯಾಗುವಂತೆ ನೆರವೇರಿಸಲು ತಕ್ಕ ಸ್ವಾತಂತ್ರ್ಯವು ವಿಲ್ಲದಿದ್ದರೆ ಅದು ಎಂದಿಗೂ ಯಶಸ್ವಿಯಾಗಲಾರದು. ಪ್ರಾಚೀನಕಾಲದ ಕೌಟುಂಬಿಕ ಯೋಜನೆಯನ್ನು ನಿರೀಕ್ಷಿಸಿದರೆ ಸ್ತ್ರೀಯರಿಗೆ ಅತ್ಯಂತ ಪೂಜ್ಯತೆಯನ್ನೂ ಸ್ವಾತಂತ್ರ್ಯವನ್ನೂ ಮಾನಮರ್ಯಾದೆಯನ್ನೂ ಕೊಟ್ಟದ್ದು ಕಂಡುಬರುವದು.

ಆದರೆ ಮಧ್ಯಕಾಲದಲ್ಲಿ ಪರಧರ್ಮಗಳ ಶೆಳವಿನೊಳಗೆ ಹಿಂದೂ ಸಂಸ್ಕೃತಿಯು ಸಿಕ್ಕಾಗ ಸ್ತ್ರೀಯರಿಗಿತ್ತ ಪೂಜ್ಯತೆಯು ಸ್ವಾತಂತ್ರ್ಯತೆಯೂ ಪತಿವ್ರತಾ ಧರ್ಮದ ಕಟ್ಟುನಿಟ್ಟುಗಳೂ ಸ್ವಾರ್ಥಿಗಳಾದ ಪುರುಷರಿಂದ ವಿಪರ್ಯಾಸ ಹೊಂದಿ ಅತಿಕ್ರಮಿಸಲ್ಪಟ್ಟವು. ಸ್ತ್ರೀಯರ ಪ್ರಗತಿಪಥದಲ್ಲಿ ಅವೇ ತೊಂದರೆಯನ್ನಿತ್ತವಲ್ಲದೆ ಮುಂದಿನವರಿಗೆ ಅವೇ ನೀತಿ-ನಿಯಮಗಳಾಗಿ ಪರಿಣಮಿಸಿ, ಅಂಥ ಶ್ರದ್ಧೆಯಲ್ಲಿಯೇ ನಡೆದ ಕೆಲ ಶತಮಾನಗಳು ಕಂಡು ಬರುವವು. ಪತಿವ್ರತಾ ಧರ್ಮಕ್ಕೆ ವ್ಯತ್ಯಾಸ ಬರುವ ಅಂಥ ಮೂಢ ರೂಢಿಗಳನ್ನು ಮೀರಿ ಒಳ್ಳೇ ಸ್ಪರ್ಧೆಯಿಂದ ಮುಂದುವರಿಯಲು ಅನುಪಲ್ಲವಿಯಲ್ಲಿ ಬೋಧಿಸಿರುವರಲ್ಲದೆ ಸ್ವೇಚ್ಛಾಚಾರವನ್ನು ಪಾಲಿಸಿರೆಂದು ಅದರ ಇಂಗಿತವಲ್ಲ.

ಗೃಹಣೀಪದವೂ ಅದನ್ನು ಅಬಾಧಿತವಾಗಿ ಸಾಗಿಸುವ ಪತಿವ್ರತಾ ಧರ್ಮವೂ ನಿಷ್ಕಲಂಕ ಪ್ರೇಮುವನ್ನು ಅವಲಂಬಿಸಿರುವದರಿಂದ ದಾಂಪತ್ಯ ಜೀವನದಲ್ಲಿ ಸತ್ಯವಾದ ಶ್ರದ್ಧೆಯನ್ನೂ, ಅದನ್ನು ಪರಿಶೀಲಿಸಲು ತಕ್ಕ ವಿದ್ಯೆಯನ್ನೂ, ಪಡೆಯಲು ೧ನೇ ನುಡಿಯ ೧ನೇ ಚರಣವು ಬೋಧಿಸುತ್ತಿದೆ. ಈ ಬಗೆಯ ಸತ್ಯ ಶ್ರದ್ಧೆಯನ್ನು ಇಟ್ಟರೇನೇ ಗೃಹಿಣೀ ಪದದಲ್ಲಿ ಸರ್ವಾರ್ಥ, ಕಾಮ ಫಲಗಳು ಪ್ರಾಪ್ತವಾಗುವವೆಂದು ಧಾರಾಳವಾಗಿ ಹೇಳಿದ್ದಾರೆ. ಎರಡನೇ ಚರಣವು, ಕೇವಲ ಸ್ವಾರ್ಥ (ವಿಲಾಸ) ಕ್ಕೆಂದು ತನುವನ್ನು ಪುರುಷರಿಗೆ ಸಲ್ಲಿಸದೆ, ಸಂತಾನಾಪೇಕ್ಷೆಯಿಂದ ಭೋಗವೀಯುವದು ಯುಕ್ತವೆಂದೂ, ಸಂತಾನ ಪ್ರಾಪ್ತಿಯೇ ಗೃಹಿಣೀ ಪದದ ಮೂಲೋದ್ದೇಶವೆಂದು ೧ನೇ ನುಡಿಯ ೨ನೇ ಚರಣವು ಬೋಧಿಸುತ್ತದೆ.

ನಿರೀಕ್ಷಕ.



# ಆತ್ಮಬೆಳಕು

ಎಲ್ಲಿ ಕಿವಿಯಿಡಲಲ್ಲಿ,
ಎಲ್ಲಿ ಕಣ್ಣಿಡಲಲ್ಲಿ,
ತುಂಬಿಹುದು ಮಚ್ಚರದ ಭಾಗ,
ಚಿತ್ತ ಶಾಂತಿಯು ಬಲದಿ,
ಬಿಡವೆ ತನ್ನಯ ಛಲದಿ,
ಮೂಡಲೆಂದಿಗೂ ಶೂನ್ಯಯೋಗ !

ಬೆಳಕು ಕತ್ತಲೆಯೆಂದು,
ಸಮಯ ಮೀಗಿಲ್ಲೆಂದು,
ಹಳಿಯುವುದೆ ಮಹತ್ತರ ಪಾಪ;
ಆತ್ಮ ಶೋಧನೆಯೆಂದು,
ಗುರಿಯು ಸಾಧನೆಯೆಂದು,
ಮುನ್ನಡೆವುದಕೆ ಕಾಲವಿದು ದೀಪ !

ಬೆಳಕನರಸಲು ಮುಂದು,
ಮೋಹಿಪುವುದೇ ಕುಂದು?
ಕಾಣಲಿಕೇನು ಬೆಳಕು ಬಿಳಿಪು,
ನಾನು ಎಂಬುವ ಛಲಕೆ,
ನೀನು ತಿಳಿದರೆ ಬಲಕೆ,
ಬೆಳಗುವದಿಂದು ನಿನ್ನಾತ್ಮ ಬೆಳಕು !

ಎ. ಎಂ. ಗಿರಿಯಪ್ಪ ಗುತ್ತಲ

---



**ಅಂತರ ರಾಷ್ಟ್ರೀಯ ರಾಜಕಾರಣ** : ಬರೆದವರು ಕೃಷ್ಣಾಚಾರ್ಯ ಜೋಶಿ, ಬಿ. ಎ. ಎಲ್ ಎಲ್. ಬಿ., ಗುಡಗುಂಟಿ; 'ಮಿಂಚಿನಬಳ್ಳಿ' ಯ ೨೧ನೆಯ ವರುಷದ ೩ನೆಯ ಕುಡಿ, ಬೆಲೆ ರೂ ೨–೦೦

ಶ್ರೀ ಬುರ್ಲಿ ಬಿಂದುಮಾಧವರು ತಮ್ಮ 'ಮಿಂಚಿನಬಳ್ಳಿ' ಯ ಪ್ರಕಾಶನದ ಮುಖಾಂತರ ಜನ ಜಾಗೃತಿಯನ್ನು ಕೈಕೊಂಡಿರುವರು. ಕತೆ ಕಾದಂಬರಿಗಳಂತಹ ಲಘು ಸಾಹಿತ್ಯಕ್ಕಿಂತ ವಿವೇಚನಪರ ಗ್ರಂಥಗಳನ್ನು ಪ್ರಕಟಿಸುವದು ಅದರ ಕಾರ್ಯವಾಗಿದೆ. ಅಂತರ ರಾಷ್ಟ್ರೀಯ ರಾಜಕಾರಣ ಅಂತಹ ಪ್ರಕಟನೆಗಳಲ್ಲೊಂದಾಗಿದೆ. ಗ್ರಂಥಕರ್ತರು ಹೈದರಾಬಾದು ಕರ್ನಾಟಕದ ರಾಜಕೀಯ ಆಂದೋಲನದಲ್ಲಿ ಪ್ರಮುಖವಾದ ಪಾತ್ರವಹಿಸಿದವರಲ್ಲದೆ ಸಂವಿಧಾನ ತಜ್ಞರು ಎಂದು ಪ್ರಕಾಶಕರು ಹೇಳಿರುವದರಿಂದ ಗ್ರಂಥವು ವಿಮರ್ಶಾರ್ಹವಾಗಿದೆ. ನಮ್ಮ ಕನ್ನಡ ಅಥವಾ ದೇಶೀಯ ಭಾಷೆಗಳಲ್ಲಿ ರಾಜನೀತಿಯ ಶಾಸ್ತ್ರ, ರಾಜಕಾರಣಗಳ ಬಗೆಗೆ ಗ್ರಂಥಗಳು ವಿರಳ, ಪತ್ರಿಕೆಗಳನ್ನೇ ಅವಲಂಬಿಸಬೇಕು ಎಂದು ಹೇಳಬಹುದು. ಅದ್ದರಿಂದ ಅಂತರ ರಾಷ್ಟ್ರೀಯ ರಾಜಕಾರಣದ ಬಗೆಗಿನ ಈ ಪ್ರಕಟನೆ ಸ್ವಾಗತಾರ್ಹವೆ ಾಗಿದೆ.

ಕತೆಗಳು ಹಿಡಿಸುವಂತೆ ಜನಕ್ಕೆ ರುಚಿಸುವದಿಲ್ಲೆಂದೇನೋ ವಿವೇಚನಪರವಾದ ತಾತ್ವಿಕ ಗ್ರಂಥಗಳು ನಮ್ಮ ಭಾಷೆಗಳಲ್ಲಿ ಹೊರಹೊಮ್ಮುವದು ಕಡಿಮೆ ಎಂದು ಹೇಳಬಹುದು. ಆದರೂ ಶ್ರೀ ಕೃಷ್ಣಾಚಾರ್ಯ ಜೋಶಿ ಅವರು ಪ್ರಸ್ತುತ ಗ್ರಂಥವನ್ನಲ್ಲದೆ ಕನ್ನಡದಲ್ಲಿ 'ರಾಜನೀತಿ ಶಾಸ್ತ್ರ' ಎಂಬ ಗ್ರಂಥವನ್ನು ರಚಿಸಿದ್ದಾರೆ. ಇದಕ್ಕೆ ಕರ್ನಾಟಕ ಶಿಕ್ಷಣ ಸಮಿತಿಯ ಬಹುಮಾನವೂ ದೊರಿದಿದೆ.

ರಾಜಕಾರಣ ಅಥವಾ ರಾಜ್ಯಕೀಯವು ನಮ್ಮ ಜೀವನವನ್ನು ಹೆಜ್ಜೆ ಹೆಜ್ಜೆಗೆ ಪರಿವರ್ತಿಸುವದಾಗಿದ್ದರೂ ಜನಸಾಮಾನ್ಯರಿಗೆ ಅವುಗಳಲ್ಲಿರುವ ಅಭಿರುಚಿ ಅಷ್ಟಕ್ಕಷ್ಟೆ, ರಾಜನೀತಿ ಸಂವಿಧಾನ ಶಾಸ್ತ್ರಗಳ ಜ್ಞಾನ ಅಭ್ಯಾಸುಗಳಿಗೆ ಮೀಸಲಾದಂತಿದೆ. ಜಗದ ಆಗುಹೋಗುಗಳ ವರದಿಗಳನ್ನು ಕಂಡು ಜನರು ಉತ್ಸಾಹ ತೋರುವದಾದರೂ ಅವುಗಳ ಹಿನ್ನೆಲೆಯಾಗಿದ್ದ ನೀತಿಯನ್ನರಿಯಲು ತಲೆ ತುರಿಸರು. ವೈಜ್ಞಾನಿಕ ಅಥವಾ ಸಾಹಿತ್ಯಕ ವಿಷಯಗಳ ಅಭ್ಯಾಸಕ್ಕೆ ಕೆಲವೊಂದು ಶೈಕ್ಷಣಿಕ ಅರ್ಹತೆಯ ಅವಶ್ಯಕತೆ ಇರುವಂತೆ ರಾಜಕಾರಣದ ಅಭ್ಯಾಸಕ್ಕೆ ಅದಾವದೂ ಇಲ್ಲದಾಗಿದೆ. ಪತ್ರಿಕೆಗಳಲ್ಲಿನ ವರದಿಗಳಿಂದಲೇ ತಜ್ಞರಂತೆ ನುಡಿವವರ ಸಂಖ್ಯೆ ಹೆಚ್ಚು. ಈ ವಿಷಣ್ಣ ಸ್ಥಿತಿಯನ್ನು ಕಡಿಮೆಮಾಡಲು ಈ ಗ್ರಂಥವು ಸಹಾಯಕವಾದರೆ ಒಳ್ಳೆಯದು.

ಸದ್ಯದ ಗ್ರಂಥವನ್ನು ಸೈದ್ಧಾಂತಿಕ ಗ್ರಂಥವೆಂದು ಕರೆಯಲಾಗದು. ಗ್ರಂಥವು ಹೆಚ್ಚಾಗಿ ಅಂತರರಾಷ್ಟ್ರೀಯ ರಂಗದಲ್ಲಿನ ಸದ್ಯಃಕಾಲೀನ ಘಟನೆಗಳ ನಿರೂಪಣೆಯೆ ಆಗಿದ್ದು ಅವುಗಳ ಹಿನ್ನೆಲೆಯ ವಿವೇಚನೆ ಅಷ್ಟಾಗಿ ಕಂಡು ಬರುವದಿಲ್ಲ. ಮುಖಚಿತ್ರವು ವಿಷಯ ವ್ಯಾಪ್ತಿಯನ್ನರುಹುವಂತಿದ್ದರೆ ಒಳ್ಳೆಯದಾಗಿತ್ತು. ಅಲ್ಲಿರುವ ನೆಹ್ರು-ಬುಲ್ಗಾನಿನರ ಚಿತ್ರವು ಅಂತರ ರಾಷ್ಟ್ರೀಯ ರಾಜಕಾರಣವೆಂದರೆ ಭಾರತ ರಶಿಯ ದೇಶಗಳು ಎಂದು ಭಾವಿಸುವಂತಾಗಿದೆ. ಗ್ರಂಥದಲ್ಲಿ ಅಂತರ ರಾಷ್ಟ್ರೀಯ ರಾಜಕಾರಣವು ಏಶಿಯ ಅಥವಾ ಭಾರತಕ್ಕೆ ಸಂಬಂಧ ಪಟ್ಟಿರುವಂತೆ ನಿರೂಪಿಸಲ್ಪಟ್ಟಿದ್ದು ಸ್ವಾತಂತ್ರ್ಯಾನಂತರದ ಭಾರತದ ವಿದೇಶ ನೀತಿಯ ಸಮರ್ಥನೆಯಾದಂತಿದೆ. ಕಲಹಕ್ಕೆಡೆಯಾಗದೆ ಜಗವೆಲ್ಲ ಸುಖಿಸುವಂತಾಗಲೆಂದು ಭಾರತದ ಶ್ರೀ ನೆಹರು ನಿರ್ವಿಸಲೆತ್ನಿಸುತ್ತಿರುವ ತಾಟಸ್ಥ್ಯ ನೀತಿಗೆ ಜಯವು ದೊರೆಯಬಹುದು. ಆದರೆ ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸುವದಕ್ಕಾಗಿ ರಾಷ್ಟ್ರ ರಾಷ್ಟ್ರಗಳಲ್ಲಿಯ ರಾಜಕಾರಣವು

(೩೩ನೆಯ ಪುಟ ನೋಡಿರಿ)

# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ, ಅಕ್ಕನ ಪೆಟ್ಟಿಗೆ ' ಗೆ ಓಲೆಗಳನ್ನು ಕಳುಹಿಸಬಹುದು; ಮತ್ತು ನೀವೇ ಬರೆದ ಸಣ್ಣ ಕತೆ, ಕವನ, ಆಟ ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ. ನೀವೇ ತೆಗೆದ ಅಂದವಾದ ಚಿತ್ರವಿದ್ದರೆ ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು ' ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲಾ ಬರೆದು, ಪಾಕೇಟಿನಲ್ಲಿ ಹಾಕಿ, ಕಳಿಸಿಬಿಡಿ. ' ಅಕ್ಕನ ಪೆಟ್ಟಿಗೆ'ಗೆ ಈಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರುವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮೂಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರದ (ಬ್ಲಾಕ) ಕಳಿಸಿದರೆ,ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದ ಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

**ಅಕ್ಕನ ಪೆಟ್ಟಿಗೆ**

**ವೀರಮಾತಾ ಕಾರ್ಯಾಲಯ,**

ವನಿತಾಸೇವಾ ಸಮಾಜ ಧಾರವಾಡ.

ಧಾರವಾಡ.

**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು ......................................................

ವಯಸ್ಸು ಮತ್ತು ಓದುತ್ತಿರುವ ತರಗತಿ......................................................

ಅಲ್ಪ ಪರಿಚಯ ......................................................

ಪೂರ್ಣ ವಿಳಾಸ......................................................

......................................................(ಮನೆ ನಂಬರ ಸಹಿತ)..........................

೨ ಆಣೆ ಸದಸ್ಯತ್ವದ ಫೀಯನ್ನು ಕೊಟ್ಟು ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು ಇಂದಿನಿಂದ ನಾನು ಸದಸ್ಯ ನಾ/ಳಾಗಿದ್ದೇನೆ.

ತಾರೀಖು .................. ಸಹಿ

## ಈ ತಿಂಗಳ ಹೊಸ ಸದಸ್ಯರು

೧. ಶಶಿಕಲಾ ಶಂಕರ ಜಯವಂತ ವಯ ೧೪ ಓದುವ ತರಗತಿ ೯. ಕುಮಠಾ

## ಅಕ್ಕನ ಬಳಗದ ಸದಸ್ಯರಿಗೆ

ಈ ಸಲ ಹೊಸ ಸದಸ್ಯರೂ ವಿಶೇಷವಾಗಿ ಆಗಿಲ್ಲ. ಲೇಖ ಕವಿತೆಗಳನ್ನು ಬರೆಯುವದು ಕಳಿಸುವದೂ ಆಗಿಲ್ಲ. ದೀಪಾವಳಿಯ ಹಬ್ಬದ ನಿಮಿತ್ಯ ಪಗಡೆಯ ಆಟದಲ್ಲಿ ಚಿಕ್ಕ ತಮ್ಮ ತಂಗಿಯರು ತೊಡಗಿದಂತೆ ಕಾಣುವದು. ಅದೂ ನನಗೆ ಸಂತೋಷವೇ. ಮುಂದಿನ ಸಲ ನಿಮ್ಮ ಆಟದ ಅನುಭವವನ್ನೇ ಸಂಕ್ಷಿಪ್ತವಾಗಿ ಬರೆದು ಕಳಿಸಲು ಅಡ್ಡಿಯಿಲ್ಲ.

ನಿಮ್ಮ ಮಮತೆಯ ಹಿರಿಯಕ್ಕ.

## ನವ್ಹಂಬರ ತಿಂಗಳ ಒಗಟಿಗಳಿಗೆ ಸರಿಯಾದ ಉತ್ತರ

೧) ಪರಮ ೨) ಕವೀಂದ್ರ ೩) ದ್ವಾದಶ ೪) ಕುಂಭ ೫) ಮಕರ ೬) ಮಲಗು ೭) ಪಂಚಾಂಗ ೮) ಪ್ರಪಂಚ ೯) ಮೂಷಕ ೧೦) ಪಾಟೀಲ ೧೧) ಜವಾಹಿರಲಾಲ ನೆಹರು ೧೨) ಕಾಮಧೇನು ೧೩) ಪ್ರಜಾಪತಿ

### ಸರಿಯಾದ ಉತ್ತರ ಕಳಿಸಿದವರು

ಆರ್. ಜಿ. ಕುಲಕರ್ಣಿ, ಜಮಖಂಡಿ

## ಒಗಟಿಗಳು

(೧) ೧+೨ ಕೂಡಿಸಿದರೆ ನೀರು ಎಂದು ೩ನೇಯ ಅಕ್ಷರದಿಂದ ಹುಟ್ಟಿದ ಎಂದೂ ೪+೫ ಕೂಡಿಸಿದರೆ ಗೆಳೆಯನೆಂದೂ ಅರ್ಥವಾಗುವ ೫ ಅಕ್ಷರದ ದೇವತೆ ಯಾವದು ?

(೨) ೧+೩ ಕೂಡಿಸಿದರೆ ಮುಖ್ಯಾಂಶವೆಂದೂ ೨+೩ ವಿಷವೆಂದು ಅರ್ಥವಾಗುವ ೩ ಅಕ್ಷರದ ಪಟ್ಟಣದ ನಾಮವು ಯಾವದು ?

(೩) ೧+೪ ಕೂಡಿಸಿದರೆ ದೇವತೆ ಎಂದೂ ೨+೪ ಕೂಡಿಸಿದರೆ ಕುಜವೆಂದು ೨+೩ ಕೂಡಿಸಿದರೆ ಜೇನುತುಪ್ಪವೆಂದೂ ಅರ್ಥವಾಗುವ ೪ ಅಕ್ಷರದ ನಾಮವು ಯಾವದು ?

ಬರೆದವರು : ಎ. ಆರ್. ಶಾಸ್ತ್ರಿ, ಸೂಡಿ

##  ಗುಬ್ಬಿಯ ಮದುವೆ 

ಹೂ ಬೀಸಿಲು ಮಳೆ ಬರುತ್ತಿತ್ತು।
ಗುಬ್ಬಿಯ ಮದುವೆ ನಡೆದಿತ್ತು।
ಪಕ್ಷಿಗಳೆಲ್ಲ ಸೇರಿದವು।
ಮದು ಮಗಳನ್ನು ಮಾಡಿದವು ॥೧॥

ಚಿಟ್ಟೆ ಗುಬ್ಬಿಯ ಕರೆಸಿದವು।
ಮದುಮಗಳನ್ನು ಕರೆಸಿದವು।
ರೆಕ್ಕೆಗಳನ್ನು ನೆನೆಸಿದವು।
ಅರಿಸಿಣ ಕುಂಕುಮ ಹಚ್ಚಿದವು ॥೨॥

ಕೋಗಿಲೆಯನ್ನು ಕರೆಸಿದವು।
ಹಾಡನು ಹಾಡಲು ಹಚ್ಚಿದವು।
ಹದ್ದುಗಳನ್ನು ಕರೆಸಿದವು।
ಸನಾದಿ ಉದಲು ಹೇಳಿದವು ॥೩॥

ನವಿಲುಗಳನ್ನು ಕರೆಸಿದವು।
ಕುಣಿತವ ಮಾಡಲು ಹೇಳಿದವು।
ಪಕ್ಷಿಗಳೆಲ್ಲವು ಸೇರಿದವು।
ಆರತಿಯನ್ನು ಬೆಳಗಿದವು।

ಹಕ್ಕಿಗಳೆಲ್ಲವು ಕೂಡಿದವು।
ಅಕ್ಕಿಯ ಕಾಳನು ಬೀರಿದವು ॥೪॥

(೮ನೇ ಪುಟದಿಂದ)

ನಡೆದಹೋರಾಟದಲ್ಲಿ ಕ್ಷತ್ರಿಯರನ್ನು ಸೋಲಿಸಿತೇನೋ! ಆದರೆ ಬರಬರುತ್ತ ಕ್ಷತ್ರಿಯರು ಗೆದ್ದರು. ಅಂದರೆ ಕ್ಷತ್ರಿಯರಲ್ಲಿಯ ಬ್ರಹ್ಮತೇಜಸ್ಸು ಗೆದ್ದಿತು. ಬ್ರಾಹ್ಮಣರೂ ಕೀಳಾದರು. ಮುಂದೆ ವೈಶ್ಯರ ಸರ್ತಿ ಬಂದಿತು. ಆ ಮೇಲೆ ಈಗ ಶೂದ್ರರ ಸರ್ತಿಬಂದಿದೆ. ಕ್ರಮೇಣ ಎಲ್ಲ ಜಾತಿವರ್ಣಭೇದಗಳು ಮಾಯವಾಗಿ ಬುದ್ಧಿಶಕ್ತಿಯನ್ನು ಬೆಳಸಿದವರ ಪ್ರಭಾವವು ಸಮಾಜದಲ್ಲಿ ಬೆಳೆಯ ಹತ್ತಿದೆ, ಆಳಹತ್ತಿದೆ. ಮೊದಲು ಮೊದಲು ಈ ಬುದ್ಧಿಪ್ರಭಾವವು ಆಧ್ಯಾತ್ಮ ವಿಷಯ, ಸಾಹಿತ್ಯ ವಿಷಯ, ನೀತಿ ಧರ್ಮ ಮೊದಲಾದ ವಿಷಯಗಳಲ್ಲಿ ಕಂಡು ಬಂದು ಆಧ್ಯಾತ್ಮಿಕ ವಿಷಯ, ಕಾವ್ಯ, ಕಥೆಕಾದಂಬರಿ ಮೊದಲಾದವುಗಳಲ್ಲಿವಿಷಯಗಳಿಂದ ಕಂಡು ಬಂದಿತು. ಮತ್ತು ಈ ದೈಹಿಕ ಅಂದರೆ ಭೌತಿಕ ವಿಷಯಗಳ ಕಡೆಗೆ ಅಲಕ್ಷ್ಯವಾಗುತ್ತ ನಡೆದು, ಕೇವಲ ಇಹಲೋಕಕ್ಕಿಂತ ಪಾರಮಾರ್ಥಿಕ ವಿಷಯಗಳೆ ಹೆಚ್ಚಿನವೆಂದು ಭೌತಿಕ ವಿಷಯಗಳು ಕೀಳವೆಂದು ಪ್ರಚಾರವಾಯಿತು. ಹೀಗೆ ಪಾರಮಾರ್ಥಿಕ ಭೌತಿಕತತ್ವಗಳನ್ನಲ್ಲಿ ಯುದ್ಧ ನಡೆದು ಪಾರಮಾರ್ಥದ ಉತ್ಪತ್ತಿ ಮೊದಲಾಗಿದ್ದರಿಂದ ಭೌತಿಕ ತತ್ವವು ಹಿಮ್ಮೆಟ್ಟಲ್ಪಟ್ಟಿತು. ಆದರೆ ಸೃಷ್ಟಿನಿಯಮದಂತೆ ಭೌತಿಕವು ಬಹುಭಾಗ ವ್ಯಾಪಿಸಿದ್ದರಿಂದ ಅದನ್ನು ಬೌದ್ಧಿಕ ಶಕ್ತಿಯಿಂದ ಹಿಮ್ಮೆಟ್ಟಲ್ಪಟ್ಟಿದ್ದರಿಂದ ಈ ಮನುಷ್ಯನ ಪಾರ್ಥಿವ ದೇಹವು ಅಶಕ್ತವಾಗುತ್ತ ನಡೆಯಿತು. ಬೆಂಕಿ ಮೊದಲಾದ ಭೌತಿಕ ಸಾಧನಗಳ ಶೋಧವು ಹೆಚ್ಚಾಗುತ್ತ ನಡೆದಂತೆ, ದೇಹದ ಸಾಮರ್ಥ್ಯವು ಕುಗ್ಗುತ್ತ ನಡೆದಂತೆ ಬೇನೆ ಬೇಸರಿಕೆಗಳು ಹೆಚ್ಚಾಗುತ್ತ ನಡೆದವು. ಮೊದಲು ಸ್ವಲ್ಪಾಂಶದಿಂದ ಬ್ರಾಹ್ಮಣರಲ್ಲಿ ನಡೆದ ಪ್ರಯೋಗಗಳೆಲ್ಲಲಾಭದಾಯಕವೆನಿಸಿದ್ದರಿಂದ ಅವುಗಳ ಪ್ರತಿಕ್ರಿಯೆಯಿಂದುಟಾದ ದುಷ್ಪರಿಣಾಮಗಳಿಗೆ ಬೆಳೆಯಲು ಸಾಕಷ್ಟು ಅವಕಾಶ ಸಿಗದ್ದರಿಂದ ಆ ಬ್ರಾಹ್ಮಣರ ಪ್ರಯೋಗಗಳ ಮೋಹವು ಮಿಕ್ಕ ವರ್ಣದವರಿಗೆ ಬಿಡಲಿಲ್ಲ. ಅವುಗಳ ದುಷ್ಪರಿಣಾಮಗಳ ಕಡೆಗೆ ಸಾಕಷ್ಟು ಮೊದಲು ಮೊದಲು ಹತ್ತಲಿಲ್ಲ. ಹೀಗಾಗಿ ಹೆಜ್ಜೆಹೆಜ್ಜೆಗೆ ಸೃಷ್ಟಿನಿಯಮಗಳ ಭಂಗವಾಗುತ್ತ ನಡೆದು ಅದರ ಪರಿಣಾಮವಾಗಿ ಬೇನೆಗಳು ಸಾಮಾಜಿಕ ದುಃಖಗಳು ಹೆಚ್ಚಾಗುತ್ತ ನಡೆದವು. ಅವುಗಳು ನಮ್ಮ ಕೃತಿಯ ಪರಿಣಾಮಗಳೆಂದು ಎನಿಸದೆ ಪೂರ್ವಿಕರ ಹಾಕಿಟ್ಟ ಲೋಕ ರೂಢಿಯ ಪದ್ಧತಿಯಲ್ಲಿ ಏನೋ ತಪ್ಪಾಗಿರಬೇಕೆಂದು ಆ ಪದ್ಧತಿಯಲ್ಲಿ ತಿದ್ದು ಪಾಟ ಮಾಡಲು ಹೊರಟಿರುವರೆ ಹೊರ್ತು ಮೂಲಕಾರಣ ಹುಡುಕಿ ಉಪಾಯ ಕಂಡು ಹಿಡಿಯಲು ಯತ್ನಿಸುವದಿಲ್ಲ. ಉದಾಹರಣಾರ್ಥ:— ಎಲ್ಲ ಪ್ರಾಣಿಗಳಿಗೆ ಈಶನು ಸ್ವಾಭಾವಿಕ ಆಹಾರವನ್ನು ಒದಗಿಸಿ ಕೊಟ್ಟಂತೆ ಮನುಷ್ಯ ಪ್ರಾಣಿಗೆ ಸಹ ಒದಗಿಸಿ ಕೊಟ್ಟಿರುವನು. ಆದರೆ ಮನುಷ್ಯ ಪ್ರಾಣಿಯು ತನ್ನ ಬುದ್ಧಿ ಪ್ರಭಾವದಿಂದ ತನ್ನ ಆಹಾರವನ್ನೆ ಬದಲಿಸಿ ಮೊದಲೇ ಸೂರ್ಯಪ್ರಕಾಶದಿಂದ ಪಕ್ವವಾದ ಆಹಾರವನ್ನು ಬೆಂಕಿಯಿಂದ ಮರಳಿ ಬೇಯಿಸಲು ಪ್ರಯತ್ನಮಾಡಿದ್ದಾನೆ. ಅದರಿಂದ ನಾಲಿಗಿ ರುಚಿಯು ವಿಕೃತವಾಗಿ ಹೆಚ್ಚುಕಡಿಮೆ ಆಹಾರ ಸೇವಿಸಿರೋಗಿಯಾಗುತ್ತಾನೆ. ಅಂದರೆ ಮನುಷ್ಯನ ಆಹಾರ ವಿಹಾರದಿಂದುಂಟಾದ ದೋಷಗಳನ್ನು ಹೋಗಲಾಡಿಸಲು ಸೃಷ್ಟಿಯು ಪ್ರಯತ್ನ ಮಾಡುತ್ತದೆ. ಅದಕ್ಕೆ ರೋಗವೆಂದು ಹೆಸರು. ಅದನ್ನು ಹತ್ತಿಕ್ಕಲು ಮನುಷ್ಯ ಪ್ರಯತ್ನಿಸುತ್ತಾನೆ.

---

(೩೨ ನೇ ಪುಟದಿಂದ)

ಬೆಳೆದು ಬಂದ ಬಗೆಯನ್ನೂ ಇಡಿಯ ಜಾಗತಿಕ ಹಿನ್ನೆಲೆಯನ್ನೂ ಇಂದು ಅದು ತಳೆದಿರುವ ಬೃಹದಾಕಾರವನ್ನೂ ಸಂಕ್ಷೇಪವಾಗಿಯಾದರೂ ವಿವೇಚಿಸಿದ್ದರೆ ಚೆನ್ನಾಗಿತ್ತು. ಆದರೂ ಶ್ರೀ ಕೃಷ್ಣಾಚಾರ್ಯ ಜೋಶಿ ಅವರ ಈ ಪ್ರಯತ್ನವು ಸ್ತುತ್ಯವಾಗಿದೆ.

ಜನಜೀವನದಲ್ಲಿ ರಾಜಕಾರಣದ ಸ್ಥಾನ ಅತ್ಯಂತ ಹಿರಿದೂ ಸೂಕ್ಷ್ಮವೂ ಆಗಿದೆ. ಬುನಾದಿಯಿಂದಲೂ ಅದು ಮಾನವ ಜೀವನವನ್ನು ಮಾರ್ಪಡಿಸುತ್ತಲೆ ಇದೆ. ಆದ್ದರಿಂದ ರಾಜಕಾರಣ ರಾಜನೀತಿಗಳ ಜ್ಞಾನ ನಮ್ಮ ಜನಕ್ಕೆ ತುಂಬ ಆಗತ್ಯವಿದೆ. ಒಂದು ಜನ ಅಥವಾ ಜನಾಂಗಕ್ಕೆ ಒಂದು ನುಡಿ ಇರುವದಾದರೂ ವಿಜ್ಞಾನ, ರಾಜಕಾರಣ ಹೀಗೆ ಶಾಸ್ತ್ರ ವಿಷಯವೊಂದಕ್ಕೆ ಒಂದು ಪರಿಯ ಭಾಷೆಯೂ ಇರುವದು. ನಮ್ಮ ಕನ್ನಡ ಅಥವಾ ದೇಶೀಯ ಭಾಷೆಗಳಲ್ಲಿ ಪಾರಿಭಾಷಿಕ ಕೋಶ ಇನ್ನೂ ಬೆಳೆಸಬೇಕಾಗಿದೆ. ಸಂವಿಧಾನ ತಜ್ಞರಾದ ಶ್ರೀ ಕೃಷ್ಣಾಚಾರ್ಯ ಜೋಶಿ ಅವರಿಂದ ರಾಜನೀತಿ ರಾಜಕಾರಣ ಕುರಿತು ಇನ್ನೂ ಹೆಚ್ಚು ಗ್ರಂಥಗಳು ಬರಲೆಂದು ಅವರ ಈ ಯತ್ನವು ಅಂತರ ರಾಷ್ಟ್ರೀಯ ಸಮಸ್ಯೆಗಳನ್ನು ಕುರಿತು ಕನ್ನಡದಲ್ಲಿ ಪತ್ರಿಕೆ ಅಥವಾ ಪುಸ್ತಕಮಾಲೆಗೆ ನಾಂದಿಯಾಗಲೆಂದೂ ಹಾರೈಸೋಣ.

ನಿರೀಕ್ಷಕ

# ದೀಪಾವಳಿ

ಸುಂದರ ಕರಕಮಲಗಳು ದೀಪವ ಹಚ್ಚಲು।
ರಮಣೀಯ ದೀಪಗಳು ಪ್ರಜ್ವಲಿಸಲು॥
ಇದೋ ವನವು ಆನಂದದಿ ಸೂಸುತಿರಲು।
ಬಂದಿದೆ ಹರ್ಷದಕಾಲ ಸಂತಸಗೈಯಲು ॥೧॥

ಇತ್ತನೋಡಿದರೆ ಪಟಾಕ್ಷಿಯಹಾರಾಟ।
ಅತ್ತನೋಡಿದರೆ ವಿನೋದದ ಕೋಲಾಟ।
ನೋಡು ಪಟಾಕ್ಷಿ ವಿನೋದದ ತಾಕಲಾಟ।
ಜಗವೇ ವೈಮರೆತಿಹ ಆಟದ ನೋಟ ॥೨॥

ನೋಡು ನೋಡಲ್ಲಿ ಬಾಣವದೋ ಹಾರುತಿದೆ।
ನೋಡಿದೋ ಪಟಾಕ್ಷಿಯ ರಾಶಿಯೇ ಮೆರೆಯುತಿವೆ॥
ಪ್ರಕಾಶಜ್ಯೋತಿಯು ಬೆಳಗುತಿದೆ।
ಮುದ್ದಿನ ಮಳೆಯನು ಕರೆಯುತಿದೆ ॥೩॥

ಪಟಾಕ್ಷಿಯ ಚಟಚಟ ಕೇಳುತಿದೆ।
ಆಕಾಶ ಬುಟ್ಟಿಯದೋ ಗಗನಕ್ಕೇರುತಿದೆ॥
ಹರ್ಷ ಪ್ರವಾಹವು ಹರಿಯುತಿದೆ।
ಆಗಸ ತಾರೆಯು ಮೆರೆಯುತಿದೆ ॥೪॥

ಪುಷ್ಪವೃಷ್ಟಿಯ ಗೈಯುತಿಹರು।
ಸಂತೋಷದ ಭೇರಿಯ ಹೊಡೆಯುವರು॥
ಎಲ್ಲೆಲ್ಲಿಯೂ ಹರ್ಷದಿ ಕುಣಿದಾಡುವರು।
ಆನಂದ ದೀಪಾವಳಿಯಲ್ಲಿ ಮೆರೆಯುವರು ॥೫॥

ಜನರ ಬಾಳನ್ನು ಬೆಳಗಿಸುವ ದೀಪಾವಳಿ।
ಸಾಹಿತ್ಯಾ ನೃತ್ಯ ಸಂಗೀತ ಸಮ್ಮೇಳನ ದೀಪಾವಳಿ।
ಜನಮನ ಸಂತಸಗೊಳಿಸುವ ದೀಪಾವಳಿ।
ಅಜ್ಞಾನವ, ಕಳೆದೆಮಗೆ ಸುಜ್ಞಾನ ಬೆಳಗಿಸಲಿ ॥೬॥



ಲೀಲಾವತಿ ನಿಂಬಾಳಕರ

# " ಭಾರತ ರಕ್ಷಕ ರಾಟೆ " ಅಥವಾ " ದೀನಬಂಧು "

ಭಾರತ ಮಾತೆಯ ಮಮತೆಯ ಕಂದರೆ।
ನೂಲಲು ತಮಗೆ ರಾಟೆಯೊಂದಿರೆ॥
ರಾಟೆಯಿಂದಲೆ ರಾಷ್ಟ್ರದ ಏಳ್ಗೆಯಿರೆ॥
ಆನಂದದಿ ನೀವು ಆದರಿಸುತಿರೆ ॥೧॥

ರಾಧಾ ರಮಣನ ರಕ್ಷಣೆ ಚಕ್ರ।
ಶಾಂತಿ ಸಮರದೀ ನಲಿದಿಹ ಚಕ್ರ॥
ಮೋಹನ ಗಾಂಧಿಯ ಜೀವನ ಚಕ್ರ।
ಆಂಗ್ಲರ ಗುಂಡಿಗೆ ಬೆದರದ ಚಕ್ರ ॥೨॥

ರಾಟೆಯಿಂದಲೇ ನೂಲನು ತೆಗೆಯಿರಿ।
ನಿರುದ್ಯೋಗವನು ಹೊಡೆದೋಡಿಸಿರಿ॥
ಭಾರತಾಂಬೆಯ ಮಾನವ ಕಾಯಿರಿ।
ಜಗದಲಿ ಭಾರತ ಮಾತೆಯ ಮೆರೆಸಿರಿ ॥೩॥

ರಾಟೆಯಿಂದಲಿ ಸೃಜಿಸಿದ ಗಾನವು॥
ವೀಣಾಪಾಣಿಯ ಸುಮಧುರನಾದವು॥
ಭಾರತ ಬಡಿಗನು ರಚಿಸಿದ ರಾಟೆಯು॥
ಸ್ವಾವಲಂಬನವ ಕಲಿಸಿದ ರಾಟೆಯು ॥೪॥

ನೀವು ಉಡಿರಿ ಖಾದಿಯ ತೊಡಿರಿ।
ಸನ್ಮಾರ್ಗದಲಿ ಸದಾ ನಡೆಯಿರಿ॥
ರಾಷ್ಟ್ರದ ಏಳ್ಗೆಗೆ ಸದಾ ಶ್ರಮಿಸಿರಿ॥
ಮರೆಯಲಾರದ ಗಾಂಧಿಯ ಸ್ಮರಿಸಿರಿ ॥೫॥

**ಎಮ್. ಎಫ್. ಉಪರಾಳ**

# ಕಸಬರಿಗೆ ಪದ್ಯ

೧

ಕಾಡಿನಲ್ಲಿ ಜನನ ಹೊಂದಿ
ಶಹರದಲ್ಲಿ ನಿನ್ನ ಬಳಿಕೆ।
ನೀನೆ ನಿನ್ನ ಮಹಿಮೆ ತೋರಿ।
ಅನುರವಾದೆ ಜಗದೊಳು।

೨

ಶಹರ ಹಳ್ಳಿ ಮೊದಲುಗೊಂಡು।
ರಸ್ತೆ ಮನೆಗಳಲ್ಲಿಯೂ।
ಬೇರೆ ಬೇರೆ ಹೆಸರ ಹೊಂದಿ।
ಜಗದ ತುಂಬ ಹರಡಿನಿಂತೆ!

೩

ಹಸನ ಮಾಳ್ಪದೊಂದೆ ಕೆಲಸ।
ಹಸನ ಗೊಳಿಸಿ ಜನರ ಮನವ।
ಹರುಷ ಗೊಳಿಸಿ ಎಳೆದು ಕೊಂಡೆ।
ನಿನ್ನ ಕೆಲಸ ಉಚ್ಚವಿಹುದು

೪

ಜನರ ಸೇವೆ ಜಗದ ಸೇವೆ।
ಈಶ ಸೇವೆ ಎಂದು ತಿಳಿದೆ।
ತಿಳಿದು ಸೇವೆ ಮಾಳ್ಪುದೊಂದೆ।
ನಿತ್ಯ ಕರ್ಮವೆಂದು ತಿಳಿದೆ।

೫

ಈಶ ಸೇವೆ ಮಾಳ್ಪ ನಿನ್ನ।
ಬಾಳ್ವೆಯೆಂತು ಉಚ್ಚವಿಹುದು।
ಉಚ್ಚವಾಗಿ ಬೆಳಗಲಿರುವ।
ಕಸಬರಿಗೆ ನೀನೇ ಧನ್ಯ।

**ಸಾವಿತ್ರಿ ಪೂಜಾರ**

# ಜಾತೀಯತೆ ಮತ್ತು ವಿವಾಹ

ಲೇಖಕಿ : ವಿಮಲಾ ಬಳ್ಳಾರಿ, ಗುತ್ತಲ

ಜಗತ್ತಿನಲ್ಲಿ ನಾನು ಮೇಲು ನೀನು ಕೀಳು ಎಂದು ವ್ಯರ್ಥ ತರ್ಕ ಮಾಡುವ ವಿವಿಧ ಮತದವರು ನಿಜವಾಗಿ ತಾವು ಯಾವ ಮತಕ್ಕೆ ಸೇರಿದವರೆಂಬುದನ್ನು ಆಳವಾಗಿ ವಿಶಾಲವಾಗಿ ಯೋಚಿಸಬೇಕಾಗಿದೆ. ಜಾತಿಗಳು ಆದಿದ್ರಾವಿಡರು ಮತ್ತು ಆರ್ಯರ ಆಗಮನದಿಂದ ಉಂಟಾಗಿದೆ. ಸಮಾಜದ ಸೌಲಭ್ಯಗಳಿಗಾಗಿ ಏರ್ಪಡಿಸಿದ ಚತುರ್ವರ್ಣಗಳ ನಡುವೆ ಉಂಟಾದ ಒಡಕುಗಳೇ ಇವಕ್ಕೆ ಕಾರಣವೆನ್ನ ಬೇಕು. ಈ ಮೇಲಿನವು ಹೆಚ್ಚಾಗಿ ಹಿಂದೂ ಜಾತಿಯವು. ಬೌದ್ಧ ಮತ್ತ ಕ್ರೈಸ್ತಮತ ಮತ್ತು ಇಸ್ಲಾಂಮತಗಳೂ ಜನ್ಮ ತಾಳಿದವು ಈಗ ಲೆಕ್ಕವಿಲ್ಲದಷ್ಟು ಜಾತಿ ಮತ, ಧರ್ಮಗಳು ತಲೆ ಎತ್ತಿ ನಿಂತಿರುತ್ತವೆ.

ನಾಗರೀಕ ಜನರ ನಡುವೆಯೂ ಜಾತೀಯತೆಯಗೋಡೆ ನಿಂತು ಪೂರ್ಣವಾಗಿ ಬೆಳೆಯ ಬೇಕಾದ ಮನೋಭಾವ ವ್ಯಕ್ತಿ ಸ್ವಾತಂತ್ರ್ಯ ಇವುಗಳಿಗೆ ಅಡ್ಡಿ ತರುತ್ತಿವೆ ಎನ್ನುವದು ಬಹಳ ಬೇಸರದ ವಿಷಯ. ಒಂದೇ ಮನೆಯ ಮಕ್ಕಳಿಂದ ಮೇಲೆ ಅಲ್ಲಿಯೂ ಭೇದವೇ ? ಎಲ್ಲರಲ್ಲಿಯೂ ಹರಿಯುತ್ತಿರುವದು ಒಂದೇ ರಕ್ತವಲ್ಲವೆ? ವೈದಿಕರು ಶ್ರೇಷ್ಠ ಕುಲದವರೆನ್ನಿಸಿ ಕೊಂಡವರು, ನೂರಾರು ಕಾರಣ ಹೇಳ ಬಹುದು. ಆದರೆ ಕೊಂಚ ಆಳವಾಗಿ ಯೋಚಿಸಿ-ನೀವು ಯಾವ ಜಾತಿಗೆ ಸೇರಿದವರು ? ಮನುಷ್ಯಜಾತಿಗೆ ! ಅಂದಮೇಲೆ ಒಂದೇ ಭಾವದಿಂದ ಎಲ್ಲರನ್ನೂ ನೋಡುವದು ಮಾನವತೆಯಲ್ಲವೆ ? ಅನ್ಯ ಜಾತಿಯ ಒಬ್ಬ ಯುವಕನನ್ನು ಒಬ್ಬ ಯುವತಿಯು ಪ್ರೇಮಿಸಿ ವಿವಾಹವಾದರೆ ಅದು ಸಮಾಜದ ದೃಷ್ಟಿಯಲ್ಲ ಮಹಾತಪ್ಪೆ ? ಇಂಥವರನ್ನು ಹೆರುವದಕ್ಕಿಂತ ಕತ್ತು ಹಿಸಿಕಿಬಿಡುವದೇ ಲೇಸು ಎಂದೆನ್ನುವ ಹೆತ್ತವರೂ ಇದ್ದಾರೆ ಹೆಣ್ಣಿನ ಜೀವಕ್ಕೆ ಗಂಡಸಿನ ಆಧಾರ ಬೇಕೇಬೇಕು. ತನ್ನ ಇಚ್ಛೆಯಂತೆ, ಆಕೆಯು ತನ್ನ ಬಾಳ ಸಂಗಾತಿಯನ್ನು ಆರಿಸಿದರೆ ಅದನ್ನು ಪ್ರೋತ್ಸಾಹಿಸುವದರ ಬದಲು ಅಲಕ್ಷಿಸಿ ದೂರವಿಡಲು ಯತ್ನಿಸುವದು ಹಿತವೇ? ಅಂತರ್ಜಾತಿಯ ವಿವಾಹ ಯಶಸ್ವಿಯಲ್ಲವೆಂದು ಹೇಳುವವರು ಬಹಳ ಎಲ್ಲೋ ನೋಡಿದ ಒಂದು ವಿವಾಹವನ್ನು ಆದರಿಸಿ ಹೀಗೆ ನುಡಿದರೆ ಅದು ಅವರದೇ ಮೂರ್ಖತನ. ತಮ್ಮ ಮಿತ್ರರೊಬ್ಬರು ಅಂತರ್ಜಾತೀಯ ವಿವಾಹ ವಾದವರು ಹೆಣ್ಣುಹೆತ್ತ ಆಕೆ ವಿವಾಹಕ್ಕೆ ಬಂದಾಗ ಕಣ್ಣೀರಿನಲ್ಲಿ ಕೈತೊಳೆಯ ಬೇಕಾಗುವದು. ಏಕೆಂದರೆ ಎರಡೂ ಜಾತಿಯ ಕಡೆಯವರು ಆಕೆಯನ್ನು ಮದುವೆಯಾಗುವದಿಲ್ಲ. ಅವಳು ತನ್ನ ಜೀವನ ಪರ್ಯಂತ ಕನ್ಯೆಯಾಗಿಯೇ ಉಳಿದು ತನಗೆ ಮಾತ್ರವಲ್ಲಾ ತನ್ನ ಹೆತ್ತವರಿಗೂ ದುಃಖವನ್ನುಂಟು ಮಾಡುವಳು. ಎಂದರೆ ಇದೇ ತಪ್ಪು ಅಭಿಪ್ರಾಯ ಈ ತರದ ಸಂಕುಚಿತ ಮನೋಭಾವಕ್ಕೆ ಯೋಗ್ಯ ವಿದ್ಯಾ ಅಭ್ಯಾಸ ದೊರಕದಿರುವದೇ ಕಾರಣ ಕೊಂಚ ಜ್ಞಾನ ಬೆಳೆಯಲಿ ಆಗ ಅವನು ತನ್ನ ದೇಶ, ತನ್ನ ಕರ್ತವ್ಯ. ಪ್ರಪಂಚದಲ್ಲಿ ನಮ್ಮ ಹೊಣೆಗಾರಿಗೆಕೆ ಇವುಗಳನ್ನು ತಿಳಿದು ಕೋಮುವಾರ ಭಾವನೆಯನ್ನು ತುಚ್ಛವೆಂದು ಗಣಿಸಿ ಜೀವನವನ್ನು ಸೂಸೂತ್ರವಾಗಿ ನಡೆಸಿಕೊಂಡು ಹೋಗಿ ಎಲ್ಲರ ಪ್ರೀತಿ ಗೌರವಗಳಿಗೆ ಪಾತ್ರನಾಗುತ್ತಾನೆ.

ಹೆಣ್ಣು, ಗಂಡಿನಂತೆ ಎಲ್ಲಾ ರಂಗಗಳಲ್ಲಿಯೂ ದುಡಿಯ ಬಲ್ಲಳು. ಹೆಣ್ಣಿಗೂ ಸಮಾಜದಲ್ಲಿ ಸಮಾನ ಹಕ್ಕಿದೆ. ಆಕೆಯ ಜೀವನ ಕೇವಲ ಮನೆಯ ಗೋಡೆಗಳ ನಡುವೆ ಮಾತ್ರ ಇರುವದಕ್ಕಲ್ಲ. ಕಲಿತಹೆಣ್ಣು ತನ್ನ ಸ್ಥಾನ ಗೌರವ ಕರ್ತವ್ಯಗಳನ್ನು ತಿಳಿಯದಷ್ಟು ತಿಳಿಗೇಡಿಯಲ್ಲ.

ತನಗೆ ಮೆಚ್ಚುಗೆಯಾದ ಗುಣಗಳಿರುವ ವ್ಯಕ್ತಿಯನ್ನು ಆರಿಸಿ ವಿವಾಹವಾದಾಗ ನಾವೇಕೆ ಕೈಹಿಸುಕುತ್ತಾ ಹಿಡಿ ಹಿಡಿ ಶಾಪಹಾಕಬೇಕು. ಅಂತರ್ಜಾತೀಯ ವಿವಾಹ ನಿಜವಾಗಿಯೂ ಜಾತಿಯತೆಯನ್ನು ಕಿತ್ತೊಗೆಯಲು ಒಂದು ಮೂಲಸಾಧನ. ಅಂತರ್ಜಾತೀಯ ವಿವಾಹ ಆಗುತ್ತಾ ಆಗುತ್ತಾ ಬರಬೇಕು. ಆಗ ಜಾತೀಯತೆಯ ಭೇದವು ಅಡಗಿ ಮಾನವನ ಶೀಲ, ಮನೋವೈಶಾಲ್ಯ ಮತ್ತು ಸೋದರತೆ ಬೆಳೆಯಲು ಎಡೆ ಉಂಟಾಗುವದು.

ವಿವಾಹವೆಂದರೇನು ? ಒಲ್ಲದ ಅರಿಯುದ ಹೆಣ್ಣುಗಂಡುಗಳನ್ನು ಹೇಗೋ ಒಪ್ಪಿಸಿ ಒಂದು ಗೂಡಿಸುವದೇ ? ಇದು ಜನರ ಅಭಿಪ್ರಾಯುವಾದರೆ ಈ ಕೆಲಸ ಕೇವಲ ಕಟುಕತನವೆನ್ನಬೇಕಾಗುವದು. ಮದುವೆ ಎಂದೊಡನೆ ನಡುಗುವ ಹೆಣ್ಣುಗಳಿದ್ದಾರೆ. ಏಕೆ ? ತನ್ನ ಮುಂದಿನ ಜೀವನ ಸುಖಮಯವೋ ಕಷ್ಟಮಯವೋ ಎಂಬ ಚಿಂತನೆಯ ನಡವೆ ಭಯ ಉಂಟಾಗುತ್ತದೆ. ಸಾಧಾರಣವಾಗಿ ಹೆತ್ತವರು ತಮ್ಮ ಮಕ್ಕಳಿಗಾಗಿ ಗಂಡನನ್ನಾರಿಸುವಾಗ ತಮ್ಮ ಮನೆ, ಮಠ, ಮಾರಿ, ಹೇರಳ ವರದಕ್ಷಿಣೆ ಕಟ್ಟಿ ಕೊನೆಗೆ ಅನೇಕ ಕಷ್ಟಕ್ಕೀಡಾಗುತ್ತಾರೆ. ಜಗತ್ತಿನಲ್ಲಿ ಹೀಗೆ ಮಾಡುವದು ಬಹಳ ಅನ್ಯಾಯವಾಗುವದು. ಇದರಿಂದ ಅನೇಕ ಅನಾಹುತವಾಗುವದು. ಇವಿಷ್ಟು ಅವಿವಾಹಿತರ ವಿವಾಹದ ಪ್ರಶ್ನೆಯಾಯಿತು. ಮದುವೆಯಾಗಿ ಕೆಲವೇ ತಿಂಗಳಲ್ಲಿ ತಮ್ಮ ಕುಂಕುಮದ ಭಾಗ್ಯವನ್ನು ಕಳೆದುಕೊಂಡವರ ಪಾಡೇನು ? ಅವರ ಮೇಲೆ ಸಮಾಜ ಕ್ರೂರವಾಗಿದೆ. ಅವಳ ಜೀವನಕ್ಕೆ ಬೇಕಾದ ವಸ್ತುಗಳಿಂದ ಸಮಾಜವು ಅವಳನ್ನು ದೂರವಿಡುತ್ತದೆ. ಆಕೆ ಯಾರೊಡನೆಯೂ ಮಾತಾಡಬಾರದು, ಕಲೆಯಬಾರದು. ಬ್ರಾಹ್ಮಣರಂತೂ ಆಕೆಯ ತಲೆಯ ಕೂದಲು ತೆಗೆದು ವಿಕಾರರೂಪ ಮಾಡುವರು. ಇದರಿಂದ ಆಕೆಯು ಮೂಲೆಗುಂಪಾಗಿ ಕೂಡ್ರಬೇಕಾಗುವದು. ಮರಕ್ಕೆ ಹಚ್ಚಡ ಕೊಚ್ಚಿದರೆ ಚಿಗುರೊಡೆಯುದೇನು? ಎಂಬಂತೆ ಒಂದಿಲ್ಲ ಒಂದು ದಿನ ಆಕೆಯ ಆಶಯುಗಳು ಹಿಡಿ ತಪ್ಪುವವು ಆಕೆ ಯಾರೊಡನೆ ಯಾದರೂ ಓಡಿ ಹೋಗುವಳು ಸಮಾಜ ಅವಳನ್ನು ದೂರುತ್ತದೆ. ಆದರೆ ಅವಳ ಆ ಸ್ಥಿತಿಗೆ ಸಮಾಜವೇ ಕಾಣವೆಂದು ಯಾರು ಹೇಳಬೇಕು.

ಹೌದು ವಿಧವಾ ವಿವಾಹ ಆಗಲೇ ಬೇಕು. ಗಂಡಸು ತನ್ನ ಪತ್ನಿಯನ್ನು ಕಳೆದು ಕೊಂಡರೆ ಮತ್ತೊಮ್ಮೆ ವಿವಾಹವಾಗುವಂತೆ ಆಕೆಗೂ ಸಮಾನ ಹಕ್ಕನ್ನು ಸಮಾಜ ಏಕೆ ಕೊಡುವದಿಲ್ಲ ? ಗಂಡು ಮಾಡವದೆಲ್ಲಾ ಸರಿ ಹೆಣ್ಣು ಮಾಡುವದೆಲ್ಲಾ ತಪ್ಪೆ ? ಆಕೆಗೂ ಆಶೆ ಇರವದಿಲ್ಲವೆ ? ತನ್ನ ಮುಂದಿನ ಬಾಳು ಸರಿಗೂಡಬೇಕೆಂದು. ಹಾಗಿದ್ದರೆ ಆಕೆಗೆ ಮತ್ತೊಮ್ಮೆ ವಿವಾಹವಾಗಲು ಸಮಾಜ ಒಪ್ಪುವದಿಲ್ಲವೆ ? ಅವಳ ಜೀವನವನ್ನು ಉತ್ಸಾಹ ಮಾಡಲೇ ಬೇಕು.

ನಮ್ಮ ದೇಶದ ಪ್ರಗತಿ ಇನ್ನೊಂದು ಹೆಜ್ಜೆಯನ್ನು ಇಡಬೇಕಾದರೆ ಜಾತೀಯತೆಯ ನಿರ್ಮೂಲ, ಹೆಣ್ಣಿನ ವಿದ್ಯಾಭ್ಯಾಸ, ಮತ್ತು ವಿಧವಾ ವಿವಾಹ ಜಾರಿಗೆ ತರಬೇಕಾದುದು ಅಗತ್ಯ. ಇವುಗಳು ಜನರ ಕೈಯಲ್ಲಿದೆ. ಪ್ರಜಾಪ್ರಭುತ್ವವಿರುವ ನಮ್ಮ ದೇಶದಲ್ಲಿ ನಾವು ಮನಸ್ಸು ಮಾಡಿದರೆ ಏನು ತಾನೇ ಮಾಡಲು ಅಗದಿರುವದು. ಪ್ರಯತ್ನ ಮಾಡಲೇಬೇಕು. ಪ್ರಯತ್ನದಂತೆ ಫಲದೊರೆಯುವದು.

---



# ಕಲಿತ ಹೆಣ್ಣು ದೇಶದ ಕಣ್ಣು !



ಲೇ :ಸೀತಾಂಬರ ವಾಸುದೇವ ನಾಯ್ಕ ಕೋನಳ್ಳಿ

ವಿಠೋಬ—ಏನ್ರಿ ರಾಮಣ್ಣನವರೆ! ಎತ್ತ ಕಡೆಗೆ ಹೋಗುತ್ತೀರಿ ?

ರಾಮಣ್ಣ—ನಿಮ್ಮತ್ತ ಕಡೆಗೇ ಹೋಗಬೇಕೆಂದು ಬಂದಿದ್ದೇನೆ !

ವಿಠೋಬ— ನೀವು ಬಂದ ಕೂಡ್ಲೆ ಏನಾದರೂ, ಇರುತ್ತೆ ಏನss ಬಿಸಿ, ಬಿಸಿ ಸುದ್ದಿ !

ರಾಮಣ್ಣ— ನಾನು ಬಂದ ಕೂಡಲೇ ಗೊತ್ತಾಗುತ್ತೆ ? ಒಳ್ಳೇದು ಕಲಿತಹೆಣ್ಣು ದೇಶದಕಣ್ಣು ಅಲ್ಲವೇ ?

ವಿಠೋಬ— ಮಹಾರಾಯ ತಂಪು ಹೊತ್ತಿನಾಗ ಒಳ್ಳೆ ಸುದ್ದಿ ತಂದೆ! ಇಷ್ಟೊಂದಿದ್ದರೆ ಸಾಕು !

ರಾಮಣ್ಣ— ಅಂದರೆ ಇಂದಿನ ಹೆಣ್ಣುಮಕ್ಕಳಿಗೆ ವಿದ್ಯೆಯೇ ಬೇಡ ಎಂತಾ ನಿನ್ನ ಅಭಿಮತವೆ ?

ವಿಠೋಬ— ಹೌದು ! ಹೌದು !! ಇನ್ನೊಂದು ಸಾರೆ ಅಂತೆ ಉಚ್ಚರಿಸು. ಅಂದರೆ ಸಂತೋಷ !

ರಾಮಣ್ಣ — ಎಂಥ ಮೂರ್ಖ ಶಿರೋಮಣಿ ನೀನು ! ಹೆಣ್ಣು ಮಕ್ಕಳುಕಲಿಯುವಂತೆ ಅವರಿಗೆ ಪ್ರೋತ್ಸಾಹ ಕೊಡಬೇಕು.

ವಿಠೋಬ— ಹೆಣ್ಣು ಮಕ್ಕಳು ಕಲಿತರೆ ನಾವೆಲ್ಲಿ ಮಣ್ಣು ಪಾಲು. ಅಂದರೆ ನಿನಗೆ ಸಂತೋಷ ಅಲ್ಲವೇ ?

ರಾಮಣ್ಣ— ಇದು ನಿನ್ನ ಮಂಕುತನ. ಏತಕ್ಕೆ ಅವರು ಕಲಿಯುವದು ಬೇಡ ಎಂತಾ ಹೇಳುವೆ ?

ವಿಠೋಬ— ನೋಡು ಈಗಿನ ಕಲಿಯುವ ಹೆಣ್ಣು ಮಕ್ಕಳು ಮೋರೆಗೆ ಸುಣ್ಣವನ್ನು ಹಚ್ಚಿಕೊಳ್ಳುತ್ತಾರೆ. ಮತ್ತು ಸುಗಂಧದ ಎಣ್ಣೆ ಇವು ಈಗಿನವರ ಜೀವನದ ಮುಖ್ಯ ಗುರಿಯಾಗಿದೆ ! ನಿನ್ನ ಹೇಳಿಕೆಗೆ ಸಪ್ಪು ಹಾಕಿದರೆ, ಇಂದು ನಾವು ಬಡತನವನ್ನು ಗಂಟಿಕ್ಕಿಕೊಳ್ಳಲು ಮೂಲಮಂತ್ರ.

ರಾಮಣ್ಣ— ಅದೆಲ್ಲವೂ ನಮ್ಮ ಕೈಯಲ್ಲಿದೆ. ನಮ್ಮ ನಮ್ಮ ಯೋಗ್ಯತೆಯ ಮೇರೆಗೆ ಅವಲಂಬಿಸಿ ಇದೆ.

ವಿಠೋಬ— ಇದಕ್ಕೇ. ಹೆಣ್ಣುಮಕ್ಕಳು ಕಲಿತರೆ ನಾವೆಲ್ಲ ಕಣ್ಣು ಕಾಣದವರ ಹಾಗೆ ಮೂಲೆಗೆಸೇರಬೇಕು ?

ರಾಮಣ್ಣ— ಇದು ನಿನ್ನ ಹುಚ್ಚು ಕಲ್ಪನೆ ! ಹೆಣ್ಣು ಮಕ್ಕಳು ಕಲಿತರೆ ಗಂಡು ಮಕ್ಕಳು ಕಲಿಯುವದಿಲ್ಲ ಎಂತಾ ನಿನ್ನ ಅಭಿಪ್ರಾಯವೇ ? ಗಂಡುಮಕ್ಕಳು ಕಲಿಯುವ ಸಂಖ್ಯೆ ಹೆಚ್ಚಾಗಿದೆ. ಆದರೆ ಹೆಣ್ಣುಮಕ್ಕಳ ಕಲಿಯುವ ಸಂಖ್ಯೆ ವಿರಳ! ಆದಕ್ಕಾಗಿ ಮಹಿಳಾ ಸಂಘ ತೆರೆಯಬೇಕೆಂದು ನಿನ್ನ ಸಲಹೆ ಕೇಳುವದು.

ವಿಠೋಬ— ಹೆಣ್ಣುಮಕ್ಕಳು ಕಲಿತು ನಮಗೆ ಯಾವ ಸಾಂಬ್ರಾಜ್ಯ ಮಾಡಿ ಕೊಡುತ್ತಾರೆ ? ಅದನ್ನಾದರೂ ತಿಳಿಸು.

ರಾಮಣ್ಣ— ದೇಶವು ಕಣ್ಣು ತೆರೆದು, ಎಲ್ಲರೂ ಸಾಕ್ಷರರಾಗಬೇಕಾದರೆ ಮೊದಲಿಗೆ ಹೆಣ್ಣು ಮಕ್ಕಳಿಗೆ ವಿದ್ಯೆಬೇಕು. ಜನನಿ ಮೊದಲು ಪಾಠಶಾಲೆ ಅಲ್ಲವೇ ? ಜನಿಸಿದ ಮಕ್ಕಳಿಗೆ ಪಾಠ ಹಾಕಿ ಕೊಡಲು ಜನನಿಯೇ ಮೊದಲ ಗುರುವು ! ನಮ್ಮ ದೇಶದ ಜನರು ಸಾಕ್ಷರರಾಗಬೇಕಾದರೆ ಹೆಣ್ಣು ಮಕ್ಕಳಿಗೆ ಮೊದಲಿಗೆ ವಿದ್ಯೆ ಬೇಕು ! ಆದ್ದರಿಂದ ಮಹಿಳಾ ಸಂಘ ತೆರೆಯುವದು ಅವಶ್ಯ !

ವಿಠೋಬ— ಕೈ ಬೆರಳು ಎಣಿಸಿದರೆ ಕೈ ಬೆರಳು ಸಹ ಹೆಚ್ಚು ಉಳಿಯವಷ್ಟು ಸ್ತ್ರೀಜನಾಂಗ ಕಲಿತಸುದ್ದಿ ಹೇಳಿದೆ ಎಲ್ಲ!

ರಾಮಣ್ಣ — ಮುತ್ತಿನ ರಾಶಿಯಲ್ಲ ಭತ್ತ ಬಿದ್ದರೆ; ಅದು ಭತ್ತದ ರಾಶಿ ಯಾಗಲಾರದು! ಅದು ಮುತ್ತಿನ ರಾಶಿಯೆ! ಪೂರ್ಣ ಮುತ್ತಿನ ರಾಶಿ ಮಾಡುವದು ನಮ್ಮ ಕೈಯಲ್ಲಿದೆ.

ವಿಠೋಬ— ಮಹಿಳಾ ಸಂಘ ತೆರೆದು ಅಲ್ಲಿ ಕಲಿಸುವ ಏರ್ಪಾಡು ಮಾಡಬೇಕು . ಎಂತಾ ಹೇಳುತ್ತಿರುವೆ. ಇದಕ್ಕೆ ನಾನು ವಿರೋಧಿ.

ರಾಮಣ್ಣ— ಮಾತೆಯು ವೀರಳಾದರೆ ಪುತ್ರನೂ ವೀರನಾಗುತ್ತಾನೆ. ಮಾತೆ ವೀರಳಾದ್ದರಿಂದ: ಅಭಿಮನ್ಯುವು ವೀರನಾದನು. ನಮಗೆಲ್ಲರಿಗೂ ಗಣ್ಯಳೆಂದರೆ ಮಾತೆ! ಅದರಿಂದ ಮಹಿಳಾ ಸಂಘದಿಂದ ಪ್ರಯೋಜನವಾಗುವಂತೆ ಅದನ್ನು ನೆರವೇರಿಸುವಂತೆ ಮಾಡೋಣ !

ವಿಠೋಬ— ಆ........ಗ........ಬ........ಹು........ದು!

ರಾಮಣ್ಣ— ಏನು ? ಇನ್ನೂ ಸಂಶಯವೇ ?

ವಿಠೋಬ— ಇಲ್ಲ ! ಈಗ ನೀನೇ ಸಂಶಯವೆಲ್ಲ ಹೊಡೆದೋಡಿಸಿದೆ.

ರಾಮಣ್ಣ—'ಮಾತೆ' ಎಂಬ ಶಬ್ದದಲ್ಲಿ ಅಪೂರ್ಣರಹಸ್ಯ ಅಡಗಿದೆ. ವನಿತೆಯರೆಲ್ಲರೂ ನಮ್ಮ ಮಾತೆಯರೇ, ಹಾಗಾದರೆ ವನಿತಾ ಸೇವಾ ಸಮಾಜ ಸಂಘಕ್ಕೆ ಜಯವಾಗಲಿ ಎಂತಾ ಹಾಡು ನೋಡೋಣ.

ವಿಠೋಬ— ವನಿತಾ ಸೇವಾ ಸಮಾಜ ಸಂಘಕ್ಕೆ ಜಯವಾಗಲಿ.

ರಾಮಣ್ಣ— ಈಗ ನಿನಗೆ ಬುದ್ಧಿ ಹೊಳೆಯಿತು. ಅದಕ್ಕಾಗಿ ಸಂತೋಷ.

ವಿಠೋಬ - ಹೆಣ್ಣುಮಕ್ಕಳಿಗೆ ವಿದ್ಯೆ ಕಲಿಸುವದು ಯೋಗ್ಯವೆಂತಾ ಈಗಭಾಸವಾಯಿತು. ಇದಕ್ಕಾಗಿ ನಾನು ತನು, ಮನ, ಧನಗಳಿಂದ ಸಹಾಯಮಾಡುವೆನು. ಇನ್ನು ಇದರಂತೆ ನಮ್ಮ ನೆರಮನೆಯ ಅಗಸೆ ಅಜ್ಜನಿಗೆ ತಿಳಿಸಿ ಅವನನ್ನು ಈ ಕಾರ್ಯಕ್ಕೆ ಸಹಾಯಕ್ಕಾಗಿ ತಕ್ಕೊಳ್ಳುವೆನು.

ರಾಮಣ್ಣ—ಹಾಗಾದರೆ ಹೋಗೋಣ.

ಜೈ ವನಿತಾ ಸೇವಾ ಸಮಾಜ ಸಂಘಕ್ಕೆ

## ಸೂಚನೆ

ಲೇಖನಗಳು, ಅಸ್ಪಷ್ಟ ರೀತಿಯಲ್ಲಿ ಬರೆದವು ಬರುತ್ತಿದ್ದು, ಮುದ್ರಣ ಕಾರ್ಯಕ್ಕೆ ತುಂಬಾ ತೊಂದರೆಯಾಗುತ್ತದೆ. ಲೇಖಕರು ಸುಸ್ಪಷ್ಟ ರೀತಿಯಲ್ಲಿ ಬರೆದ ಲೇಖಗಳನ್ನು ಸಂಪಾದಕರ ವಿಳಾಸಕ್ಕೆ ಕಳುಹಿಸಬೇಕು.

* ಇನ್ನೂ ವರೆಗೂ ಚಂದಾ ಹಣವನ್ನು ಕಳಿಸದ ಚಂದಾ ದಾರರು ಅದಷ್ಟು ಕೂಡಲೆ ಕಾರ್ಯದರ್ಶಿ 'ವೀರಮಾತೆ' ವನಿತಾ ಸೇವಾ ಸಮಾಜ, ಧಾರವಾಡ. ಈ ವಿಳಾಸಕ್ಕೆ ಚಂದಾಹಣವನ್ನು ಕಳುಹಿಸಿಕೊಡಬೇಕು.

* ಚಂದಾದಾರರು, ತಮ್ಮ ವಿಳಾಸ ಬದಲಾದಲ್ಲಿ, ಹಾಗೆ ತಿಳಿಸಿದರೆ, 'ವೀರಮಾತೆ' ಯು ತ್ವರಿತವಾಗಿ ಮುಟ್ಟು ವಂತೆ ದಕ್ಷತೆ ವಹಿಸಲಾಗುವದು.

* ಲೇಖಕರು ಅಥವಾ ವಾಚಕರು, ಲೇಖ ಕಳಿಸುವದಾಗಲಿ ಉಳಿದ ಯಾವದೇ ಪತ್ರವ್ಯವಹಾರ ಮಾಡುವಾಗ ತಮ್ಮ ವಿಳಾಸವನ್ನು ಸ್ಪಷ್ಟ ರೀತಿಯಲ್ಲಿ ಬರೆದು ತಿಳಿಸಲು ಮರೆಯಬಾರದು.

* ಹೊಸದಾಗಿ ಚಂದಾದಾರರಾಗಬಯಸುವವರು, ಚಂದಾ ಹಣವನ್ನು ಮೊದಲು ಕೊಟ್ಟು, ಕಳಿಸಿದರೆ, ಮಾಸಿಕವನ್ನು ಅವರ ವಿಳಾಸಕ್ಕೆ ಕಳಿಸುವತ್ತ ಗಮನಿಸಲಾಗುವದು.

* ಸೋದರ, ಸೋದರಿಯರು, ಅಕ್ಕನಟ್ಟಿಗೆಯ ವಿಭಾಗ ದಲ್ಲಿ ಬರುವ ಸ್ಪರ್ಧೆಗಳಿಗೆ ಉತ್ತರಗಳನ್ನು ಪ್ರತಿತಿಂಗಳ ೧೦ ನೇ ತಾರೀಖಿನ ಒಳಗಾಗಿ ಕಳುಹಿಸಬೇಕು.

* * * * * *

---

ಮುದ್ರಕರು : ಶ್ರೀಯುತ ಕುಲಕರ್ಣಿ ರಾಮರಾಯರು
ಸ್ಥಳ : ವನಿತಾ ಪ್ರಿಂಟಿಂಗ ಪ್ರೆಸ್, ಧಾರವಾಡ
ಪ್ರಕಾಶಕರು : ಶ್ರೀ. ಲ. ರಂ. ಪುರಾಣಿಕ
ಸ್ಥಳ : ವನಿತಾ ಸೇವಾ ಸಮಾಜದಲ್ಲಿಯ ಕಾರ್ಯಾಲಯ, ಧಾರವಾಡ

ವನಿತಾ ಸೇವಾ ಸಮಾಜದ

# ವನಿತಾ ವಿದ್ಯಾ ಸಂಸ್ಥೆಗಳು

ಧಾರವಾಡ




## ವಾರ್ಷಿಕ ಸಂಚಿಕೆ

ಸಂಪುಟ ೪] ೧೯೬೦ ಫೆಬ್ರುವರಿ [ ಸಂಚಿಕೆ ೯

---

ರಜಿಸ್ಟ್ರೇಶನ್ ಆಫ್ ನ್ಯೂಜ ಪೇಪರ್ಸ (ಸೆಂಟ್ರಲ್) ರೂಲ್ಸ ೧೯೫೬ರ ೮ನೇ ನಿಯಮಕ್ಕೆ ಸಂಬಂಧಿಸಿದಂತೆ "ವೀರಮಾತೆ" ಮಾಸಪತ್ರಿಕೆಯ ಸ್ವಾಮಿತ್ವ ಮತ್ತು ಇತರ ವಿಷಯಗಳ ಬಾಬತ ವಿವರ:—

| | |
|---|---|
| ೧. ಪ್ರಕಾಶನ ಸ್ಥಳ— | ವನಿತಾ ಸೇವಾ ಸಮಾಜ ಧಾರವಾಡ. |
| ೨. ನಿಯಮಿತ ಕಾಲಿಕತೆ— | ಮಾಸಪತ್ರಿಕೆ |
| ೩. ಮುದ್ರಕರ ಹೆಸರು— | ರಾಮರಾವ ಕುಲಕರ್ಣಿ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವೀರಮಾತೆ ಕಾರ್ಯಾಲಯ ಧಾರವಾಡ |
| ೪. ಪ್ರಕಾಶಕರ ಹೆಸರು— | ಲ. ರಂ. ಪುರಾಣೀಕ |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ವನಿತಾ ಸೇವಾ ಸಮಾಜ ಧಾರವಾಡ |
| ೫. ಸಂಪಾದಕರ ಹೆಸರು— | ಸರೋಜನಿ ಮಹಿಷಿ ಎಮ್. ಎ. ಎಲ್ ಎಲ್. ಬಿ. |
| ರಾಷ್ಟ್ರೀಯತೆ— | ಭಾರತೀಯ |
| ವಿಳಾಸ— | ಲೈನಬಝಾರ ಧಾರವಾಡ |
| ೬. ಪತ್ರಿಕಾ ಸ್ವಾಮಿತ್ವ ವಿಳಾಸ— | ಕಾರ್ಯಕಾರಿ ಮಂಡಳ |
| ಮತ್ತು ಬಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ— | ವನಿತಾ ಸೇವಾ ಸಮಾಜ ಧಾರವಾಡ |

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣೀಕನಾದ ನಾನು ಮೇಲಿನ ವಿವರಗಳಲ್ಲಿಯ ಎಲ್ಲ ವಿಷಯಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣೀಕ.

# ಪರಿವಿಡಿ

# ನಮ್ಮ ಮಾತು

"ವೀರಮಾತೆ"ಗೆ ಲೇಖನಗಳನ್ನು ಕಳಿಸುತ್ತಿರುವ ಲೇಖಕರು ತಮ್ಮ ಲೇಖನಗಳು ಪ್ರಕಟವಾಗದ ಬಗೆಗೆ, ತಡವಾದ ಬಗೆಗೆ, ಕಾರಣವು ತಿಳಿಯಬೇಕಾದಲ್ಲಿ 15 n. p. ತಿಕೀಟುಗಳನ್ನು ಲೇಖನದ ಜೊತೆಗಾಗಲಿ ಕೇಳಿದ ಸಮಯದಲ್ಲಿಯಾಗಲಿ ಕಳಿಸಬೇಕಾಗಿ ವಿನಂತಿ.

"ವೀರಮಾತೆ"ಯ ಹೊಸ ವರುಷಾರಂಭವು ಜೂನಕ್ಕೆ ಇರುವದರಿಂದ ೧೯೬೦ನೇ ಜೂನದ ವರೆಗೆ (ಮೇ ಪೂರ್ಣ) ಎಲ್ಲ ಚಂದಾರರ ಚಂದಾ ಹಣದ ಬಾಕಿಯನ್ನು ಲೆಖ್ಖಮಾಡಿ ಪ್ರತ್ಯೇಕ ಕಾರ್ಡಿನಲ್ಲಿ ಮೇ ತಿಂಗಳ ಕೊನೆಯಲ್ಲಿ ತಿಳಿಸಲಾಗುವದು. ಆ ಬಗೆಗೆ ಅಥವಾ ಪತ್ರಿಕೆಯ ಯಾವದೇ ಬಗೆಗೆ ಪತ್ರವ್ಯವಹಾರ ಮಾಡುವ ಅವಶ್ಯವಿದ್ದಾಗ ಚಂದಾದಾರರು ತಮ್ಮ ಸಂಚಿಕೆಯ ಮೇಲೆ ಹಾಕಿದ ನಂಬರನ್ನು ಮರೆಯದೆ ಹಾಕಬೇಕಾಗಿ ಬಿನ್ನಹ.

*  *  *  *  *

## ಸಮಾಜಕ್ಕೆ ಮಹನೀಯರ ಸಂದರ್ಶನ

ದಿನಾಂಕ : ೧೬-೧೧-೫೯ ರಂದು ಟಿ. ವ್ಹಿ. ರಾಚಪ್ಪ ನಿವೃತ್ತ ಹೆಡ್ ಮಾಸ್ತರ ಗವ್ಹರ್ನಮೆಂಟ ಹೈಸ್ಕೂಲ ತಿಪಟೂರ ಇವರು ಸಮಾಜಕ್ಕೆ ಬಂದು ಎಲ್ಲ ಚಟುವಟಿಕೆಗಳನ್ನು ನಿರೀಕ್ಷಿಸಿ ಆನಂದ ಭರಿತರಾಗಿ ಉತ್ತರೋತ್ತರ ಅಭಿವೃದ್ಧಿಯಾಗಲೆಂದು ಹರಿಸಿ ಪ್ರೋತ್ಸಾಹಿಸಿದರು.

*  *  *  *  *

ದಿನಾಂಕ : ೧೮-೧೨-೫೯ ರಂದು ಸೌ॥ ಕುಸುಮಾವತೀ ತಾಯಿ ದೇಶಪಾಂಡೆ ರೇಡಿಯೋ ಆಫೀಸರ ದಿಲ್ಲಿ ಇವರು ಬಂದು ಸಮಾಜದ ಎಲ್ಲ ವಿಭಾಗಗಳನ್ನೂ ಚಿಕ್ಕ ಬಾಲಿಕೆಯರ ಶೈಕ್ಷಣಿಕ ಲವಲವಿಕೆಯನ್ನೂ ನೋಡಿ ತುಂಬಾ ಹರುಷಿತರಾದರು.

*  *  *  *  *

ದಿನಾಂಕ : ೨೦-೧೨-೫೯ ರಂದು ವ್ಹಾಯಿಲೆಟಾ ಅಳ್ವಾ ಡೆಪ್ಯೂಟಿ ಮಿನಿಷ್ಟರ ಹೋಮ ಡಿಪಾರ್ಟಮೆಂಟ ದಿಲ್ಲಿ ಇವರು ಬಂದು ಸಮಾಜದ ಎಲ್ಲ ವ್ಯವಸ್ಥೆಯನ್ನು ದಿನದಿನಕ್ಕೆ ಮುಂದುವರಿಯುತ್ತಿರು ವಿವಿಧ ವಿದ್ಯಗಳ ಚಟುವಟಿಕೆಗಳನ್ನು ನೋಡಿ ಆಶ್ಚರ್ಯಚಕಿತರಾಗಿ ಅಲ್ಪ ಖರ್ಚಿನಲ್ಲಿ ವಿಪುಲ ಕಲೆಗಳು ಹಾಗೂ ವಿದ್ಯೆಗಳು ಸುಸಂಸ್ಕೃತವಾಗಿ ದೊರೆಯುವ ಇಂಥ ಸಂಸ್ಥೆಗಳು ವಿರಳವೆಂದು ಆನಂದದಿಂದ ಉದ್ಗಾರವನ್ನು ತೆಗೆದರು. ಹಾಗೂ ಅಭಿವೃದ್ಧಿಯಾಗಲೆಂದು ಹರಿಸಿದರು.

*  *  *  *  *

ದಿನಾಂಕ : ೧೮-೧-೬೦ ರಂದು ಡಾ. ಫ. ಗು. ಹಳಕಟ್ಟಿ ಡಿಲಿಟ್ ವಿಜಾಪೂರ ಇವರು ಬಂದು ಸಮಾಜವನ್ನು ನಿರೀಕ್ಷಿಸಿ ಅಪ್ರತ್ಯಕ್ಷವಾಗಿ ಕೇಳುತ್ತಿದ್ದ ನಿಮ್ಮ ಸಮಾಜದ ವಿದ್ಯಾ ವೈಶಿಷ್ಟ್ಯವನ್ನು ಸಾಂಸ್ಕೃತಿಕ ಚಟುವಟಿಕೆಗಳನ್ನು ಇಂದು ಪ್ರತ್ಯಕ್ಷ ನೋಡಿ ಆನಂದವಾಯಿತು. ವಿಪುಲವಾದ ಅಡೆತಡೆಗಳನ್ನು ಎದುರಿಸಿ ಊರ್ಜಿತ ಸ್ಥಿತಿಗೆ ತಂದ ಶ್ರೀ. ಭಾಗೀರಥಿಬಾಯಿ ಪುರಾಣೀಕ ಹಾಗೂ ದಾದಾ ಇವರ ಪರಿಶ್ರಮವು ಸಾರ್ಥಕವಾಯಿತೆಂದು ಹರುಷೋದ್ಗಾರವನ್ನು ತೆಗದರು.



ಶ್ರೀಮಾನ್ ಡಿ. ಎಲ್. ಪಾಟೀಲ

ಅಧ್ಯಕ್ಷರು

ಕಾರ್ಯಕಾರಿ ಮಂಡಲ ವ. ಸೇ. ಸ. ಧಾ.



ಮಮತಾಮಯಿ ಮಾ. ಮಾಯಿ

ಸಂಸ್ಥಾಪಿಕೆ ವ. ಸೇ. ಸ. ಧಾ.



ಎಲ್ಲರ ಅಣ್ಣಾ ಶೀ. ನಾದಾ

ಸಂಚಾಲಕರು ವ. ಸೇ. ಸ. ಧಾ.



೧೯೬೦ ಜನೇವರಿಯಲ್ಲಿ ವನಿತಾ ವಿದ್ಯಾ ಸಂಸ್ಥೆಗಳ
ಸಂಯುಕ್ತ ಸ್ನೇಹ ಸಮ್ಮೇಲನದ ಅಂಗವಾಗಿ ಜರುಗಿದ ಪಂದ್ಯಾಟಗಳಲ್ಲಿ
ಹಗ್ಗದ ಓಟಕ್ಕಾಗಿ ತಯಾರಾಗಿನಿಂತ ವಿದ್ಯಾರ್ಥಿನಿಯರು.



೧೯೬೦ನೇ ಜನೇವರಿ ೨೬ರಂದು
ವನಿತಾ ವಿದ್ಯಾ ಸಂಸ್ಥೆಗಳ ಪರವಾಗಿ ಹೊರಟ
೩ನೇ. ನಂ. ಬಹುಮಾನ ಪಡೆದ 'ಕಲ್ಯಾಣ ಖಜಾನೆ' ರೂಪಕವು
ವಾಹನದಲ್ಲಿ ಹೊರಡಲು ತಯಾರಾಗಿ ನಿಂತಾಗ



೧೯೬೦ನೇ ೨೬ ಜಾನೇವರಿಯಂದು ವನಿತಾ ವಿದ್ಯಾ ಸಂಸ್ಥೆಗಳ
ಪರವಾಗಿ ಹೊರಟ ೩ನೇ ನಂಬರ್ ಬಹುಮಾನ ಪಡೆದ
'ಕಲ್ಯಾಣ ಖಜಾನ' ರೂಪಕವಾಹನವು, ಕಲೆಕ್ಟರ್
ಕಾಂಪೌಂಡಿಗೆ ಹೊರಡಲು ತಯಾರಾಗಿ ನಿಂತ ದೃಶ್ಯ.

# ವೀರಮಾತೆ



ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಾದ
ಕನ್ನಡ ಮಾಸಪತ್ರಿಕೆ

ಸಂಪುಟ ೮ | ಫೆಬ್ರುವರಿ ೧೯೬೦ | ಸಂಚಿಕೆ ೯

## ಸಂಪಾದಕೀಯ

ಶಾಲೆ–ಕಾಲೇಜುಗಳು ವಿದ್ಯಾಸಂಸ್ಥೆಗಳು ಹೆಚ್ಚುಸಂಖ್ಯೆಯಲ್ಲಿವೆಯೆಂಬುದು ಮೇಲಿನ ನೋಟಕ್ಕೆ ಕಂಡುಬಂದರೂ, ಆಳವಾಗಿ ಇಣಿಕಿ ನೋಡಿದಲ್ಲಿ, ನಿರಕ್ಷರಿಗಳ ಸಂಖ್ಯೆ ತುಂಬ ಹೆಚ್ಚಾಗಿದ್ದದ್ದು ಕಂಡು ಬರುತ್ತದೆ. ನೂರಕ್ಕೆ ಒಬ್ಬಿಬ್ಬರು ಮಹಿಳೆಯರು ಮಾತ್ರ ಸಾಕ್ಷರರಿದ್ದ ಪ್ರಾಂತಗಳೂ ಇವೆ. ಬಹಳ ಜನಸಾಕ್ಷರರಿದ್ದಾರೆ ಎಂದು ತಿಳಿದರೂ, ಅದು ನೂರಕ್ಕೆ ೧೦ ನ್ನು ಮೀರಲಿಲ್ಲ. ಸುಶಿಕ್ಷಿತೆಯರು ಉದ್ಯೋಗವಿಲ್ಲದೆ ಇದ್ದಾರೆ ಎಂದು ಒಂದೆಡೆ ಕಂಡು ಬಂದರೆ ದುಡಿಯುವ ಮಹಿಳೆಯರ ಕೊರತೆ ಬಹಳವಿದೆಯೆಂದು ಇನ್ನೊಂದೆಡೆ ಕಂಡು ಬರುತ್ತಿದೆ. ಮಹಿಳೆ ಎಚ್ಚೆತ್ತು ತನ್ನ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸಬೇಕಾದರೆ, ಜನಸಾಮಾನ್ಯರ ವರೆಗೂ ಶಿಕ್ಷಣದ ಸೌಕರ್ಯವು ಮುಟ್ಟುವದು ಅವಶ್ಯ. ಎಳೆಯರಲ್ಲಿ ಶಿಕ್ಷಣದ ಬಗ್ಗೆ ಲವಲವಿಕೆ ಮೂಡಿದರೆ ಬಾಲಕರು, ಬಾಲಕಿಯರು ಶಿಕ್ಷಣ ಪಡೆದು ಒಳ್ಳೆಯ ನಾಗರಿಕರಾಗುವದರಲ್ಲಿ ಸಂಶಯವೆನಿಸಲಾರದು. ಪಟ್ಟಣದ ಮಹಿಳೆ ಓದಿಕೊಂಡವಳು, ಹಳ್ಳಿಗಳಲ್ಲಿ ನೆಲೆಸಲು ಇಷ್ಟಪಡುವದಿಲ್ಲ. ಅದಕ್ಕಾಗಿ ಹಳ್ಳಿಗಳಲ್ಲಿ ವಾಸಿಸುವ ಮಹಿಳೆಯರಲ್ಲಿಯೇ ಜಾಗೃತಿಯುಂಟಾಗುವಂತೆ, ಶಿಕ್ಷಣ ವ್ಯಾಪ್ತಿ ಹರಡಬೇಕಾಗಿದೆ.

ವನಿತಾ ವಿದ್ಯಾಸಂಸ್ಥೆಗಳಿಂದ ಹೊರಬರುವ ಮಹಿಳೆಯರು ಈ ಮಹತ್ಕಾರ್ಯವನ್ನು ಕೈಕೊಂಡು ನೆರವೇರಿಸುವರೆಂದು ಬಲವಾದ ನಂಬಿಕೆಯಿದೆ. ಅವರಲ್ಲಿ ಹುದುಗಿದ ವಿವಿಧ ಕಲೆಗಳ, ಕುರುಹಾಗಿ, ತಮ್ಮ ಮುಂದೆ ವನಿತಾ ವಿದ್ಯಾಸಂಸ್ಥೆಗಳ ಈ ವಿಶೇಷ ಸಂಚಿಕೆಯನ್ನಿಡಲು ಸಂತೋಷವಾಗುತ್ತದೆ.

— ಸಂ.

# ಸಂದೇಶ

We visited the Vanita Seva Samaj to day. It was a great satisfaction to us to find that excellent work was being done in the field of female education and the cultural upliftment of women. We were happy to note the quiet unassuming manner with which Srimati Bhagirathibai and Dr. Puranik were carrying out this great task. The institution richly deserves public support. We wish the institution all prosperity.

DHARWAR
31 January 1960

G. P. Chinnamma
G. S. Paramasivayya

ಇಂದು ನಾವು ವನಿತಾ ಸೇವಾ ಸಮಾಜಕ್ಕೆ ಸಂದರ್ಶನವನ್ನಿತ್ತೆವು. ಹೆಣ್ಣುಮಕ್ಕಳ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ವಿಕಾಸ ಕ್ಷೇತ್ರಗಳಲ್ಲಿ, ಇಲ್ಲಿ ನಡೆಯುತ್ತಿರುವ ಸರ್ವೋತ್ಕೃಷ್ಟ ಕಾರ್ಯವನ್ನು ಕಂಡು ನಮಗೆ ಬಹಳ ಸಮಾಧಾನವೆನಿಸಿತು. ಶ್ರೀಮತಿ ಭಾಗೀರಥಿಬಾಯಿ ಪುರಾಣೀಕ ಮತ್ತು ಡಾ. ಪುರಾಣೀಕ ಇವರು ನಿದಾನವಾಗಿ, ನಿರಾಡಂಬರವಾಗಿ ಈ ದೊಡ್ಡ ಹೊಣೆಯನ್ನು ಸಾಗಿಸಿಕೊಂಡು ಹೋಗುತ್ತಿರುವ ಈ ರೀತಿಯನ್ನು ನೋಡಿ ಬಹಳ ಆನಂದವೆನಿಸುತ್ತದೆ. ಈ ಸಂಸ್ಥೆಯು ಲೋಕಾಶ್ರಯಕ್ಕೆ ತುಂಬಾ ಪಾತ್ರವಾಗಿರುತ್ತದೆ. ಈ ಸಂಸ್ಥೆಗೆ ನಾನು ಸರ್ವೋತ್ಕರ್ಷವನ್ನು ಬಯಸುತ್ತೇನೆ.

ಧಾರವಾಡ
೩೧ ಜನವರಿ ೧೯೬೦

ಜಿ. ಪಿ. ಚಿನ್ನಮ್ಮ
ಜಿ. ಎಸ್. ಪರಮಶಿವಯ್ಯ

# ವನಿತಾ ಸೇವಾ ಸಮಾಜದ

# ವನಿತಾ ವಿದ್ಯಾ ಸಂಸ್ಥೆಗಳ ಸಂಯುಕ್ತ ಸ್ನೇಹ ಸಮ್ಮೇಲನ

ತಾ. ೩೧ರ ಮುಂಜಾನೆ ೭–೩೦ಗೆ ಸರಿಯಾಗಿ ಮುಖ್ಯ ಅಥಿತಿಗಳಾದ ಶ್ರೀ. ಜಿ. ಎಸ್. ಪರಮಶಿವಯ್ಯ, M. Sc. ಕರ್ನಾಟಕ ಸಾಯಿನ್ಸ ಕಾಲೇಜಿನ ಪ್ರಿನ್ಸಿಪಾಲ್ ಇವರೊಂದಿಗೆ ಸಮಾಜದ ವಿದ್ಯಾಸಂಸ್ಥೆಗಳ ಸಂಯುಕ್ತ ಫೋಟೋ ಕಾರ್ಯಕ್ರಮವು ಸಮಾಜದ ಕಾರ್ಯಕಾರೀ ಮಂಡಲದ ಸದಸ್ಯರೂ, ಮಕ್ಕಳ ಪಾಲಕರನ್ನೊಳಗೊಂಡು ಜರುಗಿತು.

೮–೩೦ ರಿಂದ ೯–೩೦ ರ ವರೆಗೆ ಧ್ವಜಾರೋಹಣ ಸಮಾರಂಭ, ಸಾಮೂಹಿಕ ಶಾರೀರಿಕ ಚಟುವಟಿಕೆಗಳಾಗಿ, ಅತಿಥಿಗಳಿಂದ ಪ್ರದರ್ಶನ ಉದ್ಘಾಟನ ಸಮಾರಂಭವು ಜರುಗಿ, ಸಂಸ್ಥೆಯ ನಿರೀಕ್ಷಣೆಯಾಯ್ತು. ಶ್ರೀಯುತರು ಪ್ರದರ್ಶನ ಉದ್ಘಾಟನ ಮಾಡುತ್ತ, ಈ ರೀತಿಯ ಪ್ರದರ್ಶನಗಳನ್ನೇರ್ಪಡಿಸುವದರಿಂದ ಕಲೆಗೆ ಪ್ರೋತ್ಸಾಹನ ಕೊಟ್ಟಂತಾಗುವದು. ಇಲ್ಲವಾದರೆ ಕಲೆಯು ತಮ್ಮಲ್ಲೇ ಕಮರಿಹೋಗುವ ಸಂಭವವಿದೆ. ಆದ್ದರಿಂದ ಕಲೆಗೆ ಪ್ರೋತ್ಸಾಹನವಿತ್ತು ಇಲ್ಲಿ ಈ ಕಾರ್ಯಕ್ರಮವನ್ನೇರ್ಪಡಿಸಿದ್ದು ಸ್ತುತ್ಯವಾದ ಕೆಲಸವೆಂದೂ ತಾವು ಸಂಸ್ಥೆಯ ಎಲ್ಲ ಕಾರ್ಯಕ್ರಮಗಳನ್ನು ನೋಡಿ ಆನಂದಿತರಾದೆವೆಂದೂ, ಇಲ್ಲಿ ಸಣ್ಣ ಸ್ಥಳದಲ್ಲೇ ಆಗಿರುವ ದೊಡ್ಡ ಕಾರ್ಯವು ಶ್ರೀಮತಿ ಭಾಗೀರಥಿಬಾಯಿ ಪುರಾಣೀಕ ಹಾಗೂ ಶ್ರೀ. ಲ. ರಂ. ಪುರಾಣೀಕ ಇವರ ಕಷ್ಟದ ಫಲವೆಂದೂ ಒತ್ತಿ ಹೇಳಿದರು. ಮುಂದೆ ಅಲ್ಪೋಪಹಾರ ವಿಶ್ರಾಂತಿ, ಊಟಗಳಾಗಿ ಮಧ್ಯಾನ್ಹ ೧–೩೦ ರಿಂದ ೨–೩೦ ವರೆಗೆ ಶಿಕ್ಷಕರ ಭೆಟ್ಟಿಯಾಗಿ ೩–೩೦ ರಿಂದ ೪–೩೦ ರ ವರೆಗೆ ಶಿಕ್ಷಕ ಶಿಕ್ಷಕಿಯರೊಂದಿಗೆ ಚರ್ಚಾಕೂಟವಾಯ್ತು.

ವಿಜ್ಞಾನದ ವಿಷಯವನ್ನು ಮ್ಯಾಟ್ರಿಕ್ಯ ವರೆಗೆ ಕನ್ನಡದಲ್ಲಿ ಕಲಿಸುತ್ತಿದ್ದು, ಒಮ್ಮೆಲೇ ಕಾಲೇಜಿನಲ್ಲಿ ಇಂಗ್ಲೀಷಿನಲ್ಲಿ ಆ ವಿಷಯವನ್ನು ಕಲಿಸುವ ಮೂಲಕ ವಿದ್ಯಾರ್ಥಿಗಳಿಗೆ ತೊಂದರೆಯಾಗುವದೆಂಬ ವಿಷಯವು ಚರ್ಚೆಗೆ ಬಂದಾಗ, ಶ್ರೀ. ಪರಮಶಿವಯ್ಯನವರು, ಕನ್ನಡದಲ್ಲಾಗಲೀ, ಅಥವಾ ಯಾವದೇ ಪ್ರಾದೇಶಿಕ ಭಾಷೆಗಳಲ್ಲಿಯಾಗಲಿ ಇಂಗ್ಲೀಷ ಶಬ್ದಕ್ಕೆ ಸರಿಯಾದ ಶಬ್ದವು ಇರದ ಮೂಲಕ ಈ ತೊಂದರೆಯಾಗುವದೆಂದೂ, ಆ ಶಬ್ದಗಳು ಸಿಗುವವರೆಗೂ, ಅದರ ಪ್ರಚಾರವಾಗುವವರೆಗೂ ಈ ತೊಂದರೆ ಯಾಗುವದೆಂದೂ, ತಾವು ಹಿಂದೆ ಪ್ರಾದೇಶಿಕ ಶಬ್ದಗಳನ್ನು ಉಪಯೋಗಿಸಿ ಪ್ರಶ್ನೆಪತ್ರಿಕೆ ತೆರೆದಾಗ ವಿದ್ಯಾರ್ಥಿಗಳಿಗೆ ತೊಂದರೆಯಾಯ್ತೆಂದೂ ಹೇಳಿದರು ಅದು ಪ್ರಚಾರವಾಗಲೆಂದು ಕುಳಿತರೆ ಅದು ಎಂದೂ ಪ್ರಚಾರವಾಗಲು ಸಾಧ್ಯವಿಲ್ಲ, ಅದಕ್ಕಾಗಿ ಪ್ರಶ್ನೆಗಳನ್ನು ಪ್ರಾದೇಶಿಕ ಭಾಷೆಗಳಲ್ಲೇ ತೆಗೆದು ಕೌಂಸಿನಲ್ಲಿ ಇಂಗ್ಲೀಷ ಶಬ್ದವನ್ನಿಟ್ಟರೆ ಅದು ವಿದ್ಯಾರ್ಥಿಗಳಿಗೆ ಕೂಡಲೆ ಅರ್ಥವಾಗಿ ಮುಂದೆ ಅದೇ ಪ್ರಚಾರವಾಗಲು ಒಂದು ಮಾರ್ಗವಾಗುವದೆಂಬ ಸಂಶಯವು ತಮಗೆಂಬ ವಿಚಾರವು ಸಭಿಕರಿಂದ ಬಂದಿತು. ಅದರಂತೆ ವಿದ್ಯಾರ್ಥಿಗಳಿಂದ ಅಶಿಸ್ತಿನ ಕೆಲಸವು ಜರುಗುತ್ತಿದೆಯೆಂಬ ಕೂಗು ದಿನದಿನಕ್ಕೆ ಹೆಚ್ಚಾಗುತ್ತಿದೆ. ಅದಕ್ಕೆ ಏನುಮಾಡಬೇಕೆಂಬ ಪ್ರಶ್ನೆ ಎದ್ದು, ಈ ಅಸಿಸ್ತಿಗೆ ಮೂಲ ಕಾರಣರು ನಾವು ಹಿರಿಯರೇ. ಮಕ್ಕಳಲ್ಲಿ ಅಸಿಸ್ತು ಇದೆಯೆಂದು ಒತ್ತಿಒತ್ತಿ ಹೇಳುವದರಿಂದಲೇ ಅವರಲ್ಲಿ ಅಸಿಸ್ತಿನಿಂದ ವರ್ತಿಸುವ ಪ್ರೇರಣೆಯಾಗುತ್ತದೆ, ಎಂದು ಹೇಳುತ್ತ ಸಭಿಕರ ಎಲ್ಲ ಪ್ರಶ್ನೆ ಸಂಶಯಗಳಿಗೂ ಮಾರ್ಮಿಕವಾಗಿ ಉತ್ತರ ಕೊಟ್ಟರು.

ಸಂಜೆ ೪–೩೦ಕ್ಕೆ ಸರಿಯಾಗಿ ಪಾಲಕರ, ಶಿಕ್ಷಕರ ವಿದ್ಯಾರ್ಥಿನಿಯರ ಸಾಮೂಹಿಕ ಸಭೆಯು ಜರುಗಿ, ಸ್ವಾಗತಪರ ಪದದೊಂದಿಗೆ ಕಾರ್ಯಕ್ರಮವು ಪ್ರಾರಂಭವಾಯ್ತು. ಅತಿಥಿಗಳ ಪರಿಚಯ, ಸಮಾಜದ ವರದಿ, ವಿದ್ಯಾಸಂಸ್ಥೆಗಳ ವರದಿವಾಚನಗಳ ನಂತರ, ಶ್ರೀಮತಿ ಪರಮಶಿವಯ್ಯನವರಿಂದ ಪಾರಿತೋಷಿಕ ವಿತರಣ ಸಮಾರಂಭವು ಜರುಗಿತು. ಸಭೆಯಲ್ಲಿ ಶ್ರೀ. ಪರಮಶಿವಯ್ಯನವರು ಮಾತನಾಡುತ್ತ, ಹೆಣ್ಣುಮಕ್ಕಳು ಆತ್ಮವಿಶ್ವಾಸ ಬೆಳೆಸಿದರೆ ಬೇಕಾದಂತಹ ಕಾರ್ಯಮಾಡಲು ಸಾಧ್ಯವಾಗುವದು. ಹೆಣ್ಣುಮಕ್ಕಳು ಆತ್ಮವಿಶ್ವಾಸವಿಲ್ಲದೆ ಕಾರ್ಯರಂಗಕ್ಕೆ ಧುಮುಕುವ ಸ್ವಭಾವದವರಿದ್ದುದರಿಂದ ಅವರ ಯಾವ ಕಾರ್ಯವೂ ಯಶಸ್ವಿಯಾಗುವದಿಲ್ಲವೆಂದೂ, ಅವರಲ್ಲಿ ಮಮತೆಗೇ ಪ್ರಾಧಾನ್ಯತೆಯು ಇರುವ ಮೂಲಕ ಅವರಿಗೆ ಆತ್ಮವಿಶ್ವಾಸವು ಇಲ್ಲದಾಗಿದೆಯೆಂದೂ, ಜನರ ಅಪಪ್ರಚಾರ. ಇದರಿಂದಲೇ ಹಿಂದೆ ಮ್ಯಾಡಂಕ್ಯೂರಿಯವರು ನಡೆಸಿದ ಪ್ರಯೋಗಕ್ಕೆ ಜನರು ಅಡ್ಡನಿಂತರು. ಆದರೆ ಅವರು ಜನರ ಯಾವ ವಿಚಾರಗಳಿಗೂ ಕಿವಿಗೊಡದೆ ತಮ್ಮ ಪ್ರಯೋಗ ಮುಂದುವರಿಸಿ ಎರಡುಸಲ

ನೊಬೆಲ್ ಪಾರಿತೋಷಕ ಪಡೆದು, ವಿಜ್ಞಾನ ಕ್ಷೇತ್ರದಲ್ಲಿ ಹಿರಿ ವ್ಯಕ್ತಿಯಾಗಿ ನಿಂತರೆಂದೂ ಹೇಳುತ್ತಾ, ನೀವು ಭಗಿನಿಯರೂ ಸಹ ಅಂತಹ ಆತ್ಮವಿಶ್ವಾಸಿಗಳಾಗಬೇಕೆಂದೂ, ಈ ನಿಮ್ಮ ಸಂಸ್ಥೆಯು ಈ ರೀತಿ ಸುಂದರವಾಗಿ ಬೆಳೆಯಬೇಕಾದರೆ ಮ್ಯಾ. ಮಾಯಿಯವರ ಆತ್ಮವಿಶ್ವಾಸವೇ ಕಾರಣವೆಂದೂ ಹೇಳಿದ ರಲ್ಲದೆ, ತಾವು ಈ ಸಂಸ್ಥೆಯ ನಿರೀಕ್ಷಣೆಗೆ ಹೋದಾಗ್ಗೆ; ಮೇಲಿಂದಮೇಲೆ ತಮ್ಮ ಗಮನಕ್ಕೆ ಬಂದ ಮಾತೆಂದರೆ, ಈ ಸಂಸ್ಥೆಯು ಇನ್ನೂ ಪರಿಪೂರ್ಣವಾಗಲು ಅನುವುದೊರತಿಲ್ಲ ವೆಂದು ಹೇಳಿದ ಮಾತು. ಆದರೆ ಆರೀತಿ ಅನುವು ದೊರಕದಿದ್ದುದು- ನಿಜವಾಗಿಯೂ ಒಂದು ಸುದೈವವೇ. ಕಾರಣವೆಂದರೆ ಯಾವದೇ ಕಾರ್ಯವು ಪರಿಪೂರ್ಣವಾಗುವದೆಂದರೆ ಆ ಕಾರ್ಯದ ಕೊನೆಯೆಂದೇ ಹೇಳಬೇಕು. ಪರಿಪೂರ್ಣವಾದ ಕಾರ್ಯವು ಮುಂದೆ ಹೆಚ್ಚು ಬಾಳಲಾರದೆಂದು ಅನೇಕಉದಾಹರಣೆಗಳಿಂದ ಕಂಡಮಾತು. ಪರಿಪೂರ್ಣತೆಯ ಆಶೆಯಿಂದ ಹೊರಟಾಗ ಆಗುವ ಆನಂದವು ಪರಿಪೂರ್ಣತೆ ಯಾದಮೇಲೆ ಸಿಗಲಾರದು. ಆದ್ದರಿಂದ ಈ ಕಾರ್ಯವು ಯಾವಾಗಲೂ ಪರಿಪೂರ್ಣತೆಯ ಆಶೆಯ ಕಡೆಗೆ ಗಮನವಿಟ್ಟು ಹೊರಟಿರಬೇಕೇ ಹೊರತು, ಪರಿಪೂರ್ಣವಾಗುವದು ಬೇಡವೆಂದು ನನ್ನಾಶೆಯೆಂದು ಹೇಳಿದರು.

ಆಭಾರಮನ್ನಣೆ, ಪೂಮಾಲೆ ಸಮರ್ಪಣೆಯೊಂದಿಗೆ ಸಭೆಯ ಕಾರ್ಯಕ್ರಮವು ಸಾಂಗವಾಗಿ, ಮನರಂಜನೆಯ ಕಾರ್ಯಕ್ರಮವು ಪ್ರಾರಂಭವಾಯ್ತು. ವೇಳೆಯು ಬಹಳವಾದ್ದರಿಂದ ಮನರಂಜನೆಯ ಕಾರ್ಯಕ್ರಮಗಳಲ್ಲಿ ಕೆಲವನ್ನು ಸೋಮವಾರ ಮಧ್ಯಾನ್ಹ ೩ ಗಂಟೆಗೆ ಮುಂದೊರೆಸಿ, ಒಂದೆರಡು ಕಾರ್ಯಕ್ರಮಗಳನ್ನು ಮಾಡಿ, ಸಭಿಕರ ಆಭಾರಮನ್ನಣೆ, ಮಾತೃವಂದನೆಯೊಂದಿಗೆ ಸಭೆಯ ಮುಕ್ತಾಯವಾಯ್ತು.





ಸ್ನೇಹ ಸಮ್ಮೇಲನದ ಸಮಯದಲ್ಲಿ ಶ್ರೀಯುತ ಪರಮಶಿವಯ್ಯನವರು
ಭಾಷಣ ಮಾಡುತ್ತಿದ್ದಾರೆ.



ಶ್ರೀಯುತ ಪರಮಶಿವಯ್ಯನವರು, ಸ್ನೇಹಸಮ್ಮೇಲನದ ಅಂಗವಾಗಿ
ಏರ್ಪಡಿಸಿದ ಪ್ರದರ್ಶನದ ಉದ್ಘಾಟನೆಯನ್ನು ಮಾಡುತ್ತಿದ್ದಾರೆ.

ವಿಭಾಗ ೧

# ವನಿತಾ ಟ್ರೇನಿಂಗ ಕಾಲೇಜ

## ಧಾರವಾಡ

ಸಂಚಾಲಕರು: ಶ್ರೀಮತಿ ವಾಯ್. ಡಿ. ನಾಡಕರ್ಣಿ
ಬಿ. ಎ., ಬಿ. ಟಿ.

ಸಂಪಾದಕರು: ಆರ್. ಎಚ್. ದೇಶಪಾಂಡೆ
ಬಿ. ಎ., ಬಿ. ಈ. ಡಿ.

೧೯೫೯—೬೦

## ನಮ್ಮ ನುಡಿ

ಬರೆಯುವ ಹವ್ಯಾಸ ಕೇವಲ ಲೇಖಕನಿಗೆ ಮಾತ್ರ ಎಂದು ಭಾವಿಸುವವರು ಕೆಲ ಜನರುಂಟು. ಸುಸಂಸ್ಕೃತನಾದ ಪ್ರತಿಯೊಬ್ಬನು ತನ್ನಲ್ಲಿ ಸ್ಫುಟಗೊಳ್ಳುವ ವಿಚಾರಗಳನ್ನು ತನ್ನ ತಿಳಿಯಾದ ಭಾಷೆ ಸರಳ ಶೈಲಿಯಲ್ಲಿ ತಿಳಿಯ ಪಡಿಸಲು ವಿದ್ಯುಕ್ತನಾಗಬೇಕು ಲೇಖನ ಕಲೆಯು ನಿಜವಾಗಿಯೂ ಒಂದು ಸಾಧಿಸಬೇಕಾದ ಶ್ರೇಷ್ಠ ಕಲೆ. ಈ ಕಲೆಯ ಬೆಳವಣಿಗೆಗಾಗಿ ಸಂದರ್ಭ ಕಲ್ಪಿಸಿಕೊಡುವದೇ ಈ ಶಿಕ್ಷಣ ಪತ್ರಿಕೆಯ ಮುಖ್ಯ ಉದ್ದೇಶವಾಗಿದೆ.

ವಿದ್ಯಾರ್ಥಿನಿಯರಲ್ಲಿ ನೈಸರ್ಗಿಕವಾಗಿ ಸಹಜವಾಗಿ ಚಿಗುರಿರುವ ಸಂದರ್ಭ ದೊರೆಯದಿದ್ದರೆ ಮುಂದೆ ಕಮರಿ ಹೋಗಬಹುದಾದ ಈ ಲೇಖನ ಕಲೆಯ ಪ್ರದರ್ಶನವೆಂದು ಈ ಅಮೋಘವಾದ ಹೊತ್ತಿಗೆಯು ನಿಮ್ಮ ಕೈಸೇರುತ್ತಲಿದೆ. ಸಾಹಿತ್ಯದ ವಿವಿಧ ಅಂಗಗಳಾದ ಕವನ, ಸಂಭಾಷಣೆ, ವಿಮರ್ಶೆ, ಪ್ರಬಂಧ, ನಗೆ ಹನಿ ಇವೆಲ್ಲ ಈ ಪತ್ರಿಕೆಯಲ್ಲಿ ಸಮ್ಮಿಲಿತವಾಗಿ ಓದುಗರನ್ನು ಹರ್ಷಭರಿತರನ್ನಾಗಿ ಮಾಡುತ್ತವೆ.

ಸಂಸ್ಥೆ ಪ್ರಾರಂಭವಾದಂದಿನಿಂದ ಅಚ್ಚಾಗಿ ಪ್ರಕಟಿತವಾದ ಪತ್ರಿಕೆ ಇದು ಎರಡನೆಯದು ಒಂದು ವರ್ಷವನ್ನು ಕಳೆದು ಎರಡನೆಯ ವರ್ಷದಲ್ಲಿ ಸಂಭ್ರಮದಿಂದ ಹೆಜ್ಜೆ ಇಟ್ಟಿದೆ

ಇನ್ನು ಈ ಪತ್ರಿಕೆಯ ಮೌಲ್ಯಮಾಪನದ ಹೊಣೆಯನ್ನು ವಾಚಕರಿಗೆ ಬಿಟ್ಟು ಕೊಡುತ್ತೇನೆ. ವಿದ್ಯಾರ್ಥಿನಿಯರ ಅನುಭವ ಜ್ಞಾನಗಳ ಮಟ್ಟವನ್ನು ಮನದಲ್ಲಿ ಇಟ್ಟುಕೊಂಡು ಈ ಲೇಖನ ಸಂಕಲವನ್ನು ಓದಿದರೆ ಮನಸ್ಸಿಗೆ ತೃಪ್ತಿಯಾಗದೆ ಇರದು.

ಈ ಪತ್ರಿಕೆಯು ಈರೀತಿ ದ್ವಿತಿಯ ವರ್ಷದಲ್ಲಿ ಕಾಲಿಡಲು ಸಹಕರಿಸಿದ ಲೇಖಕಿಯರಿಗೆ ಪತ್ರಿಕಾಕಾರರಿಗೆ ಸಹಶಿಕ್ಷಕರಿಗೆ ನನ್ನ ಕೃತಜ್ಞತೆಗಳು. ಈ ದ್ವಿತೀಯ ಸಂಚಿಕೆಯನ್ನು ಅಚ್ಚು ಹಾಕಿಸಿ ಪ್ರಕಟಿಸಲು ಉದ್ಯುಕ್ತರಾದ ವನಿತಾ ಸೇವಾ ಸಮಾಜದ ಸಂಚಾಲಕರಿಗೂ ನಮಗಾಗಿಯೇ ಈ ತಿಂಗಳ ಸಂಚಿಕೆಯನ್ನು ಮೀಸಲಾಗಿಟ್ಟ 'ವೀರಮಾತೆ'ಯ ಸಂಪಾದಿಕೆಯರಿಗೂ ಅನಂತ ವಂದನೆಗಳು.

ಹಿರಿಯರಾಗಿ ತೆರೆಯಲ್ಲಿ ನಿಂತು ಸಲಹೆ ಸೂಚನೆಗಳನ್ನು ಕೊಟ್ಟು ಮುಂದಡಿ ಇಡಿಸಿದ ನಮ್ಮ ಮುಖ್ಯಾಧ್ಯಾಪಿಕೆಯರಿಗೂ ನನ್ನ ವಂದನೆಗಳು.

ಇದೇ ರೀತಿ ಅಮೋಘ ಹರ್ಷದಿಂದ ಪ್ರತಿವರ್ಷ ಅಚ್ಚಾಗಿ ಅಚ್ಚು ಮೆಚ್ಚಿನದಾಗಿ ಪ್ರಗತಿಯೊಂದಿಗೆ ಓದುಗರ ಕೈಸೇರಿ ಮನಾನಂದಗೊಳಿಸಲೆಂದು ಆಶಿಸಿ ನನ್ನ ಲೇಖನಿಗೆ ತಡೆಯನ್ನುಂಟು ಮಾಡುತ್ತೇನೆ

ಸಂಪಾದಕ

# ನಾನು ನೋಡಿದ ಮಂಗಲ ಕಾರ್ಯದ ದೃಶ್ಯ

ಬರೆದವರು : **ಶಾಂತಾ ಮೂರಶಿಳೆ** ತರಬೇತಿ ವರ್ಗ ೧ ಬ

ವೈಶಾಖಮಾಸ ಪ್ರಖರವಾದ ಬಿಸಿಲಿನ ಬೇಸಿಗೆ. ಜನರು ಮನೆಯಲ್ಲಿ ಹೊತ್ತುಗಳೆಯುತ್ತಿದ್ದಾರೆ. ಸುಗ್ಗಿಯನ್ನು ಮುಗಿಸಿ ತಿಂಡಿ–ತಿನಿಸು ಊಟ–ಉಪಚಾರಗಳಿಂದ ಉಲ್ಹಾಸದಿಂದ ಇರುವ ಕಾಲವದು. ಎಲ್ಲಿ ನೋಡಿದಲ್ಲಿ ಮದವೆ-ಮುಂಜಿ ಜಾತ್ರೆ–ಉತ್ಸವಗಳು ಸಡಗರದಿಂದಸಾಗಿವೆ.

ನಮ್ಮೂರ ಶ್ರೀಮಂತರಾದ ಶಾಂತಪ್ಪಣ್ಣನವರು ತಮ್ಮ ಮಗನ ಮದುವೆಯನ್ನು ಹೂಡಿದ್ದಾರೆ. ಸಿರಿವಂತರ ಮದುವೆ ಎಂದ ಮೇಲೆ ಕೇಳುವದೇನು ? ಮದುವೆಯ ಮಹಾಮಂಟಪವೇ ಅವರ ಸಿರಿವಂತಿಕೆಯನ್ನು ಸೂಚಿಸುತ್ತಿತ್ತು. ಮನೆಯ ಮುಂದಿನ ವಿಶಾಲವಾದ ಪಟಾಂಗಣವು ಅರಮನೆಯಂತೆ ಒಪ್ಪುತ್ತಿತ್ತು. ಮಲಮಲಿ ಅರಿವೆಯಿಂದ ಛತ್ತು ಹೊಡೆದು ತಳಿರು-ತೋರಣಗಳಿಂದ ಸಿಂಗರಿಸಿದ್ದರು. ಭಾರತದ ಭಾಗಶಾಲಿ ಮುಖಂಡರ ಭಾವಚಿತ್ರಗಳು ಸಾಲುಸಾಲಾಗಿ ಮಂಡಿಸಿದಂತೆ ಕಾಣುತ್ತಿದ್ದವು. ಮಂಟಪದ ಮಧ್ಯದಲ್ಲಿ ಸಿಂಹಾಸನವು ಶೋಭಿಸುತ್ತಿತ್ತು. ಎಳೆ ವಯಸ್ಸಿನ ಮದು ಮಕ್ಕಳು ಮಂಡಿಸಿದ್ದರು.

ಆಹ! ಎಂಥ ಬಿನ್ನಾಣದ ನೋಟುಗಳು. ಅಂದು ಇಂದಿನ ನೆನಹು ಹಿಂದಿನಮರೆವು ಹೊರಹೊಮ್ಮಿ ಚಿಮ್ಮಿ ಹೃದಯ ಕಲಶದಿಂದ ಹೊರಬಿದ್ದು ಹೊನಲಾಗಿ ಹರಿಯತೊಡಗಿತು. ನವ ದಂಪತಿಗಳಿಗೆ ಬಲ್ಲಿದ ಬಾಲೆಯರ ಬಳಗ ಅರಿಷಿಣ ಬಣ್ಣವನ್ನು ಬಳೆಯಲಿಕ್ಕೆ ಬಂದಿತ್ತು. ಸಿಂಗಾರದ ಸುಮಂಗಲೆಯರು ಕುಂಕುಮ ಧರಿಸಿ ನಿಂತಿದ್ದರು. ಒಂದೆಡೆಗೆ ಮಂಗಳ ವಾದ್ಯಗಳು ಮಂದ ಮಂದವಾಗಿ ಮೊಳಗುತ್ತಿದ್ದವು. ಮಗುದೊಂದೆಡೆಗೆ ಅನುಭವದ ಅಜ್ಜ-ಅಜ್ಜಿಯರು ಮಾರ್ಗದರ್ಶಕರಾಗಿ ಕುಳಿತಿದ್ದರು. ಅಹಹಾ ! ಆ ಮಂಗಲ ದೃಶ್ಯವು ಯಾರ ಮನಸ್ಸನ್ನು ಸೆಳೆಯಲಿಕ್ಕಿಲ್ಲ !

ನಗೆ ಮೊಗದಿಂದ ಒಪ್ಪೊವ ಮದುಮಗನು ಶುಭ್ರಬಣ್ಣದ ಖಾದಿಯ ಉಡುಪನ್ನು ಧರಿಸಿದ್ದನು. ಅತ್ತ ನೆರೆದ ಜನಸಂದಣಿಯ ಕಡೆಗೊಮ್ಮೆ ನೋಡುವನು. ಮಗುದೊಮ್ಮೆ ತನ್ನಿನಿಯಳ ಕಡೆಗೊಮ್ಮೆ ಹಣಕಿ ಹಾಕುವನು. ಕೈಹಿಡಿಯುವ ಕಾಲ ತೀರ ಸಮೀಪಿಸಿದ್ದರೂಆತುರಭಾವ ವ್ಯಕ್ತಮಾಡುವನು.

ಮದುಮಗಳು ಮದುಮಗನ ವಾಮಭಾಗದಲ್ಲಿ ಮಂಡಿಸಿದ್ದಾಳೆ. ಓರಿಗೆಯ ಗೆಳತಿಯರ ಚೇಷ್ಟೆ ಚಿನ್ನಾಟಗಳೊಡನೆ ಮುಗುಳು ನಗುತ್ತಾ, ನಸುಲಜ್ಜೆಯಿಂದ ತಲೆಬಾಗಿಸಿ ಕುಳಿತಿದ್ದಾಳೆ. ಎಳೆ ವಯಸ್ಸಿನ ನಲ್ಲ-ನಲ್ಲೆಯರ ನರುಗಿನ ನೋಟವು ಜನರ ಕಣ್ಮನಗಳನ್ನು ತಣಿಸುತ್ತಿತ್ತು.

ಗುರುಗಳ ಮಂತ್ರೋಕ್ತ ಪೂಜಾ ವಿಧಿ ಮುಗಿದ ಮೇಲೆ ಮದುಮಗನು ಬಯಸಿ ಬಂದ ಬಾಲೆಗೆ ಪೂಮಾಲೆ ಹಾಕಿದನು. ಮದುಮಗಳು ನಕ್ಕು-ನಲಿಯುತ್ತ ನಲ್ಲನನ್ನು ನೋಡುತ್ತ ತನ್ನ ಸರ್ವಸ್ವವನ್ನೇ ಅರ್ಪಿಸುವಂತೆ ಪೂಮಾಲೆಯನ್ನು ಅರ್ಪಿಸಿದಳು. ಮಂಗಳ ವಾದ್ಯಗಳು ಮೊಳಗಿದವು ಗುರು–ಹಿರಿಯರು, ಬಂಧು-ಬಾಂಧವರು ಸರ್ವರೂ ಅಕ್ಷತಾರೋಪಣ ಮಾಡಿ, "ಬಲವಾದ ಬಾಳಸಾಗರದಲ್ಲಿ ನವದಂಪತಿಗಳ ಜೀವನ ನೌಕೆಯು ಬಿರುಗಾಳಿ ಮೊದಲಾದ ಅಡೆತಡೆಗಳಿಗೆ ಬಗ್ಗದೆ ಕುಗ್ಗದೆ ಸುಗಮವಾಗಿ ಸಾಗಲಿ. ಜೀವನ ನೌಕೆಯನ್ನು ತೂಕದಿಂದ, ಜೋಕೆಯಿಂದ ನೂಕುವ ಜಾಣ ನಾವಿಕನಾಗು. ಸುಖದ ಸುಗ್ಗಿಯಲ್ಲಿ ನಲಿಯುತ್ತ ಜೀವನ ಸಾಗರದ ತಡಿಗೆ ತಲ್ಪು" ಎಂದು ಹಾಡಿ ಹರಸಿದರು. ಅಷ್ಟರಲ್ಲಿ ಹನ್ನೆರಡು ಗಂಟೆ ಬಾರಿಸಿತ್ತು. ಜನರ ಚಿತ್ತವೆಲ್ಲ ಊಟದ ಕಡೆಗೆ ಹೋಗಿತ್ತು. ಪಂಚಪಕ್ವಾನ್ನದ ಊಟ ದಾರಿ ಕಾಯುತ್ತಿತ್ತು ನಿಬ್ಬಣಿಗರ ಕದನದ ಕೋಲಾಹಲವು ಒಂದೆಡೆಗೆ ನಡೆದಿತ್ತು. "ಲಗ್ನದಲ್ಲಿ ವಿಘ್ನಬೇಡ" ಎಂದು ಹಿರಿಯರು ಹೇಳುತ್ತಿದ್ದರು. ಅಂತೂ ಇಂತೂ ಊಟಕ್ಕೆ ಕುಳಿತೆವು. ಹೂರಿಗೆ, ಗಾರಿಗೆ, ಸಂಡಿಗೆ, ಪಾಯಸ, ಚಕ್ಕಲಿ ಅಯ್ಯೋ ಇನ್ನೂ ಅನೇಕ ತರದ ಹೆಸರು ಗೊತ್ತಿಲ್ಲದ ಪಕ್ವಾನ್ನಗಳು ಸಿದ್ಧವಾಗಿದ್ದವು. ನಿಬ್ಬಣಿಗರ ಊಟದ ಮೇಲಾಟ ಚಿನ್ನಾಟದೊಡನೆ ಪಂಕ್ತಿ ಮುಗಿಯಿತು. ಇಂಥ ಊಟ ಜನ್ಮದಲ್ಲಿ ಮೊದಲನೆಯದು. ಆ ಮೇಲೆ ಹೊಗೆಸೊಪ್ಪುಗಳ ಮೇಳದಲ್ಲಿ ತಾಂಬೂಲದಲ್ಲಿ ತಲ್ಲೀನರಾದೆವು.

ಬಿಸಿಲಿನ ಬಗೆಗೆ ಬಂದ ಜನರಿಗೆ ತಂಪನ್ನೀಯುವದಕ್ಕೆ ನವದಂಪತಿಗಳನ್ನು ಸೊಂಪಿನಿಂದ ಸ್ವಾಗತ ಮಾಡುವದಕ್ಕೆ ಬಂದನೋ ಏನೋ ಎಂಬಂತೆ ಮೇಘರಾಯನು ತನ್ನಿಳಿದೋಳುಗಳನ್ನು ಎಳೆ ಬಿಟ್ಟು ಇಳೆಗೆ ಬಂದನು. ಎಲ್ಲ ಕಡೆಗೆ ಶಾಂತವಾತಾವರಣವಾಯಿತು.

# ಹಬ್ಬಗಳು

ಲೇ : ಮಂದಾಕಿನಿ ಕುಲಕರ್ಣಿ, ೨ನೆ ವರ್ಷದ ವಿದ್ಯಾರ್ಥಿನಿ

"ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ" ಎಂದು ವರಕವಿ ಬೇಂದ್ರೆಯವರು ಹಾಡಿದ ಈ ಹಾಡು ನಿಜವಾಗಿಯೂ ಹಬ್ಬದ ಅನಂತತೆಯನ್ನು ಸೂಚಿಸುತ್ತದೆ ಅಹುದು ಹಬ್ಬವು ಅನಂತತೆ ಆಗಿದ್ದಂತೆ ಅಂರಾಧಕವೂ ಆಗಿದೆ. ಅದು ಜೀವನದಲ್ಲಿಯ ನೀರಸತೆಯನ್ನು ತಡೆದು ಹಾಕಿ ನವಚೈತನ್ಯ ರಸವನ್ನು ಚಿಲ್ಲನೆ ಚಿಮ್ಮಿಸಿ ನಗಿಸುವದು ಕಾಲಮಾನ ಪರಿಸ್ಥಿತಿಗನುಸರಿಸಿ ಗಣೇಶ ಚೌತಿ, ದಸರೆ, ದಿವಳಿಗೆ ಹಬ್ಬಗಳು ತನ್ನದೇ ಆದ ನವೀನತೆಯಿಂದ ಜೀವಂತ ವೃತೋತ್ಸವಗಳಾಗುವವು ಹುಡುಗರಿಗಾಗಿ ಹೋಳಿ ಹುಣ್ಣಿವೆ. ಹುಡಿಗೆಯರಿಗಾಗಿ ನಾಗಪಂಚಮಿ ಸ್ತ್ರೀಯರಿಗಾಗಿ ಗೌರಿ ಪೂಜೆ ಪುರುಷರಿಗಾಗಿ ನೂಲುಹುಣ್ಣಿವೆ ದಿವಳಿಗೆ ಅಂತೂ ಹಬ್ಬಗಳ ಹೆಗ್ಗಳಿಕೆಗೆ ಮರುಳಾಗದವರಿಲ್ಲ.

ಮರಳಾಗುವಂತೆಯೇ ಅವುಗಳ ಆಚರಣೆ ಇರುತ್ತದಲ್ಲವೇ ? ಉಲ್ಹಾಸಕ್ಕಾಗಿ ನವರಾತ್ರಿ ಉಪವಾಸಕ್ಕಾಗಿ ಶಿವರಾತ್ರಿಯಷ್ಟೇ ಆದರೆ ಇದು ಇಷ್ಟೇಅಲ್ಲ. ಪ್ರತಿಯೊಂದು ಹಬ್ಬದಹಿನ್ನೆಲೆಯಲ್ಲಿ ಪೂರ್ವಜರ ಪವಿತ್ರವಾದ ಧಾರ್ಮಿಕ ಭಾವನೆಯು ಅಡಗಿದೆ. ನಾವು ಗೌರಿಹಬ್ಬ ದಸರೆ ಗಣೇಶಚೌತಿ ಮುಂತಾದ ಹಬ್ಬಗಳನ್ನು ಕೇವಲ ಸ್ವಾನಂದಾನುಭವಕ್ಕೆ ಆಚರಿಸುವದಿಲ್ಲ. ಆಹೊತ್ತಿನಲ್ಲಿ ನಾವು ದೇವರನ್ನು ಸ್ಮರಿಸುತ್ತೇವೆ. ಎಂಥ ಪವಿತ್ರಗಳಿಗೆಯು ರಸಾನುಭವದಲ್ಲಿಯೂ ಪರದ ಚಿಂತೆ ಮರೆಯದಿರು ಎಂದು ಹಬ್ಬಗಳು ಸಾರುತ್ತವೆ. ಆಷಾಢ ಶ್ರಾವಣ ಸಮಯದಲ್ಲಿ ಬರುವ ಋಷಿಪಂಚಮಿ ಎಂಬ ವೃತದಿಂದ ನಾವು ಋಷಿಗಳಿಗೆ ನಮ್ಮ ಭಯಭಕ್ತಿಯನ್ನು ತೋರಿಸುತ್ತೇವೆ. ಕೆಲರಾಷ್ಟ್ರೀಯ ದಿನಾಚರಣೆಗಳನ್ನು ಜೀವನ ಶಿಕ್ಷಣ ಶಾಲೆಗಳಲ್ಲಿ ಆಚರಿಸಿ ಬಾಲಕರನ್ನು ದೇಶಪ್ರೇಮಿಗಗಳನ್ನಾಗಿ ಮಾಡಲು ಪ್ರಯತ್ನಿಸುತ್ತೇವೆ. ಜೀವನ ಶಿಕ್ಷಣ ಶಾಲೆಗಳಲ್ಲಿ ಇಂಥ ಹಬ್ಬಗಳನ್ನು ಆಚರಿಸುವದರಿಂದ ಶಾಲೆ ಮನೆ ಎಂಬ ಭೇದ ಉಂಟಾಗದಂತೆ ಹಬ್ಬಗಳನ್ನು ಆಚರಿಸುತ್ತೇವೆ. ಹೀಗೆ ಹಬ್ಬಗಳು ಮಾನವನನ್ನು ದೇಶಾಭಿಮುಖನನ್ನಾಗಿ ಮಾಡುವ ಕೈಗನ್ನಡಿಗಳು ಎಂದರೆ ಅತಿಶೋಕ್ತಿ ಆಗಲಾರದು.

ವಿಶಿಷ್ಟ ಪ್ರದೇಶದಲ್ಲಿ ವಿಶಿಷ್ಟ ಹಬ್ಬಕ್ಕೆ ಬಹುಮಹತ್ವವಿದೆ. ಗಣೇಶ ಚೌತಿ ಮಹಾರಾಷ್ಟ್ರದ ಸಡಗರದ ಹಬ್ಬವಾದರೆ ದೀವಳಿಗೆ ಮುಂಬಯಿಯವರನ್ನಾಕರ್ಷಿಸಿಕೊಂಡಿದೆ. ದಸರೆಯ ಸೊಬಗಿಗೆ ಮೈಸೂರಿಗೆ ಹೋಗಬೇಕು. ಹೋಳಿ ಹುಣ್ಣಿವೆ ಹುಡುಗಾಟ ಚೆಲ್ಲಾಟಕ್ಕಾಗಿ ಬಂಗಾಲಕ್ಕೆ ಹೋಗಬೇಕು.

ಹಬ್ಬಗಳು ಸಾಲಾಗಿ ನಿಬ್ಬಣದಂತೆ ಬರುವವು. ಶ್ರಾವಣ ಮಾಸ ಬಂದಿತೆಂದರೆ ಎಲ್ಲ ಹಬ್ಬವೂ ಸಾಲಾಗಿ ಬರುವವು. ಮನ ಮುದದಲಿ ನಲಿಯುವ ಮಾಸಾ ಇದೇ ಬಂದಿತು ಶ್ರಾವಣ ಮಾಸಾ.

ಬರಿ ಬರೆದಾಗಿಹ ನೆಲ ಹೊಲವಿಂದು ಹಚ್ಚಗೆ ಹಸುರಲಿ ನಗುತಿಹುದಿಂದು. ಒಣಗಿದಂಥ ಭೂಮಿ ಕಣ್ಣಿಗೆ ಹಸಿರು ಕೊಡುವದು. ಈ ಮೋಹಕವಾದ ಕಾಲದಲ್ಲಿಯೇ "ನಾಗರ ಪಂಚಮಿ ನಾಡಿನಲೆಲ್ಲಾ ನಾಗನ ಎದುರಿಗೆ ಹಾಲಿನ ಹಳ್ಳಾ" ನಾಗರ ಪಂಚಮಿ ನಾರೀವೃಂದಕ್ಕೆ ಸಡಗದ ಹಬ್ಬ ಪ್ರೀತಿಯ ಪ್ರವಾಹದ ಹೊನಲನ್ನೆ ನಾಗನಿಗೆ ಹಾಲು ಎರೆಯುವರು ಅನಂತರ ಬರುವ ಹಬ್ಬ ನೂಲ ಹುಣ್ಣಿವೆ, ಭಾದ್ರಪದದ ಅನಂತನಹುಣ್ಣಿವೆ ಗಣೇಶ ಚೌತಿ, ಅಗೀಹುಣ್ಣಿವೆ ನವರಾತ್ರಿ ದಿವಳಿಗೆ ಮುಂದೆ ಹೆಚ್ಚಿನಹಬ್ಬ ಸಂಕ್ರಮಣ ಯುಗಾದಿ ಹಬ್ಬ. ಒಂದೇ ಎರಡೇ ಹತ್ತಾರು ಹಬ್ಬಗಳು ಹೀಗೆ ಸರ್ವತೋಮುಖವಾದ ಈ ಹಬ್ಬಗಳು ಜನಮನ ಕವಿಮನ ತನ್ನೆಡೆಗೆ ಎಳಕೊಂಡಿವೆ.

ಹಬ್ಬಗಳಿಂದ ಕೇವಲ ಹರ್ಷವಷ್ಟೇ ಅಲ್ಲ ಇವುಗಳ ಆಚರಣೆಯಿಂದ ಪ್ರತ್ಯಕ್ಷನಾಗಿಯೂ ಸತ್ಪರಿಣಾಮವಾಗುವದು ಇದರ ನಿಮಿತ್ತವಾಗಿ ಮನೆಯಲ್ಲಿ ದೀಪ, ಧೂಪ, ಗಂಧಗಳಿಂದಲೂ ಪರಿಪರಿ ಪಕ್ವಾನ್ನಗಳಿಂದಲೂ ಮನೆ ಘಮಘಮಿಸುವದು. ಮತ್ತು ಹಬ್ಬಗಳಿಂದ ನಿಸರ್ಗ ಆಹ್ಲಾದಕರವಾಗುವದು ಒಟ್ಟಿನಮೇಲೆ ಹಬ್ಬಗಳು ಎಲ್ಲರಿಗೂ ಆನಂದ ಹಾಗೂ ಉತ್ಸಾಹ ಚೈತನ್ಯ ತರುವವು.

ಈ ಹಬ್ಬಗಳನ್ನು ಎಲ್ಲರೂ ಜೀವನ ಶಿಕ್ಷಣಶಾಲೆಯಲ್ಲಿಯೂ ಆಚರಿಸಿದರೆ ನಿಜವಾಗಿ ಜೀವನವೇ ಶಿಕ್ಷಣ ಶಿಕ್ಷಣವೇ ಜೀವನವಾಗಿ ಪರಿಣಮಿಸುವದರಲ್ಲಿ ಯಾವ ಸಂದೇಹವೂ ಇಲ್ಲವೆಂದು ನಾನು ಧಾರಾಳವಾಗಿ ಹೇಳುವೆನು.

# ಹಳ್ಳಿಯ ಸೊಬಗು

ದೀಪಾವಳಿಯಲ್ಲಿ ೧೫ ದಿವಸ ಕಾಲೇಜಕ್ಕೆ ಬಿಡುವು ಇದ್ದ ಕಾರಣ ನಾನು ನನ್ನ ಚಿಕ್ಕಮ್ಮನ ಊರಿಗೆ ಹೋಗಿದ್ದೆ ಆಕೆಯ ಊರೇನೊ ನಮ್ಮೂರಂತೆ ದೊಡ್ಡ ಪಟ್ಟಣವಲ್ಲ. ಒಂದು ಚಿಕ್ಕ ಹಳ್ಳಿಯೆ ಸರಿ. ಹೋಗುವಾಗ್ಗೆ ಉಗಿಬಂಡಿಯಿಂದಲೇ ಹೊರಟೆ. ಉಗಿಬಂಡಿಯು ಭರದಿಂದ ಸಾಗುವದರಿಂದ ಎಡಬಲದಲ್ಲಿ ಗಿಡ ಮರಗಳು, ಮತ್ತು ಹೊಲಗದ್ದೆಗಳು ಉಗಿಬಂಡಿಗೆ ಸ್ವಾಗತಿಸಿ ಲಗುಬಗೆಯಿಂದ ಸಾಗುತ್ತಿರುವವೋ ಎಂಬಂತೆ ಕಾಣುತ್ತಿದ್ದವು. ಇಂಥ ಸೊಬಗಿನ ದೃಶ್ಯವನ್ನು ಸವಿಯುತ್ತಿರುವಾಗಲೇ ನಮ್ಮ ನಿಲ್ದಾಣವು ಸಮೀಪಿಸಿತು. ನಾನು ಇಳಿಯುವಷ್ಟರಲ್ಲಿ ಚಿಕ್ಕಮ್ಮನ ಮಗನು ನನ್ನ ದಾರಿಯನ್ನು ಕಾಯುತ್ತ ನಿಂತಿದ್ದ. ನಾನು ಆತನ ಜೊತೆಯಲ್ಲಿ ಮನೆಯ ಕಡೆಗೆ ಹೊರಟೆನು.

ಅಲ್ಲಲ್ಲಿ ಕಾಣುವ ಸಣ್ಣಪುಟ್ಟ ಬೀದಿಗಳು ಮತ್ತು ಎದ್ದು ಕಾಣುವ ತಿಪ್ಪೆ ಮುಂತಾದವುಗಳು ಅಲ್ಲಲ್ಲಿ ಸಣ್ಣ ಸಣ್ಣ ಮಣ್ಣಿನ ಮನೆಗಳು ಇಂಥ ಸಣ್ಣ ಮನೆಯಲ್ಲಿಯೇ ದನ, ಕರು, ನಾಯಿ, ಕೋಳಿ ಮೊದಲಾದ ಹಲವಾರು ಪ್ರಾಣಿಗಳ ಆಶ್ರಯಸ್ಥಾನ. ಊಟ ಮಾಡುವದು ಅಲ್ಲಿಯೇ ಮಲಗುವದು ಅಲ್ಲಿಯೇ, ದನಗಳನ್ನು ಕಟ್ಟುವದೂ ಅಲ್ಲೆ ಮತ್ತು ಒಕ್ಕಲತನಕ್ಕೆ ಬೇಕಾಗುವ ಉಪಕರಣಗಳೂ ಅಲ್ಲಿಯೆ ಇದನ್ನೆಲ್ಲ ನೋಡಿ ನನ್ನ ಮನಸ್ಸು ಸಂಕುಚಿತವಾಯಿತು.

ಇದನ್ನೆಲ್ಲ ನೋಡುತ್ತ ನಾವಿಬ್ಬರು ಮನೆಗೆ ಬಂದೆವು. ಅವರದು ವಿಶಾಲವಾದ ಮನೆ, ಸ್ವಚ್ಛವಾದ ದೊಡ ಅಂಗಳ, ಅಚ್ಚುಕಟ್ಟಾದ ಪಡಸಾಲೆ, ದನಕರುಗಳನ್ನು ಕಟ್ಟುವದು ಬೇರೆ ಕೋಣೆಯಾಗಿದ್ದಿತು. ಇದಲ್ಲದೆ ಅವರು ಮಾಡುವಂಥ ಆದರಸತ್ಕಾರವನ್ನು ಕಂಡು ನನ್ನ ಮನಸ್ಸಿನಲ್ಲಿಯ ಸಂಕುಚಿತ ಭಾವನೆಯು ಹೋಗಿ ವಿಶಾಲವಾಯಿತು.

ನಾನು ಹೋದ ೩-೪ ದಿವಸಗಳ ವರೆಗೆ ಹಬ್ಬವಿರುವದರಿಂದ ಯಾವ ಕಾರ್ಯಕ್ರಮವನ್ನು ಇಟ್ಟುಕೊಳ್ಳದೆ ಮನೆಯಲ್ಲಿಯೇ ಕಾಲ ಕಳೆಯಬೇಕಾಯಿತು. ಒಂದು ದಿವಸ ಮಧ್ಯಾನ್ಹದ ವಿಶ್ರಾಂತಿಯನ್ನು ತೆಗೆದುಕೊಂಡು ಸುಮಾರು ೫॥-೬ ಗಂಟೆಗೆ ಸ್ವಲ್ಪ ಉಪಹಾರವನ್ನು ತೆಗೆದುಕೊಂಡು ನಾನೂ ನನ್ನ ಚಿಕ್ಕಮ್ಮನ ಮಗಳೂ ಕೂಡಿಕೊಂಡು ಅವರ ಎರೆಹೊಲಕ್ಕೆ ಹೊರಟೆವು.

ಊರಸೀಮೆಯನ್ನು ದಾಟಿ ಹೊಲದ ಹಾದಿಯನ್ನು ಹಿಡಿದೆವು. ಎಡಬಲಗಳಲ್ಲಿ ಹಚ್ಚಹಸುರಿನಿಂದ ಕಂಗೊಳಿಸುವ ...ನ್ನು ನೋಡಿ ನನಗೆ ಬಹಳ ಆನಂದವಾಯಿತು. ಎತ್ತರ ಜೋಳದ ನಿಲುವು, ಹಚ್ಚಹಸುರಾದ ಗರಿಗಳು ...ಸುವ ಗಾಳಿಗೆ ಅಲೆದಾಡಿದಾಗ ಹೊಲದ ಬೆಳೆಯು ಹಿಗ್ಗಿನಿಂದ ನಲಿಯುತ್ತಿರುವಂತೆ ಕಂಡಿತು. ಹಾಲುಗಾಳು ತುಂಬಿದ ತೆನೆಗಳು ತಲೆಯೆತ್ತಿ ನಿಂತಂತೆ ತೋರುತ್ತಿದ್ದವು ಜೋಳದ ಬೆಳೆಯ ಸುತ್ತಲೂ ಬಿತ್ತಿದ ಗುರೆಳ್ಳಿನ ಹಳದಿ ಬಣ್ಣದ ಹೂಗಳಿಂದ ಅಂದವಾಗಿ ತೋರುತ್ತಿತ್ತು. ಮತ್ತು ಇನ್ನೂ ಸಸಿಯಾಗಿದ್ದ ಗೋದಿಯ ಹೊಲಗಳು ಕಣ್ಣಿಗೆ ಹಬ್ಬದೂಟವನ್ನು ಒದಗಿಸಿ ಕೊಡುತ್ತಿದ್ದವು. ಈ ಎಲ್ಲ ಸೊಬಗನ್ನು ನೋಡುತ್ತ ಅವರ ಹೊಲವನ್ನು ತಲುಪಿದೆವು. ಸ್ವಲ್ಪ ವಿಶ್ರಾಂತಿಗಾಗಿ ಸಮೀಪದಲ್ಲಿಯ ಒಂದು ಎತ್ತರವಾದ ದಿನ್ನೆಯಮೇಲೆ ಕುಳಿತೆವು. ಸಮೀದಲ್ಲಿ ಸಣ್ಣ ಹೊಳೆಯು ಹರಿಯುತ್ತಿದ್ದಿತು.

ದಿನ್ನೆಯಮೇಲೆ ಕುಳಿತು ನಾವು ಸೃಷ್ಟಿಸೌಂದರ್ಯವನ್ನು ಸವಿಯಹತ್ತಿದೆವು. ಆಗ ತಾನೆ ಸೂರ್ಯನು ತನ್ನ ನಿತ್ಯದ ಯಾತ್ರೆಯನ್ನು ಮುಗಿಸಿಕೊಂಡು ವಿಶ್ರಾಂತಿಗಾಗಿ ತನ್ನ ಮಂದಿರದ ಕಡೆಗೆ ಪ್ರಯಾಣ ಮಾಡುತ್ತಲಿದ್ದನು. ದನಕರುಗಳು ತಮ್ಮ ತಮ್ಮ ಕರುವಿನ ಹಂಬಲದಿಂದ ಅಂಬಾ! ಅಂಬಾ!! ಎಂದು ಒದರುತ್ತ ಭರದಿಂದ ಮನೆಯಕಡೆಗೆ ಸಾಗುತ್ತಲಿದ್ದವು. ಆಹಾರ ಶೋಧನೆಗಾಗಿ ಹೋಗಿದ್ದ ಹಕ್ಕಿಪಕ್ಕಿಗಳು ಕಿಲಿ ಕಿಲಿ ಎಂದು ಸಪ್ಪಳ ಮಾಡುತ್ತ ತಮ್ಮ ತಮ್ಮ ಗೂಡುಗಳನ್ನು ಸೇರುತ್ತಲಿದ್ದವು ಬೆಳ್ಳಕ್ಕಿಗಳು ಸಾಲಾಗಿ ಹೊರಟಿರುವದರಿಂದ ಸ್ವರ್ಗದಿಂದ ಒಂದು ದೊಡ್ಡ ಹೂಮಾಲೆ ಕಡಿದುಕೊಂಡು ಬೀಳುತ್ತಿರುವಂತೆ ಕಂಡಿತು. ಹೊಲಗದ್ದೆಗಳಲ್ಲಿ ಕೆಲಸ ಮಾಡುವವರು ತಮ್ಮ ತಮ್ಮ ಕಾರ್ಯಗಳನ್ನು ತೀರಿಸಿಕೊಂಡು ಹಾಡುಗಳನ್ನು ಹಾಡುತ್ತ ಮನೆಯ ಕಡೆಗೆ ಹೊರಟಿದ್ದರು. ಪಶ್ಚಿಮ ದಿಕ್ಕು ಗುಲಾಲು ಉಗ್ಗಿದಂತೆ ಮನಮೋಹನವಾಗಿ ಕಾಣುತ್ತಿತ್ತು. ಆವಾಗಿನ ಹೊಂಬಿಸಿಲಿಂದ ಗಿಡಮರಗಳು ಮತ್ತು ಗುಡಿಯ ಶಿಖರಗಳು ಹೊನ್ನಿನಂತೆ ತೋರುತ್ತಿದ್ದವು. ಸಮೀದಲ್ಲಿ ಹರಿಯುತ್ತಲಿದ್ದ ನದಿಯು ಝುಳು ಝುಳು ಎಂದು ಸಪ್ಪಳ ಮಾಡುವದರಿಂದ ಭಾನುದೇವನಿಗೆ ಹಾಡಿ ಹೊಗಳಿ ಕಳಿಸುತ್ತಿರುವಂತೆ ಕಿವಿಗೆ ಒಳ್ಳೆಯ ಇಂಪಾಗಿ ಕೇಳುತ್ತಿತ್ತು. ಕೂಡಲೆ ನಿಶಾದೇವಿಯು ಕೆಂಪು ಮಡಿಯನ್ನು ಉಟ್ಟುಕೊಂಡು ನಿರಾಂಜನವನ್ನು ಹಿಡಿದು ಸೂರ್ಯನಾರಾಯಣನಿಗೆ ಬೆಳಗಿ ಆನಂದದಿಂದ ಸ್ವಾಗತಿಸಿದಳು.

ಇಂಥ ಸೃಷ್ಟಿಸೌಂದರ್ಯದ ಆಗರದ ಮಧ್ಯದಲ್ಲಿ ಮನೆಗೆ ಹೋಗುವ ಅರಿವೇ ನನಗಿರಲಿಲ್ಲ. ಆಗ ಚಿಕ್ಕಮ್ಮನ ಮಗಳು ನನ್ನನ್ನು ಎಚ್ಚರಿಸಿದಳು. ಆಗ ನಾನು ನಿದ್ದೆಯೊಳಗಿಂದ ಎಚ್ಚತ್ತವಳಂತೆ ಎದ್ದು, ಇಬ್ಬರೂ ಕೂಡಿ ಲಗುಬಗೆಯಿಂದ ಸಾಗಿ ಮನೆಯನ್ನು ತಲುಪಿದೆವು.

ಅನ್ನಪೂರ್ಣಾ ಥಳಂಗೆ ೧ನೇ ವರ್ಷ ಬ

# ಸ್ತ್ರೀ ಧರ್ಮದ ವೈಶಿಷ್ಟ್ಯಗಳು

ಬರೆದವರು : **ಪ್ರೇಮಾ ಪೈ.** ೩ನೇ ವರ್ಷ

ಸ್ತ್ರೀಯು ಸ್ಫೂರ್ತಿಯ ಮೂರ್ತಿಯಾಗಿದ್ದಾಳೆ.
ನಾರಿ ಪರರುಪಕಾರಿ ನಾರಿಸ್ವರ್ಗಕ್ಕೆ ದಾರಿ
ನಾರಿ ಸಕಲರಿಗೆ ಹಿತಕಾರಿ.

ಎಂದು ಸರ್ವಜ್ಞ ಕವಿ ಹೇಳಿದ್ದಾನೆ.

ನಿಜವಾಗಿಯೂ ಈ ಮಾತನ್ನು ಬ್ರಹ್ಮಚಾರಿಯಾದ ಸರ್ವಜ್ಞನೂ ಕೂಡ ಸ್ತ್ರೀಯರಲ್ಲಿ ಕಂಡುಕೊಂಡಿದ್ದಾನೆ. ಸರ್ವಜ್ಞನು ಸ್ತ್ರೀಗೆ ಸಲ್ಲಿಸಬೇಕಾದ ಗೌರವವನ್ನೇ ಸಲ್ಲಿಸಿದ್ದಾನೆ. ಸ್ತ್ರೀಯು ಕಾರ್ಯರಂಗದಲ್ಲಿ ಪ್ರತ್ಯಕ್ಷವಾಗಿ ಅಷ್ಟು ಕಾಣಿಸಿಕೊಳ್ಳದಿದ್ದರೂ ಯುಗ ಯುಗಗಳಲ್ಲಿ ಅತಿ ಸೂಕ್ಷ್ಮವಾಗಿಯಾದರೂ ಅತ್ಯಂತ ಪರಿಣಾಮಕಾರಕವಾಗಿ ಜೀವನದ ಉತ್ತಮಿಕೆಗೆ ತನ್ನ ಪ್ರೇರಣೆಯನ್ನು ಸಲ್ಲಿಸುತ್ತ ಬಂದಿದ್ದಾಳೆ. ಎಲೆಯ ಮರೆಯ ಹೂವಿನಂತೆ ಅವಳ ಬಾಳು.

ಸ್ತ್ರೀಯರಲ್ಲಿ ಯಾವಾಗಲೂ ಸಹನೆ, ಸಹಾನುಭೂತಿ, ಶಾಂತಿ, ಕ್ಷಮೆ ಮೊದಲಾದ ಗುಣಗಳು ಅವಶ್ಯವಾಗಿ ಬೇರೂರಿರಬೇಕು. ಮನೆ, ಮಕ್ಕಳು, ಅತ್ತೆ, ಮಾವ, ನೆರೆಹೊರೆಯವರು ಹಾಗೂ ಪತಿ ಇವರ ಬಗ್ಗೆ ಆದರ, ಕರುಣೆ, ಪ್ರೀತಿಯಿರಬೇಕು. ಈ ಬಗ್ಗೆ ಸಂಚಿಯ ಹೊನ್ನಮ್ಮನು ಹೇಗೆ ಹೇಳಿದ್ದಾಳೆ.

ಎಂತು ನಡೆದೊಡಿನಿಯನಿಗಿಂಪು ।
ದೋರುವು ದೆಂತು ನಡೆದೊಡೆ ಯೆಳ್ಗೆಯಹುದು ॥
ಎಂತು ನಡೆದೊಡೆಲ್ಲರು ವಿಯಲೆಸೆಂಬರುತಿರು
ಸಂತೋಷದೊಳು

ಸ್ತ್ರೀ ಗ್ರಹ ಮುಚ್ಚತೆ ಎಂಬ ಈ ಮಾತು ಸ್ತ್ರೀಯ ಯಾವ ರೀತಿ ಆದರ್ಶವಾಗಿರಬೇಕೆಂಬುದನ್ನು ಸೂಚಿಸುತ್ತದೆ. ಸ್ತ್ರೀಯು ಈ ಸಂಸಾರವೆಂಬ ಸಾಗರದಲ್ಲಿ ಬಾಳಿ ಬೆಳಗಬೇಕು. ಸ್ತ್ರೀಯು ತನ್ನ ಬಾಳದೇಗುಲದಲ್ಲಿ ಬೆಳಗುವ ನಂದಾದೀಪವಾಗಿರಬೇಕು. ಯಾವಾಗಲೂ ಅವಳು ತನ್ನ ಪತಿಯನ್ನು ತನ್ನ ಭಾಗ್ಯದ ದೇವರೆಂದು ನಂಬಬೇಕು.

ಆದರೆ ಈಗಿನ ನಮ್ಮ ೨೦ ನೇ ಶತಮಾನದ ಸ್ತ್ರೀಯರು ಹೇಗೆ ನಡೆದುಕೊಳ್ಳುತ್ತಾರೆ. (ತಮ್ಮ ಪತಿಯ ಸಂಗಡ) ಎಂಬುದನ್ನು ವಾಚಕರೇ ಗಮನಿಸಬೇಕು. ನಾನೇ ಬರೆದರೆ ಹೆಣ್ಣಾದ ನಾನು ಸ್ತ್ರೀ ಜಾತಿಯನ್ನಲ್ಲಗಳೆದಂತಾಗುವದು. ಆದರೆ ಸ್ತ್ರೀಯು ಹೇಗಿರಬೇಕು. ಪತಿಯನ್ನು ಯಾವ ದೃಷ್ಟಿಯಲ್ಲಿ ನೋಡಬೇಕು. ಎಂಬುದನ್ನು ಕೆಲವು ಒಳ್ಳೆಯ ಕಾದಂಬರಿಗಳನ್ನು ಓದಿ ತಿಳಿದುಕೊಳ್ಳಬಹುದು. ಉದಾ : ಮನೆತುಂಬಿದ ಹೆಣ್ಣು, ಗೃಹದೇವತೆ ಮು. ಆದರೆ ಈಗಿನ ಸ್ತ್ರೀಯರು ಕಾದಂಬರಿಗಳಲ್ಲಿಯ ಸ್ತ್ರೀಯು ಪಾತಿವ್ರತ್ಯದ ವಾಕ್ಯವನ್ನಾಗಲಿ, ಆ ಸಂದರ್ಭವನ್ನಾಗಲೀ ಬಿಟ್ಟುಬೇರೆ ಇನ್ನಾವುದೂ ಭಾಗಗಳನ್ನು ಓದಿ ತಮ್ಮ ಹಗಲುಗನಸುಗಳನ್ನು ಕಟ್ಟುತ್ತಿರುತ್ತಾರೆ. ಆದರೆ ಇದು ನಿಜವಾಗಿಯೂ ಸ್ತ್ರೀ ಧರ್ಮಕ್ಕೆ ಕಲಂಕವೆಂದು ಹೇಳಬಹುದಾಗಿದೆ. ತನ್ನ ಪಾತಿವ್ರತ್ಯವನ್ನು ಕಾಯ್ದುಕೊಂಡು ತನ ಹುಟ್ಟಿದ, ಕೊಟ್ಟ ಮನೆಗಳ ಕೀರ್ತಿಯನ್ನು ಬೆಳಗ ಬೇಕಾಗುತ್ತದೆ. ಪಾತಿವ್ರತ್ಯವು ಅವಳ ಜೀವನದ ಜೀವಾಳವಾಗಿರಬೇಕು.

ಕೆಲವೊಂದೆಡೆಯಲ್ಲಿ ಇತಿಹಾಸ ಪ್ರಸಿದ್ಧ ವ್ಯಕ್ತಿಗಳ ವೈಯಕ್ತಿಕ ಜೀವನವನ್ನು ಪರಿಶೀಲಿಸಿದರೆ ಕಂಡೂ ಕಾಣದಂತೆ ಅವರವರ ಭಾವಕ್ಕೆ ಜ್ಯೋತಿಯನ್ನು ಮುಟ್ಟಿಸಿದ ಶ್ರೇಯಸ್ಸು ಸಹಸಾ ಸ್ತ್ರೀಯರಿಗೆ ಸಲ್ಲುವದೆಂಬ ಮಾತು ಸಿದ್ಧವಾಗುತ್ತದೆ. ಮನುಷ್ಯವ್ಯಕ್ತಿಗಳ ಮಾತಂತಿರಲಿ; ತಾನು ತೆರೆಯ ಹಿಂದೆನಿಂತು ಸಾಮಾನ್ಯ ಜೀವನವನ್ನು ಸ್ತ್ರೀ ಬೆಳಗ ಬಲ್ಲಳೆಂಬುದು ನಮ್ಮಲ್ಲಿ ಅನೇಕರ ಅನುಭವಕ್ಕೆ ಬಂದ ಮಾತೇ ಸರಿ; ಉದಾ :— ಚೆನ್ನಮ್ಮಾಜಿ, ಮಂಡೋದರಿ ಮುಂ.

ಒಲಿದರೆ ನಾರಿ, ಮುನಿದರೆ ಮಾರಿ, ನಿಜ ಒಲಿದರೆ ಅವಳು ಒಂದು ರಾಷ್ಟ್ರವನ್ನು ಅತಿ ಉಚ್ಚಮಟ್ಟಕ್ಕೆ ಒಯ್ಯುವಳು. ಮುನಿದರೆ ಅದೇ ರಾಷ್ಟ್ರವನ್ನು ಒಮ್ಮೆಲೆ ಅಧೋಗತಿಗೆ ತಂದು ರಸಾತಳಕ್ಕೆ ಇಳಿಸಬಲ್ಲಳೆಂಬ ಮಾತು ಶ್ರೀ ವಿವೇಕಾನಂದರೊಂದೆಡೆಯಲ್ಲಿ ಹೇಳಿದ್ದಾರೆ. ಮುನಿದರೆ ನಾರಿಯೇ ಮಾರಿ ಎಂಬ ಮಾತಿನಲ್ಲಿ ಸತ್ಯವಿಲ್ಲವೆಂದಲ್ಲ. ಆದರೆ ನಾರೀ ಸ್ವರ್ಗಕ್ಕೆ ದಾರಿ ಎಂಬುದನ್ನು ಮಾತ್ರ ಮರೆಯಲಾಗದು. 'ಹೆಣ್ಣು ಹೆಣ್ಣಲ್ಲ; ಹೆಣ್ಣು ರಕ್ಕಸಿಯಲ್ಲ; ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂಬ ವಚನವು ಇದೇ ಸತ್ಯವನ್ನೇ ವ್ಯಕ್ತ ಮಾಡುತ್ತದೆ.

ಪುರುಷ ಪ್ರಯತ್ನದ ಪ್ರತೀಕ ಸ್ತ್ರೀ ಸ್ಫೂರ್ತಿಯ ಮೂರ್ತಿ. ತಾಯಿಯಾಗಿ, ತಂಗಿಯಾಗಿ, ಮಗಳಾಗಿ, ಮಡದಿಯಾಗಿ ಸ್ತ್ರೀ ಮಹಾನುಭಾವರ ಮಹಾಕಾರ್ಯಕ್ಕೆ ಸ್ಫೂರ್ತಿಯನ್ನು ನೀಡುತ್ತ ಬಂದಿದ್ದಾಳೆ. ಶಿವಾಜಿ, ಮಹಾತ್ಮಾಜಿ ಮೊದಲಾದ ಮಹಾ ಪುರುಷರ ಮಹಾಕಾರ್ಯಗಳ ಹಿಂದಿನಬೆಳಕು ಮಹಾಸ್ತ್ರೀಯ ರಿಂದ ಹೊಮ್ಮಿದ ಬೆಳಕೆಂಬುದನ್ನು ಅವರ ಜೀವನದ ಹಿನ್ನೆಲೆ ಯನ್ನು ಬಲ್ಲವರೆಲ್ಲರೂ ಬಲ್ಲರು. ಬುದ್ಧನ ಜೀವನಕ್ಕೆ ಈ ಸ್ಫೂರ್ತಿ ದೊರೆಯಲಿಲ್ಲವೆಂದು ಮೇಲು ನೋಟಕ್ಕೆ ತೋರ ಬಹುದು. ಆದರೆ ಸಿದ್ಧಾರ್ಥನು ಬುದ್ಧನಾಗಲಿಕ್ಕೆ ಕೂಡ ಸ್ತ್ರೀ ನೀಡಿದ ಸೌಹಾರ್ದವೇ ಕಾರಣವಾಗಿರಲು ಸಾಕು. ಸ್ತ್ರೀ ಸ್ಫೂರ್ತಿಯ ಮೂರ್ತಿ ಎಂಬುದಕ್ಕೆ ಕನ್ನಡ ನಾಡಿನಲ್ಲಿ ಉದಾ ಹರಣೆಗಳು ಕಡಿಮೆಯಿಲ್ಲ. ಬಸವಣ್ಣನವರ ಸಹ ಧರ್ಮಿಣಿಯೇ ಕಾರಣಳಾಗಿದ್ದಾಳೆ.

ಸ್ತ್ರೀಯು ಯಾವಾಗಲೂ ತನ್ನ ಮನೆತನವನ್ನು ತೂಗಿಸಿ ಕೊಂಡು ಹೋಗುತ್ತಿರಬೇಕು. "ಮನೆಯೆ ಮೊದಲು ಪಾಠ ಶಾಲೆ, ಜನನಿತಾನೆ ಮೊದಲಗುರುವು" ಎಂಬಂತೆ ಅವಳು ತನ್ನ ಮಕ್ಕಳಿಗೆ ಗುರುಸ್ಥಾನದಲ್ಲಿರಬೇಕೆಂಬುದು ಈಗಿನ ಮಾತಲ್ಲ! ಇದರ ಜೊತೆಗೆ ಸ್ತ್ರೀಗೆ ದೇವರು ಗುರುಗಳಲ್ಲಿ ಭಯ ಭಕ್ತಿ ಇರಬೇಕು. ಪೂಜೆ, ಪುನಸ್ಕಾರ ನೈವೇದ್ಯಗಳಲ್ಲಿ ಅವಳಿಗೆ ಅಚಲವಾದ ಶ್ರದ್ಧೆ ಇರಬೇಕು.

ಆದರೆ ಇವೆಲ್ಲ ಗುಣಗಳಿದ್ದರೂ ಒಂದುವೇಳೆ ನಮ್ಮ ಈಗಿನ ೨೦ ನೇ ಶತಮಾನದ ಸ್ತ್ರೀಯರಂತೆ ಆರ್ಥಿಕ ಸ್ವಾತಂತ್ರ್ಯದ ಮೋಹಕ್ಕೆ ಸಿಲುಕಿ ಮನೆಯನ್ನು ಮಸಣವನ್ನಾಗಿ ಮಾಡ ಬಹುದು. ಸ್ತ್ರೀ ಚಂಚಲಳಿರುವದರಿಂದ ಅವಳ ಮನಸ್ಸು ಯಾವಾಗಲೂ ಒಂದೆ ಸ್ಥಿಮಿತದಲ್ಲಿರುವದಿಲ್ಲ. ಅವಳು ತನ್ನ ಮನಸ್ಸಿನ ಮೇಲೆ ಸಂಯಮವೆಂಬ ಕಡಿವಾಣಹಾಕಿ ನಿಲ್ಲಿಸ ಬೇಕು. ಆರ್ಥಿಕತೆಯಿಂದಲೇ ಈ ಜಗತ್ತು ನಾಶವಾಗುತ್ತಿದೆ. ಉದಾ: ಕೆಲ ಸ್ತ್ರೀಯರು ಆರ್ಥಿಕತೆಯ ವ್ಯಾಮೋಹಕ್ಕೆ ಸಿಲುಕಿ ವೇಶ್ಯಾ ವೃತ್ತಿಗಿಳಿದಿದ್ದಾರೆ. ಆದರೆ ಈ ಉದ್ಯೋಗವನ್ನು ಇತ್ತಿತ್ತಲಾಗಿ ಸರಕಾರದವರು ನಿಲ್ಲಿಸುತ್ತಿರುವರೆಂದು ಪತ್ರಿಕೆ ಗಳಲ್ಲಿ ಓದಿದ್ದೇನೆ. ಹಾಗೂ ಅದಕ್ಕೆ ತಕ್ಕ ಉಪಾಯವನ್ನೂ ಕಂಡುಕೊಂಡದ್ದು ನೋಡಿದ್ದೇನೆ. ಈ ಕಾರ್ಯವು ಹೀಗೆ ಯಶಸ್ವಿ ಯಾದರೆ ಸ್ತ್ರೀ ಜಾತಿಗೆ ಒಂದು ತರಹದ ಭಾಗ್ಯವೆಂದೇ ಖಂಡಿತ ವಾಗಿ ಹೇಳಬಲ್ಲೆ.

ಕವಿಗಳಿಗೆ ಸಹ ಕೆಲವು ವೇಳೆ ಸ್ತ್ರೀಯರು ಕಾರ್ಯದೇವತೆ ಯಾಗಿ ಪರಿಣಮಿಸಿದ್ದಾರೆ. ಉದಾ: ಶ್ರೇಷ್ಠವಾದ ಕಾವ್ಯ ವನ್ನು ರಚಿಸಬೇಕೆಂಬ ಹಂಬಲವನ್ನು ಈಡೇರಿಸಿಕೊಳ್ಳ ಲಾಗದೆ ತರುಣಕವಿರನ್ನನು ಮನೆಬಿಟ್ಟು ಅಲೆದಾಡುತ್ತಿರುವಾಗ ಗಾನ ಚಿಂತಾಮಣಿಯಾದ ಸತಿಯ ಔದಾರ್ಯದಿಂದ ಸ್ಫೂರ್ತಿ ಗೊಂಡು ತನ್ನ ಗದಾಯುದ್ಧವನ್ನೂ ಅಜಿತ ತೀರ್ಥಂಕರ ಪುರಾಣವನ್ನೂ ರಚಿಸಿದ ಸಂಗತಿಯು ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಸುವರ್ಣರೇಷೆಯಿಂದ ಲೇಖಿಸಲ್ಪಟ್ಟಿದೆ.

ಇನ್ನೊಂದೆಡೆ ತಮ್ಮ ಅನುಪಮವಾದಜೀವನಕ್ಕೆ ಸ್ಫೂರ್ತಿ ಯನ್ನು ಪೂರೈಸಿದ ಮಾತೆಯನ್ನೂ ತಮ್ಮ ಅಸಿಧಾರಾವ್ರತಕ್ಕೆ ಅನುಕೂಲಳಾಗಿ ನಡೆದ ಮಡದಿಯನ್ನು ಮಹಾತ್ಮಾಜಿಯವರು ಕೊಂಡಾಡಿದ್ದು. ಯಾವ ದ್ಯೋತಕ ಸ್ತ್ರೀಯು ಇಷ್ಟೊಂದು ನಿಷ್ಠಾವಂತಳಿರುವುದರಿಂದಲ್ಲವೆ?

ವಸ್ತು ಕಲಾ ನಿರ್ಮಾಣವನ್ನು ಕುರಿತು ಉದಾ: ಬೇಕಿ ದ್ದರೆ ಮಮತಾಜಳಂತಹ ಸ್ತ್ರೀಯು ತನ್ನ ಪ್ರಿಯಕರನನ್ನು ಯಾವ ರೀತಿ ಪ್ರೀತಿಸುತ್ತಿದ್ದಳು ಎಂಬುದನ್ನು ಕಂಡುಕೊಳ್ಳ ಬೇಕಾದರೆ ಶಹಾಜಹಾನನ ಹೃದಯದಲ್ಲಿ ಮಮತಾಜಳು. ಇದು ಏನನ್ನು ತೋರಿಸುತ್ತದೆ. ಸ್ತ್ರೀಯ ಗುಣ, ವ್ಯಕ್ತಿತ್ವ ಪ್ರೇಮವನ್ನಲ್ಲವೆ?

ಒಂದು ವೇಳೆ ಸ್ತ್ರೀಗೆ ಯಾವುದೇ ತೊಂದರೆ ತೊಡಕು ಗಳು ಬಂದಿದ್ದಾದರೆ ಅವಳು ಶಿಕ್ಷಕಿಯ ಕೆಲಸವನ್ನು ಮಾಡು ವುದುತ್ತಮ. ತನ್ನ ಶೀಲ ಚಾರಿತ್ರ್ಯಗಳನ್ನು ಕಾಯ್ದುಕೊಂಡು ಮಕ್ಕಳಿಗೆ ಗುರುವಾಗಿ ಮಾತೆಯಾಗಿ ಇರುವುದೇ ಸ್ತ್ರೀ ಸಮೂ ಹಕ್ಕೆ ಮಂಗಲನಾಗಿದೆ. ಹಿಂದಿನ ಕಾಲದಲ್ಲಿ ಸ್ತ್ರೀಗೆ ಬಹಳ ಮಹತ್ವ ಕೊಡುತ್ತಿದ್ದರು. ಯಾವ ಕಾರ್ಯಕ್ಕೂ ಮೊದಲು ಮಾತೃ ದೇವೋ ಭವ ಎಂಬುದೆ ಇದರ ಪ್ರತ್ಯಕ್ಷ ಉದಾಹರಣೆ ಯಾಗಿದೆ. ಒಟ್ಟಿನಲ್ಲಿ ನೋಡಿದರೆ ಸ್ತ್ರೀಯು ತನ್ನ ಮನೆಯೊಳ ಗಿದ್ದ ತನ್ನ ಮಾನ, ಶೀಲ, ಚಾರಿತ್ರ್ಯಗಳನ್ನು ಕಾಯ್ದುಕೊಂಡು ಪತಿವ್ರತೆ ಎನಿಸಿಕೊಳ್ಳುವುದೇ ಲೇಸಲ್ಲವೇ? ಸ್ತ್ರೀಯುಶಾಂತಿಯ ಕುರುಹು. ಪ್ರೇಮದ ಮೂರ್ತಿ ಯಾಗಿದ್ದಾಳೆ.

ಜೀವನದ ಮಡಲನ್ನು ಕಟ್ಟಿಲೆಳಸುವವರು ಸ್ವಾಗತಿಸ ಬೇಕು ಈ ಸ್ಫೂರ್ತಿಯ ಮೂರ್ತಿಯಾದ ಸ್ತ್ರೀಯನ್ನು.

ಯತ್ರ ನಾರ್ಯಸ್ತು ಪೂಜ್ಯಂತೇ। ರಮಂತೇ ತತ್ರ ದೇವತಾ ಎಂದು ಮನು ಹೇಳಿದ್ದಾನೆ

---

# ಕೈಗಡ ಸೊಸೆ

ಬರೆದವರು : ಸುಶೀಲಾ ನಾಮುಂಣವರ ೨ನೇ ವರ್ಷ ವಿ.

ಸಂಜೆಯ ಸಮಯ ವಸಂತರಾಯನು ಆನಂದ ವಿಹಾರಕ್ಕಾಗಿ ಉದ್ಯಾನದಲ್ಲಿ ಕುಳಿತಿದ್ದನು. ಅದೇ ಸಮಯಕ್ಕೆ ಶ್ಯಾಮಲೆಯೂ ತನ್ನ ಬೇಸರವನ್ನು ಕಳೆದುಕೊಳ್ಳಲು ಅದೇ ಉದ್ಯಾನಕ್ಕೆ ಬಂದಿದ್ದಳು. ಶ್ಯಾಮಲೆಯನ್ನು ಕಾಯುತ ಕಾತುರನಾಗಿ ಕುಳಿತಿದ್ದ ವಸಂತರಾಯನಿಗೆ ಸಮಯ ಸಾಧಿಸಿತು.

ಪ್ರತಿ ದಿನದಂತೆ ಮಾತನಾಡುತ್ತ ಆಡುತ್ತ ಕುಳಿತು ವಸಂತರಾಯನು ಶ್ಯಾಮಲೆಗೆ ಪ್ರಶ್ನಿಸಿದನು. ತಾವು ಈ ಸಲ ಬಿಡುವಿಗೆ ಎಲ್ಲಿಗೆ ಹೋಗುವದು? ಶ್ಯಾಮಲೆ ಹೇಳಿದಳು. ನಾನು ಈ ಸಲ ಊರನ್ನು ಕಾಣುವದಿಲ್ಲವೆಂದು ಆದು ಹೇಗೆ ಸೂಟಿಯು ಬಿಡುವನ್ನೇ ಕಾಯುತ್ತ ಕುಳಿತಿದ್ದವರು ಊರಿಗೆ ಹೋಗುವದಿಲ್ಲವೆಂದರೇನು ? ಕಾರಣ ವಿರಬಹುದಲ್ಲ ? ಅದು ಯಾವ ಕಾರಣ ಹೇಳುವಿರಾ ?

ನಾನು ಊರಿಗೆ ಹೋದ ಕೂಡಲೇ ನಮ್ಮ ತಾಯಿಯು ನನಗೆ ಮದುವೆ ಮಾಡಿಕೊಳ್ಳಲೇಬೇಕೆಂದು ಒತ್ತಾಯ ಪಡಿಸುತ್ತಾಳೆ. ಆದರೆ ಆದಕ್ಕೆ ನನ್ನ ಒಪ್ಪಿಗೆ ಇಲ್ಲ. ನಾನು "ಗಣೇಶನ ಮದುವೆಯಂತೆ" ಮುಂದೆ ಹಾಕುತ್ತಲೇ ಇರುವೆ. ಓಹೋ ! ತಮ್ಮ ವಿಚಾರವೇನು ? ತಾವು ಈ ಸಲ ಎಲ್ಲೂ ಯಾವ ಊರಿಗೆ ಹೋಗುವಿರಿ ?

ನನಗಾದರೂ ಅದೇ ಪರಿಸ್ಥಿತಿ. ನಿನ್ನೆ ನನ ತಂದೆಯಿಂದ ಪತ್ರಬಂದಿದೆ. ತೀವ್ರವೇ ಹೊರಟು ಬರಲು ತಿಳಿಸಿದ್ದಾರೆ. ನನ್ನ ತಾಯಿ ಬಹಳೇ ತ್ರಾಸದಲ್ಲಿರುವರಂತೆ, ದಿನಾಲು ಬಡಬಡಿಸುವದು ಬಂದೇ ಬಂದ ವಸಂತನ ಮದುವೆ ಈ ಮುದಿ ದಂಪತಿಗಳಿಗೆ ಮಗನ ಮದುವೆಯ ಹುಚ್ಚು ತಗಲಿದೆಯೋ ಏನೋ ? ಇರಲಿ. ನನ್ನ ಜೊತೆಗೆ ತಾವು ನಮ್ಮೂರನ್ನು ನೋಡಲು ಬರಬಹುದೋ ? ನಿಮ್ಮಿಷ್ಟವಿದ್ದರೆ ನಾಳೆಯೇ ಹೊರಡೋಣ ನಮ್ಮ ತಾಯಿಯನ್ನು ಕಂಡು ಬರೋಣ.

ಸ್ವಲ್ಪ ಸಂಕೋಚದಿಂದ ಆಗಬಹುದು ಆದರೆ ತೀವ್ರವೇ ತಿರುಗಿ ಬರಬೇಕು. ಎಂದು ಉತ್ತರಿಸಿದ ಶ್ಯಾಮಲೆಯ ಮಾತಿಯನ್ನು ಕೇಳಿ ವಸಂತರಾಯನಿಗೆ "ಹಸಿದವರಿಗೆ ಉಣಬಡಿಸಿದಷ್ಟು" ಆನಂದವಾಯಿತು. ಆಗಲೇ ಎದ್ದು ತನ್ನ ತಂದೆಗೆ ತಾರು ಕೊಟ್ಟನು. ನಾನು ನನ್ನ ಪತ್ನಿ ಬರುತ್ತೇವೆ. ರೇಲ್ವೆ ಸ್ಟೇಶನಕ್ಕೆ ಕಾರು ಕಳಿಸಬೇಕು.

ವಸಂತರಾಯ ಮನೆತನದಿಂದ ಸಿರಿವಂತರು. ತೋಟ-ಪಟ್ಟಿ ಹೊಲ-ಮನೆಗಳು ಸಾಕಷ್ಟು ಇದ್ದವು. ವಸಂತರಾಯನ ತಂದೆ ಬಹಳ ದಯಾಳು. ಜಾಣರಾದವರು, ಸುಧಾರಿಸಿದವರು. ರಘುನಾಥರಾಯರು ಮಗನ ವಾರ್ತೆಯನ್ನು ಕೇಳಿ ಚಕಿತರಾದರು. ಮತ್ತೆ ಚೇತರಿಸಿಕೊಂಡು ಈಗ್ಗ ತಮ್ಮ ಹೆಂಡತಿಯನ್ನು ಸಮಾಧಾನ ಪಡಿಸುವದಕ್ಕಾದರೂ ಒಳ್ಳೆಯದಾಯಿತೆಂದರು. ಕಾರನ್ನು ಸರಿಯಾದ ವೇಳೆಗೆ ರೇಲ್ವೆ ನಿಲ್ದಾಣಕ್ಕೆ ಕಳಿಸಿದರು. ಆ ದಿನವೇ ಶ್ಯಾಮಲೆ ವಸಂತರಾಯರ ಆಗಮನವಾಯಿತು. ರೇಲ್ವೆ ಗಾಡಿಯಿಂದ ಇಳಿದ ಕೂಡಲೇ ಊರಲ್ಲಿ ಪ್ರವೇಶಿಸಿದರು. ಅಷ್ಟರಲ್ಲಿಯೇ ಮನೆಯಲ್ಲಿ ಮನೆ ತುಂಬಿಸಿಕೊಳ್ಳುವ ವ್ಯವಸ್ಥೆ ನಡೆದಿತ್ತು. ಆಚಾರ್ಯರು ಗುಣುಗುಡುತ್ತ ಕುಳಿತಿದ್ದ ಊರ ಜನ ಕಿಕ್ಕಿರಿದು ನೆರೆದಿದ್ದರು. ಶ್ಯಾಮಲೆಯನ್ನು ನೋಡಲು ಶ್ಯಾಮಲೆಯು ಬರುತ್ತಲೆಯೇ ಬಲಗಾಲನ್ನು ಮುಂದಿಡು ಎಂಬ ಶಬ್ದ ಕೇಳಿಸಿತು.

ಶ್ಯಾಮಲೆ ಆಚ್ಚರಿಯಿಂದ ವಸಂತರಾಯನನ್ನು ನೋಡಿದಳು. ಅವಳಿಗೆ ಯಾವದು ತೋರದಂತಾಯಿತು. ಪರಿಸ್ಥಿತಿ ಯಾವದನ್ನು ಆಡುವಂತಿರಲಿಲ್ಲ. ಸುಮ್ಮನೆ ಒಳಗೆಹೋದಳು. ಇರ್ವರೂ ತಾಯಿಯ ಹತ್ತಿರ ಹೋದರು. ತಾಯಿಯು ನೆಲಬಿಟ್ಟೇಳುವ ಸ್ಥಿತಿಯಲ್ಲಿರಲಿಲ್ಲ. ನೋಡಿ ಬಹಳ ದುಃಖವೆನಿಸಿತು. ಹಾಗೇಯೇ ರೂಢಿಗನುಸಾರವಾಗಿ ನಮಸ್ಕಾರವನ್ನು ಮಾಡಿದರು. ತಾಯಿಯು ನರಳುವ ಧ್ವನಿಯಲ್ಲಿಯೇ ಮಗನಿಗೆ ಉದ್ದಂಡ ಆಯುಷ್ಯವಂತನಾಗೆಂದು ಶ್ಯಾಮಲೆಗೆ ಸುಪುತ್ರವತಿಯಾಗಿ ವಸಂತನ ಜೊತೆಗೆ ಸರಿಯಾಗಿ ಬಾಳುವೆ ಮಾಡಿ ಕೀರ್ತಿ ಪಡೆಯೆಂದು ಆಶೀರ್ವದಿಶಿದಳು. ಮತ್ತೆ ಗಾಯದ ಮೇಲೆ ಬರೆಕೊಟ್ಟಂತಹ ಮಾತುಗಳನ್ನು ಕೇಳಿ ಶ್ಯಾಮಲೆಯ ಕಣ್ಣುಗಳು ಕಿಡಿಯನ್ನು ಕಾರಹತ್ತಿದವು. ಅಷ್ಟರಲ್ಲಿ ಅವಳಿ

ಗಾಗಿ ಒಂದು ಕೋಣೆಯನ್ನು ಸಿದ್ಧ ಪಡಿಸಲಾಗಿತ್ತು. ಅಲ್ಲಿಯೇ ಇರಲು ವಸಂತರಾಯನು ಹೇಳಿದನು. ಶ್ಯಾಮಲೆಯು ವಸಂತ ರಾಯನಿಗೆ ಇದು ಏನು ? ನನ್ನನ್ನು ಈ ರೀತಿ ಮೋಸ ಮಾಡಿದಿರಾ ? ಎಂದು ಕೇಳಲು ನನ್ನ ತಾಯಿಯನ್ನು ಉಳಿಸಿಕೊಳ್ಳಲು ನಿಮ್ಮನ್ನು ಕೈಗಡ ತಂದಿರುವೆ ಎಂದನು.

ಶ್ಯಾಮಲೆ ಒಳ್ಳೆಯ ಹುಡುಗಿ ನೋಡಲು ರೂಪವತಿ ಆದರೆ ಬಡವಿ ಅವಳಿಗೆ ತಾಯಿಯನ್ನು ಬಿಟ್ಟರೆ ಇನ್ನೊಬ್ಬರ ಆಶ್ರಯ ವಿರಲಿಲ್ಲಾ. ಅವಳಿಗೆ ಯಾವದನ್ನು ಮಾತನಾಡಲು ಬರುವಂತಿರಲಿಲ್ಲಾ ಸುಮ್ಮನೆ "ಬೆಣ್ಣೆಯನ್ನು ನುಂಗಿದ ಬೆಕ್ಕಿನಂತಿರ" ಬೇಕಾಯಿತು. ಹಾಗೇ ಹೀಗೆ ಎರಡು ದಿನ ಕಳೆದವು ಮನೆಯಲ್ಲಿ ಕೈಗೆ ಕಾಲಿಗೊಬ್ಬ ಆಳು ಎಲ್ಲ ಕೆಲಸವನ್ನು ಅವರೇ ನೋಡಿಕೊಳ್ಳುತ್ತಿದ್ದರು ಇವಳು ಹೊತ್ತಿಗೆ ಸರಿಯಾಗಿ ಅತ್ತೆಯ ಹತ್ತಿರ ಹೋಗಿ ಯೋಗಕ್ಷೇಮ ಕೇಳುವದು ಔಷಧ ಉಪಚಾರ ಮಾಡುವದು. ಆಹಾರ ಕೊಡುವದನ್ನು ಮಾಡುತ್ತಿದ್ದಳು. ಸ್ವಲ್ಪ ಗುಣವಾಯಿತು. ಆ ಮೇಲೆ ನಾನಿನ್ನು ಇದರಿಂದ ಉಳಿಯುವದು ಸಾದ್ಯವಿಲ್ಲವೆಂದು ತಿಳಿದು ಮಜ್ಜಿಗೇ ಕಂಬದ ಅಡಿಯಲ್ಲಿ ಬಚ್ಚಲ ಮನೆಯ ಮೂಲೆಯಲ್ಲಿ ಅಡಿಗೆಯ ಒಲೆಯ ಹತ್ತಿರುವ ತಗ್ಗಿನಲ್ಲಿ ಹೂಳಿಟ್ಟ ಗಂಟನ್ನು ಅಂದರೆ ಬಂಗಾರದ ವಸ್ತ ಒಡವೆ, ಹಣ ತುಂಬಿಟ್ಟ ಪಾತ್ರೆಯನ್ನು ತೋರಿಸಿದಳು (ಸೊಸೆಗೆ) ಇವೆಲ್ಲವನ್ನು ನೋಡಿ ಶ್ಯಾಮಲೆಯ ಬಾಯಿಯಲ್ಲಿ ನೀರ ಒಡೆದವು.

ಪ್ರತಿದಿನದಂತೆ ರಾತ್ರಿಯ ಸಮಯ ೮ ಗಂಟೆಯಾಗಿರಬಹುದು ವಸಂತರಾಯನು ಶ್ಯಾಮಲೆಯ ಶಯ್ಯ ಗೃಹವನ್ನು ಪ್ರವೇಶಿಸಿದನು (೨೨) ಎಂದಿನಂತೆ ಎಲ್ಲ ವಿಷಯವನ್ನು ಮಾತನಾಡುತ್ತ ಆಡುತ್ತ ತಾವೆಷ್ಟು ಭಾಗ್ಯಶ್ಯಾಲಿಗಳು. ಅಲ್ಲದೆ ತಮ್ಮ ಕೈಹಿಡಿದ ಸೌಭಾಗ್ಯವತಿಯು ಎಷ್ಟು ಧನ್ಯಳು. ಎಂದು ಮೊದಲು ಮಾಡಿದಳು ವಸಂತರಾಯರು ಯಾಕೆ ತಮಗೆ ಇಷ್ಟೊಂದು ಭಾವನೆಗಳು ಉದ್ಭವಿಸಲು ಕಾರಣವೇನು ? ಈಗಲಾದರೂ ನಮ್ಮ ಮನೆಯ ವಿಷಯ ತಿಳಿಯಿತೆ ? ಇನ್ನಾದರೂ ಒಪ್ಪಿಗೆ ಕೊಡ ಬಹುದೇ ಎನ್ನಲು ಮೌನವನ್ನು ತಾಳಿ ನಾಚಿಕೆ ಪಟ್ಟಳು " ಮೌನಂ ಸರ್ವತ್ರಸಾಧನಂ ,, ಎಂಬಂತೆ ವಸಂತರಾಯರು ಸಮ್ಮತವಿರಬಹುದೆಂದು ತಿಳಿದರು.

ಇದೇ ಸಮಯಕ್ಕೆ ನಿರಭ್ರವಾದ ಆಕಾಶಲ್ಲಿ ಒಮ್ಮೆಲೆ ನೋಡಕವಿದು ಕತ್ತಲೆಯಾದಂತೆ ಯಾವನೋಬ್ಬ ನೀಚನು ಈಕೆಯನ್ನು (ಈಕೆಯ ಮನಸನ್ನು) ಕೆಡಿಸಲು ಪ್ರಯತ್ನಿಸಿದನು. ಆದು ಸಾಧ್ಯವಾಗಲಿಲ್ಲ ಇದರಿಂದ ಶ್ಯಾಮಲೆಗ ಬಹಳ ಸಂಕಟವಾಯಿತು. ಅಷ್ಟರಲ್ಲಿ ಹವೆಯ ಬದಲಾವಣೆಗೋಸುಗ ತೋಟದ ಬಂಗಲೆಗೆ ಹೋಗುವದನ್ನು ನಿಶ್ಚಯಿಸಿದರು. ಎಲ್ಲ ಸಿದ್ಧತೆಯಾಯಿತು. ಆ ಮನೆಯ ಶಾಂತಿಯನ್ನು ಮಾಡಿ ಶ್ರೀ ಸತ್ಯನಾರಾಯಣನ ಪೂಜೆಯನ್ನು ಮಾಡೋ ಪುರ ಜನರಿಗೆ ಆಮಂತ್ರಣವನ್ನು ಕೊಡೋಣವೆಂದು. ತಾಯಿ ಹೇಳಿದಳು ಮತ್ತು ಶ್ಯಾಮಲೆಯ ಲಗ್ನದ ಕಾಲಕ್ಕೆ ಯಾವುದನ್ನು ಅವಳಿಗೆ ಹಾಕಿಲ್ಲಾ (ಕೊಟ್ಟಿಲ್ಲಾ) ಆದಕ್ಕಾಗಿ ಅವಳ ಜೈಯ ಮೆರೆಗೆ ಒಂದು ಬನಾರಸಿಯ ಪತ್ತಲವನ್ನು ಕೊಂಡು ಕೊಂಡು ಬಾಯೆಂದು ಹೇಳಿದಳು.

ಲೋಕಾರೂಢಿಯಂತೆ ವಸಂತರಾಯರು. ಶ್ಯಾಮಲೆಗೆ ಯಾವದು ಸೇರುವದು ಎನ್ನುವದನ್ನು ತಿಳಿದು ಕೊಳ್ಳಲು ಕೇಳಿದರು ಅವಳು ಕೆಂಪು ಬಣ್ಣದವರಿಗೆ ಅಥವಾ ಸೀರೆಯಲ್ಲಿಯ ಜರವು ಎದ್ದು ಕಾಣಬೇಕಾದರೆ ಚಾಕಲೇಟು ಸೀರೆಯನ್ನು ಕೊಳ್ಳಬೇಕು. ಎಂದಳು ವಸಂತರಾಯರು ಒಳ್ಳೆ ಉತ್ಸಾಹದಿಂದ ಪೇಟೆಯ ಪ್ರವೇಶ ಮಾಡಿದರು.

ಸಮಯ ಸಾಧಿಸಿ ಮತ್ತೆ ಆತನು ಆ ಮನೆಯನ್ನು ಪ್ರವೇಶಿಸಿ ವಸಂತರಾಯನ ತಾಯಿಯನ್ನು ಭೆಟ್ಟಿಯಾಗಿ ವೈನಿ (ಅತ್ತಿಗೆ) ಯನ್ನು ಕಾಣುವೆ ನೆಂದು ಶ್ಯಾಮಲೆಯ ಗೃಹವನ್ನು ಹೊಕ್ಕನು.

"ತೋಳವು ಕುರಿಗಳ ದಡ್ಡಿ ಹೊಕ್ಕಿತೆಂದು ,, ಗಾಬರಿಯಿಂದ ಹೆಣೆಯುತ್ತ ಕುಳಿತಿದ್ದ ಶ್ಯಾಮಲೆಯು ಒಮ್ಮೆಲೆ ಎದ್ದು ನಿಂತಳು.

ಅತ್ತಿಗೆ ನಮ್ಮ ಅಣ್ಣನು ನಿಮ್ಮನ್ನು ನಿಜವಾಗಿ ಮದುವೆಯಾಗಿರುವನೇ? ಹಾಗಾದರೆ ಹೊಸದಾಗಿ ಲಗ್ನವಾದ ಲಕ್ಷಣಗಳೇನು ನಿಮ್ಮಲ್ಲಿ ಕಾಣುವದಿಲ್ಲವಲ್ಲಾ ? ಎಂದು ಕೇಳಲು ಉತ್ತರ ಕೊಡಲು ಸಮರ್ಥಳಾಗದೇ ಸುಮ್ಮನೆ ಕಂಬದಂತೆ ನಿಂತುಬಿಟ್ಟಳು. ಹಾಗದರೆ ಇಲ್ಲಿ ನೋಡ ಬನ್ನಿರಿ ಇಲ್ಲಿಯೇ ಹತ್ತಿರದಲ್ಲಿ ಒಂದು ಕೋಣೆಯಿದೆ ಅಲ್ಲಿ ನಿಮ್ಮಂತೆ ತಂದ ಹೆಣ್ಣುಗಳನ್ನು ಇಟ್ಟಿದ್ದಾನೆ. ಎಂದು ಹೇಳುತ್ತಲೆ ಆಕೆಯ ಕೈಯನ್ನು ಹಿಡಿದು ಎಳೆಯುತ್ತ ಹೋಗಿ ಕತ್ತಲೆ ಕೋಣೆಯಲ್ಲಿ ಒಗೆದು ಬೀಗವನ್ನು ಹಾಕಿ ಹೊರಟುಹೋದನು.

ವಸಂತರಾಯನು ಒಳ್ಳೆಯ ಭರದಿಂದ ಪತ್ತಲವನ್ನು ತೋರಿಸುವ ಹುರುಪಿನಿಂದ ಬಂದು ಎಲ್ಲಕಡೆಗೂ. ಕೂಗಿದನು ಶ್ಯಾಮಲೆಯ ಸದ್ದಿಲ್ಲ ಸ್ವಲ್ಪ ಸಮಯದಲ್ಲಿ ಎಲ್ಲಿ ನೋಡಿದಲ್ಲಿ ಹಾಹಾಕಾರ ವಸಂತರಾಯನಿಗೆ ಮುಗಿಲು ಹರಿದು ಮೈಮೇಲೆ ಬಿದ್ದಂತಾಯಿತು ಮರುದಿನವೇ ಶುಭಕಾರ್ಯದದಿನ ಅತ್ತ ಇತ್ತ ಹುಡುಕಲಾಗಿ ನೆಲಮನೆಯಲ್ಲಿ ನರಳುತ್ತ ಬಿದ್ದಿರುವ ಸದ್ದು ಕೇಳಿ ಬಂದು ನೋಡಿ ಗಾಯಗೊಂಡವಳನ್ನು ಉಪಚರಿಸಿದರು ಮರುದಿವಸ ಸತ್ಯನಾರಾಯಣನ ದಯದಿಂದ ಸುಖವಾಗಿಸತ್ಯವಾಗಿ ಬಾಳುವೆ ಸಾಗಿಸುವೆಯೆಂದು ಪ್ರತಿಜ್ಞೆಮಾಡಿದರು ಅಂದಿನ ಕೈಗಡ ಸೊಸೆ ಇಂದುಮನೆಯಮಡದಿಯಾದಳು.

# ವನಿತಾ ಟ್ರೇನಿಂಗ ಕಾಲೇಜಿನ ಶೈಕ್ಷಣಿಕ ಪ್ರವಾಸ

ಅಂತೂ ಡಿಸೆಂಬರ ೧೮ ರಂದು ಮುಂಜಾನೆ ೫-೩೦ಕ್ಕೆ ಸರಿಯಾಗಿ ಮೊದಲೇ ನಿಶ್ಚಿತ ಪಡಿಸಿದಂತೆ ನಮ್ಮ ಹಾಸ್ಟೆಲ್ ಬಾಗಿಲ ಮುಂದೆ ಎಸ್ ಟಿ. ಬಸ್. ಬಂದು ನಿಂತಿತು. ಕೇಳುವದೇನು ಪ್ರವಾಸಕ್ಕೆ ಹೊರಡುವ ವಿದ್ಯಾರ್ಥಿನಿಯರ ಉತ್ಸಾಹ, ಮೋಟರ ಬಂದದ್ದು ಕಂಡೇ ಅವರಿಗೆ ತಾವು ಪ್ರವಾಸ ಮುಗಿಸಿ ಬಂದಷ್ಟು ಆನಂದ. ಆನಂದದ ಭರದಲ್ಲಿ ಕುಣಿದಾಡುವ ಅವರನ್ನು ಒಂದು ಸ್ಥಿಮಿತಕ್ಕೆ ತರಬೇಕಾದರೆ ಸೀಟಿಯ ೪-೬ ಕರ್ಕಶ ಶಬ್ದಗಳನ್ನು ಕೇಳಬೇಕಾಯ್ತು, ಅಂತೂ ಬಸ್ಸು ಏರುವ ಮೊದಲು ಎಲ್ಲ ವಿದ್ಯಾರ್ಥಿನಿಯರಿಗೂ ಮುಂದೆ ಪ್ರವಾಸದಲ್ಲಿ ನಡೆದುಕೊಳ್ಳಬೇಕಾದ ರೀತಿ, ನೀತಿಗಳ ಸಾಧಾರಣ ಅರಿವನ್ನು ಸ್ವಲ್ಪ ಕಟುವಾಗಿಯೇ ಕೊಟ್ಟು, ಬಸ್ ಏರಲು ಅಪ್ಪಣೆ ಕೊಡಲಾಯಿತು. ಅಂತೂ ೪೪ ಜನರಿಂದ ಬಸ್ ತುಂಬಿ ಒಮ್ಮೆ 'ಜೈ' ಕಾರದಿಂದ ಶಾಲೆಯ ಮುಂಬಾಗಿಲನ್ನು ಬಿಟ್ಟು ಹೊರಟಿತು. ಹಾದಿಯಲ್ಲೇ ಇರುವ ಹನುಮನ ಗುಡಿಯ ಬಳಿ ಬಸ್ ನಿಲ್ಲಿಸಿ, ದೇವರಿಗೆ ಭಕ್ತಿ ಪೂರ್ವಕ ನಮಸ್ಕರಿಸಿ, ಪ್ರವಾಸವು ಸುಖದಾಯಕವಾಗಲೆಂದು ಅವನಲ್ಲಿ ಅನನ್ಯಭಾವನೆಯಿಂದ ಪ್ರಾರ್ಥಿಸಿ ಪುನಃ ಬಸ್ ಏರಿ ಹೊರಟೆವು. ಹೊರಡುವಾಗ ಸರಿಯಾಗಿ ೬-೩೦ ಹೊಡೆದಿತ್ತು. ಎಲ್ಲರ ಮುಖದಲ್ಲೂ ಆನಂದ, ತಾವೇನೋ ಗೆದ್ದು ಬಂದ ಗೆಲುವು. ಹಾಗೇ ಸಾಗಿತು. ಬಸ್ ಮುಂದೆ ಸಾಗಿ, ಅನೇಕ ಊರು, ಹಳ್ಳಿಗಳನ್ನು ಹಿಂದೆ ಹಾಕುತ್ತ ಮೊದಲೇ ವಿಚಾರ ಮಾಡಿದಂತೆ ಹರಿಹರಕ್ಕೆ ಬಂದಿಳಿದೆವು ಮುಂಜಾವಿನ ಉಪಹಾರಕ್ಕೆಂದು ಆಗಾಗಲೇ ಸುಮಾರು ಹತ್ತು ಹೊಡೆಯಲು ಬಂದಿತ್ತು. ಅಲ್ಲಿಂದ ಅಲ್ಪೋಪಹಾರ ತೀರಿಸಿ ಮುಂದೆ ಊಟದ ವೇಳೆಗೆ ಅಂದರೆ ೧೨-೩೦ ಗಂಟೆಗೆ ಚಿತ್ರದುರ್ಗಕ್ಕೆ ತಲ್ಪಿದೆವು. ಊರ ಬಾಗಿಲಿಗೆ ಬಂದೊಡನೆ ನಮಗೆ ಮೊದಲು ಕಂಡುದು ಅಲ್ಲಿನ ವಿಶಾಲವಾದ ಮುರುಘಾರಾಜೇಂದ್ರ ದೇವಸ್ಥಾನ. ಶಾ. ಶ. ೧೭೧೧ ರಲ್ಲಿ ಕಟ್ಟಿದ ಈ ಕಟ್ಟಡವು ಇನ್ನೂ ಈಗ ತಾನೇ ಕಟ್ಟಿದ್ದೇನೋ ಎನ್ನುವಂತಿದೆ ಅಲ್ಲಿ ಮಹಡಿಯ ಮೇಲೆ ನಿಂತು ಊರನ್ನು ನೋಡಲು ದೃಷ್ಟಿ ಹಾಯಿಸಿದಾಗ, ಅಲ್ಲಿನ ಒಂದೊಂದು ಕಲ್ಲಿನ ತುಣುಕೂ ನಮ್ಮ ಕರ್ನಾಟಕದ ಇತಿಹಾಸವನ್ನು ಸಾರಿ ಸಾರಿ ಹೇಳುವಂತೆ ಭಾಸವಾಗುತ್ತಿತ್ತು ಅಲ್ಲಿನ ಪ್ರತಿಯೊಂದು ಬುರುಜು, ಬಿತೇರಿಗಳನ್ನು ನೋಡಿ ಬರುವ ಹಂಬಲ ನನಗಿದ್ದರೂ ಸಹ ನಮ್ಮ ಪೂರ್ವಯೋಜನೆ ಪ್ರಕಾರ ಅಲ್ಲಿ ಬಹಳ ವೇಳೆ ಕಳೆಯಲು ಬರುವಂತಿರಲಿಲ್ಲವಾದ್ದರಿಂದ ಎತ್ತರದ ಮಹಡಿಯ ಮೇಲೆಯೇ ನಿಂತು ಒಮ್ಮೆ ನಮ್ಮ ಕರ್ನಾಟಕ ಸಿಂಹ, ಸಿಂಹಿಣಿಯರೆಲ್ಲರನ್ನೂ ಹೃತ್ಪೂರ್ವಕ ಮನದಲ್ಲೇ ಧ್ಯಾನಿಸಿ ಸುಮ್ಮನಾಗಬೇಕಾಯಿತು.

ದೂರದಿಂದಲೇ ಕಾಣುವ ಏಳು ಸುತ್ತಿನ ಕೋಟೆ, ನಾವೇ ಕೆಣಕೆಣಕಿ ಕೇಳಿದಾಗ ಕೈಬೆರಳುಗಳಿಂದ ಅಲ್ಲಿಯ ನಿವಾಸಿಗಳು ತೋರಿಸುತ್ತಿದ್ದ ಓಬವ್ವನ ಒನಕೆ ಕಿಂಡಿ, ಆನೆ ಹಚ್ಚಿ ತಿರುಗಿಸುತ್ತಿದ್ದ ಮದ್ದು ಪುಡಿಮಾಡುವ ದೊಡ್ಡ ಬೀಸುವ ಕಲ್ಲು, ಮದಕರಿ ನಾಯಕನ ಹಾಳು ಬಿದ್ದ ಅರಮನೆ. ಅಂಕಳೀ ಮಠದ ಗುಡಿ ಎಲ್ಲವನ್ನೂ ನಿಂತಲ್ಲೇ ಕಣ್ಮುಂದೆ ಚಿತ್ರಿಸಿಕೊಂಡು ನೋಡಿದಾಗ ಅದೇ ನಮಗೆ ಸಾರಿ ಹೇಳಿತು. ಚಿತ್ರದುರ್ಗದ ಇತಿಹಾಸದ ಗತವೈಭವವನ್ನು, ರಣಕಲಿಗಳ ಪ್ರತಾಪವನ್ನು, ಸಾವಿರಾರು ವರುಷಗಳ ಹಿಂದಿನ ಹೂತುಹೋಗಿರುವ ಪಟ್ಟಣವೊಂದರ ನೆನಪನ್ನು,

ಮುಂದೆ ನಾವೇ ತಂದ ಊಟವನ್ನು ಮಠದ ವಿಶಾಲವಾದ ಹೊರ ಆವಾರದಲ್ಲಿ ಸ್ವೀಕರಿಸಿ, ಮಠದವರು ಕೊಟ್ಟ ತಣ್ಣನ್ನ ಮಜ್ಜಿಗೆ ಕುಡಿದು ಮುಂದೆ ಸಾಗಿದೆವು. ಸಂಜೆ ೫ ಕ್ಕೆ ತುಮಕೂರಿನಲ್ಲಿ ಕಾಫಿ ಸೇವಿಸಿ ರಾತ್ರಿ ೮ ಕ್ಕೆ ಸರಿಯಾಗಿ ಬೆಂಗಳೂರು ತಲುಪಿದೆವು ಹಾದಿಯಲ್ಲಿಯೇ ನಮ್ಮ ಸೋದರರು ಭೆಟ್ಟಿಯಾಗಿ ನಮ್ಮನ್ನು ನಿರ್ದಿಷ್ಟಪಡಿಸಿದ ಶ್ರೀರಾಮಪುರದ ೯ ನೇ ಕ್ರಾಸ್‌ನಲ್ಲಿರುವ ಹರಿಜನ ಸೇವಕ ಸಂಘದ ಕಟ್ಟಡಕ್ಕೆ ಕರೆತಂದರು. ಅಲ್ಲಿನ ಒಂದು ವಿಶಾಲವಾದ ಕೋಣೆಯನ್ನು ನಮಗಾಗಿಯೇ ತೆರವು ಮಾಡಿಕೊಟ್ಟಿದ್ದರಿಂದ ನಮ್ಮ ೪೪ ಜನರ ವಸತಿಯ ವ್ಯವಸ್ಥೆಯು ಬಹಳ ಚನ್ನಾಗಿ ಆಯಿತು ಆ ಆಶ್ರಮದ ವ್ಯವಸ್ಥಾಪಕರೂ, ಅವರ ಪತ್ನಿಯವರೂ ನಮ್ಮ ಒಡಹುಟ್ಟಿದವರಿಗಿಂತಲೂ ಚನ್ನಾಗಿ ನಮ್ಮನ್ನು ನೋಡಿಕೊಂಡು ಆದರೋಪಚಾರ ಮಾಡಿದ್ದರಿಂದ, ನಮ್ಮಲ್ಲಿ ಕೆಲವರು ಬೆಂಗಳೂರನ್ನು ಬಿಟ್ಟು ಹೋಗುವದೇ ಬೇಡವೆಂಬ

ವಿಚಾರದಲ್ಲಿದ್ದಂತೆ ತೋರಿತು. ಆದರೆ ಕಳೆಯಲು ನಮಗೆ ವೇಳೆಯೇ ಇಲ್ಲದ್ದರಿಂದ ಅಲ್ಲಿ ನೋಡುವ ಸ್ಥಳಗಳನ್ನೆಲ್ಲಾ ಒಂದೇ ದಿನದಲ್ಲಿ ನೋಡಿ ಮುಗಿಸಲೇ ಬೇಕಾಯಿತು.

ಅಲ್ಲಿ ಗಾಜಿನ ಕಾರಖಾನೆ, ಬಲ್ಬ ಕಾರಖಾನೆ, ವಿಧಾನ ಸೌಧ, ಲಾಲಬಾಗ, ಮ್ಯೂಜಿಯಂ, ಮುಂತಾದವುಗಳನ್ನು ಸುತ್ತಾಡಿ, ಅಲ್ಲಲ್ಲಿ ಫೋಟೋಗಳನ್ನು ಹೊಡೆದುಕೊಂಡು, ಮನೆಗೆ ಬಂದು ಸೇರಬೇಕಾದರೆ ಸಂಜೆ ೪ ಘಂ. ಆಗಿತ್ತು. ನನ್ನ ತಂಗಿಯು ಆಶ್ರಮದ ಯಜಮಾನಿ ಮಾಡಿಟ್ಟ ಅಡಿಗೆ ಯೆಲ್ಲವೂ ಖಾಲಿಯಾಗಿ, ಹೊಟ್ಟೆ ಭರ್ತಿಯಾದೊಡನೆ, ಸುತ್ತಾಡಿ ದಣಿದ ಎಲ್ಲರೂ ಅಲ್ಲಲ್ಲೇ ಉರುಳಿ ಗೊರಕೆಹಾಕಹತ್ತಿದರು.

ಮಾರನೇ ದಿನ ಅಲ್ಲಿಂದ ಶ್ರೀರಂಗಪಟ್ಟಣದಲ್ಲಿ ಇಳಿದು ಮೈಸೂರಿಗೆ ಹೊರಡುವ ಕಾರ್ಯಕ್ರಮುಹಾದಿಯಲ್ಲೇ ೧೪ ಮೈಲು ಗಳ ಮೇಲೆ ಕೆಂಗೇರಿ ಆಶ್ರಮವಿದೆ. ಹೋಗುವಾಗ ಅಲ್ಲಿ ಇಳಿದು ಅಲ್ಲಿ ಆಶ್ರಮಕ್ಕೆ ಭೆಟ್ಟಿ ಇತ್ತು, ಮುಂದೆ ಹೊರಡುವ ವಿಚಾರ ಮಾಡಿದ್ದೆವು. ಬೆಂಗಳೂರು ಬಿಡುವಾಗ ಮುಂಜಾವು ೫ ಗಂಟೆ, ಹಾದಿಯಲ್ಲಿ ಕೆಂಗೇರಿ ಬೋರ್ಡ ಬಂದರೆ ಬಸ್ ಚಾಲಕರಿಗೆ ನಿಲ್ಲಿಸಲು ಹೇಳಿ ಬಸ್ ಒಳಗೆ ಕುಳಿತಿದ್ದೆವು. ನಿದ್ರೆ ಕಣ್ಣಿನಲ್ಲೇ ಇದ್ದ ನಮಗೆ ಬೋರ್ಡ ಕಾಣಿಸಲಿಲ್ಲ. ಆದರೂ ಕಿಟಕಿಯಲ್ಲಿ ಹಣಕಿ ಹಣಕಿ ನೋಡೇ ನೋಡುತ್ತಿದ್ದೆ. ಎಷ್ಟು ಹೊತ್ತಾದರೂ ಬೋರ್ಡೇ ಕಾಣದ್ದರಿಂದ ಡ್ರಾಯವ್‌ರರಿಗೆ ವಿಚಾರಿಸಲಾಗಿ "ಹರೇ, ಮರೆತಿ, ಆ ಬೋರ್ಡಬಿಟ್ಟು ಈಗ ಗಾಡಿ ೧೫ ಮೈಲು ಮುಂದೆ ಬಂದಿದೆ" ಎಂದರು. ಕೇಳಿ ತೆಪ್ಪಗೆ ಕುಳಿತೆ.

ಮುಂಜಾನೆ ೬-೩೦ ಎನ್ನುವದರೊಳಗಾಗಿ ಶ್ರೀರಂಗ ಪಟ್ಟಣದ ಹೆಬ್ಬಾಗಿಲ ಗೋಪುರಗಳು ಕಾಣಿಸಿದವು ಇತಿಹಾಸ ಪುಸ್ತಕದಲ್ಲಿ ನೋಡಿದ ಚಿತ್ರದ ನೆನಪಿನಿಂದ ವಿದ್ಯಾರ್ಥಿನಿ ಯರು "ಶ್ರೀರಂಗ ಪಟ್ಟಣ, ಶ್ರೀರಂಗ ಪಟ್ಟಣ" ಎಂದು ಚೀರಿದರು. ಉತ್ಸಾಹದಿಂದ ಮೊದಲು ದರಿಯಾ ದೌಲತ್ತಿನ ಬಳಿ ಇಳಿದು, ಅಲ್ಲಿ ಅಲ್ಪೋಪಹಾರ ತೀರಿಸಿ, ಆ ಕಟ್ಟಡವನ್ನು ನೋಡಿ ಬಂದೆವು. ಅನೇಕ ಚಿತ್ರಕಲೆಗಳಿಂದ ಕೂಡಿದ ಭವ್ಯ ಕಟ್ಟಡವು ತಾನೇ ತಾನಾಗಿ ತನ್ನ ವೈಶಿಷ್ಟ್ಯವನ್ನು ಕೇಳಿದವ ರಿಗೆ ಹೇಳುವ ರೀತಿಯಲ್ಲಿ ನಿಂತುಬಿಟ್ಟಿವೆ. ಅದರ ಪ್ರತಿಯೊಂದು ಗೋಡೆ, ಕಂಬ, ಮೇಲ್ಮಾಳಿಗೆಗಳೂ ಕಲಾಕುಸುರಿನಿಂದಲೇ ತುಂಬಿವೆ. ಹೊರ ಆವಾರದಲ್ಲಂತೂ ಟೀಪುವಿನ ಕಾಲದ ಐತಿ ಹಾಸಿಕ ಯುದ್ಧಗಳೆಲ್ಲದರ ಚಿತ್ರಗಳು ನಿಂತು, ಗತಕಾಲದ ಇತಿ ಹಾಸವನ್ನು ಸಾರಿ ಸಾರಿ ಹೇಳುತ್ತಿವೆ.

ಅದನ್ನು ನೋಡಿ ಮುಂದೆ ಕಾವೇರಿ ನದಿ ದಂಡೆಗೆ ನಡೆ ದೆವು. ಜುಳುಜುಳು ಹರಿಯುವ ನದಿಯನ್ನು ಬಿಟ್ಟು ಬರಲು ಯಾರ ಮನಸ್ಸು ತಾನೇ ಒಪ್ಪೀತು! ಆದರೂ ಬಿಟ್ಟು ಬರಲೇ ಬೇಕಲ್ಲ!! ಮುಂದಿನ ಕಾರ್ಯಕ್ರಮದ ನೆನಪಾಗಿ ಲಗುಬಗೆ ಯಿಂದ ಆ ಸ್ಥಳ ಬಿಟ್ಟು ಹೊರಟೆವು, ಸ್ನಾನಮಾಡಿ ಪುಣ್ಯಗಳಿ ಸಬೇಕೆಂದಿದ್ದ ಹಲಕೆಲವರ ಮನ ನೋಯಿಸಿ, ಅಲ್ಲಿಂದ ಮುಂದೆ ಟೀಪು ಹಾಗೂ ಹೈದರನ ಗೋರಿ, ಅಲ್ಲಿ ಹೋಗುವಾಗ ಇತಿಹಾಸದಲ್ಲಿ ಬಂದ "ನನ್ನ ಗೋರಿಯನ್ನು ನೋಡಲು ಬಂದ ವರನ್ನು ನಾನು ಅಭಿಮಾನದಿಂದ ಅಪ್ಪಿಹಾಕಿಕೊಳ್ಳುವೆನು" ಎಂಬ ಒಂದು ವಾಕ್ಯದನೆನಪಾಗಿ ವಿದ್ಯಾರ್ಥಿನಿಯರು ಆ ವಾಕ್ಯದ ಮೇಲೆ ಪೃಚ್ಛಾಪ್ರಪೃಚ್ಛೆ ಮಾಡುತ್ತಾ, ವಿನೋದವಾಗಿ ನಗುತ್ತಿದ್ದರು. ಭವ್ಯವಾದ ಕಟ್ಟಡದಲ್ಲಿ ಮೂರು ಗೋರಿಗಳು ಸಾಲಾಗಿವೆ ಒಂದು ಹೈದರನದು, ಇನ್ನೊಂದು ಅವನ ಹೆಂಡತಿ, ಟೀಪುವಿನ ತಾಯಿ, ಮೂರನೇಯದು ಟೀಪುವಿನದು.

ಅಲ್ಲಿಂದ ಮುಂದೆ ಶ್ರೀರಂಗನಾಥನ ಗುಡಿಗೆ ತೆರಳಿದೆವು. ಬಸ್‌ಬಿಟ್ಟು ಇಳಿದೊಡನೆಯೇ ನಾಲ್ಕೆಂಟು ಚಿತ್ಕಾರಗಳು ಬೇರೆ ಬೇರೆ ಸ್ವರಗಳಲ್ಲಿ ಕೇಳಿಸಿದವು. ಏನೆಂದು ಕುತೂಹಲದಿಂದ ನೋಡಿದೆವು. ಹೂ, ಹಣ್ಣುಕಾಯಿ ಮಾರಾಟಗಾರರ ಪೈ-ಪೋಟಿ, ಪ್ರಚಾರ, ಅವರಲ್ಲೇ ಒಬ್ಬರ ಕಡೆ ದೇವತಾರ್ಚನೆಯ ಸಾಮಾನುಗಳನ್ನು ತೆಗೆದುಕೊಂಡು ದೇವ ಮಂದಿರದೊಳಗೆ ಹೊಕ್ಕೆವು. ಯಾವಾಗಲೂ ನೂಕುನುಗ್ಗಲು, ಒಂದೇ ಸವನೆ ಜನರು ಊರೂರಿಂದ ಬಂದು ಹೋಗುವದು ನಡದೇ ಇರುತ್ತ ದೆಂದು ತೋರುತ್ತದೆ. ಜನರ ಗದ್ದಲವೆಲ್ಲವೂ ಕಡಿಮೆಯಾದ ಮೇಲೆ ಹೊಕ್ಕೆವು. ಆಹಾ! ಏನದು ಭವ್ಯಮೂರ್ತಿ, ೮ ಉದ್ದ ಈ ಉದ್ದ ಹಾಯಾಗಿ ಮಲಗಿ ಬಿಟ್ಟಿದ್ದಾನೆ. ಶೇಷ ಶಾಯಿಯಾಗಿ ಮೂರ್ತಿಯ ಮುಖದ ಕಳೆಯೇನು! ಮಲ ಗಿರುವ ಚಂದವೇನು!! ಸದಾ ಪಾದ ತೊಳೆವ ಕಾವೇರಿ ಕಾಲ್ಬದಿಯಲ್ಲಿ, ಇನ್ನೂ ಹಾಗೆಯೇ ನೋಡುತ್ತಿರಬೇಕೆಂಬ ಬಯಕೆ ನಮ್ಮೆಲ್ಲರಿಗೂ, ಆದರೆ ಸಾಧ್ಯವಿಲ್ಲ. ಆಗಲೇ ನೆನ ಪಾಯಿತು. ನನಗೆ "ಕಣ್ಣಾಳಿದ್ಯಾತಕೋ ಕಾವೇರಿ ರಂಗನ ನೋಡದ, ಕಣ್ಣೊಳಗೆ ಮಂಗಳ ಮೂರುತಿ ರಂಗನ ಹರಿಪಾ ದೋದಕ ಸಮ ಕಾವೇರಿ, ವಿರಿಜನದಿಯಲಿ ಸ್ನಾನವ ಮಾಡಿ" ಪರಮ ವೈಕುಂಠ ರಂಗನ ಮಂದಿರ| ಪರಿವಾರವನ್ನು ನೋಡದ ಎಂಬ ದಾಸರ ಪದ ಮನದಲ್ಲೇ ಗುಣಗುಣಿಸಿದೆ. ಗುಡಿಯಿಂದ ಹೊರಗೆ ಬಂದು ಎಡಬದಿಗೆ ಇರುವ ರಸ್ತೆಯಲ್ಲಿ ನಡೆದರೆ ಕೋಟೆಯ ಗೋಡೆ ಕಾಣಿಸುತ್ತವೆ. ಅಲ್ಲೇ ಮುಸಲ್ಮಾನರ

ಕಾಲದಲ್ಲಿ ಕೈಗೆ ಸಿಕ್ಕ ವೈರಿಗಳನ್ನಿಡುವ ಸ್ಥಳವಂತೆ, ಅಲ್ಲಿನ ನಿವಾಸಿಗಳು ಅದನ್ನು ತೋರಿಸಿದರು. ದೊಡ್ಡ ತಗ್ಗಿನಲ್ಲಿ ದೊಡ್ಡ ಹಜಾರ, ಸುತ್ತಲೂ ಗೋಡೆ, ನಡುನಡುವೆ ಕಲ್ಲಿನ ಕಂಬಗಳು ಅಲ್ಲೇನೋ ಶತ್ರುಗಳನ್ನು ನುಗಿಸಿ, ನೀರು ತುಂಬಿ ಬಿಡುತ್ತಿದ್ದರಂತೆ. ಹೀಗೆ ಏನೇನೋ ಹೇಳಿದರು ಆದರೆ ಅದನ್ನು ಸರಿಯಾಗಿ ವಿವರಿಸುವ ಮಾರ್ಗದರ್ಶಕರಾರೂ ಅಲ್ಲಿರಲಿಲ್ಲ. ಹೀಗಾಗಿ ಅದು ಸರಿಯಾಗಿ ತಿಳಿಯಲಿಲ್ಲ. ಅಲ್ಲಿಂದ ಮುಂದೆ ಕೋಟೆಯೊಡೆದು ಶತ್ರುಗಳು ಒಳಬಂದ ಸ್ಥಳ ಹಾಗೂ ಟೀಪುವಿನ ಮೃತ ಶರೀರವು ಸಿಕ್ಕ ಸ್ಥಳಗಳನ್ನು ನೋಡಿಕೊಂಡ ಮೈಸೂರಿನ ಹಾದಿ ಹಿಡಿದು ಹೊರಟೆವು.

ಸುಮಾರು ೧೨-೩೦ ಗಂಟೆಗೆ ಮೈಸುರು ತಲ್ಪಿದೆವು. ಹಾದಿಯಲ್ಲೇ ಸಿಗುವ 'ಸೆಂಟ ಫಿಲೋಮಿನ, ಚರ್ಚನ್ನು ನೋಡಿಕೊಂಡು ಚಾಮುಂಡಿ ಬೆಟ್ಟದ ದಾರಿಹಿಡಿದೆವು. ತನ್ನ ಭಕ್ತರ ಶಕ್ತಿ ಭಕ್ತಿಗಳು ಎಷ್ಟಿರುವದೆಂಬದನ್ನು ಮೇಲೆನಿಂತು ಪರೀಕ್ಷಿಸುವಳೇನೋ ಎಂಬಂತೆ, ಉರಿನಿಂದ ೬ ಮೈಲುದೂರದಲ್ಲಿ ಸುತ್ತುಬಳಸುವ ಹಾದಿಯ ಗುಡ್ಡದಮೇಲೆ ಹೋಗಿ ನಿಂತು ಬಿಟ್ಟಿದ್ದಾಳೆ ಚಾಮುಂಡೇಶ್ವರಿ, ನಾವು ಬಸ್ಸಿನಲ್ಲೇ ಮೇಲೇರಿದೆವಾದ್ದರಿಂದ ಆ ದೇವಿಗೆ ನಮ್ಮ ಶಕ್ತಿಯ ಅರಿವಾಗಿರಬೇಕು. ಇನ್ನು ಭಕ್ತಿಯ ಪ್ರಶ್ನೆಯೊಂದೇ. ಆದರೆ ಅಲ್ಲಿನ ಹಣ್ಣುಕಾಯಿ ಮಾಡಿಸುವ ರೀತಿ, ತೀರ್ಥದ ಹೆಸರಿನಲ್ಲಿ ಹಣಗಳಿಸಲು ನಿಲ್ಲಿಸಿದ ಸಣ್ಣ ಸಣ್ಣ ಮಕ್ಕಳ ಸಾಲು, ಇನ್ನು ಒಂದೆರಡು ಪ್ರಸಂಗಗಳನ್ನು ನೋಡಿ, ದೇವರ ಹೆಸರಿನಲ್ಲಿ ಗಳಿಸುವ ಹಣದ ಗೌರವವೇ ಎದ್ದು ಕಾಣಿಸಿತೇ ಹೊರತು ಅಲ್ಲಿ ಭಕ್ತಿಗೆ ಎಡೆ ಇಲ್ಲವೆಂಬಂತೆ ತೋರಿತು. ಹೊರಕಣ್ಣಿಗೆ ಕಾಣುವ ಮೂರ್ತಿಯನ್ನು ನೋಡಿ ಕಣ್ಣು ತಣಿಸಲು ಗುಡಿಯೊಳಕ್ಕೆ ಹೋದಂತಾಯ್ತು. ಅಲ್ಲಿಂದ ಹೊರ ಬಂದು ಅಲ್ಲೇ ಹಸಿದು ಕುಳಿತ ನಮ್ಮಲ್ಲನೇಕ ವಿದ್ಯಾರ್ಥಿನಿಯರ ಸಂಕಟ ಕಂಡು,"ಅಯ್ಯೋ ದೇವಿ ! ನೀನಿಲ್ಲಿ ಕೂತು ನನ್ನನ್ನು ಒಳಗೆ ಕಳಿಸಿದೆಯಾ ಕಣ್ಣಿಗೆ ಹಬ್ಬಮಾಡಿಕೊಳ್ಳಲು" ಎಂಬ ಉದ್ಗಾರ ಮನದಲ್ಲೇ ಮೂಡಿತು. ಅವರೆಲ್ಲರಿಗೂ ಅನ್ನಹಾಕಿ ಅವರು ಗೆಲುವಾದ ಮೇಲೆ ಹೃದಯವು ಹೇಳಿತು, " ಇದೀಗ ನಿನ್ನ ಶಕ್ತಿ ದೇವಿಗೆ ನೀನು ಅರ್ಚಿಸಿದೆ." ಎಂದು ಹೃದಯಕ್ಕೆ ಶಾಂತಿ ಸಿಕ್ಕಿತು. ಎಲ್ಲರೂ ಊಟಮುಗಿಸಿ, ಅಂದಿನ ವಸತಿಯ ವ್ಯವಸ್ಥೆಗಾಗಿ ಬೆಟ್ಟ ಇಳಿದು ಮೈಸೂರಿಗೆ ಬಂದು ನಮಗಾಗಿಯೇ ಕಾಯುತ್ತಿದ್ದ ನನ್ನ ಸೋದರನೊಂದಿಗೆ ವಸತಿ ಜತವರದ ಕಡೆಗೆ ಹೊರಟೆವು. ಮೈಸೂರಿನಲ್ಲಿ ಅನೇಕ ಛತ್ರ ಛತ್ರಗಳಿದ್ದರೂ ಅವು ಬಡವರಿಗಾಗಿ ಉಚಿತವಾಗಿ ಸಿಗುವಂತಿರಲಿಲ್ಲ. ಕಡಿಮೆ ದರದಲ್ಲಿ ಸಿಗುವ ಸ್ಥಳಕ್ಕೂ ಮದುವೆ, ಮುಂಜಿಗಳ ಗಲಾಟೆ, ಹೀಗಾಗಿ ನಮ್ಮ ಸೋದರನ ಗೆಳೆಯರೊಬ್ಬರ ಮನೆಯಲ್ಲಿಯೇ ನಮ್ಮ ವಸತಿಯು ಏರ್ಪಾಟಾಗಿತ್ತು, ಆ ಮನೆಯವರೂ ಬಲು ದೊಡ್ಡ ಮನಸ್ಸಿನವರು. ಇಲ್ಲವಾದರೆ ಮೈಸೂರಿನಂತಹ ಊರಿನಲ್ಲಿ ೪೪ ಜನರ ವಸತಿಯು ಏರ್ಪಾಡು ಉಚಿತವಾಗಿ ಆಗಬೇಕೆಂದರೆ ಹೇಗೆ ಸಾಧ್ಯ ! ಆ ಬಗ್ಗೆ ಅವರಿಗೆ ನಮ್ಮ ಸಂಗಡಿಗರೊಂದಿಗೆ ನಾವೆಲ್ಲರೂ ಉಪಕೃತರಾಗಿದ್ದೇವೆ. ವಸತಿಯ ಏರ್ಪಾಟಾದ ನಂತರ ಬೃಂದಾವನಕ್ಕೆ ಹೊರಟೆವು. ಅಲ್ಲಿನ ದೃಶ್ಯ ಕಣ್ಣಿಗೆ ಹಬ್ಬ, ನೀರಿನ ಕಾರಂಜಿ, ವಿಧವಿಧದ ಬಣ್ಣದ ವಿದ್ಯುದ್ದೀಪಗಳು ನೀರಿನಲ್ಲೇ ಬಿಡುವ ತಮ್ಮ ಪ್ರಕಾಶದ ಸೊಬಗು, ಇಳಿ ಜಾರಿನಿಂದ ಕೆಳಗೆ ಜಾರುವ ನೀರಿನ ಆಟ ಅದರಲ್ಲೂ ಬಣ್ಣ ಬಣ್ಣದ ವಿದ್ಯುದ್ದೀಪಗಳ ಅಲಂಕಾರ, ನೀರು ನಿಂತ ಕೊಳದ ದಂಡೆಯ ಮೇಲೆ ಕಾರಂಜಿಯಡಿಯಲ್ಲಿ ಗರಿಗೆದರಿ ಮುಚ್ಚುವ ನೀರುಹಕ್ಕಿ, ಒಂದೇ ಸಮನೆ ಗರಗರ ತಿರುಗುವ ಹುಡುಗಿ, ಪಾತರಗಿತ್ತಿಗಳು ತಮ್ಮ ಬಿನ್ನಾಣವನ್ನು ಬಂದ ಜನರಿಗೆ ತೋರಿಸಿ ಜಂಬ ಬಡಿಯುತ್ತಿರುವ ಭಂಗಿ ಈ ಎಲ್ಲ ದೃಶ್ಯಗಳನ್ನು ನೋಡಿನಮ್ಮೆಲ್ಲರ ಹಿರಿಯ ತಾಯಿ ತಂದಿಯರಾದ ವಿಶ್ವೇಶ್ವರಯ್ಯನವರ ಬಗ್ಗೆ ಅಭಿಮಾನ ಉಕ್ಕೇರಿ ವಿದ್ಯಾರ್ಥಿನಿಯರೆಲ್ಲರೂ, ವಿಶ್ವೇಶ್ವರಯ್ಯನವರ ತಲೆಯ ವಿಷಯವಾಗಿಯೇ ಮಾತಾಡುತ್ತಾ ಮೈಮರೆತರು.

ಅಂದಿನ ಸಂಜೆಯ ಊಟ ವೆಲ್‌ಕಂ ಕಾಫಿ ಕ್ಲಬ್ (ಬ್ರಾಹ್ಮಣರ ಭೋಜನ ಶಾಲೆ) ನಲ್ಲಿ. ಆದರ ಮಾಲಕರುಬಲು ಗೆಲುವಿನ ಸ್ವಭಾವದವರು. ಸರಳರೂ, ಕಲಾಪ್ರೇಮಿಗಳೂ, ಸಂಘ ಜೀವಿಗಳೂ ಇದ್ದಂತೆ ಕಂಡದ್ದರಿಂದ ಅವರೊಂದಿಗೆ ನಾವು ಶಿಕ್ಷಕ ಶಿಕ್ಷಕಿಯರೆಲ್ಲರೂ ಆಪ್ತ ಬಂಧುಗಳಂತೆ ಮಾತುಕತೆಯಾಡಿದೆವು. ನಾನೂ ಎಷ್ಟೋ ಭೋಜನ ಮಂದಿರಕ್ಕೆ, ಕಾಫಿ ಕ್ಲಬ್ಬುಗಳಿಗೆ ಹೋಗಿದ್ದೇನೆ. ಮಾಲಕರೊಂದಿಗೆ ಮಾತುಕತೆಯಾಡಿದ್ದೇನೆ. ಆದರೆ ಇವರಷ್ಟು ಸರಳ, ಸಾದಾ ಜನರು ನನಗೆಲ್ಲ ಸಿಕ್ಕಿರಲಿಲ್ಲ. ಪರಿಚಯವಾದ ಮೊದಲದಿನವೇ ಮಾತಾಡಿಸುವ ಹಂಬಲವಾದರೂ, ಅಧಿಕ ಪ್ರಸಂಗಿ ಎಂದಾರೆಂಬ ವಿಚಾರದಿಂದ ಸುಮ್ಮನಿದ್ದೆ. ಮಾರನೇ ದಿನ ಹಾಗೇ ಆ ಮಾತು, ಈ ಮಾತುಗಳಾಡುತ್ತಿರುವಾಗ ಅವರೊಬ್ಬ ಸಿನೇಮಾ ಆರ್ಟಿಸ್ಟರೆಂದು ತಿಳಿದು, ಅವರೊಂದಿಗೆ ಹೆಚ್ಚು ಮಾತಾಡುವ ಹಂಬಲವಾಯ್ತು. ಒಂದೊಂದೇ ವಿಚಾರಿಸುತ್ತಿರಲಾಗಿ ಅದರ ಹೆಸರು, ರಾಜೇಂದ್ರ ಪ್ರಸಾದರೆಂದೂ, ಕನ್ನಡ ಸಿನೇಮಾ 'ವರದಕ್ಷಿಣೆ' ಹಾಗೂ ಇತರ ಎರಡು

ಸಿನೇಮಾಗಳಲ್ಲಿಯೂ, ಇಂಗ್ಲೀಷ ಚಿತ್ರಗಳಲ್ಲೂ ಪಾತ್ರ ಮಾಡಿರುವದಾಗಿ ತಿಳಿಯಿತು. ಮೈಸೂರಿನಲ್ಲಿ ನಡೆದ ಭೋಜನ ಪ್ರದರ್ಶನದ ಮೇಲಾಟದಲ್ಲಿ ಇವರ ಭೋಜನಾಲಯವೇ ಮೊದಲ ಬಹುಮಾನ ಪಡೆದಾಗ ತೆಗೆದ ಛಾಯಾಚಿತ್ರಗಳನ್ನು ಕೆಲವೊಂದು ದೇಶಭಾಷೆಯ ಅಥವಾ ಕೆಲವೊಂದು ವ್ಯಕ್ತಿಯ ಉಡಿಗೆ ತೊಡಿಗೆಗಳನ್ನು ಧರಿಸಿ ನಿಲ್ಲುವ ಮೇಲಾಟದಲ್ಲಿ ಮೂರು ಭಾರಿ ಇವರೇ ನೋಲ್ನಂಬರ್ ಪಡೆದ ಛಾಯಾ ಚಿತ್ರಗಳನ್ನೂ ಸಿನೇಮಾದಲ್ಲಿ ಕಳ್ಳನ ಪಾತ್ರದಲ್ಲಿ ಕಾಣಿಸಿಕೊಂಡ ಛಾಯಾ ಚಿತ್ರವನ್ನೂ ಕಂಡು ನಿಜವಾಗ ಅವರ ಕಲೆಗೆ ನನ್ನ ತಲೆಬಾಗಿತು. ಕನ್ನಡದ ಬಗ್ಗೆ ಅವರಿಗಿರುವ ಅಭಿಮಾನ, ಕನ್ನಡಿಗರಿಗರಲ್ಲಿರುವ ಕಲೆಗೆ ಪ್ರೋತ್ಸಾಹನ ಸಿಗದೆ ಹಿಂದುಳಿದದ್ದರ ಬಗ್ಗೆ ಅವರಿಗಾಗಿರುವ ದುಃಖ ಈ ಅನ್ಯಾಯವಾಗದಂತೆ ಮಾಡಲು ಅವರು ಕೈಗೊಂಡ ಸಾಹಸ ಶೌರ್ಯ ಇವುಗಳನ್ನು ಕಂಡು ಯಾವ ಕನ್ನಡಿಗರಿಗೆ ತಾನೇ ಅವರ ಬಗ್ಗೆ ಆದರವೆನಿಸಲಿಕ್ಕಿಲ್ಲ! ಅಂತೂ ನಮಗೂ ಇದೇ ಭೋಜನಾಲಯವು ಊಟಕ್ಕಾಗಿ ಸಿಕ್ಕದ್ದು ಒಳ್ಳೇ ಸುಯೋಗವೇ ಎಂದು ನನ್ನ ಸಹ ಶಿಕ್ಷಕರೆಲ್ಲರೂ ಅಭಿಪ್ರಾಯ ಪಟ್ಟರು.

ಅಂದಿನ ನಮ್ಮ ಕಾರ್ಯಕ್ರಮ ಮೊದಲು ಟೆಕ್ನಿಕಲ್ ಇನ್‌ಸ್ಟಿಟ್ಯೂಟ, ಜಗನ್ಮೋಹಿನಿ ಅರಮನೆ, ಲಲಿತ ಮಹಲ್, ಝೂ ಮೊದಲಾದವುಗಳನ್ನು ನೋಡುವದು. ಟೆಕ್ನಿಕಲ್ ಇನ್‌ಸ್ಟಿಟ್ಯೂಟದ 'ಶೋ' ರೂಂ ನಲ್ಲಿ ವಿದ್ಯಾರ್ಥಿನಿಯರು ತಮಗೆ ಬೇಕಾದ ಅನೇಕ ವಸ್ತುಗಳನ್ನು ಕೊಂಡುಕೊಂಡರು

'ಝೂ'ಕೆ ಹೋದಾಗ್ಗೆ ಮೊದಲು ಬಾಗಿಲಲ್ಲಿ ಕಾಣಿಸಿಕೊಂಡ ವ್ಯಕ್ತಿ ಎಂದರೆ ಒಂದು ಗಿಡ್ಡ ಸಾಹೇಬ. ಆ ಸಾಹೇಬ ನನ್ನು ನೋಡುವ ಹುಚ್ಚು ನಮ್ಮ ಹುಡುಗಿಯರಿಗೆ. ನಮ್ಮ ವಿದ್ಯಾರ್ಥಿಯರ ಗುಂಪಿನಲ್ಲಿ ಒಬ್ಬ ಉದ್ದ ಬೆಳೆದ ವಿದ್ಯಾರ್ಥಿನಿ ಇದ್ದಾಳೆ ಇವರೆಲ್ಲರೂ ಗುಂಪುಕಟ್ಟಿ ನನ್ನನ್ನೇ ನೋಡುತ್ತಿರುವದನ್ನು ಕಂಡ ಆ ಗಿಡ್ಡ ಸಾಹೇಬ. ಆ ಉದ್ದ ವಿದ್ಯಾರ್ಥಿನಿಯ ಮುಂದೆ ನಿಂತು ತಲೆಯನ್ನು ಸಂಪೂರ್ಣ ಮೇಲೆತ್ತಿ ಅಂದರೆ ಕುತ್ತಿಗೆ, ಗಡ್ಡಗಳ ನಡುವೆ ೧೭೦° ಕೋನ ಮಾಡಿ, 'ಇಲ್ಲಿ ನನ್ನನ್ನೇನು ನೋಡಿತ್ತೀರಿ? ಅಲ್ಲಿ ಹೋಗ್ರಿ, ಒಳಗಿದೆ ನೋಡುವ ಪ್ರಾಣಿ' ಎಂದಕೂಡಲೇ ವಿದ್ಯಾರ್ಥಿನಿಯರ ಗುಂಪಿನಿಂದ 'ಖೊ'ಳ್ಳೆಂಬ ನಗು ಕೇಳಿಸಿತು. ಅಂತೂ ಆ ಮನುಷ್ಯನ ಸಹವಾಸದಿಂದ ವಿ ಗುಂಪನ್ನು ಒಳಗೆ ಕರೆದೊಯ್ಯುವದರೊಳಗಾಗಿ ಕೆಲವರನ್ನು ಬಯ್ಯುವ ಪ್ರಸಂಗ ಬಂತು ಅಲ್ಲೆಲ್ಲ ಸುತ್ತಾಡಿ ತಿರಿಗು ಊಟಕ್ಕೆ ಬರುವಾಗ ಮಧ್ಯಾಹ್ನ ೨ ಹೊಡೆದಿತ್ತು. ಊಟ ತೀರಿಸಿ, ನಮ್ಮೆಲ್ಲ ಪರಿವಾರದೊಂದಿಗೆ ಬಸ್ ಹತ್ತುವದರೊಳಗೆ ಮೂರುವರೆ ಹೊಡೆದುಹೋಗಿತ್ತು. ಅಲ್ಲಿಂದ ಸಾಧಾರಣ ನಾಲ್ಕುಗಂಟೆಗೆ ಶ್ರವಣಬೆಳಗುಳದ ಹತ್ತಿರ ಬಂದೆವು. ದೂರದಿಂದಲೇ ಗೊಮ್ಮಟೇಶ್ವರನ ಭವ್ಯ ಮೂರ್ತಿಯು ಕಾಣಿಸಹತ್ತಿತು. ವಿದ್ಯಾರ್ಥಿನಿಯರ ಕೂಗಾಟ, ಉತ್ಸಾಹವನ್ನಂತೂ ತಡೆಹಿಡಿಯುವದು ಕಠಿಣವಾಯ್ತು. ಆಳಿಗೆ ಒಂದೊಂದು ರೀತಿ ಮಾತಾಡುತ್ತಾ, ತಮ್ಮ ತಮ್ಮಲ್ಲೇ ಗೇಲಿ ಮಾಡುತ್ತಾ ಬಸ್ಸಿಗೆ ಬಸ್ಸೇ ನಗುವಿನ ಲಹರಿ ಹರಿಸುತ್ತಿದೆ ಏನೋ ಎನ್ನುವಂತೆ ಮಾಡಿದ್ದರು. ಅಂತೂ ಶ್ರವಣಬೆಳ್ಗೊಳ ಬಂದು ಗೊಮ್ಮಟೇಶ್ವರನ ಪಾದದಡಿ ಇಳಿದೆವು. ಕೆಳಗೆನಿಂತು ಮೇಲೆ ನೋಡಿದೆವು. ದೂರದಿಂದ ಕಾಣುತ್ತಿದ್ದ ಮೂರ್ತಿಯು ಮರೆಯಾಗಿ ವಿಶಾಲವಾದ ದೊಡ್ಡ ಕಲ್ಲುಗುಡ್ಡದ ಮೇಲೆ ಸಾಲಾಗಿ ಕೊರೆದ ಕಲ್ಲಿನ ಮೆಟ್ಟಲುಗಳ ಹೊರತಾಗಿ ಮತ್ತೇನೂ ಕಾಣಿಸುತ್ತಿರಲಿಲ್ಲ. ಇದನ್ನು ಕಂಡ ನಮ್ಮಲ್ಲಿಯ ಕೆಲವು ಅಶಕ್ತರೂ ಸೋಮಾರಿಗಳೂ. ಹೆದರಿದರಾದರೂ, ಹತ್ತೇತೀರಬೇಕೆಂಬ ಮನೋಬಲದಿಂದ ಎಲ್ಲರೂ ಶಕ್ತಿಯ ಸ್ಮರಣೆ ಮಾಡಿ ಮೆಟ್ಟಲೇರಲಾರಂಭಿಸಿದರು. ಹಾದಿಯಲ್ಲಿ ಹತ್ತುವವರ ಇಳಿಯುವವರ ಗದ್ದಲವೇನೂ ಅಷ್ಟಿರಲಿಲ್ಲವಾದರೂ ಡೋಲಿಯಲ್ಲಿ ಕುಳತು ಮಂದಿಯ ಕಡೆಯಿಂದ ಹೊರಿಸಿಕೊಂಡು ಹೋಗುವ ಕೆಲವು ರಸಿಕ ವೃದ್ಧರ ಹಾಗೂ ಸೋಮಾರಿ, ಹೇಡಿ ಶ್ರೀಮಂತ ತರುಣ ತರುಣಿಯರ ಡೋಲಿಗಳು ಎದುರಾಗುತ್ತಿದ್ದವು. ಕೆಲವು ತುಂಟ ಬಾಲಿಕೆಯರು ಮೆಟ್ಟಲ ಇಕ್ಕೆಲಗಳಲ್ಲಿರುವ ನುಣುಪಾದ ಬಂಡೆಯನ್ನು ಜಾರುಬಂಡೆಯನ್ನಾಗಿ ಮಾಡಿಕೊಂಡು ಸಾದಾ ೩೦೦ ಸೋಪಾನಗಳ ಮೇಲಿನ ಅಂತರದಿಂದಲೇ ಕೆಳಗಿನವರೆಗೆ ಜಾರಿ, ಹೊಸದಾಗಿ ಬಂದವರೆದುರು ತಮ್ಮ ಪೌರುಷ ತೋರಿಸಿ ಆನಂದಿಸುತ್ತಿದ್ದರು. ಅವರಂತೆ ನಾನೂ ಇಲ್ಲವಲ್ಲ ಎಂದು ಆಗ ನನಗವರ ಬಗ್ಗೆ ಹೊಟ್ಟೆಕಿಚ್ಚು ಹುಟ್ಟಿತು. ಅಂತೂ ಆರುನೂರು ಮೆಟ್ಟಲುಗಳನ್ನೇರಿದ ಬಳಿಕ ದೇವಸ್ಥಾನದ ಹೊರಬಾಗಿಲು ಕಾಣಿಸಿತು. ಮುಂದೆ ವಿಗ್ರಹದ ಬಳಿ ಹೋಗಬೇಕಾದರೆ ಮತ್ತೂ ೨೦ ಮೆಟ್ಟಲು ಅವನ್ನು ಹತ್ತಿ ನೋಡಿದರೆ ೫೭ ಅಡಿ ಎತ್ತರದ, ಮಹೋನ್ನತ ವೈರಾಗ್ಯವೇ ಮೂರ್ತಿರೂಪಾಗಿ ನಿಂತಂತಹ ಒಂದೇಕಲ್ಲಿನಲ್ಲಿ ಕಟೆದ ಸ್ವಾಮಿಯ ನಗುಮೊಗದ ಅಜಾನುಬಾಹು ಸುಂದರ ವಿಗ್ರಹ. ನಾವೆನಿಸಿದಂತೆ, "ಮೂರ್ತಿಯು ಹೇಗೆ ಕಾಣಿಸುವದೋ" ಎಂಬ ಭಾವನೆಯು ಮಾಯವಾಗಿ, 'ಹಾಯ್, ವೈರಾಗ್ಯನಿಧಿಯೇ, ನಿನ್ನಂಥ ತ್ಯಾಗಿ

[ ೨೧ ನೆ ಪುಟಕ್ಕೆ ಸಾಗಿದ್ದು ]

# ಮುದಗದ ಕೆಂಚಮ್ಮ

ಲೇ : ಕುಮಾರಿ ಗಿರಿಜಾಬಾಯಿ ಕವಲಿ, ಬ್ಯಾಡಿಗಿ ೧ನೇ ವರ್ಷ

ನಮ್ಮ ಪುಣ್ಯಭೂಮಿಯಾದ ಭಾರತವು ಬಂಜೆಯರ ಭೂಮಿಯಲ್ಲ ಒಂದೊಂದು ಮೂಲೆಯಲ್ಲಿ ಹೊಗಳಿಸಿಕೊಳ್ಳು ವಂತಹ ಮತ್ತು ಅವರ ಕೀರ್ತಿ ಅಜರಾಮರವಾಗಿರುವಂತಹ ಒಂದೊಂದು ವ್ಯಕ್ತಿಯನ್ನು ಹುಟ್ಟಿಸುತ್ತ ನಡೆದಿದೆ. ಇದು ನಮ್ಮ ಭಾಗ್ಯವೆನ್ನಬಹುದು ಒಂದೊಂದು ವ್ಯಕ್ತಿಯು ಒಂದೊಂದು ವಿದ್ಯೆಯಲ್ಲಿ ಪಾರಂಗತರಾಗಿ ಕೀರ್ತಿಯನ್ನು ಗಳಿಸಿ ಕೊಂಡಿದ್ದಾರೆ. ಕೆಲವು ವ್ಯಕ್ತಿಗಳು ಜಗತ್ತಿನ ಪರೋಪಕಾರ ಕ್ಕಾಗಿ ತಮ್ಮ ಜೀವಗಳನ್ನೇ ಬಲಿಕೊಟ್ಟ ಕೆಲವು ಉದಾಹರಣೆ ಗಳು ನಮ್ಮ ಪುಣ್ಯಭೂಮಿ ಭಾರತದಲ್ಲಿ ಕಂಡು ಬರುತ್ತವೆ. ಇಂಥ ಅದ್ಭುತ ಕಾರ್ಯಗಳನ್ನು ನಮ್ಮಂಥ ಪಾಪಿಗಳು ಮಾಡ ದಿದ್ದರೂ ಆ ಪುಣ್ಯ ವ್ಯಕ್ತಿಗಳು ಬಲಿಕೊಟ್ಟ ಸ್ಥಾನವನ್ನು ನೋಡಿ ಆದರೂ ನಾವು ಅದರಲ್ಲಿಯ ಒಂದು ಅಂಶ ಪುಣ್ಯ ವನ್ನು ಪಡೆದು ನಾವು ಮಾಡಿದ ಒಂದು ಅಂಶ ಪಾಪವನ್ನು ಕಳೆದುಕೊಳ್ಳಬಹುದೆಂಬದು ನನ್ನ ಆಶೆ. ಇಂಥ ಬಲಿಕೊಟ್ಟ ಉದಾಹರಣೆಯು ಇದೇ ಧಾರವಾಡ ಜಿಲ್ಹೆಯ ಹಿರೆಕೆರೂರ ತಾಲೂಕೀನಲ್ಲಿರುವ ಮುದಗ ಮಾಸೂರ ಎಂಬ ಊರಲ್ಲಿ ಆಗಿ ದ್ದುಂಟು. ಆ ಮಹಿಳೆಯ ಜೀವನವನ್ನು ಸ್ವಲ್ಪದರಲ್ಲಿ ಬರೆ ಯಲು ಇಚ್ಛಿಸುತ್ತೇನೆ.

ಈ ವ್ಯಕ್ತಿ ಅಂದರೆ ಈ ಮಹಿಳೆ ಹುಟ್ಟಿದ್ದು ರಟ್ಟಿಹಳ್ಳಿ ಯಲ್ಲಿ ಒಂದು ಗೌಡರ ಮನೆತನದಲ್ಲಿ. ಇವಳ ತಂದೆಯ ಹೆಸರು ಪುಟ್ಟನಗೌಡ ಇವಳ ಹೆಸರು ದೊಡ್ಡ ಕೆಂಚಮ್ಮ ಎಂದು ಸಣ್ಣ ಕೆಂಚಮ್ಮ ಎಂಬುದು ಇವಳ ತಂಗಿಯ ಹೆಸರು. ಇವಳು ಬಹು ರೂಪವತಿ. ಅಗಲವಾದ ಬೊಗಸೆ ಕಂಗಳಿಂದಲೂ ನೀಳವಾದ ಮೂಗಿನಿಂದಲೂ, ಎತ್ತರವಾದ ಗಾತ್ರದಿಂದಲೂ, ಮತ್ತು ಕೆಂದಾವರೆಯನ್ನು ಮೀರಿಸುವ ಬಣ್ಣದಿಂದಲೂ, ಎಂಥೆಂಥ ಅಪ್ಸರೆಯರನ್ನೂ ಮೀರಿಸುವಂತಿತ್ತು ಆ ತಾಯಿಯರೂಪ. ಇಂಥ ಮಹಾತ್ಮಳು ದಿನದಿನಕ್ಕೆ ಚಂದ್ರನಂತೆ ತಂದೆಯ ಮುದ್ದಿನ ಮಣಿಯಂತೆಬೆಳೆದು ತರುಣಾವಸ್ಥೆಗೆ ಪುಟಕೊಟ್ಟಳು. ತಂದೆಯಾದ ಪುಟ್ಟನಗೌಡರು ಮಗಳ ಕಲ್ಯಾಣಕ್ಕೆ ಹಂಬಲಿಸ ತೊಡಗಿದರು. ಈ ಸಂದರ್ಭ ಒದಗಿಯೂ ಬಂದಿತು. ಅದೇ ಊರ ಹತ್ತಿರವೇ ಇರುವ ಮಾಸೂರಲ್ಲಿ ಇವಳ ಸಂಬಂಧ ನಿಶ್ಚಿತವಾಯಿತು. ಅದಾದರೂ ಗೌಡರ ಮನೆತನ. ದೊಡ್ಡ ಸ್ಥಿತಿವಂತರು. ಹಿರಿಯರಾದ ಮಲ್ಲನ ಗೌಡರಿಗೆ ನಾಲ್ಕು ಮಂದಿ ಗಂಡುಮಕ್ಕಳು. ಅದರಲ್ಲಿ ಕೊನೆಯವನಾದ ಬಸವನ ಗೌಡನಿಗೆ ನಮ್ಮ ಮಹಾತಾಯಿ ದೊಡ್ಡ ಕೆಂಚಮ್ಮನನ್ನು ನಿಶ್ಚಯಿಸಿದ್ದು ಮದುವೆ ಅದೆ ತಿಂಗಳ ಕೊನೆಯಲ್ಲಿಯೇ ನೆರೆ ವೇರಿತು. ಅದರ ಜೊತೆಗೆ ಮಹಾತಾಯಿಯ ಮನೆತುಂಬಿಸಿ ಕೊಳ್ಳುವ ಪ್ರಸ್ತವೂ ನಡೆದು ಹೋಯಿತು. ಅವಳು ಮಾವನ ಮನೆಗೆ ಹೋದನಂತರ ಮಲ್ಲನಗೌಡರ ಮನೆಯಲ್ಲಿ ಚಿನ್ನದ ಹೊಗೆ ಸೂಸತೊಡಗಿತು. ಎಲ್ಲರೂ ಕೆಂಚಮ್ಮನನ್ನು ಹೊಗ ಳುವವರೇ ಮಾವಂದಿರಾದ ಮಲ್ಲನಗೌಡರಂತೂ ಸೊಸೆಯನ್ನು ಕಂಡರೆ ಬಹಳೇ ಪ್ರೇಮ. ಈ ಪ್ರಕಾರವಾಗಿ ಕೆಂಚಮ್ಮ ಎಲ್ಲ ರೊಡನೆ ಹೊಂದಿಕೊಂಡು ಅಂಥ ದೊಡ್ಡ ಮನೆತನದಲ್ಲಿ ಯಾವ ಕೆಲಸಕ್ಕೂ ಹಿಂಜರಿಯದೆ ಸಾಂಗವಾಗಿ ನೆರೆವೇರಿಸುತ್ತ ನಡೆ ದಿದ್ದಳು. ಅದರ ಜೊತೆಗೆ ಪರಮೇಶ್ವರನ ಧ್ಯಾನವನ್ನು ಚಾಚೂ ತಪ್ಪದೇ ಮಾಡುತ್ತಿದ್ದಳು. ಅಂತೂ ಮಹಾಮಹಿಮೆ ಕೆಂಚಮ್ಮ ಮನೆಯಲ್ಲಿಯ ಎಲ್ಲ ಬಂಧು ಬಳಗದವರಿಗೂ ಮತ್ತು ದೇವರಿಗೂ ಅಚ್ಚುಮೆಚ್ಚಿನ ಪುತ್ಥಳಿಯಂತೆ ಕಾಣತೊಡಗಿದಳು.

ಆದರೆ ಈ ತರದ ಸ್ಥಿತಿ ದೈವಕ್ಕೆ ಸಹನೆ ಆಗಲ್ಲಿಲ್ಲವೋ ಏನೋ ಅಥವಾ ದೇವರ ಪೂಜೆ ಮಾಡುವ ಮುನ್ನ ಯಾವ ದಾದರೂ ಅಪರಾಧವನ್ನು ಮಾಡಿದ್ದಳೋ ಏನೋ ಆದರೆ ಜಗತ್ತಿನಲ್ಲಿ ಪರಂಪರ್‍ಯವಾಗಿ ನಡೆದು ಬಂದಿದ್ದೇ ಇದೆ. ವಿಷ ಬಳ್ಳಿಯನ್ನು ಯಾರೂ ಮುಟ್ಟುವದಿಲ್ಲ. ಆದರೆ ಸಿಹಿಬಳ್ಳಿಗೆ ಜನರು ಮುತ್ತುವದು ಬಹಳ. ಅದರಂತೆ ಆ ಭಗವಾನನೂ ಕೂಡ ಸಿಹಿ ಬಳ್ಳಿಯಂತಿದ್ದ ಕೆಂಚಮ್ಮನಿಗೆ ಮುತ್ತಿದನೋ ಅಥವಾ ಅವಳ ದೈವವೇ ಹಾಗೆ ಬಯಸಿ ಭೂಮಿಗೆ ಅವತರಿಸಿ ಬಂದಿತ್ತೋ ತಿಳಿಯದು. ಅಂತೂ ಕೆಂಚಮ್ಮನ ದೈವ ಸಿಹಿ ಬಳ್ಳಿ.

ಕೆಂಚಮ್ಮನ ಮಾವಂದಿರಾದ ಮಲ್ಲನಗೌಡರ ಮನೆಗೆ ಕಾಲಿಟ್ಟು ಮೂರು ವರ್ಷ ಗತಿಸಿದ್ದಿತು. ಅಂದಿಗೆ ೧೦ ವರ್ಷ ದಿಂದ ಸತತವಾಗಿ ದುಡಿತದ ಮಡಲಿಗೆ ಸಿಕ್ಕಿಕೊಂಡಿತು. ಮಲ್ಲನಗೌಡರ ಊರಿಗೆ ಮೂರು ಮೈಲು ಅಂತರದ ಬೈಲು ಜಾಗದಲ್ಲಿದ್ದ ಬಹು ಆಕೃತಿಯ ಕೆರೆ. ಅಲ್ಲಿ ೧೪೦ ಆಳುಗಳು ಸತತವಾಗಿ ದುಡಿಯುತ್ತಿದ್ದವು. ಎಷ್ಟು ಆಳವಾಗಿ ತಗೆದರೂ ಒಂದು ಹನಿನೀರು ಕಂಡು ಬಂದಿರಲಿಲ್ಲ. ಆದಕ್ಕೆ ಮಲ್ಲನ ಗೌಡರಿಂದ ೫೦ ಲಕ್ಷ ರೂ. ಕೈಬಿಟ್ಟಿದ್ದರೂ ನೀರು ಬೀಳುತ್ತಿವೆ ಎಂಬ ಆಶೆಯನ್ನು ಅವರು ಕೈಬಿಟ್ಟಿರಲಿಲ್ಲ. ಆಳುಗಳು ಸತತ ೨೦ ವರ್ಷ ದುಡಿದು ದಣಿದಿದ್ದರು. ಅಷ್ಟಕ್ಕೇ ಮಲ್ಲನಗೌಡರು ಕೆರೆ ಕಟ್ಟಿಸುವದನ್ನು ಬಿಡಿಸಬಹುದಿತ್ತು. ಅಷ್ಟು ಖರ್ಚು ಮಾಡಿದ್ದು ಅಂಥ ಸ್ಥಿತಿವಂತರಿಗೆ ದೊಡ್ಡ ಮಾತೇನೂ ಅಲ್ಲ. ಆದರೆ ಪರೋಪಕಾರಿಗಳಾದ ಅವರಿಗೆ ಅದನ್ನು ಸಹಿಸದಾಗ ಲಿಲ್ಲ. ಅಂದರೆ ಅವರು ಕಟ್ಟಿಸುತ್ತಿದ್ದ ಕೆರೆಯ ಹತ್ತಿರ ನಾಲ್ಕೈದು ಊರುಗಳಿವೆ. ಆ ಊರಲ್ಲಿ ನೀರಿನ ಬರಭಯಂಕರ ಆದರಿಂದ ವರ್ಷಕ್ಕೆ ೫-೬ ನೂರು ಜನರು ಪ್ರಾಣ ನೀಗುತ್ತಿದ್ದರು. ಒಂದು ಪಕ್ಷಿಯಿಂದ ಹಿಡಿದು ದನಕರು ಜನರ್ವ ಮೊದಲು ಮಾಡಿ ನೀರು ನೀರು ಎಂದು ಒರಲುತ್ತಿತ್ತು. ಆ ಕೆರೆಯ ಮಗ್ಗುಲಿಗೆಯೇ ಹೊಂದಿ ಇದ್ದ ಹೊಲದ ಕೆಲಸ ಮಾಡುತ್ತಿದ್ದ ಮಲ್ಲನಗೌಡರ ತಾಳ್ಮೆ ಮೇರೆ ಮೀರಿತ್ತು. ಅಂದಿನಿಂದಲೇ ಅವರು ಕೆರೆಯನ್ನು ಕಟ್ಟಿಸಲು ಕೈಹಾಕಿದ್ದು. ಆದರೆ ಅದರ ಪರಿಸ್ಥಿತಿ ಅತಿ ವಿಕೋಪಕ್ಕೆ ಇಟ್ಟುಕೊಂಡಿತ್ತು. ಆದರೂ ಅವರು ಅದನ್ನು ಬಿಡದೇ ಮುಂದುವರೆಸಿದರು. ಎಲ್ಲ ಜೋಯಿಸರನ್ನು ಕೇಳಿ ಆಯಿತು. ಆದರಿಂದ ಬಂದದ್ದು ಒಂದೇ ಉತ್ತರ. ಅದು ನಿಮ್ಮ ಚಿಕ್ಕ ಸೊಸೆ ಕೆಂಚಮ್ಮನನ್ನು ಆಕೆಗೆ ಬಲಿಕೊಡಬೇಕು ಎಂದು. ಆದರೆ ಸೊಸೆಯನ್ನು ಮಗಳೆಂದು ತಿಳಿದುಕೊಂಡು ಬಂದಿದ್ದ ಮಲ್ಲನಗೌಡರಎದೆಗೆ ಗುಂಡು ಬಡಿದಂತಾಯಿತು. ಅವರು ಏನೂ ತಿಳಿಯದೆ ದಿಗ್ಭ್ರಾಂತರಾಗಿ ಕುಳಿತರು.

ಹೀಗಿರಲಾಗಿ ಒಂದು ದಿನ ಒಬ್ಬ ಒಡ್ಡರವನು ಕೆರೆಯನ್ನು ಕಡಿದು ಕಡಿದು ದಣಿದು ದಂಡೆಯ ಮೇಲೆ ಮಲಗಿದಾಗ ಅವನ ಸ್ವಪ್ನದಲ್ಲಿ ಈ ಪ್ರಕಾರವಾಗಿ ಆಕಾಶವಾಣಿಯಾಯಿತಂತೆ. ಅದೇನೆಂದರೆ ನಿಮ್ಮ ಸಾಹುಕಾರನ ಚಿಕ್ಕ ಸೊಸೆಯಾದ ದೊಡ್ಡ ಕೆಂಚಮ್ಮನನ್ನು ಬಲಿಕೊಟ್ಟರೆ ನೀರು ಯಥಾ ಪ್ರಕಾರವಾಗಿ ಬೀಳುವದು, ಇಲ್ಲದಿದ್ದರೆ ಸರ್ವಥಾ ಪ್ರಯತ್ನ ಮಾಡಿದರೂ ಬೀಳಲಾರದು. ಆದನ್ನು ಹೇಳಿ ಒಡ್ಡರವನು ಆಶ್ಚರ್ಯಭರಿತನಾಗಿ ಓಡುತ್ತ ಮಲ್ಲನಗೌಡರ ಬಳಿಗೆ ಬಂದು ನಡೆದ ವೃತ್ತಾಂತವನ್ನು ವಿವರಿಸಿದ. ಇದನ್ನು ಕೇಳಿದ ಮೇಲಂತೂ ಮಲ್ಲನಗೌಡರಿಗೆ ವಿಪರೀತ ತಾಪವಾಯಿತು. ಆದರೆ ಮಾಡುವದೇನು? ಇದನ್ನು ಕೇಳಿದಾಗಲೂ ಮಲ್ಲನ ಗೌಡರು ಅಲ್ಲಿಯೇ ಅದನ್ನು ಮುಕ್ತಾಯ ಮಾಡಬಹುದಿತ್ತು. ಆದರೆ ಪರೋಪಕಾರಕ್ಕಾಗಿ ಮಾರು ಹೋದ ಅವರ ಮನಸ್ಸು ಹಿಂದಕ್ಕೆ ಜಗ್ಗಲಿಲ್ಲ. ಅದರಲ್ಲೂ ಸಾವಿರಾರು ಜನರು ನೀರಿಲ್ಲದೆ ಬಲಿಕೊಡುವಾಗ ಒಬ್ಬಳನ್ನು ಬಲಿಕೊಟ್ಟು ಸಾಯುವ ಸಾವಿರಾರು ಜನರನ್ನು ಉಳಿಸುವದು ಅವರಿಗೆ ಎಲ್ಲಕ್ಕಿಂತಲೂ ಮೇಲು ಎಂದು ತೋರಿತು. ಇದಕ್ಕೆ ಹೊಂದಿಕೆಯಾಗಿ ಅವರ ಪತ್ನಿಯ ಸಲಹೆಯೂ ಸಿಕ್ಕಿತು. ಏನಂದರೆ ಇಂಥ ರೂಪವಂತಿ ಸೊಸೆಯಂದಿರು ಸಿಕ್ಕೇ ಸಿಗುವರು. ಆದರೆ ನೀರಿಲ್ಲದೆ ಸಾಯುವ ಜನರಿಗೆ ಒಂದು ಉಪಕಾರ ಮಾಡಿದಂತಾಗುತ್ತದೆ. ಮಗನಾದ ಬಸನಗೌಡನಿಗೆ ಮತ್ತೊಬ್ಬ ರೂಪವತಿಯನ್ನು ತಂದು ಮದುವೆ ಮಾಡಿದರಾಯಿತು. ಇದಕ್ಕೆ ನೀವು ಹಿಂಜರಿಯ ಬೇಡಿರೆಂದು ಆದರಂತೆ ಅದು ನಿಶ್ಚಯವೂ ಆಯಿತು.

ಇಂಥ ಸಂದರ್ಭದಲ್ಲಿ ಚರಿತ್ರನಾಯಿಕಿ ಕೆಂಚಮ್ಮ ಆಗ ತುಂಬ ಗರ್ಭಿಣಿ. ಪ್ರಸವ ಕಾಲವೂ ಸಮೀಪಿಸಿತ್ತು. ಈ ಹೊತ್ತಿನಲ್ಲಿ ಗಂಡಹೆಂಡಿರಿಬ್ಬರೂ ಅಂದರೆ ಕೆಂಚಮ್ಮನ ಅತ್ತೆ ಮಾವಂದಿರಿಬ್ಬರೂ ಇದ್ದ ಮನೆಯನ್ನು ಸೋರುತ್ತದೆಂದು ಕೆಡವಿ ಅದಕ್ಕೆ ಕಟ್ಟಿಸಲು ಕಟ್ಟಿಗೆಬೇಕೆಂದು ಕೆಂಚಮ್ಮನ ಗಂಡನಾದ ಬಸನಗೌಡನನ್ನು ಮಲ್ಲಾಡಕ್ಕೆ ಕಟ್ಟಿಗೆ ತರುವ ಒಂದು ಉಪಾಯವನ್ನೂ ಹೂಡಿ ಕಳಿಸಿದ್ದರು. ಅವನು ಹೋಗಿ ಆಗ ಒಂದು ತಿಂಗಳಾಗಿದ್ದಿತು. ಅವನು ಬರುವ ಲಕ್ಷಣ ವಿನ್ನೂ ಕಂಡು ಬಂದಿರಲಿಲ್ಲ. ಇಂಥ ಸಂದರ್ಭದಲ್ಲಿ ಕೆಂಚಮ್ಮ ತಾಯಿ ಮೂಲಾನಕ್ಷತ್ರದಲ್ಲಿ ಗಂಡು ಮಗುವನ್ನು ಹೆತ್ತಳು. ಈ ಸುದ್ದಿ ಬಸನಗೌಡನಿಗೆ ತಿಳಿದು ಅವನು ಅದೇ ರಾತ್ರಿ ಕಂಡ ದುಃಸ್ವಪ್ನದಿಂದ ಚಕಿತನಾದ ಅವನಿಗೆ ಗಾಯಕ್ಕೆ ಬರೆ ಕೊಟ್ಟಂತಾಯಿತು. ಆದರೆ ಮಾಡುವದೇನಿದೆ ಅವನು ತಾನು ಹಿಡಿದ ಕೆಲಸವನ್ನು ಅರ್ಧಮಾಡಿ ಬಿಟ್ಟುಬರುವಂತಿರಲಿಲ್ಲ ಆ ಪ್ರಕಾರವಾಗಿ ತಂದೆಯ ಆಜ್ಞೆಆಗಿತ್ತು. ಆದ್ದರಿಂದ ಅವನು ಅಲ್ಲಿಯೇ ತನ್ನ ದೈವವನ್ನು ಹಳಿಯುತ್ತ ಕೊಳೆಯಬೇಕಾಯಿತು.

ಈಗ ಕೆಂಚಮ್ಮನ ಕೂಸು ೩ ತಿಂಗಳ ಹಸುಳೆ ಬಸವರಾಜನೆಂಬ ನಾಮಕರಣವನ್ನು ಹೊಂದಿ ಬಸವಣ್ಣನಂತೆ ಮುಗ್ಧನಾಗಿ ಬೆಳೆಯುತೊಡಗಿದ್ದ. ಈಗ ಕೆಂಚಮ್ಮನ ಗಂಡ

ಊರಲ್ಲಿಲ್ಲವೆಂದು ಮತ್ತು ಅವನು ಸಧ್ಯಬರಲಾರನೆಂದು ತಿಳಿದ ಅವನ ತಂದೆ ತಾಯಿಗಳಿಗೆ ಕೆಂಚಮ್ಮನ ಬಲಿ ಬಹು ಸುಲಭ ವೆಂದು ತಿಳಿಯಿತು.

ಅಂದೇ ಊರಿನ ಜನರಿಗೆ ಪ್ರಸ್ತವನ್ನು (ಅನ್ನ ಸಂತರ್ಪಣೆ) ಇಡಿಸಿದರು. ಅದಕ್ಕೆ ಕೆಂಚಮ್ಮ ಬೇಕಾದ ಎಲ್ಲ ಸಿದ್ಧತೆಯನ್ನು ಮಾಡಿದಳು. ಈ ಮೊದಲು ಅವಳಿಗೆ ಓಣಿಯ ಕೆಲವು ಹರಕು ಬಾಯಿಯ ಹೆಂಗಸರಿಂದ ಕೆರೆಯ ಇತಿಹಾಸ ತಿಳಿದಿತ್ತು. ಆದರೂ ಅವಳು ಎದೆಗುಂದಲಿಲ್ಲ. ಎಲ್ಲ ಸಿದ್ಧತೆಯನ್ನು ಮಾಡಿದ ನಂತರ ಕೊಡವನ್ನು ತೆಗೆದುಕೊಂಡು ನದಿಗ ನೀರಿಗೆ ಹೋದಳು. ಅಲ್ಲಿ ಅವಳ ಪರಮಪೂಜ್ಯನಾದ ಪರಮೇಶ್ವರನು ಪ್ರತ್ಯಕ್ಷನಾಗಿ ಅವಳ ಅತ್ತೆಮಾವಂದಿರ ಕುಹಕತನವನ್ನು ವಿವರಿಸಿ ಕೆಂಚಮ್ಮಾ ನೀನು ನಿನ್ನ ತವರೂರಿಗೆ ಹೊರಟು ಹೋಗು ಅನ್ಯಾಯವಾಗಿ ನಿನ್ನ ದೇಹವನ್ನು ಬಲಿಕೊಡಬೇಡ ಎಂದು ನಾನಾ ಪ್ರಕಾರವಾಗಿ ಹೇಳಿದ ಆದರೆ ಕೆಂಚಮ್ಮ ಅದಕ್ಕೆ ಬಗ್ಗಲಿಲ್ಲ. ಅದರ ಪ್ರತ್ಯುತ್ತರ ಬಂದದಾರಿಗೆ ಸುಂಕವಿಲ್ಲವೆಂಬಂತೆ ಹೊರಟು ಹೋಗಿರಿ ಎಂದು ಹೇಳಿದಳು. ಆಗ ಪರಮೇಶ್ವರನು ಅವಳ ದೃಢ ನಿಶ್ಚಯಕ್ಕೆ ಮೆಚ್ಚಿ ತಾಯೀ ನಿನ್ನ ತ್ಯಾಗ ಅಪೂರ್ವವಾದದ್ದು. ನಿನ್ನ ಭಕ್ತಿಗೆ ನಾನು ಮೆಚ್ಚಿದೆ. ನಿನ್ನ ಮನಸ್ಸಿನಂತೆ ಈ ಕಾರ್ಯ ನಿರ್ವಿಘ್ನದಿಂದ ನೆರವೇರಲಿ. ನೀನು ಯಾವ ಕಾಲಕ್ಕೆ ನೆನಸುವೆಯೋ ಆಗ ನಾನು ನಿನಗೆ ಭೆಟ್ಟಿಕೊಡುವೆ. ಮತ್ತು ಕೆರೆಯಲ್ಲಿ ನಿನ್ನ ವಾಸಸ್ಥಾನಕ್ಕಾಗಿ ಬಂಗಾರದ ಕಳಸವಿರುವ ಮಂಟಪವನ್ನು ನಿರ್ಮಿಸುವೆನು. ಎಂದು ಹೇಳಿ ಅವಳಿಗೆ ಹರಸಿ ಹೊರಟುಹೋದನು. ನಂತರ ಕೆಂಚಮ್ಮ ಮರಳಿ ಬಂದು ಮಗುವನ್ನು ಮುದ್ದಾಡಿ ಪತಿಯನ್ನು ನೆನೆದು ಕಣ್ಣೀರಿಟ್ಟಳು. ಆಗ ಅವಳಿಗೆ ಮತ್ತೊಂದು ನೆನಪಾಯಿತು. ಅದು ತಂದೆಯದು. ಆ ಕೂಡಲೇ ಅವಳು ತನ್ನ ಮಾವನನ್ನು ಕೇಳಿದಳು. ಆಗ ಮಾವನು ಗಾಬರಿಯಾದ ಯಾಕಂದರೆ ಎಂದೆಂದಿಗೂ ಬಂದು ಮೂರು ವರ್ಷವಾದರೂ ತಂದೆಯನ್ನು ನೆನಸದ ಜೀವ ಇಂದ್ಯಾಕೆ ನೆನಸಿತು ಇವಳಿಗೆ ನನ್ನ ಕೆಲಸ ತಿಳಿದು ಹೋಗಿದೆಯೇನೋ ಎಂದು ಹೆದರಿದ. ಮತ್ತು ಅವನು ಸೊಸೆಗೆ ಈ ಪ್ರಕಾರವಾಗಿ ಶಪಥ ಹಾಕಿದ. ಅದೇನೆಂದರೆ ತನ್ನ ಮನೆಯ ಬಾಗಿಲಿನ ಕಲ್ಲಿನ ಮೇಲೆ ಉಗುಳನ್ನು ಹಾಕಿ ಉಗುಳು ಆರುವದರೊಳಗಾಗಿ ಹೊರಟುಬರಬೇಕು. ಯಾಕಂದರೆ ಎಲ್ಲವನ್ನೂ ತುಂಬಿಕೊಂಡು ಕೆರೆಗೆ ಹೊರಡಲು ಬಂಡಿಗಳು ಸಿದ್ಧವಾಗಿ ನಿಂತಿವೆ. ಎಂದು ಕಟ್ಟಪ್ಪಣೆ ಮಾಡಿದನು. ಅದಕ್ಕೆ ಆ ಮಹಾತ್ಯಾಗಿ ಒಪ್ಪಿಕೊಂಡನ್ನು ಬಿಟ್ಟು ಹೊರಟುಹೋಗಿ ಅವರ ಅಜ್ಞೆಯ ಪ್ರಕಾರವಾಗಿ ತಿರುಗಿ ಬಂದಳು. ಇದು ಅವರ ತಂದೆಗೂ ತಿಳಿಯದಾಯಿತು.

ಇತ್ತ ಬಂಡಿಗಳು ಹೊರಟು ನಿಂತಿದ್ದವು. ಅವುಗಳ ಜೊತೆಗೆ ಕೆಂಚಮ್ಮನೂ ಮತ್ತೊಮ್ಮೆ ಮಗುವನ್ನು ಮುದ್ದಾಡಿ ಕೆಲಸದವಳ ಕೈಗೆ ಕೊಟ್ಟು ಈ ಪ್ರಕಾರವಾಗಿ ಹೇಳುವಳು. ತಾಯೀ ನನ್ನ ಮಗುವಿನ ಬೆನ್ನ ಮೇಲೆ ಒಂದು ಪೆಟ್ಟನ್ನೂ ಹಾಕಬೇಡ, ಮಗು ನಿನಗೆ ಈಗ ಕುಡಿಸಿದ ಮೊಲೆ ಹಾಲು ಮುಪ್ಪಿನವರೆಗೂ ಅಜರಾಮರವಾಗಿಲಿ ಎಂದು ಹರಿಸಿಹೋಗುವಳು. ಆಗ ಅವಳು ಮಾಡಿದಶೋಕ ವರ್ಣಿಸಲು ಅಸದಳವು. ಕೆರೆಯ ದಂಡೆಗೆ ಎಲ್ಲರೂ ಹೋಗುತ್ತಾರೆ. ಊಟ ಉಪಚಾರ ಮುಗಿಸುತ್ತಾರೆ. ಸೂರ್ಯನು ತಾಯಿಯ ಒಡಲಿಗೆ ಹೋಗಲು ಇನ್ನೂ ಸ್ವಲ್ಪ ಹೊತ್ತು ಇದೆ. ಎಲ್ಲ ಸಾಮಾನುಗಳನ್ನು ಬಂಡಿಗೆ ತುಂಬುತ್ತಾರೆ. ಹೊರಡಲು ಅನುಕೂಲರಾಗುತ್ತಾರೆ. ಆಗ ಮೊದಲೇ ಯೋಚಿಸಿದ್ದ ಮಲ್ಲನಗೌಡರು ಸೊಸೆಗೆ ಈ ಪ್ರಕಾರ ಆಜ್ಞೆಮಾಡುವರು- ತಂಗೀ ! ಕೆಂಚಮ್ಮಾ ಎಲ್ಲವನ್ನು ಬಂಡಿಗೆ ತುಂಬಿದ್ದಾಯಿತೇ ಅದಕ್ಕೆ ಕೆಂಚಮ್ಮ ಹೌದು ಮಾವಾ ಎಲ್ಲವನ್ನೂ ತುಂಬಿದ್ದೇನೆ. ಆಗ ಮಲ್ಲನಗೌಡರು ಒಂದು ಬಂಗಾರದ ಬಟ್ಟಲವನ್ನು ಅವಳಿಗೆ ಕಾಣಿಸಿದಂತೆ ಕೆರೆಯ ಮಧ್ಯ ಒಗೆದು ನೋಡು ಅಲ್ಲಿ ಬಂಗಾರದ ಬಟ್ಟಲು ಬಿದ್ದಿದೆ. ಬೇಗನೆ ಅದನ್ನು ತೆಗೆದುಕೊಂಡು ಬಾ ಎಂದು ಹೇಳಲು ಅವಳು ಅದೇ ಪ್ರಕಾರ ತನ್ನ ಪತಿಗೆ ತನ್ನ ಕೊನೆಯ ನಮಸ್ಕಾರಗಳನ್ನು ಅರ್ಪಿಸಿ ಕೆರೆಯನ್ನು ಇಳಿಯತೊಡಗುವಳು. ಆಗ ಎಲ್ಲಿಂದಲೋ ಅಡಗಿದ್ದ ಮೋಡಗಳು ಮುತ್ತಿ ಮಳೆಯನ್ನು ಸುರಿಸಿ ಒಮ್ಮೆಲೇ ಅರ್ಭಟಿಯನ್ನು ಬೀರಿ ಅವಳು ಇನ್ನೂ ಮಧ್ಯಕ್ಕೆ ದೂರವಿದ್ದಾಗಲೇ ಅವಳು ಗಂಗಾ ಪ್ರವಾಹದಂತೆ ಹರಿದು ಗಂಗೆಯನ್ನು ಪೂಜ್ಯ ಪರಮೇಶ್ವರನ ಪಾದವನ್ನೂ ಸೇರಿಕೊಂಡಳು. ಆಗ ದಂಡೆಯಲ್ಲಿದ್ದವರಿಗೆ ಒಂದು ಮಳೆಯ ಹನಿ ಕೂಡ ಬಿದ್ದಿರಲಿಲ್ಲ. ಇದನ್ನು ನೋಡಿ ಎಲ್ಲರೂ ಆಶ್ಚರ್ಯಭರಿತರಾದರು. ಈ ಪ್ರಕಾರವಾಗಿ ಕೆಂಚಮ್ಮನ ಬಲಿ ಮುಗಿದುಹೋಯಿತು.

ಮರುದಿನವೇ ತಿರುಗಿ ಬಂದ ಬಸನಗೌಡನಿಗೆ ಈ ಸಂಗತಿ ತಿಳಿದು ಸಿಡಿಲೇ ಮೈಮೇಲೆ ಬಿದ್ದಂತಾಯಿತು. ಆದರೆ ಮಾಡುತ್ತಾನೇನು ಎಲ್ಲವೂ ನಡೆದು ಹೋಗಿತ್ತು. ಇತ್ತ ಮಲ್ಲನಗೌಡನು ಕೆರೆಗೆ ಒಂದು ಮೈಲು ಅಂತರದ ಒಂಭತ್ತು ತುಂಬಿನ ಕಲ್ಲು ಮತ್ತು ಹದಿನಾರು ತುಬಿನ ಕಲ್ಲುಗಳನ್ನು ನಿಲ್ಲಿಸಿದನು. ಕೆರೆಯ ಪ್ರವಾಹ ಅದರ ಮೇಲೆ ಹರಿಯುತಂತೆ.

ಈಗಲೂ ಕೂಡ ಆ ಕಂಬಗಳು ಭವ್ಯವಾಗಿ ನಿಂತಿವೆ. ಒಬ್ಬ ಮನುಷ್ಯನಿಗೆ ಅಮಟದಂತ ಕಂಬಗಳು. ಮೇಲೆ ತಲೆಯೆತ್ತಿ ನೋಡಿದರೆ ನೆತ್ತಿಯ ಮೇಲಿನ ರುಮಾಲು ಕೆಳಗುರುಳಿ ಬೀಳುತ್ತವೆ. ಕೆರೆಯ ಸುತ್ತಲೂ ದಟ್ಟಾರಣ್ಯ, ಸುತ್ತಲೂ ಗುಡ್ಡಗಳು. ಒಬ್ಬನೇ ಹೋಗಲು ಧೈರ್ಯಬರದು. ಅಂಥಸ್ಥಳ ದಲ್ಲಿ ಕೆಂಚಮ್ಮಲೀನಳಾಗಿ ಹೋದಳು. ಅವಳು ಲೀನಳಾಗುವ ಕಾಲಕ್ಕೆ ಅವಳ ಮೈ ಮೇಲೆ ಅಪಾರವಾದ ಆಭರಣಗಳಿದ್ದವು ಅವುಗಳನ್ನು ಬಡವರ ಲಗ್ನಕ್ಕೆ ಯಾರಾದರೂ ಕೂಗಿ ಕೇಳಿದರೆ ಬಾಳೆಯ ಎಲೆಯ ಮೇಲೆ ಅವುಗಳನ್ನು ಇಟ್ಟುಕಳಿಸು ತ್ತಿದ್ದಳಂತೆ. ಆದರೆ ಒಬ್ಬದುಷ್ಟವಡ್ಡರವನು ತೆಗೆದು ಕೊಂಡು ಲಗ್ನವನ್ನು ಮುಗಿಸಿ ತಿರುಗಿ ಕೊಡಲು ಬಂದಾಗ ಕೆಂಚಮ್ಮಾ ಎಂದು ಕರೆಯಲುನಿರಪರಾಧಿಯಾದ ಕೆಂಚಮ್ಮಓಗೊಟ್ಟಳಂತೆ ಆಗ ದುಷ್ಟನು ನಿನ್ನ ಸಲ್ಲು ಇನ್ನೂ ಅಡಗಿಲ್ಲವೇ ಅಂದನಂತೆ. ಅಂದಿಗೆ ಅವಳ ಸಲ್ಲು ಅಡಗಿ ಹೋಯಿತು ಅವನೂ ಕೂಡ ಅಲ್ಲಿಯೇ ಕಲ್ಲಾಗಿ ಬಿದ್ದಿರುವ ದೃಶ್ಯ ಈಗಲೂ ಕಂಡುಬರುತ್ತಿದೆ ಮತ್ತು ಅದೇ ವೇಳೆಯಲ್ಲಿ ಪರಮೇಶ್ವರನು ಹೇಳಿದ ಪ್ರಕಾರ ಕಟ್ಟಿಸಿಕೊಟ್ಟ ಬಂಗಾರದ ಮಂಟಪವು ಕಳಸವೂ ಕಾಣುತ್ತಿತ್ತು ಎಂದು ಅಲ್ಲಿಯ ಕೆಲವು ಹಿರಿಯರು ಹೇಳುತ್ತಾರೆ. ಮುಂದೆ ಬಸನ ಗೌಡನ ಮದುವೆ ದೊಡ್ಡ ಕೆಂಚಮ್ಮನ ತಂಗಿ ಸಣ್ಣ ಕೆಂಚಮ್ಮ ನೊಂದಿಗೆ ನೆರವೇರಿತು.

ಈಗ ಸಧ್ಯ ಕೆರೆಯನ್ನು ನೋಡಲು ಹೋದರೆ ಅಲ್ಲಿಯ ವೈಭವವೆಲ್ಲವೂ ತಿಳಿದು ಬರುತ್ತಿದೆ. ನೀರು ಅಚ್ಚ ಕರಿಮಣಿ ಯನ್ನು ಹೋಲುತ್ತಿನೆ. ನೀರಿನ ಆಳ ಅಷ್ಟೇ ಇದೆ ಎಂದು ಇಂದಿಗೂ ತಿಳಿಯಲು ಸಾಧ್ಯವಿಲ್ಲದಾಗಿದೆ. ಆ ಕೆರೆಯಿಂದ ಸುತ್ತಲಿನ ಊರು ಭತ್ತದ ಪೈರಿಗೆ ವರ್ಷಕ್ಕೆ ಎರಡು ಸಾರೆ ಉಪಯೋಗಿಸಿ ಕೊಂಡರೂ ಆ ನೀರು ಮೊದಲು ಎಲ್ಲಿಇತ್ತೋ ಅಲ್ಲಿಯೇ ಇರುತ್ತದೆ. ಅಲ್ಲಿ ಒಂದು ಮೂಲೆಯಲ್ಲಿ ಅಂದರೆ ಪಶ್ಚಿಮಭಾಗಕ್ಕೆ ಕತ್ತರಿಯ ಸ್ಥಾನವಿದೆ ಅಲ್ಲಿಯಾವದಾದರೂ ಒಂದು ವಸ್ತುವನ್ನು ಬಿಟ್ಟರೆ ಅದು ಕತ್ತರಿಸಿ ತುಂಡಾಗಿ ಹೊರಗೆ ಬರುತ್ತದೆ. ಅದರ ಸಪ್ಪಳವನ್ನು ಕೇಳಿ ಕಿವಿಗಳು ಗಡಚಿಕ್ಕುವವು ಗುಡ್ಡದೊಬ್ಬೆಯಿಂದ ನೀರು ಹರಿದು ಬರುತ್ತದೆ. ಅಲ್ಲಿ ಕಲ್ಲಿನ ಕೆಲವು ಅವಶೇಷಗಳೂ ಕಂಡುಬರತ್ತವೆ.

ಅಲ್ಲಿಯ ಜನರು ಉಗಾದಿಯ ಮುಂದೆ ಈ ಮಹಾತಾ ಯಿಯ ಉತ್ಸವವನ್ನು ನೆರವೇರಿಸುವರು. ಆಗ ಬಾಳೆಯ ಕಂಬ ಗಳಿಂದ ದೋಣಿಗಳನ್ನು ಕಟ್ಟಿ ತೆಪ್ಪ ಎಂದು ನೀರಿನಲ್ಲಿ ಬಿಡು ವರು ಮಕ್ಕಳಾಗದವರು ಬೇಡಿಕೊಂಡು ನಂತರ ಮಕ್ಕಳಾಗಿ ದ್ದರೆ ಆ ಕೂಸುಗಳನ್ನು ಈ ಉತ್ಸವದಲ್ಲಿ ಆ ತೆಪ್ಪದಲ್ಲಿಟ್ಟು ಕೆರೆಯ ಅಂಚಿನಲ್ಲಿ ಬಿಡುತ್ತಾರೆ. ಆದರೆ ಮಗುವಿಗೆ ಯಾವ ಅಪಾಯವೂ ಸಂಭವಿಸದು. ಇದು ಅಲ್ಲಿನಡೆಯುವ ಒಂದು ಮಹತ್ವದ ಸಂಗತಿ. ಈ ಪ್ರಕಾರವಾಗಿ ಕೆಂಚಮ್ಮ ತನ್ನ ಬಡ ಆತ್ಮವನ್ನು ಒಂದು ಕ್ಷಣಸುಖಕ್ಕಾಗಿ ಲೆಕ್ಕಿಸದೆ ಬಲಿ ಕೊಟ್ಟು ಎಂದೆಂದಿಗೂ ಅಚ್ಚಳಿಯದ ಕೀರ್ತಿಗೆ ಅಜರಾಮರವಾಗಿ ನಿಂತಿದ್ದಾಳೆ. ಮಾಸೂರು ನೋಡಲು ಒಂದು ಹಳ್ಳಿಯಂತಿ ದ್ದರೂ ಈ ಮಹಾತ್ಯಾಗಿಯ ಸ್ಥಾನದಿಂದ ಒಂದು ಉಚ್ಚಮ ಟ್ಟಕ್ಕೆ ನಿಂತಿದೆ ಎಂದು ಹೇಳಲು ಏನೂ ಸಂದೆಹವಿಲ್ಲ.

---

## ಆರದಾರತಿ

ನಾಡು ಹಸಿರು ಸೆರಗು ಹಾಸಿ
ಮೇಲೆ ಮರದ ಗಾಳಿ ಬೀಸಿ
ಬಾನಿಗರಳು ಗೊಂಚಲಿರಿಸಿ
　　ಸುಸ್ವಾಗತ ಬರೆದಿದೆ
　　ಬೆಳಕು ಇಳಿದು ಬಂದಿದೆ !
ಬೆಳಕ ಹನಿಗಳೋಡಿ ಬಂದು
ರೂಪ ರಂಗ ಭಾವ ತಂದು
ತಿಮಿರ ಕಡಲವೇರಿ ನಿಂದು
　　ತಿಳ್ಳಿಯಾಟ ನಡೆಸಿವೆ
　　ಮೈಮನ ಕಣ್ಣಾಗಿವೆ !

ನೋಡು ಕೆಳದಿ ಮೇಲೆ ಕೆಳಗೆ
ಮನದ ಮುಂದೆ ಒಳಗೆ ಹೊರಗೆ
ಸಾಲು ದೀಪವೆಲ್ಲ ಕಡೆಗೆ
　　ರಂಗವಲ್ಲಿ ಬರೆದಿವೆ
　　ತಳಿರು ಛತ್ರವಾಗಿವೆ !
ಸಗ್ಗ ಸಿರಿಯು ಹರಿದು ಬಂದು
ಇಳೆಯ ಬಳಸಿ ಬೆಳಗಿ ನಿಂದು
ಚಿರ ನೂತನ ಕಾಂತಿ ಪಡೆದು
　　ಬೆಳಗುತಿಹಳು ಭಾರತಿ
　　ನೋಡು ಆರದಾರತಿ !



# ವರದಕ್ಷಿಣೆ

**ಲೇ : ಕೃಷ್ಣಾಬಾಯಿ ಆಶ್ರಿತ.**

ವರದಕ್ಷಿಣೆಯು ಈ ಯುಗದಲ್ಲಿ ಒಂದು ಕ್ರಾಂತಿಯನ್ನೇ ಎಬ್ಬಿಸಿದೆ. ಎಲ್ಲಿ ನೋಡಿದಲ್ಲಿ ವರದಕ್ಷಿಣೆಯ ಶಬ್ದವೇ ಶಬ್ದ. ಹೆಣ್ಣು ಹುಟ್ಟಿದ ಕೂಡಲೇ ತಂದೆ ತಾಯಿಗಳಿಗೆ ವರದಕ್ಷಿಣೆಯ ಚಿಂತೆ. ಗಂಡು ಹುಟ್ಟಿದೊಡನೆ ಪ್ರಾಣಿಗಳಿಗೆ ಬೆಲೆಯನ್ನು ಕಟ್ಟುವಂತೆ ತಮ್ಮ ಮಕ್ಕಳಿಗೆ ವರದಕ್ಷಿಣೆಯನ್ನು ನಿರ್ಧರಿಸುತ್ತಾರೆ. ಈ ವರದಕ್ಷಿಣೆಯು ಎಲ್ಲರ ಬಾಯಿಯಲ್ಲಿ ಒಂದಿಲ್ಲೊಂದು ರೀತಿಯಿಂದ ಇರುತ್ತದೆ.

ಈ ವರದಕ್ಷಿಣೆಯ ಕಾಟಕ್ಕಾಗಿ ಎಷ್ಟೋ ಬಡ ಜನರು ತಮ್ಮ ಮಕ್ಕಳಿಗೆ ವರಸಿಗದ್ದರಿಂದ "ನಮ್ಮಂಥ ತಂದೆತಾಯಿಗಳು ಇದ್ದು ಇಲ್ಲದಂತೆಯೇ ಸರಿ'' ಎಂದು ಪ್ರಾಣತ್ಯಾಗ ಮಾಡುವ ಸಂಭವವಿರುತ್ತದೆ. ಈ ವರದಕ್ಷಿಣೆಗೋಸ್ಕರ ಎಷ್ಟೋ ಪ್ರಪಂಚಗಳೇ ನಾಶವಾಗುತ್ತವೆ. ವರದಕ್ಷಿಣೆಯ ನಿರ್ಭಂಧದಿಂದ ಒತ್ತಾಯದ ವಿವಾಹಗಳು ಆಗುತ್ತವೆ. ಮನಸ್ಸಿಲ್ಲದ ವಿವಾಹವಾಗುವದರಿಂದ ಆ ವಧೂವರರ ದಾಂಪತ್ಯ ವಿರಸವಾಗುತ್ತದೆ. ವಧೂವರರ ಪ್ರೇಮ ವಿಚಾರಕ್ಕೆ ವರದಕ್ಷಿಣೆಯೊಂದು ಭೂತಾಕಾರವಾಗಿ ಅವರೆದುರು ಬಂದು ನಿಲ್ಲುತ್ತದೆ. ಇದರಿಂದ ಅನೇಕ ಅನಾಹುತಗಳು ಆಗುತ್ತವೆ. ಬಡವರ ಮಕ್ಕಳು ಎಷ್ಟೇ ರೂಪವತಿಯರೂ. ಗುಣವತಿಯರಿದ್ದರೂ. ಅವರಿಗೆ ವರದಕ್ಷಿಣೆಯನ್ನು ಕೊಡದ್ದಕ್ಕೆ ಆ ಮಕ್ಕಳು ಮದುವೆ ಇಲ್ಲದೆ ತಮ್ಮ ಜೀವನವನ್ನು ಸಾಗಿಸುತ್ತಾರೆ. ಈ ವರದಕ್ಷಿಣೆಯ ಮೂಲಕ ಈಗಿನ ಪ್ರಪಂಚಗಳಲ್ಲಿ ರಸಿಕತೆಯೇ ಇರುವದಿಲ್ಲ. ಕೇವಲ ವರದಕ್ಷಿಣೆಯ ಆಸೆಯಿಂದ, ಧರ್ಮ, ಜಾತಿಯನ್ನು ಬಿಟ್ಟುಕೊಟ್ಟು ಲಗ್ನ ಮಾಡಿಕೊಂಡ ಉದಾಹರಣೆಗಳು ಸಾಕಷ್ಟಿವೆ. ಇಂಥ ವಧೂವರರು ಪ್ರೇಮರಹಿತ ಪ್ರಪಂಚವನ್ನು ಸಾಗಿಸುತ್ತಾರೆ. ಕೇವಲ ವರದಕ್ಷಿಣೆಯ ಆಸೆಗಾಗಿ ತಮ್ಮ ಮಕ್ಕಳನ್ನು ಮಾರಿ ಕೊಂಡಂತೆ ಅವರ ಸುಖ ದುಃಖಗಳನ್ನು ಲಕ್ಷಿಸದೇ ರೂಪರಹಿತರನ್ನೂ ವಯಸ್ಸಿನಿಂದ ಹಿರಿಯರನ್ನು ಮದುವೆ ಮಾಡಿ, ಅವರ ಸುಖದ ಮೇಲೆ ತಣ್ಣೀರೆರೆಚುವ ಜನರು ಅನೇಕರಿದ್ದಾರೆ.

ವಿದ್ಯೆ ಕಲಿತವರಿಗೆ ಗ್ರೇಡಿನ ಮೇಲೆ ವರದಕ್ಷಿಣೆಯನ್ನು ನಿರ್ಧರಿಸುತ್ತಾರೆ. ಕೇವಲ ಮ್ಯಾಟ್ರಿಕ್ ಆಗಿ ಇನ್ನೂ ನೌಕರಿ ಸಿಗುವಪೂರ್ವದಲ್ಲಿಯೇ ಅತಿಕಡಿಮೆ ಅಂದರೆ ಒಂದು ಸಾವಿರ ರೂಪಾಯಿ. ಬಿ. ಎ. ಆದರೆ ನಾಲ್ಕು ಸಾವಿರ ರೂಪಾಯಿ. ಆದರಲ್ಲೂ ಕಲಿತವರಿಗೆ ಸ್ವಲ್ಪ ಆಸ್ತಿ ಇದ್ದರೆ ತೀರಿಯೇ ಹೋಯಿತು. ಅವರ ವರದಕ್ಷಿಣೆಯು ಹತ್ತು ಸಾವಿರಕ್ಕೆ ಮಿಕ್ಕುತ್ತದೆ. ವಧುವಿನ ರೂಪ, ಗುಣ ಪರೀಕ್ಷಿಸದೆ ಕೇವಲ ವರದಕ್ಷಿಣೆಯ ಆಸೆಯಿಂದ ಮದುವೆಗಳು ನಡೆಯುತ್ತವೆ. ಈಗಿನ ಜನರು "ಕಟ್ಟಿದ ಬುತ್ತಿ ಕಲಿಕೆಯ ಮಾತು" ತಮ್ಮಲ್ಲಿ ಎಲ್ಲಿಯವರೆಗೆ ಉಳಿಯುವದು? ಎಂಬಮಾತನ್ನೇ ಮರೆತಂತಿದೆ. ಪುರಾಣ, ಕೀರ್ತನ, ಚಲನಚಿತ್ರ ಎಲ್ಲಿ ನೋಡಿದಲ್ಲಿ ವರದಕ್ಷಿಣೆಯೇ ವರದಕ್ಷಿಣೆ.

ಈ ವರದಕ್ಷಿಣೆಯ ಸಮಸ್ಯೆಯನ್ನು ಹೇಗೆ ಪರಿಹರಿಸಬೇಕೆಂಬುದೆ ತಿಳಿಯದಾಗಿದೆ. ಸರಕಾರದಿಂದ ಕಾಯದೆಯನ್ನು ಹೊರಡಿಸಿ ವರದಕ್ಷಿಣೆಯನ್ನು ಅಡಗಿಸಬೇಕು. ಒಂದು ವೇಳೆ ಹಾಗೆ ಮಾಡಿದರೂ ಕದ್ದು ವರದಕ್ಷಿಣೆಯನ್ನು ತೆಗೆದು ಕೊಳ್ಳವ ಜನರೂ ಇರುವರು. ಈಗಿನ ಕಾಲದಲ್ಲಿ ಹೆಣ್ಣು ಹುಟ್ಟಿದರೆ ಒಂದು ಹುಣ್ಣು ಹುಟ್ಟಿದಂತೆಯೇ ಸರಿ. ರಥಗಳಿಗೆ ಎರಡು ಗಾಲಿಗಳಿರುವಂತೆ ಪ್ರಪಂಚ ಸುಗಮವಾಗಿ ಸಾಗಬೇಕಾದರೆ ಪತಿಪತ್ನಿಯರು ಒಳ್ಳೇರೀತಿಯಿಂದ. ಪ್ರೀತಿಯಿಂದ ನಡೆದುಕೊಂಡರೆ ಮಾತ್ರ ಅದು ಸುಗಮವಾಗಿಸಾಗುತ್ತದೆ. ಈಗಿನ ಪುರುಷರು ಇದನ್ನು ಸಂಪೂರ್ಣ ಮರೆತಂತಿದೆ. ಈ ವರದಕ್ಷಿಣೆಯಿಂದಾದ ಒತ್ತಾಯದ ಮದುವೆಯು ಎತ್ತು ಏರಿಗೆ ಎಳೆದರೆ ಕೋಣ ನೀರಿಗೆ ಎಳೆಯಿತು" ಎಂಬಂತೆ ಆಗುವ ಪ್ರಪಂಚಗಳೇ ಬಹಳ. ಈ ಆಧುನಿಕ ಯುಗದಲ್ಲ ಕೇವಲ ವರದಕ್ಷಿಣೆಯಮೇಲೆ ಮದುವೆಗಳು ನಡೆಯುತ್ತವೆ. ಒಟ್ಟಿನಮೇಲೆ ವರದಕ್ಷಿಣೆಯೊಂದು ದೊಡ್ಡ ಭೂತಾಕಾರವಾಗಿ ನಿಂತು. ರಸಿಕತೆಯು ಮಾಯವಾಗಿ ಕೇವಲ ಬಾಹ್ಯಾಡಂಬರದ ಪ್ರಪಂಚಗಳು ನಡೆಯುಹತ್ತಿವೆ. ಇದನ್ನೋದಿದ ಎಲ್ಲ ಪುರುಷವರ್ಗವು ತಮ್ಮ ಒಳ್ಳೆಯ ಮಾರ್ಗವನ್ನು ಹುಡುಕಿ ಕೊಂಡು ನಡೆಯುವಿರೆಂದು ನಂಬಿದ್ದೇನೆ.




೧

ಸಂದರ್ಭ : ಆಧುನಿಕ ಸ್ತ್ರೀಯು ನವಸಂಸಾರವನ್ನು ಸಾಗಿಸಲಿಕ್ಕೆ, ಅತ್ತೆಯನ್ನು ಹೊರಗೆ ಅಟ್ಟಲು ಕುರಿತು, ಗಂಡ ಹೆಂಡಿರ ಸಂವಾದ

ಗಂ— ಏಕೆ, ಕಾಂತೆ, ನಿಂತಿದಿ ಇಂತು ಕುಂದಿದ ಮುಖ ದಿಂದ, ಬೇಕಾದ್ದಿರಲಿಹೇಳು ನನಗೆ ನಕ್ಕ ಸುಖದಿಂದ ?

ಹೆ— ಹೇಳೋದೇನು ಹಾಳಾದೆನು, ಹಿಡಿದು ನಿಮ್ಮ ಕೈಯಾ; ತಾಳಲಾರೆ, ತಡಿಯಲಾರೆ, ಅಯ್ಯೋ ದಮ್ಮಯ್ಯಾ.

ಗಂ— ನನ್ನ ಜೀವಕೊಟ್ಟು ಸುಖವ ಕಾಯುವೆನು. ಜೀವದ ಜೋಡಿಯಾಗಿ ನಾವು ಕೊನೆಗೂ ಅಲ್ಲೇನು.

ಹೆಂ— ಬೆಲ್ಲದ ಮಾತು ಬಾಯಾಗಷ್ಟೇ ನಿಮಗಿಲ್ಲ ಲಜ್ಜೆ, ಕೊರವರ ಕತ್ತೆ ಹೊರಲಿಕ್ಕೇನು ಅತ್ತಿಯ ಒಜ್ಜೆ ?

ಗಂ— ಗಂಡಾ ಬೇಕು ಅಂದ್ರೆ ಗಂಡನ ತಾಯಿಯು ಬೇಕು. ಗುಂಡು ಬೇಕು ಅಂದ್ರೆ ಗುಂಡಿನ ಆರಗುಸಹಬೇಕು.

ಹೆ— ಗಂಡಾ ಬೇಡಾ ಮತ್ತೆ ಗಂಡನತಾಯಿಯುಬೇಡ, ನನ್ನ ಬಿಟ್ಟು ತಾಯಿನ ಕರಕೊಂಡು ಸಂಸಾರ ಮಾಡು.

ಗಂ— ಬಣ್ಣಾ ಬಂತು ನನ್ನ ಬದುಕಿಗೆ ನಿನ್ನಿಂದಲೇ ರಮಣೀ! ನಿನ್ನ ಬಿಟ್ಟು ಇರಲಾರೆ ಸ್ವರ್ಗೀಯರಾಣಿ.

ಹೆ— ನಿಮ್ಮ ತಾಯಿ ಹೊರಗೆ ಹೋಗಲಿ ಅಂದ್ರೆ ನಾನಿರ ವಾಕೀ. ಆಕಿ ಮನೆಯಲ್ಲಿದ್ದರೆ ನಾನು ಇಂದೇ ಹೊರಗೆ ಹೋಗಾಕಿ.

ಗ— ಮಗಳ ಮನೆಗೆ ಕಳಿಸಿ ಬರುವೆ, ಬಾಣಂತಿ ತನಕೆ, ಈಗ ಹೋಗಿ ಅಟ್ಟಿ ಬರುವೆ ನಿನ್ನಾಜ್ಞೆಯಂತೆ.

ಹೆ— ಜಲ್ಮ ಜಲ್ಮಕೆಸಿಗ ನಿಮ್ಮ ಲಿಸಹವಾಸದಲಾಭಾ; ಖಾತ್ರಿಯಾಯಿತು, ನನ್ನ ಮೇಲೆ ನಿಮ್ಮಯ ನಿಜಲೋಭಾ;

ಗಂ—ಬೇಗ ದೂರ ಮಾಡಿ ಬರುವೆ, ಅತ್ತೆಯ ಪೀಡೆ ನಾನು ನೀನು, ನೀನು ನಾನು ಕುಣಿಯುವಾ ಹೀಗೆ.

ಲೇ : ಶಾಂ. ಬಾ. ಹಬ್ಬು

೨

ಶ್ರೀ ರಾಮಚಂದ್ರನು ವನವಾಸಕ್ಕೆ ಹೋಗುವಾಗ್ಗೆ ಸೀತೆಗೆ ಬರಬೇಡವೆಂದಾಗ್ಗೆ ಅವರಿಬ್ಬರಲ್ಲಿ ನಡೆದ ಸಂವಾದ.

ರಾ— ರಾಜಕುವರಿ ರಾಮನ ಹೆಂಡತಿ. ದಶರಥನ ಸೊಸೆಯೆ ರಾಜಭೋಗವಿಲ್ಲವಾಯ್ತೆ ವನವಾಸ ದೆಸೆಯೇ ?

ಸೀ— ರಾಜಭೋಗ ರಾಮನಿಗೋಸುಗ ತೊರೆದು ಬಂದಿರುವೆ. ರಾಮನಿರುವ ಅಡವಿ ಕೂಡಾ ರಾಜ ಮಂದಿರವೇ ?

ರಾ— ನಲ್ಲೆ ನೀನು ಒಲ್ಲೆನೆಂದು ಹಟಮಾಡಬೇಡಾ; ಬಲ್ಲೆನಾದರು, ಘೋರವಾದ ಪತಿನಿಷ್ಠೆ ಬೇಡು.

ಸೀ— ಗಂಡ ನಿಷ್ಠುರಾಗಿ ಗುಣವಾಗಿ ನಡೆದು ಕೊಳ್ಳುವೆನು., ಬಂದ ಕಷ್ಟವ ನುಂಗಿ ಪದವಿ ಪಡೆದು ಕೊಳ್ಳುವೆನು.

ರಾ— ತನಗೆ ಬಂದ ದುಃಖದಲ್ಲಿ ಹೆಂಡತಿಯು ಇರಲೀ ಎನ್ನುವ ಹೇಡಿ ಗಂಡನೆಂದು ತಿಳಿದೆಯಾ ರಮಣಿ.

ಸೀ— ಸುಖವೇ ಬರಲಿ ದುಃಖವೇ ಬರಲಿ ಪತಿಯೇ ಪರದೈವಾ, ದುಃಖದೊಳಗು ಸುಖವ ಕಾಣವೆ ಬಿಡದಿರು, ಕೈಯಾ.

ರಾ— ಪ್ರೀತಿಯಿಂದಲೇ ಪತಿಯೇ ಕಳಿಸುವ ತವರೂರ ಸೇರು. ಪ್ರೀತಿಯಿರುವ ಮನಸಲೇ ನೀನು ಹೋಗಿ ಬಿಡು ದೂರು.

ಸೀ— ಗಂಡನಿರುವ ಹೆಂಗಸರಿಗೆ ತವರುಮನೆ ತಂಪು ಗಂಡನಿರದಿರೆ ಅವರ ತಂಪು ಕಾಯ್ದ ಖಬಣಂಚು.

ಎಸ್. ಕೆ. ಶೇಖ

## ಕಲಿತ ಹೆಣ್ಣು

ಪದ (ಹೇ ಪ್ರಭೋ ಆನಂದ ದಾತಾ ಎಂಬಂತೆ)

ಎ. ಬಿ. ಸಿ.ಡಿ. ಕಲಿತ ಹೆಣು ಆಗಿ ಮೊಸ ಹೋದೆವಣ್ಣಾ
ಗಲ್ಲ ನೋಡಿ ಗುಲಾಬಿ ಬಣ್ಣ।
ಸಂಪಿಗೆ ಎಸಳಿನಂಥ ಮೂಗು।
ಹವಳ ದಂಥಾ ಇವಳ ಹಲ್ಲು।
ಮಾತು ಕೇಳಿ ಬೆರಗು ಆದೆ ॥ ೧ ॥
ಕಸಾ ಉಡಗಲು ಬರುವ ದಿಲ್ರಿ।
ಒಲಿಯ ಊದ್ಲಿಕ್ಕೆ ಕಲಿತೆ ಇಲ್ರಿ।
ಎಂಥಾ ಹೆಣ್ಣು ಗಂಟು ಬಿತ್ತಿ ಸಾಯುತನಕ ಮುಳುವುಆತ್ರಿ ॥ ೨ ॥
ಭಕ್ರಿ ಮಾಡಂದ್ರೆ ಅಳತಾಳ್ರಿ।
ಚಹಾ ಅಂದ್ರೆ ಹಿಗ್ಗತಾಳ್ರಿ।
ಉಂಡಿ ಉಸಳಿ ಬೇಡಂತಾಳ್ರಿ। ಎ. ಬಿ. ಸಿ.ಡಿ ಕಲಿಯತಾಳ್ರಿ।
ಎಂಥಾ ಹೆಣ್ಣು ಗಂಟು ಬಿತ್ತಿ ॥ ೩ ॥
ಗೋಲ ಸಾಡಿ ಉಡತಾಳ್ರಿ।
ಎ. ಬಿ. ಸಿ, ಡಿ ಕಲಿತಾಳ್ರಿ।
ಎಂಥಾ ಹೆಣ್ಣು ಗಂಟು ಬಿತ್ತಿ।
ಸಾಯು ತನಕಾ ಮುಳುವು ಆಯಿತ್ರಿ ॥ ೪ ॥

**ಮಂದಾಕಿನಿ ಕುಲಕರ್ಣಿ ೨ನೇ ವರ್ಷ ಶಿ. ವಿ.**

## ಅಕ್ಕಮಹಾದೇವಿ ಪದ್ಯ

ಅಕ್ಕಗೊಲಿದಾ ಮಹಾದೇವಿಗೊಲಿದಾ ನಮ್ಮ ಮಲ್ಲಿಕಾರ್ಜುನದೇವಾ
ಚನ್ನ ಮಲ್ಲಿ ಕಾರ್ಜುನ ದೇವಾ ॥

ಭಕ್ತಿ ತವರು ತಾಯಿ ತಾಯಿ ಬ್ರಹ್ಮ ಮಹಾದೇವಿ ಶಕ್ತಿ ಸ್ವರೂಪಾ
ಈ ದೇವಿಗೆ ಒಲಿದಾ ॥ ೧ ॥

ಬಾಲಸೌಖ್ಯವ ಮರೆದು ಜೀವದಾಸೆಯ ತೊರೆದು ಬಾಲವಿ
ರಾಗಿನಿ ಅಧ್ಯಾತ್ಮದ ಖಣಿ ॥ ೨ ॥

ರಾಜ್ಯ ಸಂಪದ ಬಿಟ್ಟು ಕಾಮ ವಾಸನೆ ಸುಟ್ಟು ಕೌಶಿಕರಾಜನ
ಒಲಿಯದ ರಾಣಿ ॥ ೩ ॥

ಯಾರಿಗೊಲಿಯದ ದೇವಿ ದೇವ—ದೇವರ ದೇವಿ ನಾರಿವೃಂದದ
ಈ ಕಣ್ಮಣಿಗೊಲಿದಾ ಭಕ್ತಿಗೊಲಿದಾ ಅವಳಭಾವ ಕೊಲಿದಾ ನಮ್ಮ
ಮಲ್ಲಿಕಾರ್ಜುನ ದೇವಾ ಚನ್ನ ಮಲ್ಲಿಕಾರ್ಜುನ ದೇವಾ ॥ ೪ ॥

ಕನ್ನಡಮ್ಮನ ಹಿರಿಮೆ ಭಾರತಾಂಬೆಯ ಹೆಮ್ಮೆ ಮಾನವ ಕುಲದಾ
ಈ ಮಲ್ಲಿಗೆ ಗೊಲಿದಾ ॥ ೫ ॥

ಕೇಶ-ವಸ್ತ್ರವನುಟ್ಟು ದೇಶತಿರುಗಿದ ಮಣಿ ಕದಳೀಬನದಲಿ ನೆಲಸಿಹ
ಗರತಿಗೆ ॥ ೬ ॥

ಇಹದ ಗಂಡನ ಒಲ್ಲೆ ಪರದ ಗಂಡನಬಲ್ಲೆ ಇವನೇ ಎನ್ನ ಇಹ ಪರ
ಪತಿಯೆಂದು ಭಕ್ತಿಗೊಲಿದಾ ಅವಳ ಭಾವಕೊಲಿದಾ ನಮ್ಮ
ಮಲ್ಲಿಕಾರ್ಜುನ ದೇವಾ ಚನ್ನ ಮಲ್ಲಿಕಾರ್ಜುನ ದೇವಾ ॥ ೭ ॥

ಇಂ. ಪೂ ಹೊಸೂರ ಶಿ. ವಿ. ೨ನೇ ವರ್ಷ

---

೧೨ ನೆ ಪುಟದಿಂದ ಮುಂದುವರಿದದ್ದು

ಗಳ ದಯೆಯಿಂದಲ್ಲವೇ ಭೋಗಿಗಳ ಭೋಗಲಾಲಸೆಯುಹಿಂಗಿ' ಅವರಿಗೂ ಬುದ್ಧಿ ಬರುವದು !' ಭಾವನೆಯು ಬಂದು, ತಲೆಯು ಮೂರ್ತಿಯು ಎದರು ತನ್ನಿಂದ ತಾನೇ ಬಾಗಿತು. ಅಣ್ಣನಾದ ಭರತನ, ಚಕ್ರವರ್ತಿಯಾಗುವ ಲಾಲಸೆಗೆ ತಿರಸ್ಕಾರ ಭಾವನೆ ತಾಳಿದ ಅವನ ತೊಂಬತ್ತೊಂಬತ್ತು ತಮ್ಮಂದಿರೂ ವೈರಾಗ್ಯ ತಾಳಿದಾಗ, ನೀನೊಬ್ಬನೇ ಅವನೊಂದಿಗೆ ಧರ್ಮಯುದ್ಧ ಮಾಡಿ ಜಯಿಸಿ ನಿನ್ನ ಬಾಹುಬಲಿ ಎಂಬ ನಾಮ ಸಾರ್ಥಕ ಮಾಡಿಕೊಂಡರೂ ಮುಂದೆ ' ಅಣ್ಣನ ಅಪಮಾನಕ್ಕೆ ನಾನೇ ಕಾರಣನಾದೆನಲ್ಲ ' ಎಂಬ ಪಶ್ಚಾತ್ತಾಪಕ್ಕಾಗಿ, ಅಪಮಾನಿತ ಭರತನಿಗೇ ರಾಜ್ಯಸಂಪದವಿತ್ತು, ದೀಕ್ಷೆ ಪಡೆದು ತಪಸ್ಸಿಗೆ ತೆರಳಿದ ನೀನೆಂತಹ ತ್ಯಾಗಿ! ಚಳಿ, ಮಳೆ ಬಿಸಿಲಿಗೆ ಬೆದರದೆ ಅರಿಷಡ್ವರ್ಗಗಳ ಗೆದ್ದು, ನೋಡುವರ ಕಣ್ಮನಗಳಿಗೆ ಆನಂದ ನೀಡುತ್ತ ನಿರ್ಭಯದಿನಿಂತ ಆ ದಿಗಂಬರ ಮೂರ್ತಿಗೆ ಮಣಿಯಲಾರವದರೇ ಪಾಪಿಗಳು. ಅಂತಹ ತೇಜ ಆ ತ್ಯಾಗಿಗೆ. ಅವನನ್ನು ನೋಡಿ ದಣಿಯ ಬೇಕೆ ವಿನಾ ನುಡಿದು ದಣಿಯಲು ಸಾಧ್ಯವಲ್ಲ (ವರ್ಣಿಸಲಸಾಧ್ಯ ) ಮೂರ್ತಿಯ ಮಹಿಮೆಯನ್ನು ಮನದಲ್ಲೆಣಿಸುತ್ತ ನಿಂತರೆ ನಮಗೂ ಎಲ್ಲಿ ವೈರಾಗ್ಯದ ಝುಳವು ಬಡಿದು, ತಲೆಯಮೇಲೆ ಹೊತ್ತ ಜವಾಬ್ದಾರಿ ಮರೆಯುವದೋ ಎಂಬ ಹೆದರಿಕೆಯಿಂದ ಅಂತೂ ಆ ಸ್ಥಳವನ್ನು ಬಿಟ್ಟು ಕದಲಲು ಎಲ್ಲರಿಗೂ ಎಚ್ಚರಿಸಿದೆ. ಅಲ್ಲಿಂದ ಮುಂದೆ ಕಣ್ಣುಹಾಯಿಸಿದಾಗ ಎದುರಿಗೆ ಕಾಣಿಸುವ ದೃಶ್ಯ ಬಲು ರಮ್ಯ. ಕೆಳಗೆ ಸಿಹಿನೀರಿನ ಹೊಂಡ, ವಿಶಾಲ ಬಂಡೆಗಲ್ಲು. ಸಂಜೆಯ ಸಮಯ. ತಂಗಾಳಿ. ಅಲ್ಲೇ ನಮ್ಮ ಅಲ್ಪೋಪಹಾರ ತೀರಿಸಿ ಮುನ್ನಡೆದೆವು. ಹೋಗುವಾಗ ಹತ್ತಬೇಕಾದ ಮೆಟ್ಟಲುಗಳು ಬಹಳವಿದ್ದುದರಿಂದ, ಹಿಂದೆ ತಿರುಗಿ ಸೃಷ್ಟಿಯ ರಮಣೀಯತೆಯನ್ನು ನೋಡದೆ ಮುಂದೆ ಸಾಗಿದ್ದೆವು. ಇಳಿಯುವಾಗ ಆಯಾಸವಷ್ಟೇನೂ ಆಗುವಂತಿರಲಿಲ್ಲ, ಮೇಲಾಗಿ ಗೋಮಟೇಶ್ವರ ಮೂರ್ತಿಯನ್ನೂ ನೋಡುವ ಕೆಲಸವೂ ಮುಗಿದಿತ್ತು ಹೀಗಾಗಿ ಸುತ್ತ ಕಣ್ಣುಹೊರಳಿಸಿ ನೋಡಲು ಸಮಯಸಿಕ್ಕಿತು. ಎದುರಿಗೆ ಚಂದ್ರಗಿರಿ ಕಾಣಿಸುತ್ತದೆ. ಎರಡೂ ಬದಿಗಳಿಗೆ ಇಂದ್ರ ಮತ್ತು ಚಂದ್ರಗಿರಿಗಳಂತಹ ಪರ್ವತಗಳನ್ನು ಹೊತ್ತ ಬೆಳಗೊಳದೂರು ನಿಜವಾಗಿ ಧನ್ಯಪವಿತ್ರಸ್ಥಳವೇ ಹೌದು. ಇಂದ್ರಗಿರಿ ಇಳಿದು ಚಂದ್ರಗಿರಿಗೆ ಹೊರಟೆವು. ಚಂದ್ರಗಿರಿಯಲ್ಲಿ ಪ್ರಾಚೀನ ಶಿಲಾ ಲೇಖಗಳಿವೆ. ಇದೊಂದು ಸುಪ್ರಸಿದ್ಧ ಇತಿಹಾಸ ಸ್ಥಳವಾಗಿದೆ. ಹಿಂದೆ ಇದನ್ನು ಋಷಿಗಿರಿ, ತೀರ್ಥಗಿರಿ ಎಂದೂ ಕರೆಯುತ್ತಿದ್ದರಂತೆ. ಮೊದಲು ಶಿಖರವನ್ನು ಪ್ರವೇಶಿಸಿದೊಡನೆ ಅಲ್ಲಿಎರಡು ಜೋಡಿ ಜಿನ ಮುನಿಗಳ ಚರಣಗಳಿವೆ. ಇಲ್ಲಿನಿಂತು ನೋಡದರೆ ಪ್ರಕೃತಿ ಸೌಂದರ್ಯವು ಬಹು ಮನೋಹರ. ಎದುರಿಗೆ ಗೊಮ್ಮಟರಾಯನು ಇಲ್ಲಿಯ ಎಲ್ಲ ಸ್ಥಳಗಳಿಗೂ ಬೆಂಗಾವಲಾಗಿ ನಿಂತ ಮಹಾ ಮೂರ್ತಿಯಾಗಿ ಕಾಣುತ್ತಾನೆ. ಈ ಶಿಖರಕ್ಕೆ ಹತ್ತುವ ಸೋಪಾನಗಳಲ್ಲಿಯೇ ಚಕ್ರವರ್ತಿ ಚಂದ್ರಗುಪ್ತನ ಗುರು ಶ್ರೀ. ಭದ್ರಬಾಹು ಮುನಿಗಳ ಗುಹೆಯು ಇರುವದು. ಭದ್ರಬಾಹುಗಳೂ ಚಂದ್ರಗುಪ್ತನೂ ಇಲ್ಲೇ ಸಮಾಧಿ ಪಡೆದರಂತೆ. ಅಂತೆಯೇ ಇದಕ್ಕೆ ಚಂದ್ರಗುಪ್ತನ ಹೆಸರಿಂದ ಚಂದ್ರಗಿರಿ ಎಂಬ ಹೆಸರು ಬಂದಿದೆಯಂತೆ.

ಇದೇ ಪರ್ವತದ ಮೇಲೆ ರನ್ನಕವಿಯ ' ಶ್ರೀ ಕವಿರತ್ನ ರನ್ನ' ಎಂಬ ಹಸ್ತಾಕ್ಷರವಿದೆ. ಆತನು ತನ್ನ ಗುರುವಾದ ಅಜಿತಸೇನಾಚಾರ್ಯರೊಂದಿಗೆ ಇಲ್ಲಿ ವಾಸವಾಗಿದ್ದು, ವಿದ್ಯಾವ್ಯಾಸಂಗ ಮಾಡಿದನಂತೆ. ಇವುಗಳಲ್ಲದೆ ಇಲ್ಲಿ ಶಾಂತೀಶ್ವರ ಬಸದಿ, ಮಹಾನವಮಿ ಮಂಟಪ, ಭರತೇಶನ ವಿಗ್ರಹ, ಪಾರ್ಶ್ವನಾಥ ಬಸದಿ, ಮಜ್ಜಿಗಣ್ಣನ ಬಸದಿ, ಚಾವುಂಡರಾಯನ ಬಸದಿ, ಎರಡುಕಟ್ಟೆಯ ಬಸದಿಗಳಲ್ಲದೆ, ಹೊಯ್ಸಳ ವಂಶದ ವಿಷ್ಣುವರ್ಧನನ ಹೆಂಡತಿ ಶಾಂತಲೆಯು ಕಟ್ಟಿಸಿದ ಸವತಿಗಂಧವಾರಣ ಬಸದಿಯೂ ಇರುವವು. ಇವೆಲ್ಲವೂ ಒಂದೊಂದೂ ನಮ್ಮ ಇತಿಹಾಸವನ್ನು ಹೇಳುತ್ತವೆ. ಇಷ್ಟಾದರೂ ನಮ್ಮ ಗೊಮ್ಮಟೇಶ್ವರನ ಮೂರ್ತಿಯು ಯಾರಿಂದ ಯಾವಕಾಲದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿತೆಂಬದನ್ನು ನಿರ್ದಿಷ್ಟವಾಗಿ ತಿಳಿಯಲು ಅನುಕೂಲ ಶಿಲಾಶಾಸನಗಳು ದೊರೆತಿಲ್ಲವಂತೆ, ಶ್ರವಣ ಬೆಳ್ಗೊಳದ ಕ್ಷೇತ್ರದಲ್ಲಿ ಭಗವಾನ್ ಬಾಹುಬಲಿ ಸ್ವಾಮಿದೇವರನ್ನು ಸ್ಥಾಪಿಸಿದ ಚಾವುಂಡರಾಯನ ವಂಶಸ್ಥರಾದ ಚಂಗಾಳ್ವ ಮನೆತನದ ಅರಸರು ಈ ಬಿಂಬಪ್ರತಿಷ್ಠೆ ಮಾಡಿಸಿದರೆಂದು ಹೇಳುತ್ತಾರೆ ಈ ಊರಿಗೆ ಶ್ರವಣ ಬೆಳಗೊಳವೆಂಬ ಹೆಸರೇಕೆ ಬಂದಿತೆಂಬ ಬಗೆಗೂ ಸರಿಯಾಗಿ ನಮಗೆ ಯಾರೂ ತಿಳಿಸಲಿಲ್ಲ. ಆದರೆ ' ಬೆಳಗೊಳ ' ಇದಕ್ಕೆ ಮಾತ್ರ ಒಬ್ಬೊಬ್ಬರು ಒಂದೊಂದು ರೀತಿ ಹೇಳಿದರು. ತಾನೇ ಇಷ್ಟು ಸುಂದರವಾದ ವಿಗ್ರಹ ಕೆತ್ತಲು ಕಾರಣನಾದೆನೆಂದು ಗರ್ವಪಟ್ಟ ಚಾವುಂಡರಾಯನಿಗೆ ದೇವಿಯ ಶಾಪದಿಂದ ಗೊಮ್ಮಟೇಶ್ವರ ಮೂರ್ತಿಗೆ ಪೂರ್ಣಾಭಿಷೇಕ ಮಾಡಿಸಲು ಸಾಧ್ಯವಾಗದಾಗಲು, ಆ ದೇವಿಯು ಭಕ್ತನ ಮನ ನೋಯಿಸಬಾರದೆಂದು ಒಂದು ಬಿಳಿಯ ಗುಳ್ಳದ ಕಾಯಿಯಲ್ಲಿ ಹಾಲು ತುಂಬಿಕೊಂಡು, ಮುದುಕಿಯ ವೇಷದಿಂದ ಚಾವುಂಡ

ರಾಯನಿಗೆ ಭೆಟ್ಟಿಯಾಗಿ ಮೂರ್ತಿಗೆ ಪೂರ್ಣಾಭಿಷೇಕ ಮಾಡಿಸಿದ್ದರಿಂದ ಅದಕ್ಕೆ ಬಿಳಿಗುಳ (ಬೆಳ್ಗೊಳ) ಎಂಬ ಹೆಸರಾಯ್ತೆಂದೂ, ಕೆಲವರು ಈ ಊರಿನ ನಡುವೆ ಶುಭ್ರ ನೀರಿನ ಕೊಳವಿದ್ದುದರಿಂದ ಬೆಳ್ಗೊಳ ಎಂಬ ಹೆಸರಾಯ್ತೆಂದು ಹೇಳುತ್ತಾರೆ.

ಅಂದು ಇಷ್ಟೆಲ್ಲ ನೋಡುವದರಲ್ಲೇ ಸಂಜೆ ೮ ಗಂಟೆಯಾಯಿತು. ಧರ್ಮಾರ್ಥ ಛತ್ರದಲ್ಲಿ ಸ್ಥಳವು ದೊರೆಯಿತು. ಅಂದು ಅಲ್ಲೇ ಅಡಿಗೆ ಊಟ ತೀರಿಸಿ ಮಲಗಿದೆವು. ಮುಂಜಾನೆ ೫ ಕ್ಕೆ ಹಳೇಬೀಡಿನ ಕಾರ್ಯಕ್ರಮ. ಅದರಂತೆ ಮುಂಜಾನೆ ೫ ಕ್ಕೆ ಪ್ರಾತರ್ವಿಧಿ, ಪ್ರಾರ್ಥನೆಗಳನ್ನು ತಿರಿಸಿ ೬ ಕ್ಕೆ ಹಳೆಬೀಡಿನ ಅಭಿಮುಖವಾಗಿ ಹೊರಟೆವು. ಹಳೇಬೀಡು ತಲ್ಪಿ ಬಾಗಿಲಬಳಿ ನಿಂತಾಗಲೇ ಒಳಗಿನ ಶಿಲ್ಪಕಲೆಗಳೆಡೆ ಕಣ್ಣು ಹಾಯ್ದು, ಮನವು ಅದಕ್ಕೆ ಮಾರು ಹೋಯ್ತು' ಶಿರವು ತನ್ನಿಂದ ತಾನೇ ಕವಿಯ ಕಲೇಗಾಗಿ ಬಾಗಿತು, ಕೂಡಲೇ ಕವಿ ಕು. ವೆಂ. ಪು ರವರ ಬಾಗಿಲೊಳು ಕೈಮುಗಿದು ಒಳಗೆ ಬಾ ಯಾತ್ರಿಕನೆ. ಶಿಲೆಯಲ್ಲ ಈ ಗುಡಿಯು ಕಲೆಯ ಬಲೆಯುಎಂಬ ಉದ್ಗಾರವು ತಾನೇ ಬಾಯಿಂದ ಹೊರಟಿತು. ಹೊಯ್ಸಳರ ಕಾಲದಲ್ಲಿ ವೈಭವದಿಂದ ಮೆರೆದ ಈ ನಾಡು ಈಗ ಅಲ್ಲಿನ ಭಾಗವು ಬಹಳ ಕ್ಷೀಣವಾಗಿ ಹಾಳಾಗಿ ಹೋಗಿದೆ.ಇದು ಮೊದಲು ಹೊಯ್ಸಳರ ರಾಜಧಾನಿಯಾಗಿದ್ದ ದ್ವಾರಸಮುದ್ರ "ದ್ವಾರಾವತಿ,, ಯಾಗಿತ್ತು. ಆಗಿನ ಕಾಲದಲ್ಲಿ ಇದು ಶಿಲ್ಪಕಲೆಯಿಂದ ಕೂಡಿದ ಕಟ್ಟಡಗಳಿಂದ ಮೆರೆದ ನಾಡಾಗಿತ್ತು ಈಗಲು ಪ್ರಪಂಚದ ಪ್ರೇಕ್ಷಣೀಯ ಸ್ಥಳಗಲ್ಲೊಂದಾಗಿದೆ ಹೊಯ್ಸಳ ಹಾಗೂ ಕೇದಾರೇಶ್ವರ ದೇವಾಲಯದ ಆವಾರದ ಸುತ್ತಲೂ ರಾಮಾಯಣ.ಭಾಗವತ, ಮಹಾಭಾರತ ಕತೆಗಳು ಕಲ್ಲಿನಿಂದ ಕೆತ್ತಲ್ಪಟ್ಟವೆ. ಇಲ್ಲಿನ ಕುಸುರು ಕಲೆಗಳನ್ನು ಕೆತ್ತುವಾಗ ಶಿಲ್ಪಿಯು ಯಾವ ಭಾವನೆಯಲ್ಲಿ ಯಾವ ಆಯುಧಗಳಿಂದ, ಎಷ್ಟು ಲಕ್ಷ್ಯಪೂರ್ವಕ ಕೆತ್ತಿರಬಹುದೆಂಬದನ್ನು ಊಹಿಸುವದೂ ಸಹ ನಮ್ಮ ಮಿದುಳಿಗೆ ನಿಲುಕದ ಮಾತು.

ಇಲ್ಲಿ ಮುಖ್ಯವಾದ ದೇವಸ್ಥಾನಗಳೆಂದರೆ, ಕೇದಾರೇಶ್ವರ, ಹಾಗೂ ಜೈನಬಸ್ತಿಗಳು. ಇಲ್ಲಿನ ಶಿಲ್ಪಕಲೆಯನ್ನು ಚಿತ್ರಿಸುತ್ತ ನಡೆದರೆ ನಮ್ಮ ವೇಳೆ, ಹಾಳೆ, ವಿಚಾರ ಎಲ್ಲವೂ ಅದರ ಮುಂದೆ ಬಹಳ ಸಣ್ಣದಾಗಬಹುದು. ಸಂಕ್ಷಿಪ್ತ, ನೋಡಿದ ಕಣ್ಣಿಗೆ ಸಿಕ್ಕ ಹಬ್ಬದ ಸ್ವಲ್ಪವೇ ವರ್ಣನೆ ಮಾಡಿ, ನನ್ನ ನಂದದದಲ್ಲಿ ಇತರರಿಗೂ ಹಂಚುವದಾದರೆ, ಹೊಯ್ಸಳೇಶ್ವರ ದೇವಸ್ಥಾನದ ಒಂದು ಭಾಗದಿಂದ ಪ್ರದಕ್ಷಣೆ ಹಾಕುತ್ತಾ ಹೊರಟರೆ, ಸರಿಯಾಗಿ, ದೇವಸ್ಥಾನವನ್ನು ಕಟ್ಟಿಸಿದ ದೊರೆಯ ದರ್ಬಾರು, ಸಮುದ್ರಮಥನ, ಶಿವಪಾರ್ವತಿಯರ ದರ್ಬಾರು, ವಾಮನಾವತಾರ, ಶಿವನ ನೃತ್ಯ ಮಹಾಭಾರತ ಯುದ್ಧ, ಅಂಧಕಾಸುರ ವಧೆ, ಮತ್ಸ್ಯಯಂತ್ರ ಬೇಧ, ವೇಣುಗೋಪಾಲ, ಸರಸ್ವತಿ ನೃತ್ಯ ಶಚಿ, ಇಂದ್ರರು ಆನೆಯ ಮೇಲೆ, ಗೋವರ್ಧನಗಿರಿಧಾರಿ, ವರಹಾವತಾರ, ದುಶ್ಯಾಸನ ವಧೆ, ತ್ರಿವಿಕ್ರಮಾವತಾರ, ಚಕ್ರವ್ಯೂಹ ಭೇದ, ರಾವಣನು ಕೈಲಾಸ ವೆತ್ತಿದ್ದು, ನೃತ್ಯ ಭಂಗಿಯ ಗಣೇಶ, ಗಜೇಂದ್ರಮೋಕ್ಷ, ಶ್ರೀಕೃಷ್ಣ ಪಾರಿಜಾತ, ಕಿರಾತಾರ್ಜುನ, ರಾಮನು ಮರೆಯಲ್ಲಿ ನಿಂತು ಬಿಲ್ಲು ಬಿಡುವಾಗವಾಲಿ, ಸುಗ್ರೀವರನ್ನು ಗುರುತಿಸುವದು, ಹನುಮಂತನು ಸೀತೆಗೆ ರಾಮನ ಉಂಗುರ ತಂದು ಕೊಟ್ಟದ್ದು ಇವೇ ಮುಂತಾದವುಗಳಲ್ಲದೆ, ಕೇದಾರೇಶ್ವರ, ಹೊಯ್ಸಳೇಶ್ವರರ ದೇವಾಲಯಗಳಲ್ಲಿ ಲಕ್ಷ್ಯವಿಟ್ಟು ನೋಡಬೇಕಾದ ಕೆಲವೊಂದು ವಿಗ್ರಹಗಳಿವೆ. ಅವೆಂದರೆ,

ಜ್ವಾಲಾ ನರಸಿಂಹನ ವಿಗ್ರಹ, (ಇದರಲ್ಲಿ ಜ್ವಾಲೆಯನ್ನು ಚನ್ನಾಗಿ ಕೊರಿಯಲಾಗಿದೆ) ರಾವಣನು ಎತ್ತಿದ ಕೈಲಾಸ ಪರ್ವತದಮೇಲೆ ಕೆತ್ತಿದ ಕಡಲೆ ಕಾಳಿನಷ್ಟು ಬಸವ ಅವರೇ ಕಾಳಿನಷ್ಟು ಆನೆಯನ್ನು, ಕಪಿಯೊಂದು ಒಬ್ಬ ಹೆಣ್ಣುಮಗಳ ಸೀರೆಯ ನೀರಿಗೆ ಹಿಡಿದು ಎಳೆಯುತ್ತಿದ್ದು, ಅವಳು ಗಾಬರಿಯಿಂದ ಪುನಃ ಅದನ್ನು ಕಪಿಯಿಂದ ಎಳೆದುಕೊಳ್ಳುತ್ತಿರುವ ದೃಶ್ಯ (ಆ ಮೂರ್ತಿಯ ಮುಖದ ಮೇಲಿನ ಭಾವ, ಹೆದರಿದಾಗ ಅವಳ ಕಾಲಿನಲ್ಲೆದ್ದ ನರಗಳೂ ಸಹ ಕಾಣಿಸುವಂತಿದೆ) ಕೆಲವು ವಿಗ್ರಹಗಳ ಕೈಗೆ ಕೆತ್ತಿದ ಬಳೆಗಳು ತಿರುಗುವವೇನೋ ಎಂಬಂತೆ ಕಾಣಿಸುವಂತಿರುವ ಸೊಬಗು ಇವೆಲ್ಲವೂ ತಾನೇ ತಾನಾಗಿ ಎದ್ದು ಕಾಣಿಸುತ್ತಿದೆ.

ಕೇದಾರೇಶ್ವರನ ದೇವಾಲಯುವಾದರೂ ಹೊಯ್ಸಳೇಶ್ವರ ದೇವಾಲಯವನ್ನೇ ಹೋಲುತ್ತಿದೆ. ಇಲ್ಲಿನ ಮೋಹಿನಿ, ದುರ್ಗಾ, ಕಾಳಿ ಭೈರವನೃತ್ಯಗಳು ಜನರ ಲಕ್ಷ್ಯವನ್ನು ಬಹುವಾಗಿ ಸೆಳೆಯುತ್ತಿವೆ. ಇಲ್ಲಿ ದೇವತಾ ಪೂಜೆ ನಡೆಯುತ್ತಿಲ್ಲ. ಇದಾದರೂ ಹೊಯ್ಸಳೇಶ್ವರ ಗುಡಿಯಂತೆ ಎತ್ತರ ಜಗುಲಿಯ ಮೇಲೆ ನಿರ್ಮಿಸಲ್ಪಟ್ಟದ್ದು, ಆವಾರದ ಸುತ್ತಲೂ ಕೆಳಗಿನಿಂದ ಮೇಲ್ಭಾಗದ ವರೆಗೂ ಆನೆಯ ಸಾಲು, ಕುದುರೆಯನ್ನೇರಿದ ನೂರಾರು, ಸಿಂಹಗಳು, ಮಕರಗಳು, ಹಂಸಗಳು, ಲತೆಗಳು, ರಾಮಾಯಣ, ಮಹಾಭಾರತ, ಭಾಗವತ ಕತೆಗಳಿಗೆ ಸಂಬಂಧಪಟ್ಟ ಚಿತ್ರಗಳಿಂದ ಅಲಂಕೃತವಾಗಿದೆ.

ಈ ಎಲ್ಲ ಶಿಲ್ಪಕಲೆಯ ಸೊಬಗನ್ನು ಕಂಡು ಕಣ್ದಣಿಯುವಂತೆಯೇ ಇರಲಿಲ್ಲ. ಆದರೆ ಮುಂದೆ ನಮ್ಮ ಕಾರ್ಯಕ್ರಮವು ಬೇಗನೆ ಮುಗಿಯಬೇಕಿತ್ತು. ಬೇರೂರಿಗೆ ಹೋದರೂ ಇಂತಹ ಕಲೆಯು ನೋಡಲು ಸಿಗುವದಿಲ್ಲಾ ಎಂಬ ಸಮಾಧಾನದಿಂದ ಗುಡಿಯಿಂದ ಹೊರಬಂದು, ನದಿ ದಂಡೆಯ ಸಮೀಪಕ್ಕೆ ಗುಡಿಯ ಬಾಗಿಲಿನ ಬಯಲಿನಲ್ಲಿ ಕುಳಿತು ಕಟ್ಟಿಕೊಂಡು ತಂದ ಅವಲಕ್ಕಿ ಉಂಡೆಗಳನ್ನು ಮೆಲ್ಲುತ್ತಾ ಅದರೊಂದಿಗೇ ಶಿಲ್ಪಕಲೆಯ ಸೊಬಗನ್ನೂ ಸವಿಯುತ್ತಾ ಅಲ್ಲಿಯ ಕಾರ್ಯಕ್ರಮ ಮುಗಿಸಿ, ಬೇಲೂರಿನ ಮಾರ್ಗ ಹಿಡಿದೆವು. ಮಧ್ಯಾಹ್ನ ಸುಮಾರು ೧೨-೩೦, ೧ ಗಂಟೆಗೆ ಬೇಲೂರು ತಲ್ಪಿದೆವು. ಬೇಲೂರಿಗೆ ಬಂದೊಡನೆ ನನ್ನ ಎಲ್ಲ ಪರಿವಾರಕ್ಕೂ ನಮ್ಮ ಸೀಮೆಯ ಪರಿಚಯಮಾಡಿಕೊಡುತ್ತಿರುವೆನೆಂಬ ಮಹದಾನಂದ ನನಗೆ ಹೆಬ್ಬಾಗಿಲು ದಾಟಿದೊಡನೆ ಮುಂದೆಯೇ ದೇವಸ್ಥಾನಕ್ಕೆ ಎದುರಾಗಿ ನಿಂತ ಮುದ್ದಾದ ಗರುಡನ ವಿಗ್ರಹ ಅದು ಈಗೀಗ ಕೆತ್ತಿದ್ದು. ಇಲ್ಲಾದರೂ ಹಳೇ ಬೀಡಿನಂತೆಯೇ ಗುಡಿಯು ಎತ್ತರದ ಮೇಲೆ ನಿಂತಿದೆ.

ಹಳೇಬೀಡಿನಂತೆ ಇಲ್ಲೂ ದೇವಸ್ಥಾನದ ಹೊರ ಆವಾರದ ಗೋಡೆಯೆಲ್ಲಾ ಶಿಲ್ಪಕಲೆಯಿಂದಲೇ ಮುಚ್ಚಲ್ಪಟ್ಟಿದೆ. ಮೊದಲು ಆನೆಯ ಸಾಲು, ಸಿಂಹದ ಮುಖಗಳು, ಮುಂದೆ ಲತಾಬಳ್ಳಿಗಳು, ಅದರಲ್ಲೇ ಕೊರೆದಿರುವ ಪ್ರಾಣಿವರ್ಗ, ಸಸ್ಯವರ್ಗಗಳೂ ಯಕ್ಷರುಗಳೂ, ಜಿನ, ಬುದ್ಧ ಪಶುಪಕ್ಷಿ, ಬೇಟೆಗಾರರನ್ನೂ ಅದರಲ್ಲಿ ಕೊರೆಯಲಾಗಿದೆ. ಕೆಲವೆಡೆಗಳಲ್ಲಂತೂ ಸಣ್ಣ ಸಣ್ಣ ಹೆಣ್ಣು ಮೂರ್ತಿಗಳು. ಮಕ್ಕಳನ್ನು ಸಮಾಧಾನ ಪಡಿಸುತ್ತಿರುವ ಮಾತೆ, ರಾಮಾಯಣ, ಮಹಾಭಾರತಗಳ ಕಾಲದ ವೀರಾಗ್ರಣಿಗಳು, ಹೊಯ್ಸಳರಾಜನ ದರ್ಬಾರು, ಕೈಲಾಸ ಪರ್ವತವನ್ನೆತ್ತಿದ ರಾವಣ, ನರಸಿಂಹಾವತಾರ, ವಾಮನಾವತಾರ, ಪರಶುರಾಮ, ಕಾಳಿಯನರ್ತನ ಹೀಗೆ ಅನೇಕ ಮನಮೋಹಕ ಸುಂದರ ವಿಗ್ರಹಗಳಿವೆ. ಇವೆಲ್ಲಕ್ಕೂ ಹೆಚ್ಚಾಗಿ ಮನವನ್ನಾಕರ್ಷಿಸುವ ಅತಿ ಸುಂದರ, ಮೋಹಕ, ಆಶ್ಚರ್ಯಕರ ಶಿಲ್ಪಕಲೆಗಳೆಂದರೆ ಮದನಕೈ (ಮದನಿಕಾ) ಬೊಂಬೆಗಳು ಶಿಲಾಬಾಲಿಕಿಯರದು. ದೇವಸ್ಥಾನದ ಹೊರಭಾಗದಲ್ಲಿರುವ ಈ ಮೂವತ್ತೆಂಟು ವಿಗ್ರಹಗಳ ಬಗ್ಗೆ ನಾವು ಎಷ್ಟು ಬಣ್ಣಿಸಿದರೂ ಕಡಿಮೆಯೇ.

ಇವು ದೇವಸ್ಥಾನದ ಒಳಭಾಗದಲ್ಲೂ ನವರಂಗ ಮಂಟಪದ ಮೇಲ್ಭಾಗದಲ್ಲಿರುವ ಭುವನೇಶ್ವರಿಯ ನಾಲ್ಕು ದಿಕ್ಕುಗಳಲ್ಲೂ ಕಂಬದ ಮೇಲೆ ಓರೆಯಾಗಿ ಸ್ಥಾಪಿಸಲ್ಪಟ್ಟಿವೆ. ಕರಿಯ ಛಾಯೆಯ ಕಲ್ಲುಗಳಲ್ಲಿ ಅತ್ಯಂತ ಸೂಕ್ಷ್ಮ ಅಂಗಸೌಷ್ಠವದಿಂದ ಕೂಡಿರುವ ಈ ವಿಗ್ರಹಗಳು ಕಬ್ಬಿಣದಲ್ಲಿ ಎರಕ ಹೊಯ್ದ ಗೊಂಬೆಗಳಂತಿವೆ. ಸ್ತ್ರೀಗೆ ಸಹಜವಾದ ಮೈಕಟ್ಟು, ನಾಚಿಕೆ ಭಯ, ಉದ್ರೇಕ, ಶಾಂತತೆ ರೌದ್ರತೆ, ಬೆಡಗು, ಬಿನ್ನಾಣಗಳೆಲ್ಲವೂ ಆಯಾ ಸಂದರ್ಭಕ್ಕೆ ಹೋಲುವಂತೆ ಆಯಾ ಚಿತ್ರಗಳಲ್ಲಿ ಮೂಡಿ ನಿಂತಿವೆ. ಆ ಬಾಲಿಕೆಯರ ಕೈಬಳೆ, ತಿಲಕ ಉಂಗುರಗಳೂ ಸಹ ಎದ್ದು ಕಾಣಿಸಿ ಶಿಲಾಬಾಲಿಕೆಯರ ಸೌಂದರ್ಯವನ್ನು ಹೊರಪಡಿಸುತ್ತಿದೆ. ಬಳೆಗಳೂ, ಉಂಗುರಗಳೂ ಸಹ ಕೈಯ್ಯಲ್ಲಿ ಸರಿಯುಂತಿವೆ. ಪ್ರತಿಯೊಂದು ವಿಗ್ರಹದ ಹಿಂದಿನ ಪ್ರಭಾವಳಿ, ತಲೆಯ ತುರುಬಿಗೆ ಅಲಂಕರಿಸಿರುವ ಆಭರಣ (ಈಗಿನ ಜಾಳಿಗೆ) ಗಳ ಕುಸುರು ಕಲೆಗಳನ್ನು ಬಣ್ಣಿಸುವ ಬಾಯಿ ಸಣ್ಣದಾಯಿತು! ಒಬ್ಬಳು ಬಾಲಿಕೆ ಕನ್ನಡಿಯಲ್ಲಿ ತನ್ನ ಸೌಂದರ್ಯ ನೋಡಿಕೊಳ್ಳುತ್ತ ತನ್ನ ಮೈಬೆಡಗಿಗೆ ತಾನೇ ಮನಸೋತಿದ್ದರೆ, ಮತ್ತೊಬ್ಬಳು ಓಕುಳಿಯಾಟದಲ್ಲಿದ್ದಾಳೆ, ಮಗದೊಬ್ಬಳು ಕೇಶಾಲಂಕಾರದಲ್ಲಿದ್ದಾಳೆ. ಒಬ್ಬಳು ಆಭರಣ ಪ್ರಿಯಳಾಗಿ ಕಾಣಿಸುತ್ತಿದ್ದರೆ ಇನ್ನೊಬ್ಬಳು ಕೋತಿ ಕಾಟದಿಂದ ಕೋಪಾವಿಷ್ಟಳಾಗಿ ತನ್ನ ಅಂಗ ಸೌಂದರ್ಯವನ್ನು ಪ್ರದರ್ಶಿಸುತ್ತಿದ್ದಾಳೆ. ಕೆಲವರು ಗಾನ ಪರವಶಳಾದರೆ ಮತ್ತೆ ಕೆಲವರು ನರ್ತನೋನ್ಮತ್ತರಾಗಿದ್ದಾರೆ. ಒಬ್ಬಳಂತೂ ತನ್ನ ಸೀರೆಯಲ್ಲಿ ಕಾಣಿಸಿದ ಚೇಳನ್ನು ಕಂಡು ಭೀತಳಾಗುವನೆವದಿಂದ ತನ್ನ ಅಂಗ ಸೌಂದರ್ಯವನ್ನು ಪ್ರದರ್ಶಿಸುತ್ತಿದ್ದಾಳೆ. ಹೀಗೆ ಒಂದೇ, ಎರಡೇ, ಅನೇಕ ಭಾವ ಭಂಗಿಗಳಲ್ಲಿ ಆ ಶಿಲಾಬಾಲಿಕೆಯರು ತಮ್ಮ ಅಂಗಾಂಗಗಳ ಪ್ರದರ್ಶನ ಮಾಡುವ ರೀತಿಯನ್ನು ಕಂಡರೆ, ಆಗಿನ ಹೊಯ್ಸಳಅರಸನೂ, ರಾಣಿಯೂ ಶಿಲ್ಪಿಗಳೂ ಎಷ್ಟು ರಸಿಕ ಮನೋವೃತ್ತಿಯವರಿದ್ದರೆಂಬದನ್ನು ಸಹಜವಾಗಿ ಊಹಿಸಲು ಬರುವಂತಿದೆ ಇವೆಲ್ಲವುಗಳಲ್ಲಿ ಎದ್ದು ಕಾಣುವ ಕೆಲವು ದೃಶ್ಯಗಳಿಂದಂತೂ ಶಿಲ್ಪಿಯಾಗಲೀ ಅಥವಾ ರಾಜನಾಗಲೀ ಅತೀ ಶೃಂಗಾರಪ್ರಿಯರಿದ್ದರೆಂಬದು ಒಡೆದು ಕಾಣುತ್ತಿದೆ. ಮಂಗವು ಸೀರೆಯನ್ನೆಳೆಯುತ್ತಿರುವ ಬಾಲಿಕೆಯನ್ನೇ ಅಲ್ಲೇಕೆ ಚಿತ್ರಿಸಿರಬೇಕೆಂಬುದರ ಅರ್ಥವಂತೂ ಸ್ಪಷ್ಟವಾಗಿ ಮಾನವನ ಮನಸ್ಸನ್ನು ಎತ್ತಿ ತೋರಿಸುತ್ತಿದೆ. ಅದನ್ನು ನೋಡಿದೊಡನೆ ಕವಿವರ್ಯರೊಬ್ಬರು ಬರೆದ 'ಕೋತಿ ಕೋಳಿಗಳ ಮದುವೆ' ಯ ನೆನಪಾಯ್ತು. ಗಂಡೆಂದರೆ ಕೋತಿ (ಮಂಗಚೇಷ್ಟೆ) ಹೆಣ್ಣೆಂದರೆ ಜಂಬದ ಕೋಳಿ, ಇದೇ ಅರ್ಥದಿಂದ ಕಟಿದಿರಬೇಕು, ಈ ಮೂರ್ತಿಯನ್ನು ಎನಿಸಿತು. ಆ ಮೂರ್ತಿಗಳ ಸೌಂದರ್ಯವನ್ನು ಬರೆವಣಿಗೆಯಲ್ಲಿ ಎಷ್ಟೇ ಸುಂದರ ರೂಪ

ಕೊಟ್ಟು ವರ್ಣಿಸಿದರೂ ಸಹ, ಈ ಶಬ್ದವರ್ಣನೆಯು ಆ ವಸ್ತು ಶಿಲ್ಪದ ಸುಂದರತೆಗೆ ಸರಿದೂಗಲಾರದು. ನಮ್ಮಲ್ಲಿರುವ ಶಬ್ದ ಭಂಡಾರದಿಂದ ನಾವು ಒಂದು ಸುಂದರ ರೂಪದ ಕಲ್ಪನೆಯನ್ನು ಜನರ ಮುಂದಿಡುವದೇನೂ ಅಷ್ಟು ಕಷ್ಟವಲ್ಲ. ಆದರೆ ಅದೇ ಸುಂದರ ಮೂರ್ತಿಯನ್ನು ಒಬ್ಬ ಶಿಲಾ ಶಿಲ್ಪಿಯು ಶಿಲೆಯಲ್ಲಿ ಕೊರೆದು, ಜನರ ಮನವನ್ನಾಕರ್ಷಿಸುವಂತೆ ಮಾಡಿರುವದೊಂದು ಶಿಲ್ಪಿಯ ಅಪೂರ್ವಕಲೆ, ಆ ಕಲೆಯನ್ನು ಈ ದೇವಸ್ಥಾನಗಳನ್ನು ಕಟೆದ ಶಿಲ್ಪಿಗಳು ಸಂಪೂರ್ಣ ಸಾಧಿಸಿದ್ದಾರೆ.

ಗಿಳಿಯನ್ನು ತನ್ನ ತೋಳವೇಲಿಟ್ಟುಕೊಂಡು ಆಡಿಸುತ್ತಿರುವ ಮದನಿಕೆ, ನೃತ್ಯಭಂಗಿಯಲ್ಲಿ ನಿಂತ ನರ್ತಕಿ, ವೀಣಾಪಾಣಿಯಾಗಿ ಗಾನ ನುಡಿಸುತ್ತಿರುವ ಬಾಲಿಕೆ ಪ್ರತಿಯೊಂದೂ, ಒಂದೊಂದು ವೈಶಿಷ್ಟ್ಯದಿಂದ ತಮ್ಮ ಸೊಬಗನ್ನು ಸಹಜ ಸೌಂದರ್ಯದಲ್ಲಿ ಹೊರಸೂಸುತ್ತಿವೆ. ಗರ್ಭಗುಡಿಯೊಳಗೆ ನಿಂತಿರುವ ಸುಮಾರು ೯ ಅಡಿ ಎತ್ತರದ ಮೋಹಿನಿ ಅವತಾರದ ಚನ್ನಕೇಶವನ ಸುಂದರ ಮೂರ್ತಿಯು ಮತ್ತು ಇದೇ ಪ್ರಾಕಾರದಲ್ಲಿ ಮತ್ತೊಂದು ಗುಡಿಯಲ್ಲಿರುವ ಸುಮಾರು ೬ ಅಡಿ ಎತ್ತರದ ಕಪ್ಪೆ ಚನ್ನಿಗರಾಯನ ವಿಗ್ರಹದ ಸೌಂದರ್ಯವನ್ನಂತೂ ನೋಡಿ ದಣಿಯ ಬೇಕೇ ಹೊರತು ಅಡಿ ದಣಿಯಲು ಸಾಧ್ಯವಿಲ್ಲ. ಅಂತೆಯೇ ಕವಿವರ್ಯರೊಬ್ಬರು "ಎಂಥ ಸುಂದರ ಮೂರ್ತಿಯು ಕೇಶವನ ನೋಡಿರೆ, ಎಂಥ ಸುಂದರ ಕೀರ್ತಿಯು ॥ ಎಂಥ ಸುಂದರ ಮೂರ್ತಿ, ಎಂತು ಬಣ್ಣಿಪೆ ನಾನು, ಚಿತ್ತದಯಾನಿಧೆ ಕಾಂತವೇಲಾಪುರೀಶನ" ಎಂದಿದ್ದಾರೆ. ಈ ಮೂರ್ತಿಗಳ ಸಲುವಾಗಿ ನನಗಾದ ಒಂದೇ ಒಂದು ಅಪೂರ್ವ ಅನುಭವ, ಈಗ ಹೇಳುವಾಗಲೂ ಒಂದು ವಿಧ ಕಳವಳ. ಇಲ್ಲಿ ಸ್ವಲ್ಪ ನನ್ನ ಸ್ವಂತದ ಬಗ್ಗೆ ಹೇಳಬೇಕಾಗಿದೆ. ಆದರೆ ಆ ವಿಷಯವು ಸ್ವಂತದ್ದಾದರೂ ಸಹ ಆ ಭಾವನೆ ಬಂದುದು ಆ ಮೂರ್ತಿ ಅಥವಾ ಆ ಮೂರ್ತಿಯನ್ನು ಕಟೆದ ಶಿಲ್ಪಿಗಾಗಿ.

ನಾನು ಮನಃಪೂರ್ವಕ ಆರಾಧಿಸುವ ನನ್ನ ಇಷ್ಟ ದೇವತೆಗಳು ಮೂರು, ಒಂದು ಬಲವಾನ್ ಜಗಜಟ್ಟಿ ಹನುಮಂತ, ಎರಡು, ವಿದ್ಯಾಧಿಪತಿ ವಿಘ್ನೇಶ್ವರ, ಮೂರು ಶಕ್ತಿ ದೇವದೆ ದುರ್ಗಾಮಾತೆ. ಇವರ ಹೊರತಾಗಿ ನನಗೆ ಮನಃಪೂರ್ವಕ ಭಕ್ತಿ ಎಲ್ಲೂ ಸಹಸಾ ಹುಟ್ಟುವದಿಲ್ಲ. ಇದು ನನ್ನ ನಾಸ್ತಿಕ ಭಾವನೆಯೋ ಅಥವಾ ದೇವರಲ್ಲಿಯ ಬೇಧಭಾವನೆಯೋ ನಾನರಿಯೆ. ಅಂತೂ ಹಾಗಾಗುವದು ಮಾತ್ರ ನಿಜ. ಏನೇ ಇರಲಿ ಆದರೆ ಅಂದು ಗುಡಿಯ ಹೊರಭಾಗದ ಶಿಲ್ಪಕಲೆಗಳನ್ನೆಲ್ಲ ನೋಡಿ, ಅದೇ ಹೃದಯತುಂಬಿ ಬಂದಿರುವಾಗಲೇ ಗುಡಿಯೊಳಹೊಕ್ಕು ಶ್ರೀ ಚನ್ನಕೇಶವ ಮೂರ್ತಿಯನ್ನು ನೋಡಿದೆ, ಏಕೋ ಆ ಮೂರ್ತಿಯಿಂದ ದೃಷ್ಟಿ ಹೊರಳಿಸುವ ಮನಸ್ಸಾಗಲಿಲ್ಲ. ಆದರೆ ಸುತ್ತಲಿನವರ ಕರೆಗೆ ಓಗೊಟ್ಟು ಮನದಣಿಯ ನೋಡಿ ಹೊರಬಂದೆ. ಮನಸ್ಸು ಏಕೋ ವ್ಯಗ್ರವಾಯ್ತು ಹೊರಬರುವಾಗ, ಏಕೆಂದು ತಿಳಿಯಲಿಲ್ಲ. ಅಂತೂ ನಿರೀಕ್ಷಣೆಯ ಕೆಲಸ ಮುಗಿಸಿ ವಸತಿಯ ಸ್ಥಳಕ್ಕೆ ಬಂದೆವು. ಅಲ್ಲಿ ರಾತ್ರಿಯ ಊಟ, ಪ್ರಾರ್ಥನೆ ನಿದ್ರೆ ಮುಗಿಸಿ ನಸುಕಿನ ೫-೩೦ ಗಂಟೆಗೆ ಹೊರಡುವ ನಿಶ್ಚಯಮಾಡಿದೆವು. ಮುಂಜಾವಿನ ಪ್ರಾರ್ಥನೆಯನ್ನು ದೇವಸ್ಥಾನದ ಆವಾರದಲ್ಲೇ ಮಾಡಬೇಕೆಂದು ನಮ್ಮ ಸಹಕಾರ್ಯಕರ್ತರು ಸೂಚಿಸಿದರು. ನನಗೇಕೋ ಅದು ಹಿತವೆನಿಸಿದರೂ ಸಹ ಮತ್ತೊಮ್ಮೆ ಅಲ್ಲಿ ಹೋದರೆ ಅದನ್ನು ಬಿಟ್ಟು ಬರುವಾಗ ತಿರುಗಿ ನನ್ನ ಮನಸ್ಸಿಗೆ ಬಹಳ ನೋವಾಗಬಹುದೆಂದು ನನಗನಿಸಿತು. ಆದರೂ ಮತ್ತೊಮ್ಮೆ ನೋಡುವ ಆಶೆಯಾದ್ದರಿಂದ ಅದಕ್ಕೆ ಒಪ್ಪಿದೆ. ಪ್ರಾರ್ಥನೆ ಮುಗಿಯಿತು, ಹೊರಡುವ ವೇಳೆಯಾಯಿತು. ಎಲ್ಲರನ್ನೂ ಕಳಿಸಿ, ಮತ್ತೊಮ್ಮೆ ಮನಃಪೂರ್ವಕ ಮೂರ್ತಿಗೆ ನಮಸ್ಕರಿಸಿದೆ. ಏಳಲು ಸಾಧ್ಯವಾಗಲಿಲ್ಲ. ಹೊರಡಬೇಕಲ್ಲಾ ಎಂಬ ದುಃಖ ಉಕ್ಕಿ ಬಂದಿತು. ಆದರೂ ಹೊರಡಲೇ ಬೇಕಾಗಿದ್ದಿತಾದ್ದರಿಂದ ಎದ್ದು ಹೊರಟೆ. ಬಸ್ ಹತ್ತಿದೆವು. ಸಹ ಪ್ರಯಾಣಿಕರಿಗೆ ತೋರಗೊಡಬಾರದೆಂದು ತಡೆ ಹಿಡಿದ ದುಃಖದ ಕಟ್ಟೊಡೆದು, ನನಗರಿವಿಲ್ಲದೆ ಮನದಣಿಯೆ ಅತ್ತು ಬಿಟ್ಟೆ. ಅದೇನು ದುಃಖಾಶ್ರುವೋ, ಸುಖಾಶ್ರುವೋ ನನಗೇ ತಿಳಿಯದು. ಮಾನಸಶಾಸ್ತ್ರಜ್ಞರೇ ಅದನ್ನು ಊಹಿಸಲಿ. ನನಗೇನಾದರೂ ಭ್ರಮೆಯಾಯ್ತೇನೋ ಎಂಬ ಹೆದರಿಗೆ ನನಗೂ ಬಂದಿತು ಸ್ವಲ್ಪವೇಳೆ, ಮುಂದೆ ೧೪ ಮೈಲುಗಳ ದೂರದಲ್ಲಿರುವ ನಮ್ಮೂರು, ನಾನು ಹುಟ್ಟಿ ಬೆಳೆದು, ಅಣ್ಣ ತಮ್ಮ, ಅಕ್ಕತಂಗಿಯರೊಂದಿಗೆ ತಾಯಿ ತಂದೆಯರ ಮಡಿಲೊಳಗೆ ಆಡಿ ಬೆಳೆದ ನನ್ನ ತಾಯಿಯೂರು ಚಿಕ್ಕ ಮಗಳೂರು ಸಿಗುವವರೆಗೂ ನನ್ನ ಮನಸ್ಸು ವ್ಯಗ್ರವಾಗಿಯೇ ಇತ್ತು. ಚಿಕ್ಕ ಮಗಳೂರು ಬಂದೊಡನೆ ಪುನಃ ಆ ಚೆನ್ನಕೇಶವ ದೇವಾಲಯವು ಹಿಂದಾಗಿ, ಬಾಲ್ಯಭಾವನೆಯು ಮುಂದಾಯ್ತು. ಸಂಗಡಿಗರಿಗೆ ಊರಿನ ಪರಿಚಯ ಮಾಡಿಕೊಟ್ಟೆ. ಮುಂದೆ ನಮ್ಮ ಪ್ರಯಾಣ ದೇವನೂರು, ಲಕ್ಷ್ಮೀನಾರಾಯಣನಗುಡಿಗೆ ಅಲ್ಲಿ ಲಕ್ಷ್ಮೀಶ ಕವಿಯು ಕುಳಿತು ಜೈಮಿನಿಭಾರತವನ್ನು ರೂಪುಗೊಳಿಸಿದ ಸ್ಥಳವನ್ನು ನೋಡಿದೆವು. ನಮ್ಮ ಮೆಚ್ಚಿನ ಕವಿಯನ್ನು ಪ್ರತ್ಯಕ್ಷ ನೋಡಿದಷ್ಟು ಆನಂದವಾಯಿತು ಆ ಸ್ಥಳವನ್ನು ನೋಡಿ. ಮುಂದೆ ಅಲ್ಲಿಂದ ಕಡೂರಿನಮಾರ್ಗವಾಗಿ

ಭದ್ರಾವತಿ ನೋಡಿಕೊಂಡು ಜೋಗಕ್ಕೆ ತಲ್ಪಿದೆವು. ಅಂದು ಜೋಗ ಮುಟ್ಟುವಾಗ ರಾತ್ರಿಯಾಗಿ ಹೋದ್ದರಿಂದ ಜಲಪಾತ ನೋಡಲು ಸಾಧ್ಯವಾಗಲಿಲ್ಲ. ಆದರೂ ನಮ್ಮಲ್ಲಿಯ ಹಿರಿಯ ಶಿಕ್ಷಕರೊಬ್ಬರಿಗೆ ಬೆಳದಿಂಗಳಿನಲ್ಲೇ ಅದನ್ನು ನೋಡುವ ಬಯಕೆ. ಹೀಗಾಗಿ ಅವರು ನನ್ನ ಮುಂದೆ ತಮ್ಮ ಬಯಕೆ ಹೇಳಿದಾಗ, ನನಗೂ ನಮ್ಮ ಸಹ ಶಿಕ್ಷಕರೊಂದಿಬ್ಬರಿಗೂ ಆ ಬಯಕೆಯ ಸುಂಕು ತಾಗಿತು. ಆದರೂ ರಾತ್ರಿ ಬಹಳ ವೇಳೆಯಾದ್ದರಿಂದ ಆಗ ಮಲಗುವವ್ಯವಸ್ಥೆ ಮಾಡಿ, ಮಾರನೇ ಮುಂಜಾನೆ ಬೆಳದಿಂಗಳಿರುವಾಗಲೇ ಹೋಗಿ ನೋಡಬೇಕೆಂಬ ವಿಚಾರಮಾಡಿ ಮಲಗಿದೆವು. ಮುಂಜಾನೆ ೨-೩೦, ಮೂರು ಗಂಟೆಯಾಗಿರಬಹುದು. ಹಾಲು ಚಲ್ಲಿದ ಬೆಳದಿಂಗಳಿರುವಾಗಲೇ ನಮ್ಮ ಹಿರಿಯ ಶಿಕ್ಷಕರು ನಮ್ಮೆಲ್ಲರನ್ನೂ ಎಬ್ಬಿಸಿದರು. ಹೊರಟೆವು ನಾವು ಐದು ಜನರು ಅವರ ಹಿಂದೆ. ರಾತ್ರಿಯಾದ್ದರಿಂದ ಮಾರ್ಗದರ್ಶಕರು ಸಿಗದೆ, ನೀರಿನ ಅಬ್ಬರದ ಧ್ವನಿ ಹಿಡಿದು ಹಾದಿ ಹುಡುಕುತ್ತಾ ಹೊರಟೆವು ಸಾಧಾರಣ ಒಂದುಮೈಲು. ಬರಬರುತ್ತ ನೀರಿನ ಸದ್ದು ಹೆಚ್ಚಾಗುವ ಬದಲು ಕಡಿಮೆಯಾಯಿತು.

ಜಲಪಾತದ ಸುಳಿವೇ ಕಾಣದೆ ಬಂದದಾರಿಗೆ ಸುಂಕವಿಲ್ಲವೆಂದು ತಿರುಗಿ ಹೊರಟೆವು. ಮತ್ತೆ ಹೋದಷ್ಟು ಹಿಂದೆ ಬಂದು ವಸತಿ ಇದ್ದ ಶಾಲೆಯ ಬಳಿಯೇ ಹಾಯ್ದು ಹೋದೆವಾದರೂ, ಅರಿಯದೆ ಮುಂದೆ ಹೋದೆವು. ನಮ್ಮಂತೆಯೇ ಪ್ರವಾಸಕ್ಕೆ ಬಂದವರ ಬಸ್ಸೊಂದು ಅಲ್ಲಿ ನಿಂತಿದ್ದು, ಅದರಲ್ಲಿ ಡ್ರೈವ್ಹರನು ಎಚ್ಚರಿದ್ದುದನ್ನು ಕಂಡು, ಜಲಪಾತದ ಮಾರ್ಗ ಕೇಳಿದೆವು. ಹಾಗೇ ಮುಂದೆ ಹೋಗಲು ಸೂಚಿಸಿದ. ಮುಂದೆ ಸಾಧಾರಣ ಒಂದು ಮೈಲಿಗೂ ಮೇಲೆ ಹಾದಿ ಮುಂದೆ ಮುಂದೆ ಹೋದೆವು. ಸದ್ದು ಮಾತ್ರ ಕೇಳಿಸುತ್ತಿತ್ತು. ಆದರೆ ಜಲಪಾತ ಇನ್ನೂ ಮುಂದೆ ಮುಂದೆ ಹೋದಂತೆನಿಸುತ್ತಿತ್ತು. ಅಂತೂ ೧½ ಮೈಲು ನಡೆದು ಜಲಪಾತ ಕಂಡೆವು. ಆದರೆ ಅಲ್ಲಿ ಆ ಬೆಳಕಿನಲ್ಲಿ ನಮಗೆ ಏನೂ ಕಾಣಿಸಲಿಲ್ಲ. ಹಾಗೆ ಹೇಳಲು ಮೊದಲು ನನಗೆ ಅಷ್ಟು ಸಮಂಜಸವೆನಿಸಲಿಲ್ಲ. ಆದಕ್ಕೆ ಕಾರಣ ವಿಷ್ಟೇ, ನಮ್ಮೊಂದಿಗೆ ಬಂದವರು ಜಲಪಾತ ಬೆಳದಿಂಗಳಲ್ಲಿ ಬಹು ಅಂದವಾಗಿ ಕಾಣಿಸುವದೆಂದು ಹೇಳಿದ್ದು. ನನಗಾದರೋ ಏನೂ ಕಾಣಿಸುತ್ತಿಲ್ಲ. ಹೇಗೆ ಬಾಯ್ಬಿಟ್ಟು ಹೇಳುವದು! ಆದರೂ ಧೈರ್ಯಮಾಡಿ ನಮ್ಮ ಗುಂಪಿನಲ್ಲೊಬ್ಬರಿಗೆ ಮೆಲ್ಲಗೆ ಸೂಚಿಸಿದೆ. ಅವರೂ ಹೌದೆಂದರು. ಸ್ವಲ್ಪ ಧೈರ್ಯಬಂದು ಮತ್ತೊಬ್ಬರಿಗೆ ಕೇಳಿದೆ. ಅವರದೂ ಅದಕ್ಕೆ ಮತ ಸಿಕ್ಕಿತು. ನನಗೆ ಹೆಚ್ಚು ಧೈರ್ಯಬಂದು ಎಲ್ಲರ ಮುಂದೆಯೂ ಸ್ವಲ್ಪ ಗಟ್ಟಿಯಾಗಿಯೇ ಮತವನ್ನು ಮುಂದಿಟ್ಟೆ. ಎಲ್ಲರ ಅಭಿಪ್ರಾಯವೂ ಒಂದೇ ಆದರೂ ಸಹ ಅವರಲ್ಲೊಬ್ಬರು, ದೀಪದ ಬೆಳಕಿಗೆ ದೋಷಕೊಟ್ಟು, ತಮ್ಮ ಬೆಳದಿಂಗಳ ಬೆಳಕಿನ ಸೊಬಗನ್ನೂ ಆದರಲ್ಲಿ ಕಾಣಿಸುವ ಜಲಪಾತದ ಸೊಬಗನ್ನೂ ಬಾಯಿಯಲ್ಲೇ ಪುನಃ ಪುನಃ ವರ್ಣಿಸಿ, ಮನಸ್ಸು ಸಮಾಧಾನ ಮಾಡಿಕೊಂಡರು. ನನಗಂತೂ ನಡುರಾತ್ರಿ ಮೀರಿ ಸ್ವಲ್ಪ ಹೊತ್ತಿನಲ್ಲೇ, ಮಲಗಿದವರಿಗೆ ಎಚ್ಚರವಾಗದಂತೆ, ಅವರೆಲ್ಲರನ್ನೂ ವಂಚಿಸಿ ಕಳ್ಳ ಹೆಜ್ಜೆಯಿಂದ ಹೊರಬಂದು ಜಲಪಾತಕ್ಕೆ ಹೊರಟಾಗ ಮೊದಲು ದಾರಿತಪ್ಪಿ ೧ ಮೈಲು ಹೊರಟದ್ದು, ಪುನಃ ತಿರುಗಿ ಎರಡು ಮೈಲು ಬಂದು ಜಲಪಾತಕ್ಕೆ ಸೇರಿದ್ದು, ಅಲ್ಲಿನ ಬೆಳದಿಂಗಳಲ್ಲಿ ಅದು ಸರಿಯಾಗಿ ಕಾಣದಿದ್ದದ್ದು, ಅದರ ಸಮರ್ಥನೆ ಮಾಡಿಕೊಳ್ಳಲು ಶಿಕ್ಷಕರೊಬ್ಬರು ತಮ್ಮ ವಿಚಾರವನ್ನು ಮಂಡಿಸುತಿದ್ದುದು ಎಲ್ಲವನ್ನೂ ನೆನೆಸಿಕೊಂಡು ಗಾಂಪರೊಡೆಯರ ಹಾಗೂ ಅವರ ಶಿಷ್ಯರ ಕಥೆಯು ನೆನಪಾಗಿ ಒಬ್ಬಳೇ ಹುಚ್ಚಳಂತೆ ನಕ್ಕೆ. ಸಂಗಡಿಗರಿಗೂ ಮೋಜೆನಿಸಿ ನಕ್ಕ ಕಾರಣ ಕೇಳಲು ಎಲ್ಲರಿಗೂ ಕಥೆಹೇಳಿ ಮನದಣಿಯೆ ನಕ್ಕು, ನಮ್ಮ ವಸತಿಯ ಹಾದಿ ಹಿಡಿದೆವು. ಆದರೆ ಪುನಃ ವಸತಿಯ ಬಿಡಾರ ಬಿಟ್ಟು ಎರಡು ಹೆಜ್ಜೆ ಮುಂದೆ ಹೊರಟಿದ್ದರು ನಮ್ಮ ಗಾಂಪರ ಗುರುಗಳು. ನನಗೇಕೋ ಸಂಶಯ ಬಂದು ಅಲ್ಲೇನಿಂತು ದಾರಿ ತಪ್ಪುತ್ತಿರುವೆವೆಂದು ಸೂಚಿಸಿದೆ. ಎಲ್ಲರೂ ನಿಂತೆವು. ಮಾತಿನ ಒಂದೆರಡು ಚಕಮಕಿಗಳಾಗಿ ನಡುವೆ ಕವಲೊಡೆದ ಮಣ್ಣು ರಸ್ತೆಯಲ್ಲಿ ತಿರುಗಬೇಕೆಂಬ ಠರಾವಾಗಿ ಮುಂದೆ ಆ ರಸ್ತೆಯಲ್ಲಿ ನಾಲ್ಕು ಹೆಜ್ಜೆ ಇಟ್ಟೊಡನೆ ನಮ್ಮ ಮೋಟಾರ್ ಕಾಣಿಸಿತು. ವಸತಿಯ ನಿಶ್ಚಿತ ಸ್ಥಳ ಸಿಗುವಷ್ಟರಲ್ಲೇ ೫ ಗಂಟೆಯಾಗಿ ಹೋಗಿತ್ತು. ಹೋದವರೇ ಸೀಟಿಯೂದಿ, ಮಲಗಿದವರನ್ನೆಬ್ಬಿಸಿ ಪ್ರಾತರ್ವಿಧಿಗಳನ್ನು ಮುಗಿಸಿ, ಬಸ್ ಹತ್ತಿ ಜಲಪಾತ ನೋಡಲು ಎಲ್ಲರೂ ಹೊರಟೆವು. ಇಷ್ಟೆನ್ನುವಷ್ಟರಲ್ಲೇ ೬ ಗಂಟೆಯಾಗಿತ್ತು. ಕತ್ತಲು ಹರಿದು ಬೆಳಕಾಗಿತ್ತು. ಬೆಡಗಿನ ನರ್ತಕಿಯರಂತೆ ನರ್ತಿಸುವ ಒಂದು ಜಲಪಾತ, ಆರ್ಭಟದಿಂದ ಆಬ್ಬರಿಸುತ್ತ ಬರುವ ಜಲಪಾತ, ಗಂಭೀರ ರಾಜನಂತೆ ಬರುವ ಜಲಪಾತಗಳೆಲ್ಲವೂ ಭೂಮಿಗೆ ಧುಮುಕಿಕ್ಕಿ ತುಷಾರಗಳನ್ನು ಹಾರಿಸುವ ಭಂಗಿಯನ್ನು ನೋಡಿದಂಗಾದೆವು. ನೋಡಿದಷ್ಟೂ ದಣುವಿಲ್ಲ, ಕೈಲಾದವರು ಕೆಳಗಿನವರೆಗೂ ಇಳಿದು, ಸಂತೋಷಿಸಿದೆವು. ಕೈಲಾಗದವರು, ಕೆಳಗಿಳಿದವರು ಬಾರಲು ತಡವಾಗಿ, ತಮ್ಮ ಹೊಟ್ಟೆ ತಾಳಹಾಕುತ್ತಿದೆ ಎಂದು ಶಪಿಸುತ್ತ ಬಸ್ಸಿನಲ್ಲೇ

ಕುಳಿತಿದ್ದರು. ಕೆಳಗಿಳಿದ ಅನೇಕ ಅಶಕ್ತ ಬಡಸಾಯಿಗಳು ಮೇಲೇರಲು ತ್ರಾಣವಿಲ್ಲದೆ, ಬೀಳುತ್ತ, ಏಳುತ್ತ, ತವ್ಮೊಂದಿಗಿದ್ದವರಿಗೆಹೆದರಿಕೆ ಹುಟ್ಟುವಂತೆ ಮಾಡುತ್ತಾ ಅಂತೂ ಮೇಲೇರಿ ಬರುವದರಲ್ಲೇ ೧೨ ಹೊಡೆದು ಹೋಗಿತ್ತು. ಎಲ್ಲರೂ ಬಸ್ ಏರಿ ಜೋಗನ್ನು ಬಿಟ್ಟು ಹೊರಟೆವು. (ಟ್ರಾಲಿಯಲ್ಲಿ ಕುಳಿತು ಪವರ್ ಹೌಸನ್ನೂ ನೋಡಿಬಂದೆವು) ಸೀದ ತಾಳಗುಪ್ಪಾಕ್ಕೆ ಬಂದು ಊಟ ತೀರಿಸಿ ಬಸ್ ಏರಿದೆವು. ಇಷ್ಟರಲ್ಲೇ ೨-೩೦ ಹೊಡೆದು ಹೋಗಿತ್ತು. ಅಂದೇ ನಾವು ಧಾರವಾಡ ಮುಟ್ಟಲೇ ಬೇಕಾಗಿತ್ತಾದ್ದರಿಂದ ನಡುವೆ ಎಲ್ಲೂ ಹೆಚ್ಚು ನಿಲ್ಲದೆ ಸೀದ ಧಾರವಾಡಕ್ಕೆ ಹೊರಟು, ರಾತ್ರಿ ೯ ಗಂಟೆಗೆ ಸರಿಯಾಗಿ ಧಾರವಾಡ ತಲ್ಪಿದೆವು.

ವೆಂ. ಕೊ.

ಶಿಕ್ಷಕಿ. ಶಾ. ಶಿ.

---

# ಪದ್ಯ (ಹಾಡು)

ಬೊಡ್ಡಿಲ್ಲ ಬೇರಿಗ ಬಳಕುತಲೈತ್ರಿ। ಗಾಳಿ ಬಿಟ್ಟರೆ ಮನ
ಲೋಲ್ಯಾಡತೈತ್ರಿ। ಎಂಥಾ ಎಂಥಾ ತನುವಿದು ಶಿವ ಶಿವ। ಎಂಥಾ
ತನುವಿದು ಗುರುವೆ ॥ ಪ ॥

ಹಚ್ಚಂದು ಕೆಂಪಂದು ಹೂವಾಗತೈತ್ರಿ। ಹೂವಾದ
ನ್ಯಾಲೊಮ್ಮೆ ಕಾಯಾಗತೈತ್ರಿ ॥ ೧ ॥

ಹೂವಾದ ನ್ಯಾಲೊಮ್ಮೆಕಾಯಾಗತೈತ್ರಿ। ಕಾಯಾದ ನ್ಯಾಲೊಮ್ಮೆ
ಹಣ್ಣಾಗತೈತ್ರಿ ॥ ೨ ॥

ಹಣ್ಣಾದ ನ್ಯಾಲೊಮ್ಮೆ ಮಣ್ಣಾಗತೈತ್ರಿ।
ಮಣ್ಣಾದ ನ್ಯಾಲೊಮ್ಮೆ ಚಿನ್ನವಾಗತೈತ್ರಿ ॥ ೩ ॥

ಚಿನ್ನಾದ ನ್ಯಾಲೊಮ್ಮೆ ಹೊನ್ನಾಗ ತೈತ್ರಿ। ಹೊನ್ನೋಗಿ
ನಾರ್ಚಕಲ್ ಬಸವಗ ವಾಶ್ಯವಾಗತೈತ್ರಿ ॥ ೪ ॥

ಶ್ರೀಮತಿ ನ್ಯಾಮುಗೌಡರ ೧ನೇ ವ. ವಿದ್ಯಾರ್ಥಿನಿ

ವಿಭಾಗ ೨

# ವನಿತಾ ಪ್ರಾಥಮಿಕ ಶಾಲೆ

## ಧಾರವಾಡ

ಸಂಪಾದಕರು : ನಾ. ಭೀ. ಹಾವನೂರ

೧೯೫೯—೬೦

## ಸಂಪಾದಕೀಯ

ಮನುಷ್ಯನು ಹುಟ್ಟಿ ಜೀವನದಲ್ಲಿ ಸುಖರೂಪವಾದ ಅಮೃತ ಫಲಗಳನ್ನು ಸವಿಯಬೇಕಾದರೆ ಅವನಿಗೆ ಯೋಗ್ಯವಾದ ಶಿಕ್ಷಣವು ಬೇಕು. ಇದರಿಂದಲೇ ಅವನು ಅನೇಕ ಜಟಿಲ ಸಮಸ್ಯೆಗಳನ್ನೂ ಸಹ ಬಿಡಿಸಬಲ್ಲನು. ಯುಕ್ತಿ ಪ್ರಯುಕ್ತಿಗಳಿಂದ ಹಗೆಗಳನ್ನೂ ಕೂಡ ಮಿತ್ರರನ್ನಾಗಿ ಮಾಡಬಲ್ಲನು. ಇಂಥ ಶಿಕ್ಷಣವು ನಿಜವಾಗಿ ತಾಯಿಯಿಂದಲೇ ಪ್ರಾಪ್ತವಾದರೆ ಅದು ಭದ್ರವಾಗಿ ಉಳಿಯುವದರಲ್ಲಿ ಸಂಶಯವಿಲ್ಲ. ತಾಯಿಯಲ್ಲಿ ಅಂಥ ಯೋಗ್ಯತೆ ಬರಬೇಕಾದರೆ ಅನುವಂಶಿಕವಾದ ಶಿಕ್ಷಣವು ಬೇಕು. ಅದರಿಂದ ಅವಳ ಜೀವನವು ಸ್ವಾರಸ್ಯಮಯವಾಗಿ ಪರಿಣಮಿಸುವದು. ಆ ಜೀವನದ ಮಾರ್ಗದಲ್ಲಿ ಅಂಕುಡೊಂಕಾದ ಕಟು ಅನುಭವಗಳು ಬಂದು ಹೃದಯವನ್ನು ಮಾರ್ದವಗೊಳಿಸುತ್ತವೆ. ಉದಾಹರಣೆಗಾಗಿ ವಿವೇಕಾನಂದರ ಹೆಸರನ್ನು ಕೇಳಿದರೆ ಪ್ರತಿಯೊಬ್ಬ ಭಾರತೀಯನೂ ಚ್ಚರಿಗೊಳ್ಳುತ್ತಾನೆ. ಆ ವ್ಯಕ್ತಿಯ ಜೀವನ ಸಾಫಲ್ಯತೆಯ ಬಗ್ಗೆ ನಿಶ್ಚಿತವಾಗಿ ಏನು ಹೇಳಲು ಬರುವದಿಲ್ಲ. ಅವರು ಅಮೇರಿಕೆಗೆ ಹೋದಾಗ ಒಂದೆಡೆಗೆ ಹೀಗೆ ಹೇಳಿದ್ದರು ನಮ್ಮ "ಭಾರತಿಯರಿಗೆ ನಿಮ್ಮ ವೇದಾಂತ ಬೇಕಾಗಿಲ್ಲ. ತುತ್ತು ಅನ್ನ ಮಾತ್ರ ಬೇಕಾಗಿದೆ." ಇದರಿಂದ ಅವರ ಜೀವನದ ಆಧ್ಯಾತ್ಮಿಕತೇಜದ ಪರಿಚಯವಾಗುತ್ತದೆ.

ಆಧ್ಯಾತ್ಮಿಕ ಹಸಿವು ಮಾನಸಿಕವಾದರೂ ಮಾನಸಿಕ ವ್ಯಥೆಗೆ ಯೋಗ್ಯ ಕಾರಣ ಪರಿಹಾರ ದೊರೆಯದೆ ಅದು ಹಿಂಗುವಂತಿಲ್ಲ. ಕೊರಗು ತಪ್ಪಿದ್ದಲ್ಲ. ಅಂಥ ಶಕ್ತಿಯ ಮೂಲಕವೆ ಭಾರತವು ಅಂಥ ದುರವಸ್ಥೆಗೆ ಈಡಾಗಿದೆ. ಇಂಥ ಆಧ್ಯಾತ್ಮಿಕ ಶಕ್ತಿಯನ್ನು ಬೆಳೆಯಿಸಲು ತಾಯಿತಂದೆಗಳೂ ಸಂಘಸಂಸ್ಥೆಗಳೂ ಮುಂದುವರಿದರೆ ನಿಜವಾದ ಮಾನವ ಜನಾಂಗದ ಉನ್ನತಿಯಾಗುವದು. ಒಮ್ಮೆ ಮನುಷ್ಯನು ದುಷ್ಟಸಹವಾಸದಿಂದಲೋ ಅನಿಷ್ಟ ಪ್ರಸಂಗದಿಂದಲೋ ಅಂಥ ಆಧ್ಯಾತ್ಮಿಕ ಮಾರ್ಗದಿಂದ ಚ್ಯುತನಾಗಬಹುದು. ಇದರಿಂದ ಆ ಮನುಷ್ಯನು ಕೀಳನೆನ್ನಲು ಸಾಧ್ಯವಿಲ್ಲ. ಮನುಷ್ಯನಿಗೆ ಯೋಗ್ಯ ಪರಿಸ್ಥಿತಿಯನ್ನು ಒದಗಿಸಲು ತಕ್ಕ ವಾತಾವರಣವು ಬೇಕು. ಅಂಥ ವಾತಾವರಣವನ್ನು ನಿರ್ಮಿಸಲು ತ್ಯಾಗಿಗಳಾದ ದುಃಖ ಸಹಿಷ್ಣುಗಳಾದ ಮಹನೀಯರು ಮುಂದೆ ಬರುವದು ಅವಶ್ಯಕವಾಗಿದೆ.

ಸದ್ಯಕ್ಕೆ ಸ್ತ್ರೀಯರಲ್ಲಿ ಸ್ವಾಭಾವಿಕವಾಗಿರತಕ್ಕ ದೋಷಗಳನ್ನು ಕಳೆದು ಅವರಲ್ಲಿಯ ಆಧ್ಯಾತ್ಮಿಕ ತೇಜವನ್ನು ಅಂಕುರಿಸುವದಕ್ಕಾಗಿ ನಮ್ಮ ವನಿತಾ ಸೇವಾ ಸಮಾಜವು ಹಗಲಿರುಳು ಹೆಣಗಾಡಹತ್ತಿದೆ. ಶೀರ ಕಷ್ಟದಲ್ಲಿಯೇ ಹುಟ್ಟಿ ಕಷ್ಟದಲ್ಲಿಯೇ ಬೆಳೆದು ಕಷ್ಟದಲ್ಲಿಯೇ ಸುಖರೂಪಿಯಾದ ಭಗವಂತನನ್ನು ಕಾಣುವ ಮಾಯಿಯವರಂತಹ ತಪಸ್ವಿಗಳ ತಪಸ್ಸಿನ ಫಲ

ರೂಪವಾಗಿ ವನಿತಾ ಸೇವಾ ಸಮಾಜವು ಮೊದಲು ಪ್ರಾಥಮಿಕ ಶಾಲೆಯನ್ನು ತೀರ ಅಲ್ಪ ಪ್ರಮಾಣದಲ್ಲಿ ನಡೆಸುತ್ತಿದ್ದು ೧೯೫೩ ರಲ್ಲಿ ಪ್ರಾಯೋಗಿಕ ಶಾಲೆಯನ್ನಾಗಿ ಮಾರ್ಪಡಿಸಿ ಆ ಶಾಲೆಯ ಮುಖಾಂತರ ಎಷ್ಟೋ ಸಂಕಟ ಜೀವಿಗಳನ್ನು ಸಂಕಟದಿಂದ ಮುಕ್ತ ಮಾಡುವ ಮಾರ್ಗ ಶೋಧಿಸಿತು. ಸದ್ಯಕ್ಕೆ ಆ ಶಾಲೆಯಲ್ಲಿ ಶ್ರೀ. ಎನ್. ಬಿ. ಹಾವನೂರರಂಥ ಶಿಕ್ಷಣ ಪ್ರೇಮಿಗಳ ಸತತ ಪ್ರಯತ್ನದಿಂದಲೂ ಶ್ರೀ ಕಟ್ಟಿ, ಕೆ. ಕೆ. ಶಾನಭಾಗ ಇವರೇ ಮೊದಲಾದ ಶಿಕ್ಷಕ ಹಾಗೂ ಶಿಕ್ಷಕಿಯರ ನಿಸ್ವಾರ್ಥ ಸಹಾಯದಿಂದಲೂ ಆ ಶಾಲೆ ೩೦೦ ವಿದ್ಯಾರ್ಥಿನಿಯರಿಗೆ ಶಿಕ್ಷಣವನ್ನು ಉಚಿತವಾಗಿ ಕೊಡಲು ಸಮರ್ಥವಾಗಿದೆ. ಈ ಸಂಸ್ಥೆಯು ಶ್ರೀ. ದಾದಾ ಅವರಂಥ ಮುತ್ಸದ್ದಿಗಳ ಪ್ರೋತ್ಸಾಹದಿಂದಲೂ ಮಾಯಿಯವರ ಆಶೀರ್ವಾದದಿಂದಲೂ ವನಿತಾ ಪ್ರಾಯೋಗಿಕ ಶಾಲೆಯುಬೆಳೆದು ಬಾಳಿ ಬಹು ಜನರ ಪ್ರೀತಿ ವಿಶ್ವಾಸಕ್ಕೆ ಪಾತ್ರವಾಗಿ ಜನತಾ ಜನಾರ್ಧನನ ಸೇವೆಗೆ ಬದ್ಧಕಂಕಣವಾಗಲೆಂದು ಹಾರೈಸುವೆನು.

---

##  ನನ್ನ ನೆಚ್ಚಿನ ರಾಷ್ಟ್ರ ಪುರುಷ 

ಬರೆದವರು : **ಹೇಮಾ ಹಾಲಗಿ ೬ನೇ ಇಯತ್ತೆ**

ಮಹಾಪುರುಷ ಈ ಅಕ್ಷರಗಳಲ್ಲಿ ಮಹಾಪುರುಷರ ವ್ಯಕ್ತಿತ್ವವು ಅಡಗಿ ಕೊಂಡಿದೆ. ಮಹಾಪುರುಷರ ಆತ್ಮವು ವಿಕಾಸ ಹೊಂದಿದೆ. ಮಹಾಪುರುಷರ ಜೀವನವು ಉಳಿದ ಸಾಮಾನ್ಯ ಜನರಿಗಿಂತ ಭಿನ್ನವಾಗಿರುತ್ತದೆ. ಮಹಾಪುರುಷರು ದೇಶದ ಉನ್ನತಿಗೆ ಅಥವಾ ಉತ್ಕೃಷ್ಟಕ್ಕೆ ಕಾರಣರಾಗಿರುತ್ತಾರೆ. ಭಾರತದಲ್ಲಿ ಅನೇಕ ಜನ ಮಹಾಪುರುಷರು ಆಗಿ ಹೋಗಿದ್ದಾರೆ. ಅವರಲ್ಲಿ ಮಹಾತ್ಮ ಗಾಂಧೀಯವರು ಒಬ್ಬರು.

ಮಹಾತ್ಮ ಗಾಂಧೀಜಿಯವರು ಮಹಾಪುರಷರಾಗಲಿಕ್ಕೆ ಅನೇಕ ಕರಣಗಳುಂಟು. ಮಹಾತ್ಮರು ಜನರಲ್ಲಿ ಭೇದ ಭಾವವಿಲ್ಲದೆ ನೋಡಿ ಕೊಳ್ಳುತ್ತಿದ್ದರು. ಮತ್ತು ಬಡವರನ್ನು ಹೀನರನ್ನು ಕಂಡರೆ ಗಾಂಧೀಜಿಯವರಿಗೆ ಅತ್ಯಂತ ಕರುಣೆ ಬರುತ್ತಿತ್ತು. ಸಮಾಜವು ಯಾರನ್ನು ಹೀನದೃಷ್ಟಿಯಿಂದ ನೋಡುತ್ತಿತ್ತೋ ಅಂಥವರನ್ನು ಗಾಂಧೀಜಿಯವರು ಪ್ರೀತಿ ಮಾಡುತ್ತಿದ್ದರು. ಅಸ್ಪ್ರಶ್ಯರನ್ನು ಕಂಡರೆ ಗಾಂಧೀಜಿಯವರಿಗೆ ಬಲು ಪ್ರೇಮ.

**ಜನ್ಮ ಮತ್ತು ಬಾಲ್ಯ :—** ಇವರು ಕ್ರಿ. ಶ. ೧೮೬೯ ನೇ ಅಕ್ಟೋಬರ ೨ನೇ ದಿನಾಂಕ ಕಾಠೇವಾಡದ ಪೋರಬಂದರದಲ್ಲಿ ಹುಟ್ಟಿದರು. ಇವರ ತಂದೆಯ ಹೆಸರು ಕರಮುಚಂದ. ಇವರ ತಾಯಿಯ ಹೆಸರು ಪುತ್ಥಳೀಬಾಯಿ. ಇವರ ಮೊದಲಿನ ಹೆಸರು ಮೋಹನದಾಸ.

**ಶಿಕ್ಷಣ:** — ಇವರು ವಿದ್ಯಾರ್ಥಿ ದೆಶೆಯಲ್ಲಿದ್ದಾಗ ಒಮ್ಮೆ ಇನಸ್ಪೆಕ್ಟರರು ಬಂದಿದ್ದರು. ಆಗ ಅವರು ಕೆಟಲ್ ಎಂಬ ಶಬ್ದವನ್ನು ಬರೆಯಲಿಕ್ಕೆ ಹೇಳಿದ್ದರು. ಆಗ ಇವರು ಬರೆಯಲಿಕ್ಕೆ ತಪ್ಪಿದರು. ಆಗ ಗುರುಗಳು ಸೊನ್ನೆ ಮಾಡಿ ಬಾಜುವಿನ ಹುಡುಗನದು ನೋಡಿಕೊಂಡು ಬರೆಯಲಿಕ್ಕೆ ಹೇಳಿದರು. ಆಗ ಇವರು ನೋಡಿಕೊಂಡು ಬರೆಯಲಿಲ್ಲ. ಅದರಿಂದ ಇವರ ಸತ್ಯವು ಗೊತ್ತಾಗುವದು. ಇವರು ಹರಿಶ್ಚಂದ್ರನ ನಾಟಕವನ್ನು ಓದಿದ್ದರು. ನಾವು ಹರಿಶ್ಚನಂತೆ ಸತ್ಯವನ್ನು ಏಕೆ ಮಾತಾಡಬಾರದು. ಎಂದು ಅಂದರು. ಮುಂದೆ ಇವರು ಕ್ರಿ ಶ. ೧೮೮೭ ರಲ್ಲಿ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಮುಂದೆ ಕ್ರಿ. ಶ. ೧೮೮೧ ರಲ್ಲಿ ಬ್ಯಾರಿಸ್ಟರ ಪರೀಕ್ಷೆಗೆಂದು ಇಂಗ್ಲಂಡಿಗೆ ಹೋದರು. ಅಲ್ಲಿಯೂ ಸಹ ಬ್ಯಾರಿಸ್ಟರ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಭಾರತಕ್ಕೆ ಮರಳಿ ಬಂದರು.

**ಇವರು ಮಾಡಿದ ಕಾರ್ಯಗಳು:—** ಇವರು ಸರಕಾರಿ ನೌಕರಿ ಮಾಡದೆ ವಕೀಲಿಯಿಂದ ಹಣಗಳಿಸದೆ ದೇಶಸೇವೆಗಾಗಿ ಟೊಂಕ ಕಟ್ಟಿ ನಿಂತರು. ಇವರು ಹರಿಜನರ ಉದ್ಧಾರದ ಕಾರ್ಯವನ್ನು ಕೈಕೊಂಡರು. ಮತ್ತು ಪ್ರಾನಪ್ರತಿಬಂಧಕ, ಗ್ರಾಮೋದ್ಧಾರ ಮೊದಲಾದ ಕಾರ್ಯವನ್ನು ಕೈಕೊಂಡರು. ಇವರು ಕ್ರಿ. ಶ. ೧೯೪೭ ಅಗಸ್ಟ ೧೫ ನೇಯ ದಿನಾಂಕ ಅಹಿಂಸೆ ಎಂಬ ತತ್ವದಿಂದ ಭಾರತಕ್ಕೆ ಸ್ವಾತಂತ್ರ್ಯವನ್ನು ದೊರಕಿಸಿ ಕೊಟ್ಟರು.

**ಅಂತ್ಯ:—** ಕ್ರಿ. ಶ. ೧೯೪೮ ರಲ್ಲಿ ಡಿಶಂಬರ ೩೦ ನೇಯ ದಿನಾಂಕ ಗೋಡಸೆ ಎಂಬವನು ಇವರಿಗೆ ಗುಂಡು ಹಾಕಿ ಕೊಂದನು.

ಇವರಲ್ಲಿ ಒಕ್ಕಟ್ಟು, ಪ್ರೇಮ, ಬಂಧುತ್ವ ಮುಂತಾದ ಗುಣಗಳು ಇವೆ ನಾನು ಸಹ ಅವರ ಹಾಗೆ ರಾಷ್ಟ್ರೀಯ ಮಹಾಪುರುಷಳಾಗಬೇಕೆಂದು ನಾನು ಇಚ್ಛಿಸುತ್ತಿನೆ.

---

# ಹತಭಾಗಿನಿ

ಬರೆದವರು : **ಕೃಷ್ಣಾ ಪೋತದಾರ**

ನಾನೇನು ಅಂತಿಂತಹ ಮನೆತನದವಳಲ್ಲ. ತಂದೆ ಕರ್ನಾಟಕಕ್ಕೆ ಪ್ರಸಿದ್ಧ ವಕೀಲರು. ಹೆಸರಿನಲ್ಲಷ್ಟೇ ನಾರಾಯಣರಾಯರಾಗಿದ್ದಿಲ್ಲ. ಸಾಕ್ಷಾತ್ ಲಕ್ಷ್ಮೀಪತಿಯಾಗಿದ್ದರು. ತಾಯಿ ಸಾಂಪ್ರದಾಯವಂತಿ. ನಾವು ಪಾಂಡವರಂತೆ ಐದು ಮಂದಿ. ಆದರಲ್ಲಿ ದತ್ತಾತ್ರಿಯಂತೆ ಇರುವ ಮೂವರು ಅಣ್ಣತಮ್ಮಂದಿರು. ಲಕ್ಷ್ಮೀಸರಸ್ವತಿಯಂತಿರುವ ನಾವಿಬ್ಬರು ಅಕ್ಕತಂಗಿಯರು. ಮಕ್ಕಳು ವಿದ್ಯಾವಂತರಾಗಬೇಕು; ಪದವೀಧರರಾಗಬೇಕು. ಸಮಾಜದಲ್ಲಿ ಅವರ ಕೀರ್ತಿಯು ಬೆಳಗಬೇಕೆಂಬ ಹಿರಿಯಾಸೆಯು ತಂದೆಯವರದು. ನನಗೂ ಶಾಲೆಯಲ್ಲಿ ಅಭಿಲಾಷೆ ಬಹಳ. ತಂದೆಗೂ ಕಲಿಸಬೇಕೆಂಬ ಹುಚ್ಚು ಆದರೆ ?

ನಾನು ಇನ್ನೂ ಕನ್ನಡ ಐದನೆಯ ಇಯತ್ತೆಯನ್ನು ಮುಗಿಸಿರಲಿಲ್ಲ. ಕೌಮಾರ್ಯಾವಸ್ಥೆಯ ಮೊದಲನೆಯ ಮೆಟ್ಟಲನ್ನು ದಾಟಿದ್ದೆ. ಸುರುವಾಯಿತು. ತಾಯಿಯ ಮದುವೆಯ ಗಡಿಬಿಡಿ. ಅತ್ತಿತ್ತ ವರನೋಡತೊಡಗಿದರು. ಆದರೆ ತಂದೆಗೆ ಮಗಳ ಮದುವೆಯ ಚಿಂತೆ ಇರಲಿಲ್ಲ, ಆಕೆಯನ್ನು ವಿದ್ಯಾವತಿಯನ್ನಾಗಿ ಮಾಡಬೇಕೆಂಬ ಹಂಬಲದಲ್ಲಿಯೋ ಏನೋ ಮದುವೆಯ ವಿಷಯವನ್ನು ಮರೆಯುತ್ತಿದ್ದರು. ಜೀವನದಲ್ಲಿಯ ಅಡೆತಡೆಗಳಿಗೆ ವಿದ್ಯೆಯೇ ಆಧಾರಸ್ತಂಭವೆಂಬ ತತ್ವಕ್ಕೆ ಅಂಟಿಕೊಂಡಿದ್ದರು. ಆದರೆ ತಾಯಿಗೆ ಮಾತ್ರ ಮದುವೆಯ ಚಿಂತೆಯು ಎಡೆಬಿಡದೆ ಕಾಡುತ್ತಿತ್ತು. ತಂದೆ ಮನೆಗೆ ಬಂದಕೂಡಲೇ ಮದುವೆಯ ಪ್ರಸ್ತಾಪ, ಎದ್ದಕೂಡಲೇ ಅದೇ, ಹೊರಗೆ ಹೋಗುವಾಗಲೂ ಅದೇ, ಹೀಗಾಗಿ ಯಾವಾಗಲೂ ಮದುವೆಯ ಧ್ವನಿಯ ನಿನಾದವು ಮನೆಯ ವಾತಾವರಣದಲ್ಲಿ ಬೆರೆಯುತ್ತಿತ್ತು.

ನನ್ನ ಮದುವೆಯ ಪ್ರಸ್ತಾಪವನ್ನು ನನ್ನೆದುರು ತಾಯಿತಂದೆಗಳು ಎಂದೂ ಬಿಚ್ಚು ಮನಸ್ಸಿನಿಂದ ಮಾಡುತ್ತಿರಲಿಲ್ಲ. ಅದೇಕೋ ನಾನರಿಯೆ. ಮಗಳು ದೊಡ್ಡವಳಾಗಿದ್ದಾಳೆ. ಹೀಗೆ ಬಹಳ ದಿನಗಳ ವರೆಗೆ ಇಡುವದು ಒಳ್ಳೇದಲ್ಲ. ನಾವೇನು ಚಿರಜೀವಿಗಳೇ ? ನಮ್ಮ ಕೈಬಲವಿರುವಾಗಲೇ ದಂಟು ಇದ್ದ ಗೋದಲಿಯಲ್ಲಿ ಹೋಗಿಸುವದು ಒಳ್ಳೇದು. ಎಂದೂ, ಇದಕ್ಕೆ ಮಾರುತ್ತರವಾಗಿ ತಂದೆಯು "ಹೌದು ನಿನ್ನದು ನಿಜ." ಈಗ ನಾವು ಗಡಿಬಿಡಿ ಮಾಡಿ ಎಂಥಾದರೊಂದು ಮನೆತನಕ್ಕೆ ಸೇರಿಸಿದೆವೆಂದು ತಿಳಿ. ಮುಂದೆ ಏನಾದರೂ ಅಡೆತಡೆಗಳುಂಟಾದರೆ ಆಕೆಗೆ ತನ್ನ ಜೀವನ ನೌಕೆಯನ್ನು ಆ ಕ್ಷುಬ್ಧ ಸಾಗರ ಮಧ್ಯದಡ ಮುಟ್ಟಿಸುವ ಶಕ್ತಿ ಬೇಕಲ್ಲವೆ ? ಇದಕ್ಕೆ ಆಕೆ ಕಲಿತವಳಾಗಬೇಕು. ಸುಸಂಸ್ಕೃತಳಾಗಬೇಕಾಗುತ್ತದೆಂಬುದನ್ನು ನಾನು ಮರೆಯಲ್ಲಿ ನಿಂತು ಕೇಳಿದ್ದೆ. ಆದರೆ ತಾಯಿತಂದೆಗಳೆದುರು ನನ್ನ ಉದಾತ್ತ ವಿಚಾರವನ್ನು ಎತ್ತಿ ಇಡುವ ಧೈರ್ಯನನಗಿರಲಿಲ್ಲ. ಒಂದು ವೇಳೆ ಮದುವೆಯಾದರೆ ನನ್ನ ಆಶೆಯು ಹೇಗೆ ಪೂರ್ಣವಾಗಬೇಕೆಂಬ ವಿಚಾರವು ಯಾವಾಗಲೂ ನನ್ನನ್ನು ಕಾತರನ್ನಾಗಿ ಮಾಡಿತ್ತು. ಅಂತೂ ತಾಯಿಯೇ ಈ ವಾಕ್ ಯುದ್ಧದಲ್ಲಿ ಜಯಶೀಲಳಾದಳು. ಅಂತೂ ಇಂತೂ ತಂದೆಯವರು ಪರಪುಟ್ಟನಂತೆ ತಮ್ಮ ಕೈಯಲ್ಲಿಯೇ ಬೆಳೆದುದೊಡ್ಡವನಾದ ತಮ್ಮ ಸೋದರಳಿಯನಿಗೇ ಕೊಡಬೇಕೆಂದು ನಿಶ್ಚಯ ಮಾಡಿದರು. ಒಂದು ಶುಭಮುಹೂರ್ತದಲ್ಲಿ ಧಾರೆ ಎರೆದು ಕೊಟ್ಟು ಕಳುಹಿಸಿ ಬಿಟ್ಟರು.

ಅತ್ತೆಯ ಮನೆಯು ನನಗೇನೂ ಅಪರಿಚಿತವಲ್ಲ. ಮನೆಯಲ್ಲಿ ಕಳವು ಕಲಿಸುವ ಅತ್ತೆ ಇರಲಿಲ್ಲ. ಇಲ್ಲದ ಸಲ್ಲದ ಚ್ಯಾಡಿ ಛಿದ್ರಗಳನ್ನು ಹೇಳಿ ಪತಿಯ ಮನಸ್ಸು ಕೆಡಿಸುವ, ನ್ಯಾಯ ಹಚ್ಚುವ ಚುಚ್ಚುಮದ್ದಿನಂತಹ ಅತ್ತಿಗೆ ನಾದಿನಿಯರೂ ಇದ್ದಿಲ್ಲ. ಮನೆಯಲ್ಲಿ ನಾವು ಮೂವರೇ. ಬಂಗಾರದಂಥ ಮಾವ, ದೇವರಂಥ ಪತಿ, ಅದಕ್ಕೆ ಹೊಂದಿಕೆಯಾಗಿ ಇರುವನಾನೊಬ್ಬಳು. ಮನೆಯಲ್ಲಿ ಯಾವದಕ್ಕೂ ಕಡಿಮೆ ಇರಲಿಲ್ಲ. ಹೆಚ್ಚೇನು ಆಸ್ತಿಯಾದರೂ ದೊಡ್ಡದು. ಆದರೆ ಮನೆಗಳು ಈಗಿನ ಮುಂಬೈ ಪಟ್ಟಣದಲ್ಲಿಯ ಇಮಾರತಿಗಳಲ್ಲ. ಹಳೇಕಾಲದ ಮಣ್ಣಿನ ಮನೆಗಳು. ಬಂದ ಮಾವನವರ ಪೆನ್‌ಶನ್ನು, ಮನೆಯ ಬಾಡಿಗೆ ನಮಗೆ ಸಾಕಾಗುತ್ತಿತ್ತು. ಆದರೆ ಆ ಮನೆತನದಲ್ಲಿ ಇನ್ನೊಂದು ಕೊರತೆ ಇರುವದೆಂಬುದನ್ನು ಆ ಮನೆಯ ವಂಶವೃಕ್ಷದಿಂದ ನನಗೆ ತಿಳಿದು ಬಂದಿತ್ತು.

ಈಗ ೭-೮ ತಿಂಗಳ ಹಿಂದಿನಿಂದ ಗಿಡಕ್ಕೆ ಒಂದೇ ಹಣ್ಣಿಂದೂ ಅದೊಂದೇ ಹಣ್ಣಿನಿಂದಲೇ ವಂಶಾಭಿವೃದ್ಧಿಯಾಗುತ್ತ ಬಂದಿದೆ ಎಂದೂ ಮಾವನರು ಮೇಲಿಂದ ಮೇಲೆ ಹೇಳುತ್ತಿದ್ದರು. ನಂದನ ವನದಲ್ಲಿ ಮೂಡಿದ ಬೆಳದಿಂಗಳನ್ನು ನೋಡಿ ಪರ ಲೋಕವಾಸಿಯಾಗಬೇಕೆಂಬುದು ಮಾವನವರ ಆಶೆ. ಆ ಆಶೆಯನ್ನು ಪೂರ್ತಿಗೊಳಿಸಲೋ ಏನೋ ದರಿದ್ರ ನಾರಾಯಣನ ಸೇವೆಯಿಂದ ನಂದನವನದ ಚಂದ್ರ ಮೂಡಿದ. ಸಂತೋಷ ಸಾಗರವು ಎರಡೂ ಮನೆಗಳನ್ನು ತೇಲಿಸಹತ್ತಿತು. ಉಕ್ಕಿ ಬಂದ ಸಮುದ್ರ ಪಾತಳಿಯನ್ನು ಇಳಿಸಲೋ ಏನೋ ಗೊಬ್ಬರದಿಂದ ೫-೬ ವರ್ಷದ್ದಾಗಿ ಆ ಮಗುವು ಅಕಾಲ ಮೃತ್ಯುವಿನ ಛಾಯೆಗೆ ತುತ್ತಾಯಿತು. ಇದು ಎಲ್ಲರ ಹೃದಯಕ್ಕೂ ಆಘಾತವನ್ನುಂಟು ಮಾಡಿತು. ಈ ವಂಶವೃಕ್ಷಕ್ಕೆ ಇಷ್ಟು ದಿನಗಳ ವರೆಗೆ ಒಂದೇ ಹಣ್ಣಾಗುತ್ತ ಬಂದಿದೆ. ಎಂಬುದೂ ಪುತ್ರ ಸಂತಾನವಿಲ್ಲದವರಿಗೆ ಮೋಕ್ಷವಿಲ್ಲೆಂದು ನಮ್ಮ ಧರ್ಮ ಹೇಳುವದೂ, ಇವೆರಡೂ ನನ್ನ ಹೃದಯಕ್ಕೊಂದೇ ಆಘಾತ ಮಾಡಲಿಲ್ಲ. ಬುದ್ಧಿಯನ್ನೂ ಭ್ರಮೆಗೊಳಿಸಿದವು.

ಆದರೆ ಸುದೈವದಿಂದ ಆ ಮಾನೆತನದ ಬಳ್ಳಿ ಕುಡಿಗಳು ಅಲ್ಲಿಗೆ ಬಾಡದೆ ಜಿಗಿತವು. ಹೂವುಬಿಟ್ಟ ಬಳ್ಳಿಯನ್ನು ನೋಡಿ ಮಾವನವರು ಸ್ವರ್ಗಸ್ಥರಾದರು. ಐದು ಮಂದಿ ಹೆಣ್ಣು ಮಕ್ಕಳು ಪುತ್ಥಳಿಯಂಥ ಇಬ್ಬರು ಗಂಡು ಮಕ್ಕಳು ನನಗೆ. ನಾನು ಶಾಲೆಯನ್ನು ಕಲಿಯಲಿಲ್ಲ. ವಿದ್ಯಾವತಿಯಾಗಲಿಲ್ಲ. ನನ್ನ ಹೆಣ್ಣುಮಕ್ಕಳಿಗಾದರೂ ಕಲಿಸಿ ನೋಡಿ ಮನಸ್ಸಿನ ತೃಪ್ತಿಯನ್ನು ಪಡೆಯಬೇಕೆಂಬುದೊಂದೇ ಆಶೆ ನನಗಿರಲಿಲ್ಲ. ತಂದೆಯವರು ಸ್ತ್ರೀಯೇ ಆಗಲಿ, ಪುರುಷನೇ ಆಗಲಿ ಪರಾವಲಂಬಿಯಾಗಬಾರದು. ಎಂಥ ದುಸ್ತರ ಪ್ರಸಂಗವನ್ನು ದಾಟುವ ಶಕ್ತಿ ಇರಬೇಕು. ಇದಕ್ಕೆಲ್ಲ ಶಿಕ್ಷಣ ಸಂಸ್ಕೃತಿಗಳು ತಳಹದಿ ಎಂದು ಪದೇ ಪದೇ ಹೇಳುವ ಮಾತುಗಳು ನನ್ನ ಮನಃಪಟಲದ ಮೇಲೆ ದೃಢವಾಗಿ ಮೂಡಿದ್ದವು. ಇಷ್ಟೇ ಅಲ್ಲ. ಮಕ್ಕಳು ವಿದ್ಯೆ ಕಲಿತು ಸುಸಂಸ್ಕೃತರಾಗಿ ಬಾಳಬೇಕೆಂಬುದು ಯಾವ ತಾಯಿ ತಂದೆಯ ಅಪೇಕ್ಷೆ ಯಾಗಿರಲಿಕ್ಕಿಲ್ಲ ?

ಮನಸಿನಂತೆ ಮಹದೇವ, ಎಲ್ಲ ಹೆಣ್ಣು ಮಕ್ಕಳೂ ಹಾಯ ಸ್ಕೂಲಿನ ಶಿಕ್ಷಣವನ್ನು ಮುಗಿಸಿ ಕಾಲೇಜದ ಒಂದೆರಡು ಮೆಟ್ಟಲುಗಳನ್ನು ಹತ್ತಿದವರಿದ್ದಾರೆ. ಹಿರಿಯ ಮಗನನ್ನು ಎಂ. ಬಿ. ಬಿ. ಎಸ್. ಕೋರ್ಸಿಗೆ ಕಳುಹಿಸಬೇಕು. ಅವನು ದೊಡ್ಡ ಡಾಕ್ಟರನಾಗಿ ದೇಶಸೇವೆ, ದೀನದಲಿತರ ಸಂರಕ್ಷಣೆಯನ್ನು ಮಾಡಬೇಕು. ಅವನೂ ಸಮಾಜದಲ್ಲಿ ಒಂದು ಗಣ್ಯ ಸ್ಥಾನವನ್ನು ಪಡೆಯಬೇಕೆಂಬುದೇ ನನ್ನ ಬಲವಾದ ಅಪೇಕ್ಷೆ. ಅವನ ಧ್ಯೇಯ.

ಆದರೆ....... ? ದುರ್ದೈವ. ತಾನೊಂದು ಬಗೆದರೆ..... ದೈವವೊಂದು ಬಗೆಯಬೇಕೇ ? ಎಲ್ಲ ವಿಚಾರಗಳೂ ಗಾಳಿ ಗೋಪುರಗಳಾದವು. ಡಾಕ್ಟರನಾಗ ಬಯಸಿದಮಗನು ಹೊಲ ಮನೆಯ ನ್ಯಾಯಕ್ಕಾಗಿ ಕೋರ್ಟು ಕಚೇರಿಗಳಿಗೆ ಎಡತಾಕಿ ಕಾಲೇಜಿಗೆ ಹೋಗಲಿಕ್ಕಾಗದೆ ನೌಕರಿ ಸೇರಿದ. ಅವನಿಗೆ ನೌಕರಿ ಸೇರುವ ಇಚ್ಛೆ ಇರಲಿಲ್ಲ. ವಿಶ್ವವಿದ್ಯಾಲಯದ ಶಿಕ್ಷಣವು ಅರ್ಧಕ್ಕೇ ನಿಂತಿತೆಂಬ ಬಲವಾದ ಕೊರಗು ದಿನೇ ದಿನೇ ಅವನ ಮನಸ್ಸಿನ ಪರಿಣಾಮವನ್ನು ಹೆಚ್ಚಿಸಹತ್ತಿತು. ಬುದ್ಧಿ ಭ್ರಮೆಯಾಗಹತ್ತಿತು. ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ಮೆಂಟಲ್ ಹಾಸ್ಪಿಟಲ್ ಸೇರಿದ. ಇತ್ತ ತಾಯಿ ತಂದೆಗಳು ಇಹಲೋಕದಿಂದ ತೆರಳಿ ೫-೬ ವರ್ಷಗಳಾಗಿವೆ.

ಮಗನು ಮೆಂಟಲ್ ಹಾಸ್ಪಿಟಲ್ ಸೇರಿ ಇನ್ನೂ ವರ್ಷವಾಗಿರಲಿಲ್ಲ ಪತಿಯು ನಡುನೀರಿನಲ್ಲಿ ಬಿಟ್ಟು ತೆರಳಿದ. ನೂರಾರು ವರ್ಷಗಳ ಹಿಂದಿನ ಹಳೇ ಮನೆಗಳು ಈಗ ಬಿದ್ದು ಬಯಲಾಗಿವೆ. ಅದರಲ್ಲಿಯೇ ಗಟ್ಟಿ ಇದ್ದ ಒಂದೆರಡು ಮನೆಗಳು ಒತ್ತಿಯಲ್ಲಿವೆ. ಇನ್ನೂ ಚಿಕ್ಕ ಮಗ ಹಾಯಸ್ಕೂಲನ್ನು ಓದುತ್ತಿದ್ದಾನೆ. ಐದೂ ಮಂದಿ ಹೆಣ್ಣುಮಕ್ಕಳ ಮದುವೆ ಇನ್ನೂ ಆಗಿಲ್ಲ. ಹೆಣ್ಣಿಗೆ ತವರು ಗಟ್ಟಿ ಇರಬೇಕಂತೆ. ತಂದೆ ತಾಯಿಗಳಿರುವ ವರೆಗೆ ತವರು ಚೆಂದ. ಅವರಿಲ್ಲದ ಮರುದಿನ ಈ ಹಣ್ಣನ್ನು ಯಾರು ಕೇಳಬೇಕು ?

ನಾನೀಗ ಕೈಹಿಡಿದು ನಡುನೀರಿನಲ್ಲಿ ಬಿಟ್ಟವನನ್ನು ಬೈಯಲೇ ? ಅಥವಾ ಧಾರೆ ಎರೆದುಕೊಟ್ಟ ತಂದೆ ತಾಯಿಗಳನ್ನು ಶಪಿಸಲೆ? ಇಲ್ಲ. ಯಾರನ್ನೂ ಬಯ್ಯುವದಿಲ್ಲ. ನನ್ನ ದೈವವನ್ನೇ ಹಳಿಯುತ್ತೇನೆ. ಪಶುಪಕ್ಷಿಯಲ್ಲಾದರೂ ಹುಟ್ಟಬೇಕು. ಆದರೆ ಮಾನವ ಜಾತಿಯಲ್ಲಿ ಹುಟ್ಟಬಾರದು

ಅಯ್ಯೋ ನಾನೆಂತಹ ಹತಭಾಗಿನಿ, ದುರ್ದೈವಿ, ಇದ್ದವರನ್ನು ಸ್ವರ್ಗಕ್ಕೆ ಕಳುಹಿಸಿ ಈ ಕಿಚ್ಚಿನಲ್ಲಿ ಬಾಳಬೇಕೆ ?

ನಾನು ಬಾಳಬೇಕಾಗಿದೆ. ಇದ್ದು ಜೀವಿಸಬೇಕಾಗಿದೆ. ಅದು ನನಗಾಗಿ ಅಲ್ಲ. ನಡು ನೀರಿನಲ್ಲಿ ನಿಂತ ಮಕ್ಕಳನು ದಡಮುಟ್ಟಿಸುವದಕ್ಕಾಗಿ. ಇಂಥ ಕಾರ್ಗತ್ತಲೆಯಲ್ಲಿ ಮಿಂಚಿನ ಛಾಯೆಯ ಬೆಳಕು ಸಮಾಧಾನಕೊಡುತ್ತವೆ. ಅದು ಹೆಣ್ಣು ಮಕ್ಕಳು ಕಲಿತವರಿದ್ದಾರೆ. ಸ್ವತಂತ್ರರಾಗಿ ತಮ್ಮ ಕಾಲ ಮೇಲೆ ನಿಲ್ಲುವ ಧೈರ್ಯ ಅವರಿಗಿದೆ. ನಾನು ಅವರಿಗೆ ಧಾರೆ ಎರೆದು ಮಾಂಗಲ್ಯ ಕಟ್ಟದಿದ್ದರೂ ವಿದ್ಯಾಪತಿಯ ಗುಪ್ತ ಮಂಗಳ ಸೂತ್ರವಿದೆ. ಇದೇ ಒಂದು ಸಮಾಧಾನ.

ಮೊದಲಿನ ಕಾಲದಲ್ಲಿ ಸತಿಹೋಗುವದು. ಪತಿವ್ರತೆಯರ ಕುರುಹಾಗಿದ್ದರೆ. ಈಗಿನ ಕಾಲದಲ್ಲಿ ನಡಲಿನೀರಿನಲ್ಲಿ ನಿಂತ ಮಕ್ಕಳನ್ನು ದಡ ಮುಟ್ಟಿಸುವದೇ ಪತಿವ್ರತೆಯರ ಕುರುಹು. ಇಷ್ಟೆಲ್ಲ ಅನಾಹುತವಾದಾಗ ತಾಯಿಯಾದ ನಾನು ಸತಿ ಹೋದರೆ ಆ ಮಕ್ಕಳ ಗತಿ ಏನು? ಈಗ ನನಗೆ ತವರಿನ ಬಲವೂ ಇಲ್ಲ. ಅತ್ತೆಯ ಮನೆಯ ಆಧಾರವೂ ಇಲ್ಲ. ನಾನು ನಿಜವಾಗಿಯೂ ಹತಭಾಗಿನಿ ಎಂದು ಜನರು ಹೇಳುತ್ತಾರೆ. ಆದರೆ ನಾನು ಕಂಡ ದಾರಿಯನ್ನು ಕೊನೆಯವರೆಗೆ ತುಳಿವ ಶಕ್ತಿ ನನ್ನದಾದರೆ ನಾನೇನು ?

---

## ಸಂಕ್ರಮಣ ಹಬ್ಬ

ಸಂಕ್ರಮಣ ಹಬ್ಬವು ಜನೇವರಿ ೧೪ ತಾರೀಖಿಗೆ ಬರುವದು. ಈ ಹಬ್ಬ ಈ ಸಾರೆ ಎರಡು ತಂಡವಾಗಿ ಬಂದಿತ್ತು ೧೪ ಮತ್ತು ೧೫ನೇ ಈ ಎರಡು ದಿವಸ ಜನರು ಈ ಹಬ್ಬವನ್ನು ಆಚರಿಸಿದರು. ಈ ಹಬ್ಬಕ್ಕೆ ಎಷ್ಟೋ ಜನರು ಎಳ್ಳು ಹಚ್ಚುತ್ತಾರೆ, ಮತ್ತು ಹೊಸದಾಗಿ ಲಗ್ನವಾಗಿದ್ದ ಹೆಣ್ಣುಮಕ್ಕಳು ತಮ್ಮ ತಮ್ಮ ತವರು ಮನೆಗೆ ಬರುತ್ತಾರೆ. ನಿಜವಾಗಿಯೂ ಈ ಹಬ್ಬವು ಹೆಣ್ಣುಮಕ್ಕಳದು. ಸಣ್ಣವರು ದೊಡ್ಡವರು ಈ ಹಬ್ಬವನ್ನು ಆನಂದದಿಂದ ಆಚರಿಸುತ್ತಾರೆ. ಈ ಹಬ್ಬದಲ್ಲಿ ಸವಿ ಸವಿ ಪಕ್ವಾನ್ನ ಮಾಡಿ ಬಂಧು ಬಳಗದೊಂದಿಗೆ ಕೂಡಿಕೊಂಡು ಆನಂದ ಉತ್ಸಾಹದಿಂದ ಊಟಮಾಡುವರು. ಎಲ್ಲರ ಮನೆಯಲ್ಲಿಯ ಸಣ್ಣ ಮಕ್ಕಳಿಗೆ ಆನಂದವೇ ಆನಂದ ಸಂಕ್ರಮಣ ಹಬ್ಬದ ದಿನ ಸಂಜೆಯಲ್ಲಿ ಎಲ್ಲರೂ ಹೊಸ ಹೊಸ ಬಟ್ಟೆಗಳನ್ನು ಧರಿಸಿಕೊಂಡು ಎಳ್ಳನ್ನು ಕೊಡಲು ಮತ್ತು ತಮ್ಮ ತಮ್ಮ ಬಂಧು ಬಾಂಧವರನ್ನು ಬೆಟ್ಟಿಯಾಗಲು ಎಳ್ಳನ್ನು ತೆಗೆದುಕೊಂಡು ಹುಡುಗರು ಮತ್ತು ಹಿರಿಯರು ಎಲ್ಲರೂ ಕೂಡಿ ಹೋಗುತ್ತಾರೆ. ಎಲ್ಲರೂ ಪರಸ್ಪರ ಎಳ್ಳನ್ನು ಕೊಡುವರು. ಸಣ್ಣವರಿಗೆ ನೀನು ದೊಡ್ಡವನಾಗಿ ಆಯುಷ್ಯವಂತನಾಗಿ ಪರೀಕ್ಷೆಯಲ್ಲಿ ವರ್ಷ ವರ್ಷ ಪಾಸಾಗು, ನಿನ್ನ ಸಂಸಾರ ಸುಖಮಯವಾಗಿ ಸಾಗಲಿ ಎಂದು ಹಿರಿಯರಿಂದ ಆಶೀರ್ವಾದವನ್ನು ಪಡೆಯುವರು. ಸಂಜೆ ಸಮಯದಲ್ಲಿ ಎಳ್ಳುಕೊಡಲು ಹೊರಟಾಗ ಸೂರ್ಯನ ಹೊಂಬಿಸಿಲು ಬಿದ್ದಿತ್ತು ಮತ್ತು ಮಂದಮಾರುತನು ತನ್ನ ತಂಪಾದ ಗಾಳಿಯನ್ನು ಬೀಸುತ್ತಿದ್ದನು. ಎಲ್ಲರೂ ಹಿರಿಯರಿಗೆ ಎಳ್ಳುಬೆಲ್ಲ ಕೊಟ್ಟು ಅವರಿಂದ ಆಶೀರ್ವಾದ ತೆಗೆದುಕೊಳ್ಳುವ ಪದ್ಧತಿಪೂರ್ವಕಾಲದಿಂದಲೂ ರೂಢಿಯಲ್ಲಿದೆ. ಹೊಸದಾಗಿ ಲಗ್ನವಾಗಿದ್ದ ಅಳಿಯಂದಿರು ಮಾವನ ಮನೆಗೆ ಬರುತ್ತಾರೆ. ಅವರಿಗೆ ಎಳ್ಳು ಬೆಲ್ಲ ಕೊಟ್ಟು ಎಲ್ಲರೂ ಸಂತೋಷದಿಂದ ಇರೋಣ ಎಂದು ಅವರು ಅನ್ನುತ್ತಾರೆ. ವರ್ಷ ವರ್ಷಕ್ಕಿಂತ ಈ ಹಬ್ಬವನ್ನು ಹೆಚ್ಚು ಹೆಚ್ಚು ಚೆನ್ನಾಗಿ ಆಚರಿಸುತ್ತಾರೆ. ಈ ಹಬ್ಬವು ಶತೃಗಳನ್ನು ಮಿತ್ರರನ್ನಾಗಿ ಮಾಡುತ್ತದೆ. ಎಷ್ಟೋ ದಿವಸಗಳ ಅಥವಾ ವರ್ಷಗಳ ವರೆಗೆ ಬೆಟ್ಟಿಯಾಗದವರು ಈ ಎಳ್ಳು ಬೆಲ್ಲದ ಮೂಲಕವಾಗಿ ಬೆಟ್ಟಿಯಾಗುವರು. ಊರಿಂದ ಊರಿಗೆ ಹೋಗಿ ಈ ಹಬ್ಬದ ಮೂಲಕವಾಗಿ ಎಷ್ಟೋ ಜನರು ಒಬ್ಬರನ್ನೊಬ್ಬರು ಬೆಟ್ಟಿಯಾಗುವರು. ಈ ಹಬ್ಬವು ಹಿರಿಯರಿಗೂ ಕಿರಿಯರಿಗೂ ಆನಂದ ಉತ್ಸಾಹ ಹುಮ್ಮಸ ತುಂಬಿ ತುಳಿಕಿಸುವದು. ಎಳ್ಳು ಬೆಲ್ಲವನ್ನು ತಮ್ಮ ಬಂಧು ಬಳಗದರಿಗೆ ಮತ್ತು ಗುರುತಿನವರಿಗೆ ಒಂದು ಸುಂದರವಾದ ಚೀಲದಲ್ಲಿ ಹಾಕಿ ಕಾರ್ಡಿನಲ್ಲಿ ತಮ್ಮ ಶುಭಾಶಯಗಳನ್ನು ಬರೆದುಊರಿಂದ ಊರಿಗೆ ಕಳಿಸುತ್ತಾರೆ. ಅಳಿಯಂದಿರು ಮಾವಂದಿರ ಮನೆಗೆ ಬಂದಿದ್ದರೆ ಅವರಿಗೆ ಅನೇಕ ಉಡಿಗೆ ತೊಡಿಗೆಗಳನ್ನು ಕೊಟ್ಟು ಸಿಹಿ ಸಿಹಿ ಪದಾರ್ಥಗಳ ಊಟದಿಂದ ಬಾಯನ್ನು ಸಿಹಿಯಾಗಿ ಮಾಡುತ್ತಾರೆ. ಸಿನೇಮಾ ನಾಟಕಗಳನ್ನು ನೋಡಿ ಆ ದಿವಸ ಅವರು ಆನಂದದಲ್ಲಿ ಕಾಲ ಕಳೆಯುವರು. ಮತ್ತು ಸಣ್ಣ ಮಕ್ಕಳಿಗೆ ಕರಿ ಎರೆಯುವ ಪದ್ಧತಿ ಇದೆ. ಆದರಂತೆ ಆದಿವಸ ಏನಾದರು ಮನೆಯಲ್ಲಿ ಕರಿದ ಪದಾರ್ಥವನ್ನು ಮಾಡಿ ಸಣ್ಣ ಮಕ್ಕಳಿಗೆ ಹೊಸ ಬಟ್ಟೆ ತೊಡಿಸಿ ಸಂಜೆಯ ಮುಂದೆ ಕರಿ ಎರೆಯುವರು. ಇದೇ ನಮ್ಮ ಸಂಕ್ರಮಣದ ಹಬ್ಬ.

ಸರಳಾ ಗುಡಿ
೭ನೇ ವರ್ಗದ ವಿದ್ಯಾರ್ಥಿನಿ

# ಲೋಕಮಾನ್ಯ ಟಿಳಕರು

ಲೋಕಮಾನ್ಯ ಟಿಳಕರು ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕುಎಂಬ ಮಹಾ ಮಂತ್ರವನ್ನುಚ್ಚರಿಸಿ ಸ್ವಾತಂತ್ರ ಸಂಗ್ರಾಮದಲ್ಲಿ ಹೆಣಗಾಡಿದವರಲ್ಲಿ ಒಬ್ಬರು.

ಲೋಕಮಾನ್ಯ ಟಿಳಕರ ಹೆಸರು ಬಳವಂತರಾಯರೆಂದು ಅವರು ೧೮೫೬ರಲ್ಲಿ ರತ್ನಾಗಿರಿ ಜಿಲ್ಹೆಯಲ್ಲಿ ಚಿತ್‌ಪಾವನರಲ್ಲಿ ಹುಟ್ಟಿದರು. ಇವರ ತಂದೆಯವರು ದೊಡ್ಡ ವಿದ್ವಾಂಸರು ಆದ್ದರಿಂದ ಮಗನಿಗೆ ಒಳ್ಳೆ ಶಿಕ್ಷಣವು ದೊರೆಯಲೆಂದು ಮನೆಯಲ್ಲಿಯೇ ಗಣಿತ, ಸಂಸ್ಕೃತ ಇವುಗಳನ್ನು ಚೆನ್ನಾಗಿ ಅಭ್ಯಾಸ ಮಾಡಿಸಿದ್ದರು. ಇವರ ಬುದ್ಧಿಯು ಚುರುಕು. ಇವರು ಮ್ಯಾಟ್ರಿಕ್ ಪರೀಕ್ಷೆಯನ್ನು ೧೮೭೨ರಲ್ಲಿ ಪಾಸಾದರು. ಡೆಕ್ಕನ್ ಕಾಲೇಜದಲ್ಲಿ ೧೮೭೬ರಲ್ಲಿ ಬಿ. ಎ. ಪದವಿಯನ್ನು ಪಡೆದು ೧೮೭೯ರಲ್ಲಿ ಎಲ್‌ಎಲ್. ಬಿ. ಪದವಿಯನ್ನು ಪಡೆದರು.

ಬಳವಂತರಾಯರಲ್ಲಿ ರಾಷ್ಟ್ರೀಯ ವೃತ್ತಿ, ಸ್ವಾರ್ಥತ್ಯಾಗ, ಸ್ವಾಭಿಮಾನ, ನಿರ್ಭಯವೃತ್ತಿ ಇವೆಲ್ಲವೂ ಕೂಡಿ ಮೂರ್ತವೆತ್ತಂತಾಗಿತ್ತು. ಅವರಿಗೆ ತಕ್ಕ ಬುದ್ಧಿಯಂತೆ ಒಬ್ಬ ಗೆಳೆಯನು ಜೊತೆಗಾರನಾಗಿದ್ದನು ಅವರಿಬ್ಬರೂ ಕೂಡಿ ಕೇಸರಿ ಮತ್ತು ಮರಾಠಾ ಪತ್ರಿಕೆಗಳನ್ನು ಹೊರಡಿಸಿದರು. ಉಗ್ರ ಲೇಖಗಳನ್ನು ಬರೆಯುವರೆಂದು ಅವರಿಬ್ಬರನ್ನು ಸರಕಾರದವರು ಸೆರೆಮನೆಗೆ ಸೇರಿಸಿದರು. ಅಲ್ಲಿಯೂ ಅವರು ಒಂದು ಗೀತಾರಹಸ್ಯ ಎಂಬ ಗ್ರಂಥವನ್ನು ಬರೆದರು

ಮುಂದೆ ಇವರು ೧೮೮೦ರಲ್ಲಿ ನ್ಯೂ ಇಂಗ್ಲಿಷಸ್ಕೂಲ ಫರ್ಗ್ಯುಸನ್ ಕಾಲೇಜನ್ನೂ ಸ್ಥಾಪಿಸಿದರು.

ಸ್ವರಾಜ್ಯವು ನನ್ನ ಜನ್ಮಸಿದ್ಧ ಹಕ್ಕು, ಅದು ಭಿಕ್ಷೆಬೇಡುವದರಿಂದ ಸಿಗಲಾರದು. ಎಂದು ಕಾಂಗ್ರೆಸಿನಲ್ಲಿ ಉಗ್ರವಾದಿಗಳಾದರು, ಇವರಿಗೆ ಸಮಾಜ ಸೇವೆಯ ಹಂಬಲ ಬಹಳ. ಮತ್ತು ಸ್ವರಾಜ್ಯವನ್ನು ದೊರಕಿಸಿ ತೀರುವೆನೆಂದು ಪ್ರತಿಜ್ಞೆಯನ್ನು ಮಾಡಿದ್ದರು ಇವರು ಬಹಳ ಕಾರ್ಯಗಳನ್ನು ಮಾಡಿದರು. ಇವರು ನಮ್ಮನ್ನಗಲಿ ೩೯ ವರ್ಷಗಳಾಗಿದವು ಇಂಥ ಮಹಾ ವ್ಯಕ್ತಿಗಳ ನೆನವು ಉಳಿಯಲೆಂದು ನಾವು ಅವರ ಜಯಂತಿಯನ್ನಾಗಲಿ ಪುಣ್ಯದಿನವನ್ನಾಗಲಿ ನಮ್ಮ ಶಾಲೆಯಲ್ಲಿ ಆಚರಿಸುತ್ತೇವೆ. ಅವರಿಗೆ ನಮ್ಮ ಸ್ರದ್ಧಾಂಜಲಿಗಳನ್ನು ಅರ್ಪಿಸಿ ಅವರಲ್ಲಿದ್ದ ಗುಣಗಳು ನಮ್ಮಲ್ಲಿ ಬರಲೆಂದು ಪ್ರಾರ್ಥಿಸುತ್ತೇವೆ.

ಉಷಾ ಪೂಜಾರ
೭ನೇ ವರ್ಗದ ವಿದ್ಯಾರ್ಥಿನಿ

---

# ಬೆಳದಿಂಗಳೂಟ

ಸೃಷ್ಟಿ ದೇವತೆಯು ತನ್ನ ಸೌಂದರ್ಯವನ್ನು ನಿರ್ಮಿಸುವದಕ್ಕಾಗಿ ಬೆಳದಿಂಗಳೂಟವನ್ನು ಹರಡಿದ್ದಾಳೆ. ಆಹಾ ! ಇಂತಹ ಬೆಳದಿಂಗಳಿಂದ ಯಾವ ಮಾನವನಿಗೆ ಸಂತೋಷವಾಗಲಿಕ್ಕಿಲ್ಲ. ಒಂದು ವೇಳೆ ಈ ಬೆಳದಿಂಗಳಿಂದ ಯಾವಮಾನನಿಗೆ ಅಸಂತೋಷವಾಗುವದೋ ಅವನು ನಿಜವಾಗಿ ಕಳ್ಳನು. ಮತ್ತು ಕ್ರೂರ ಪ್ರಾಣಿ, ಇಂತಹ ಬೆಳದಿಂಗಳಲ್ಲಿ ನಕ್ಕು ನಲ್ಲಿಯದಿದ್ದರೆ ಅರ್ಧ ಶಾಂತಿಯು ನಷ್ಟವಾಯಿತೆನ್ನಬಹುದು.

ಆಹಾ ! ಇಂತಹ ಬೆಳದಿಂಗಳನ್ನು ಮಾನವನು ಅನೇಕ ರೀತಿ ಸದುಪಯೋಗ ಮಾಡಿಕೊಳ್ಳುತ್ತಾನೆ. ಯಾಕಂದರೆ : ಅವನಿಗೆ ಪ್ರಪಂಚದಲ್ಲಿ ಅನೇಕ ಅಡೆತಡೆಗಳು ಬಂದೊದಗುತ್ತವೆ. ಆದ್ದರಿಂದ ಮಾನವನು ಇದನ್ನು ಒಳ್ಳೇ ರೀತಿಯಿಂದ ಉಪಯೋಗ ಮಾಡಿಕೊಳ್ಳುತ್ತಿರುವನು. ಚಿಕ್ಕಮಕ್ಕಳು ಉತ್ಸಾಹದಿಂದ ಜಿಗಿಯುತ್ತ ಕುಣಿಯುತ್ತ, ಕುಣಿಯುತ್ತ, ಹಾಡುತ್ತ, ಕೇಕೆ ಹಾಕುತ್ತ ಆಟಪಾಟಗಳಲ್ಲಿಯೇ ಕಾಲಕಳೆಯುವರು. ಮತ್ತು ತಾವು ಈಗ ಸ್ವರ್ಗಲೋಕದಲ್ಲಿರುವೆವೊ,ಭೂಲೋಕದಲ್ಲಿರುವೆವೋ ಎಂಬುದನ್ನೇ ಮರೆತು ಆಟವಾಡುತ್ತಿರುವರು. ಹಿರಿಯರು ತಮ್ಮ ಉತ್ಸಾಹವನ್ನು ತೋರಗೊಡದೆ ಪಂಚಪಕ್ವಾನ್ನ ಪದಾರ್ಥಗಳನ್ನು ಮಾಡಿ ಪಂಕ್ತಿ ಮಾಡುವರು. ಇನ್ನೂ ಕೆಲವರು ಆಹಾ ಎಂಥ ಬೆಳದಿಂದಳು, ಮಂದಮಾರುತನು ತನ್ನ ತಂಪಾದ ಗಾಳಿ ಬೀಸುತ್ತಿರುವನು. ಆದ್ದರಿಂದ ತಿರುಗಾಡಲಿಕ್ಕೆಂದು ಹೊರಟಿರುವರು ಇನ್ನು ಕೆಲವರು ಅಭ್ಯಾಸದಲ್ಲಿಯಲ್ಲಿ ಮಗ್ನರಾಗುವರು. ಶಿರತ್ಕಾಲದ ಬೆಳದಿಂಗಳು ಅತೀ ಶುಭ್ರವಾಗಿ ಬಿದ್ದಿರುವದು. ಅಂದು ಹಳ್ಳಿಯಗರತಿಯರು ಚಂದ್ರನನ್ನು ಪೂಜಿಸುವರೋ ಏನೋ ಎಂಬಂತೆ ರಂಗೋಲಿಯನ್ನು ಹೊಯ್ಯುವರು. ಮತ್ತು ರೈತರು ತಮ್ಮ ತಮ್ಮ ಹೊಲಕ್ಕೆ ಹೋಗಿ ಅಲ್ಲಿಯೇ ರಜನಿಯ ಉಪಹಾರವನ್ನು ಮುಗಿಸಿಕೊಂಡು ರಾಗ ಮಾಡುತ್ತ ಹಾಡುವರು. ಈ ಹಾಡನ್ನು ಕೇಳಿದಾಕ್ಷಣ ಕೋಗಿಲೆಯ ಇಂಪಾದ ಧ್ವನಿಯೇ ಎಂದು ಅನಿಸುತ್ತಿತ್ತು. ಮತ್ತು ಅವರು ತಮ್ಮ ನಿದ್ರಾದೇವಿಯನ್ನೇ ಮೈಮರೆತಿರುವರು. ಈ ಬೆಳದಿಂಗಳಿನಿಂದ ಮಾನವರ ಶರೀರಕ್ಕೆ ಪುಷ್ಟಿ ದೊರಕುವದಲ್ಲದೆ ಒಂದು ತರದ ಹುರುಪು ಬರುವದು. ಮನುಷ್ಯನಿಗೆ ಸಂಸಾರದಲ್ಲಿ, ಮತ್ತು ವಿದ್ಯಾರ್ಥಿನಿಯರಿಗೆ ಅಭ್ಯಾಸಮಾಡುವಲ್ಲಿ ಅನೇಕ ಅಡತಡೆಗಳು ಬಂದೊದಗಿ ಬೆಳದಿಂಗಳಲ್ಲಿ ಕೂಡ್ರುವದರಿಂದ ಅವರಿಗಾದ ಚಿಂತೆ, ಕ್ರೋಧ ಅಸೂಯೆ ಮುಂತಾದ ಗುಣಗಳು ಆ ಸಮಯದಲ್ಲಿ ಮಾಯವಾಗುವವು.

ದ್ರೌಪದಿ ಪುರಾಣೀಕ
೭ನೇ ವರ್ಗದ ವಿದ್ಯಾರ್ಥಿನಿ

ವಿಭಾಗ ೩

# ವನಿತಾ ಹೈಸ್ಕೂಲ

## ಧಾರವಾಡ

ಸಂಚಾಲಕರು : ಕೃಷ್ಣಮೂರ್ತಿ ಬಿ. ಓಂಕಾರ
ಬಿ. ಎ. ಎಸ್. ಟಿ. ಸಿ. ಡಿ. ಇಡಿ.

ಸಂಪಾದಕರು : ಸೌ. ಚಂಪಾತಾಯಿ ರಾಮರಾವ ಕುಲಕರ್ಣಿ

೧೯೫೯—೬೦

## ಮುನ್ನುಡಿ

ರಾಷ್ಟ್ರ ಪುರುಷನಿಗೆ ಪೂರ್ಣತ್ವ ಬರಬೇಕಾದರೆ ಪ್ರಕೃತಿ ರೂಪಿ ಸ್ತ್ರೀಯ ಸಹಕಾರವು ಅವಶ್ಯ. ಸ್ತ್ರೀಯ ವಿನಾ ಪುರುಷನಿಗೆ ಯಾವ ಕಾರ್ಯವೂ ಸಾಗಲಾರದು. ಜಗಜ್ಜನನಿಯೆನಿಸಿದ ಸ್ತ್ರೀ ವರ್ಗವಿಂದು ಬಹುತರವಾಗಿ ಶಿಕ್ಷಣಕ್ಕೆ ಎದುರಾಗುವದನ್ನು ಕಂಡು ಅನೇಕಮಹನೀಯರು ಅವರ ಉದ್ಧಾರಕ್ಕಾಗಿ ತನು-ಮನ-ಧನದಿಂದ ಸಹಾಯ ಮಾಡಲು ಮುಂದಾದವರಲ್ಲಿ "ವನಿತಾಸೇವಾ ಸಮಾಜದ"ದ ಸಂಸ್ಥಾಪಕರೊಬ್ಬರು. ಸಮಾಜವು ವಿವಿಧ ಶಾಖೆಯ ಮುಖಾಂತರ ಸ್ತ್ರೀಯರ ಉನ್ನತಿಗಾಗಿ ಪ್ರಯತ್ನಿಸುತ್ತದೆ. ಅದರಲ್ಲಿ ನಮ್ಮ ಶಾಲೆಯೊಂದು.

ಈ ಶಾಲೆಯು ವನಿತಾ ಸೇವಾ ಸಮಾಜ ಸಂಸ್ಥೆಯಿಂದ ೧೯೫೭ರಲ್ಲಿ ೮ ಮತ್ತು ೯ನೆಯ ವರ್ಗಗಳನ್ನು ಪ್ರಾರಂಭಿಸಿತು. ಅದಕ್ಕೆ ಸರಕಾರದ ಮನ್ನಣೆ ದೊರಕಿತು. ಮುಂದೆ ೧೯೫೮ ಹಾಗೂ ೫೯ ರಲ್ಲಿ ೧೦ ಮತ್ತು ೧೧ನೇ ಇಯತ್ತೆಗಳು ಪ್ರಾರಂಭಿಸಲ್ಪಟ್ಟ ವಿವರ ಕಳೆದ ವರ್ಷದ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ.

ನಮ್ಮ ಶಾಲೆಯು ಸ್ಥಾಪಿತವಾಗಿ ೬ ವರ್ಷಗಳಾದವು. ಆದರೆ ಪತ್ರಿಕೆಯನ್ನು ಪ್ರಾರಂಭಿಸಿದ್ದು ಇದೇ ಎರಡನೇ ವರ್ಷ. ಈ ವರ್ಷವಾದರೂ ವಿದ್ಯಾರ್ಥಿನಿಯರು ವಿವಿಧ ಲೇಖನ ಸಾಮಗ್ರಿಗಳನ್ನು ಉತ್ಸಾಹದಿಂದ ಒದಗಿಸಿಧ್ದಾರೆ.

ನಮ್ಮ ಹೈಸ್ಕೂಲಿನಿಂದ ೨೦ ವಿದ್ಯಾರ್ಥಿನಿಯರು ಮ್ಯಾಟ್ರಿಕ್ ಪರೀಕ್ಷೆಗೆ ಕುಳಿತಿದ್ದರು. ಅದರಲ್ಲಿ ೧೮ ವಿದ್ಯಾರ್ಥಿನಿಯರು ಉತ್ತೀರ್ಣರಾದರು. ಆದರಲ್ಲಿ ಕು. ಸುನಂದಾ ಶ್ರೀ. ಪುರಾಣಿಕ ಇವಳು ಪ್ರಥಮಸ್ಥಾನ ಪಡೆದಳು.

ಡ್ರಾಯಿಂಗ ಪರೀಕ್ಷೆಯ ಪರಿಣಾಮವು ನೂರಕ್ಕೆ ೯೦ರಂತೆ ಆಗಿದೆಯೆಂದು ಹೇಳಲು ಅಭಿಮಾನವೆನಿಸುತ್ತದೆ. ದ. ಭಾ. ಹಿಂದೀ ಪ್ರಚಾರ ಕೇಂದ್ರದಿಂದ ಪ್ರಥಮಾ, ಮಾಧ್ಯಮಾ, ಹಾಗು ರಾಷ್ಟ್ರಭಾಷಾ ಪರೀಕ್ಷೆಯಲ್ಲಿ ಒಬ್ಬರನ್ನು ಬಿಟ್ಟು ಎಲ್ಲರೂ ಪಾಸಾಗಿದ್ದಾರೆ.

ಶೈಕ್ಷಣಿಕ ಪ್ರವಾಸಕ್ಕಾಗಿ ಶಿಕ್ಷಕ ಶಿಕ್ಷಕಿಯರು ವಿದ್ಯಾರ್ಥಿನಿಯರೊಂದಿಗೆ ಹಂಪಿಗೆ ಹೋಗಿಬಂದರು. ಅಲ್ಲಿ ಪ್ರೇಕ್ಷಣೀಯ ಹಾಗು ಐತಿಹಾಸಿಕ ಸ್ಥಳಗಳ ಮಾಹಿತಿಯನ್ನು ತಜ್ಞ ಅಧ್ಯಾಪಕರು ವಿದ್ಯಾರ್ಥಿನಿಯರಿಗೆ ಒಳ್ಳೇ ರೀತಿಯಿಂದ ಹೇಳಿದರು.

ನಮ್ಮ ಸ್ಕೂಲಿನ ವಿದ್ಯಾರ್ಥಿನಿಯರು ನೃತ್ಯ, ಗಾಯನ, ಮತ್ತು ಕ್ರೀಡಾಪಟುತ್ವದಲ್ಲಿಯೂ ಪ್ರವೀಣರೆಂದು ಹೇಳುವದಕ್ಕೆ ನ್ಯಾಪಾರೀ ಗಣೇಶೋತ್ಸವದಲ್ಲಿ ಭಾಗವಹಿಸಿ ಪಡೆದ ಅವರ ರೌಪ್ಯ ಪದಕ ರೌಪ್ಯ ಪ್ಯಾಲೆಗಳೇ ಪ್ರಮಾಣ.

ಮಹನೀಯರು ಈ ಸ್ಕೂಲಿಗೆ ಡೇಸ್ಕುಗಳನ್ನು ಕೊಟ್ಟು ನಮ್ಮನ್ನು ಉಪಕೃತರನ್ನಾಗಿ ಮಾಡಿದ್ದಾರೆ. ಎಷ್ಟೋ ಸಜ್ಜನರು ತಮ್ಮ ಅಮೌಲ್ಯ ಅಭಿಪ್ರಾಯದಿಂದ ನಮ್ಮನ್ನು ಗೌರವಿಸಿದ್ದಾರೆ. ಹೀಗೆ ಬಾಲ್ಯಾವಸ್ಥೆಯಲ್ಲಿದ್ದ ಈ ಸ್ಕೂಲಿನ ಉನ್ನತಿಗಾಗಿ ಸಹಾಯ ಭೂಪರಾದ ಎಲ್ಲ ಜನರಿಗೂ ನಾವು ಋಣಿಯಾಗಿದ್ದೇವೆ.

ನಮ್ಮ ಶಾಲೆಯ ಈ ಸಂಚಿಕೆಯ ಸಂಪಾದಕತ್ವವಹಿಸಲು ಸರ್ವಥಾ ಅಯೋಗ್ಯಳಾದ ನನಗೆ ಮುಖ್ಯಾಧ್ಯಾಪಕರು ಹಾಗು ಸಹೋದ್ಯೋಗಿಗಳು ಸಂಪೂರ್ಣ ಸಹಾಯಮಾಡಿದಲ್ಲಿ ನನ್ನಿಂದ ಈ ಕಾರ್ಯ ನಿರ್ವಿಘ್ನದಿಂದ ನೆರವೇರಿತೆಂದು ಹೇಳುವದಕ್ಕೆ ನನಗೆ ತುಂಬಾ ಸಂತೋಷವೆನಿಸುತ್ತದೆ

ನಮ್ಮ ಶಾಲೆಯ ಶಿಕ್ಷಕ ವರ್ಗವು ತರಬೇತಿ ಹೊಂದಿದ ಪದವೀಧರರೆಂದು ಹೇಳಲು ನನಗೆ ಅಭಿಮಾನವೆನಿಸುತ್ತದೆ. ಅವರೆಲ್ಲರ ಪ್ರೋತ್ಸಾಹದ ಮತ್ತು ೧೬ ವರ್ಷ ಶಿಕ್ಷಣ ಕ್ಷೇತ್ರದ ವಿವಿಧ ಭಾಗದ ಅನುಭವ ಪಡೆದ ತಜ್ಞರ ಮುಖ್ಯಾಧ್ಯಾಪಕರ ಮಾರ್ಗದರ್ಶನದಿಂದ ವನಿತಾ ಮಾಧ್ಯಮಿಕ ಶಾಲೆಯು ಪ್ರಗತಿ ಪಥದಲ್ಲಿ ಸಾಗಿದೆಯೆಂದು ಹೇಳಲು ಅತ್ಯಧಿಕ ಹೆಮ್ಮೆಯೆನಿಸುತ್ತದೆ. ಈ ಎಲ್ಲ ಕಾರ್ಯಕ್ಕೆ ಸಮಾಜ ಸಂಚಾಲಕರಾದ ಶ್ರೀ. ದಾದಾ ಅವರು ಮೂಲಾಧಾರರು. ವೃಕ್ಷವು ಮೂಲ ಸ್ಥಿರ, ಹಾಗು ಎಲ್ಲ ವಿಷವನ್ನು ತನ್ನಲ್ಲಿ ಜೀರ್ಣಿಸಿಕೊಂಡು ವೃಕ್ಷವನ್ನು ಪರ್ಣ ಪುಷ್ಪ-ಫಲಯುಕ್ತಮಾಡುತ್ತದೆ. ಲೋಪ ದೋಷಗಳ ಹೊಣೆ ತಾವೇಹೊತ್ತುಕೊಂಡು ನಮಗೆ ಸೌಹಾರ್ದ ಸಹಾನುಭೂತಿ ತೋರಿಸಿದ್ದಕ್ಕಾಗಿ ಅವರಿಗೆ ಶತಶಃ ಧನ್ಯವಾದ.

## ನಮ್ಮ ರಾಷ್ಟ್ರಧ್ವಜ

ನಿಂತಿದೆ ನಮ್ಮ ತ್ರಿವರ್ಣ ಧ್ವಜವು ಭಾರತ ಕೀರ್ತಿಯ ಬೆಳಗಲಿಕೆ।
ಪಾರತಂತ್ರ್ಯದ ಬಲೆಯನೆಸೆದು ನಿಂತ ಸ್ವತಂತ್ರ ಭಾರತಕೆ॥ ಪ॥
ಮಹಾತ್ಮರ ಶಾಂತಿ ಅಹಿಂಸೆಯ ತತ್ವವ ಸಾಲಿಸಲೇರಿದೆ ಈ ಧ್ವಜವು ॥
ಪ್ರೇಮ-ಶಾಂತಿಗಳ ಸಮರಸ ತತ್ವವ ಬೀರಲು ಏರಿದೆ ಈ ಧ್ವಜವು॥ ೧ ॥
ಭಾರತ ಭೂಮಿಯ ಘನತೆಯ ಸಾರಲಿಕೇರಿದೆ ಈ ದಿವ್ಯ ಧ್ವಜವು॥
ಭಾರತ-ಸಾಹಸ ಶಕ್ತಿಯ ಹಿರಿಮೆಯ ಅರುಹಲಿಕೇರಿದೆ ಈ ಧ್ವಜವು॥ ೨॥
ಕರೆಯುವದೀ ಧ್ವಜ ಭಾರತೀಯರನು ಸೌಖ್ಯದಿ ಬಾಳನು ಕಳೆವುದಕೆ ॥
ಹಿಂದು-ಮುಸಲ್ಮಾನರೆಂಬ ಭೇದ ಭಾವಗಳನೆಣಿಸದಲೆ॥ ೩ ॥
ಎಲ್ಲರು ಒಂದೇ ತಾಯಿಯ ಬಸಿರಲಿ ಬಂದಿಹ ರಾಷ್ಟ್ರದ ಜೀವಿಗಳು ॥
ಎಲ್ಲರು ಒಂದೆಡೆ ಕಲೆಯುತ ಬೆರೆಯುವ ನೀತಿ ವಚನವ ಸಾರುತಿದೆ॥ ೪ ॥
ಆಹಾ! ಇದು ಸ್ವಾತಂತ್ರ್ಯ ಧ್ವಜ! ಭಾರತ ರಾಷ್ಟ್ರ ಸುವರ್ಣ ಧ್ವಜ !
ನಮಿಪೆವು ನಾವೀ ಪವಿತ್ರ ಧ್ವಜಕೇ ಭಾರತ ಮಾತೆಯ ಕುರುಹಿಂಗೆ॥ ೫ ॥

ಕು. ಸುಚಲಾ ಜಿ. ಹಳ್ಳೆಪ್ಪನವರ Std. X

# ಸ್ವಾತಂತ್ರ ಪೂರ್ವದ ಭಾರತ

ಕುಮಾರಿ : ಎಸ್. ಜಿ. ವಾರಣಾಸಿ

೧೯೪೭ ನೇ ಇಸವಿಯ ಆಗಸ್ಟ ತಿಂಗಳ ೧೫ನೇ ತಾರೀಖಿನ ದಿವಸ ನಮ್ಮ ಭಾರತ ದೇಶವು ಸ್ವತಂತ್ರವಾಯಿತು. ಅದಕ್ಕೂ ಮೊದಲು ಸಾವಿರಾರು ವರುಷಗಳಿಂದ ಈ ನಮ್ಮ ದೇಶವು ವಿದೇಶಿಯರ ಆಳಿಕೆಗೆ ಒಳಪಟ್ಟು ದಾಸ್ಯದಲ್ಲಿ ತೊಳಲುತ್ತ ಬಳಲುತ್ತ ಜರ್ಜರಿತವಾಗಿತ್ತು. ಸುಮಾರು ೧೧-೧೨ ನೇ ಶತಮಾನಗಳಲ್ಲಿ ಮುಸಲ್ಮಾನ ಜನರ ಉತ್ತರದಾಳಿಗಳಿಂದ ಪ್ರಾರಂಭಿಸಿ ಬ್ರಿಟಿಶ್ ಸಾಮ್ರಾಜ್ಯವು ಇಲ್ಲಿಂದ ತೊಗುವವರೆಗೆ ಈ ದೇಶದ ಹೀನ ಸ್ಥಿತಿಯನ್ನು ಬಣ್ಣಿಸಲಾಸಲ್ಲ. ಈ ದೇಶವು ವೀರರಿಲ್ಲದ್ದರಿಂದ ಪರದಾಸ್ಯಕ್ಕೊಳಗಾಗಲಿಲ್ಲ. ಆದರೆ ಮಹಾಪ್ರತಾಪಿಗಳೂ, ರಣಧೀರರೂ, ಸ್ವಾರ್ಥತ್ಯಾಗಿಗಳೂ, ಪರೋಪಕಾರಿಗಳೂ, ಜ್ಞಾನಶೌಂಡರೂ ಆದ ಅಸಂಖ್ಯ ಭೂಪತಿಗಳು ಇಲ್ಲಿ ಆಳಿದರೂ ಕೂಡಾ ಅವರಲ್ಲಿ ಒಕ್ಕಟ್ಟಿಲ್ಲದ್ದರಿಂದ ದಾಸ್ಯವನ್ನು ಈ ದೇಶವು ಅನುಭವಿಸಬೇಕಾಗಿ ಬಂತು. ವಿದೇಶಿಯರ ದಾಳಿಗಳಿಂದ ಇಲ್ಲಿಯ ಸಾಮ್ರಾಜ್ಯಗಳು ಉರುಳಿದವು. ರಾಜ ಮನೆತನಗಳು ಮಣ್ಣು ಪಾಲಾದವು. ಎಲ್ಲೆಡೆಯಲ್ಲಿಯೂ ಅರಾಜಕತೆಯು ತಲೆದೋರಿತು. ದುಷ್ಟ ಜನರಿಗೆ ಚಲ್ಲಾಟವಾಯಿತು. ಗುಡಿಗೋಪುರಗಳು ನೆಲಸಮವಾದವು. ಹೆಂಗಳೆಯರ ಮಾನಭಂಗಗಳು ಎಲ್ಲೆಡೆಯಲ್ಲಿ ನಡೆದವು. ಭಾರತ ದೇಶದ ಸಂಪತ್ತು ಹೊಳೆಯಂತೆ ಪಾಶ್ಚಿಮಾತ್ಯಗಳ ಕಡೆಗೆ ಹರಿದು ಹೊರಟು ಹೋಯಿತು. ಭಾರತೀಯರ ಸುಖ-ದುಃಖಗಳನ್ನು ಕೇಳುವವರಿಲ್ಲದಂತಾದರು. ಜನಜೀವನವು ದುಃಸಹವಾಯಿತು. ಧಾರ್ಮಿಕ ಆಚಾರ ವಿಚಾರಗಳು ಬುಡಮೇಲಾದವು. ಅನೇಕ ಸರ್ವೋತ್ಕೃಷ್ಟ ಉದ್ಯೋಗಗಳು ನತಮಸ್ತಕ ಹೊಂದಿದವು

ಮೊದಲು ಇಲ್ಲಿಯ ಸಂಪತ್ತಿನಿಂದ ಆಕರ್ಷಿತರಾಗಿ ಈ ದೇಶವನ್ನು ಸೂರೆಗೊಳ್ಳಲು ಗೋರಿಮುಮ್ಮದ, ಗಝನಿ ಮುಮ್ಮದ ಮೊದಲಾದವರು ಬಂದರು. ಗಝನೀಮುಮ್ಮದ ನಂತೂ ಭಾರತದ ಮೇಲೆ ೧೭ ಸಾರೆದಾಳಿ ಮಾಡಿ ಭಾರತ ಸಂಪತನ್ನು ಸವರಿ ಹೋದನು. ನಂತರ ಮೊಗಲರು ತಮ್ಮ ರಾಜ್ಯವನ್ನೇ ಇಲ್ಲಿ ಸ್ಥಾಪಿಸುವದಕ್ಕೋಸ್ಕರ ಬಂದರು. ಅವರೂ ಅನೇಕ ವರಷ ಹಿಂದುಗಳನ್ನು ಹಿಂಸಿಸುತ್ತ ಆಳಿದರು. ನಂತರ ಬಂದವರು ಬ್ರಿಟೀಶರು. ಇವರು ಬಂದದ್ದು ವ್ಯಾಪಾರಕ್ಕೋಸ್ಕರ. ನಂತರ ತಮ್ಮ ವರ್ಚಸ್ಸನ್ನು ಎಲ್ಲರ ಮೇಲೆ ಬೀರಿ ತಾವೇ ಇದರ ಅಧಿಕಾರಿಗಳಾದರು.

ಈ ರೀತಿಯಾಗಿ ಈ ದೇಶವು ಹಾಳಾದದ್ದನ್ನು ನೋಡಿ ತಾಳಲಾರದೇ ದುಷ್ಟರಾದ ಯವನರನ್ನು ಈ ದೇಶದಿಂದ ಹೊರದೂಡುವ ಸಂಕಲ್ಪದಿಂದ ದಕ್ಷಿಣದಲ್ಲಿ "ವಿಜಯನಗರ ಸಾಮ್ರಾಜ್ಯವು" ಶ್ರೀ ವಿದ್ಯಾರಣ್ಯರಿಂದ ಇ. ಸ. ೧೩೩೬ ರಲ್ಲಿ ಸ್ಥಾಪಿಸಲ್ಪಟ್ಟಿತು. ಈ ಸಾಮ್ರಾಜ್ಯದಿಂದ ಎಷ್ಟೋ ಮಟ್ಟಿಗೆ ಜನರು ಸ್ವತಂತ್ರಕ್ಕಾಗಿ ತಮ್ಮ ಮೇಲ್ಮೆಯನ್ನು ಬೆಳಗಿಸುವಂತಾಯಿತು. ಆದರೆ ದುರ್ದೈವದಿಂದ ಸಮಗ್ರ ಭಾರತವು ಸ್ವತಂತ್ರವಾಗಲಿಲ್ಲ. ದಕ್ಷಿಣದ ಎಲ್ಲ ಮುಸಲ್ಮಾನ ರಾಜ್ಯಗಳು ಒಂದಾಗಿ ವಿಜಯ ನಗರ ಸಾಮ್ರಾಜ್ಯವನ್ನು ಹಾಳುಗೆಡಹಿದವು. ಪುನಃ ಸಮಗ್ರ ಭಾರತವು ಸ್ವಾತಂತ್ರವನ್ನು ಕಳೆದು ಕೊಂಡಿತ್ತು. ಉತ್ತರದಲ್ಲಿ ಮೊಗಲರಾಜ್ಯ ದಕ್ಷಿಣದಲ್ಲಿ ಶಾಹಿರಾಜ್ಯಗಳು ಕೂಡಿಕೊಂಡು ಹಿಂದು ಜನರನ್ನು ಹಿಂಸೆಗೊಳಿಸಿದರು. ಔರಂಗಜೇಬನ ಆಳಿಕೆಯಲ್ಲಿಂತೂ ಅಲ್ಲಿಯ ಜನರ ಗೋಳಾಟವು ಮಿತಿಮೀರಿತು. ಆಗ ಪುನಃ ದೇಶವನ್ನು ಸ್ವತಂತ್ರ ಗೊಳಿಸಲು ಶಿವಾಜಿಯಂತಹ ಮಹಾವೀರರು ಉದಯಿಸಿದರು. ಪುನಃ ಸ್ವಾತಂತ್ರದ ಗಾಳಿಯು ಬೀಸತೊಡಗಿತು. ಔರಂಗಜೇಬನ ಸಾಮ್ರಾಜ್ಯದಾಹವು ಶಿಖರಮುಟ್ಟಿದಾಗ ಶಿವಾಜಿಯು ತನ್ನ ಪರಾಕ್ರಮದಿಂದ ಕಾದಾಡಿ ಸ್ವತಂತ್ರ ರಾಜ್ಯವನ್ನೇ ಸ್ಥಾಪಿಸಿದನು. ಭಾರತದೇಶದ ರಂಗಸ್ಥಾನದಲ್ಲಿ ಇಂಥಹ ಕೊಲಾಹಾಲವೆದ್ದಾಗ ಯುರೋಪ ದೇಶದ ಇಂಗ್ಲಂಡ, ಫ್ರಾನ್ಸ, ಪೋರ್ತಗಾಲ, ಡಚ್ ಮೊದಲಾದ ದೇಶದ ಜನರು ವ್ಯಾಪಾರದ ನೆವದಿಂದ ಸಂಘಗಳನ್ನು ಸ್ಥಾಪಿಸಿಕೊಂಡು ಈ ದೇಶದಲ್ಲಿ ಬಂದು ತಳವೂರಿದರು. ಆಗ ಈ ದೇಶದಲ್ಲಿ ನಡೆದ ಅನಾಹುತಗಳ ಸ್ವರೂಪವನ್ನು ತಿಳಿದು ತಮ್ಮ ತಮ್ಮ ಪ್ರಭುತ್ವವನ್ನು

ಈ ದೇಶದ ಮೇಲೆ ಸ್ಥಾಪಿಸ ಬೇಕೆಂದು ಹವಣಿಸಹತ್ತಿದರು. ಈ ಕುತಂತ್ರದ ಜೂಜಾಟದಲ್ಲಿ ಕುಟಿಲತಂತ್ರಜ್ಞರಾದ ಬ್ರಿಟಿಶ್ ರಿಗೆ ಗೆಲವಾಯಿತಲ್ಲದೆ ಅವರ ಸಾಮ್ರಾಜ್ಯವು ಸ್ಥಾಪಿತವಾಯಿತು. ಅವರ ನೂರೈವತ್ತು ವರುಷದ ಆಳಿಕೆಯಲ್ಲಿ ಈ ದೇಶವು ಸಂಪೂರ್ಣ ನಿರ್ವೀರ್ಯವಾಯಿತು. ಕಲೆಗಳೆಲ್ಲ ಮಣ್ಣು ಪಾಲಾದವು. ಆಚಾರ ವಿಚಾರಗಳೆಲ್ಲ ಮಣ್ಣು ಮುಕ್ಕಿದವು. ಹೊಸ ಹೊಸ ವಿಚಾರಗಳು ತರದೋರಿದವು. ಇಂಥ ವಿಪನ್ನಾವಸ್ಥೆಯು ದೇಶವನ್ನಾವರಿಸಿದಾಗ ಪುನಃ ದೇಶದ ಮಾನವನ್ನುಳಿಸಿ ಸ್ವಾತಂತ್ರವನ್ನು ತಂದು ಕೊಡಲು ಪ್ರಾಣಾರ್ಪಣೆಮಾಡಿ ಅಮರರಾಗಿ ನಿಂತ ಭಾರತದ ಭಾಗ್ಯ ವಿಧಾತರು ಜನ್ಮತಳೆದರು. ಅವರಲ್ಲಿ ಪ್ರಮುಖರೆಂದರೆ:— ರಾಜಾರಾಮ ಮೋಹನರಾಯ, ದಾದಾ ಭಾಯಿ ನವರೋಜಿ ಬಾಲಗಂಗಾಧರ ಟಿಳಕ, ಗೋಖಲೆ, ಮಹಾತ್ಮಾಗಾಂಧಿ; ಮೋತಿಲಾಲ ನೆಹರು, ಚಿತ್ತರಂಜನದಾಸ, ಲಾಲಾಲಜಪತರಾಯ, ವಲ್ಲಭಾಯಿ ಪಟೇಲ, ಜವಾಹರಲಾಲ ನೆಹರು ಮೊದಲಾದವರು. ಇವರ ಸ್ವಾರ್ಥತ್ಯಾಗ, ಧೈರ್ಯ, ದೂರದೃಷ್ಟಿ, ಕಾರ್ಯಕ್ಷಮತೆ, ದೇಶಪ್ರೇಮ, ಬಂಧುಪ್ರೇಮ, ಮೊದಲಾದ ಆದರ್ಶಗುಣಗಳ ಶಕ್ತಿಯಿಂದ ಪುನಃ ಈ ದೇಶಕ್ಕೆ ಪೂರ್ಣಸ್ವಾತಂತ್ರವು ಲಭಿಸುವಂತಾಯಿತು. ನಮ್ಮ ಗೋಸ್ಕರವಾಗಿ ಪ್ರಾಣವನ್ನೇ ತೆತ್ತು ದೊರಕಿಸಿಕೊಟ್ಟ ಈ ಸ್ವಾತಂತ್ರವನ್ನು ಕಾಯ್ದುಕೊಂಡು ಇದರ ಸುಫಲಗಳನ್ನು ನಾವು ಮತ್ತು ನಮ್ಮ ಮುಂದಿನ ಜನಾಂಗವು ಹೊಂದಲು ಅರ್ಹರಾಗುವದಕ್ಕೆ ಯಾವಾಗಲೂ ಯತ್ನಿಸೋಣ.

## ಕೋಗಿಲೆ

ಕೋಗಿಲೆ ನಿನ್ನ ಕಂಠವ ಕೇಳಿ।
ಜೋಗುಳ ಹಾಡಿದೆ ನಾನು।
ಹೃದಯವು ತೂಗಿತು ಮನಸನ್ನು।
ಮಲಗಿದ ಮನಸನು ಎಚ್ಚರಿಸಿ।
ಬಂದಿತು ನಿನಗೆ ಎಂದಿಲ್ಲದ ಬಂಧನ ॥೧॥

ತೊಳಗಿತು ತೊಲಗಿತು ಕತ್ತಲೆಯು।
ತಿಳಿಯದೆ ಬಂದಿತು ಮನಸಿನ ಮಾರ್ಗವು।
ಬೆಳಗಿತು ಲೋಕವನು ನಿನ್ನಯ ಧ್ವನಿಯು।
ಕಿವಿಯಾಲಿಸಿ ಕೇಳಿತು ಎನ್ನಯ ಹೃದಯವು।
ಕೋಗಿಲೆ ನಿನ್ನ ಕಂಠವ ಕೇಳಿ।
ಜೋಗುಳ ಹಾಡಿದೆ ನಾನು. ॥೨॥

ಬಂದಿತು ಬಂದಿತು ಬಂದಿತು ಬಸಂತ ಮಾಸ।
ತಿಳಿಯದೆ ಬೆಳಗಿತು ಎಂದಿಲ್ಲದ ಹರುಷ।
ಅಲ್ಲಿದೆ ನಿನ್ನ ಕಂಠದ ಸಂತಸ।
ನಿನ್ನಯ ಗಾನವ ಕೇಳಿತು ನಮ್ಮಯ ದೇಶ।
ಕೋಗಿಲೆ ನಿನ್ನ ಕಂಠವ ಕೇಳಿ ಜೋಗುಳ ಹಾಡಿದೆ ನಾನು॥೩॥

ಕು. ಜಾಧವ ಮೀರಾ



ಸುನಂದಾ ಪುರಾಣಿಕ.
೧೯೫೮-೫೯ರ ಸಾಲಿನಲ್ಲಿ ನಮ್ಮ ವನಿತಾ ಹೈಸ್ಕೂಲಿನಿಂದ
ಪ್ರಥಮಸ್ಥಾನ ಪಡೆದವಳು.



ನಮ್ಮ ಶಾಲೆಯ ವಿದ್ಯಾರ್ಥಿನಿಯರು ದಾಂಡೇಲಿಯಲ್ಲಿ.



ದಾಂಡೇಲಿಯ ಜನತಾ ಇಂಗ್ಲಿಷ ಸ್ಕೂಲಿನ ಮಹಾದ್ವಾರದಲ್ಲಿ.

# ಚಾಚಾ ನೆಹರು

ಲೇ : ಎಸ್. ಸುವರ್ಣಮಾಲಾ

ಎಂತಹ ಮನುಷ್ಯರು? ಇದ್ದರೆ ಇರಬೇಕು. ವೇಳೆಗೆ ಸರಿಯಾರಿಕೆಲಸ ಮಾಡುವ ಕರ್ತವ್ಯ ನಿಷ್ಠೆ, ವೇಳೆಗೆ ತಕ್ಕ ಕಾರ್ಯ, ಇವುಗನ್ನೆಲ್ಲಾ ನೋಡುತ್ತಿರಲಾಗಿ ಇಡೀ ಜಗತ್ತಿನೊಳಗೇ ಇಲ್ಲವೆನ್ನಬಹುದು. ಪ್ರಪಂಚವೇ ಹೇಳುತ್ತದೆ ಇಂತಹ ಮನುಷ್ಯ ನಮ್ಮಲ್ಲಿಯಾದರೂ ಜನಿಸಬಾರದೇ ಎಂದು ಅವರು ಇದ್ದಲ್ಲಿ ಜನವೇ ಕಡಿಮೆ ಇರುವದಿಲ್ಲಾ. ಕಿಕ್ಕಿರಿದು ತುಂಬಿರುತ್ತದೆ. ಇರವೆ ಹೋಗಲಿಕ್ಕು ಕೂಡಾ ಸ್ಥಳವಿರುವದಿಲ್ಲ. ಇಂಥಾ ವ್ಯಕ್ತಿ ನಮ್ಮ ಭಾರತದಲ್ಲಿ ಜನಿಸಿ ಬಂದುದು ಎಂತಹ ಸುಸಂದಿ !

ಜವಾಹರಲಾಲ ನೆಹರೂರವರ ಹೆಸರನ್ನು ಕೇಳಿದ ಕೂಡಲೇ ಎಲ್ಲಿ ಇಲ್ಲದ ಜನರು ಬರುತ್ತಾರೆ. ಬಡವರಾಗಲಿ, ಶ್ರೀಮಂತರಾಗಲಿ ದೊಡ್ಡವರಾಗಲಿ ಸಣ್ಣವರಾಗಲಿ ಯಾರಾದರೂ ಬರದೆ ಬಿಡಲಾರರು. ಪಂಡಿತ ಜವಾಹರಲಾಲರು ೧೯೪೭ ರಿಂದ ಭಾರತದ ಮುಖ್ಯ ಮಂತ್ರಿ ಪದವಿಯನ್ನು ಕೈಕೊಂಡರು. ಇವರು ಎಲ್ಲ ಶಿಕ್ಷಣವನ್ನು ಇಂಗ್ಲಂಡಿನಲ್ಲಿಯೇ ಮುಗಿಸಿ ಬ್ಯಾರಿಷ್ಟರಾಗಿ ಬಂದರು. ೧೯೨೦ ರಲ್ಲಿ ಮಹಾತ್ಮರನ್ನು ಹಿಂಬಾಲಿಸಿ ಎಲ್ಲವನ್ನೂ ತ್ಯಾಗಮಾಡಿದರು. ಜಗತ್ತಿನ ಇತಿಹಾಸವನ್ನು ಚೆನ್ನಾಗಿ ಅರಿತಿದ್ದರು ವಿದೇಶ ರಾಜಕಾರಣದಲ್ಲಿ ಹೆಸರನ್ನು ಗಳಿಸಿದವರು. ಇಂತಹರ ಕೈಯಲ್ಲಿ ಭಾರತವು ಕೆಲವೇ ತಿಂಗಳಲ್ಲಿ ಜಗತ್ತಿನ ರಾಷ್ಟ್ರಗಳಲ್ಲಿಯೇ ಅಗ್ರಗಣ್ಯವಾಗಿ ನಿಂತಿದೆ. ಪಂಡಿತ ಜವಾಹರಲಾಲ ನೆಹರು ಮಹಾತ್ಮರ ಮುಂದಾಳು ತನದಲ್ಲಿಯೇ ಭಾರತದ ಅಧಿಕಾರವನ್ನು ಸ್ವೀಕರಿಸಿದರು. ಇವರು ವೇಳೆಗೆ ತಪ್ಪಿ ನಡೆಯುವರಲ್ಲ. ಒಮ್ಮೆ ಇವರು ಎಲ್ಲಿಯೋ ೫ ಗಂಟೆಗೆ ಸರಿಯಾಗಿ ಭಾಷಣಕ್ಕೆ ಬರುತ್ತೇನೆಂದು ಹೇಳಿದವರು ಮರುದಿವಸ ಸಂಜೆಯ ಮುಂದೆ ನಾಲ್ಕುವರಿಯಾದರೂ ಬರಲಿಲ್ಲಾ. ಜನರೆಲ್ಲರೂ ಬರುವದಿಲ್ಲಾ ೫ ಗಂಟೆಗೆ ಬರುತ್ತೇನೆಂದು ಅವರು ಸುಳ್ಳುಹೇಳಿದ್ದಾರೆ. ಎಂದು ಮಾತನಾಡಲಿಕ್ಕೆ ಸುರುವು ಮಾಡಿದರು. ಇನ್ನು ಮೇಲೆ ಬೇರೆಯಾರನ್ನಾದರೂ ಕರೆಸಿ ಅಧ್ಯಕ್ಷರನ್ನು ಮಾಡಬೇಕೆಂದು ವಿಚಾರಿಸುತ್ತಿರಲಾಗಿ, ೫ ಗಂಟೆಗೆ ೫ ನಿಮಿಷಗಳಿದ್ದವು ಆಸಮಯದಲ್ಲಿ ಗಗನದ ಮೇಲೆ ಒಂದು ವಿಮಾನ ಅಡ್ಡಾಡ ಹತ್ತಿತ್ತು. ಐದು ನಿಮಿಷದೊಳಗಾಗಿ ಆ ವಿಮಾನ ಕೆಳಗೆ ಬಂದಿತು. ಆಗ ನೆಹರೂರವರು ತಮ್ಮ ವೇಳೆಯಪ್ರಕಾರ ಭಾಷಣವನ್ನು ಸುರುವು ಮಾಡಿದರು. ನೊಡಿರಿ ಅವರ ಕರ್ತವ್ಯ ನಿಷ್ಠೆಯನ್ನು ಹುಟ್ಟಿದರೆ ಇಂಥಾ ಪುಣ್ಯಾತ್ಮರು ಹುಟ್ಟಬೇಕು. ಇವರಿಗೆ ಮಕ್ಕಳೆಂದರೆ ತುಂಬಾ ಪ್ರೀತಿ. ಅವರ ಹುಟ್ಟಿದ ಹಬ್ಬದ ದಿವಸ ಎಲ್ಲ ಕಡೆಯಲ್ಲೂ ಪತಾಕೆಯನ್ನು ಮೇಲೇರಿಸಿ ಮಕ್ಕಳಿಂದಾ ಚಟುವಟಿಕೆಯನ್ನು ಮಾಡಿಸಿ ಅವರೆಲ್ಲರಿಗೂ ಮಿಠಾಯಿಯನು ಕೊಡುತ್ತಾರೆ. ಹುಡುಗರಿಂದ "ಚಾಚಾ ನೆಹರೂಕಿ ಜೈ" ಎಂದು ಎಲ್ಲಾಕಡೆಗೂ ಕೂಗೇ ಕೂಗು ಎಲ್ಲಿ ನೋಡಿದಲ್ಲಿ ಜಯಕಾರವೇ ಜಯಕಾರ.

ಮಹಾತ್ಮರು ತೀರಿಕೊಂಡ ದಿವಸ ನೆಹರೂರವರು ಇಂದು ದಿವ್ಯ ಜ್ಯೋತಿ ನಂದಿತು ಎಂದು ಹೇಳಿದರು. ಪಂಡಿತ ಜವಾಹರಲಾಲ ನೆಹರೂರವರು ಲಂಡನದಲ್ಲಿ ವಸಾಹತ ಮಂತ್ರಿಗಳ ಸಭೆಗೆ ಹೋಗಿ ಭಾರತವನ್ನು ವಸಾಹತ ಸಂಘದಲ್ಲಿ ಉಳಿಸಿದರು ಇಂತಹ ಮುತ್ಸದ್ಧಿತನದಿಂದ ಪಂಡಿತ ಜವಾಹರಲಾಲ ನೆಹರೂರವರು ಪರದೇಶಗಳಲ್ಲಿ ಭಾರತದ ಗೌರವನ್ನು ಹೆಚ್ಚಿಸಿದ್ದಾರೆ. ಈಗಲೂ ನಮ್ಮ ಭಾರವು ಅಜರಾಮರವಾಗಿ ಉಳಿದಿದೆ.

---

# ನಾವು ನಮ್ಮ ಪೂರ್ವಜರಿಗಿಂತಲೂ ಸುಖಿಗಳು

ಕುಮಾರಿ : ಲಲಿತಾ ಹಳ್ಳಿಪ್ಪನವರ Std. X

ನಮ್ಮ ಪೂರ್ವಜರ ಕಾಲದಲ್ಲಿ ಈಗಿನ ಯಾವ ಸುಧಾರಣೆಯೂ ಇರಲಿಲ್ಲ. ಅವರು ಸ್ವಾವಲಂಬಿಗಳಾಗಿ ತಮ್ಮ ಕಾರ್ಯದಲ್ಲಿ ತಾವು ನಿರತರಾಗುತ್ತಿದ್ದರು. ಅವರು ಎಲ್ಲ ಪದಾರ್ಥಗಳನ್ನು ತಾವೇ ಸಿದ್ಧಿಸಿಕೊಳ್ಳುತ್ತಿದ್ದರು. ಯಾವದೇ ಪ್ರವಾಸ ಮಾಡ ಬೇಕಾದರೆ ಕಾಲ್ನಡಿಗೆಯಿಂದ ಮಾಡುತ್ತಿದ್ದರು. ಕುಟ್ಟುವದು, ಬೀಸುವದು ಇತ್ಯಾದಿಗಳು ಅವರ ನಿತ್ಯದ ಹೋರೆಗಳಾಗಿದ್ದವು. ಅವರಿಗೆ ವಿಶ್ರಾಂತಿ ದೊರೆಯುತ್ತಿರಲಿಲ್ಲ. ನಮ್ಮ ಪೂರ್ವಜರನೇಕರು ವಿದ್ಯಾಪಂಡಿತರಾಗಿದ್ದರು. ಆದರೆ ಅವರ ಸಂಖ್ಯೆ ಕಡಿಮೆ ಇದ್ದಿತು. ನಿರಕ್ಷರಿಗಳ ಸಂಖ್ಯೆಯೇ ಹೆಚ್ಚಾಗಿತ್ತು. ನಮ್ಮ ಪೂರ್ವಜರಿಗೆ ಯಂತ್ರ ಸಾಮುಗ್ರಿಗಳ ಉಪಯೋಗ ಅಷ್ಟೊಂದು ಗೊತ್ತಿರಲಿಲ್ಲ. ಈ ಅನೇಕ ಕಾರಣಗಳ ಮೂಲಕ ಅವರು ಅಷ್ಟೊಂದು ಸುಧಾರಿಸಿದವರು ಅಲ್ಲ ಎನ್ನಲು ಸ್ವಲ್ಪ ಅವಕಾಶವಾಗುತ್ತದೆ. ನಮ್ಮ ಪೂರ್ವಜರಿಗೆ ತೊಂದರೆಗಳು ಮುತ್ತಿಕೊಂಡಿದ್ದವು. ಆದರೆ ಅವುಗಳನ್ನು ಅವರು ಎದುರಿಸುತ್ತಿದ್ದರು. ಅದೇನೇ ಆದರೂ ಅವರು ಈಗಿನ ಜನರಿಗಿಂತ ಕಷ್ಟ ಜೀವಿಗಳಾಗಿದ್ದರು.

ಆದರೆ ಈಗ ನಾವು ಅವರಿಗಿಂತ ಸುಖಿಗಳೆಂದು ನಿರಾತಂಕವಾಗಿ ಹೇಳುತ್ತೇವೆ. ಯಾಕಂದರೆ ದಿನಗಳುರುಳಿದಂತೆ ಅನೇಕ ನೂತನ ಸುಧಾರಣೆಗಳಾಗಿ ಮಾನವ ಜೀವನವೇ ಪಲ್ಲಟಗೊಂಡಿದೆ. ಮತ್ತು ಪಲ್ಲಟಗೊಳ್ಳುತ್ತಲಿದೆ. ಮೊದಲು ಜನರು ಬಟ್ಟೆಗಳನ್ನು ಮನೆಯಲ್ಲಿ ತಯಾರಿಸುತ್ತಿದ್ದರು. ಆದರೆ ಅವು ಜನರಿಗೆ ಸಾಕಷ್ಟಾಗುತ್ತಿರಲಿಲ್ಲ. ಜನರು ಉದ್ಯೋಗಿಗಳಾಗಿದ್ದರೇನೋ ನಿಜ, ಆದರೆ ಈಗ ಯಂತ್ರಗಳ ಶೋಧನೆಯಾದಂದಿನಿಂದ ಅನೇಕ ಬಗೆಯ ಹಾಗೂ ವಿಪುಲ ಬಟ್ಟೆ ತಯಾರಾಗ ಹತ್ತಿತು. ಇದರಿಂದ ಜನರ ಗೃಹೋದ್ಯೋಗ ನಿಂತಿತು. ಆದರೂ ದೇಶದಲ್ಲಿ ಬೇಕಾದಷ್ಟು ಅರಿವೆ ತಯಾರಾಗ ಹತ್ತಿತು. ವೇಳೆಯ ಉಳಿತಾಯವಾಗಹತ್ತಿತು. ಜನರು ಮೊದಲು ನೂರಾರು ಮೈಲು ಪ್ರವಾಸವನ್ನು ಕಾಲುನಡಿಗೆಯಿಂದಲೇ ಮಾಡುತ್ತಿದ್ದರು. ಮತ್ತು ವ್ಯಾಪಾರ ಮಾಡುತ್ತಿದ್ದರು. ಇದರಿಂದ ಅನೇಕ ಅನಾನುಕೂಲತೆಗಳು ಸಂಭವಿಸುತ್ತಿದ್ದವು. ಕ್ರಿ. ಶ. ೧೮೫೩ ರಿಂದ ನಮ್ಮ ದೇಶದಲ್ಲಿ ರೇಲ್ವೆಗಾಡಿಗಳು ಪ್ರಾರಂಭವಾಗಿ ಪ್ರವಾಸ ವ್ಯಾಪಾರಗಳು ಶ್ರಮದಾಯಕವಿಲ್ಲದೆ ಸುಖಕರವಾದವು. ಇದರಿಂದ ಬೇಕಾದ ದೇಶಕ್ಕೆ ಹೋಗಲು ಹಾಗೂ ವ್ಯಾಪಾರ ಮಾಡಲು ಅನುವು ದೊರೆಯಿತು. ಅಂಚೆ, ತಂತಿಗಳ ಮೂಲಕ ಪರಸ್ಪರ ಸಂದೇಶಗಳು ದೊರೆಯ ಹತ್ತಿದವು. ಬೀಸುವ ಗಿರಣಿಗಳಾಗಿದ್ದರಿಂದ ಕುಟ್ಟುವ, ಬೀಸುವ ಕಾರ್ಯ ನಿಂತಿತು. ಇದರಿಂದ ಜನರು ನಿರ್ಬಲರಾಗುತ್ತಾರೆ. ಅದಿರಲಿ, ಏನೇ ಆದರೂ ನಾವು ನಮ್ಮ ಪೂರ್ವಜರಿಗಿಂತಲೂ ಸುಖಿಗಳು. ನಮ್ಮ ಪೂರ್ವಜರು ಬಾವಿಯಿಂದ ನೀರನ್ನು ಜಗ್ಗುತ್ತಿದ್ದರು. ಆದರೆ ನಮಗೀಗ ಮನೆಯಲ್ಲಿಯೇ ನಳ ಸುರಿಯುತ್ತದೆ. ದೀಪಗಳನ್ನು ಒರೆಸುವದು ಎಣ್ಣೆ ಹಾಕುವದು ನಿಂತು ಲೈಟುಗಳಾಗಿದ್ದರಿಂದ ಸಾಕಷ್ಟು ಪ್ರಕಾಶ ಹಾಗೂ ವೇಳೆಯ ಉಳಿತಾಯವಾಗಿದೆ. ಒಟ್ಟು ನಮ್ಮ ಜೀವನವು ಚಿಕ್ಕ ಸುಧಾರಣೆಯಿಂದ ದೊಡ್ಡ ಸುಧಾರಣೆಗಳ ವರೆಗೂ ಅವನ್ನವಲಂಬಿಸಿಯೇ ನಡೆದಿದೆ. ಅನೇಕ ಸೌಕರ್ಯಗಳ ಮೂಲಕ ನಾವು ಸುಖಿಗಳೆಂದು ಪುನಃ ಹೇಳುವೆ.

ನಮ್ಮ ಪೂರ್ವಜರು ವಿದ್ಯೆಗೆ ಅಷ್ಟೊಂದು ಪ್ರೋತ್ಸಾಹ ಕೊಡುತ್ತಿರಲಿಲ್ಲ. ಆದರೆ ನಮಗೀಗ ವಿದ್ಯೆಯ ಪ್ರೋತ್ಸಾಹ ಇದೆ. ಚಿಕ್ಕವರಿಗಾಗಿ ಶಾಲೆ, ಕಾಲೇಜುಗಳಿವೆ. ಪ್ರೌಢರಿಗೆ ಪ್ರೌಢ ಶಿಕ್ಷಣ ದೊರೆಯುಹತ್ತಿದೆ. ಕುರುಡರಿಗೂ ಸಹ ವಿದ್ಯೆ ಕೊಡಲು ಒಳ್ಳೇ ವ್ಯವಸ್ಥೆ ಇದೆ. ಇದರಿಂದ ನಾವು ಮುಂದುವರಿಯ ಹತ್ತಿದ್ದೇವೆ. ಇತ್ತಿತ್ತಲಾಗಿ ನಿರಕ್ಷರಿಗಳ ಸಂಖ್ಯೆ ಕಡಿಮೆಯಾಗಹತ್ತಿದೆ. ನಮ್ಮ ಭಾರತದಲ್ಲಿ ಕೇವಲ ಕೇರಳದಲ್ಲಿ ಮಾತ್ರ ೭೪% ಜನರು ಅಶಿಕ್ಷಿತರಿದ್ದಾರೆನ್ನ ಬಹುದು. ನಮ್ಮ ಪೂರ್ವಜರ ಕಾಲದಲ್ಲಿ ಸ್ತ್ರೀಯರಿಗೆ ಗೌರವ ಸಿಗುತ್ತಿರಲಿಲ್ಲ. ಅವರಿಗೆ ಶೈಕ್ಷಣಿಕ ಕ್ಷೇತ್ರದಲ್ಲಿ ಕಾಲಿಡಲು ಧೈರ್ಯವಿರಲಿಲ್ಲ. ಆದರೆ ನಮಗೆ ವಿದ್ಯೆ ಕಲಿಯಲು ಪ್ರೋತ್ಸಾಹ ಸಿಕ್ಕು

ನಮ್ಮ ಬುದ್ಧಿ ಮಟ್ಟವನ್ನು ಎತ್ತರಿಸಲು ಅವಕಾಶ ಸಿಕ್ಕಿದೆ. ನಮ್ಮ ಪೂರ್ವಜರು, ಚಿಕ್ಕ ಹೆಣ್ಣುಮಕ್ಕಳಿಗೆ ಮದುವೆ ಮಾಡುತ್ತಿದ್ದರು. ಅದರಿಂದ ಅವರು ಪರಸ್ವಾಧೀನರಾಗಿ ಬಾಳಬೇಕಾಗುತ್ತಿತ್ತು. ಅಲ್ಲದೆ ಆಕಸ್ಮಾತ್ ಪತಿಯು ಮರಣ ಹೊಂದಿದರೆ ಅವಳ ಜೀವನವೇ ಮಣ್ಣುಪಾಲಾಗುತ್ತಿತ್ತು. ಇದೊಂದು ಭಾರತದಲ್ಲಿ ಹೆಚ್ಚಾಗಿ ಬ್ರಾಹ್ಮಣ ಸಮಾಜದಲ್ಲಿಯೆ ಅನಿಷ್ಟ ರೂಢಿ. ಈಗಿನ ನಮ್ಮ ಜೀವನವು ಸ್ವತಂತ್ರ್ಯಮಯ. ನಮಗೆ ಬೇಕಾದ ಸಾಮಾಜಿಕ ಸಂಸ್ಥೆಗಳಲ್ಲಿ ಕಾಲಿಡಲು ಶಕ್ಯವಿದೆ. ಅದರಿಂದ ನಾವು ಸುಖಿಗಳೇ. ನಮ್ಮ ನೂತನ ಏಳ್ಗೆಯಲ್ಲಿ ನಾವು ನಡೆಯುತ್ತಿದ್ದೇವೆ.

ರಾಜಕೀಯ ದೃಷ್ಟಿಯಿಂದ ಅಂದರೆ ನಮ್ಮ ರಾಜ್ಯವು ಪ್ರಜಾಸತ್ತಾತ್ಮಕ ರಾಜ್ಯವಾಗಿದ್ದರಿಂದ ಪ್ರಜೆಗಳ ಪ್ರತ್ಯಕ್ಷ ಹೇಳಿಕೆಯನ್ನು ಸರಕಾರವು ಮನ್ನಿಸುತ್ತದೆ. ಸರಕಾರದಲ್ಲಿ ಏನೇ ತಪ್ಪು ತಡೆಗಳಾದರೆ ಅದನ್ನು ಎತ್ತಿ ತೋರಿಸಲು ನಮಗೆ ಬರುತ್ತದೆ. ಪತ್ರಿಕೆಯಲ್ಲಿ ಪ್ರಕಟಿಸಲು ಬರುತ್ತದೆ. ಇದಕ್ಕೆ ಪತ್ರಿಕೋದ್ಯಮಿಯು ಸಹಾಯಕನಾಗುತ್ತಾನೆ. ಆದ್ದರಿಂದ ನಾವು ಅವನಿಗೆ "ಪ್ರಜಾಸತ್ತೆಯ ಸಂರಕ್ಷಕ ದೇವತೆ" ಅನ್ನಬಹುದು. ಈಗಿನ ಸೌಕರ್ಯ ಪ್ರಸಾಧನಗಳ ಮೂಲಕ ನಾವು ನಮ್ಮ ಪೂರ್ವಜರಿಗಿಂತಲೂ ಸುಖಿಗಳು. ಎಷ್ಟು ಸುಖಿಗಳಾಗಿರುವೆವೋ ಅಷ್ಟು ದುರ್ದೈವಿಗಳೂ ಪರಾವಲಂಬಿಗಳೂ ಆಗಿರುತ್ತೇವೆಂದು ಹೇಳುವದು ಅವಶ್ಯ. ಮೊದಲು ಜನರು ತಮ್ಮ ಕಾರ್ಯಗಳನ್ನು ತಾವೇ ಮಾಡಿಕೊಳ್ಳುವದರಿಂದ ಅವರು ಸ್ವಾವಲಂಬಿಗಳಾಗಿದ್ದರು. ಆದರೆ ನಾವೀಗ ಎಲ್ಲ ಕೆಲಸಗಳನ್ನು ಯಂತ್ರಗಳ ಮೂಲಕ ಮಾಡಿಸುವದರಿಂದ ಪರಾವಲಂಬಿಗಳಾಗಿರುತ್ತೇವೆ. ಯಂತ್ರಗಳು ಇಂದುಚಹ ಅಡಿಗೆಗಳನ್ನು ಸಹ ಮಾಡುವವು. ನಾಳೆ ಅವು ಬಾಯಿಯಲ್ಲಿ ತುತ್ತು ಹಾಕಿದರೂ ಸಹ ಹಾಕಿಸಿಕೊಳ್ಳುವಂತಹ ಪರಿಸ್ಥಿತಿಯಲ್ಲಿ ನಾವಿರುತ್ತೇವೆ ನಮ್ಮ ಪೂರ್ವಜರು ದುಡಿಮೆಗಾರರಾಗಿದ್ದರಿಂದ ಗಟ್ಟಿಗರಾಗಿದ್ದರು. ಆದರೆ ನಾವು ಬರಬರುತ್ತ ಅಶಕ್ತರಾಗಹತ್ತಿದ್ದೇವೆ. ನಮ್ಮ ಪೂರ್ವಜರು ಹೊಲದಲ್ಲಿ ರೆಂಟೆಗಳ ಮೂಲಕ ಸಾಗು ಮಾಡುತ್ತಿದ್ದರು. ಆದರೆ ನಾವೀಗ ಟ್ರ್ಯಾಕ್ಟರುಗಳ ಮೂಲಕ ಸಾಗು ಮಾಡುತ್ತೇವೆ. ಇದರಿಂದ ಮೈಗಳ್ಳತನ ಹೆಚ್ಚಾಗಹತ್ತಿದೆ.

ಏನೇ ಆದರೂ ಈಗಿನ ಸುಧಾರಣೆಗಳ ಮೂಲಕ ನಾವು ಸುದೈವಿಗಳೆಂದು ಹೇಳುತ್ತೇವೆ. ಯಾವುದರಲ್ಲಿ ಯಾದರೂ ಒಂದು ಲಾಭವಿದ್ದರೆ ಮತ್ತೊಂದು ಹಾನಿ ಇದ್ದೇ ಇರುತ್ತದೆ. ಈಗಿನ ಜಗತ್ತಿನ ಪರಿಸ್ಥಿತಿಯನ್ನರಿತು "ನಾವು ನಮ್ಮ ಪೂರ್ವಜರಿಗಿಂತಲೂ ಸುಖಿಗಳು"

---

# ನಾನು ಕಂಡ ನೆಹರೂರವರು

ಬರೆದವರು : ಎ. ಬಿ. ಕೊಂಗಿ Std. XI

ಮೇರು ಪರ್ವತ! ನಮ್ಮ ಈ ಭಾರತಕ್ಕೆ ಅತಿ ಅತ್ಯುತ್ತಮವಾದ ಹಿಮಾಲಯ ಪರ್ವತವು. ಹಿಮದಿಂದ ಮುಚ್ಚಿರುತ್ತದೆ. ಅತಿಎತ್ತರವಾದ ಸ್ಥಾನದಲ್ಲಿದೆ. ಆಪರ್ವತದ ಮುಂದೆ ನಾವು ಒಬ್ಬರು ನಿಂತರೆ ನಾವು ಆ ಪರ್ವತದ ಮುಂದೆ ಒಂದು ದೀಪದ ಹುಳುವಿನಂತೆ ಕಾಣುತ್ತೇವೆ. ಹಾಗೆ ನಮ್ಮ ಭಾರರತದಲ್ಲಿ ಅತ್ಯುನ್ನತವಾದ ಶಿಖರವಿದ್ದಂತೆ ಜವಾಹರಲಾಲ ನೆಹರೂರವರು ಒಂದು ದಿವ್ಯ ವ್ಯಕ್ತಿಯಾಗಿದ್ದಾರೆ.

ಅವರಲ್ಲಿ ಸರಳತನ ಮುಗ್ಧ ಮನಸ್ಸು ಯಾರನ್ನಾದರೂ ಸೆಳೆಯುತ್ತದೆ. ಮಾತಿನಲ್ಲಿ ಚಾಣಾಕ್ಷತೆ. ಪ್ರತಿಯೊಂದು ಮಾತಿಗೂ ಜಾಣತನವನ್ನು ತೂಸುತ್ತಾರೆ. ಒಳ್ಳೇ ದಕ್ಷತೆಯಿಂದ ಮಾತನಾಡುವರು. ಮಾತಿನಲ್ಲಿ ಸತ್ಯತೆಯು ತುಂಬಿ ತುಳುಕಾಡುವದು. "ಮಾತು ಆಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು" ಎಂಬ ಗಾದೆಯನ್ನು ಅನುಸರಿಸುತ್ತಾರೆ.

ಜನತೆಯ ರಸಮಯ ಜೀವನಕ್ಕೂ, ಸಕಲೈಶ್ವರ್ಯಗಳನ್ನೂ ಪಡೆಯಲು ಮುಂದಾಗಿದ್ದಾರೆ. ಭರತ ಖಂಡದಲ್ಲಿ ಇಂಥ ಧೈರ್ಯವಂತ ರತ್ನಗಳು ಯಾವವೂ ಇನ್ನೂ ಕಾಣುವದಿಲ್ಲ. ಅತಿ ಧೈರ್ಯ ದಿಂದ, ಸರಳತನದಿಂದ, ಗಂಭೀರ ರೀತಿಯಿಂದ, ಶಾಂತತೆಯಿಂದ ಅನೇಕ ಕಷ್ಟಗಳು ಬಂದರೂ ಧೈರ್ಯ ಗುಂದದೇ ನಡೆಯುವ ವ್ಯಕ್ತಿಯೆಂದರೆ ಅದು ಒಂದು ಯಾವದೆಂದರೆ ಅವರು ಜವಾಹರಲಾಲ ನೆಹರೂವರು. ಇವರು ಗಣ್ಯ ವ್ಯಕ್ತಿಯಾಗಿದ್ದಾರೆ. ಇವರು ಭಾರತದಲ್ಲಿ ಹುಟ್ಟಿ ಬಂದದ್ದು ಬಲವಾದ ಇಚ್ಛೆ.

ಇವರು ವ್ಯರ್ಥವಾಗಿ ಕಾಲಹರಣ ಮಾಡುವವರಲ್ಲ. ನುಡಿದಂತೆ ನಡೆಯುವರು. ತಾಯಿಯು ಮೊದಲು ಮನೆಯಲ್ಲಿ ಉಪದೇಶಿಸುತ್ತಾಳೆ. ಅನಂತರ ತಾಯಿಯ ಸ್ಥಾನದಲ್ಲಿ ಗುರು ನಿಲ್ಲುತ್ತಾನೆ. ತಾಯಿಯು ಮಗನಿಗೆ ಚಿಕ್ಕಂದಿನಲ್ಲಿ ಎಂಥಹದಿವ್ಯವಾದ ಉಪದೇಶ ಮಾಡಿರುತ್ತಾಳೆಯೋ? ಆ ತಾಯಿಯ ಶ್ರಮವು ಈಗ ಸಾಫಲ್ಯವಾಗಿದೆ ಇಂಥವರನ್ನು ಪಡೆದ ತಾಯಿಗೆ ಎಲ್ಲ ಶ್ರೇಯಸ್ಸವೂ ಬರುತ್ತದೆ.

ನೆಹರೂರವರು ನಮ್ಮದೇಶದಲ್ಲಿ ಹುಟ್ಟಿದ್ದರೆ ಎಂದು ಬೇರೆ ದೇಶದ ಜನರು ಅನ್ನುತ್ತಾರೆ. ನಮ್ಮ ಭಾರತದೇಶದ ಜನರಷ್ಟೇ ಅಲ್ಲದೇ ಇಡೀ ಜಗತ್ತಿನ ಜನರೇ ನೆಹರೂರವರಿಗೆ ತಲೆ ಬಾಗುತ್ತಾರೆ. ಅಭಿಮಾನದಿಂದ ಹೊಗಳುತ್ತಾರೆ.

ಇವರು ತಮ್ಮ ತನು-ಮನ-ಧನಗಳನ್ನು, ಜೀವನವನ್ನು ಈ ದೇಶಕ್ಕಾಗಿ ಮುಡುಪನ್ನಿರಿಸಿದ್ದಾರೆ. ಶಕ್ತಿ ಮೀರಿ ಪ್ರಯತ್ನದಿಂದ ಕೆಲಸವನ್ನು ಸಾಗಿಸುತ್ತಾರೆ. ಇಂಥ ಮಗುವನ್ನು ಹೆತ್ತ ಭಾರತಾಂಬೆಯೇ ಧನ್ಯಳು.

ತಮ್ಮ ಒಂದು ಧ್ಯೇಯವನ್ನು ಇಟ್ಟುಕೊಂಡು ಅನೇಕ ಕಷ್ಟನಷ್ಟಗಳನ್ನು ಸಹಿಸುತ್ತಾರೆ. ಇವರು ಸಮತಾವಾದಿಗಳು. ಮಕ್ಕಳೆಂದರೆ ಪ್ರಾಣ. ಚಿಕ್ಕೆಗಳ ನಡುವೆ ಚಂದ್ರದಂತೆ ಶೋಭಾಯಮಾನವಾಗಿ ಅನೇಕಸಲ ಮಕ್ಕಳೊಡನೆ ಮಕ್ಕಳಾಗಿ ಆಡಿದ್ದುಂಟು. ತನ್ನಂತೆ ಪರರು. ಎಂದು ತಿಳಿದು ಕೊಳ್ಳುತ್ತಾರೆ. ಪಾರತಂತ್ರ್ಯದಲ್ಲಿದ್ದ ಭಾರತಕ್ಕೆ ಸ್ವಾತಂತ್ರ್ಯವನ್ನು ದೊರಕಿಸಲು ಅನೇಕಕಷ್ಟನಷ್ಟ-ಜೈಲುವಾಸ ಅನುಭವಿಸಿ "ಸತ್ಯತೆ" ಎಂಬ ಶಸ್ತ್ರದಿಂದ ಗೆದ್ದುಕೊಂಡರು. 'ಮಾತು ಮಾನವನ ಅಳತೆ ಗೋಲು, ಎಂಬಂತೆ ತಮ್ಮ ಯೋಗ್ಯತೆಯ ಮೇರೆಗೆ ಅವರು ಆಡಿದ ಮಾತುಗಳಿಂದಲೇ ನಿರ್ಣಯಿಸುತ್ತಾರೆ. 'ರಸಿಕ ನಾಡುವ ಮಾತು ಶಶಿಯುದಿಸಿ ಬಂದಂತೆ, ಎಂದು ಇವರು ಸಂತೋಷದಿಂದ ಮಾತನಾಡುತ್ತಾರೆ.

ಮುತ್ತಿನ ಹಾರವು ತನ್ನ ಸೌಂದರ್ಯ ಪ್ರಭೆಯಿಂದ ಹೇಗೆಸುಂದರವಾಗಿರುವದೋ ಅಮೌಲ್ಯವಾದ ರತ್ನವು ತನ್ನ ಕಾಂತಿಯಿಂದ ಹೇಗೆ ಪ್ರಜ್ವಲಿಸುವದೋ, ಸ್ಪಟಿಕದ ಶಿಲೆಯು ಶುಭ್ರವಾದಜೋತ್ಸ್ನೆಯಂತೆ ಕಂಗಳಿಗೆ ಪ್ರಶಾಂತ ಪ್ರಕಾಶವನ್ನು ಕೊಡುವದೋ, ಹಾಗೆ ನೆಹರೂರವರು ಪ್ರತಿಯೊಂದು ನುಡಿಗೂ ಒಪ್ಪುತ್ತಾರೆ. ಕಾರ್ಯದಲ್ಲಿಯೂ ಮುಂದು. ಇವರು ಚಿಕ್ಕಂದಿನಲ್ಲಿ ಬೇರೆ ದೇಶಕ್ಕೆ ಹೋಗಿ ಒಳ್ಳೇ ಪಾರಂಗತರಾಗಿ ಬಂದರೂ ಭಾರತದ ಸಂಪರ್ಕವಿಲ್ಲದೇ ಕಡೆಗೆ ಭಾರತದ ಮುಖ್ಯ ಮಂತ್ರಿಯ ಉಚ್ಚ ಗೌರವದ ಸ್ಥಾನದ ಮೆಟ್ಟಲುಗಳನ್ನು ಏರಿದ್ದಾರೆ.

ಭಾರತಕ್ಕೆ ಒಂದು ಅಪೂರ್ವ ತೇಜಸ್ಸನ್ನು ಒಡ್ಡಿದ್ದಾರೆ. ಇವರನ್ನು ಪಡೆದಧನ್ಯ ಭಾರತಾಂಬೆಗೆ ಎಷ್ಟು ಸೇವೆ ಸಲ್ಲಿಸಿದರೂ ಕಡಿಮೆಯೇ ಎಷ್ಟುಹೊಗಳಿದರೂ ಕಡಿಮೆಯೇ ಸರಿ.

ಗೌರವಸ್ಥರಾದರೂ ದಯೆಯುಳ್ಳವರು. ಅವರ ಮನಸ್ಸು ವಿಶಾಲವಾಗಿದೆ. ವಿಶ್ರಾಂತಿಯಿಲ್ಲದೇ ದುಡಿಯುವ ದೇಹ ವವರದು. ಎಷ್ಟೇ ವಯಸ್ಕರಾದರೂ ಆನಂದದಿಂದ ದೇಶದ ಸೇವೆಗಾಗಿ ಕಾರ್ಯ ನಡೆಯಿಸುತ್ತಾರೆ.

ಇಂಥವರಿಂದ ನಾವು ಅನೇಕ ನುಡಿಗಳನ್ನು ಕಲಿಯು ವದು ಅವಶ್ಯವಾಗಿದೆ. ಅವರ ಹೇಳಿಕೆಯಂತೆ ನಡೆದರೆ ನಮಗೆ ಒಳ್ಳೆಯದು. ಇಂಥ ರತ್ನಗಳೇ ನಮ್ಮ ಜೀವನದ ದಾರಿಯ ದೀಪಗಳಲ್ಲಿವೇ? ಇಂಥವರ ಮಾರ್ಗ ದರ್ಶನದಲ್ಲಿ ನಾವೆಲ್ಲ ನಡೆದರೆ ಸುಖಸಮೃದ್ಧಿಗಳು ದೊರೆಯುವದರಲ್ಲಿ ಸಂದೇ ಹವೇ? ಇಂದಿನ ಮಕ್ಕಳೇ ನಾಳಿನ ನಾಗರಿಕರಲ್ಲವೇ? ಜಾಗೃ ತೆಯಿಂದ ನಾವೆಲ್ಲ ನಡೆದರೆ ಗೌರವವಲ್ಲವೇ? ಒಳ್ಳೆಯ ದಲ್ಲವೆ?

---

## ಏನು ಚಂದವು

ದುಷ್ಟ ಜನರಿಗೆ ಜಗಳ ಚಂದವು .
ಸರಳ ಜನರಿಗೆ ಸತ್ಯ ಚಂದವು॥ ಪ॥
ಶ್ರೇಷ್ಟ ಜನರಿಗೆ ಪುಣ್ಯ ಚಂದವು।
ದೇವರಿದ್ದರೆ ಗುಡಿಯು ಚಂದವು॥ ಅ॥ ಪ॥
ತರುಣಿ ತರುಣರ ಮದುವೆ ಚಂದವು॥
ಸರಸ ಕನ್ನಡ ನುಡಿಯು ಚಂದವು।
ಬೆಳೆಗಳಿದ್ದರೆ ಹೊಲವು ಚಂದವು।
ಫಲವು ಇದ್ದರೆ ಗಿಡವು ಚಂದವು ॥ ೧॥
ಬಲವು ಇರೆ ಸಂಸಾರ ಚಂದವು।
ಉಲಿವ ಕೋಗಿಲೆ ಧ್ವನಿಯು ಚಂದವು।
ಎಳೆಯ ಮಕ್ಕಳ ಮಾತು ಚಂದವು।
ಮಳೆಯು ಬಿದ್ದರೆ ಭೂಮಿ ಚಂದವು ॥ ೨॥
ರೊಕ್ಕ ವಿದ್ದರೆ ಸಂತೆ ಚಂದವು।
ಮಕ್ಕಳಿಗೆ ಶಿಕ್ಷಣವೆ ಚಂದವು।
ಮಕ್ಕಳಿದ್ದರೆ ಮನೆಯು ಚಂದವು।
ಚೊಕ್ಕ ಚಿನ್ನದ ಬಣ್ಣ ಚಂದವು। ॥ ೩॥
ನಾದ ವಿದ್ದರೆ ಗಾನ ಚಂದವು।
ತಾಳ ವಿದ್ದರೆ ನೃತ್ಯ ಚಂದವು।
ಶೂರರಿದ್ದರೆ ದೇಶ ಚಂದವು।
ನಕ್ಕು ಕೇಳುವ ಕಥೆಯು ಚಂದವು ॥ ೪॥

ಎಸ್. ಎಸ್. ಹಾಮದಿ

## ಸ್ತ್ರೀ-ಶಿಕ್ಷಣ

**ಬರೆದವರು : ಅನ್ನಪೂರ್ಣಾ ಕೆರೆಕಾಳ VIII ನೇ ವರ್ಗ.**

ಸ್ತ್ರೀ ಶಿಕ್ಷಣವೆಂಬುದು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿದ್ದ ಮಾತು. ಶಿಕ್ಷಣವೆಂದರೆ ಜ್ಞಾನ ಸಂಪಾದನೆ ಮಾಡುವದು. ಸ್ತ್ರೀ ಶಿಕ್ಷಣವೆಂದರೆ ಸ್ತ್ರೀಯರಿಗೆ ಜ್ಞಾನ ಕೊಡುವದು ಇಂಥ ಜ್ಞಾನವನ್ನು ಪಡೆಯದೇ ಅನೇಕ ಭಾರತಿಯರು ಅಜ್ಞಾನದಿಂದ ಕುಳಿತುಕೊಂಡಿದ್ದಾರೆ. ಹೀಗೆ ಮಾಡುವದರಿಂದ ನಮ್ಮ ರಾಷ್ಟ್ರದ ಕಲ್ಯಾಣವಾಗಲಾರದು. ಅದರ ಸಲುವಾಗಿ ಮಹಾತ್ಮರು ಸಹ " ತೊಟ್ಟಿಲನ್ನು ತೂಗುವ ಕೈ ಜಗತ್ತನ್ನೇ ತೂಗಬಲ್ಲದು ,, ಎಂದು ಹೇಳಿದಂತೆ ತೊಟ್ಟಿಲನ್ನು ತೂಗುವವಳು ಸ್ತ್ರೀ, ಆ ಸ್ತ್ರೀಯು ಜ್ಞಾನವಂತಳಿದ್ದರೆ ಅವಳ ಕೈಯಿಂದ ಯಾವ ಮಗು ತೊಟ್ಟಿಲನ್ನು ತೂಗಿಸಿಕೊಳ್ಳುವದೋ ಆ ಮಗು ಸಹ ಅಷ್ಟೇ ಜ್ಞಾನವಂತವಾಗುತ್ತದೆ.

ನಮ್ಮ ಭಾರತದಲ್ಲಿಕೆಲವರ ಕಲ್ಪನೆಯು ಹೀಗಿದೆ ಸ್ತ್ರೀಯರಿಗೆ ಶಿಕ್ಷಣಕೊಡುವದರಿಂದ ಅವರು ಅಡ್ಡದಾರಿಗೆ ಬೀಳುತ್ತಾರೆ. ಈ ಕಲ್ಪನೆಯು ಮೂಲಕ ಅವರು ಸ್ತ್ರೀಯರಿಗೆ ಶಿಕ್ಷಣವನ್ನು ಕೊಡದೇ ಬಿಟ್ಟಿದ್ದಾರೆ. ಇವೆಲ್ಲಕಾರಣಗಳಿಂದ ನಮ್ಮ ರಾಷ್ಟ್ರವು ಅಜ್ಞಾನ, ಅನಾದರಗಳಿಂದ ತುಂಬಿ ಇಂದಿನ ವರೆಗೆ ತೊಳಲುತ್ತಿದೆ. ಹೀಗಿರಲು ನಮ್ಮ ರಾಷ್ಟ್ರವು ಸುಸಂಸ್ಕೃತೆ ವಾಗಲಾರದು. ನಾವು ಅಜ್ಞಾನಿಗಳಾದ ಮೂಲಕ ನಮ್ಮ ಭಾರತವನ್ನು ಇಂಗ್ಲೀಷರು ಹಾಗೂ ಮುಸಲ್ಮಾನರು ಆಳಿದರು. ಇದಕ್ಕೆಲ್ಲ ಕಾರಣವೇನೆಂದರೆ ಸ್ತ್ರೀ ಶಿಕ್ಷಣ ದೊರಕದೇ ಇದ್ದಮೂಲಕ ಇವೆಲ್ಲ ಕಷ್ಟಗಳು ಬಂದಿವೆ. ಅನೇಕ ವಿದ್ವಾಂಸರು "ವಿದ್ಯೆ ಇಲ್ಲದವನು ಹದ್ದಿಗಿಂತಕಡೆ" ಎನ್ನುವಂತೆ ಸ್ತ್ರೀಯರನ್ನು ಹದ್ದುಗಳಂತೆ ಮಾಡಿದ್ದಾರೆ. ಅವರಿಗೆ ಶಿಕ್ಷಣಕೊಟ್ಟರೆ ನಮ್ಮ ರಾಷ್ಟ್ರ ಮುಂದುವರಿಯಲು ನಾವು ಯಾವ ಸಂಶೋಧನೆಯನ್ನು ಮಾಡುವ ಕಾರಣವಿಲ್ಲ. ಹಾಗು ಯಾರಿಗೂ ಶರಣಾಗತರಾಗುವದೂ ಬೇಡ. ನಾವು ಬದುಕುವದು ತಿನ್ನುಣ್ಣುವದಕ್ಕಾಗಿ ಅಲ್ಲ. ಜ್ಞಾನಿಗಳಾಗಲು ಬದುಕಬೇಕು.

ಇವೆಲ್ಲ ಕಾರಣಗಳಿಂದ ನಾವು ಸ್ತ್ರೀಯರಿಗೆ ಶಿಕ್ಷಣ ಕೊಟ್ಟು ಅವರಿಂದ ನಮ್ಮ ಏಳ್ಗೆ ಹಾಗು ವ್ಯವಹಾರ ಲಾಭಗಳನ್ನು ಪಡೆಯಬೇಕು. ಇವೆಲ್ಲ ನಮ್ಮ ರಾಷ್ಟ್ರಕ್ಕಾಗುವ ಲಾಭಗಳು. ಇದರ ಸಲುವಾಗಿಯೇ ಅನೇಕ ಮಂತ್ರಿಗಳು ಶಾಲೆಯಲ್ಲಿ ಇದನ್ನೆ ಕುರಿತು ಭಾಷಣ ಮಾಡುತ್ತಾರೆ. ಇವುಗಳ ಮೂಲಕ "ಸೋವ್ಹಿಯತ್ (ರಶಿಯಾ) "ದಂಥ ರಾಷ್ಟ್ರಗಳು ಈಗ ಜಗತ್ತಿನಲ್ಲಿ ತಲೆಯತ್ತಿ ನಿಂತು ಮೆರೆದಾಡುತ್ತಲಿವೆ. ಇದಕ್ಕೆ ಅಲ್ಲಿಯ ಸ್ತ್ರೀಯರು ಜ್ಞಾನಿಗಳಾಗಿರುವದೇ ಕಾರಣ. ಅದ್ದರಿಂದನಾವೆಲ್ಲರೂ ಶೀಕ್ಷಣ ಪಡೆದು ನಮ್ಮ ರಾಷ್ಟ್ರದ ಏಳ್ಗೆಗಾಗಿ ಹೋರಾಡುವಾ.

---

#  ಭಾರತದ ರಾಷ್ಟ್ರೀಯ ಏಕೀಕರಣ 

ಕುಮಾರಿ : ಪ್ರೇಮಾ ಕುಲಕರ್ಣಿ. X ನೇ ವರ್ಗ.

**ನವಭಾರತದ ಜನನ :—** ೧೯ನೇ ಶತಮಾನದಲ್ಲಿ ನಮ್ಮ ಭಾರತವು ರಾಷ್ಟ್ರೀಯ ದೃಷ್ಟಿಯಿಂದ ಒಂದಾಗಿತ್ತು. ಇದು ಆಂಗ್ಲರ ಆಡಳಿತೆಯ ಅನುಗುಣವಾಗಿ ಭಾರತದ ಮೇಲಾದ ಮಹತ್ವದ ಸಂಗತಿಗಳಲ್ಲಿ ಒಂದು. ಆಂಗ್ಲರು ಬರುವದಕ್ಕಿಂತ ಮೊದಲು ಭಾರತವು ಸಾಂಸ್ಕೃತಿಕ ದೃಷ್ಟಿಯಿಂದ ಒಂದೇಯಾಗಿತ್ತು. ಮತ್ತು ಆಂಗ್ಲರ ಆಡಳಿತದ ಪರಿಣಾಮವಾಗಿ ಭಾರತವು ರಾಷ್ಟ್ರೀಯ ದೃಷ್ಟಿಯಿಂದ ಒಂದಾಗಿತ್ತು. ಕಾಶಿಯಿಂದ ಕನ್ಯಾಕುಮಾರಿಯ ವರೆಗೆ ಮತ್ತು ಕರಾಚಿಯಿಂದ ಕಲಕತ್ತೆಯ ವರೆಗೆ ಎಲ್ಲರೂ ತಮ್ಮ ರಾಜಕೀಯ ಕಷ್ಟ ನಷ್ಟಗಳು ಒಂದು ಆಗಿವೆ. ಇವುಗಳನ್ನು ಹೋಗಲಾಡಿಸಲು ಒಂದು ಉಪಾಯವನ್ನು ಕಂಡು ಹಿಡಿಯಬೇಕು. ಇದರ ಸಲುವಾಗಿ ಭಾರತದಲ್ಲಿ ಪರದೇಶೀಯರ ಭೇದಗಳನ್ನು ಬದಿಗಿರಿಸಿ ಎಲ್ಲರೂ ಒಂದಾಗಬೇಕೆಂಬ ಭಾವನೆಯು ನಿರ್ಮಾಣವಾಯಿತು. ಇದಕ್ಕೆ "ರಾಷ್ಟ್ರೀಯತ್ವದ ಉದಯ" ಎಂದು ಅನ್ನುತ್ತಾರೆ. ಈ ರಾಷ್ಟ್ರೀಯತ್ವದಲ್ಲಿ ಮತ್ತೆರಡು ಮುಖ್ಯ ಘಟನೆಗಳು ಕೂಡಿವೆ. ೧) ಪ್ರಜಾಪ್ರಭುತ್ವದ ತೀವ್ರ ಆಕಾಂಕ್ಷೆ ೨) ಪಾಶ್ಚಿಮಾತ್ಯ ವಿದ್ಯೆ ಮತ್ತು ಶಾಸ್ತ್ರ. ೧) ಪ್ರಜಾಪ್ರಭುತ್ವದ ತೀವ್ರ ಆಕಾಂಕ್ಷೆ ಇದರಲ್ಲಿ ೧೮ ನೇ ಮತ್ತು ೧೯ನೇ ಶತಕಗಳಲ್ಲಿ ಜರ್ಮನಿಯಲ್ಲಿ ಮೊದಲು ಏಕ ರಾಷ್ಟ್ರೀಯತ್ವದ ಭಾವನೆ ಉದಯ ಹೊಂದಿತು. ಇದರಲ್ಲಿ ಫೆಡರಿಕ್ ದಿ ಗ್ರೇಟ ಬಿಸ್ಮಾರ್ಕನ, ಉಲಿಯಂ ಕೈಸರ, ಹಿಟ್ಲರ, ಸರ್ವಾಧಿಕಾರಿಗಳು ಒಬ್ಬರ ಹಿಂದೊಬ್ಬರು ಮುಂದೆ ಬಂದರು. ಭಾರತದಲ್ಲಿ ರಾಷ್ಟ್ರೀಯತ್ವಕ್ಕೆ ಸರ್ವಾಧಿಕಾರಿತ್ವದ ಸ್ವರೂಪ ಪ್ರಾಪ್ತವಾಗಲಿಲ್ಲ. ಭಾರತದಲ್ಲಿ ಪ್ರತಿನಿಧಿಕ ಲೋಕಸತ್ತೆಯ ಸ್ಥಾಪನೆಯಾಗಬೇಕೆನ್ನುವ ವಿಚಾರ ಹುಟ್ಟಿತು. ೨) ಪಾಶ್ಚಿಮಾತ್ಯ ವಿದ್ಯೆ ಮತ್ತು ಶಾಸ್ತ್ರ. ಆಂಗ್ಲರು ಭಾರತಕ್ಕೆ ಬಂದಾಗಿನಿಂದಲೂ ಆಂಗ್ಲ ಭಾಷೆಯು ದೊರೆಯುವ ಬೇರೆ ಬೇರೆ ಶಾಸ್ತ್ರಗಳ ಅಭ್ಯಾಸ ಮಾಡುವದನ್ನು ಜನರು ತಮ್ಮ ಲಾಭಗಳನ್ನು ಪಡೆಯ ತೊಡಗಿದ್ದರು. ರಾಷ್ಟ್ರೀಯತ್ವದ ಭಾವನೆ ಲೋಕಸತ್ತೆಯ ಅಭಿರುಚಿ. ಪಾಶ್ಚಿಮಾತ್ಯ ವಿದ್ಯಾಲಾಭದ ಹವ್ಯಾಸ ಈ ಕಾರಣಗಳಿಂದ ೧೯ ನೇ ಶತಕದಲ್ಲಿ ನವಭಾರತದ ಉದಯವಾಯಿತು.

**ರಾಷ್ಟ್ರೀಯತ್ವದ ಉದಯ:—** ೧೮೩೨ ರಲ್ಲಿ ಆಂಗ್ಲ ರಾಜ್ಯಕರ್ತರು ಆಂಗ್ಲ ಶಿಕ್ಷಣ ಪ್ರಸಾರಕ್ಕಾಗಿ ಪ್ರಾರಂಭಿಸಿದರು. ಈ ಹೊತ್ತಿಗೆ ಸಮಸ್ತ ಭಾರತವು ಇದರ ವಶಕ್ಕೆ ಕೊಂಡಿತು. ಇಂಗ್ಲಂಡದಿಂದ ರಾಜ್ಯವನ್ನು ಆಳುವದರ ಪರಿಣಾಮವಾಗಿ ಆಂಗ್ಲರು ನಿಯಮ ಬದ್ಧ ಕಾರ್ಯ ಕರ್ತನೆಯನ್ನು ನಿರ್ಮಾಣ ಮಾಡಿದರು. ಕ್ರಿ. ಶ. ೧೮೫೩ ರಲ್ಲಿ "ಸಿವ್ಹಿಲ್ ಸರ್ವಿಸ" ಪರೀಕ್ಷೆ ಪ್ರಾರಂಭಿಸಿದರು. ಈ ಪರೀಕ್ಷೆಯಲ್ಲಿ ಪಾಸಾದವರಿಗೆ ಭಾರತದಲ್ಲಿ ಬೇರೆಬೇರೆ ಅಧಿಕಾರ ಸ್ಥಳಗಳನ್ನು ಕೊಡಹತ್ತಿದರು. ಈ ಅಧಿಕಾರಿಗಳು, ಆಡಳಿತಗಾರರು ಹಾಕಿಕೊಟ್ಟ ಸೂಚನೆಯ ಮೇರೆಗೆ ಆಡಳಿತೆ ನಡೆಸುತ್ತಿದ್ದರು. ಈ ಉಚ್ಚ ಅಧಿಕಾರಿಗಳು ಬಹುತರವಾಗಿ ಆಂಗ್ಲರೇ ಇರುತ್ತಿದ್ದರು. ಯಾರಾದರೂ ಅನ್ಯಾಯದ ವಿರುದ್ಧ ದೂರು ತಂದರೆ ಅದರ ಯೋಗ್ಯ ವಿಚಾರ ಮಾಡಲಾಗುತ್ತಿತ್ತು. ಅವರು ತಮ್ಮ ದೂರುಗಳನ್ನು ಸರಕಾರದ ಮುಂದೆ ಮಂಡಿಸುವ ಪ್ರಕಾರವು ಪ್ರಾರಂಭವಾಯಿತು. ಇಲ್ಲಿ ವೃತ್ತ ಪತ್ರಗಳು ಸಹಾಯ ಮಾಡಿದ್ದವು. ಈ ಉದ್ಯೋಗಕ್ಕೆ ಶಾಸನ ಬದ್ಧ ಅಂದೋಲನ ಅನ್ನುತ್ತಾರೆ. ಮಹಾರಾಷ್ಟ್ರ ಮತ್ತು ಪಂಜಾಬ, ಬಂಗಾಲ, ಕರ್ನಾಟಕ ಬೇರೆಬೇರೆ ಭಾಗಗಳಲ್ಲಿ ಒಂದೇಸ್ವರೂಪದ ಅಡಚಣಿಗಳು ಉದಯವಾದವು. ಆಂಗ್ಲ ಭಾಷೆಯನ್ನು ಪ್ರತಿಯೊಬ್ಬರು ತಿಳಿದುಕೊಳ್ಳಲು ಅಸಾಧ್ಯವಾಗಹತ್ತಿತು. ಎಲ್ಲರೂ ಸಮದುಃಖಿಗಳಾದರು. ಅವರು ಒಂದೆಡೆ ಬಂದು ಅನ್ಯಾಯದ ವಿರುದ್ಧ ಹೋರಾಡಲು ಪ್ರಾರಂಭಿಸಿದರು. ಲಾರ್ಡ ಡಾಲಹೌಸಿಯ ಆಳಿಕೆಯಲ್ಲಿ ಭಾರತದಲ್ಲಿ ರೇಲ್ವೆ, ಅಂಚೆ, ತಂತಿ ಬಳಿಕೆಯಲ್ಲಿ ಬಂದವು. ಬೇರೆ ಬೇರೆ ಪ್ರಾಂತಗಳಲ್ಲಿಯ ಮುಂದಾಳುಗಳು ಪರಸ್ಪರ ಭೆಟ್ಟಿಯಾಗಿದ್ದರು. ಪತ್ರ ವ್ಯವಹಾರ ನಡೆಸ ತೊಡಗಿದ್ದರು. ಸಮದುಃಖಿ ಜನರ ಸಂಘಟನೆಯಾಗಿ ಅವರ ಮನಸ್ಸು ಒಂದಾದವು. ಮಹಾರಾಷ್ಟ್ರ, ಕರ್ನಾಟಕ, ಬಂಗಾಲ, ಪಂಜಾಬ ಪ್ರಾಂತಗಳಲ್ಲಿ ವಾಸಿಸುವ ಭಾರತೀಯರ ಸುಂಸ್ಕೃತಿಯ ದೃಷ್ಟಿಯಿಂದ ಒಂದೇ ತಿಳುವಳಿಕೆ ಜನರಲ್ಲಿ ಇದ್ದಿತು

ಆದರೆ ನಾವೆಲ್ಲರೂ ರಾಜಕೀಯ ದೃಷ್ಟಿಯಿಂದ ಒಂದೇ ದೇಶದ ಘಟನೆಯಾಗಿದ್ದೇವೆ. ನಮ್ಮ ಸುಖದುಃಖಗಳು ಒಂದೇ ಯಾಗಿವೆ. ಆದ ಕಾರಣ ನಾವೆಲ್ಲರೂ ಒಂದಾಗಬೇಕು, ಹೋರಾಡಬೇಕು, ತ್ಯಾಗ ಮಾಡಬೇಕೆಂಬ ವಿಚಾರಗಳು ದೂರ ದೂರ ಭಾಗಗಳಲ್ಲಿ ವಾಸಿಸುವ ಜನರಲ್ಲಿ ಉದಯ ಹೊಂದಿದವು. ಯಾವ ದೇಶದಲ್ಲಿಯ ಜನರಿಗೆ ತಾವೆಲ್ಲರೂ ಒಂದೇ ಆಗಿ ಬಾಳಬೇಕು ಮತ್ತು ದೇಶದ ಆಡಳಿತವು ತಮ್ಮ ಆಧೀನದಲ್ಲಿ ಇರಬೇಕೆಂದು ಭಾವಿಸುತ್ತಾರೆ. ಆದಕ್ಕೆ "ರಾಷ್ಟ್ರ ವೆಂದು" ಕರೆಯಬಹುದು. ಈ ರಾಷ್ಟ್ರೀಯತ್ವದ ಅಧಿಷ್ಠಾನ ದಲ್ಲಿ ಅನೇಕ ದೇಶಗಳಲ್ಲಿಯ ಪಂಡಿತರು ಭಾರತದಲ್ಲಿ ಮಹ ತ್ವದ ಗ್ರಂಥಗಳನ್ನು ಆಂಗ್ಲ ಭಾಷೆಯಲ್ಲಿ ಭಾಷಾಂತರಿಸಿದರು. ಭಾರತಕ್ಕೆ ತನ್ನದೇ ಆದ ವಿದ್ಯೆ ತತ್ವಜ್ಞಾನಗಳೂ ಅಭಿಮಾನ ವನ್ನುಂಟು ಮಾಡುವ ಇತಿಹಾಸವೂ ಜಗತ್ತಿಗೆ ಹೇಳಬಲ್ಲ ಸಂದೇಶವೂ ಇವೆ. ನಾವೆಲ್ಲರೂ ಅವುಗಳನ್ನು ತಿಳಿದುಕೊಂಡು ಮುಂದಿನ ಪೀಳಿಗೆಗೆ ಆದರ ಯತಾರ್ಥದ ಅರಿವನ್ನು ಮಾಡಿ ಕೊಟ್ಟು ಮುಂದುವರಿಸಬೇಕು. ಅನ್ನುವ ಸ್ಫೂರ್ತಿ ಜನರಲ್ಲಿ ಉದಯಿಸಿತ್ತು. ಭಾರತದಲ್ಲಿ ಜನ್ಮವೆತ್ತಿದ ರಾಷ್ಟ್ರೀಯತ್ವದ ಭಾವನೆಯ ಅಧಿಷ್ಠಾನವೇ ಇದು.

ಈ ಕಾರ್ಯಗಳಲ್ಲಿ ರಾಜಾರಾಮ ಮೋಹನರಾಯರು, ಲೋಕಮಾನ್ಯ ತಿಲಕರು, ದಾದಾಭಾಯಿ ನವರೋಜಿ, ಗೋಖಲೆ ಮತ್ತು ಗಾಂಧಿಯವರಂಥ ಧಿರೋದಾತ್ತ ಲೋಕ ನಾಯಕರು ಮಾರ್ಗದರ್ಶನ ಮಾಡಿದ್ದರಿಂದ ಏಕ ರಾಷ್ಟ್ರೀ ಯತ್ವದ ಭಾವನೆಯು 'ಸ್ವಾತಂತ್ರ್ಯ ಆಂದೋಲನದ ರೂಪ ವನ್ನು ಅವತರಿಸಿತು. ಈ ಸ್ವಾತಂತ್ರ್ಯದ ಆಂದೋನವು ದಿನ ದಿನಕ್ಕೆ ಉಗ್ರ ಸ್ವರೂಪವನ್ನು ತಾಳಿ ಕೊನೆಗೆ ೧೯೪೭ ನೇ ಆಗಸ್ಟ ೧೫ ರಂದು ನಮ್ಮ ಭಾರತಕ್ಕೆ ಸ್ವಾತಂತ್ರ್ಯವು ದೊರ ಕಿತು.

---

## ಬೆಳದಿಂಗಳು

ಬೆಳದಿಂಗಳು ಮೂಡಿದೆ ಇಳೆಯೊಳು ಬೆಳದಿಂಗಳು ಮೂಡಿದೆ ।
ಆಗಸದಲಿ ಚಂದಿರ ಮೂಡಿ ನಿಂತಿಹ ।
ಹೊಳೆ-ಹೊಳೆಯುವ ಬೆಳಕನು ನೀಡಿಹ ।
ಬೆಳಗಾಯಿತು ಜಗ ಬೆಳ್ಳಸದಿ ।
ಬೆಳಂಗಳು ಮೂಡಿದೆ ಇಳೆಯೊಳು ಬೆಳದಿಂಗಳು ಮೂಡಿದೆ ॥ ೧ ॥
ಕೈ ಚಾಚಿ ಕರೆಯುವಾ ತಾರೆ ।
ಮಾರುತನು ಬೋರೆಂದು ಕರೆಯುವನು ಬಾರೆ ।
ನೇಯ್ದಿದೆ ಈಗ ಆಗಸದ ಸೀರೆ ।
ಸಖಿ ನೀನು ಶಶಿಯನ್ನು ಕೈ ಮಾಡಿ ಕರೆ ।
ಬೆಳದಿಂಗಳು ಮೂಡಿದೆ ಇಳೆಯೊಳು ಬೆಳದಿಂಗಳು ಮೂಡಿದೆ ॥ ೨ ॥
ಮಿನುಕಿ-ಮಿನುಕಿ ಮೂಡಿದ ಚಂದ್ರಮಾಯ ।
ಶಶಿಯೊಡನೆ ನಿಶೆಯು ಮಾಯ ।
ಉಷೆಯೊಡನೆ ಉಲ್ಹಾಸ ಬಂದಾ ।
ಹೊರ-ಹೊರ ಹೊರಟ ಚಂದಿರಾ ।
ಬೆಳದಿಂಗಳು ಮೂಡಿದೆ ಇಳೆಯೊಳು ಬೆಳದಿಂಗಳು ಮೂಡಿದೆ ॥ ೩ ॥

ಕುಮಾರಿ : ಜಾಧವ ಮೀರಾ

# ಕನ್ನಡಿಯ ಮುಂದೆ ನಿಂತು

ಬರೆದವರು : ಕು. ವನಮಾಲಾ. ಎಸ್. ಗುಂಡಿ

ಮರ್ಕಟ ಮನವೊಂದು ತಟ್ಟನೆ ನುಡಿಯಿತು. "ನೀನು ಕುರುಡನಾದ್ದರೆ !"

"ಅಯ್ಯೋ !! ನಾನು ಕುರುಡನಾಗಿದ್ದರೆ ! ಈ ವಿಶ್ವವನ್ನಷ್ಟೇ ಏಕೆ ಈ ಸೌಂದರ್ಯ ದರ್ಶಕವನ್ನು ನೋಡಲು ಸಾಧ್ಯವಾಗಿತ್ತಲ್ಲವೇ ? ಎಲ್ಲ ನಿರ್ಮಿಸಿದ ಪರಮಾತ್ಮ ಮನುಜನಿಗೆ ಕಣ್ಣು ಕೊಟ್ಟನಂತೆಯೇ ಈ ಹುಲುಮಾನವ ಕನ್ನಡಿಯನ್ನು ನಿರ್ಮಿಸಿದ. ಯುವಕ-ಯುವತಿಯರಿಗೆ ಸ್ವಸೌಂದರ್ಯವನ್ನು ದರ್ಶಿಸಲು ಸಾಧನವನ್ನು ಮಾಡಿಕೊಂಡ.

ಕನ್ನಡಿ ಮುಂದೆ ನಿಲ್ಲುವದೇನು ಮಹತ್ವದ ಸಂಗತಿಯಲ್ಲ. ಆದರೆ........? ಆದರೆ ಕನ್ನಡಿಯ ಮುಂದೆ ನಿಂತು ನಿರೀಕ್ಷಿಸಿದ ದೃಶ್ಯಗಳ ವರ್ಣನಾಪರ ಸಂಗತಿ ಮುಖ್ಯ. ಕನ್ನಡಿಯಲ್ಲಿ ನಮಗೆ ಕೇವಲ ಪ್ರತಿ ಬಿಂಬವಷ್ಟೇ (ನಮಗೆ) ಕಾಣುವದಿಲ್ಲ. ಆದರೊಡನೆ ಕನ್ನಡಿಗೆ ಸಾಧಾರಣವಾಗಿ ಸಮಕ್ಷವಾಗಿರುವ ಎಲ್ಲ ವಸ್ತುಗಳು ಕಾಣುತ್ತಿವೆ. ಅದೂ ನಮ್ಮ ಕಣ್ಣಿನಂತೆಯೇ ಕಣ್ಣಿಗೆ ಹೇಗೆ ಸಾಧಾರಣ ಸಮಕ್ಷವಾಗಿರುವ ವಸ್ತುಗಳು ಕಾಣುವವೋ ಹಾಗೆ ಇದರಲ್ಲಿಯೂ, ಇದರಿಂದ ಕಣ್ಣೇ ಕನ್ನಡಿಯ ಜನಕವೆನ್ನಬಹುದು.

ಅಂದು ಬುಧವಾರ ಸಪ್ಟಂಬರ ತಿಂಗಳ ಎರಡನೆಯ ದಿನಾಂಕ. ಚಳಿಗಾಲದ ಬೆಳಗುಮುಂಜಾವಿನ ಸಮಯ. ಆಗಿನ ನನ್ನ ಕನ್ನಡಿಯ ಮುಂದೆ ನಿಲ್ಲುವಿಕೆಯ ಸೊಬಗು ಬಣ್ಣಿಸಲಸಾಧ್ಯ. ನೋಡಿ ನಲಿಯಬೇಕು, ಕಂಡು ಕುಣಿಯಬೇಕು ಆ ದೃಶ್ಯವ. ಮೊದಲೇ ತಿಳಿದಂತೆ ಎರಡನೇ ದಿನಾಂಕ. ನನಗೆ ಅತಿ ಕೆಲಸದ ದಿನ. ಬೆಳಗಿನಲಿ ಏಳುತ್ತಲೇ ಚಹಾಪುಡಿ ಸಕ್ಕರೆಗಾಗಿ ಅಂಗಡಿಗೆ ಪ್ರಯಾಣ. ಮನೆಯಲ್ಲಿ ಹಿರಿ ಮಗಳು ಬೇರೆ ನಾನೇ ಆಗಿರಬೇಕೇ ? ಕುರುಡನ ದೈವ ಅದನ್ನು ನನ್ನ ಕೊರಳಿಗೆ ಕಟ್ಟಿತು. ಸೀದಾ ಅಂಗಡಿಯಿಂದ ಕಾಳನ್ನು ತೂ ತಂದೆ, ಆದರೆ.... ? ಆದರೆ ಅಂದಿನ ಉದರ ಭರಣಕ್ಕೆ ಸಾಧನವೇ ತಯಾರಾಗಲಿಲ್ಲ. ಗೃಹದಲ್ಲಿ ಬಂದವನೇ ಈ ದೃಶ್ಯ ಕಂಡು ಕೆಂಗಣ್ಣನಾಗಿ ಶಾಲೆಗೇ ಹೊರಡಬೇಕೆಂದೆ. ಶಾಲೆಗೆ ಹೋಗುವ ಸಿದ್ಧತೆ ನಡೆಸಿದೆ. ಅಂದಿನ ವರ್ತಮಾನಪತ್ರವನ್ನಾಗಲೇ ಓದಿ "ಶೀವಿಂದು ಮೇಶ್ಲಿನಿಂದ ದಂತ ಧಾವನ ಮಾಡಿದಿರೇನು !" ಎಂಬ ಪ್ರಶ್ನೆಯಿಂದ ಅರಿತು ಕೊಂಡೆ. ಅಷ್ಟರಲ್ಲಿ ಮುಂದೆ ಬರುತ್ತಲೇ ಗೋಡೆಗೆ ನೇತಾಡುತ್ತಿದ್ದ ಕನ್ನಡಿ ನನ್ನ ಕುರೂಪ ಮುಖವದ್ನು ತೋರಿಸಿತು. ಪಾಪ ! ಅದಕ್ಕೇನು ? ತನ್ನ ಕರ್ತವ್ಯವನ್ನು ತಾನು ಮಾಡಿತು. Dutyis deity. Diety ಎಂದ ಮೇಲೆ ತನ್ನ ಕರ್ತವ್ಯವನ್ನು ತಾನು ಸಾಧಿಸ ಬೇಡವೇ ? ಸಾಹಿತ್ಯ ಜೀವನದ ಪ್ರತಿಬಿಂಬವನ್ನು ಸಮಾಜಕ್ಕೆ ತೋರಿಸುವದಕ್ಕೆ, ಆ ಮುಕುರ ನನಗೆ ನನ್ನ ಸ್ವರೂಪ ದರ್ಶನ ಮಾಡಿಸಿತು. ಬಾಚಣಿಕೆಯೊಂದನ್ನು ಹಿಡಿದು ನಿಂತೆ ಕನ್ನಡಿ ಮುಂದೆ.

ಪ್ರಥಮ ಸೂಚಿದಂತೆ ಅಂದೇ ತರಬೇಕಾಗಿದ್ದ ಕೊಬ್ಬರಿ ಎಣ್ಣೆ, ಇನ್ನೂ ನನ್ನ ಮುಂದಲೆಯನ್ನು ಸ್ಪರ್ಶಿಸಿರಲಿಲ್ಲ. ಕೂದಲು ಕರಿಬಿಟ್ಟು ಕೆಸರಾಗುತ್ತಿತ್ತು. ಅಂದರೆ ಕೆಸರಿನ ಬಣ್ಣ ಕೂದಲಿ ಬರುತ್ತಿತ್ತು. ಕನ್ನಡಿಯ ಸಮ್ಮುಖದಲ್ಲಿಯ ನನ್ನ ಸಹೋದರಿ ಗೆಳತಿಯರ ಭಾವಚಿತ್ರವೊಂದು ನನ್ನ ದರ್ಶನವನ್ನು ಕನ್ನಡಿಯ ಮಾಧ್ಯಮದಿಂದ ಮಾಡಿಕೊಳ್ಳುತ್ತಲಿತ್ತು. ಅದು ನನ್ನ ಬಾಲ್ಯದ ಗೆಳತಿಯ ಭಾವಚಿತ್ರ. ಅದನ್ನು ನೋಡುತ್ತಲೇ ನನ್ನ ಹೃದಯವು ಭಾವನಾಪರವಶವಾಯಿತು. ಮನಸ್ಸು ವಿಚಾರ ಪೂರಿತವಾಯಿತು. ಅದರಲ್ಲಿಯ ಪ್ರಥಮ ಚಿತ್ರ ನನ್ನ ಅಚ್ಚು ಮೆಚ್ಚಿನ ಅನಂತನದು. ಬಡಪ್ರಾಣಿ. ನನ್ನ ಪ್ರಾಥಮಿಕ ಶಾಲಾ ಜೀವನದ ಸಂಗಾತಿ. ಈಗ ನಿರ್ನಾಮವಾಗಿತ್ತು. ಅವನ ಕಾಯ. ಏಕೆ ? ವಿಧಿ ವೈಚಿತ್ರ್ಯದಿಂದ, "The man, whom god loves, dies young" ಎಂಬಂತೆ ಅವನು ಸರ್ವರಿಂದ ಮಾನ್ಯತೆ ಪಡೆದವನಾಗಿದ್ದರೂ, ಅಂದು ಒಂದು ಅಪಘಾತದಲ್ಲಿ ಮರಣ ಹೊಂದಿದ. ಕವಿಯಾದ ಅವನ ಭಾವನಾತರಂಗಗಳಿಗೆ ಮೋಟರೊಂದು ಡಿಕ್ಕಿ ಹೊಡೆದು ಅವನನ್ನು ಕೊಂದು ಹೋಗಿತ್ತು.

ಮಧ್ಯಮದಲ್ಲಿ ನಾನಿದ್ದೆ. ಕಡೆಗೆ ನನ್ನ ನಲುಮೆಯ ನರಸಿಂಹಳು ಅವಳೀಗ ನನ್ನ ವರ್ಗದಲ್ಲಿಯ ವಿದ್ಯಾರ್ಥಿನಿ. ಅವಳಿಗಾಗಿಯೇ ಪ್ರಥಮ ಸ್ಥಾನ ಪ್ರತಿವರ್ಗದಲ್ಲಿಯೂ ಕಾದು ನಿಂತಿರುತ್ತದೆ. ಅವಳ ಜೀವನ ಆದರ್ಶ, ಅಂತಹದು.

ಸರಕಾರದಿಂದ ಶಿಷ್ಯ ವೃತ್ತಿಯನ್ನವಳು ದೊರಕಿಸುತ್ತಲಿದ್ದಾಳೆ. ಅವಳ ಬುದ್ಧಿಯೇ ಆದರ್ಶ ಜೀವನ. ಮಾಧ್ಯಮಿಕ ಶಾಲೆಯ ಏಳನೇ ವರ್ಗದಲ್ಲಿ ಅಂದು ೧೯೪೫ ಶಿಷ್ಯವೇತನ ಪರೀಕ್ಷೆಯಲ್ಲಿ ಪ್ರಥಮಳಾಗಿ ತೇರ್ಗಡೆ ಹೊಂದಿ 'ಬದಿನ' ಶಿಷ್ಯ ವೇತನ ದೊರಕಿಸಿದ ಶಾಲೆಯ ಮಾನ್ಯ ವಿದ್ಯಾರ್ಥಿನಿಯವಳು. ಜಿಲ್ಹೆಯಲ್ಲಿ ನಮ್ಮ ಊರೇ ಹಿರಿಸ್ಥಾನ ಗಳಿಸಿತು ಆ ವರುಷ. ಇದೇ ವರುಷ ಅವಳೂ ನಮ್ಮೊಡನೆ, ಮಾಧ್ಯಮಿಕ ಶಾಲೆ, ಪ್ರಮಾಣ ಪತ್ರ (Sceondary school certificate) ಪರೀಕ್ಷೆಗೆ ಕೊಡ್ರುವವಳು. ವಿಧಿ ಪರೀಕ್ಷೆ ಅದು ಜ್ಞಾನ ಪರೀಕ್ಷೆ ಎಂದು ಜಾಣರ ಮತ. ಜಯ ಅವಳಿಗೆ ಇದೆಯೇ ಇದೆ.

ಅಷ್ಟರಲ್ಲಿ ನಮ್ಮ ಗಡಿಯಾರ ಹನ್ನೊಂದು ಗಂಟೆಯನ್ನು ಸರಿಯಾಗಿ ಬಾರಿಸಿತು. ನನ್ನ ಭಾವನಾ ವಿಳಾಸಕ್ಕೆ ಕಲ್ಲು ಬಂಡೆಯೊಂದು ಎದುರಾಯಿತು. ನನ್ನ ವಿಚಾರ ಮಂದಿರದ ಹೊಂಗಳಸ ಮುರಿದು ಬಿತ್ತು. ಶಾಲೆಯ ಸಮಯವಾಯಿತು ಅವಸರದಲ್ಲಿ ಪುಸ್ತಕಗಳನ್ನು ತಕ್ಕೊಂಡು ಶಾಲೆಗೆ ಹೊರಟೆನು. ದಾರಿ ಉದ್ದಕ್ಕೂ ಮತ್ತೇ ಅವೇ ಭಾವನೆಗಳು. ಅದೇ ವಿಚಾರಗಳು ಅವೇ ನೆನಪುಗಳು ನನ್ನ ಮುಖ ಕೆಳಗಾಗುತ್ತಲಿತ್ತು. ನನ್ನ ಗಮನದ ಗತಿಯು ಅಳತೆ ಆ ಸೃಷ್ಟಿಕರ್ತನಿಗೆ ಗೊತ್ತು. ಶಾಲೆಯನ್ನು ಮುಟ್ಟುವದರಲ್ಲಿಯೇ ಶಾಲೆಯ ಗಂಟೆಯೊಂದು ಮತ್ತೆ ನನ್ನ ಭಾವನಾತರಂಗಗಳಿಗೆ ರಾಕ್ಷಸವಾಯಿತು. ನನ್ನ ಮುಖ ಮೇಲಾಗಿ ಮಾಡಿದೆ. ಗೆಳತಿಯರನೇಕರು ದಿಟ್ಟಿಗೆ ಬಿದ್ದರು. ಏಕೋ ಏಷ್ಟೋ ಹೊತ್ತಿನಿಂದ ಅವರು ನಗುವವರೆ ನನ್ನನ್ನು ನೋಡಿ, "ಏಕೆ" ಎಂದೆ, ನನ್ನ ವರ್ಗ ಸ್ನೇಹಿತಳೊಬ್ಬಳು ಬಂದು ನನ್ನ ಮಸ್ತಕದಲ್ಲಿಯ ಬಾಚಣಿಕೆಯನ್ನು ಹೊರತೆಗೆದಳು. "ಏನಿದು" ಎಂದಳು. ನನಗೆ ನಾಚಿಕೆಯಾಯ್ತು. ನನ್ನ ಕನ್ನಡಿಯಲ್ಲಿಯ ಮುಖ ನೆನಪಿಗೆ ಬಂದಿತು. ಆದೇ ಕುರೂಪಕ್ಕೆ ಹಣಿಗೆಯೊಂದು ಕೂಡಿದೆ ಎಂದು ನನ್ನ ಕುರೂಪದ ಪರಮಾವಧಿಯಾಗಿತ್ತು. ಆಗ ಮರ್ಕಟಮನ ಮತ್ತೆ ನುಡಿಯಿತು. "ನೀನು ಕುರುಡಳಾಗಿದ್ದರೆ?"

ಅಂದಿನ "ನೀನು ಕುರುಡಳಾಗಿದ್ದರೆ" ಎಂಬ ವಿಷಯಕ್ಕೆ ನನಗೆ ಸಾಕಷ್ಟು ಟಿಪ್ಪಣೆಗಳು ದೊರೆತವೆಂದು ಹಿಗ್ಗಿ ಹಿರೇಕಾಯಿಯಾದೆ.

## ಒಗಟಗಳು

೧) ೧+೪+೩ = ನಮ್ರ
೫+೨ = ಕರಿ (ಆನೆ)
೨+೩ = ಗೆಲವು, ಮನಸ್ಸು
೪+೬ = ಪಾರ್ಥನ ಇನ್ನೊಂದು ಹೆಸರು
೪+೫+೬ = ಊರಿನ ಹೆಸರು. ೬+೧ = ಸೂರ್ಯ
ಹಾಗಾದರೆ ನಾನಾರು ?

೨) ೧+೨ = ಪರಮೇಶ್ವರ
೧+೩ = ಒಂದು ಸಿಹಿ ಪದಾರ್ಥ
೨+೩ = ಪುರುಷ
೩+೪ = ದೇವರ ಹೆಸರು
ಹಾಗಾದರೆ ನಾನಾರು ?

೩) ೧×೩ = ವಿದ್ಯೆ
೪+೫ = ಹಸ್ತ, ಕೈ
೨+೪+೫ = ಒಂದು ರಾಶಿಯ ಹೆಸರು
೧+೨+೩ = ಹೆಣ್ಣು ಮಗಳ ಹೆಸರು
ಹಾಗಾದರೆ ನಾನಾರು ?

೪) ೧+೨+೩ = ಹೆಣ್ಣುಮಗಳು
೮+೬ = ಯಶ, ಕೀರ್ತಿ
೬+೩ = ತಾಯಿ
೨+೮ = ಸತ್ಯ
೭+೧ = ಪತಿಯ ತಂದೆ
೮+೭ = ಜಮಾ ಆಗುವದು
ಹಾಗಾದರೆ ನಾನಾರು ?

ಕು. ಲಲಿತಾ ಹಳ್ಳೆಪ್ಪನವರ

# ಸೀತೆಯ ಚಟುವಟಿಕೆ

ಬರೆದವರು : ಎನ್. ಜೆ. ಮುಳಿಬಿನ್ನೂರ X ನೇ ವರ್ಗ

ಹಿರಿಯ ಸೋಮಾರಿತನವೆ ನೀನೆ ಶೂರನು। ಮರೆಯಲಾರೆ ನಿನ್ನ ಆಜ್ಞಾ ಎಂಥ ವೀರನು। ಓದು ಬರೆಹದಲ್ಲಿ ಹಣವಗಳಿಸಲು ಹೋಗಲು। ನೀನು ಬಂದು ವಿಘ್ನ ಮಾಡಲು। ಯಾವ ನಿನ್ನ ಕತ್ತು ಹಿಡಿದು ಹಿಂದೆ ಮಾಡುವಾ| ಜೀವದಾನ ನೀಡು ಸಾಕು ಮುಂದೆ ನೋಡುವಾ. ಆಲಸಿ ಹೊಲಸಿ ಎಂಬ ಪದವಿ ನನಗೆ ಕೊಟ್ಟೇಯೆ। ಕಲಸಿ ವೈಗಳ್ಳತನವ ದಬ್ಬಿ ಬಿಟ್ಟೆಯೇ। ಮೊದಲು ತಿಳಿಯ ಗೊಡದೆ ಬೇನೆಯಂತೆ ಹೊಕ್ಕೆಯೋ, ಹದವಗೆಡಸಿ ಬೆದರಿಸೆನ್ನ ಹಿಂದೆ ಸಕ್ಕೀಯೋ।

ಜನ ಎಷ್ಟು ಆಲಸ್ಯತನ ಮಾಡುತ್ತದೆ. ಮತ್ತು ಎಷ್ಟು ಅನರ್ಥಕ್ಕೆ ಕಾರಣವಾಗುತ್ತದೆ. ಎಂದು ಮೇಲಿನ ಪದ್ಯದಿಂದ ಗೊತ್ತಾಗಿರಲಿಕ್ಕೆ ಸಾಕು. ಆದರೆ ಆಲಸ್ಯತನ ಅಂದರೆ ನನಗೆ ಗೊತ್ತಿಲ್ಲ ನೋಡ್ರಿ. ಆಲಸಿಗಳನ್ನು ಕಂಡರಂತೂ ನನಗೆ ಆಗುವದೇ ಇಲ್ಲ. ಮನುಷ್ಯನು ಯಾವಾಗಲೂ ಚಟುವಟಿಕೆಯಲ್ಲಿಯೇ ಇರಬೇಕು. ಈಗ ನೋಡ್ರಿ ನನ್ನ ಚಟುವಟಿಕೆಯನ್ನು ಹೇಳುತ್ತೇನೆ.

ಮೊಟ್ಟಮೊದಲು ನಾನು ೯ ತಿಂಗಳು ತಾಯಿಯ ಗರ್ಭದಲ್ಲ ಬೆಳೆದ ನಂತರ ಹೊರಗೆ ಬಂದೆ. ಹೊರಗೆ ಬಂದ ಮೂರು ದಿನಗಳಲ್ಲಿ ಆಲಸ್ಯವಿರುವ ಸ್ಥಳಗಳನ್ನು ಹುಡಕತೊಡಗಿದೆ. ಇಷ್ಟ ಆದ ನೋಡ್ರಿ ನನ್ನ ಚಟುವಟಿಕೆ ಮುಂದೆ ನಾನು ಬೆಳೆದು ದೊಡ್ಡವಳಾದೆ. ಸುಮಾರು ನನಗೆ ೮ ವರುಷಗಳಿರುವಾಗ ನನಗೆ ನಡೆಯಲು ಬರಹತ್ತಿತು. ಆದರೆ ನಾನು ೯ ವರ್ಷದವಳಿದ್ದಾಗ ನನಗೆ ಸಂಪುರ್ಣ ನಡೆಯಲು ಬರಹತ್ತಿತು. ಇಷ್ಟ ಆದ ನೋಡ್ರಿ ನನ್ನ ಚಟುವಟಿಕೆ.

ಮುಂದೆ ನನ್ನ ತಾಯಿ ಜುಕ್ಕಾಜುಲುಮೆಯಿಂದ ನನ್ನನ್ನು ಶಾಲೆಗೆ ಹಾಕಿದಳು. ಅವಾಗ ನನಗೆ ಎಷ್ಟು ವರ್ಷ ಅಂದಿರಿ ಕೇವಲ ೯ ವರ್ಷ ಮುಂದೆ ನನಗ ೧೬ ವರ್ಷ ಇದ್ದಾಗ ನಾನು ಸಣ್ಣ ಬಿನ್ನೆತ್ತಾದಿಂದ ದೊಡ್ಡ ಬಿನ್ನೆತ್ತಾಕ್ಕೆ ದೊಪ್ಪನೇ ಜಾರಿ ಬಿದ್ದೆ ನೋಡ್ರಿ. ಅಯ್ಯೋ ! ನನ್ನ ಪುಣ್ಯಾ ಬಹಳದ ನೋಡ್ರಿ. ಯಾಕಂದ್ರೆ ಇಲ್ಲೆ ಬಿಳೋದ ಗಟಾರದಾಗ ಜಾರಿ ಬಿದ್ದಿದ್ರ ನನ್ನ ಜೀವನ ಉಳಿತಿದ್ದಿಲ್ಲ. ಹಂಗಾರ ನೋಡು ನಾ ಎಷ್ಟು ಶ್ಯಾಣ್ಯಾಕಿ ಇದ್ದೇನಿ ಬಿನ್ನೆತ್ತಾಕ್ಕೆ ನಾ ಎಷ್ಟು ವರ್ಷ ಕೂತೇನಿ. ಬಹಳ ಅಂದ್ರೆ ಬಹಳ ಕಡಮೀರಿ. ನಾವೆಲ್ಲರೂ ಇನ್ನೂ ಗೊಂಬೀ ಇಟಕೊಂಡ ಆಡೋ ದಿವಸ ೧೬ ವರ್ಷ ಅಂದರೆ ಹ್ಯಾಂಗೆ ಅದ ನೋಡ್ರಿ ನನ್ನ ಚಟುವಟಿಕೆ.

ಮುಂದೆ ನಾನು ಬೆಳೆದು ದೊಡ್ಡವಳಾದೆ ನನ್ನ ತಂದೆ ತಾಯಿಗೆ ಮದುವೆ ಮಾಡುವ ಭಾರ ಬಿತ್ತನ್ರಿ ನಾನರೆ ಲಗ್ನಾ ಒಲ್ಲಂದ, ನಮ್ಮ ಮನ್ಯಾಗ ಕೇಳಲಿಲ್ಲ. ಮೊದಲಿನ ಕಾಲದ ಜನಾ. ಇನ್ನೂ ನಾ ಕಲಿಯಬೇಕಂತ ಇಚ್ಛಾ ಇತ್ತು ನೋಡ್ರಿ. ಆದರೆ ನಾ ಬಿನ್ನೆತ್ತಾ ಪಾಸಾಗುವದರೊಳಗೆ ಇದ್ದೆ ನೋಡ್ರಿ ಆಗ ಲಗ್ನಾ ಮಾಡೂದನ್ನೆ ನಿಶ್ಚಯಿಸಿದರು ಲಗ್ನಾತ್ರಿ ಗಂಡನ ಮನಿಗೆ ಹೋಗಾಕ. ಬೇಕರಿ ಹೋದೆ. ಪತಿ ಸೇವಾ ಸತೀ ಏನೇನ ಮಾಡಬೇಕು. ಎಲ್ಲಾ ಯಥಾ ಪ್ರಕಾರ ಮಾಡಿದೆ ನೋಡ್ರಿ. ಮುಂಜಾನೆ ನಸುಕಿನಾಗ ೧೦ ಗಂಟೆಒಳಗಾಗಿ ನಮ್ಮ ರಾಯರಿಗೆ ಚ್ಯಾ ಮಾಡಿ ಕೊಡತಿದ್ದೆ ನೋಡ್ರಿ. ನೀವ್ಯಾರರೇ ಹೀಂಗೆ ಮಾಡತಿದ್ರ್ಯಾ ನೋಡ್ರಿ ನನ್ನ ಚಟುವಟಿಕೆ.

ಒಂದು ಸಲ ನೋಡ್ರಿ ಯುಗಾದಿ ಹಬ್ಬ ಬಂತು. ಹಬ್ಬಾಹಂಗೆ ಬಿಡೋದೆನು ಹಬ್ಬಾ ಮಾಡಿದೆ. ಎಲ್ಲಾ ಏನು ಸಾಮಾನ ಬೇಕು ಅವನ್ನೆಲ್ಲಾ ತರಿಸಿಕೊಂಡೆ. ಹಬ್ಬದ ದಿವಸ ನಮ್ಮ ರಾಯರು ಎಂಥಾಗಡಾನೆ ಎದ್ರು ಎಲ್ಲಾರೆ. ಇನ್ನೂ ನಸುಕು ೧೦ ಗಂಟೆ ಆಗೇದ್ರಿ ಎದ್ದು ಎಲ್ಲಾ ಕೆಲಸಾ ಮಾಡಿ ಜಳಕಾಮಾಡಿ ಅಡಗಿ ಮಾಡಾಕ ಕುಳಿತುಕೊಂಡೆ ಎಲ್ಲಾ ಹಬ್ಬದ ಅಡಗಿ ಮಾಡಿ ನಮ್ಮ ರಾಯರಿಗೆ ಊಟಕ್ಕೆ ಹಾಕುವದರೊಳಗೆ ಮೊದಲನೆಯ ಗಸ್ತಿ ಬಂದ ಹೋತ್ ನೋಡ್ರಿ. ನಾ .ಊಟಾ ಮಾಡೋಣ್ರೊಳಗ ಬೆಳ್ಳಗೆ ಬೆಳಗಾಗಿತ್ತು ಹ್ಯಾಂಗ ಆದ ನೋಡ್ರಿ ನನ್ನ ಚಟುವಟಿಕೆ.

ಚಟುವಟಿಕೆ ಮನುಷ್ಯಳು ನಾನು ಯಾವ ಹಬ್ಬಾನೂ ಬಿಡೂದಿಲ್ಲರಿ ಒಮ್ಮೆ ನೋಡ್ರಿ ಸಂಕ್ರಾಂತಿ ಹಬ್ಬ ಬಂದಿತ್ತು ಕುಶರೆಳ್ಳು ಮಾಡ ಬೇಕರ್ಲಿ ಸಕ್ರಿ ತರಿಸಿ ಪಾಕಮಾಡುವದರೊಳಗೆ ಸಂಕ್ರಾತಿಸ ಬರಬೇಕು. ನಾ ಎಂಥಾಕೇಂತ ಮಾಡಿರಿ ಮುಂದಿನ ಸಂಕ್ರಾಂತಿ ಬರೋದರೊಳಗೆ ಕುಶರೆಳ್ಳು ಹಚ್ಚಿ ಬಿಟ್ಟೆ ಇಂಥಾ ಚಟುವಟಿಕೆ ಎಲ್ಲಾರೆ ಸಿಕ್ಕತೆನ್ರಿ ಹ್ಯಾಂಗ ಅದು ನೋಡ್ರಿ ನನ್ನ ಚಟುವಟಿಕೆ.

---

# ಸ್ವಾತಂತ್ರ್ಯೋತ್ಸವ

**ಲೇಖಕಿ : ಪ್ರಭಾವತಿ ಮಂಗಳವೇಢೆಕರ**

ಸಂಪತ್ ಸಮೃದ್ಧಿಯಿಂದ ತುಂಬಿ ತುಳುಕುವಂಥ ನಮ್ಮ ಭಾರತವನ್ನು ಕಂಡು ಬ್ರಿಟೀಶರು ೧೬೦೦ ರಲ್ಲಿ ಕಾಲಿಟ್ಟರು. ವ್ಯಾಪಾರಕ್ಕೆಂದು ಬಂದ ಇವರ ದೃಷ್ಟಿ ಬದಲಾಗಿ ರಾಜ್ಯವನ್ನೇ ಆಳತೊಡಗಿದರು. ಭಾರತದಲ್ಲಿಯ ಒಡಕು, ಸ್ವಾರ್ಥ, ಸಂಕುಚಿತ ವೃತ್ತಿಗಳ ಲಾಭ ಪಡೆದು ಪ್ಲಾಸಿ ಎಂಬಲ್ಲಿ ೧೭೫೭ ರಲ್ಲಿ ಬ್ರಿಟೀಶ ಧ್ವಜವನ್ನು ಊರಿದರು. ಆಗಿನ ಕಾಲಕ್ಕೆ ಭಾರತವು ಸಂಪತ್ತಿನ ಶಿಖರಕ್ಕೇರಿತ್ತು "ಸುವರ್ಣಭೂಮಿ" ಎಂದೆನಿಸಿಕೊಂಡಿತ್ತು. ಇವರ ಸಾಮ್ರಾಜ್ಯಾಕಾಂಕ್ಷೆಯು ೧೮೫೭ರಲ್ಲಿ ಇಡೀ ಭಾರತವನ್ನೇ ನುಂಗಿ ನೀರು ಕುಡಿಯಿತು. ಆದೇ ಆಗ ಭಾರತೀಯರ ಕಣ್ಣುಗಳು ತೆರೆದವು. ಸ್ವರಾಜ್ಯ–ಸ್ವಧರ್ಮಗಳ ಅರಿವು ಉಂಟಾಗಿ ಅವರು ಬ್ರಿಟೀಶರನ್ನು ಭಾರತದಿಂದ ತಳ್ಳಲು ೧೮೫೭ ರಲ್ಲಿ ಸಶಸ್ತ್ರ ಬಂಡಾಯವನ್ನು ಹೂಡಿದರು. ಈ ಹೋರಾಟದಲ್ಲಿ ಭಾರತೀಯರು ತಮ್ಮ ಪ್ರಾಣವನ್ನರ್ಪಿಸಿ ಏಕ ರಾಷ್ಟ್ರೀಯತೆಯ ಬೀಜವನ್ನು ಬಿತ್ತಿದರು.

ಹಸಿವೆಯಿಂದ ಕಂಗೆಟ್ಟ ರೈತರು ಬಂಡನ್ನು ಹೂಡಿದರು. ಪಾಶ್ಚಾತ್ಯರ ಸಂಸರ್ಗದಿಂದ ಪ್ರಜಾರಾಜ್ಯದ ಕಲ್ಪನೆಗಳು ಭಾರತೀಯರಲ್ಲಿ ಅಂಕುರಿಸಿದವು. ಸಂಘಟಿತವಾದ ಪ್ರಯತ್ನವೇ ನಮ್ಮ ಮೋಕ್ಷಕ್ಕೆ ಸಾಧನವೆಂದು ಬಗೆದ ಆ ದಿಶೆಯಲ್ಲಿ ರಾಷ್ಟ್ರವು ಮುಂದೆ ಸಾಗಿತು. ಆ ಪ್ರಯತ್ನದ ಫಲವಾಗಿಯೇ ಸ್ವರಾಜ್ಯ ದೊರೆಯಿತು.

ಲೋಕಮಾನ್ಯರ ಮುದಾಳುತನದಲ್ಲಿ ರಾಷ್ಟ್ರವು ವೀರ ಮಾರ್ಗವನ್ನು ಹಿಡಿಯಿತು ೧೯೦೬ ರಲ್ಲಿ ಕಾಂಗ್ರೇಸು "ಭಾರತದಲ್ಲಿಯ ಸರ್ವ ರೋಗಗಳಿಗೆ ಸ್ವರಾಜ್ಯ ಒಂದೇ ಉಪಾಯವೆಂದೂ ಸ್ವಾಯುತ್ತ ಸ್ವರಾಜ್ಯ ಧ್ಯೇಯವೆಂದೂ ಸಾರಿತು. ಪರದೇಶಿ ಬಹಿಸ್ಕಾರ, ರಾಷ್ಟ್ರೀಯ ಶಿಕ್ಷಣಗಳೇ ಸ್ವರಾಜ್ಯದ ಸಾಧನವೆಂದೂ ಜನತೆಗೆ ಸ್ವಾಲಂಬನದ ಮಾರ್ಗವನ್ನು ತೋರಿಸಿತು. ಈ ಆಂದೋಲನದಲ್ಲಿ ಪ್ರಕಟವಾದ, ಉಜ್ವಲವಾದ ದೇಶಭಕ್ತಿ ಆತ್ಮಬಲಿದಾನ ಭಾವಾವೇಶಗಳು ಜಗತ್ತನ್ನೇ ದಂಗು ಬಡಿಸಿದವು.

ಆದರೆ ಕಾಂಗ್ರೆಸ್ಸು ತನ್ನ ಶಕ್ತಿ ಸರ್ವಸ್ವವನ್ನು ಉಪಯೋಗಿಸಿದರೂ ಬ್ರಿಟೀಶರ ಕಿಡಿಗೇಡಿತನದ ಭೇದನೀತಿಯ ಮೂಲಕ ಐಕ್ಯವು ಅವಶ್ಯಕವಾಯಿತು. ಮನಸ್ಸಿಲ್ಲದಿದ್ದರೂ ಭಾರತದ ಹಿತದ ದೃಷ್ಟಿಯಿಂದ ಅನಿವಾರ್ಯವಾಗಿ ಭಾರತದ ವಿಚ್ಛೇದನವನ್ನು ಒಪ್ಪಬೇಕಾಯಿತು. ಭಾರತವು ಒಂದಾಗಲೀ ಎರಡಾಗಲೀ ಇಂದು "ಸ್ವತಂತ್ರ" ವಾಗಿದೆ ಎಂಬದನ್ನು ಮಾತ್ರ ಯಾರೂ ಅಲ್ಲಗಳೆಯಲಾರರು. ಈ ೬೦ ವರ್ಷಗಳ ಹೋರಾಟದ ಫಲವಾಗಿ ೧೯೪೭ ಆಗಸ್ಟ ೧೫ ಕ್ಕೆ ಅಧಿಕಾರ ಗ್ರಹಣವನ್ನು ಮಾಡಿತು.

ಭಾರತದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಬಹುದಾದ ಸುವರ್ಣ ಸಮಯವದು! ಬ್ರಿಟೀಶ ಮುಖ್ಯಮಂತ್ರಿಯ ಆದೇಶದಂತೆ ಆ ಶುಭ ಸಮಯದಲ್ಲಿಯೇ ಅಂದರೆ ೧೪ ನೇ ದಿನಾಂಕ ಮಧ್ಯರಾತ್ರಿ (೧೨ ಗಂಟೆ) ಸರಿದು ೧೫ ನೇ ದಿನಾಂಕ ಪ್ರಾರಂಭವಾಗುತ್ತಲೇ ಬ್ರಿಟೀಶರ ಧ್ವಜವನ್ನಿಳಿಸಿ ಆದರ ಸ್ಥಾನದಲ್ಲಿ ಭಾರತೀಯ ಸ್ವಾತಂತ್ಯದ ಪತಾಕೆಯು ಹಾರಿತು.

ಈಗ ಸ್ವತಂತ್ರವಾದ ಭಾರತವು ತನ್ನ ಸಂಸ್ಕೃತಿಯನ್ನು ಉಳಿಸಿಕೊಂಡು ಜಗತ್ತಿಗೆ ಧರ್ಮವನ್ನು ತಿಳಿಸಲಿಕ್ಕೆ ಬದ್ಧಕಂಕಣವಾಗಿರುವದೆಂದು ತ್ರಿವರ್ಣ ಧ್ವಜದ ಮಧ್ಯದಲ್ಲಿ ೨೪ ಹಲ್ಲುಗಳ ಧರ್ಮಚಕ್ರವನ್ನು ರಾಷ್ಟ್ರಧ್ವಜವನ್ನಾಗಿ ಮಾಡಿಕೊಂಡಿದೆ. ಇದರಲ್ಲಿ ಮೂರು ಬಣ್ಣಗಳಿದ್ದು ಮೇಲೆ ಕೇಸರಿ, ನಡುವೆ ಬಿಳಿ, ಕೆಳಗೆ ಹಸಿರು, ಹೀಗೆ ೩ ಪಟ್ಟಿಗಳಿವೆ. ಬಿಳಿ ಬಣ್ಣದ-ಪಟ್ಟಿಯ ನಡುವೆ ೨೪ ಹಲ್ಲುಗಳುಳ್ಳ ಚಕ್ರವು ಸ್ಥಾಪಿತವಾಗಿದೆ ಈ ಬಣ್ಣಗಳಲ್ಲಿ ಕೇಸರಿ ಬಣ್ಣವು ಸ್ವಾರ್ಥತ್ಯಾಗವನ್ನು, ಬಿಳಿ ವರ್ಣವು ಪಾವಿತ್ರ್ಯವನ್ನು ಸೂಚಿಸುತ್ತದೆ ಹಸರು ಬಣ್ಣದಿಂದ ಆಶಾಪೂರ್ಣ ಪ್ರಯತ್ನವು ಇವುಗಳನ್ನು ಸೂಚಿಸುತ್ತವೆ. ಹೀಗೆ ಮನೋವಾಕ್ಕಾಯುಗಳಲ್ಲಿ ಪಾವಿತ್ರ್ಯವನ್ನು ಪಡೆದು ಶುದ್ಧ ಚಿತ್ತದಿಂದ ತಪಸ್ಸನ್ನೂ ಸ್ವಾರ್ಥತ್ಯಾಗವನ್ನೂ ಮಾಡಿ ಸದಾ ಆಶಾವಂತರಾಗಿ ಪ್ರಯತ್ನವನ್ನು ಮಾಡುತ್ತ ಈ ಸಾಂಸ್ಕೃತಿಕ ಚಕ್ರವನ್ನು ಪರಿವರ್ತಿಸಬೇಕೆಂದು ಬೋಧಿಸುವದೇ ಈ ಧ್ವಜದ ಅರ್ಥವು.

ಆಗಸ್ಟ ೧೫ ನೇ ದಿನ ಭಾರತೀಯರಿಯುಗೆ ಅತೀ ಮಹತ್ವ ಮತ್ತು ಆನಂದದ ದಿನ. ಅಂದಿನ ದಿನ ಇಡೀ ಭಾರತದ ಶಾಲೆ, ಕಾಲೇಜು, ಆಫೀಸು ಮೊದಲಾದವುಗಳಲ್ಲಿ ತ್ರಿವರ್ಣ ಧ್ವಜವು ಹಾರಾಡುವದು. ಮತ್ತು ಹಾರಾಡುವಾಗ ಆಕಾಶದಲ್ಲಿ ಹೂ-ಮಳೆಗಳನ್ನು ಸುರಿಸುವದು.

# ಪರಿಸ್ಥಿತಿಯ ಪ್ರಭಾವ

ಬರೆದವರು:— **ದೇಶಪಾಂಡೆ ಪಿ. ಕೆ.**

ಸಂಜೆಯ ೫ ಗಂಟೆಯ ಸಮಯ ಸೂರ್ಯನು ಕೆಮ್ಮಣ್ಣಿನಲ್ಲಿ ಆಟವಾಡಿ ದಣಿದ ಹುಡುಗನಂತೆ ಕೆಂಪಾಗಿ ಕಾಣುತ್ತಿದ್ದನು. ಹಕ್ಕಿಗಳು ಚಿಲಿಪಿಲಿ ಎಂದು ನಾದ ಗೈಯುತ್ತ ತಮ್ಮ ಗೂಡಿಗೆ ಹೋಗುತ್ತಿದ್ದವು. ದನಗಳು ಅಂಬಾ ! ಎಂದು ದೊಡ್ಡಿಗೆ ಹೋಗಹತ್ತಿದವು. ಆಗ ನಾನು ಸ್ಕೂಲಿನಿಂದ ಹೊರಬಿದ್ದೆ ನನಗಾಗಿ ನನ್ನ ಹೆಂಡತಿ ಕಾಯುತ್ತಿರಬಹುದು ಎಂದು ಬೇಗನೆ ಪೇಟೆಗೆ ಹೋಗಿ ಕಾಯಿಪಲ್ಲೆಗಳನ್ನು ತೆಗೆದುಕೊಂಡು ಒತ್ತರದಿಂದ ಹೆಜ್ಜೆಗಳನ್ನು ಹಾಕುತ್ತ ನಡೆದೆ. ಆಗ ''ಯಪ್ಪಾ ೨ ದುಡ್ಡು ಕೊಡ್ರಿ ಮೂರು ದಿನದಿಂದ ಉಪವಾಸ ಇದ್ದೆನ್ರಿ ಕೊಟ್ರೆ ಬಾಳ ಪುಣ್ಯ ಬರತದ ನೋಡ್ರಿ'' ಎಂಬ ಆರ್ತ ಸ್ವರವು ಕೇಳಿಸಿತು. ಅದರಿಂದ ನನ್ನ ಲಕ್ಷವು ಆ ಕಡೆಗೆ ತಿರುಗಿತು. ತಿರುಗಿ ನೋಡಿದೆ ಒಬ್ಬ ೮ ವರ್ಷದ ಬಾಲಕ ನಿಂತಿದ್ದಾನೆ. ಅವನ ಆರ್ತ ಸ್ವರವು ನನ್ನ ಅಂತಃ ಪಟಲದ ಮೇಲೆ ಮೂಡಿತು. ಆಗ ನಾನು ಕಿಸೆಯಲ್ಲಿ ಕೈಹಾಕಿ ಒಂದಾಣೆ ಆತನ ಕೈಗಿತ್ತು ಮನೆ ಕಡೆಗೆ ತಿರುಗಿದೆ. ಹಾದಿಯಲ್ಲಿ ಎಷ್ಟೋ ಜನ ಹೀಗೆಯೇ ಕೇಳಿದರು. ಅಗ ನನಗನಿಸಿತು '' ಈ ಹಿಂದುಸ್ತಾನದಲ್ಲಿ ಹೀಗೆ ಎಷ್ಟು ಜನರಿರುವರೋ ಏನೋ ? ಬ್ರಿಟೀಶರು ಸ್ವಾತಂತ್ರ ವನ್ನು ಕೊಟ್ಟುಹೋದರು. ಕಾಂಗ್ರೆಸ್ ರಾಜ್ಯಭಾರ ನಡೆಯಿತು ಆದರೆ ಎಲ್ಲೆಡೆಯಲ್ಲಿಯೂ ಆಹಾರದ ಹಾಹಾಕಾರವೇ ಹಾಹಾಕಾರ ! ನನಗೆ ಕೂಳಿಲ್ಲ, ನಿನಗೆ ಕೂಳಿಲ್ಲ ! ಎಂದು. ಎಲ್ಲದೆ ಸ್ವಾತಂತ್ರ್ಯ ! ಯಾರಿಗಾಗಿ ಸ್ವಾತಂತ್ರ್ಯ ! ಕೇವಲ ಹೆಸರಿಗಾಗಿ ಅಷ್ಟೇ ಹೊರತು ನಿಜವಾಗಿಯೂ ಇಲ್ಲ. ಈ ಕಾಂಗ್ರೆಸ್ ಸರಕಾರ ! ಈ ಮಂತ್ರಿ ಮಂಡಲ ಇವರಾಚರಿಸುವ ಆಚರಣೆ ಎಲ್ಲವನ್ನೂ ನೋಡಿ ಮೊದಲಿನ ಬ್ರಿಟಿಶ ಸರಕಾರವೇ ಇರಬೇಕಿತ್ತು ಎಂದೆನಿಸಿತು ''ಮನೆಗೆದ್ದು ಮಾರುಗೆದೆ'' ಎಂಬ ಮಾತು ಸುಳ್ಳಾದೀತೆ ? ನಮ್ಮ ಹಿಂದುಸ್ತಾನದಲ್ಲಿ ಇಷ್ಟು ಬಡತನವಿದ್ದು ಪರರಾಷ್ಟ್ರದಲ್ಲಿದ್ದ ಬಡತನವನ್ನು ನಿವಾರಿಸಲು ಹೋಗುತ್ತಾರೆ'' ಎಂದು ವಿಚಾರಿಸುತ್ತ ಹೊರಟಾಗ ಮತ್ತೆ ಆ ಸ್ವರ ಆಹಾ ! ನನಗೆ ಮೈ ಜುಂ ಎಂದಿತು. ಮತ್ತೆ ಒಂದಾಣೆ ಆತನ ಕೈಗಿತ್ತು ಹೊರಟೆ, ಮನೆ ಸೇರಿದೆ. ನನ್ನ ಹೆಂಡತಿ ''ಇನ್ನೂ ೬ ಗಂಟೆಯಾಗಿಲ್ಲ ಇವತ್ತು ಪಿಕ್ಚರಿಗೆ ಹೋಗೋಣ'' ಎಂದಳು. ನಾನು ಮನಸ್ಸಿಲ್ಲ ಎಂದು ಪೇಪರನ್ನು ಓದುತ್ತ ಕುಳಿತುಕೊಂಡೆ. ಹಾಗೆ ೯ ಗಂಟೆಯಾಯಿತು ನನ್ನವಳು ''ಊಟ ಬೇಡವೆ ?'' ಎಂದು ಎಬ್ಬಿಸಿದಳು ''ನನಗೆ ಕೊಂಚವೂ ಹಸಿವೆ ಇಲ್ಲಾ'' ಎಂದು ಹಾಗೆ ಮಲಗಿಕೊಂಡೆ.

ಹೀಗೆ ೫-೬ ವರ್ಷಗಳು ಕಳೆದವು ಆ ಹೊತ್ತು ಬಿಕ್ಕೆಬೇಡಿದ ಹುಡುಗ ೧೪-೧೫ ವರ್ಷದವನಾಗಿದ್ದ. ಒಂದು ದಿನ ರಾತ್ರಿ ವಿಚಾರಿಸಿದೆ. ಮರುದಿನ ಬೆಳಿಗ್ಗೆ ನನ್ನವಳನ್ನು ಕೇಳಿದಾಗ ಅವಳು ಜಾತಿ, ನೀತಿ ಎಲ್ಲವೂ ಹೋಯಿತು. ಮುಟ್ಟಬಾರದ ಹೇಸಿಜನರನ್ನು ಮುಟ್ಟುವದೇ ? ಬೇಡ'' ಎಂದಳು. ಮರುದಿನ ಸಂಜೆಗೆ ೫ ಗಂಟೆಗೆ ಸ್ಕೂಲಿನಿಂದ ಮನೆಗೆ ಹೊರಟಾಗ ಮತ್ತೆ ''ಅಪ್ಪಾ ೨ ದುಡ್ಡು ಕೊಡ್ರಿ ಮೂರು ದಿನವಾಯಿತು ಉಪವಾಸ ಇದ್ದೆನ್ರಿ'' ಎಂದು ಕೇಳಿಸಿತು. ಆಗ ಆತನ ಹತ್ತಿರ ಹೋಗಿ ನಿನಗೆ ಯಾರೂ ಇಲ್ಲವೇ ? ನಿನ್ನ ಹೆಸರೇನು? ನೀನು ಎಲ್ಲಿ ಇರುತ್ತೀ? ಎಂದು ಕೇಳಿದೆ. ಆಗ ಅವನು ತನ್ನ ಎಲ್ಲ ಕತೆಯನ್ನು ಹೇಳಲಾರಂಭಿಸಿದನು.

''ನಾನು ಮತ್ತು ನನ್ನ ತಂಗಿ ಇಬ್ಬರೇ ಈಗ ಇರುತ್ತೇವೆ. ತಂದೆ ತಾಯಿಗಳು ನಾವು ಚಿಕ್ಕವರಿರುವಾಗಲೇ ತೀರಿಕೊಂಡರು. ನಾವು ಬಹಳ ಶ್ರೀಮಂತರಿದ್ದೆವು. ನಮ್ಮ ಕಕ್ಕನು ಎಲ್ಲವನ್ನು ತೆಗೆದುಕೊಂಡನು. ಆದ್ದರಿಂದ ಈ ಪರಿಸ್ಥಿತಿಬಂದಿತು ನಾನು ಬಿಕ್ಕೆ ಬೇಡಿದ್ದರಲ್ಲಿ ನನ್ನ ತಂಗಿ ಇಷ್ಟು ದಿನ ಸಾಗಿಸುತ್ತಿದ್ದಳು. ಹೀಗೆ ಎಷ್ಟೋ ದಿನಗಳು ಕಳೆದವು ಅವಳಿಗೆ ಕಾಯಿಲೆಯಾಗಿತ್ತು ನನಗೆ ಔಷಧವನ್ನು ಕೊಡಿಸಲು ಆಗಲಿಲ್ಲ ನನ್ನ ಹತ್ತಿರ ಹಣ ಇರಲಿಲ್ಲ. ಆದ್ದರಿಂದ ಅವಳು ಎಲ್ಲಿಯೋ ಹೋಗಿ ಬಿಟ್ಟಿದ್ದಾಳೆ. ಈವರೆಗೆ ಅವಳು ನನಗೆ ಕಾಣಿಸಿಕೊಂಡಿಲ್ಲ'' ಎಂದು ಹೇಳುತ್ತ ಕಣ್ಣೀರನ್ನು ಒರಿಸಿಕೊಂಡನು. ನನಗೆ ಸಹಿಸಲಾರದಷ್ಟು ದುಃಖವಾಯಿತು. ತಿರುಗಿ ಮಾತನಾಡದೆ ಮನೆಗೆ ಬಂದೆ ನನ್ನ ಹೆಂಡತಿ ವಿಮಲಳನ್ನು ವಿಚಾರಿಸಿದೆ '' ಅವನನ್ನು ನನ್ನ ಮನೆಯಲ್ಲಿ ಏಕೆ ಇರಿಸಿಕೊಳ್ಳಬಾರದು ?'' ಎಂದು ಆಗ

ಅವಳು ಇದು ಹೊಲೆಯರ ಮನೆಯೋ? ಬ್ರಾಹ್ಮಣರ ಮನೆಯೋ? ಎಂದಳು. ಅಸ್ಪೃಶ್ಯತೆಯ ಸಲುವಾಗಿ ಗಾಂಧೀಜಿ ಮತ್ತು ಕಸ್ತೂರಬಾ ಅವರ ನಡುವೆ ಒಂದು ದೊಡ್ಡ ಜಗಳವಾಯಿತೋ ಅದರಂತೆ ನನ್ನವಳೂ ಜಗಳಾಡಿದಳು. ನಾನೇನುಕೇಳಲಿಲ್ಲ ಗಾಂಧೀಜಿಯಂತೆ ನಾನೂ ಹಟವಾದಿ, ಆ ಹುಡುಗನನ್ನು ಕರೆದುಕೊಂಡು ನನ್ನ ಮನೆಯಲ್ಲಿ ಇರಿಸಿಕೊಂಡುಬಿಟ್ಟೆ. ನಾನವನಿಗೆ ಬೇರೆ ಬೇರೆ ಬಟ್ಟೆಗಳನ್ನು, ಹೊಸಬಟ್ಟೆಗಳನ್ನು ಹೊಲಿಸಿ ಕೊಟ್ಟೆ, ನನ್ನ ಮಗನಂತೆ ಜೋಕೆ ಮಾಡಿದೆ, ನನಗೆ ಬಿಡುವಿನ ಸಮಯವಿದ್ದಾಗ ಅವನಿಗೆ ಓದು ಹೇಳಿದೆ ಎಸ್. ಎಸ್. ಸಿ. ವರೆಗೆ ಕಲಿತ. ಆ ಮೇಲೆ ಕಾಲೇಜದ ಅಭ್ಯಾಸಮಾಡಿ ಕೊನೆಗೆ ಬಿ. ಎ. ವರೆಗೆ ಓದಿದ. ಆ ಮೇಲೆ ಅವನಿಗೆ ಬಾಂಬೆಯಲ್ಲಿ ನೌಕರಿ ಸಿಕ್ಕಿತು.

ಮೊನ್ನೆ ನನ್ನ ಮಗ ಕ್ಷಾಮಾನನ ಹುಟ್ಟಿದ ದಿನಕ್ಕೆ ಬಾ ಎಂದು ಪತ್ರ ಹಾಕಿದ್ದೆ ಆದರೆ ಅವನಿಗೆ ಆಫೀಸಿನ ಕೆಲಸ ಬಹಳ ಇದ್ದುದರಿಂದ ಬರಲಿಲ್ಲ. ಅದಕ್ಕಾಗಿ ಅವನ ೫೦ ರೂ. ಕ್ಷಾಮಾನನಿಗೆ ಮೊಟರ್‌ಸಾಯಕಲ್ ತೆಗೆದುಕೊಳ್ಳಲು ಮನಿಯಾರ್ಡರ ಬಂದಿದೆ. ಬಿಕ್ಷಾಪತಿಯು ಲಕ್ಷಾಪತಿಯಾದ ಮಾತು ಆಶ್ಚರ್ಯಾಗಲಿಲ್ಲವೇ?

—೦—೦—

## ಜಗತ್ತಿನಲ್ಲಿ ಮಿಗಿಲಾದ ಸಂಗತಿಗಳು

೧ ಜಗತ್ತಿಗೆ ದೊಡ್ಡದಾದ ಖಂಡ — ಏಶಿಯಾ
೨ ಜಗತ್ತಿನಲ್ಲಿ ಅಗಲವಾದ ಹೊಳೆ — ಮಿಸಿಪಿಸಿ
೩ ,, ಉದ್ದವಾದ ಹೊಳೆ — ನೈಲ
೪ ,, ಆಳವಾದ ಹೊಳೆ — ಅಮೆಝಾನ
೫ ,, ,, ಮಹಾಸಾಗರ — ಹಿಂದೀ ಮಹಾಸಾಗರ
೬ ,, ಪ್ರಸಿದ್ಧವಾದ ಹಣ್ಣಿನ ತೋಟ — ಕ್ಯಾಲಿಫೋರ್ನಿಯಾ
೭ ಜಗತ್ತಿಗೆ ದೊಡ್ಡದಾದ ಪರ್ವತ — ಹಿಮಾಲಯ
೮ ,, ,, ಸರೋವರ — ಕಾಸ್ಪಿಯನ್
೯ ,, ,, ಮಹಾಸಾಗರ — ಪ್ಯಾಸಿಫಿಕ್
೧೦ ಜಗತ್ತಿನಲ್ಲಿರುವ ಕಪ್ಪುಖಂಡ — ಅಫ್ರಿಕಾ
೧೧ ಜಗತ್ತಿನ ಆಟದ ಬೈಲು — ಸ್ವಿತ್ಸರ್ಲಂಡ
೧೨ ಜಗತ್ತಿಗೆ ದೊಡ್ಡದಾದ ಹುಲ್ಲುಗಾವಲು — ಸುದಾನ
೧೩ ಜಗತ್ತಿಗೆ ಮಿಗಿಲಾದ ಪಟ್ಟಣ — ಲಂಡನ್
೧೪ ಜಗತ್ತಿನ ಕಟುಕರ ಮನೆ — ಚಿಕ್ಯಾಗೊ
೧೫ ಜಗತ್ತಿನಲ್ಲಿಯ ದೊಡ್ಡ ರೇಲ್ವೆ—ಟ್ರಾನ್ಸ ಸೈಬೇರಿಯನ್ ರೇಲ್ವೆ
೧೬ ದಕ್ಷಿಣದ ಬ್ರಿಟನ್ — ನ್ಯೂಝಿಲಂಡ
೧೭ ನೀಲಿ ಬಣ್ಣದ ಪರ್ವತ — ನೀಲಗಿರಿ
೧೮ ಮಧ್ಯರಾತ್ರಿ ಸೂರ್ಯನನ್ನು ಕಾಣುವ ನಾಡು — ನಾರ್ವೆ
೧೯ ಯುರೋಪದ ನಂದನವನ — ಸ್ವಿತ್ಸರ್ಲಂಡ
೨೦ ಚೀನದ ಗೋಳು — ಹೋ ಅಂಗ ಹೋ
೨೧ ಸಮುದ್ರದಲ್ಲಿಯ ನದಿ — ಗಲ್ಫಸ್ಟ್ರೀಮ
೨೨ ಏಳು ಗುಡ್ಡಗಳ ಪಟ್ಟಣ — ರೋಮ
೨೩ ಭೂಮಧ್ಯ ಸಮುದ್ರದ ಕೀಲಿಕೈ — ಜಿಬ್ರಾಲ್ಟರ
೨೪ ಜಗತ್ತಿನ ಚಪ್ಪರ — ಪಾಮೀರ ತಪ್ಪಲು
೨೫ ಹಸಿರು ನಡುಗಡ್ಡೆ — ಅಯರ್ಲಂಡ
೨೬ ಪೇಪರ ವೃಕ್ಷಗಳ ನಾಡು — ಕಾನಡಾ
೨೭ ಯುರೋಪದ ರೋಗಿ — ತುರ್ಕಸ್ತಾನ
೨೮ ಐದು ಹೊಳೆಗಳ ನಾಡು — ಪಂಜಾಬ
೨೯ ದೇಗುಲಗಳ ಪಟ್ಟಣ — ಬನಾರಸ
೩೦ ಮುತ್ತುಗಳ ನಡುಗಡ್ಡೆ — ಇರಾಣ ಆಖಾತ
೩೧ ದಕ್ಷಿಣ ಭಾರತದ ತೋಟ — ತಂಜಾವೂರ
೩೨ ಪೃಥ್ವಿಯ ಮಾನುಷ ವಿಷುವ ವೃತ್ತ — ಹಿಮಾಲಯ
೩೩ ಇಜಿಪ್ತದ ಕೊಡುಗೆ — ನೈಲನದಿ
೩೪ ಬಿಳಿಯ ಮನುಷ್ಯನ ಗೋರಿ — ಗಿನೀಸ ದೇಶದ ಸಮುದ್ರ ದಂಡೆ
೩೫ ಭಾರತದ ನಂದನ ವನ — ಕಾಶ್ಮೀರ
೩೬ ಅಜ್ಞಾತ ಖಂಡ — ಆಫ್ರಿಕಾ
೩೭ ವಜ್ರಗಳ ಪಟ್ಟಣ — ಕಿಂಬರ್ಲೆ
೩೮ ಕರಿಕಲ್ಲುಗಳ ಪಟ್ಟಣ — ಸ್ಕಾಟ್ಲಂಢ
೩೯ ಹಿಂದೀ ಮಹಾಸಾಗರದ ಜಿಬ್ರಾಲ್ಟರ — ಏಡಿನ್‌ಬರೋ
೪೦ ಪ್ರವೇಶಿಸಲು ಪ್ರತಿಬಂಧಿಸಲ್ಪಟ್ಟ ನಾಡು — ತಿಬೇಟ
೪೧ ಜಗತ್ತಿಗೆ ದೊಡ್ಡ ಬಂದರ — ಸಿಡ್ನಿ

ಎಸ್. ಎಸ್. ಪುರಾಣಿಕ (೯ನೇ ವರ್ಗ)

# ಮರೆಯಲಾರದ ಮಹಾತ್ಮಾ ಗಾಂಧಿ

[ಭಾವಗೀತ]

ಪುತ್ಥಳಿಯ ಪೊಟ್ಟೆಯಿಂ ಪೋರ ಬಂದರದಲ್ಲಿ
ಪುಟ್ಟಿರುವ ಪುಣ್ಯಾತ್ಮ, ಪೊಗಳಲೆನ್ನಳವೆ ?
ಪುಟ್ಟತನದಲಿ ನೀನು ಪೋಲಿಯಾದರು ಕೊನೆಗೆ
ಪೊಂದಿಪಶ್ಚಾತ್ತಾಪವಾ ಪಾವನಾದೆ ॥೧॥

ಮಾಧ್ಯಮಿಕ ಮಟ್ಟವನು ಮಾತೆಮಡಿಲಲಿ ಮುಗಿಸಿ
ಮಾತೃಭೂಮಿಗೆ ಬಂದೆ ಮುಂದಿನೋದನು ಮುಗಿಸಿ
ಜಾತಿ ಐಕ್ಯ ಸಾಧಿಸಲೋಸುಗ ನೀತಿಯನ್ನು ಹೇಳಿದೆ
ಜಾತಿಭೇದ ಬೀಜವಳಿಸಿ ಭಾರತದಲ್ಲಿ ಬೆಳಗಿದೆ ॥೨॥

ದೇಶಸೇವೆ ಈಶಸೇವೆ ಎಂದು ನೀನು ಸಾರಿದೆ
ದೀನ ಸೇವೆ ದೇವ ಎಂಬ ಮಾತ ನಡೆಸಿದೆ
ಸತ್ಯಶಾಂತಿ ಅಹಿಂಸೆಯಿಂದ ದೇವದೂತನೆನಿಸಿದೆ
ಸತ್ಯದಿಂದ ಹತ್ಯವಿಲ್ಲದೆ ಸ್ವಾತಂತ್ರ್ಯವನ್ನು ಕೊಡಿಸಿದೆ ॥೩॥

ಲಂಘನದಿಂದ ನೀನು ಬಂದು ಪವಾಡವನ್ನು ಮಾಡಿದೆ
ಲಂಘನದಿಂದ ಲೀಲಾಜಾಲದಿ ಲೋಗರ ಮನವ ಸೆಳೆಸಿದೆ
ನಿಸರ್ಗ ಚಿಕಿತ್ಸೆಯಲ್ಲಿ ನೀನು ತಜ್ಞ ವೈದ್ಯನೆನಿಸಿದೆ
ನಿಸರ್ಗ ನೇಮ ನಿತ್ಯವೆಂದು ನರರಿಗೆ ಬೋಧ ಹೇಳಿದೆ ॥೪॥

ಅಸಹಕಾರ ಅಸ್ತ್ರದಲ್ಲಿ ಅಹಿಂಸೆಯನ್ನು ಬೆರೆಸಿದೆ
ಅಸಹಕಾರದಿಂದ ನೀನು ಸಹಕಾರ ಸರಕಾರ ಸೃಜಿಸಿದೆ
ಗೃಹಸ್ಥನಾಗಿ ಕಂಡರೂ ನೀ ಬ್ರಹ್ಮಚರ್ಯ ಬೆಳೆಸಿದೆ
ಬ್ರಹ್ಮಚರ್ಯವೆ ಲೋಕಕಾರ್ಯಕೆ ಅನುಕೂಲವೆಂದು ಅನಿಸಿದೆ ॥೫॥

ಕಸ್ತೂರಬಾ ಕೈಹಿಡಿದ ನೀನು ಕಷ್ಟಜೀವನ ನಡೆಸಿದೆ
ಕಸ್ತೂರಿಯಂತೆ ವಿಶ್ವದೊಳಗೆ ಇಂದು ಮುಂದೆ ಬೆಳಗುವೆ
ನಾಟ್ಯಕಲೆಯ ಕಲಿಯ ಹೋದೆ ನಿರಾಶನಾಗಿ ಮರಳಿದೆ
ಆದರೇನು ಪ್ರಯತ್ನಬೇಕು ಯತ್ನಸಾಧನೆಗೆಂದರುಹಿದೆ ॥೬॥

ದೇಶಭಕ್ತ ದೇವರ ಭಕ್ತ ಉತ್ತಮ ತತ್ವಸಾಧಕ
ದೇಶಕಾಗಿ ದೇಹ ದಂಡಿಸಿದ ದೀನ ದರಿದ್ರರ ಸೇವಕ
ಹರಿಜನೋದ್ಧಾರವೊಂದು ನಿನ್ನ ಹೃನ್ಮನೀಷೆಯು
ಹರಿಯ ಜನರಿಗಾಗಿ ಮಾಡಿದ ಗ್ರಾಮೋದ್ಧಾರ ನಿನ್ನದು ॥೭॥

"ಗ್ರಾಮೋದ್ಯೋಗ ಹೆಚ್ಚಿಸಿ"ರೆಂದು ಗ್ರಾಮಸೇವಕರಿಗ್ಹೇಳಿದೆ
ಗ್ರಾಮೀಣ ಜನತೆಗಾಗಿ ನೀನು "ಜೀವನ ಶಿಕ್ಷಣ" ಉಸುರಿದೆ
"ಖಾದಿಯೆಂಬ ನಾಂದಿಯಿಂದ" ಸ್ವಾವಲಂಬನ ಪೇಳಿದೆ
ಖಾದಿ ಮಂತ್ರ ಜಪಿಸಿ ನೀನು ಸ್ವಾಭಿಮಾನ ತಿಳಿಸಿದೆ ||೮||

ಮಾಡು ಇಲ್ಲವೆ ಮಡಿ ಎಂಬುದು ನಿನ್ನ ಸ್ವಾತಂತ್ರ್ಯಕಹಳೆಯು
ಮಾತೆಗಾಗಿ ಮರುಕಪಟ್ಟು ಮಾನಕೊಟ್ಟ ದೂತನು
ಮುಪ್ಪಿನಲ್ಲಿ ನೀನು ಪಡೆದೆ ಆತ್ಮಜ್ಞಾನ ಅಧ್ಯಾತ್ಮವ
ಆತ್ಮಚರಿತೆ ಬರೆದು ನಿನ್ನ ತಪ್ಪುಒಪ್ಪಿಕೊಂಡೆಯಾ? ||೯||

ಲೋಕದಲ್ಲಿ ನೀನು ಮಾಡದ ಕಾರ್ಯವಾವು ಮೋಹನ?
ಲೋಗರೀಗ ನಿನ್ನ ಪಥದಿ ನಡಿಸಬೇಕು ಜೀವನ!
ರಾಮಮಂತ್ರ ಜಪಿಸಿ ನೀನು ಪಂಚಪ್ರಾಣ ತೊರೆದೆಯಾ?
ರಾಮರಾಜ್ಯ ಕನಸಕಂಡು ಗುಂಡಿನೇಟ ಪಡೆದೆಯಾ? ||೧೦||

ನಿನ್ನ ಕೃತಿಯು ಅಮರ ಕೃತಿಯು ನಿನ್ನ ಜೀವನ ಪಾವನ
ನಿನ್ನ ಸ್ಮೃತಿಯೇ ಜನ ಜಾಗೃತಿಯು ವಿಶ್ವಶಾಂತಿ ಭಾವನ
ನಿನ್ನ ಪಡೆದ ವೀರಮಾತೆ ಭಾರತಾಂಬೆ ಧನ್ಯಳು
ನಿನ್ನ ತೆರನ ಗುಣವ ಪಡೆಯಲೆಮ್ಮ ಸೌಜನ್ಯವು ||೧೧||

ನಿನ್ನ ಪಥದಿ ಸಾಗುತಿಹುದೆ ನಾವು ಕೊಡುವ ಕಾಣಿಕೆ
ನಿನ್ನ ತತ್ವ ಬೆಳಗಿಸುವದೆ ನಮ್ಮ ಹೊಣೆಗಾರಿಕೆ
ಭಾರತೀಯರಜ್ಞತೆಗೆ ನಿನ್ನ ಉದಯವೆಂದಿಗೋ
ಭಾರತೀಯ ಬಾಲರಿಗೆಲ್ಲ ಅವನು ಕಾಣುವದೆಂದಿಗೋ ||೧೨||

ಓ ಮಹಾತ್ಮ ನಿನ್ನ ಚರಿತೆ ಎಂತು ಎಂದು ಪೊಗಳಲಿ?
ನಿನ್ನ ಆದರ್ಶವಿಲ್ಲದೆ ಯಾವಕಾರ್ಯ ಮಾಡಲಿ?
ರಾಷ್ಟ್ರಪಿತನೆ ಲೋಕ ಪಿತನೆ ನಿನಗೆ ಬಾಗಿ ನಮಿಸುವೆ
ರಾಷ್ಟ್ರಕಾಗಿ ಸೇವೆ ಸಲ್ಲಿಸಲು ತನುಮನಧನವ ಬೇಡುವೆ ||೧೩||

ನಿನ್ನ ಆತ್ಮ ಶಾಂತಿಗಾಗಿ ಶ್ರದ್ಧಾಂಜಲಿಯ ಸುರಿಸುವೆ
ನಿನ್ನ ಜನ್ಮವಾಗಲೆಂದು ದೇವರೆದುರು ಬೇಡುವೆ
ನಿನ್ನ ಜನನದಿಂದ ಮತ್ತೆ ನವೀನ ಸೃಷ್ಟಿಯಾಗಲಿ
ನಿನ್ನ ಮನನದಿಂದ ಭಾರತ ಸುಶಾಂತಿ ರಾಷ್ಟ್ರವಾಗಲಿ ||೧೪||

**ಸ್ವರ್ಗೀಯ ಪೂಜ್ಯ ಮಹಾತ್ಮಾ ಗಾಂಧಿಜೀಕಿ ಜೈ!**

ಬರೆದವರು:- **ಕುಮಾರಿ ಪ್ರೇಮಾ ಮಂಗಳೂರ**
(೧೧ನೇ ವರ್ಗ) ವನಿತಾ ಹೈಸ್ಕೂಲ

ಆತ್ಮ ವೃತ್ತಾಂತ

# ರೂಪಾಯಿ

ಲೇ— ವ್ಹಿ. ಜೆ. ಪಾಟೀಲ (೯ನೇ ವರ್ಗ)

ಯಾರು ಸಾಧಾರಣವಾಗಿ ಆತ್ಮಕತೆಯನ್ನು ಬರೆದಿಡುವದಿಲ್ಲ ಶ್ರೇಷ್ಠವಿದ್ದವರು ಬರೆದಿಡುವರು ಅದರಲ್ಲಿ ನಾನು ಒಬ್ಬಳು ನಾನು ಅಮೇರಿಕಾ ದೇಶದ ಮೇಕ್ಸಿಕೋ ಪ್ರದೇಶದಲ್ಲಿಯ ಒಂದು ಕಣಿವೆಯುಲ್ಲಿ ಇರುತ್ತಿದ್ದೆನು ನನ್ನ ಸಂಗಡ ಅಕ್ಕ-ತಂಗಿಯರು ಇರುತ್ತಿದ್ದರು. ನನ್ನ ಬಣ್ಣ ಕಪ್ಪು ಇತ್ತು. ನಾವೆಲ್ಲರು ತಾಯಿಯ ತೊಡೆಯ ಮೇಲೆ ಆಡುತ್ತಿದ್ದೆವು ಆದರೆ ಈ ಆನಂದವು ಬಹಳ ದಿನಗಳ ವರೆಗೆ ಉಳಿಯಲಿಲ್ಲ. ಒಂದುದಿನ ಕೂಲಿಕಾರನ ಮುಖಾಂತರ ತಾಯಿಯ ಕೋಮಲವಾದ ತೊಡೆಯನ್ನು ಬಿಡಬೇಕಾಯಿತು. ಆ ಸಮಯದಲ್ಲಿ ದುಃಖವಾಯಿತು ಪುನಃ ನನ್ನನ್ನು ಬೆಂಕಿಯಲ್ಲಿ ಹಾಕಿದನು. ಆಗ ನನಗೆ ಆದ ಕಷ್ಟವನ್ನು ವರ್ಣಿಸಲಾರೆ, ಬಹಳ ಉಷ್ಣತೆಯ ಮೂಲಕ ನನ್ನ ಮೈಯು ಕರಗಿ ಹೋಯಿತು. ಸ್ವಲ್ಪ ಹೊತ್ತಿನಲ್ಲಿ ಪುನಃ ತಣ್ಣಗಾಗಿ ಬೆಳ್ಳಿಯ ಹೆಸರಿನಿಂದ ಹೊರಗೆ ಬಂದೆ.

ಕ್ರಿ. ಶ. ೧೮೪೦ ರಲ್ಲಿ ಭಾರತಕ್ಕೆ ಬಂದೆ. ಪುನಃ ಅಕ್ಕಸಾಲಿಗನ ಮನೆಗೆ ಹೋದೆನು. ಅಲ್ಲಿ ಅಕ್ಕಸಾಲಿಗನು ನನಗೆ ನಾಮಕರಣ ಮಾಡಿದನು. ಬಾಲ್ಯದಲ್ಲಿಯ ಎಲ್ಲ ಘಟನೆಗಳು ನನಗೆ ನೆನಪು ಇರುತ್ತವೆ. ಬಾಲ್ಯ ಕಾಲದಲ್ಲಿ ಬಹಳ ಸುಂದರ ಹೊಳಪುಳ್ಳವಳಿದ್ದೆನು. ಪ್ರತಿಯೊಬ್ಬ ವ್ಯಕ್ತಿಯು ನನ್ನ ಆ ಸುಂದರತೆಯನ್ನು ಕಂಡು ಮುಗ್ಧನಾಗುತ್ತಿದ್ದನು. ಆದರೆ ಬಹಳ ಜನರ ಸಂಪರ್ಕದಿಂದ ಮತ್ತು ಕಠೋರತನದಿಂದ ಈಗ ನನ್ನ ಬಣ್ಣ ಕಪ್ಪು ಆಗಿದೆ. ನಾನು ರೂಪಾಯಿ ಆಗಿ ಕಲಕತ್ತಾ, ಮುಂಬಯಿ, ಮದ್ರಾಸ ಇವುಗಳ ನಡುವೆ ಪ್ರವಾಸ ಮಾಡಿದೆನು ಮತ್ತು ಎಷ್ಟೋ ಸೃಷ್ಟಿಸೌಂದರ್ಯವನ್ನು ನೋಡಿದೆನು. ನಾನು ಬ್ಯಾಂಕಿನಲ್ಲಿ ಇರುತ್ತೇನೆ. ಮತ್ತು ಹೆಣ್ಣುಮಕ್ಕಳ ಕೋಮಲವಾದ ಪರ್ಸಿನಲ್ಲಿ ಇರುತ್ತೇನೆ. ಶ್ರಮಜೀವಿ ಮನುಷ್ಯನ ಕಿಸೆಯುಲ್ಲಿ ಇರುತ್ತೇನೆ.

ಒಮ್ಮೆ ನನಗೆ ಅನೇಕ ಸಂಕಟಗಳನ್ನು ಎದುರಿಸುವ ಪ್ರಸಂಗವೂ ಬಂತು. ಚೀನ ಅಂಗಡಿಕಾರನು ಅತ್ಯಂತ ಹೀನವಾದ ಸ್ಥಿತಿಯಲ್ಲಿ ತಂದನು. ಎಷ್ಟೋ ವರ್ಷಗಳ ಹಿಂದೆ ನೆಲದೊಳಗೆ ನನ್ನನ್ನು ಹುಗಿದು ಇಟ್ಟಿದ್ದನು. ಆದರೆ ಕಳ್ಳರು ನನ್ನನ್ನು ಉದ್ಧಾರ ಮಾಡಿದರು. ಅಂಗಡಿಕಾರರು ನನ್ನನ್ನು ತೆಗೆದುಕೊಳ್ಳುವಾಗಕಲ್ಲಮೇಲೆ ಬಡೆದು ಪರೀಕ್ಷೆ ಮಾಡುತ್ತಾರೆ. ಆಗ ನನಗೆ ಬಹಳ ದುಃಖವಾಯಿತು. ಚೀರಲು ಪ್ರಾರಂಭ ಮಾಡಿದೆನು, ಅಷ್ಟರಲ್ಲಿ ಅಂಗಡಿಕಾರನು ಕಬ್ಬಿಣದ ತಿಜೋರಿಯಲ್ಲಿ ಇಟ್ಟನು. ಅವನಿಗೆ ನನ್ನ ಅವಶ್ಯಕತೆ ಇದ್ದಾಗ ನನ್ನನ್ನು ಹೊರಗೆ ತೆಗೆಯುತ್ತಾನೆ.

ಆ ದಿವಸದಿಂದ ನಾನು ಎಲ್ಲೆಲ್ಲಿ ತಿರುಗಿದೆನೆಂದು ನನಗೆ ಗೊತ್ತಿಲ್ಲ. ನನ್ನ ಯಾತ್ರೆಯ ಅನುಭವಗಳ ವರ್ಣನೆಯನ್ನು ಎಷ್ಟು ಮಾಡಲಿ ? ಯಾರಾದರು ಕನ್ನನ್ನು ನೋಡಿದರೆ ತೆಗೆದುಕೊಳ್ಳುವ ಇಚ್ಛೆ. ಈಗ ನಾನು ಒಬ್ಬ ಬಡ ವಿಧವೆಯ ಹತ್ತರ ಇರುತ್ತೇನೆ. ಆಕೆಯು ನನಗೆ ಬಹಳ ಪ್ರೀತಿಯನ್ನು ಮಾಡುತ್ತಾಳೆ. ಆಕೆಯ ಸುಖದ ವಸ್ತು ನಾನೇ ಆಗಿರುತ್ತೇನೆ.

ನಾನು ಬಹಳ ಮಹತ್ವವುಳ್ಳ ವಸ್ತು ಜಗತ್ತಿನ ಸುಖವು ನನ್ನ ಮೇಲೆ ಆಧಾರವಾಗಿದೆ ಸಾಯುವ ಮನುಷ್ಯನಿಗೆಜೀವನ ಕೊಡುವ ವಸ್ತು ನಾನೇ ಆಗಿದ್ದೇನೆ. ಹಸಿದವರಿಗೆ ಅನ್ನವನ್ನು ನಾನು ಕೊಡುತ್ತೇನೆ. ನನ್ನನ್ನು ಕೊಟ್ಟು ಮನರಂಜಕವಾದ ವಸ್ತುಗಳನ್ನು ತರುತ್ತಾರೆ. ಮತ್ತು ದೊಡ್ಡ ಕಟ್ಟಡಗಳನ್ನು ಕಟ್ಟಿಸುತ್ತಾರೆ. ನನ್ನಿಂದಲೆ ಎಲ್ಲರೂ ಸುಖಿಗಳು ಆಗುತ್ತಾರೆ. "ದುಡ್ಡೆ-ದೊಡ್ಡಪ್ಪ" ಎಂಬುವಂತೆ ನಾನು ಯಾರ ಕಡೆಗೆ ಇರುತ್ತೇನೊ, ಜನರು ಅವರನ್ನು ಹೊಗಳುತ್ತಾರೆ. ನಾನೆ ಎಲ್ಲರಕ್ಕಿಂತ ಹೆಚ್ಚಿನವಳು ನಾನೇ ಭಾಗ್ಯವಾನಳು ನನ್ನ ಹೆಸರು ರೂಪಾಯಿ

# ನಾವು ಕೈಕೊಂಡ ಶೈಕ್ಷಣಿಕ ಪ್ರವಾಸ

**ಬರೆದವರು:— ಸುಶಿಲಾ ಹಂದಿಗೋಳ**

ಮನುಷ್ಯನು ಪರಿವರ್ತನಶೀಲ ಪ್ರಾಣಿಯು. ಒಂದೇ ಸ್ಥಾನ, ಒಂದೇ ಸ್ಥಿತಿ, ಒಂದೇ ವಾತಾವರಣವನ್ನು ಅವನು ಇಚ್ಛಿಸುವದಿಲ್ಲ. ಅವನು ಆಗ ಬೇರೆ ಹೊಸತನವೊಂದನ್ನು ಅಪೇಕ್ಷಿಸುತ್ತಾನೆ. ಇದಕ್ಕಾಗಿ ಒಂದು ಸ್ಥಾನ ಬಿಟ್ಟು ಬೇರೊಂದು ಸ್ಥಾನಕ್ಕೆ ಹೋಗಲು ಅಪೇಕ್ಷಿಸುತ್ತಾನೆ. ಅಲ್ಲಿಯ ನವನೂತನ ಶೋಭೆಯನ್ನು ನೋಡಿ ಆನಂದಿಸುತ್ತಾನೆ. ಇದರಿಂದ ಹೊಸ ಉತ್ಸಾಹವನ್ನು ಧರಿಸಿ ಮತ್ತೆ ತನ್ನ ಕರ್ತವ್ಯದ ಕಡೆಗೆ ಗಮನ ಕೊಡುತ್ತಾನೆ. ಪ್ರವಾಸವು ಹೊಸ ಉತ್ಸಾಹದ ಹೊಸ ಚೇತನದ ದ್ಯೋತಕ.

ನಮ್ಮೆಲ್ಲರಿಗೂ ಧಾರವಾಡದಲ್ಲಿಯೇ ಇದ್ದು ಮನಸ್ಸೆಲ್ಲ ನಿರುತ್ಸಾಹದಿಂದ ತುಂಬಿದ್ದಿತು. ದಿನಾಲು ಶಾಲೆ, ಅಭ್ಯಾಸ, ಮನೆ ಇವು ಮೂರರೊಡನೆಯೇ ನಾವು ಬಡಿದಾಡಬೇಕಾಗುತ್ತಿತ್ತು. ಅಂತೆಯೇ ನಾವೆಲ್ಲರೂ ಪಶ್ಚಿಮ ದಂಡೆಯ ಮಲೆಯೊಂದರಲ್ಲಿ ಇರುವ ದಾಂಡೇಲಿಗೆ ಹೋಗಲು ನಿರ್ಧರಿಸಿದೆವು. ದಿ. ೩೦-೧೨-೫೯ ರಂದು ವಿದ್ಯಾರ್ಥಿನಿಯರೂ, ಗುರುಗಳೂ ಹೋಗುವದಾಗಿ ನಿರ್ಧಾರವಾಯಿತು. ಬೆಳಗು ಮುಂಜಾನೆ ೫ ಗಂಟೆಗೆ ಸ್ಟೇಶನ್ನ ತಲುಪಿದೆವು. ಸ್ಟೇಶನ್ನವೆಲ್ಲಾ ವಿದ್ಯಾರ್ಥಿನಿಯರ ಮಾತುಕತೆಗಳಿಂದ ತುಂಬಿದ್ದಿತು.

ಗಾಡಿಯಲ್ಲಿ ಕುಳಿತಾಗ ಅನೇಕ ಜನರ ಪರಿಚಯವಾಗುತ್ತದೆ. ಸ್ನೇಹ ಬೆಳೆಯುತ್ತದೆ. ಪ್ರತಿಯೊಬ್ಬರು ತಮ್ಮ ತಮ್ಮ ನಿಲ್ದಾಣ ಬಂದೊಡನೆ ಇಳಿದು ಬಿಡುತ್ತಾರೆ. ಆ ಮೇಲೆ ನಾವೆತ್ತೋ ! ಅವರೆತ್ತೋ !! ಗಾಡಿ ಎತ್ತೋ !!! ಹೀಗೆ ಮನಸ್ಸಿನಲ್ಲಿ ಹೊಯ್ದಾಟ ನಡೆದಾಗ ಇಂಜಿನಿನ ಸಪ್ಪಳ ನಮ್ಮನ್ನೆಚ್ಚರಿತು. ಗಾಡಿಯಲ್ಲಿ ಸಾಮಾನು ಹೇರಿ ಕುಳಿತುಕೊಂಡೆವು. ಗಾಡಿಯು ಮುಂದೆ ಸಾಗಿತು.

ರಾತ್ರಿ ಇನ್ನೂ ಇದ್ದುದರಿಂದ ನಿಸರ್ಗ ಸೌಂದರ್ಯವು ಅಷ್ಟೊಂದು ಲಭಿಸಲಿಲ್ಲ. ೨-೩ ನಿಲ್ದಾಣಗಳನ್ನು ದಾಟುವಷ್ಟರಲ್ಲಿಯೇ ಪೂರ್ವಾಂಗನೆಯ ಮಡಿಲಿನಿಂದ ದಿನಕರನ ಆಗಮನವಾಯಿತು. ಕೆಂಪು ಛಾಯೆ ಎಲ್ಲೆಡೆ ಪಸರಿಸಿತ್ತು. ಬೆಳ್ಳಿಚಿಕ್ಕೆ ನಮ್ಮ ಮಾರ್ಗದರ್ಶಕವಾಗಿತ್ತು. ಅಳ್ನಾವರ ಸ್ಟೇಶನ ಬಂದೊಡನೆ ಗಾಡಿಯಿಂದ ಇಳಿದು ದಾಂಡೇಲಿಯ ಗಾಡಿ ಹಿಡಿದೆವು. ಗಾಡಿಯಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿನಿಯೂ, ಗುರುಗಳೂ ತಮ್ಮದೇ ಆದ ಆಟಗಳಲ್ಲಿ ಮಗ್ನರಾಗಿದ್ದರು. ದಾಂಡೇಲಿ ಬಂದೊಡನೆ ಎಲ್ಲರೂ ಇಳಿದು ಸಾಮಾನುಗಳನ್ನೆಲ್ಲ ಗಾಡಿಯೊಂದರಲ್ಲಿ ಒಟ್ಟಿ ಹಿಂದಿನಿಂದ ಹೊರಟೆವು. ಎಡಕ್ಕೆ, ಬಲಕ್ಕೆ ಹಿಂದೆ, ಮುಂದೆ ಇಳಿದು ನೋಡಿದಲ್ಲೆಲ್ಲ ಬಿದಿರಿನ ಗಿಡಗಳೇ ಗಿಡಗಳು, ಕಟ್ಟಿಗೆಯ ತೊಲೆಗಳೇ ತೊಲೆಗಳು. ಈ ಮೊದಲೇ ನಿರ್ಧರಿಸಿದಂತೆ ಎಲ್ಲರೂ "ಜನತಾ ವಿದ್ಯಾಲಯ ಹೈಸ್ಕೂಲನ್ನು ತಲುಪಿದೆವು. ಗಾಡಿಯಲ್ಲಿಯ ಆಯಾಸದಿಂದಲೋ, ಹಸಿವಿನಿಂದಲೋ ಪ್ರತಿಯೊಬ್ಬರ ಮುಖವು ನಿಸ್ತೇಜವಾಗಿತ್ತು. ೧೫–೨೦ ನಿಮಿಷಗಳ ವಿಶ್ರಾಂತಿಯ ನಂತರ ಊಟದ ವ್ಯವಸ್ಥೆ ಪ್ರಾರಂಭವಾಯಿತು. ಎಲ್ಲರೂ ಪೇಪರ ಮಿಲ್ಲಿನ ಕಡೆಗೆ ಹೊರಟೆವು.

ಮಿಲ್ಲಿನ ಕೆಲಸಗಾರರಲ್ಲಿಯೇ ಒಬ್ಬರನ್ನು ಮಾರ್ಗದರ್ಶಕರನ್ನಾಗಿ ಮಾಡಿಕೊಂಡು ಹೊರಟೆವು. ಮೊದಲು ಯಂತ್ರವೊಂದರಲ್ಲಿ ಬಿದಿರನ್ನು ಹಾಕುತ್ತಿದ್ದರು. ಅಲ್ಲಿ ಅದು ಪುಡಿಯಾಗಿ ಮತ್ತೊಂದು ಯಂತ್ರಕ್ಕೆ ಹೋಗುತ್ತಿತ್ತು. ಅಲ್ಲಿ ಸಣ್ಣ ಪುಡಿ, ದೊಡ್ಡ ಚೂರುಗಳು ಬೇರೆ ಬೇರೆಯಾಗಿ ಬೇರೊಂದು ಯಂತ್ರಕ್ಕೆ ಹೋಗಿ ಅಲ್ಲಿ ಪಲ್ಪಿನೊಡನೆ ಬೆರೆತು ನೀರಾಗಿ ಕಾಲುವೆಯ ಮುಖಾಂತರ ಬೇರೊಂದು ಸ್ಥಾನ ತಲುಪಿ ಯಂತ್ರದ ಮುಖಾಂತರವಾಗಿ ಮಾರ್ಪಡುತ್ತಿತ್ತು. ಅಲ್ಲಿ ಎಲ್ಲಕ್ಕೂ ಹೆಚ್ಚು ನಮ್ಮ ಮನಸ್ಸನ್ನು ಆಕರ್ಷಿಸಿದ್ದೆಂದರೆ ಕಾಗದಗಳನ್ನು ಎಣಿಸುವದು. ನಿಮಿಷದಲ್ಲಿ ಅವರು ಎಷ್ಟೋ ಕಾಗದಗಳನ್ನು ಎಣಿಸುತ್ತಿದ್ದರು. ಅಲ್ಲಿ ಎಲ್ಲಿ ನೋಡಿದಲ್ಲಿ ಕಾಗದಗಳ ಬಂಡಲುಗಳೇ ಕಣ್ಣಿಗೆ ಬೀಳುತ್ತಿದ್ದವು. ಇಡಿ ಕಾಗದ ಕಾರಖಾನೆ ನೋಡಲು ೧॥-೨ ತಾಸು ಹಿಡಿಯಿತು. ಇಡೀ ಕಾರಖಾನೆಯನ್ನು ನೋಡುವದೆಂದರೆ ಎರಡು ಮೈಲು ಕ್ರಮಿಸಿದಂತಾಗುವದು. ಹೊರಗೆ ಬಂದ ಮೇಲೆ ಅಲ್ಲಿಯೇ ಇದ್ದ ಕ್ಯಾಂಟಿನೊಂದರಲ್ಲಿ ಎಲ್ಲರಿಗೂ ಚಹದ ಸರಬರಾಯಿ ಆಯಿತು. ಅಲ್ಲಿಂದ ಮುಂದೆ ಮ್ಯಾಂಗನೀಜ ಫ್ಯಾಕ್ಟರಿಗೆ ಬಂದೆವು.

ಮ್ಯಾಂಗನೀಜ ಫ್ಯಾಕ್ಟರಿಗೆ ಬಂದ ಮೇಲೆ ಎರಡು ಭಾಗಗಳಾದವು. ನಾವು ಮಾರ್ಗದರ್ಶಕರನ್ನು ಕರೆದುಕೊಂಡು ಲಿಫ್ಟಿನ ಮುಖಾಂತರ ಫ್ಯಾಕ್ಟರಿಯ ಮೇಲೆ ಹೋದೆವು. ದೊಡ್ಡದೊಂದು ಭಟ್ಟಿಯಲ್ಲಿ ಮ್ಯಾಂಗನೀಜ ಶುದ್ಧೀಕರಣ ನಡೆಯುತ್ತಿತ್ತು. ಅದನ್ನು ನೋಡಿ ಮೇಲೆ ಹೋಗಿ ಶುದ್ಧ ಮ್ಯಾಂಗನೀಜವನ್ನು ತಯಾರು ಮಾಡುವ ವಿಧಾನವನ್ನು ತಿಳಿದುಕೊಂಡು ಕೆಳಗೆ ಬಂದೆವು. ಮೋಟಾರ ಬರಲು ಇನ್ನೂ ವೇಳೆ ಇದ್ದುದರಿಂದ ಅಲ್ಲಿಯೇ ಹರಟೆ ಹೊಡೆಯುತ್ತ ಕುಳಿತೆವು. ನಮ್ಮ ಮಾತಿನಲ್ಲಿಯೇ ನಾವು ಮಗ್ನರಾದಾಗ ಮೋಟಾರ ಹಾರ್ನಿನ ಶಬ್ದವು ನಮ್ಮನ್ನೆಚ್ಚರಿಸಿತು. ಎಲ್ಲರೂ ನಾ ಮುಂದೆ, ನೀ ಮುಂದೆ ಎಂದು ಧುಮುಕುವವರೇ ಅಂತೂ ೭-೧೫ ಕ್ಕೆ ನಮ್ಮ ಬೀಡಾರವನ್ನು ತಲುಪಿದೆವು. ವಿಶ್ರಾಂತಿಯ ಅಂತರ ಊಟಕ್ಕೆ ಕುಳಿತೆವು. ಊಟವಾದ ಮೇಲೆ ಸ್ವಲ್ಪ ಹೊತ್ತು ಮಾತಾಡುತ್ತ ಕುಳಿತೆವು. ಮಲಗುವದೊಂದೇ ತಡ ಎಲ್ಲರೂ ನಿದ್ರಾಂಗನೆಯ ಮಡಿಲನ್ನು ಸೇರಿದೆವು.

ಮರುದಿನ ೫ ಗಂಟೆಗೇ ಎದ್ದು ಪ್ರಾತಃರ್ವಿಧಿಗಳನ್ನು ತೀರಿಸಿಕೊಂಡೆವು. ೭ ಗಂಟೆಗೆ ಚಹಸೇವನೆಯಾದ ನಂತರ ಎಲ್ಲರೂ ಪ್ಲಾಯವುಡ್ ಫ್ಯಾಕ್ಟರಿಗೆ ಹೊರಟೆವು.

ಪ್ಲಾಯವುಡ್ ಫ್ಯಾಕ್ಟರಿಯಲ್ಲಿ ಮತ್ತೆ ಮೊದಲಿನಂತೆ ಎರಡು ಭಾಗಗಳಾದವು. ಪ್ಲಾಯವುಡ್ ಫ್ಯಾಕ್ಟರಿಯ ಕೆಲಸಗಾರರಲ್ಲಿಯೇ ಒಬ್ಬರನ್ನು ಮಾರ್ಗದರ್ಶಕರನ್ನಾಗಿ ಮಾಡಿಕೊಂಡು ಹೊರಟೆವು. ಗಿರಾಕಿಗಳ ದೊಡ್ಡ ದೊಡ್ಡ ಬೊಡ್ಡೆಗಳನ್ನು ತಂದು ಅವುಗಳ ಮೇಲಿನ ಸಿಪ್ಪೆ ತೆಗೆದು ಅವುಗಳನ್ನು ಯಂತ್ರದ ಬಾಯಿಗೆ ಕೊಡುತ್ತಿದ್ದರು. ಯಂತ್ರದ ಸಹಾಯದಿಂದ ಅಲ್ಲಿ ಅವು ತೆಳ್ಳಗಾಗಿ ದೊಡ್ಡ ದೊಡ್ಡ ಹಲಗೆಗಳಾಗಿ ಮಾರ್ಪಡುತ್ತಿದ್ದವು. ಮುಂದಿನ ಯಂತ್ರದಲ್ಲಿ ಹುಳುಕಾದ ಕೆಲಸಕ್ಕೆ ಬಾರದ ತುಂಡನ್ನು ಕತ್ತರಿಸಿ ಉಳಿದುದನ್ನು ಮುಂದಕ್ಕೆ ಕಳಿಸುತ್ತಿದ್ದರು. ಮುಂದಿನ ಯಂತ್ರದಲ್ಲಿ ಈ ಹಲಗೆಗಳನ್ನು ಒಂದಕ್ಕೊಂದು ಜೋಡಿಸುತ್ತಿದ್ದರು. ಅವುಗಳ ತುದಿಗೆ ಆಗ ಅಂಟಿನಂತಹ ಜಿಗುಟು ಪದಾರ್ಥ ಅಂಟಿಸಿತ್ತು. ಮುಂದೆ ಮುಂದೆ ಹೋದಂತೆ ಟೇಬಲ್ಲಿನ ಹಲಗೆ, ಕೇರಮ್ಮಿನ ಹಲಗೆ, ರಾವುಂಡ ಹಲಗೆ ಇನ್ನೂ ಎಷ್ಟೋ ಬಗೆಯ ಸಾಮಾನುಗಳನ್ನು ತಯಾರಿಸುತ್ತಿದ್ದರು. ಹೊರಗೆ ಬಂದ ಮೇಲೆ ನಮ್ಮೆಲ್ಲರ ಫೋಟೋ ತೆಗೆದದ್ದಾಯಿತು. ಮುಂದೆ ಕಾಲ್ನಡಿಗೆಯಿಂದ ಎಲ್ಲರೂ ಕಾಳಿ ನದಿಯಲ್ಲಿ ಮನಸ್ವಿಯಾಗಿ ವಿಹರಿಸಿದೆವು. ಪ್ರಕೃತಿಯ ಮಡಲಿನಲ್ಲಿ ನಿತ್ಯನೂತನವಾಗಿ ಹರಿಯುತ್ತಿದ್ದ ಕಾಳೀ ನದಿಯ ವಿಹಾರದಲ್ಲಿ ಬಂದವರೆಲ್ಲರ ೨-೩ ಫೋಟೋ ತೆಗೆದದ್ದಾಯಿತು. ಈ ವೇಳೆಗೆ ಅಜಂತಾ ಹೊಟೆಲ್ಲು ನಮ್ಮನ್ನು ಕೈ ಬೀಸಿ ಕರೆಯುತ್ತಿದ್ದಿತು. ಖಾನಾವಳಿಯಲ್ಲಿ ಊಟವಾದ ಮೇಲೆ ಮೋಟಾರಿನಲ್ಲಿ ಕುಳಿತು ಮತ್ತೆ ನಮ್ಮ ಗೂಡನ್ನು ಸೇರಿದೆವು. ಶಾಲೆಯ ಬಯಲಿನಲ್ಲಿ ಎಲ್ಲರೂ ಬಗೆಬಗೆಯ ಆಟವಾಡತೊಡಗಿದೆವು. ಗುರುಗಳೆಲ್ಲರೂ ಆಟದಲ್ಲಿ ಭಾಗ ವಹಿಸಿದ್ದರಿಂದ ಆಟಕ್ಕೆ ಹೆಚ್ಚು ಕಳೆ ಏರಿತ್ತು. ಆಟದಲ್ಲಿಯೇ ಮಗ್ನರಾದಾಗ ಮೋಟಾರ ಸಪ್ಪಳ ನಮ್ಮನ್ನೆಚ್ಚರಿಸಿತು. ಆ ಮೇಲೆ ಗಡಿಬಿಡಿಯಿಂದ ನಮ್ಮೆಲ್ಲರ ಸಾಮಾನುಗಳನ್ನು ಹೇರಿ ಧಾರವಾಡದ ಕಡೆಗೆ ಅಭಿಮುಖರಾದೆವು.

ಮೋಟಾರಿನಲ್ಲಿ ಕುಳಿತಾಗ ಅನೇಕ ಭಾವಗೀತೆಗಳ, ಭಕ್ತಿಗೀತೆಗಳ, ಪ್ರಾರ್ಥನೆಗಳ ಸುರಿ ಮಳೆಯಾಯಿತು. ದಾರಿಯಲ್ಲಿಯ ಬಿದಿರು ಗಿಡಗಳು ಕೈ ಬೀಸಿ ಮತ್ತೆ ದಾಂಡೇಲಿಗೆ ಆಹ್ವಾನಿಸುತ್ತಿದ್ದವು. ತಿರುಗಿ ಬರುವಾಗ ಏನೋ ಕಳೆದುಕೊಂಡಂತೆ ಭಾಸವಾಗುತ್ತಿತ್ತು. ನಮ್ಮ ಮಾತು ಕತೆ ಹಾಡುಗಳಲ್ಲಿ ನಮ್ಮನ್ನು ನಾವೇ ಮರೆತು ತಲ್ಲೀನರಾದಾಗ City-Light ಎಂಬ ಹಲಗೆ ಧಾರವಾಡ ಬಂದಿತೆಂಬ ಸೂಚನೆ ಕೊಟ್ಟಿತು. ಧಾರವಾಡ ಗೆಸ್ಟಹೌಸಿನ ಹತ್ತಿರ ಎಲ್ಲರೂ ಇಳಿದು ನಮ್ಮ ಸಾಮಾನು ಸಹಿತವಾಗಿ ಮನೆಯ ಕಡೆ ಹಾದಿ ಹಿಡಿದೆವು.

ಎರಡೇ ದಿನದಲ್ಲಿ ಪ್ರಕೃತಿಯ ಮಡಲಿನಲ್ಲಿ ಸ್ವೇಚ್ಛೆಯಾಗಿ ವಿಹರಿಸಿದ್ದ ಆ ಸಕ್ಕರೆಯ ಸವಿ ನೆನಪು ಮನಃಪಟಲದಿಂದ ಇನ್ನೂ ಮರೆಯಾಗಿಲ್ಲ. ಕಾಗದ ಕಾರಖಾನೆ, ಕಾಳೀ ನದಿ, ಮ್ಯಾಂಗನೀಜ ಫ್ಯಾಕ್ಟರಿ, ಇನ್ನೂ ಕೈ ಮಾಡಿ ಕರೆದಂತೆ ಕನಸಾಗುತ್ತಲಿದೆ. ಆ ಕನಸು ನನಸಾಗಲು ಇನ್ನೂ ಅದೆಷ್ಟು ದಿನಗಳು ಬೇಕೋ ಏನೋ !

# ಗಾಂಧೀಜಿ

ಬರೆದವರು : ಎಮ್. ಜಿ. ಪೈ

ಗೀತೆಯ ಎರಡನೇ ಅಧ್ಯಾಯದಲ್ಲಿ ಶ್ರೀಕೃಷ್ಣ ಹೇಳುತ್ತಾನೆ:—"ಯ ಯೇನಂ ವೆತ್ತಿ ಹಂತಾರಂ ಯಶ್ಚೈನಂ ಮನ್ಯತೆ ಹತಮ್॥ ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೆ ॥

ಆತ್ಮನ ಕೊಲ್ಲುವವನು ಕೊಲ್ಲಲ್ಪಟ್ಟವನು ಎಂದು ತಿಳಿಯುವರಿಬ್ಬರೂ ಇವನು ಕೊಲ್ಲುವುದೂ ಇಲ್ಲಾ ಕೊಲ್ಲಲ್ಪಡುವದೂ ಇಲ್ಲ ಎಂಬುದನ್ನು ಅರಿಯರು.

ಗಾಂಧಿಜಿಯನ್ನು ಕೊಂದನೆನ್ನುವವರು ಕಣ್ದೆರೆದು ನೋಡಿದರೆ ಗಾಂಧೀಜಿ ಇದ್ದಾರೆಂಬ ಕಲ್ಪನೆ ಬಂದೀತು. ಅದಕ್ಕೆ ಹೇಳುವದು ಗಾಂಧಿಜಿ ಒಂದು ವ್ಯಕ್ತಿಯಾಗಿರಲಿಲ್ಲ. ಅವರು ನಾಡಿನ ಒಂದು ಸಕ್ತಿಯಾಗಿದ್ದರು ಎಂದು ಈ ಬಡಕಲ ದೇಹದ ಬೈರಾಗಿ ಹೆಸರು ಮೂಲೆ ಮೂಲೆಗಳಲ್ಲಿಯೂ ಹಬ್ಬಿದೆ. ಇವರ ಹೆಸರನ್ನು ಎತ್ತಿದೊಡನೆ ಅವರ ಅಸಂಖ್ಯ ಚಿತ್ರಗಳು ಮತ್ತು ಆವರ ಅನೇಕ ಸಾಮಾಜಿಕ ಆರ್ಥಿಕ ನೈತಿಕ ಕಾರ್ಯಗಳು ನಮ್ಮ ಕಣ್ಣಮುಂದೆ ಕಟ್ಟುತ್ತವೆ. ಸರೋಜಿನಿ ನಾಯುಡು ಇವರಿಗೆ ಅನಂತ ರೂಪಿಎಂದು ಕರೆದರು. ಇನ್ನು ಅನೇಕರು ನಗೆಗಾರ ಗಾಂಧಿ, ಹಟಮಾರ ಗಾಂಧಿ, ಸನ್ಯಾಸಿ ಗಾಂಧಿ ಹರಿಜನೋದ್ಧಾರಗಾಂಧಿ, ರಾಜಕಾರಣಿ ಗಾಂಧಿ ಖಾದಿ ಭಕ್ತ ಗಾಂಧಿ, ಮುಂತಾದ ಅನೇಕ ಬಿರುದುಗಳಿಂದ ಅಲಂಕರಿಸಿದ್ದಾರೆ. ಹೊಗಳಿದ್ದಾರೆ ಇವರು ಒಂದೇ ದಾರಿಯಿಂದ ನಡೆಯಲಿಲ್ಲಾ ತುಳಿಯ ಬೇಕಾದ ಧಾರಿಯನ್ನು ತುಳಿದರು, ಅವರ ಕೆಲಸ ಒಂದೇ ಎರಡೇ ಹೆಳಲಸಾಧ್ಯ. ಒಂದು ಖಾದಿಯೇ ಒಂದು ಹರಿಜನ ಸೇವೆಯೋ ಒಂದು ಅಸಹಕಾರವೇ ಶಾಸನೋಲ್ಲಂಘನವೇ? ಶಾಸನ ನಿರ್ಮಾಣವೇ ? ಭವಿಷ್ಕಾರವೆ? ಉಪವಾಸವೇ ? ಚಳವಳಿಯೇ ? ಸತ್ಯಾಗ್ರಹವೇ ? ಬ್ರಹ್ಮಚರ್ಯವೇ ? ಹಿಂದು ಮುಸಲ್ಮಾನರ ಐಕ್ಯವೆ ? ಒಂದು ವಿಧದಲ್ಲಿ ಒಂದು ರೂಪದಲ್ಲಿ ಇವೆಲ್ಲವುಗಳ ಪರಿಣಾಮವು ಗಾಂಧಿಜಿ ಯೆಂದರೆ ಹಿಂದುಸ್ತಾನ, ಹಿಂದುಸ್ತಾನವೆಂದರೆ ಗಾಂಧೀಜಿ. ಎಂಬಲ್ಲಿಗೆ ಬಂದು ನಿಂತಿತು.

ಇನ್ನು ಗಾಧೀಜಿಯವರ ಬಾಲ್ಯ ಯಾರಿಗೆ ತಾನೇ ಗೊತ್ತಿಲ್ಲ ಕೋಟಿ ಕೋಟಿ ಬಾಯಿಗಳಲ್ಲಿ ಮಹಾತ್ಮಾ ಗಾಂಧೀಕಿ ಜೈ ಎಂಬ ಪ್ರತಿಧ್ವನಿಯು ಇನ್ನೂ ಕೇಳಿ ಬರುತ್ತಲಿದೆ ಅವರು ಬಿದ್ದ ನೆಲದ ಮಣ್ಣು ಪವಿತ್ರವಾಗಿದೆ ಕೆಲವರು ದೇವರ ಅಂಗಾರದಂತೇ ಆ ಮಣ್ಣನ್ನು ಹಣೆಗೆ ಹಚ್ಚಿಕೊಳ್ಳುತ್ತಾರೆ.

"ಸತ್ಯ ಶೋಧನೆಯಲ್ಲಿ" ತಾವೇ ತಮ್ಮ ಜನನದ ಬಗ್ಗೆ ಹೀಗೆ ಬರೆದಿದ್ದಾರೆ. "ಮಾತಾ–ಪಿತೃಗಳ ಉದರದಲ್ಲಿ ಶಾಲಿವಾಹನ ಶಕೆ ೧೭೯೧ ನೆಯ ಭಾದ್ರಪದ ಬಹುಳ ದ್ವಾದಸಿ ದಿನ ಎಂದರೆ ೧೮೬೯ ನೆಯ ಅಕ್ಟೋಬರ ಎರಡೆಯ ತಾರೀಖಿನ ದಿನ ಪೋರಬಂದರದಲ್ಲಿ ನಾನು ಜನ್ಮ ಗ್ರಹಣಮಾಡಿದೆನು. "ಸತ್ಯ ಶೋಧನೆ" ಎಂಬ ಹೆಸರಿನಲ್ಲಿ ಬರೆದ ಇವರ ಆತ್ಮ ಚರಿತ್ರೆ ೩೦೦ ಪುಟದಷ್ಟು ಆಗಿದೆ.

ಬಾಲ್ಯದಲ್ಲಿಯೇ ಸತ್ಯವನ್ನು ಸಾಧಿಸಬೇಕೆಂಬ ಹಂಬಲ ಬೆಳೆದುಬಂದಿತ್ತು ೧೮೯೧ರಲ್ಲಿ ಬ್ಯಾರಿಷ್ಟರಾಗಿ ಭಾರತಕ್ಕೆ ಮರಳಿದರು. ಒಂದುಸಲ ಒಂದು ಖಟ್ಲೆಯ ನಿಮಿತ್ಯಕ್ಕಾನಿ ದಕ್ಷಿಣ ಆಫ್ರಿಕೆಗೆ ಹೋಗುವ ಪ್ರಸಂಗ ಬಂದಿತು. ದಕ್ಷಿಣ ಆಫ್ರಿಕೆಯಲ್ಲಿಯ ವರ್ಣದ್ವೇಷದ ಪೂರ್ಣ ಅನುಭವಿತವಾಯಿತು ಇವರ ಮನಸ್ಸು ಅಳುಕಿತು. ರಾಜಕೀಯ ಜೀವನಕ್ಕೆ ಆಫ್ರಿಕೆಯ ಅನುಭವವೇ ಅಡಿಗಲ್ಲಾಯಿತು. ಹಿಂದಿಯರಿಗೆ ಆಗುವ ಅನ್ಯಾಯಗಳ ವಿರುದ್ಧ ಕಾದಾಡುವದಕ್ಕಾಗಿ ನಾತಾಳದಿಂದ ಹಿಂದಿ ಕಾಂಗ್ರೆಸಿಗೆ ೧೮೯೪ ರಲ್ಲಿ ಜನ್ಮ ಕೊಟ್ಟರು: ಆಗಿನಿಂದ ಇವರಿಗೆ ಸೆರೆಮನೆಯಂತೆ ಪಾರತಂತ್ರದಲ್ಲಿದ್ದ ಹಿಂದುಸ್ತಾನವನ್ನು ಬಿಡಿಸಲೇ ಬೇಕೆಂದು ಪಣತೊಟ್ಟು ಸಮಾಜ ಸೇವೆಯ ಕಾರ್ಯದಲ್ಲಿ ಟೊಂಕಕಟ್ಟಿನಿಂತು ಮತ್ತು ಯಶಸ್ವಿಯಾದರು. ಇವರು ಬಿತ್ತಿದ್ದ ಬೀಜದ ಫಲವನ್ನು ನಾವೀಗ ಉಣ್ಣುತ್ತೇವೆ ಭಾರತವು ಸ್ವತಂತ್ರ್ಯವಾಗಿದೆ. ಭಾರತ ಮಾತೆಗೆ ಜಯವಾಗಲಿ! ಭಾರತಾಂಬೆಗೆ ಜಯವಾಗಲಿ। ಭಾರತದ ಪ್ರಜೆಗಳಿಗೆ ಜಯವಾಗಲಿ।

---

# ಆರತಿ ಪದ

ಆರತಿಯ ಮಾಡೋಣ ಬನ್ನಿ ದೇಶಭಕ್ತನಿಗೆ
ಭಾರತಾಂಬೆಯ ಪುತ್ರನಿಗೆ । ಆರತೀಯ ॥ ಪ ॥

ಕಳ್ಳತನವ ಮಾಡಿ ಮುಂದೆ ಸತ್ಯವನ್ನೇ ಹಿಡಿದಾ ।
ಇಂಥ ನಮ್ಮ ಸತ್ಯ ಪುರುಷ ಮತ್ತೆ ಸಿಗಲಾರ ।
ಕಷ್ಟ ನಷ್ಟ ಸಹಿಸಿ ನಡೆದು ದೇಶ ಭಕ್ತನಾದ ।
ದೇಶಬಂಧು ನಮ್ಮ ಜ್ಯೋತಿ ಮತ್ತೆ ಬೆಳಗಲಿ ॥ ೧ ॥

ಹರಿಜನೋದ್ಧಾರ ಮಾಡಿ ಮುಂದೆ ಸಾಗಿದಾ ।
ಸತಿಯಳನ್ನು ಹರುಷದಿಂದ ಮುಂದೆ ತಂದನು ।
ಧೀರೆಯಂತೆ ಎಲ್ಲ ಕೆಲಸ ಮಾಡಿ ಪೋದಳು ।
ಇಂಥ ನಮ್ಮ ಮಾತಾಪಿತೃಗೆ ಮತ್ತೆ ಬೆಳಗೋಣ ॥ ೨ ॥

ಹಗಲು ಇರುಳು ತನ್ನ ತಂತ್ರವನ್ನೆ ಮಾಡಿದಾ ।
ಇಂಥ ಮಾತು ತಾನು ಕಡೆಗೆ ಕೊನೆ ಗೊಳಿಸಿದಾ ।
ಒಂದೇ ಮಂತ್ರ ಒಂದೇ ತಂತ್ರವನ್ನೆ ಸಾಧಿಸಿದಾ ।
ಸಾಧಿಸಿದ ಮಹಾತ್ಮನಿಗೆ ನಂದಾ ಹಚ್ಚಿ ಬೆಳಗೋಣ ॥ ೩ ॥

ಸ್ವರಾಜ್ಯವನ್ನು ಶಾಂತೆಯಿಂದ ಮತ್ತೆ ಗಳಿಸಿದಾ ॥
ಕಂಡ ಕಂಡ ಕಡೆಗೆ ತಿರುಗಿ ಪ್ರಾಣವನ್ನೆ ಅರ್ಪಿಸಿದಾ ।
ತಂದೆಯಂಥ ಎಲ್ಲ ಗುಣವು ನಮಗೆ ಸಲ್ಲಲಿ ।
ಸಲ್ಲಿ ನಾವು ಇಂದಿನ ಈ ಆರತಿಯಲಿ ಬೆಳಗೋಣ ॥ ೪ ॥

ದೇಶದೂತ ಶಾಂತಿ ದೂತನನ್ನು ಸ್ಮರಿಸುವಾ ।
ಧೀರ ಪುರುಷ ಧಿಟ್ಟ ಪುರುಷನನ್ನು ಸ್ವಾಗತಿಸುವಾ ।
ಸೃಷ್ಟಿಯೊಳಗೆ ನಮ್ಮ ಗಾಂಧಿಯುನ್ನು ನೆನೆಯುವಾ ।
ಇಂಥ ಎಲ್ಲ ಗುಣಗಳೆಲ್ಲ ಎಲ್ಲರಿಗೂ ಸಲ್ಲಲಿ ॥ ೫ ॥

—**ವೇದವತಿ ಅಣ್ಣಿಗೇರಿ** Sts IX

# ಸುರಿದ ಮಳೆ

ದುಡುಕಿ ಮಿಡುಕಿ ಹುಡುಕಾಡಿ ಓಡಿ ಕಡಿಕರೆದು ನೋಡಿ
ಕೊನೆಗೆ ಸಿಟ್ಟಿನಿಂದ ಸೀಡಿಲೇರಿ ಬಂದು ಆರ್ಭಟದಿಂದ
ಎರಗಿದಳು ಮಣ್ಣು ಮನೆಗೆ.
ಮಿಂಚು ಮೇಘ ಮುಟ್ಟಾಟ ಮಾಡಿ ದಣಿದು ಆಕಾಶದಲ್ಲಿಯ
ಬೆವರನ್ನು ಹೊರಗೆ ಕಲ್ಲಿನಂತೆ ಸುರಿಸುತಿಹುದು
ಮಿಂಚ ವಂಚಿಸಲು ಮೋಡ ಹೊಂಚಿ ಮಳೆಯುಗುಂಟ
ಇಳೆಗಿಳಿಯೆ ವನದ ಮನದ ಚಿರಮೌನದ್ಯಾನ
ಸುರಗಾನ ತರಲಾಗಿ ಹರಿಯುತಿಹುದು.
ಅರೆಯುತಿಯ ಮಾತಿ ಸ್ವರಲಹರಿ ಲೀಲೆಯಾಗಿ
ದಿಕ್ಕನಷ್ಟ ಮಹಿಮರು ಸಪ್ತಸಾಗರದ ನೀರು ತುಂಬಿ
ಜಲದ ಜಾಲ ಜೇಕುಳಿಯು ತುಂಬಿ ಓಕುಳಿಯು
ಹಾಡುತಿಹುದು. ಮುಗಿಲು ಮೇಘ ಮುಖ ನೀಡಿ
ನಾಡು ಮುದ್ದಿಡಲು ಬುವಿ ಬಾನು ಜಗ್ಗುತಿಹುದು
ಗಗನ ಗಿರಿಯು ದರಿ ಕೊರೆಗಳಿಂದ ಝುರಿ
ತೊರೆಗಳಿಳಿಯುತಿಹುದು.
ನೆಲದ ಆಶೆ ಗಿಡಗಂಟಿಗಳು ಕುಡಿಯೊಡೆದು
ಬೆಳೆಯುತಿಹುದು
ಕಾಮಧೇನು ಸೊದೆಗೆಚ್ಚಲಿಂದ ಹಾಲ್ ಜೇನು
ಕರೆಯುತಿಹುದು
ಗಗನ ಗಂಗೆ ನೀರೆತ್ತಿ ತಾರೆ ನೀರೆಯರು
ಸುರಿಯುತಿಹರು.
ತುಂಬಿ ತುಳುಕಿದಾಕಾಶ ರಾಜನಾನಂದ ಬಾಷ್ಪ ವರುಷ
ಮೇಘ ಮಿಂಚಿನಾರುತಿಯನೆತ್ತಿ ಶೋಭಾನ ಹಾಡುತಿಹುದು
ತಾಳ ಗುಂಟ ಶಿತಿಕಂಠಗರಿಯು ತಾಂಡವ ನಾಡುತಿಹುದು

ಪಿ. ಆರ್. ಚನ್ನಗಿರಿ

# ನಗೆಹನಿ

ಬರೆದವರು : ಶೋಭಾ ಜೋಶಿ

ರಾಯರು:—ಲೊ ಗುಂಡು ಒಳ್ಳೆ ಕಾಫಿ ನೋಡಿ ಒಂದು ಕಪ್ಪು ತೆಗೆದು ಕೊಂಡು ಬಾ ತಗೊ ಈ ನಾಕಾಣೆ (ತರುವನು)

ಗುಂಡು:—ತಗೊರ್ರಿ ರಾಯರ ನಿಮ್ಮ ಕಾಫಿ

ರಾಯರು:—ಉಳಿದ ಚಿಲ್ಲರೆ ಎಲ್ಲಿಯೋ ?

ಗುಂಡು:—ಒಳ್ಳೆ ಕಾಫಿ ನೊಡಿ ತಾ ಅಂದ್ರೆಲ್ಲಾ ಮೂರು ಹೋಟ್ಲ್ಲ ಕುಡಿದು ದೋಡಿಯೇ ಇದನ್ನು ತಂದಿನಿ.

ಅಜ್ಜಿ:—ಕಮಲಾ ಬಾರ ಹಲ್ಲು ತಿಕ್ತೆನಿ

ಕಮಲಾ:—ಹೋಗ ಅಜ್ಜಿ ಈಗ ನಾ ಅಡ್ತನಿ

ಅಜ್ಜಿ:—ನಾನು ನಿನ್ನ ವಯುಸ್ಸಿನಲ್ಲಿ ಬೆಳ್ಳಗೆ ಹಲ್ಲು ತಿಕ್ತಾ ಇದ್ದೆ

ಕಮಲಾ:—ಒಹೋ ಅದಕ್ಕೆ ಅಜ್ಜಿ ನಿಮಗೆ ಒಂದಾದರೂ ಹಲ್ಲಿಲ್ಲ.

ಶಂಕರ:—ನೊಡೂ ಶ್ಯಾಮಾ ಆ ಭೀಮ ಇದ್ದಾನಲ್ಲ ಅವ ಏನೊ ಯಾರಿಗೂ ತಲೆ ಬಾಗಸೋ ದಿಲ್ಲಿಂತ

ಶ್ಯಾಮಾ:—ಹಾಗಾರ ಕ್ಷೌರಾ ಮಾಡಿಸಿಕೋಬೇಕಾದ್ರೆ ತಲಿ ಬಾಗಿಸ್ತಾನೊ ಇಲ್ಲೋ ?

ಗುರು:—ಏ ಹುಡುಗಾ ನಿನ್ನ ಹೆಸರು ನಿಮ್ಮಪ್ಪನಹೆಸರು ನಿಮ್ಮ ಅಡ್ಡ್ರೆಸು ಹೇಳೊ

ಹುಡುಗ:—ನನ್ಹೆಸರು ಹೊನ್ನು ಕುಕ್ಕಾ ನಮ್ಮಪ್ಪನ್ಹೆಸರು ಧಾತುಕುಕ್ಕು, ನಮ್ಮ ಡ್ರೆಸು ಸಕ್ರಿ ಮುಕ್ಕ

ಗುರು:—ಜೋರಾಗಿ ಹೇಳೋ

ಹುಡುಗ:—ಜೋರ ಹೇಳಿದ್ರ ನೀವು ಹೊನ್ನ ಧಾತು ಕುಕ್ಕಿ ಸಕ್ರಿ ಮುಕ್ಕಿದ್ರೆ ಎನ ಮಾಡ ಬೇಕ್ರಿ ?

---

# ಅಮರಗಾಂಧಿ

ಮಹಾತ್ಮಾಜಿ ಪೋದೆಯಾ ಅಮರನಾದೆಯಾ !
ಶಾಂತತೆ ಮೌನ ನಿನ್ನ ಗುಣವು
ಸಭ್ಯತೆಯು ನಿನ್ನ ನಡತೆ
ನಿನ್ನ ವಿಚಾರ ಘನವಾದುದು
ನಿನ್ನ ಕೀರ್ತಿ ಅಮರವಾದುದು
ಜನರ ಮನದಿಚ್ಛೆಯನ್ನು ತಿಳಿದ ನಾಯಕಾ
ಜನರ ಇಚ್ಛೆ ಪೂರ್ತಿ ಮಾಡಲೋಸುಗ ಅಹಿಂಸಾ
ಅಸ್ತ್ರ ಹುಡಕಿದೆ ಯೋಗ್ಯ ಕ್ರಮದಿಂದ ನೀನುಬ್ರಿಟಿಶರನ್ನು
ದೂಡಿದೆ ಅಮರವಾದ ಕೃತಿಗಳಿಂದ ಇಂದು ನೀನು
ಅಮರನಾದೆಯಾ

ಹೇ ! ಮಹಾತ್ಮಾ ನಿನ್ನ ಸಾಹಸವು ದೊಡ್ಡದು
ನಿನ್ನ ಪ್ರಯತ್ನದಿಂದ ನಾವು ಇಂದು ಸುಖಿಗಳು
ದೇಶದ ಸ್ವಾತಂತ್ರ್ಯದೋಸುಗ ನೀನು ನಿನ್ನ ಜೀವ
ತ್ಯಜಿಸಿದೆ
ಸ್ವಾತಂತ್ರ್ಯವನ್ನು ಘಳಿಸಿ ನೀನು ಇಂದು ಅಮರನಾದೆಯಾ
ಹೇ ! ಮಹಾತ್ಮಾ ನಿನ್ನ ಕೀರ್ತಿ ಅಮರವು

—ಎನ್. ಜೆ. ಕನಕಗಿರಿ

# ಈ ವರುಷದ ನಮ್ಮ ದಾತೃಗಳು

### ಶ್ರೀ. ಬಿಜಾಲ

ಟಿಂಬರ ಕಾಂಟ್ರ್ಯಾಕ್ಟರ ಇವರು ನಮ್ಮ ಶಾಲೆಯ ವಿದ್ಯಾರ್ಥಿಯರಿಗಾಗಿ ಕೂಡಲು ಸುಮಾರು ೭೫೦ ರೂಪಾಯಿ ಬೆಲೆಬಾಳುವ ೨೫ ಡೆಸ್ಕುಗಳನ್ನು ಮಾಡಿಸಿ ದಯಪಾಲಿಸಿದ್ದಾರೆ.

### ಶ್ರೀ. ಎಲ್. ಎಸ್. ಕುಲಕರಣಿ

ಇವರು ತಮ್ಮ ಮಾತೋಶ್ರೀಯವರ ನೆನಪಿಗಾಗಿ ರೂ. ೨೫೦ ನ್ನು ಠೇವಾಗಿ ಇಟ್ಟು ಪ್ರತಿ ವರ್ಷ ಬರುವ ಬಡ್ಡಿ ೧೫ ರೂ. ಗಳನ್ನು ಬಡ ವಿದ್ಯಾರ್ಥಿನಿಯರಿಗೆ ಉಪಯುಕ್ತ ಶಾಲಾವಸ್ತುಗಳನ್ನು ಕೊಡಲು ತಿಳಿಸಿದ್ದಾರೆ.

### ಶ್ರೀ. ಗೋಖಲೆ

ಟ್ರೇಝುರಿ ಆಫೀಸರ ಇವರು ಬಾಲಿಕೆಯರ ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಸುಂದರ ರಂಗ ಭೂಮಿಯನ್ನು ಕಟ್ಟಲು ರೂ. ೨೫ ಗಳನ್ನು ದಯಪಾಲಿಸಿದ್ದಾರೆ. ರಂಗಭೂಮಿಯು ಸಿದ್ಧವಾಗಿ ಬಾಲಿಕೆಯರು ಅಲ್ಲಿಯೇ ಕಾರ್ಯಕ್ರಮಗಳನ್ನು ನೆರವೇರಿಸುತ್ತಾರೆ.

### ಶ್ರೀ. ಎಮ್. ಎ. ಖಾನ

ವೆಸ್ಟ ಕೋಸ್ಟ ಪೇಪರ ಮಿಲ್ಲ, ದಾಂಡೇಲಿ, ಇವರು ನಮ್ಮ ಶಾಲೆಯ ಕ್ರೀಡಾಪಟುಗಳ ಪ್ರೋತ್ಸಾಹನಾರ್ಥವಾಗಿ ರೂ. ೨೫ ಬೆಲೆ ಬಾಳುವ ಎರಡು ಬೆಳ್ಳಿಯ ಕಪ್ಪುಗಳನ್ನು ದಯಪಾಲಿಸಿದ್ದಾರೆ.

ಇವರೆಲ್ಲರಿಗೂ ಸಂಸ್ಥೆಯ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

**ಕೃ. ಬಿಂ. ಓಂಕಾರ**
**ಮುಖ್ಯಾಧ್ಯಾಪಕ**

Vanita High School Miscellany

ENGEISH SECTION

Editor :— B. H. KATARKI, B. Sc., D. Ed., LL. B.

1960

# SAVING MONEY

We all know how misteriously the money disappears on petty expenditnres. Suppose we have a ten rupee-note. If we go to the bazaar and change the note we will be astonished to see that there is no money left in our hands after few hours. If any one asks us about how we spent the note surely we can't show him the details. But we can only say that we have spent it. Thus the note gone. When we spend money we never realise, that hundred naya paise will make a rupee and ten such rupees make a ten-rupee note. We never take care to save a naya paisa. We feel that it is a trifling matter and thus we do not think while spending it. If we had poused and thought twice before spending each naya paisa we would have certainly saved a great amount.

Therefore every one must have a regular system in spending money Particularly the poor must be over cautious about spending, otherwise they are sure to feel the pangs of misery when we receive our monthly salary or the annual income, we must have a monthly or an annual budget. In the budget we should make provisions for monthly rent, food clothes and other necessities. After making such provisions if there is any balance we should keep it in the bank. If we follow any such system then only we can hope to save money and live happily.

If we adopt no such system but go on spending in a casual way then the expenditure is sure to exceed our income and the result will be constant money troubles and will suffer from regular debt. Dickens says that if one's income is twenty shillings then one should spend only nineteen shillings and six pence which adds to one's happiness Bnt on the contrary if he spends twenty shillings and six pence then it is misery.

S. G. VARANASI
Std. X

# My Idea of Happiness

Different people have different ideas of happiness. Some people think that happiness exists in wealth. On the other hand some say that happiness lies in poverty. Some have an idea that country people with peaceful and simple life are happy, and others think that city life with pomp and luxuries is a happy one.

But I do not think the real happiness is not found in the above mentioned factors. A rich man is not always happy. Because money cannot buy love, peace or happiness. A wealthy man can have power, comfort, but he has no real happiness. He can buy rich medicines but he can not buy good health. On the other hand poorman cannot be happy, because he has to sturggle for his existence through out his whole life without getting any happiness. Poets in fancy say that every farmer is a happy man, but in practical life we see that he is not also really happy. Similarly splendour and luxury do not bring true happiness to the citizens.

In my opinion I think that true happiness comes from our own mind. In this connection I remember the words of Milton " A mind can make heaven of hell and hell of heaven." True happiness consists in getting our daily requirements only and not in becomming greedy. We must be contented and satisfied with what we get and what we have. If we go on this principle only we will have real happiness in this world.

Thus it does not matter whether we are rich or poor or whether we lead country life or city life. The real source of happiness comes from our mind only. It is also said that contentment is better than riches. Therefore we must be always contented ourselves with what we have then and then only we get true happiness.

VATSALA KULKARNI

Std. XI



# Some Interesting Experiences

I am eighteen years old. I have had some interesting hobbies in my life. Some of them may be called adventures.

When I was six or seven years old, I was living in a big city. One day my mother had gone to our neighbour's house. It was noon time and some one told me to go to the house and call my mother. Just infront of that house a well was under construction or perhaps it was only deep pit. I don't exactly remember. However it was dangerous for children. It had no enclosing wall but a few bamboos were fixed all round and others were tied cross wise to form a fence.

The neighbour's dog came barking at me. It was a small black creature and I was terribly frightened. I ran back and struck against the bamboo's fence round the well. The fence was between the bamboos and I fell through. My body waist down was inside the well, but my head and arms are remained out side. My fear was great that I did not hold on to any-thing. It was only my luck that saved me. Some one going along saw my plight and quickly came to my help. The ladies of the house and also my mother came running and took me out. I can not describe my mother's feelings. Such a lot of tears were running down her face. Her tears fell on my sari as she carried me home.

I remember another adventure which happend to me at the same age in the same city. One day afriend of mine promised to show me the zoo. We went, she and I two. She was perhaps a year older than I. The time was about nine "O"clock and there was a bright sun. We purchased ground-nuts and went along eating. He was showing me curious plants along the way. Some were called Touch-me-Nots and some were called Forget-me-Nots. Touch-me-Nots plants had very shy and sensitive leaves. As soon as we touched them, they folded themeselves.

My friend was a very clever fellow. He showed me some plants, the leaves of which had a fine taste. We ate them.

We wasted much time and missed the way. The sun came over our heads. We were tired and hungry and at last we began to cry. A friendly policeman saw us and took us to the nearest police station. We were given something to eat and drink and then sent in a police-car to houses. We were able to give our address fairly and correctly. We were certainly scolded by our parents when we reached the home.

When these adventures happened, I was very unhappy. But now, looking back I feel very happy to think of them.

SHANTA MUGALI
Std. XI (S. S. C.)

# वनिता हायस्कूल मिसलेनि

## हिन्दी विभाग

१९६०

# जीवनका महत्व

जीवनके महत्व को सारा संसार बेखटके स्वीकार करलेता हैं साधारण लोगोसे लेकर महान लोगोंतक अपना जीवन, महत्वके कार्योमें लगाते कोशीस करते रहते हैं। लोग आपनेको घोरता देकर समझ लेते हैं कि हमने जीवनका महत्व जान लिया किंतु जीवनका महत्व करोडोमें शायद किसी को सच्चे कार्योसे मालूम होता है। शेष सब सुपनेमें ही समाधान कर बैठते हैं।

जीवन सुख समाधान से बिताना ही एक तरहसे उसका महत्व जान लेना है। जो सबसे अधिक खूष रहता है उसी को जीवन का महत्व ज्यादा समझता है, क्योंकि सारे आपत्ती योंको छिपाकर चेहरे पर मधुर मुस्कान प्रकट करना कोई आसन काम नहीं है जो आंतर बाह्य पवित्र हो जिसका दिल उसके काबूमें हो वही यह काप कर सकता है।

हमारी खिन्नता सिर्फ हमीतक सीमित नहीं रहते उससे हमारे आसपास का वातावरण खिन्न सा हो जाता है। धीरे धीरे समाजमें औदास्य पैदास करनेका कुछ भी अधिकार नहीं हैं। उर्दुके श्रेष्ठकवी 'अकबर इलाहोने आपमे चुने हुये शेर में इस प्रकार कला है (खुशी बहुत है जहाँ में हमारे घर न सही। मलूल क्यों रहे दुनिया के इंतजामसे) इसका अर्थ : इस दुनियामें खुशी उमल रही है फिर हमारे घरमें चाहे उसका अभावही रहजाय प्रकृति नियमोंके अनुसार हमें भी खुश रहन जरूर है।

कुछ लोग कहते हैं कि हमारे मन का दर्द असहनीय, फिर हम समाजमें हसन्मुख कैसे रह सकते हैं। उसका अर्थ यह है कि हमारे जीवन को हम अच्छे कामोंमें लगाए तो हमें अपना दर्द दुःख का उस समय तक स्मरण भी नहीं होता। स्वाभाविकही उरसेनें हमारे मुख पर मुस्कराहट छा जाती है। हर एक इन्सान नन्हे बच्चोंकी शोर गुल सुन कर खिल उठता है। फूलोंका बहार देख कर आनंदित होता है। किसी को उपकार करके खुद को धन्यता मानता हैं।

सारांशमें आपना अमोल मानवी जीवन को जहाँ तक सात्विक आनंद निर्माण करते दूसरोंको खुश कर खुद भी खुशी अपना जीवन बिताना जरुर है। जिसे हम निराशवाद समझते हैं उस अध्यातमका अंतिम ध्येय भी अबिनाशी आनंद (मोक्ष) पाना ही है। अगर हम चिर संतोष पानेके लिये उत्पन्न हुये हैं तो फिर कुछही समयके तकलीफोंसे खिन्न क्यों हो और हमारा इह पर और समाजको क्यों उदास करें? खुशीसे पैदा होकर खशीसे जीवन बिताकर चिर खुशीं प्राप्त करना ही हमारा फर्ज है।

निर्मला मलेबिन्नूर
क्लास--X

# सच्चा वीर

मैं वीर हूँ। मेरे दंड देखो, मेरी छाती कॉफी चौडी है। गर्दन तनी हुयी और आँखे तेजस्वी। मेरी इस शक्ल पर एक नाटक कंपनी की निगाह पडी जो मानापमान नाटककी तैयारी कर रही थी। और उन्हें धैर्यधर की भूमिका करनेवाला काबील आदमी नहीं मिला था। उन्होंने मुझे नाटक कंपनीम धैर्यधर का काम करने की विनती कीं।

मैंने मॅनेजरकी प्रार्थना स्वीकार कर ली। क्योंकि मुझे इस काममें काफी धन मिलता था।

दूसरे दिन एक काबिल उस्ताजी के सामने मेरी तालीम शुरु हुई। उस्तादजी आपने काममें प्रवीण थे। मैं भी मन लगाकर सीखता चला। फलस्वरुप मेरा कामभी बहूतही सुंदर होने लगा। मॅनेजर साहबको यकीन हुवा कि नाटकका यश मुझपरही अवलंबित है।

संकल्पित दिनांक को नाटक किया गया। मेरा काम इतना अच्छा हुआ कि प्रेक्षकवृंद झूम उठा। प्रशंसाके फूल बाँधे जाने लगे। मुझपर स्तुति-सुमनोंकी वर्षा होने लगी। मैं खुदको सचमुच वीर समजने लगा।

अब मेरा यही काम रहा कि वीरोंकासा वेष करके घूमना, नव युवकोंको इकट्टे कर जोष भरा भाशण करना। मैं स्कूली युवकोंके सामने लेक्चर देने लगा यें महमदिय हमारे पुराने दुश्मन हैं। उन्होंनेही अखंड भारत के विभाग कर पाकिस्तान बना लिया। वहाँके हिंदुओंकी जायदाद लूटकर उन्हें वहाँसे भगा दिया। हमें भी उन्हें भगा देना चाहीये आदि आदि।

भोले भाले युवक मेरे भाषणसे प्रभावित होकर कुछ कुश्ती खेलना, दूध पीना और लढाई का सुअवसरकी प्रतीक्षा करना ही आपना फ़र्ज मानने लगे। इसी समय एक दिन हिंदुमुसलमानोंके छोते लडकोमें झगडा हुवा। मेरे भाषणसे प्रभावीत युकवृंद आगे बढा और मुसलमान लडकोंको पिटने लगा।

महमदियोंको तो सुअवसर मिला। वे अपने बालबच्चोंकों बचाने के लिये युवकोंको बडी निर्दयतासे पीटने लगे। उनमेसे कुछ लोग घबराकर मेरे पास आये और सारी बातें कह सुनाई फिर प्रार्थना की कि आप हमारे अगुवा हैं। चलिये हमारी रक्षा कीजिये। अब मेरी आँखे खुल गयी। मैं समज गया कि मेरी कुशल नहीं। कुछ बहना ढूंढना भी चाहताथा कि युवकोने मेरा हात पकडा और घटना स्थल ले चले। मंत्रमुग्धकी तरह वहाँ जा पहुँचा। देखता तो सन्नसा हो गया। कितने लाश गिरी हैं खून का नालासा बह रहा हैं। यह दृश्य देखकर मेरे होष हवास हुये। सब के आँखोंसे बचाकर भाग आया और रसोई घरमें छीप बैठा। लंबी सास लेकर सोचने लगा। अब मुझे किसीका भंय नहीं। कोई मरे और कोइ बचे। किंतु हाय यह आग मैनेही लगायी। मेरे कारणसे कितनी माँ के लाल स्वर्ग सिधारे होंगे। कितनि युवतीयोंका सौभाग्य नष्ट हुवा होगा। यह तो बहूत बुरी बात हुयी। किंतु इसमें मेरा क्या दोष? वे क्यों न समझे कि मैं सिर्फ नाटकी वीर हूँ। व्यर्थ ही मेरी बातें सुनकर झगड बैठे मैंतो 'भोजनभाऊ पंक्ती पठाण' सारांशमे वेही दोषी हैं। मैं बिलकुल बेकसूर हूँ। अपने आपराधसे मर रहे हैं तो मरने दो। मैं तो 'बाल बाल बच गया। तभी कहता हूँ मैं सच्चा वीर हूँ।

कु. मंदाकिनी कुलकर्णी
क्लास VIII



# परिश्रम और समता का महत्व

काहाँ तेरी मंजिल काहाँ है ठिकाना मुसाफिर बतादे कहाँ तुझको जाना।

यह गीत सुनती वरामदेमें बैठी थी। उसी समय कडी धूपमें एक लडका धीरे धीरे जा रहा था।

उसका पेट पीठसे चिपका था। आँखें अंदर धँसी हुयी थीं। वदन पर एक ही जीर्न वस्त्र था। मानो वह भारतके दारिद्रयका मूर्तीमंत प्रतिक था। भीख माँगकर वह कभी भर पेट कभी अधपोटी रहकर आपना गुजारा करता था।

हमारे भारतमें भीख माँगकर गुजार करनेवाले बडे छोटे बहुत लोग हैं। इसे दो कारण हैं। एक विषमता और दूसरा आलस्य। वास्तवमें परिश्रम के बिना पेट भरने के लिये भीक माँगना बहुत बुरा है। अगर आदमी किसी तरह का काम करके रोटी कमाये तो वह गौरव योग्य माना जाता है।

हमारी सरकार समताका गुणगान करती हैं। फिर भी अमीर उमीरही रहकर संसार के सब सुखोंका उपभोग करते हैं। और गरीब अधिकाधिक दारिद्रयसे घिरे जाते हैं। और दुनिया के सब दुःख कठिनाइयाँ उन्हीं को बरदास्त करना पडता हैं।

हमारे देशकी संपत्ति कुछही लोगोंकी निजी जायदाद बन जाने के कारण अनेक योजनाएँ बनाने पर भी विषमता मिटती नहीं फिर बढती ही रहती है।

सरकारके दबाव से नहीं वरना आपनी खुशीसे धनिक वर्ग आपनी जायदादमेंसे कुछ भाग दरिद्रियोंको दे दें तो कुछ हद तक यह समस्या हल होती हैं। उसी तरह गरीब परिवार में पैदा हुये बालक जो होनहार लडके रहते हैं उनको निपुत्रिक धनवान वापनायें तो उनकी आपत्य प्राप्ती की इच्छा पूर्ण होंगी और राष्ट्र भी वेकार जाते हुये इन होनहार नागरीकोंको पाकर संपन्न होगा।

आज करोडो बालक और युवक कोई उच्च शिक्षा पाकर माता-पिता और राष्ट्रका उद्धार करना चाहते हैं। होनहार लडकीयाँ अपने योग्य पतिपाकर सुगृहीणी बननेकी इच्छा करती हैं। किंतु इन सबको क्लर्की करके आपना गुजारा करना पडता है। कुछलडकीयोंको बेजोड साथिके साथ जीवन बिताना पडता है। इन सब अनर्थका कारण विषम परिस्थिती हैं। अगर धनिक वर्ग राजीखुशीसे इन होनहार लडकी लडकोंको आपनाये तो उनके ऐश आराममें कुछत्रुटी होगी जरुर किंतु राष्ट्रके उन्नत होनेसे उनका भी सचमुच लाभ होगा।

कु. कांता बोरकर



# प्रसाद

प्रसाद का नाम सुनतेही हमारी जीभ मचल उठती है। मूहमें पानी भर आता है। आँखोंके सामने। मोहनभोग, हलुवा आदि तरह तरह के फल और सूखा मेवा खींच जाते है।

प्रवचन और रथोत्सव के समय बडी भीड रहती है तो भी हम पीटते पीटाते गर्दीमें घुसकर प्रसाद प्राप्त करलेते। खुदको कृताकृत्य मानकर समाधानकी साँस लेते हैं।

वास्तवमें प्रसाद शब्द का अर्थ निराला हैं। मीठी चीजोंके इर्द गिर्द पानी फेरकार और भगवानको हाथ जोडकर वह चीज खाना यह सचमुच प्रसाद प्राप्ति नहीं। परमात्माकी अनन्य भावसे प्रार्थना करके जो मानसीक समाधान मिल जाता है या किसी कठीन काम को तन, मन, धन की परवाह किये बिना जी-जानसे संपूर्ण तया किया

जाता है उस समय प्राप्त हुयी खुशी या समाधान ही सचमुच प्रसाद है।

प्राचीन कालमें राजे महाराजे प्रसाद पाकर कृतार्थ हो जाते थे वह प्रसाद निश्चयही कोई खानेकी चीज नहीं होती होंगी।

शिष्योंको गुरुसे प्रसाद रुपमें विद्या मिलती थी। हिरण्यकश्यपूने प्रसाद रुपमें ब्रम्हासे उत्पन्न किये हुये प्राणीयोंसे अवध्यत्व की प्राप्री करली थी। राजा नलको जहाँ चाहे वहाँ आग और पानीकी प्राप्ती प्रसाद रुपसे ही मिली थी। प्रायितेयीने अपूर्ण गर्भकी रक्षा और उसी बालकसे वंश वर्धन का प्रसाद प्रकृती मातासे माँग लीथी। प्रल्हादकी माताने नारदसे इच्छा-प्रसूति प्रसादरुपसेही पाई थी।

जरा सूक्ष्मतासे देखाजाये तो यही प्रतित होता है कि प्रसाद निमिष-मात्र जिव्हा को संतुष्ट करनेवाली कोई खानेकी चीज नहीं बल्की स्थाई रुपसे कल्याण करनेवाला कोई महद् उपकार है। यह बात निर्विवाद है। हमें भी वही प्रसाद प्राप्त करना चायीये कि जिससे हमारा चिर कल्याण हो।

सौ. चंपाबाई कुलकर्णी
शिक्षिका

# आदर्श विद्यार्थी

विद्यार्जन करने वालेको विद्यार्थी यह नाम प्राप्त होता हैं। सच्चा विद्यार्थीकी दिनचर्या देखकर दुसरे विद्यार्थी उसका आदर्श आपनाने की कोशिस करेंगे और आपही सच्चा छात्र बननेमें सफल होगे वेही आदर्श विद्यार्थी कहलायेंगे। आदमीके जीवन के ३ अवस्थायें होती हैं। पहली विद्यार्जनकी, दूसरी गृहस्थिकी तीसरी विश्राम की होती हैं। इन तीन अवस्थाओंसे विद्यार्थी दशा बहूत ही महत्वकी रहती हैं। उसी कालखंडमें भावी नागरीकत्वका बीजारोपण होता हैं इससिये विद्यार्थि जीवन बहुतही कर्तव्यदक्ष बिताना चाहिये।

आदर्श विद्यार्थीको पहले पहले समय कि पाबंदी करनी चाहिये। "Time is money" दिनके यह कहावत को वारबार स्मरण करना चाहिये। समय की पाबंदी तरना उसके लिये अनिवार्य है। आजके कामों को कल पर डालना तो उसके लिये बहुतही अहितकारी है। आजका काम आज ही करना चाहिए। इसके अतिरिक्त वह जीवनमें असफल होगा। एक बार सुअवसर निकल जाय तो कभीं भी नहि मिलेगा। 'चिडिया चुघ गड खेत तब पछताये क्या लाभ'? इसलिये आदर्श विद्यार्थी को जो अवसर मिलेगा उसका नितांत उपयोग करलेना चाहिए। विद्यार्थी जीवन अमोल है। "Student life is a golden period."

आदर्श विद्यार्थी सदां विनम्र रहना चाहिए। बडेलोगोंके साथ तथा अध्यापकों के साथ विनयसे बर्ताव करनी चाहीए "विद्या विनयेन शोभते" इस कहावत को ठीक तरह समझना चाहिए। इसीतरह प्रामाणिकता को अपनाना चाहिए प्रापाणिकता एक ऐसी वस्तु हैं कि जिसे सारे दुनियामें महत्व हैं। "Honesty is the best policy" उसे सबकुछ स्वप्रयत्न से प्राप्त करना चाहिए। अंधानुकरण के पाश में पडना नही चाहिए। उसे शिक्षकों की गलतियों को नीडरतासे बतलाना चाहिए।

आदर्श विद्यार्थीको स्कूल या कॉलिजकें अंतरिक तथा बहिरंग की सभी कार्यक्षेत्रमें सम्मिलित होना चाहिए। उसे चारित्र्य की ओर विशेष ध्यान देना चाहिये। सत्य बोलना दूसरोंको उपकार करना, अज्ञानियों को योग्य मार्ग दिखलाना चाहिए। देशकी सेवा करना उसका आद्य कर्तव्य है। उसे अपने जीवन के आदर्शोंपर अटल रहना चाहिए। उसे घरका आनंद, संस्था का अभिमान, गुरुजनो का प्राणप्रिय तथा देश का भूषण होना चाहिए।

सुशीला हंदिगोळ
क्लास XI

# पितृहृदय

पावसाचे बारीक थेंब येऊ लागले होते. आकाश भरून आला होता खाडींत एकही होडी किंवा नांव न्हवती. कारण वादळाची स्पष्ट चिन्हें दिसत होती. सर्व नावाडी आपापल्या झोपडयांत बसले होते. जणू रागावलेल्या निसर्गास भिऊन सर्व चराचर निस्पंद झालें होते.

याच वेळीं एक जोडपें धावत्या धावत्या खाडीवर येऊन पोहोचले. त्या तरुणीची स्थिती फारच केवीलवाणी दिसत होती. तरुणही बराच थकलेला दिसत होता. तरीही त्यानें नांवाडयाला हाक मारावयास सुरुवात केली. त्याच बरोबर त्याने मागाल ते भाडें द्यावयाचेही जाहीर केले, पण कुठला नांवाडीच तयार होईना.

अधीक प्राप्तीच्या आशेने एक धीट नांवाडी पुढें आला व ह्या सुंदर जोडप्यानां पाहून तो म्हणाला कि "बाबा जाणून बुजून मृत्युच्या जबडयांत का पडता?" तेव्हा तरुणाने आपली हकिकत सांगण्यास सुरुवात केली. "मी एक गरीब पाटलाचा मुलगा व ही तरुणी आमच्या गावच्या सावकाराची मुलगी. आम्ही दोघे शेजारी रहात होतो. पहिल्यांदा आमच्या प्रेमाचे स्वरूप शुद्ध होते, पण पुढें जस जसे आम्ही मोंठे होऊ लागलो तस तसे आमच्या प्रेमाचे स्वरूप दांपत्य प्रेमांत रुपांतर झाले पण आम्हा दोघाना विवाह करण्यास हिच्या वडिलांनी विरोध केला. पण या तरुणीनें माझ्याशीच लग्न करण्याचा निश्चय केला व आम्हीं दोघें पळून आलो. हिचे (तरुणीचे) वडील सशस्त्र नोकरा समावेत आमचा पाठलाग करीत आहेत मला तर त्यानीं अत्ता पाहिले तर ते मारून टाकतील व हिच्या इच्छे विरुद्ध हिचे लग्न दुसऱ्यांशी करतील म्हणून तु लौकर आम्हाला ह्या खाडीतून पार कर. तू मागशील तितके पैसे मी देईन" ही सारी हकीगत ऐकून नांवाडी विचारांत पडला. इतक्यात तरुणीने अत्यंत विनित व आर्त स्वरात सांगितले बाबा आम्हाला जलसमाधी मिळाली तरी चालेल. मी वडिलांची क्रुद्ध दृष्टिक्षेप सहन करु शकत नाहीं. म्हणून तू आपली होडी लवकर आण.

हे ऐकून नांवाडयाने नशीबावर हवाला टाकून लगेच आपली होडी आणली व त्या दोघांस होडींत बसवून होडी पाण्यांत घातली. थोडे अंतरावर होडी गेली असेल इतक्यांत वारा जोराने वाहूलागला आकाश काळेकुट्ट होऊन गेले.

इतक्यांत घोडयांच्या टापांचा आवाज व धूळ उडत असलेले दिसून आले.

तरुणीच्या पित्याला जेंव्हा आपली मुलगी मृत्युच्या जबडयांत सांपडलेली दिसली तेंव्हां त्याचा सारा राग थिजून गेलाव त्याने टाहो फोडून हाका मारुलागला हे मुली तू परत ये तुझ्या इच्छे प्रमाणेंच तुझ्या प्रियकरांशी तुझे लग्न लाऊन देईन. त्या मुलीने उत्तर दिले बाबा तुम्हाला फार उशीराने ही बुद्धी सुचली. माझ्या प्रियकरा बरोबर मी अक्षय मिलन प्राप्त करण्यासाठी चालले आहे. हे शब्द तिच्या पित्याला ऐकू आले त्याच वेळीं एक मोठ्या हत्ती एवढया प्रचंड लाटेने क्रूर हास्य करीत त्या दंपतीना सागरांत विलीन करुन टाकले. बिचारा भग्न हृदयी पिता दिङ्मूढ होऊन पहातच राहिला.

कु. मंदाकिनी कुलकर्णी
क्लास VIII

(एका इंग्रजी कवितेच्या आधारे)

# ವನಿತಾ ಔದ್ಯೋಗಿಕ ಶಾಲೆ

## ಧಾರವಾಡ

ಸಂಪಾದಕರು : **ಅನಂತರಾವ ತಿವಾರಿ**

೧೯೫೯—೬೦

## ಸ್ತ್ರೀಯರ ಏಳಿಗೆ

ಮಾನವನಿಗೆ ಅನ್ನ, ವಸ್ತ್ರ, ಆಚ್ಛಾದನ, ಇವು ಮುಖ್ಯವಾದವುಗಳು. ಮಾನವರು ಪ್ರಾಚೀನ ಕಾಲದಲ್ಲಿ ಇವುಗಳನ್ನು ಬೇರೆ ಬೇರೆ ವಿಧವಾಗಿ ಬೇರೆ ಬೇರೆ ಪ್ರಕಾರಗಳಿಂದ ದೊರಕಿಸುತ್ತಿದ್ದರು. ಮೊದಲ ಮಾಂಸವೇ ಇವರ ಆಹಾರವಾಗಿತ್ತು. ಬರಬರುತ್ತ ಕೃಷಿ ಉದ್ಯೋಗಮಾಡಿ ಧಾನ್ಯವನ್ನು ಬೆಳೆದು ಆಹಾರವನ್ನು ಪೂರೈಸಹತ್ತಿದರು. ವಸ್ತ್ರಗಳು ಮೊದಲು ಬಳಕೆಯಲ್ಲಿರಲಿಲ್ಲ. ಬೇಟೆಮಾಡಿದ ಪ್ರಾಣಿಯ ಮಾಂಸವನ್ನು ತಿನ್ನುವದು ಅವುಗಳ ಚರ್ಮವನ್ನು ಉಟ್ಟುಕೊಳ್ಳುತಿದ್ದರು. ಮತ್ತು ಮನೆಗಳನ್ನು ಮೊದಲು ಹುಲ್ಲಿನಿಂದ ಕಟ್ಟುತ್ತಿದ್ದರು ಹೆಚ್ಚು ಸಂಸ್ಕೃತಿ ಬೆಳೆದಂತೆ ಈಗ ಬೇಕಾದಂತೆ ಕಟ್ಟಲಿಕ್ಕೆ ಹತ್ತಿದರು. ಚರ್ಮವನ್ನು ಉಟ್ಟುಕೊಳ್ಳುವಾಗ ಮಾನವನಿಗೆ ಯಾವ ಕಲ್ಪನೆಯೂ. ಬೇರೆಯಾವ ಸಾಧನಗಳೂ ಇರಲಿಲ್ಲ. ಆದರೆ ಈಗ ಬರಬರುತ್ತ ರೇಶಿಮೆ. ಉಣ್ಣೆಯನ್ನು ಶೋಧ ಹಚ್ಚಿ ಅವುಗಳಿಂದ ಬಟ್ಟೆಯನ್ನು ತಯಾರಿಸಿ ಉಪಯೋಗಿಸಹತ್ತಿದರು. ಇತ್ತಿತ್ತಲಾಗಿ ಹತ್ತಿಯನ್ನು ಬೆಳೆದು ನೂಲಿನ ಬಟ್ಟೆಯನ್ನು ತಯಾರಿಸಿ ಹೆಚ್ಚಾಗಿ ಅವುಗಳನ್ನೇ ಉಪಯೋಗಿಸಹತ್ತಿದ್ದಾರೆ ಅರಿವೆಯನ್ನು ತಯಾರಿಸಿದ ಮೇಲೆ ಅದೇ ಬಟ್ಟೆಯನ್ನೇ ಧರಿಸಲು ಬರುತ್ತದೆ. ಆದರೆ ಕೆಲವು ಮಾತ್ರ ನಮ್ಮ ದೇಹದ ವಿವಿಧ ಆಕೃತಿಯಂತೆ ತಯಾರಿಸಿಕೊಂಡು ಧರಿಸಬೇಕಾಗುವದು. ಇದನ್ನು ಹೇಗೆ ತಯಾರಿಸ ಬೇಕು. ಮತ್ತು ತಮ್ಮ ಶರೀರದ ಯಾವ ಯಾವ ಆಕಾರದ ಯಾವ. ಯಾವ. ಬಟ್ಟೆಗಳು ಹೇಗೆ ತಯಾರಾಗುತ್ತವೆಂಬುದನ್ನು ಪ್ರತಿಯೋಬ್ಬಸ್ತ್ರೀ ಪುರುಷನು ಅರಿಯುವದು ಅವಶ್ಯಕ.

ನಮ್ಮ ಭಾರತದಲ್ಲಿ ಯುಗ ಪರಿವರ್ತಕ ಗಾಂಧೀಜಿಯುನರು ನಮಗೆ ಒಂದು ಹೆದ್ದಾರಿಯನ್ನು ಹಾಕಿಕೊಟ್ಟರು ಅದು ಯಾವದೆಂದರೆ ಮಾನವನ ಮೂಲ ಬೇಡಿಕೆಗಳನ್ನು ಸ್ವಾವಲಂಬನದಿಂದ ದೊರಕಿಸಬೇಕು ಮತ್ತು ಪ್ರತಿಯೊಬ್ಬ ವಿದ್ಯಾರ್ಥಿಯೂ ಗ್ರಹಸ್ಥರಾದ ಸ್ತ್ರೀ ಪುರುಷರು ಸತತೋದ್ಯೋಗಿಯಾಗಿರಬೇಕು. ಅಂದರೆ ದಾಸ್ಯತ್ವದಲ್ಲಿದ್ದ ನಮ್ಮ ಭಾರತವು ಆದರ್ಶ ರಾಷ್ಟ್ರವಾಗಲು ಸಂದೆಹವಿಲ್ಲ. ಇತ್ತಿತ್ತಲಾಗಿ ಪುರುಷರು ಸ್ವಲ್ಪ ಮುಂದಕ್ಕೆ ಬರುತ್ತಲಿರುವರು ಆದರೆ ಸ್ತ್ರೀಯರು ಮಾತ್ರ ಇನ್ನೂ ವರೆಗೆ ಮೂಢ ನಂಬಿಕೆಗಳನ್ನು ತೊರೆದಿಲ್ಲ ಇವುಗಳನ್ನು ಹೊಡೆದೋಡಿಸಲು ಕೆಲವು ಸ್ತ್ರೀ ಶಿಕ್ಷಣ ಮಹತ್ವದೆಂದು ಅಲ್ಲಲ್ಲಿಗೆ ಸ್ತ್ರಿಯೋದ್ಧಾರಕ ಸಮಾಜಗಳು ಉದಯಿಸಿದವು. ಇವುಗಳಲ್ಲಿ ಧಾರವಾಡದಲ್ಲಿರುವ ವನಿತಾ ಸೇವಾ ಸಮಾಜ ಒಂದು. ಇದು ಸ್ತ್ರೀಯರ ಏಳ್ಗೆಯ ಸಲುವಾಗಿ

ಪ್ರತಿಯೊಂದು ವಿದ್ಯೆಯನ್ನು ತನ್ನಲ್ಲಿ ಅಳವಡಿಸಿಕೊಂಡು ನಡೆದಿದೆ. ಇವುಗಳಲ್ಲಿ ಹೊಲಿಗೆಯು ಅತಿಶ್ರೇಷ್ಠ ಮತ್ತು ಸ್ವಲ್ಪೇ ಅವಧಿಯಲ್ಲಿ ಪಡೆಯತಕ್ಕ ವಿದ್ಯೆಯು. ಇದಕ್ಕೆ ಯಾವ ಸರ್ಟಿಫಿಕೇಟು ಬೇಡ. ಹೆಚ್ಚಿನ ವಿದ್ಯಬೇಡ ಳನೇ ಇಯತ್ತೆ ಕಲಿತರೂ ಈ ಹೆಲಿಗೆಯನ್ನು ಕಲಿತು ತಮ್ಮ ಜೀವನದಲ್ಲಿ ಬರತಕ್ಕ ಅಡೆತಡೆಗಳನ್ನು ಎದುರಿಸಬಹುದು. ನಾವು ನುಡಿಯಬಹುದು ಹೆಚ್ಚಿನ ವಿದ್ಯೆಯನ್ನು ಪಡೆದು ನೌಕರಿಯನ್ನು ಮಾಡಿ ಅದೇ ದುಡ್ಡಿನಿಂದ ನಾವು ನಮ್ಮ ಅರಿವೆಗಳನ್ನು ತಯಾರಿಸಿಕೊಳ್ಳ ಬಹುದು. ಆದರೆ ನಾವು ಹಣಕೊಟ್ಟು ಕೂಡ ಪರಾವಲಂಬಿಯಾಗಬೇಕಾಗುವದು. ಮತ್ತು ನಮ್ಮ ಕುತೂಹಲವು. ಈಡೇರುವದಿಲ್ಲ. ಯಾಕಂದರೆ ನಾವು ಇಂತಹದನ್ನೆ ತಯಾರಿಸಿ ಧರಿಸಬಹುದು. ಎಂಬುದು ಸಾಧ್ಯವಾಗುವದಿಲ್ಲ. ಆದರಿಂದ ನಮ್ಮ ಬಟ್ಟೆಗಳನ್ನು ನಾವು ತಯಾರಿಸಿ ಧರಿಸಲು ಸಮರ್ಥರಾಗಬೇಕಾದರೆ ಹೊಲಿಗೆಯು ಮಹತ್ವದ ವಿದ್ಯೆ ಎಂದು ನನಗನಿಸಿದೆ. ಪುರುಷರಿಗಿಂತಲೂ ಸ್ತ್ರೀಯರ ಮೇಲೆ ಹೊಲಿಗೆಯ ಹೊಣೆಯು ಹೆಚ್ಚಾಗಿ ಇರುತ್ತದೆ. ಯಾಕಂದರೆ ಸ್ತ್ರೀಯು ಗೃಹಿಣಿಯಾಗಿರುವದರಿಂದ ಮಕ್ಕಳ ಬಟ್ಟೆಯ ಮೇಲೆ ಹೆಚ್ಚು ಆಸಕ್ತಿಯನ್ನು ವಹಿಸಬೇಕಾಗುವದು. ಬಟ್ಟೆಯು ಹರಿದ ಮೇಲೆ ಹೊಲೆದು ತೊಡಿಸುವದು ಸ್ತ್ರೀಯರ ಆದ್ಯ ಕರ್ತವ್ಯವಾಗಿದೆ. ಅದರಿಂದ ಪ್ರತಿಯೊಬ್ಬ ಸ್ತ್ರೀಯು ಹೊಲಿಗೆಯನ್ನು ಕಲಿತುಕೊಂಡದ್ದಾದರೆ ನಮ್ಮ ಭಾರತವು ಮೊದಲಿನ ಅಂದರೆ ಸುಖ ಸಮೃದ್ಧಿಗಳ ನಾಡಾಗುವದು. ಇದೊಂದರಿಂದ ಆಗುವದೆಂತಲ್ಲ ! ಆಗುವ ಅಥವಾ ಆದರ್ಶವನ್ನಾಗಿ ಮಾಡುವದರಲ್ಲಿ ಇದೊಂದು.

ಈಗ ನಾವು ಮಕ್ಕಳಿಗೆ ಒಂದು ಮಾದರಿಯ ಫ್ರಾಕ್‌ವನ್ನು ಹಾಕಬೇಕೆಂದು ಅನಿಸಿದರೆ, ಅದನ್ನು ತಯರಿಸಲು ನಾವು ಸಮರ್ಥರಾಗಬೇಕು. ಅಂದರೆ ನಮ್ಮ ಕುತೂಹಲವು ಪೂರ್ಣವಾಗುವದು. ಇದಲ್ಲದೆ ನಾವು ಎರಡನೇಯವರ ಕಡೆಗೆ ಹೊಲಿಗೆಯನ್ನು ಕೊಡುವದರಿಂದ ನಮ್ಮ ಇಚ್ಛೆಗನುವಾಗಿ ಹೊಲಿಯುವದಿಲ್ಲ. ಇದು ಒಂದನೇಯದು. ಅರಿವೆಯನ್ನು ಅವರು ತೆಗೆದುಕೊಳ್ಳುವದರಿಂದ ಹಾನಿಯಾಗುವದು, ಎರಡನೇಯದು. ಕೈಯಿಂದ ಹಣಕೊಟ್ಟು ಅವರ ಅಂಗಡಿಗೆ ಹೋಗಲು ಬರಲು ವೇಳೆಯನ್ನು ಕಳೆಯುವದು, ಮೂರನೇಯದು. ಹೀಗೆ ನಾವು ಪ್ರತಿಯೊಂದರಲ್ಲಿಯೂ ತ್ರಾಸಹೊಂದಬೇಕಾಗುವದು. ಇವುಗಳನ್ನು ತಪ್ಪಿಸಬೇಕಾದರೆ ಪ್ರತಿಯೊಂದು ಮನೆಯಲ್ಲಿ ಪ್ರತಿಯೊಬ್ಬ ಸ್ತ್ರೀಯು ಕಲಿಯುವದು ಅತ್ಯವಶ್ಯ. ಮನೆಯಲ್ಲಿಯ ಬಟ್ಟೆಗಳನ್ನಷ್ಟೇ ತಯಾರಿಸದೆ. ಆರ್ಥಿಕ-ದೃಷ್ಟಿಯಿಂದ ಎರಡನೇಯವರ ಬಟ್ಟೆಯನ್ನು ತಯಾರಿಸಿ ತನ್ನ ಪ್ರಪಂಚದಲ್ಲಿ ಹಣದ ದೃಷ್ಟಿಯಿಂದ ಬರಲಿರುವ ತೊಡಕುಗಳನ್ನು ಎದುರಿಸಲು ಸಮರ್ಥಳಾಗಬಹುದು. ಇವೆಲ್ಲ ಮಹತ್ವಗಳನ್ನು ನನ್ನ ಅಲ್ಪ ಬುದ್ಧಿಗೆ ತೋಚಿದಷ್ಟು ತಿಳಿದು ನಾನು ಹೊಲಿಗೆ ಕ್ಲಾಸಿಗೆ ಹೋಗಲು ಪ್ರಾರಂಭಿಸಿದೆ ಮಹಿಳಾ ಸೇವಾ ಸಮಾಜದಲ್ಲಿ ಈ ಹೊಲಿಗೆ ಕ್ಲಾಸಿನಲ್ಲಿ ಇತ್ತಿತ್ತಲಾಗಿ ಕಲಿಯುವವರ ಸಂಖ್ಯೆ ಹೆಚ್ಚಿದೆ ಎಂದು ನನಗನಿಸಿದೆ ನನಗೆ ಅನುಭವ ಬಂದದ್ದು ಏನಂದರೆ ನಾನು ಹೊಲಿಗೆಗೆ ಹೋಗುವದಿಲ್ಲವೆಂದು ಅನ್ನುತ್ತಿದೆ. ಆದರೆ ಇತ್ತಿತ್ತಲಾಗಿ ಅದನ್ನು ಬಿಡಲು ಮನಸ್ಸು ಆಗುವದಿಲ್ಲ. ಈ ಸಂಸ್ಥೆಯನ್ನು ತೆಗೆದ ಮಾಯಿಯವರ ಪ್ರಯತ್ನದ ಸ್ಮರಣೆಯನ್ನು ನಾವು ನಮ್ಮ ಜೀವನದಾದ್ಯಂತ ಸ್ಮರಿಸಿದರೂ ಕಡೆಗಾಣದ ವಿಷಯ. ಈ ಸಂಸ್ಥೆಗೆ ಮತ್ತು ಔದ್ಯೋಗಿಕ ವರ್ಗಗಳ ಪ್ರಗತಿಗೆ ಪ್ರೋತ್ಸಾಹನ ಕೊಟ್ಟು ನಮ್ಮಂಥ ಅಲ್ಪ ಬುದ್ಧಿಯ ವಿದ್ಯಾರ್ಥಿಗಳಿಗೆ ಔದ್ಯೋಗಿಕ ವರ್ಗದ ಲಾಭವನ್ನು ಪಡೆಯಲು ಅವುಗಳ ಮಹತ್ವವನ್ನು ತಿಳಿಯಲು ಶ್ರೀ ದಾದಾ ಅವರು ಉಪದೇಶವನ್ನು ಕೊಟ್ಟದ್ದು ನಮ್ಮ ಜೀವನದಲ್ಲಿ ಅಡಿಗಲ್ಲಾಗಿ ಇಟ್ಟುಕೊಳ್ಳುವ ವಿಷಯವೆಂದು ನನಗನಿಸಿದೆ.

ಮೊದಲು ನನಗೆ ಸೂಜಿಗೆ ದಾರವನ್ನು ಹಾಕಲು ಬರುತ್ತಿರಲಿಲ್ಲ. ಅಂದರೆ ಮಿಶನ್ನದ ಮಾಹಿತಿ ನನಗೆ ಎಳ್ಳಷ್ಟೂ ಇರಲಿಲ್ಲ. ಈಗ ೪-೬ ತಿಂಗಳಲ್ಲಿ ನನ್ನ ಮತ್ತು ಇನ್ನಿತರ ಬಟ್ಟೆಗಳನ್ನು ತಪ್ಪುಗಳಿಂದಾಗಲಿ ತಯಾರಿಸಲು ಸಮರ್ಥಳಾಗಿರುವೆನೆಂದು ನನಗೆನಿಸಿತು. ಈ ಕ್ಲಾಸಿನಲ್ಲಿ ಅಂದರೆ ಔದ್ಯೋಗ ವರ್ಗವಾಗಿರುವ ಹೊಲಿಗೆಯ ಕ್ಲಾಸಿನಲ್ಲಿ ಜಯವಂತರಾವ ಕನಕಗಿರಿ ಮತ್ತು ಸೌ. ಯಮುನಾಬಾಯಿ ಕನಕಗಿರಿ ಈ ದಂಪತಿಗಳು ಒಳ್ಳೇ ಉತ್ಸಾಹದಿಂದ ಕೆಲಸ ಮಾಡುತ್ತಾರೆ. ಇವರು ಹುಡುಗರಲ್ಲಿ ಹುಡುಗರಾಗಿಯೂ ಹಿರಿಯರಲ್ಲಿ ಹಿರಿಯರಾಗಿಯೂ ಈ ವಿದ್ಯೆಯನ್ನು ಪರಿವರ್ತಿಸುವರು. ಇವರಿಗೆ ಬೇಸರ ಕೋಪವೆನ್ನುವದು ಕನಸಿನಲ್ಲಿಯೂ ಕೂಡ ಆದೆ ಎನ್ನುವದು ನನಗೆ ಅನಿಸುವದಿಲ್ಲ. ಸ್ವಹಿತಕ್ಕಾಗಿ ದುಡಿಯುವ ಜನರು ನಮ್ಮ ಭಾರತದಲ್ಲಿ ಬಹಳೇ ಜನರು. ಆದರೆ ಈ ಸಂಸ್ಥೆಯನ್ನು ತೆಗೆದವರು. ಮತ್ತು ಈ ಹೊಲಿಗೆ ಕ್ಲಾಸಿನಲ್ಲಿ ದುಡಿಯತಕ್ಕವರು ಪರರಹಿತಕ್ಕಾಗಿ ಬಂದು ದೇಶಾಭಿಮಾನಕ್ಕೆಂದು ದುಡಿಯುತ್ತಾರೆ. ಇವರ ಮಾದರಿಯನ್ನಾಗಿಟ್ಟುಕೊಂಡು ಪ್ರತಿಯೊಬ್ಬ ವ್ಯಕ್ತಿಯು ನಡೆದದ್ದಾದರೆ ನಮ್ಮ ಭಾರತವು ಮಾದರಿಯ ರಾಷ್ಟ್ರವಾಗುವದು. ಮತ್ತು ಎಲ್ಲ ಕಡೆಗೂ ಹೊಲಿಗೆಯ ವರ್ಗಗಳು ಅವೆ. ಆದರೆ ಇಂಥ ಸವಲತ್ತು ಕೊಟ್ಟು ವೇಳೆಗೆ

ಸರಿಯಾಗಿ ಹಣದ ತ್ರಾಸವಿಲ್ಲದೆ ಮನಸ್ಸಿನ ತ್ರಾಸದಿಂದ ಅಂದರೆ ಬುದ್ಧಿ ಖರ್ಚಿನಿಂದ ಪಡೆಯುವ ವಿದ್ಯೆ ಎಂದರೆ ವರ್ಗವೆಂದರೆ, ಇದೊಂದೆ ಎಂದು ಎದೆ ತಟ್ಟಿ ಹೇಳಬಹುದು. ಈ ಕ್ಲಾಸವು ಪಡೆಯತಕ್ಕ ವಿದ್ಯೆಯು, ೪ ತಾಸು ದಿನಾಲು ಈಗ ಶಾಳಾ ಖಾತೆಯಲ್ಲಿ ನೋಡಿದರೆ ಇಡೀ ದಿವಸ ನಾವು ಮತ್ತೊಂದು ಕಡೆಗೆ ಅಲುಗಾಡುವಂತಿಲ್ಲ. ಇದನ್ನು ಪಡೆಯಬಾರದೆಂತಲ್ಲ. ಶಿಕ್ಷಣವು ಮೊದಲು ಬೇಕು. ಅಕ್ಷರ ಪಡೆದರೆ ಆದರವು. ಆದರೆ ಈ ಕ್ಲಾಸವು ಪ್ರತಿಯೊಬ್ಬ ವ್ಯಕ್ತಿಯ ಜೀವನವನ್ನು ಸ್ವಲ್ಪೇ ಅವಧಿಯಲ್ಲಿ ಪ್ರಕಾಶಮಯವಾಗಿ ಮಾಡುವದು. ಎಲ್ಲ ಉದ್ಯೋಗದಲ್ಲಿ ಕಲಿತ ಮೇಲೆ ಫಲವು ದೊರೆಯುವದು ಆದರೆ ಇದು ಕಲಿಯುತ್ತಲೇ ಫಲವನ್ನು ಕೊಡುವದು. ಹೇಗೆಂದರೆ ಈಗ ನಾವು ಕಲಿಯಲು ಬಂದು ಅರಿವೆಯನ್ನು ಹೊಲಿದರೆ, ಅದು ನಮಗೆ ಆಗಲೆ ಉಪಯೋಗವಾಗುವದು.

ಇದು ಒಂದು ವರ್ಷದ ಕೋರ್ಸು. ಸರ್ಟಿಫಿಕೇಟು ಪಡೆಯಬೇಕೆಂದು ಇಚ್ಛೆಯುಳ್ಳ ವಿದ್ಯಾರ್ಥಿನಿಯು ಮುಲ್ಕೀ ಪಾಸಾಗಿರಬೇಕು. ಅಂದರೆ ಅಂಥವರು ಪರೀಕ್ಷೆಗೆ ಕುಳಿತು ಸರ್ಟಿಫಿಕೇಟು ಪಡೆದು ಬೇಕಾದ ಸಂಸ್ಥೆಯಲ್ಲಿ ಈ ವಿದ್ಯೆಯನ್ನು ಕಲಿಸಬಹುದು. ಒಂದು ವರ್ಷದಲ್ಲಿ ಕಲಿತು ಪಾಸ ಆದರೆ ಈ ವಿಷಯವು ಎಲ್ಲವೂ ನಮ್ಮ ಕೈವಶವಾಗಿ ಪ್ರವೀಣರಾದೆ ವೆಂತಲ್ಲ ಕಲಿಸುತ್ತಲೂ ಕಲಿಯತಕ್ಕಂಥ ವಿಷಯವಿದು. ಇದು ಇಂತಿಷ್ಟು ಕಲಿಯಬೇಕೆಂದು ಒತ್ತಾಯ ಶಿಕ್ಷಣ ಅಥವಾ ಉದ್ಯೋಗವಲ್ಲ. ತಮಗೆ ಸಾಧ್ಯವಾದಷ್ಟು ತಮ್ಮ ಜೀವನಕ್ಕೆ ಅವಶ್ಯವಿದ್ದಷ್ಟು ಕಲಿತು ಬಿಡಬಹುದು. ಈ ವರ್ಗದಲ್ಲಿ ನಮಗೆ ಕೆಳಗಿನಂತೆ ವಿಷಯಗಳನ್ನು ಸಾಗಿಸುವರು.

ಮುಂಜಾನೆ ಹೋದ ಕೂಡಲೆ ಮನೆಗೆ ಕೊಟ್ಟ ವಿಷಯಗಳನ್ನು ನೋಡಿ ಚರ್ಚಿಸಿ ಆ ಮೇಲೆ ಹೊಲಿಗೆಯನ್ನು ಮೊದಲು ತಿಳಿದುಕೊಳ್ಳುವ ರೀತಿಯಂತೆ ಅಳತೆಯ ಪ್ರಕಾರ ಆಕೃತಿಗಳನ್ನು ತೆಗೆಯಿಸಿ ಅದೇ ಆಕೃತಿಯಂತೆ ಕಾಗದವನ್ನು ಕತ್ತರಿಸಲು ಹಚ್ಚುವರು. ಕಾಗದವನ್ನು ಕತ್ತರಿಸುವ ಉದ್ದೇಶ ವೇನಂದರೆ ಮೊದಲೇ ಅರಿವೆಯನ್ನು ಕತ್ತರಿಸಿದರೆ ಅದು ಕೆಡ ಬಹುದೆಂದು ಮಾದರಿಯಾಗಿ ಕಾಗದವನ್ನು ಕತ್ತರಿಸುವರು. ಆ ಮೇಲೆ ಅದೇ ಕಾಗದವನ್ನು ಇಟ್ಟು ಅರಿವೆಯನ್ನು ಕತ್ತರಿಸಿ ಹೊಲಿಯಲು ಹಚ್ಚುವರು. ನಾವು ಪ್ರತಿಯೊಂದರಲ್ಲಿ ಪ್ರಗತಿ ಹೊಂದುವದನ್ನು ಕಂಡು ಶಿಕ್ಷಕ-ಶಿಕ್ಷಕಿ ಇವರಿಬ್ಬರೂ, ಆನಂದ ವನ್ನು ನಮಗೆ ವಿಷಯ ತಿಳಿಸುತ್ತಲೇ ಬೀರುವರು. ಈ ವರ್ಗದ ಲಾಭವನ್ನು ಪ್ರತಿಯೊಬ್ಬ ಸ್ತ್ರೀಯು ಪಡೆಯಬೇಕು. ಈಗ ಕೆಲವರು ಪಡೆಯುತ್ತಾರೆ. ಇನ್ನು ಮುಂದೆಯಾದರೂ ಪಡೆ ಯುವರು.

ಪ್ರತಿಯೊಬ್ಬ ಸ್ತ್ರೀಯು ತಮಗೆ ವೇಳೆ ಸಿಕ್ಕಾಗ ನಿರುದ್ಯೋಗಿಯಾಗಿ ಕುಳಿತುಕೊಳ್ಳದೆ ಈ ಹೊಲಿಗೆಯ ಲಾಭವನ್ನು ಪಡೆಯಬೇಕು. ಹಿಂದೆ ಹೇಳಿದಂತೆ ನಮ್ಮ ಆರ್ಥಿಕ ಪರಿಸ್ಥಿತಿಯು ಸ್ವಾವಲಂಬಯವು ಉಚ್ಚಮಟ್ಟಕ್ಕೆ ಏರುತ್ತವೆ. ಸ್ವಲ್ಪ ವೇಳೆಯಲ್ಲಿ ಹಣದ ಆಶೆ ಇಲ್ಲಿದೆ ಪಡೆಯುವದರಲ್ಲಿ ಇದು ಮೊದಲನೇ ವಿದ್ಯೆಯು. ಇದನ್ನು ಅವಶ್ಯವಾಗಿ ಪಡೆಯುವದು ಪ್ರತಿಯೊಬ್ಬ ಸ್ತ್ರೀಯ ಮುಖ್ಯ ಕರ್ತವ್ಯ. ಈ ಯಾಂತ್ರಿಕ ಯುಗವು ಇಂಥ ಉದ್ಯೋಗದ ಮೇಲೆ ಅವಲಂಬಿಸಿದೆ.

—ಭಾಗೀರಥಿಬಾಯಿ. ಯ. ಕುರುಬರ
(ಹೊಲಿಗೆಯ ಕ್ಲಾಸ)

---

# ಸ್ವಾವಲಂಬನ

ಬರೆದವರು : ನಿರ್ಮಲಾ ಕನಕಗೇರಿ (ಹೊಲಿಗೆಯ ಕ್ಲಾಸ)

ಮಾನವರೇ, ಜೀವನಕ್ಕೆ ಆಧಾರವಾದ ವಸ್ತುಗಳನ್ನು ಕಳೆದು ಕೊಂಡು ಎಲ್ಲಿ ಅಲೆದಾಡುತ್ತಿದ್ದಿರಿ. ನಿಮ್ಮ ಮನಸ್ಸು ಇಷ್ಟೇಕೆ ಆಲಸ್ಯವಾಗಿದೆ. ನೀವು ಭಾರತಿಯ ನಾರಿಯರು ಭಾರತವನ್ನು ಉದ್ಧರಿಬೇಕು. ಇಷ್ಟೇ ಅಲ್ಲದೆ ಆದರ ಉನ್ನತಿಗಾಗಿ ಹೋರಾಡಬೇಕು. ಅಂಥ ಶಕ್ತಿ ನಮ್ಮ ಭಾರತೀಯ ನಾರಿಯರಲ್ಲಿ ಬರಬೇಕು. ಅವರಿಗೆ ಸ್ವತಂತ್ರ ಮತ್ತು ಸ್ವಾವಲಂಬನಗಳು ಬೇಕು. ಇದಕೋಸ್ಕರ ಮ. ಗಾಂಧಿ ಸ್ವಾವಲಂಬಿಯಾಗಿರುವದಕ್ಕೆ ಅನೇಕ ಕೈಗಾರಿಕೆಗಳನ್ನು ಮುಂದೆ ತಂದರು. ಅವು ಯಾವನೆಂದರೆ ನೂಲುವದು, ನೇಯುವದು ಇತ್ಯಾದಿ. ಅಂಥಹದರಲ್ಲಿ ಹೊಲಿಗೆಯ ಕೆಲಸವು ಒಂದಾಗಿದೆ.

ಬಟ್ಟೆ ತೆಗೆದು ಕೊಳ್ಳ ಬೇಕಾದರೆ ತನಗೆ ಸೇರುವಂತಹ ಬಟ್ಟೆ ತೆಗೆದುಕೊಳ್ಳುವಂತೆ ಹೊಲೆದು ಹಾಕಿ ಕೊಳ್ಳುವದು ಇಂಥ ಮಾದರಿಯದನ್ನೇ ಹೊಲಿಸಬೇಕೆಂದು ಇಚ್ಛೆ ನಮಗಿರುವದು. ಇಂಥ ಮಾದರಿಯದನ್ನು ಹೊಲಿಸುವದನ್ನು ಬಿಟ್ಟು ಇಂಥದು ಹೊಲೆದು ಹಾಕಿ ಕೊಳ್ಳಬೇಕು. ಬ ಉದ್ದೇಶ ಇಟ್ಟುಕೊಂಡರೆ ಸ್ವಂತ :ನಮ್ಮಷ್ಟಕ್ಕೆ ನಾವು ಸ್ವಾವಲಂಬಿಗಳಾಗುವೆವು. ನಮ್ಮಂತೆ

ಇಂದು ಯಾರೂ ಹೊಲಿಗೆಯ ಕಡೆಗೆ ಲಕ್ಷವನ್ನು ಕೊಡದೆಯಿದ್ದ ಸಂಗತಿಯನ್ನು ತಿಳಿಸಲು ವಿಷಾದವೆನಿಸುತ್ತವೆ. ಆದರೆ ಕೆಲವರು ಇದನ್ನು ಮನಸ್ಸಿನಿಂದ ಕಲಿಯುತ್ತಾರೆ. ಕೆಲವರು ತಮಗಷ್ಟು, ಹೊಲಿಯಲಿಕ್ಕೆ ಬಂದರೆ ಸಾಕು ಎಂದು ಬರುತ್ತಾರೆ. ಇಂಥದನ್ನು ಮುಟ್ಟಿ ಕೊಂಡು ಕಲಿಯುವ ಪ್ರೌಢರೆ ಬಹಳ. ಆದರೆ ಹೀಗೆ ಇಟ್ಟು ಕೊಳ್ಳದೆ ಮನಸ್ಸಾ ಇದರ ಲಾಭಪಡೆದು ಪರೋಪಕಾರಕ್ಕೂ ಸ್ವಾವಲಂಬನಕ್ಕು ಸಿದ್ಧರಾಗಿರಿ. ಇದರ ಲಾಭ, ಇದರ ಮುಖ್ಯಾಂಶವನ್ನೂ, ಮಹತ್ವವನ್ನು ಉಪಯೋಗವನ್ನು ಹೇಳಿದರೆ ಮೊಲಿನಂತೆ ಆಗಲಾರದೆಂದು ಆಶಿಸುತ್ತೇನೆ. ಇಷ್ಟೇ ಅಲ್ಲದೆ ಅವರು ಇದನ್ನು ಅರಿತುಕೊಳ್ಳಲು ಹಾತೋರೆಯುವರೆಂದು ನಂಬುತ್ತೇನೆ.

ಇತ್ತೀಚೆ ಹೊಲಿಗೆಯೇ ಜೀವನದಮು ಖ್ಯಬೇರು ಎಂದು ಹೇಳಬಹುದು, ಇದನ್ನು ಕಲಿತವರು ನಿಜವಾಗಿ ಧನ್ಯರು. ಇದರಿಂದ ಕೂಲಿಯ ಖರ್ಚು ಹಣದ ಉಳಿತಾಯ ಸ್ವಾವಲಂಬನ ಮುಂತಾದ ಲಾಭಗಳು ಆಗುತ್ತವೆ. ೧-೨ ಇವೆರಡು ಒಂದೆ ಇದ್ದರೂ ಅದರಲ್ಲಿ ಸ್ವಲ್ಪ ಹೊಸ ನಮುನೆಯಾದರೆ ಹೊಲಿಗೆಗೆ ೧ ರೂ. ಅಥವ ೧೦-೪೮ ಕೊಡಬೇಕಾಗುತ್ತದೆ. ಇದೇ ಹಣವನ್ನು ಕೊಟ್ಟು ಮತ್ತೊಂದು ಅರಿವೆಯನ್ನು ತೆಗೆದುಕೊಂಡರೆ ನಿಮಗೆ ಬೇಕಾದ ೨ ಅರಿವೆಗಳು ಸಿದ್ಧವಾಗುತ್ತವೆ. ಇಂಥಹದರಲ್ಲಿ ನೀವು ಕಲಿಯದೆ ಇದ್ದರೆ ಅವರು ಕೊಟ್ಟಾಗ ಅವರು ಬೇಡಿದಷ್ಟು ಹಣವನ್ನು ಕೊಟ್ಟು ತರಬೇಕಾಗುತ್ತದೆ. ಆದ್ದರಿಂದ ನೀವೇಕಲಿತಿದ್ದರೆ ಹಣದ ಉಳಿತಾಯವಾಗುತ್ತದೆ. ಮತ್ತು ಅವನ (ಸಿಂಪಿಗನ) ಮೇಲೆ ಅವಲಂಭಿಸುವದು ತಪ್ಪುತ್ತದಲ್ಲವೆ? ನೀವು ಕಲಿತರೆ ಹಣದ ಪ್ರಶ್ನೆಯು ನಿಮ್ಮನ್ನು ಕಾಡಲಾರದು.

ಎರಡನೆಯದಾಗಿ ಹಣದ ಉಳಿತಾಯ, ನೀವೆ ಕಲಿತರೆ ನೀವೆ ಹೊಲಿದರೆ ಹಣವನ್ನೇನು ಕೊಡಬೇಕಾಗಿಲ್ಲ. ತಾನೆ ಇದರಿಂದ ನೀವು ಸ್ವಾವಲಂಬಿಗಳಾಗಿ ನಿಮ್ಮ ನಿಮ್ಮ ಬಟ್ಟೆಗಳನ್ನು ಸಿದ್ಧ ಪಡಿಸಿಕೊಳ್ಳುವ ಸಾಮರ್ಥ್ಯ ನಿಮ್ಮಲ್ಲಿ ಬರುತ್ತಿದೆ. ಇದರಿಂದ ಸಿಂಪಿಗನಿಗೆ ಕೊಡುವ ಹಣವು ಉಳಿಯುತ್ತದಲ್ಲವೆ? ಅಲ್ಲದೆ ಅವನ ಮೇಲೆ ಅವಲಂಬಿಸುವದು ತಪ್ಪುವದಲ್ಲವೆ?

ಮೂರನೆಯವಾಗಿ ಇನ್ನು ವಿಚಾರಿಸೋಣ, ಉಡುಪು ನೀವು ಬೀದಿಯಲ್ಲಿ ಬದಲಾಯಿಸಿದ್ದಿರಿ ಎಂದು ತಿಳಿಯಿರಿ. ಒಬ್ಬ ಹುಡುಗಿ ಅಂದವಾದ ಫ್ರಾಕನ್ನು ಹಾಕಿಕೊಂಡು ಬದಲಾಯಿಸಿದ್ದಾಳೆ. ಅದನ್ನು ನೋಡಿ ನಿಮಗೆ ಅಂಥದನ್ನು ಹೊಲಿಸಿ ಕೊಳ್ಳಬೇಕೆಂದು ಆಶೆ ಬಲವಾಗುತ್ತದೆ. ಕೊನೆಗೆ ಮನೆಯಲ್ಲಿ ಬೈಸಿಕೊಂಡು ಅಂಥದೇ ಅಷ್ಟೇ ಕಿಮ್ಮತ್ತಿನ ಬಟ್ಟೆಯನ್ನು ತಂದು ಸಿಂಪಿಗನ ಬಳಿಗೆ ಹೋಗಿ ಅವನಿಗೆ ಫ್ರಾಕಿನ ಛಂದಸ್ಸನ್ನು ವರ್ಣಿಸಿ ಹಾಗೆ ಹೊಲೆಯಲು ಹೇಳಿ ಬೇಡಿದಷ್ಟು ಹಣಕ್ಕೆ ಒಪ್ಪಿ ಹೊಲಿಯಲು ಹಾಕಿಬರುತ್ತೀರಿ. ನಿರ್ವಾಹವಿಲ್ಲ ಅಂಥ ಫ್ರಾಕ ಬೇಕಾಗಿದೆಯಲ್ಲವೆ? ಕೆಲವು ದಿನಗಳ ನಂತರ ಅದು ಬರಲು ಅದು ಆದರೆ ಹಾಗೆ ಆಗಿಲ್ಲವೆಂದು ಅವನೊಡನೆ ವಾದ ಹಾಕುತ್ತೀರಿ. ಅದು ಒಂದಿಲ್ಲ ಒಂದು ದೋಷದಿಂದ

ಕೂಡಿರುತ್ತದೆ. ಹಣಕೊಟ್ಟ ಅಂದವಾದ ಅರಿವೆ ತಂದು ಹೊಲಿಸಿದ್ದಾಯಿತು. ಆದರೂ ಮನಸ್ಸಿನಂತೆ ಆಗಲಿಲ್ಲವೆಂದು ವಿಷಾದ. ಇದರಕೊರತೆಯೇನು ? ಗೊತ್ತೆ. ಕಲಿಯದೆ ಇದ್ದುದು. ನೀವೇ ಕಲಿತಿದ್ದರೆ ಇಷ್ಟೆಲ್ಲ ಆಗುತ್ತ ಇರಲಿಲ್ಲ. ಆದ್ದರಿಂದ ನೀವು ಪರಾವಲಂಬಿಗಳಾಗದೆ ಸ್ವಾವಲಂಬಿಗಳಾಗಲು ಯತ್ನಿಸಿರಿ. ಆದರಿಂದ ನಿಮ್ಮ ಇಚ್ಛೆಯ ಹಾಗೆ ಹೊಲೆದು ಕೊಳ್ಳಲು ಬರುತ್ತದೆಯಲ್ಲವೆ ?

ಇದು ಹೆಚ್ಚಾಗಿ ಸ್ತ್ರೀಯರಿಗೆ ಬಹಳ ಮಹತ್ವದ್ದೆಂದು ಹೇಳಬಯಸುತ್ತೇನೆ. ಸ್ತ್ರೀಯು ಗೃಹಿಣಿಯಾಗಲಿ ಇಲ್ಲವೆ ಕಲಿಯದೆ ಇರುವವಳಾಗಲಿ ವಿಶ್ರಾಂತಿ ಸಮಯದಲ್ಲಿ ತನ್ನ ಅರಿವೆಗಳನ್ನು ಹೊಲೆದು ಕೊಳ್ಳುವದಷ್ಟೆ ಅಲ್ಲದೆ ನೆರೆಹೊರೆಯವರಿಗೆ ಬಟ್ಟೆಗಳನ್ನು ಹೊಲೆದು ಕೊಟ್ಟರೆ ತನ್ನ ಜೀವನವನ್ನು ಸಾಗಿಸಲು ಸಮರ್ಥಳಾಗುತ್ತಾಳೆ. (ಇದೆಲ್ಲ ಹೊಲಿಗೆ ಕಲಿತರೇ ಇಷ್ಟೆ). ಇದರಿಂದ ಸ್ತ್ರೀಯು ಸ್ವಾವಲಂಬಿಯಾಗುವಳಲ್ಲದೆ ಸಾಧಾರಣ ತನ್ನ ಕುಟುಂಬವನ್ನು ಸಾಗಿಸಿಕೊಂಡು ಹೋಗಲು ಸಮರ್ಥಳಾಗುವಳು. ಸ್ತ್ರೀಯು ನಿರುದ್ಯೋಗಿಯಾಗಿ ಇಲ್ಲದ ಸಲ್ಲದ ಹರಟೆಯನ್ನು ಕೊಚ್ಚದೆ ಉದ್ಯೋಗಿಯಾಗಿ ತನ್ನ ಮನೆಯಲ್ಲಿ ಕುಳಿತುಕೊಳ್ಳಲು ಬರುತ್ತದೆ. ಮೈ-ಯನ್ನು ಮುಚ್ಚಿಕೊಳ್ಳಲಿಕ್ಕೆ ಅರಿವೆಗಳು ಬೇಕು. ಅಂದವಾದ ಬಟ್ಟೆಗಳನ್ನು ಹೊಲೆದು ತೊಟ್ಟುಕೊಳ್ಳಲಿಕ್ಕೆ ಹೊಲಿಗೆಬೇಕು. ಅದಕ್ಕಾಗಿ ಸಿಂಪಿಗರು ಬೇಕು. ಹೀಗೆ ನೀವು ಸಿಂಪಿಗರಮೇಲೆ ಅವಲಂಬಿಸಬೇಕಾಗುವದಲ್ಲವೆ ? ನೀವೇ ಕಲಿತರೆ ಯಾರ ಮೇಲೂ ಅವಲಂಬಿಸಬೇಕಾಗುವದಿಲ್ಲ. ಆದ್ದರಿಂದ ಹೊಲಿಗೆಯು ಒಂದು ಮುಖ್ಯ ಸಾಧನವಾಗಿ ಪರಿಣಮಿಸಿದೆ.

ಇನ್ನು ನೀವು ಪ್ರಶ್ನೆಯನ್ನು ಮಾಡಬಹುದು. ಇದು ಪ್ರತಿಯೊಬ್ಬರಿಗೂ ಇಡಲು ಸಾಧ್ಯವೇ ಎಂದು ಇದಕ್ಕೆ ಭಂಡವಲು ಹೆಚ್ಚಿಗೆ ಬೇಕಾಗಲಾರದು. ಸ್ವಲ್ಪ ಭಾಂಡವಲನ್ನು ಹಾಕಿ ಪ್ರಗತಿಯ ಪ್ರಕಾರ ಅದರ ಎರಡು ಮೂರರಷ್ಟು ಹಣವನ್ನು ಗಳಿಸಬಹುದು. ಸ್ವತಂತ್ರವಾದ ಧಂದೆ. ಪರೋಪಕಾರಿ ಧಂದೆ ಸ್ವೇಚ್ಛೆಯ ಪ್ರಕಾರ ಬಟ್ಟೆ ಸಿದ್ಧಮಾಡಿಕೊಳ್ಳುವ ಉದ್ಯೋಗವಲ್ಲವೆ ? ನೌಕರಿಗೋಸ್ಕರ ನಾಲ್ಕು ಜನರ ಕೈ-ಕಾಲುಗಳನ್ನು ಹಿಡಿದುಕೊಂಡು ಲಂಚಕೊಟ್ಟು ೬೦ ರೂಪಾಯಿ ನೌಕರಿಯನ್ನು ಹಿಡಿಯುವದಲ್ಲವೆ ? ಭಗವಂತನು ನಿಮಗೆ ಕೈ, ಕಾಲು, ಕಣ್ಣು ಎಲ್ಲ ಅಂಗವನ್ನು ಕೊಟ್ಟಿದ್ದಾನೆ. ಅದರ ಉಪಯೋಗವಾಗಬಾರದೆ. ಕೇವಲ ಊಟ ಮಾಡಲಿಕ್ಕೆ ಕೈಗಳನ್ನು ನಡೆಯಲಿಕ್ಕಷ್ಟೇ ಕಾಲುಗಳನ್ನು ಕೊಟ್ಟಿಲ್ಲ. ಅದರ ಉಪಯೋಗದಿಂದ ಕೈಕೆಲಸವನ್ನು ಏಕೆ ಮಾಡಬಾರದು. ಅಂಥ ಕೈಕೆಲಸಗಳಲ್ಲಿ ಹೊಲಿಗೆಯು ಒಂದು ಆಗಿದೆ. ಹೊಲಿಗೆಯೇ ಇಂದು ನಿಮ್ಮ ಜೀವನದ ಆಧಾರ. ಇಂದು ಪ್ರತಿಯೊಬ್ಬ ಸ್ತ್ರೀ ಇದರಿಂದ ತನ್ನ ಉದರ ನಿರ್ವಾಹವನ್ನು ತೂಗಿಸಿಕೊಂಡು ಹೋಗಲು ಸಮರ್ಥಳಾಗುತ್ತಾಳೆ.

ಬೇರೊಬ್ಬರ ಮೇಲೆ ಅವಲಂಬಿಸದೆ ಆದಷ್ಟು ಸ್ವಾವಲಂಬಿಗಳು ಮತ್ತು ಪರೋಪಕಾರಿಯಾಗಲಿಕ್ಕೆ ಪ್ರಯತ್ನಿಸಿರಿ. ಇದರಿಂದ ನಿಮ್ಮ ಏಳ್ಗೆ ಇದೆ. ರಾಷ್ಟ್ರದ ಏಳ್ಗೆ ಇದೆ. ಹೇಗೆ ಹೊಲಿಗೆಯ ಮಹತ್ವವಗಳನ್ನು ಓದುಗರಿಗೆ ತಿಳಿಸಿದ್ದೇನೆ. ಹೊಲಿಗೆಯನ್ನು ಕಲಿತು ಪರೋಪಕಾರಿಗಳು ಮತ್ತು ಸ್ವಾವಲಂಬಿಗಳು ಆಗುವಿರೆಂದು ನಂಬಿದ್ದೇನೆ. ಇಷ್ಟು ಓದಿದ ಮೇಲಾದರೂ ಹೊಲಿಗೆಯನ್ನು ಕಲಿಯುವ ಇಚ್ಛೆ ಪಡೆಯುವರಲ್ಲವೆ ?





# ಸುಶಿಕ್ಷಿತರ ಗುರಿ



ಬರೆದವರು : **ಶ್ರೀಮತಿ ಸುಬ್ಬಮ್ಮಾ** ಬೆಂಗಳೂರ

ಜಗತ್ತಿನಲ್ಲಿ ಪ್ರತಿಯೊಬ್ಬ ವ್ಯಕ್ತಿಯು ತನ್ನ ಉಪಜೀವನಾರ್ಥವಾಗಿ ಯಾವದಾದರೊಂದು ಉದ್ಯೋಗವನ್ನು ಕೈಕೊಳ್ಳಲೇ ಬೇಕಲ್ಲವೆ? ಸಾಮಾನ್ಯವಾಗಿ ದ್ರವ್ಯ ಸಂಪಾದನೆ ಕೀರ್ತಿ ಇವುಗಳೆ ಮಾನವನ ಉದ್ಯೋಗದ ಮುಖ್ಯ ಗುರಿಗಳಾಗಿರುತ್ತವೆ. ಇಂಥ ಗುರಿಗಳನಿಟ್ಟು ಕೊಂಡವರು ನಿಜವಾಗಿಯೂ ಸ್ವಾರ್ಥಿಗಳು. ಮನುಷ್ಯನು ಸಮಾಜದಲ್ಲಿಯ ಒಂದು ಘಟಕವು ಅವನು ಒಂಟಿಗನಾಗಿ ಜೀವಿಸಲಾರನು ತನ್ನ ಹಾಗೂ ಪರರ ಹಿತವೇ ಆತನ ಜೀವನದ ಗುರಿಯಾಗಿರಬೇಕು. ಭಾರತವು ಹಳ್ಳಿಗಳ ನಾಡು ೧೦೦ಕ್ಕೆ ೭೦ ರಷ್ಟು ಜನರು ಗ್ರಾಮ ನಿವಾಸಿಗಳೇ ಅದರಲ್ಲಿ ೧೦೦ಕ್ಕೆ ೮೦ರಷ್ಟು ಜನರು ನಿರಕ್ಷರಿಗಳು ಅವರ ದುಸ್ಥಿತಿಗೆ ಅವರ ಅಜ್ಞಾನವೇ ಮೂಲ ಕಾರಣವಾಗಿರುತ್ತದೆ. ಭಾರತವು ಸ್ವಾತಂತ್ರವಾದರೂ ಕೂಡ ಹಳ್ಳಿಗರು ಮಾತ್ರ ಇನ್ನೂ ಮಾನಸಿಕ ದಾಸ್ಯದಿಂದ ಮುಕ್ತರಾಗಿಲ್ಲ. ಪ್ರತಿಯೊಬ್ಬ ಸುಸಿಕ್ಷಿತರು ಔದ್ಯೋಗಿಕ ದಂಧೆಯಲ್ಲಿ ನಿರತರಾಗಿ ಅಸಿಕ್ಷಿತರನ್ನು ಸುಸಿಕ್ಷಿತರನ್ನಾಗಿ ಮಾಡುವವರೆಗೆ ಅಸಿಕ್ಷಿತರು ಮಾನಸಿಕ ದಾಸ್ಯದಿಂದ ಬಿಡುಗಡೆಯಾಗಲಾರರು. ಅಜ್ಞಾನಿ ಜನರನ್ನು ಸುಜ್ಞಾನಿ ಜನರನ್ನಾಗಿ ಮಾಡಲು ಔದ್ಯೋಗಿಕ ದಂಧೆಯೇ ಮುಖ್ಯ ಸಾಧನ. ಉದ್ಯೋಗದ ಮುಖಾಂತರ ತಿಳಿಸಿಕೊಟ್ಟ ಜ್ಞಾನವೇ ನಿಜವಾದ ಜ್ಞಾನ ಅನೇಕ ಜನರು ಒಂದು ಉದ್ಯೋಗದಲ್ಲಿ ನಿರತರಾದರೆ ತಮ್ಮ ಜೀವಮಾನವೆಲ್ಲ ಅದರಲ್ಲಿಯೇ ಸಫಲವಾಗಬೇಕೆಂದು ದುಡಿಯುತ್ತಾರೆ. ಆದರೆ ದುಡಿಮೆಯ ಮಧ್ಯದಲ್ಲಿ ವಿಶ್ರಾಂತಿಯೆಂದು ಎಷ್ಟೋ ವೇಳೆಯನ್ನು ನಿರರ್ಥಕವಾಗಿ ಕಳೆಯುತ್ತಾರೆ. ವಿಶ್ರಾಂತಿ ಎಂದರೆ ಒಂದು ಕೆಲಸದ ನಂತರ ಮತ್ತೊಂದು ಕೆಲಸದಲ್ಲಿ ನಿರತರಾಗುವದೇ ಎಂಬ ಕಲ್ಪನೆಯೂ ಕೂಡ ಅವರಲ್ಲಿರುವದಿಲ್ಲ. ಆದಕ್ಕೆ ಅವರಲ್ಲಿ ಬೇರೆ ಬೇರೆ ಕಲೆಗಳು ಇಲ್ಲದೆ ಇರುವದೇ ಮುಖ್ಯ ಕಾರಣ. ಕಲಾವಂತರಾದವರು ತಮ್ಮ ಜೀವ ಮಾನವನ್ನೆಲ್ಲಾ ಕಲೋಪಾಸನೆಯಲ್ಲಿಯೇ ಕಳೆಯುತ್ತಾರೆ. ಅವರಿಗೆ ವಿಶ್ರಾಂತಿ ವೇಳೆ ಎಂದರೆ ಅನೇಕ ಕಲೆಗಳ ವಿಮರ್ಶೆಯಲ್ಲಿ ಕಳೆಯುವಕಾಲ.

ಉದ್ಯಮೇನಹಿಸಿಧ್ಯಂತಿ ಕಾರ್ಯಾಣಿ ನ ಮನೋರಥೈಃ ನಹಿಸುಪ್ತಸ್ಯ ಸಿಂಹಸ್ಯ ಪ್ರವಿಶಂತಿಃ ಮುಖೇ ಮೃಗಾಃ ಎಂದು ಸುಭಾಷಿತಕಾರರು ಹೇಳಿದಂತೆ ಉದ್ಯೋಗದಿಂದ ತಮ್ಮ ಕಾರ್ಯವು ಸಫಲವಾಗುತ್ತದೆ. ಉದ್ಯೋಗವನ್ನು ಬಿಟ್ಟು ಮನಸಿನಲ್ಲಿಯೇ ವಿಚಾರ ಮಾಡುತ್ತ ಕುಳಿತುಕೊಂಡರೆ ಮಲಗಿದ ಸಿಂಹದ ಬಾಯಲ್ಲಿ ಜಿಗರೆಗಳು ಹ್ಯಾಗೆ ಹೋಗಿ ಬೀಳುವದಿಲ್ಲವೋ ಹಾಗೆ ತಮ್ಮ ಕಾರ್ಯಗಳು ನಿಷ್ಫಲವಾಗುತ್ತವೆ. ಪೂಜ್ಯ ಬಾಪೂಜಿಯವರ ಉಪದೇಶದಂತೆ ನೂಲುವದು, ನೇಯುವದು ಪ್ರತಿ ದಿನವು ಮಾನವನ ಜೀವನದಲ್ಲಿಯೇ ಒಂದಂಗವಾಗಿರುವಂತೆ ಗ್ರಾಮ ನಿವಾಸಿಗರಿಗೆ ಸಂದೇಶ ಕೊಡುವದೇ ಸುಶಿಕ್ಷಿತರ ಆದ್ಯ ಗುರಿಯಾಗಿರಬೇಕು. ಖಾದಿಯೇ ಸ್ವರ್ಗದ ಹಾದಿ ಎಂದು ಗಾಂಧೀಜಿಯವರು ಹೇಳಿದಂತೆ ನೂಲುವಾಗ, ನೇಯುವಾಗ ಕಂಡುಬರುವ ಒಂದು ಶಾಂತ ಪ್ರವೃತ್ತಿಯನ್ನು ನೋಡಿದರೆ ಅವರಲ್ಲಿ ಅಮೌಲ್ಯವಾದ ಒಂದು ತಪಶ್ಚರ್ಯವೇ ತೋರಿ ಬಂದಂತೆ ಭಾಸವಾಗುತ್ತಿದೆ. ಅಂದ ಮೇಲೆ ಖಾದಿಯೇ ಸ್ವರ್ಗ, ಸ್ವರ್ಗವೇ ಖಾದಿ ಎನ್ನಲುಸಂದೇಹವಿಲ್ಲ.

ಈಗಿನ ಯುಗ ಅಂದರೆ ವಿಜ್ಞಾನದ ಪ್ರಗತಿ ಹೆಚ್ಚಿದಂತೆ ಮಾನವನು ತನ್ನ ನಡೆನುಡಿ ವೇಷಭೂಷಣಗಳನ್ನೂ ಕೂಡ ಬದಲಿಸಲು ಇಚ್ಛಿಸುತ್ತಾನೆ. ಆದರೆ ಕೆಲವೊಂದು ಅರಿವೆಗಳನ್ನು ಹೊಲಿದು ಹಾಕಿಕೊಳ್ಳಬೇಕು. ಆ ಹೊಲಿಗೆ ಸ್ವತಃ ತಮಗೆ ಬರುತ್ತಿದ್ದರೆ ತಮ್ಮ ಇಚ್ಛೆಪ್ರಕಾರ ಹೊಲಿದು ಹಾಕಿಕೊಳ್ಳಬಹುದು ತಮಗೆ ಬಾರದೆ ಬೇರೆಯವರಲ್ಲಿ ಕೊಡಲು ಇಚ್ಛಿಸಿದರೆ ತಮ್ಮ ಇಚ್ಛೆ ಪ್ರಕಾರ ಹೊಲಿಗೆಯು ಆಗಲಿಕ್ಕಿಲ್ಲ ವ್ಯರ್ಥವಾಗಿ ರೊಕ್ಕವು ಖರ್ಚು. ಕೇವಲ ಒಂದು ಹೊಲಿಗೆಗೋಸ್ಕರ ನೂರಾರು ರೂಪಾಯಿಗಳನ್ನು ಕಳೆಯುತ್ತಾರೆ. ಸಿನೇಮ, ನಾಟಕ, ಸರ್ಕಸ್ ಮುಂತಾದವುಗಳಲ್ಲಿ ಸ್ತ್ರೀಯರ ಬೇರೆ ಬೇರೆ ಮಾದರಿಯ ಜಂಪರ್. ಬ್ಲಾವಜ ಮುಂತಾದವುಗಳನ್ನು ನೋಡಿ ತಾವು ಅದರಂತೆ ಹೊಲಿಸಿ ಹಾಕಿಕೊಳ್ಳ

ಬೇಕೆಂದು ಆಸಿಸುತ್ತಾರೆ ಆದರೆ ಆರ್ಥಿಕ ಪರಿಸ್ಥಿತಿಯ ಮೂಲಕ ಹೊಸ ಮಾದರಿಯ ಜಂಪರ್ ಹೊಲಿಸಲು ಸಾಧ್ಯವಾಗುವದಿಲ್ಲ. ಸಾದಾ ಹೊಲಿಗೆಗೆ ತೆಗೆದು ಕೊಳ್ಳುವದಕಿಂತ ಹೊಸ ಮಾದರಿಯ ಹೊಲಿಗೆಗೆ ಹೆಚ್ಚು ಪ್ರಮಣದಲ್ಲಿ ರೊಕ್ಕ ಕೇಳುತ್ತಾರೆ. ಆದ್ದರಿಂದ ಎಷ್ಟೋ ಜನರು ನಿರಾಸ್ರಿತರಾಗುತ್ತಾರೆ. ವಿದ್ಯೆಯು ಕೇವಲ ನೌಕರಿಗಾಗಿಯೇ ಅಲ್ಲವೆಂಬ ಮಾತು ನಿಜವಾದರೂ ಸಹ ಈಗಿನ ಪರಿಸ್ಥಿತಿಯಲ್ಲಿ ವಿದ್ಯೆಯು ನೌಕರಿಯ ಅಳತೆಗೋಲಾಗಿದೆ. ದೊಡ್ಡ ದೊಡ್ಡ ನೌಕರಿಮಾಡಿ ದೊಡ್ಡ ಪಟ್ಟಣಗಳಲ್ಲೇ ಇರಬೇಕೆಂಬ ವಿಚಾರ ಮಾಡದೆ ಸಣ್ಣ ಪುಟ್ಟ ಕೈಗಾರಿಕೆ ಹಾಗೂ ಹೊಲಿಗೆ ಮುಂತಾದ ವಿದ್ಯೆಯನ್ನು ಕಲಿಸಿ ಅಸಿಕ್ಷಿತರನ್ನು ಸುಸಿಕ್ಷಿತರನ್ನಾಗಿ ಮಾಡಿ ಅವರ ನಿರಾಸೆಯನ್ನು ಹೋಗಲಾಡಿಸುವದೆ ಪ್ರತಿಯೊಬ್ಬ ಸುಸಿಕ್ಷಿತರ ಗುರಿಯಾಗಿರಬೇಕು. ಆರ್ಥಿಕ ದೃಷ್ಟಿಯಿಂದ ಹಾಗೂ ಸ್ವಾತಂತ್ರ ದಂಥೆಯ ದೃಷ್ಟಿಯಿಂದ ನೋಡಿದರೆ ಹೊಲಿಗೆ ರಾಜಕೆಲಸದಂತಿದೆ. ಎನ್ನಲು ಸಂದೇಹವಿಲ್ಲ.

ಉದಾ:—ಸ್ವಲ್ಪ ರೊಕ್ಕದಲ್ಲಿ ಬೇಕಾದ ಸಾಮಾನುಗಳನ್ನೆಲ್ಲ ಮಾಡಿಕೊಂಡು ಮನೆಯಲ್ಲಿಯೇ ಮಿಶನ್ ಇಟ್ಟುಕೊಂಡು ತಮ್ಮ ಬಿಡುವಿನ ವೇಳೆಯಲ್ಲಿ ಅನೇಕ ವಸ್ತ್ರ ಗಳನ್ನು ಹೊಲಿದು ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಸುದಾರಿಸಿಕೊಳ್ಳುವದಲ್ಲದೆ ಜನರ ಪ್ರೀತಿಗೆ ಪಾತ್ರರಾಗಬಹುದು. ಶಿಕ್ಷಕ ಶಿಕ್ಷಕಿಯರಾಗಲಿ ಡಾಕ್ಟರ್. ನರ್ಸರಾಗಲಿ ಯಾವದೇ ರಾಜಕೀಯ ಕೆಲಸವಾದರೂ ಕೂಡ ಒಬ್ಬರ ಕೈಕೆಳಗೆ ಮಾಡಲೇಬೇಕು. ತಮ್ಮ ಮೇಲೆ ಮೇಲಧಿಕಾರಿ ಇದ್ದ ಮೇಲೆ ಆ ನೌಕರಿಯಲ್ಲಿ ಎಷ್ಟರ ಮಟ್ಟಿಗೆ ಸ್ವಾತಂತ್ರಸಿಕ್ಕ ಬಹುದು ನಿಜವಾದ ಸ್ವಾತಂತ್ರ್ಯ ಬಯಸುವವರಿಗೆ ಹೊಲಿಗೆಯನ್ನೆ ಮುಖ್ಯ ಸಾದನೆಯಾಗಿ ಮಾಡುವದೇ ಸುಸಿಕ್ಷಿತರ ಗುರಿ. ಮನುಷ್ಯನಿಗೆ ಸೌಂದರ್ಯ ಯಾವಾಗಲುಸಾಕಷ್ಟು ಆನಂದವನ್ನು ಕೊಡುತ್ತದೆ ಆ ಸೌಂದರ್ಯವನ್ನು ಪಡೆಯ ಬೇಕಾದರೆ ಸಣ್ಣ ಪುಟ್ಟ ಕೈಗಾರಿಕೆಯ ಕೆಲಸಗಳನ್ನು ಗಮನಿಸಬೇಕು. ಅಂದರೆಮಾತ್ರ ಕಲೆ ಕೈಗಾರಿಕೆಗಳಿಂದ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಬಹುದು. "ಸಾಹಿತ್ಯ ಸಂಗೀತ ಕಲಾವಿಹೀನಃ ಸಾಕ್ಷಾತ್ ಪಶುಃ ಪುಚ್ಛವಿಷಾಣ ಹೀನಃ ಎಂದು ಸುಭಾಷಿತಕಾರರು ಕಲೆ ಇಲ್ಲದವರನ್ನು ಬಾಲ ಕೊಂಬುಗಳಿಲ್ಲದ ಪಶುಸಮಾನರೆಂದಿದ್ದಾರೆ. ಒಂದೆರಡು ಕೈಗಾರಿಕೆಯ ವಸ್ತುಗಳನ್ನು ಮಾಡಿದಲ್ಲಿ ಅದು ಕೈಗಾರಿಯಲ್ಲ ನಾಲ್ಕಾರು ಪುಟ ಬರೆದು ತುಂಬಿಸಿದಲ್ಲಿ ಅದು ಸಾಹಿತ್ಯವಲ್ಲಿ ಹತ್ತೆಂಟು ಹಾಡುಗಳನ್ನು ಗುಣ ಗುಣಿಸಿದರೆ ಅದು ಸಂಗೀತವಲ್ಲ. ಕೈಕಾಲುಗಳನ್ನು ಅತ್ತಿತ್ತ ಹೊರಳಿಸಿ. ವ್ಯಮಣಿಸಿದಲ್ಲಿ ಅದು ನೃತ್ಯವಲ್ಲ. ಎಲ್ಲದಕ್ಕೂ ಒಂದು ಕಟ್ಟು ಇರಬೇಕು. ತಾಳ ಲಯಗಳಿರಬೇಕು. ಅಂದರೆ ಮಾತ್ರ ನಿಜವಾದ ಕಲೆ ಆಗಬಲ್ಲದು. ಶಾಲೆಯಲ್ಲಿ ಗುರುಗಳು ಹೇಳಿದ ವಿದ್ಯೆಯನ್ನು ಅರಗಿಸಿಕೊಳ್ಳಬೇಕಾದರೆ ಆವರು ಒಂದು ರೀತಿಯಿಂದ ತಪಶ್ಚರ್ಯ ಮಾಡಿಯೇ ಆದನ್ನರಗಿಸಿಕೊಳ್ಳಬೇಕು. ಗುರುಗಳು ಮಕ್ಕಳಿಗೆ ನೆವಮಾತ್ರ ಕೇವಲ ಈ ಮಾರ್ಗದಿಂದ ಸಾಗಿರಿ ಎಂದು ಹೇಳುವ ಮಾರ್ಗದರ್ಶಕರು ಮಾತ್ರ ಆದರೆ ಆ ವಿದ್ಯೆಯನ್ನು ತನ್ನದನ್ನಾಗಿ ಮಾಡಿಕ್ಕೊವ ಕಲೆ ವಿದ್ಯಾರ್ಥಿಯರಲ್ಲಿರಬೇಕು. ಯಾವದಕ್ಕೂ ಕಲೆಯೇ ಮುಖ್ಯ. ನಿರಕ್ಷರಿಗಳೇ ಇರಲಿ ಸಾಕ್ಷರಿಗಳೇ ಇರಲಿ ಎಲ್ಲರನ್ನು ಕಲೆವಂತರನ್ನಾಗಿ ಮಾಡುವದೆ ಸುಸಿಕ್ಷಿತರ ಗುರಿಯಾಗಿರಬೇಕು.

# "ವಿದ್ಯಾ ವಿನಯೇನ್ ಶೋಭತೆ"

ಬರೆದವರು : ಎನ್. ಎಸ್. ಕವಲಗಿ ಕ್ಲಾರ್ಕ ವ. ಸೇ. ಸ. ಧಾರವಾಡ

ವಿದ್ಯೆ ಅಥವಾ ಶಿಕ್ಷಣವೇ ಜ್ಞಾನದ ಹೊರಬಾಗಿಲು. ವಿದ್ಯೆಯು ಪ್ರತಿಯೊಬ್ಬ ಮನುಷ್ಯನಿಗೆ ಅವಶ್ಯವಾದ ವಸ್ತು. ಅದರಿಂದಲೇ ಪ್ರತಿಯೊಬ್ಬ ಮನುಷ್ಯನಿಗೆ ಈ ಜಗತ್ತಿನಲ್ಲಿ ತನ್ನ ಜೀವನದ ರಥವನ್ನು ಸಾಗಿಸಲು ಸಹಾಯವಾಗುವದು ಇಷ್ಟೇ ಅಲ್ಲದೆ ಈ ೨೦ನೆ ಶತಮಾನದಲ್ಲಿ (ವಿದ್ಯೆಯ) ಶಿಕ್ಷಣದ ಮಹತ್ವ ಅಷ್ಟಿಷ್ಟಲ್ಲ. ಯಾವ ರಾಷ್ಟ್ರವೇ ಆಗಲಿ ಯಾವದೇಶವೇಆಗಲಿ ಮುಂದೆ ವರದಿದ್ದಾರೆ. ದು ತನ್ನ ಅಗಾಧ ಪ್ರಭಾವವನ್ನು ಅಷ್ಟು ದಿಕ್ಕುಗಳಲ್ಲಿ ಬೀರಿ ಅನುಭವ ಅಮೃತವನ್ನು ಸಂಪಾದಿಸಿದ್ದಾರೆ ಅದು ಶಿಕ್ಷಣದಿಂದಲೇ ಎಂದು ಹೇಳಲಿಕ್ಕೆ ನಮಗೆ ಹೆಮ್ಮೆ ಎನಿಸುತ್ತದೆ.

ಕೆಲವು ಜನರು ವಿದ್ಯೆಯನ್ನು ಹೊಟ್ಟೆಯ ಪಾಡಿಗಾಗಿ ದೊರಕಿಸುತ್ತಾರೆ. ಶಿಕ್ಷಣವು ದ್ವಿ ಬಗೆಯ ವಿಚಾರಗಳಿಂದ ಉಪಯೋಗಿಸಲಿಕ್ಕೆ ಬರುತ್ತದೆ. ಮೊದಲನೇಯದಾಗಿ ತರುಣರು ಜೀವನೋಪಾಯವನ್ನು ದೊರಕಿಸಿ ಅದರಲ್ಲಿ ತಮ್ಮ ಜ್ಞಾನ ಉಪಯೋಗವನ್ನು ವ್ಯಕ್ತಪಡಿಸಿ ತಮ್ಮ ಜೀವನದ ಯಾತ್ರೆಯನ್ನು ನಡೆಸುವರು. ಎರಡನೆಯದಾಗಿ ಸುಶಿಕ್ಷಿತರಿಗೆ ತಾಂತ್ರಿಕ ನೌಕರಿಯನ್ನು ದಯಪಾಲಿಸುವದು. ವಿದ್ಯಾರ್ಥಿಯ ಮನಸ್ಸಿನಲ್ಲಿ ವಿನಯವನ್ನು ಬಿತ್ತರಿಸುವದೇ ಭಾರತೀಯ ವಿದ್ಯದ ಸೊಗಸಾದ ರೀತಿಯು. ವಿನಯವು ವಿನೀತವಿರಲಿಕ್ಕೆಬೇಕು. ಭಗವದ್ ಗೀತೆಯಲ್ಲಿ ಶ್ರೀಕೃಷ್ಣನಿಂದ "ವಿದ್ಯಾ ವಿನಯ ಸಂಪನ್ನ" ಎಂದು ಉಚ್ಚರಿಸಲ್ಪಟ್ಟಿದೆ.

ವಿನೀತನೆಂದರೆ ಸಂಸ್ಕೃತಿಯನ್ನು ಹೊಂದಿದ ಮನುಷ್ಯ ಮತ್ತು ಶಿಕ್ಷಣದಿಂದ ಮನುಷ್ಯ ವಿನಯವನ್ನು ಹೊಂದುವದಲ್ಲದೆ ಸಂಪತ್ತನ್ನು ಮತ್ತು ಸ್ನೇಹತನವನ್ನು ಹೊಂದುತ್ತಾನೆ. ಅವಿನಯದಿಂದ ಮದ ಮತ್ಸರಕ್ಕೆ ಅವಕಾಶವನ್ನು ಒದಗಿಸಿ ಕೊಡಲ್ಪಡುತ್ತದೆ.

ಶ್ರೀ ರಾಮಚಂದ್ರನ ವಿಷಯವಾಗಿ ಹೇಳಬೇಕಾದರೆ ಅವನು ವಿನಯದ ಆಭರಣವನ್ನು ಧರಿಸಿದಂತೆ ಕಾಣುತ್ತದೆ. ಸಂಸ್ಕೃತದಲ್ಲಿ ಸಂಭಾಷಿತದಂತೆ

**विद्या ददाति विनयं विनयाद्याति पात्रतांम्**
**पात्रत्वात् धनमाप्नोति धनात् धर्मं ततः सुखं**

(ಜ್ಞಾನದಿಂದ ವಿನಯ ಸಂಪತ್ತು ಬರುತ್ತದೆ. ಅದನ್ನು ವೆಚ್ಚ ಮಾಡುವದರಿಂದ ಧನವನ್ನು ಗಳಿಸುತ್ತಾನೆ. ಧಾರ್ಮಿಕ ಜೀವನದಿಂದ ಶಾಂತಿ ಸಮಾಧಾನ ದೊರಕುತ್ತದೆ. ಯಾವ ವಿದ್ಯೆಯಲ್ಲಿ ಉದ್ದೇಶ ಮತ್ತು ನಿರೀಕ್ಷಣೆ ಇರುವದಿಲ್ಲವೋ ಅದು (prospreity and hapiness) ಸುಖವನ್ನು, ವ್ಯಕ್ತಿಗಾಗಿ ಅಥವಾ ಜಗತ್ತಿಗಾಗಿ ತಂದು ಕೊಡುವದಿಲ್ಲ. **शीलेन शोभते विद्या** (vidya shines by vinaya) ಎಂದರೆ ವಿನಯದಿಂದಲೇ ವಿನಯವು ಶೋಭಿಸಲ್ಪಡುವದು. ವಿದ್ಯೆಯಿಂದ ಮನುಷ್ಯನ ಗುಣಗಳು ಒಳ್ಳೆಯದಾಗಲ್ಪಡುತ್ತದೆ

ಇಂದಿನ ಈ ೨೦ನೇ ಶತಮಾನದಲ್ಲಿ ಕೇವಲ ಒಂದೇ ವಿದ್ಯೆಯಿಂದ ಜೀವನವಾಗಲಾರದು ಈ ಜಗತ್ತಿನಲ್ಲಿ ಅನೇಕ ವಿದ್ಯಗಳು ಇವೆ. ಅವು ಎಲ್ಲವನ್ನು ವಶಪಡಿಸಿಕೊಳ್ಳಬೇಕಾದರೆ ಆಯುಷ್ಯವು ಸ್ವಲ್ಪ ಇರುತ್ತದೆ. ವಿದ್ಯಯ ಅಥವಾ ಶಿಕ್ಷಣದ ಮಹತ್ವವು ಈ ಕೆಳಗಿನ ಶ್ಲೋಕದಿಂದ ಕಂಡು ಬರುವದು

**विद्यामित्रं प्रवासेषु भार्या मित्रं गृहेषु च**
**व्याधितस्यौषधं मित्रं धर्मो मित्रं मृतस्य च**

ವಿದ್ಯೆಯೇ ಪ್ರವಾಸದಲ್ಲಿ ಸ್ನೇಹವಾಗುವದು. ಶಿಕ್ಷಣದ ಸಾಕ್ಷರತದಿಂದಲೇ ಅಮೇರಿಕಾ, ರಶಿಯಾ ಮೊದಲಾದ ದೇಶಗಳು ಮುಂದೆ ಬಂದಿವೆ

ಶಿಕ್ಷಣದ ದುರುಪಯೋಗವನ್ನು ಪಡೆಯುವ ಉದಾಹರಣೆಗಳನ್ನು ನಾವು ಈಗ ದಿನಾಲು ನೋಡುತ್ತಿರುತ್ತೇವೆ. ಔದ್ಯೋಗಿಕದ ಶಿಕ್ಷಣ ಪಡೆಯುವದರಿಂದ ಸ್ವಾವಲಂಬಿಯಾಗಿ ಜೀವಿಸಲಿಕ್ಕೆ ಶಕ್ಯವಾಗುತ್ತದೆ. ಸ್ವಾವಲಂಬಿ ಜೀವನವೇ ನಮ್ಮ ಹಿಂದುಸ್ಥಾನಕ್ಕೆ ಅವಶ್ಯವಾಗಿದೆ. ನೇಗಿ ಅಥವಾ ಹೊಲಿಗೆಯನ್ನು ಕಲಿಯುವದರಿಂದ ಅಥವಾ ಅದರ ಶಿಕ್ಷಣ ಪಡೆಯುವದರಿಂದ ಹಣದ ಉಳಿತಾಯ ಮತ್ತು ಅದರ ಜ್ಞಾನ ಮೊದಲಾದ ಸೌಲಭ್ಯಗಳು ನಮ್ಮ ಜೀವನಕ್ಕೆ ಒದಗಿಸುತ್ತದೆ.

## ವಿಭಾಗ ೫

# ಸಂಗೀತ ಹಾಗೂ ನೃತ್ಯ ಕಲೆಗಳು

### ಧಾರವಾಡ

ಸಂಪಾದಕರು : ನಾರಾಯಣಾಚಾರ್ಯ ದಂಡಾಪೂರ
ಪ್ರಿನ್ಸಿಪಾಲ ವನಿತಾ ಸಂಗೀತ ವಿದ್ಯಾಲಯ, ಧಾರವಾಡ

೧೯೫೯—೬೦

## “ ಸಂಗೀತದ ನೈಸರ್ಗಿಕ ರಂಜಕತ್ವವು ”

‘ ಇಂದು ಕೇಳಿದ ಗಾಯನವು ಒಳ್ಳೇ ಅಪ್ರತಿಮವಾದದ್ದು ಇತ್ತು ’ ಎಂದು ಯಾರಾದರೂ ನಮ್ಮ ಎದುರು ಹೇಳಿದಲ್ಲಿ ‘ ಅಪ್ರತಿಮ ’ ಈ ಶಬ್ದಪ್ರಯೋಗದಿಂದ ನಾವು ತಿಳಿಯಬಹುದಾದ ಸಂಗತಿಯು ಯಾವುದು ? ಎಂಬೀ ವಿಷಯವಾಗಿ ಒಂದು ಪ್ರಶ್ನೆಯು ಉದ್ಭವಿಸುವದು ಸಹಜವಿದೆ. ಈ ವಿಷಯವಾಗಿ ಕೂಲಂಕುಷ ವಿಚಾರಿಸಿದರೆ ಹಾಡುವವನ ಕಂಠವು ಒಳ್ಳೇ ಮಧುರವಾಗಿತ್ತು, ಅವನ ತಾನಿನ ಪ್ರಯೋಗವು ಜಲದವಾಗಿತ್ತು. ತಾಲ ಅಥವಾ ಲಯಕಾರೀ ಕೆಲಸವು ಅದ್ವಿತೀಯವಾಗಿತ್ತು ಹಾಡುವವನ ‘ಢಂಗ’ ಹಾಗು ಅಪ್ರಚಲಿತ ರಾಗವನ್ನು ಹಾಡುವ ಶೈಲಿಯು ಒಳ್ಳೇ ಸುಂದರವಾಗಿತ್ತೆಂಬ ಉತ್ತರವು ದೊರೆಯಬಹುದಾದ ಸಂಗತಿಯಾಗಿದೆ. ಇದರ ಮೇಲಿಂದ ನಾವು ಅನುಮಾನಮಾಡುವ ಸ್ಥೂಲಮಾನದ ವಿಷಯವೆಂದರೆ ಗಾಯನದಲ್ಲಿ ಸ್ವರಮಾಧುರ್ಯ, ಬುದ್ಧಿಪ್ರಧಾನ ಆಲಾಪ, ವಿಚಿತ್ರ ತಾನುಗಳ ಪ್ರಯೋಗ, ಶಾಸ್ತ್ರೋಕ್ತ ರಾಗ ನಿಯಮ ಪಾಲನೆ, ಹಾಗು ಸೌಂದರ್ಯವರ್ಧಕ ಸಂಗೀತ ವಿಷಯಕ ಅಲಂಕಾರ ಸ್ವರಗಳ ಪ್ರಯೋಗ, ಇವುಗಳು ಸಂಗೀತದಲ್ಲಿ ಆವಶ್ಯಕವಾಗಿ ಪ್ರಯೋಗವಾಗುತ್ತಿರುವವೆಂಬದು ಸ್ಪಷ್ಟವಾಗುವಂಥ ಸಂಗತಿಯಾಗಿದೆ. ಆದರೆ ಈ ಪ್ರಯೋಗಗಳನ್ನು ತಾವು ವಾದ್ಯದಲ್ಲಿ ಅಥವಾ ‘ ಸೋಂಫೋಂ ’ ದಲ್ಲಿ ಮಾಡಬಹುದು. ಇವರಿಂದ ರಸಿಕರ ಮನವು ತಣಿಯಲಾರದೆಂಬದು ಧಾರಾಳವಾಗಿದೆ. ರಾಗದಲ್ಲಿ ವಿಶಿಷ್ಟರಸವು ಉತ್ಪನ್ನವಾಗಬೇಕಾದರೆ ರಸಪೋಷಕ ಶಬ್ದಯೋಜನೆ ಹಾಗು ಪದಲಾಲಿತ್ಯ ಇವುಗಳು ಪದ್ಯಗಳಲ್ಲಿರುವದು ಆವಶ್ಯಕವಾಗಿದೆ. ಗೀತಗಳಿಂದ ಉದ್ಭೂತವಾಗುವ ರಸವು ವೇದನಾತ್ಮಕವಾಗಿರದೆ ಕೇವಲ ಸಂವೇದನಾತ್ಮಕವಾಗಿರುವದು. ಈ ಸಂವೇದನೆಯು ಕಾವ್ಯಗುಣದಿಂದ ಅಧಿಕ ಪರಿಣಾಮಕಾರಕವಾಗುತ್ತ ಹೋಗುತ್ತದೆ. ಶ್ರೋತೃಗಳಿಗೆ ಪರಭಾಷೆಯ ಉತ್ತಮೋತ್ತಮ ಪದ್ಯಗಳಿಗಿಂತಲೂ ಸ್ವಭಾಷೆಯ ಸಾಮಾನ್ಯ ಪದಗಳು ಅಧಿಕ ಪ್ರಿಯವಾಗುವವು. ಅಂತೆಯೇ ಹಾಡಲ್ಪಡುವ ಗಾಯನವು ಶ್ರೋತೃಗಳಿಗೆ ರುಚಿಸಿ ರಸಭಾವನೆ ಪ್ರಜ್ವಲಿತವಾಗಬೇಕಾದರೆ ದೇಶೀಯ ಭಾಷಾ ಪದಗಳು ಇರಬೇಕಾಗಿ ತಜ್ಞರ ಅಭಿಮತವಾಗಿದೆ ಅಲ್ಲದೆ ಆಗ್ರಹವೂ ಕೂಡ ಇದೆ. ಆದರೆ ರೂಢಿಯು ಮಾತ್ರ ಇದಕ್ಕೆ ವಿರೋಧವಾಗಿರುವದು. ಕರ್ನಾಟಕದಲ್ಲಿ ಹಾಡಲ್ಪಡುವ ‘ ಕರ್ನಾಟಕೀ ’ ಎಂಬ ಶಾಸ್ತ್ರೀಯ ಗಾಯನವು ತೆಲಗು ಭಾಷೆಯಲ್ಲಿ, ಮಹಾರಾಷ್ಟ್ರದಲ್ಲಿ ಹಾಡುವ ಪದ್ಯಗಳು ಹಿಂದೀ ಹಾಗು ಬ್ರಿಜಭಾಷೆಯಲ್ಲಿ, ಆದರೆ ಅಲ್ಲಿಯ ಜನಗಳಿಗೆ ತಿಳಿಯುವದಂತೂ ಅಸಾಧ್ಯವೇ. ಆ ಭಾಷಾ ರಚಿತ ಹಿಂದಿ ಅಥವಾ ತೆಲಗು ಪದ್ಯಗಳ ಉಚ್ಚಾರವಾದರೂ ಸರಿಯಾಗಿ ಆಗುವದೋ ಎಂಬದನ್ನು ವಿಚಾರಿಸಿದರೆ ಅದು ಕೂಡ ಸರಿ ಇರುವದಿಲ್ಲ. ನಮ್ಮಿಗೆ ಬರುವಂತಹ ಒಂದೆರಡು ಶಬ್ದಗಳನ್ನು ಬಾಯಿಂದ ಉಚ್ಚರಿಸಿ ೨–೩ ತಾಸುಗಳ ವರೆಗೆ ಗಾಯನ ಮಾಡುವದನ್ನು ಕೇಳಿ. “ಇಂದು ಗಾಯನವು ಒಳ್ಳೆ

ಅಪ್ರತಿಮವಾಗಿತ್ತು.,, ಎಂದು ಹೇಳುತ್ತಿರುವದುಂಟು. ಇದರಿಂದ ವ್ಯಕ್ತವಾಗುವ ಸಂಗೀತ ಎಂದರೆ ಸಮಾಜದಲ್ಲಿ ಗಾಯನದ ಅಜ್ಞಾನವಿರಬೇಕು, ಅಥವಾ ಭಾಷೆಯಿಂದ ವ್ಯಕ್ತವಾಗುವ ಸೌಂದರ್ಯಕ್ಕಿಂತಲೂ ಭಾಷಾತೀತ ಬೇರೊಂದು ಸೌಂದರ್ಯದ ವಿಧಾನವು. ಗಾಯನದಲ್ಲಿ ಇರಬೇಕಾಗಿ ಅನುಮಾನವು ಉಪಸ್ಥಿತವಾಗುವದು. ಸಂಗೀತ ಕೇಳುವಾಗ ಭಾಷಾ ದೃಷ್ಟಿಯಿಂದ ಅರ್ಥವಾಗುವಂತೆ ಕೇಳುವದು ಬೇರೆ. ಇದಕ್ಕೆ ಭಾಷಾ ಜನಿತ ಪರಿಣಾಮವೆನ್ನುವದು. ಎರಡನೆಯದಾಗಿ ಸ್ವರಪ್ರಯೋಗ,ರಾಗಾಲಾಪ,ಬೌದ್ಧಿಕ ಸ್ವರ ರಚನಾಶಕ್ತಿ, ಇವುಗಳಿಂದ ಕೂಡಿ ಗಾಯನಮಾಡುವದು.ಅದರಿಂದ ಜನಮನವನ್ನು ರಂಜಿಸುವದು.ಇದಕ್ಕೆ "ಸ್ವರಜನಿತ ಪರಿಣಾಮ" ವೆನ್ನುವರು. ಮೂರನೆಯದಾಗಿ ಹಿಂದಿನ ಎರಡೂ ಪ್ರಯೋಗಗಳನ್ನು ಸಮ್ಮಿಲನಮಾಡಿ ಹಾಡುವದು.ಇದರಿಂದ ನೈಸರ್ಗಿಕ ರಂಜಕತ್ವವೂ, ಭಾವನಾ ವಿಲಾಸವೂ ಏಕಕಾಲಕ್ಕೆ ಆಗುವವು. ಭಾಷೆಯನ್ನೂ ಅಪೇಕ್ಷಿಸುವವರು ಕೇವಲ ಭಾಷಾ ಪ್ರಯೋಗದಿಂದ ಸಂತೋಷಪಡುವರು. ಸ್ವರಾಪೇಕ್ಷಿಗಳು ಸ್ವರಪ್ರಯೋಗದಿಂದ ಆನಂದಿತರಾಗುವರು. ಎರಡೂ ಸಂಮಿಲನದಿಂದ ಸಂಗೀತದ ದ್ವಿವಿಧ ಕಾರ್ಯವಾಗುವದೆಂಬದರಲ್ಲಿ ಸಂದೇಹವಿಲ್ಲಾ. ಮೊದಲನೆಯ ಸಂಗೀತ ಕಾರ್ಯವಾದ ನೈಸರ್ಗಿಕ ರಂಜಕತ್ವದ ವಿಷಯವಾಗಿ ವಿಚಾರ ಮಾಡೋಣ.

೧) ಮೂಲಸ್ವರ ಹಾಗೂ ತಾಳ:— ಇವುಗಳನ್ನು ಗಾಯಕನು ತನಗೆ ಇಷ್ಟವಿದ್ದಂತೆ ಇಟ್ಟುಕೊಳ್ಳಬಹುದು.

೨) ಶ್ರುತಿ-ಸ್ವರ ವಿಚಾರ ಹಾಗೂ ಸ್ವರ ಸಪ್ತಕಗಳ ಸ್ಥಾಪನೆ:— 'ಇಂದಿನ ವರೆಗೆ ಸಂಗೀತ ಕಲೆಯಲ್ಲಿ ಪ್ರಾವಿಣ್ಯ ಪಡೆದಿರುವ ಕಲಾಭಿಜ್ಞ ವ್ಯಕ್ತಿಗಳು ಕೂಡಾ ಈ ವಿಷಯದ ವಿಚಾರ ಕಾಳಜೀ ಪೂರ್ವಕಮಾಡುತ್ತಿರುವದಿಲ್ಲ. 'ಸಾಲಾಂತರದಲ್ಲಿ "ಸಪ್ತ ಸ್ವರ" "ಮೂರು ಗ್ರಾಮ" "ಇಪ್ಪತ್ತೊಂದು ಮೂರ್ಛನಾ" ಈ ನಿಯಮವು ಇರುವದೇನೋ ನಿಜ. ಆದರೆ ಈ ಸಪ್ತ ಸ್ವರಗಳು ಹೇಗಿರುವವು? ಮೂರು ಗ್ರಾಮಗಳ ರಚನೆಯು ಯಾವ ಸ್ವರಗಳಿಂದಾಗುವದು? ಇಪ್ಪತ್ತೊಂದು ಮೂರ್ಛಗಳ ಉತ್ಪತ್ತಿ ಹೇಗಾಗುವದು? ಎಂಬುದರ ಬಗೆಗೆ ಸೂಕ್ಷ್ಮವಾದ ಅಧ್ಯಯನ ಮಾಡುವ ಶ್ರಮದಾಯಕ ಕಾರ್ಯವು ಕ್ವಚಿತ್ತಾಗಿ ಕಲಾವಿದರಲ್ಲಿ ಕಂಡು ಬರುತ್ತದೆ. ಸದ್ಯದ ಸಪ್ತ ಸ್ವರಗಳ ಸ್ಥಾಪನೆಯು ಪ್ರಾಚೀನ ಗ್ರಂಥಗಳಿಗೆ ಸಂಭವಿಸಿದೆ. ಮತ್ತು ಸ್ವರಸಪ್ತಕದಲ್ಲಿಯೂ ಸ್ವರಜೋಡಿಗಳು ಷಡ್ಜಪಂಚಮ ಭಾವದಿಂದ ಬದ್ಧಿತವಾಗಿವೆ. ಅಥವಾ ಗೃಹಿತ ಸ್ವರಗಳ ಕಂಪನ ಸಂಖ್ಯೆಯು ಒಂದು ಪಟ್ಟು ದುಪ್ಪಟ್ಟು ಮುಂತಾದ ಗುಣೋತ್ತರದಿಂದ ನಿರ್ಮಿತವಾದ ಕಂಪನ ಸಂಖ್ಯೆಗಳಿಂದ ಕೂಡಿದ್ದಾಗಿವೆ. ಇಂಥ ಸ್ವರಗಳು ಸಹಸಂವಾದ ಭಾವದಿಂದ ಸಪ್ತಕದೊಳಗಿನ ಸ್ವರಗಳು ಕೂಡಿರುತ್ತವೆ ಅಂದರೆ ಸ್ವರ ಸಪ್ತಕ ಸ್ವರಗಳು ಷಡ್ಜಪಂಚಮ ಭಾವದಿಂದ ನಿಗಡಿತವಾಗಿವೆ. ಇಲ್ಲವೆ ಸಹಸಂವಾದಿಗಳಾಗಿ ಇರುತ್ತವೆ.

೩) ಥಾಟವ್ಯವಸ್ಥಾ:— ಬೇರೆ ಬೇರೆ ಮೂರ್ಛನಾ ಪ್ರಕಾರಗಳಿಂದ ಬೇರೆ ಬೇರೆ ಸ್ವರಾಂತರಗಳುಳ್ಳ ಸಪ್ತಕಗಳು ಸಂಭವಿಸುತ್ತವೆ. ಇದರಿಂದ ಬೇರೆ ಬೇರೆ ಥಾಟುಗಳ ನಿರ್ಮಾಣವಾಗಿರುತ್ತವೆ.

೪) ರಾಗವ್ಯವಸ್ಥಾ:— ಈ ಪ್ರಕಾರವಾಗಿ ಥಾಟುಗಳಲ್ಲಿಯ ಕೆಲವು ಸ್ವರಗಳನ್ನು ಪ್ರಾಮುಖ್ಯವಾಗಿ ಮಾಡಿ ಹಾಗು ಕೆಲಕೆಲವು ಸ್ವರಗಳನ್ನು ವರ್ಜಮಾಡಿ ಸಂಪೂರ್ಣ, ಷಾಡವ, ಓಡವ ಮೊದಲಾದ ಪ್ರಕಾರಗಳಿಂದ ಒಂದೇ ಥಾಟನಲ್ಲಿ ಬೇರೆ ಬೇರೆ ಪ್ರಕಾರ ರಾಗಗಳು ಸಂಭವಿಸುತ್ತವೆ.

ಪೂರ್ವದ ಗ್ರಂಥಕಾರರೂ ಅರ್ವಾಚೀನ ಗ್ರಂಥಕಾರರೂ ಥಾಟ ಹಾಗೂ ರಾಗ ವ್ಯವಸ್ಥೆಯಬಗೆಗೆ ಒಳ್ಳೇ ಕಾಳಜಿಯಿಂದ ನಿರ್ಧಿಷ್ಟ ಪಡಿಸಿ ಇಟ್ಟಿರುವದುಂಟು. ಕೆಲವು ಗಾಯಕರು ಈ ನಿಯಮದಕಡೆಗೆ ದುರ್ಲಕ್ಷಿಸಿ ಮನಬಂದಂತಹ ರಾಗ ರಚನೆಯನ್ನು ಕಲ್ಪಿಸಿ ಹಾಡುತ್ತಿರುವದು, ಮತ್ತು ಅವುಗಳಲ್ಲಿ ರಸ ಭಂಗವು ಹೆಜ್ಜೆ ಹೆಜ್ಜೆಗೆ ಆಗುತ್ತಿರುವದನ್ನು ಸಹ ತಜ್ಞರು ಮನಗಂಡಿರುವ ಸಂಗತಿಯಾಗಿದೆ. ಕಾರಣ ಈ ತರಹದ ಅಸಂಗತತನವು ರಾಗದಲ್ಲಿ ಆಗದಂತೆ ಪ್ರಾಚೀನ ಗ್ರಂಥಾಭ್ಯಾಸ ಮಾಡಿ ತದನುಗುಣವಾಗಿ ಹಾಡುತ್ತ ಹೋದಲ್ಲಿ ಶಾಸ್ತ್ರದಪುನರುದ್ಧಾರವಾಗುವದಲ್ಲದೆ ಸಂಗೀತದಲ್ಲಿ ಅಸಂಗತವು ಕಡಿಮೆಯಾಗುತ್ತ ಹೋಗುವದರಲ್ಲಿ ಸಂಯುಶವಿಲ್ಲ.

೫) ರಾಗರಸ:— ವಿಶಿಷ್ಟ ರಸಗಳಿಂದ ತುಂಬಿದ ರಾಗಗಳು ಬೇರೆ ಬೇರೆಯಾಗಿದ್ದು ಅವುಗಳ ಅಭ್ಯಾಸ ಮಾಡಿ ಅನುಭವಜನ್ಯ ಜ್ಞಾನವನ್ನು ಶ್ರೋತ್ರುಗಳ ಮನಸಿನ ಮೇಲೆ ಆದ ಪರಿಣಾಮಗಳಿಂದ ಅರಿತುಕೊಂಡು ರಸಗಳ ವಿಷಯವಾಗಿ ರಾಗಗಳನ್ನು ಬೇರೆ ಬೇರೆ ಮಾಡಲು ಸಾಧ್ಯಮಾಡಿಕೊಳ್ಳುವದು. ಕಲಾವಿದನ ಪ್ರಯತ್ನವಾಗಿದೆ.

(೬) ಪದ್ಯಗಳು:— ಇದರಲ್ಲಿ ಭಾವನೆಗೆ ಸಂಕ್ಷಿಪ್ತವಾಗಿ ಕಾವ್ಯಮಯ ಕಲ್ಪನೆಯ ಸಾರ್ಥಶಬ್ದಗಳಜೋಡನ್ನು ಮಾಡುತ್ತಿರುವದು ಪದ್ಯದ ಮುಖ್ಯ ಅಂಗವಾಗಿರುವದು. ಅಂಥವುಗಳನ್ನೇ ಆರಿಸಿ ಗಾಯಕನು ಅನ್ನುತ್ತಿರಬೇಕು.

(೭) ವಿಸ್ತಾರ ಕ್ರಮ:— ರಾಗ ವಿಸ್ತಾರಕ್ರಮುವನ್ನು ಆರೋಹಿ ಅವರೋಹಿ ಆಸ್ತಾಯಿ (ಸ್ಥಾಯಿ) ಹಾಗು ಸಂಚಾ

ವರ್ಣಪ್ರಯೋಗಗಳಿಂದ ಮಾಡುವದು ಪೂರ್ವಾಪರ ಪ್ರಚಾರವಾಗಿರುವದು. ಈಗಿನ ಕಾಲಕ್ಕೆ ನೋಡಿದಲ್ಲಿ ಕಲಾವಂತರ ಗಾಯನದಲ್ಲಿ ಈ ಕ್ರಮವು ಕಂಡು ಬರುವದಿಲ್ಲ. ಘರಾಣೆದಾರ ಗಾಯಕರಲ್ಲಿ ಮಾತ್ರ ಸ್ಪಷ್ಟ ಕಾಣುತ್ತಿರುವದು ಸಹಜವಿದೆ. ಆರೋಹಿ ಅಂದರೆ ಆರೋಹ- ಅವರೋಹವಲ್ಲ ಸ್ವರವನ್ನು ಅಥವಾ ಸ್ವರಗಳನ್ನು ಏರಿಸುವ ಕ್ರಮದಲ್ಲಿ ಆಲಾಪನೆ ಮಾಡುವ ವರ್ಣಪ್ರಯೋಗಕ್ಕೆ ಆರೋಹಿ ವರ್ಣಪ್ರಯೋಗವೆನ್ನುವರು. ಅದರಂತೆ ಇಳಿಸುವ ಕ್ರಮದಲ್ಲಿ ಸ್ವರಗಳನ್ನು ಜೋಡಿಸುತ್ತ ಆಲಾಪನೆ ಗೈಯ್ಯುವ ವರ್ಣಪ್ರಯೋಗಕ್ಕೆ ಅವರೋಹಿ ವರ್ಣಪ್ರಯೋಗವೆನ್ನುವರು.

ಗೀತದ ಮೊದಲಿನ ಭಾಗ ಅಂದರೆ ಪೂರ್ವಭಾಗವು 'ಅಸ್ತಾಯಿ' ಇದು 'ಸ್ಥಾಯಿ' ಯಲ್ಲ. ಸ್ಥಾಯಿವರ್ಣಪ್ರಯೋಗವೆಂದರೆ ಸ್ವರಗಳ ಮೇಲೆ ದೀರ್ಘಕಾಲ ನಿಲ್ಲುವದು. ರಾಗದೊಳಗಿನ ಜೀವನ ಸ್ವರದ ಮೇಲೆ ವಿಶೇಷವಾಗಿ ತಾರ ಅಥವಾ ಮಂದ್ರ ಸಪ್ತಕದೊಳಗಿನ ಷಡ್ಜ, ಅಥವಾ ಪಂಚಮ, ಈ ಎರಡು ಸ್ವರಗಳು 'ಸ್ಥಾಯಿ' ಯಾಗಿದ್ದು, ಮೂಲಸ್ವರಗಳ ಕೂಡ ಸಹಸಂವಾದ ( Harmony ) ಮಾಡುತ್ತಿರುತ್ತವೆ. ನಿಜವಾಗಿ ರಂಜಕತ್ವಕ್ಕೆ ಸ್ಥಾಯಿ ವರ್ಣಪ್ರಯೋಗವು ಕಾರಣೀಭೂತವಾಗಿರುವದು. ಸಂಚಾರಿ ವರ್ಣಪ್ರಯೋಗವೆಂದರೆ ಆರೋಹಿ, ಅವರೋಹಿ, ಸ್ಥಾಯಿ ಈ ಸ್ವರಗಳ ಪ್ರಯೋಗವನ್ನು ಉಲಟ ಸುಲಟವಾಗಿ ಕ್ರಮದಿಂದ ಮಾಡುತ್ತ ಹೋಗುವದಕ್ಕೆ ಅಥವಾ ಸಮ್ಮಿಶ್ರಪದ್ಧತಿಯಿಂದ ಮಾಡುತ್ತ ಹೋಗುವದಕ್ಕೆ ಸಂಚಾರಿ ವರ್ಣಪ್ರಯೋಗವೆನ್ನುವರು. ಯೋಗ್ಯ ಅಧಿಕಾರಿ ಗುರುಗಳಿಂದ ಅಭ್ಯಾಸವಾಗದಿದ್ದ ಗಾಯಕರು ಈ ವರ್ಣಪ್ರಯೋಗ ಮಾಡಲು ಅಸಮರ್ಥರಾಗುವರು. ಒಂದೂ ತಿಳಿಯದೆ ಈ ಪ್ರಯೋಗವನ್ನು ಮಾಡುತ್ತಾ ಹೋದಲ್ಲಿ ಅದು ವಿರಸವಾಗಿ ಗಾಯಕನ ಅಪಮಾನಾಸ್ಪದ ಸಂಗತಿಗೆ ಕಾರಣವಾಗುತ್ತದೆ.

(೮) ಇನ್ನು ಸ್ವರಸಪ್ತಕದಲ್ಲಿ ಸಹಸಂವಾದಿ, ಸಂವಾದಿ, ಅನುವಾದಿ ಈ ರೀತಿಯಾಗಿ ಸ್ವರಗಳಿದ್ದು ಅವುಗಳ ಸಂಬಂಧವು ಮೂಲ ಸ್ವರಗಳಿಗೆ ಯಾವ ಯಾವ ರೀತಿಯಲ್ಲಿ ಇರವದೆಂಬದನ್ನು ವಿಚಾರಿಸಿದರೆ— ಕಂಪನ ಸಂಖ್ಯೆಯ ದೃಷ್ಟಿಯಿಂದ ಸಹಸಂವಾದಿ ಸ್ವರದ ಸಂಬಂಧವು ಅತಿ ಸಮೀಪದ್ದು ಅಂದರೆ ಒಂದು ಪಟ್ಟು, ದುಪ್ಪಟ್ಟು ಇತ್ಯಾದಿ ಗುಣೋತ್ತರಗಳಿಂದ ಕೂಡಿದ್ದು ಇರುತ್ತದೆ. ಆದರೆ ಸಂವಾದಿ ಸ್ವರದ ಸಂಬಂಧ ಮಾತ್ರ ಹೀಗಿರುವದಿಲ್ಲ. ಗುಣೋತ್ತರಗಳ ಸಂಬಂಧವಿರದೆ ಸಮೀಪ ಸ್ವರದ ಷಡ್ಜ, ಪಂಚಮಭಾವದಿಂದ ಕೂಡಿದ್ದಿರುವದು. ಅನುವಾದಿ ಸ್ವರದ ಸಂಬಂಧವಂತೂ ದೂರಿನ ಸ್ವರಗಳ ಷಡ್ಜ ಪಂಚಮ ಭಾವಗಳಿಂದ ಕೂಡಿದ್ದಿರುತ್ತದೆ. ಒಟ್ಟಿನ ಮೇಲೆ ಹೇಳುವದೆಂದರೆ— ಸ್ವರಸಪ್ತಕಗಳ ಮೂಲಾಧಾರವಾದ ಸಹಸಂವಾದಿ ಸ್ವರ ಅಥವಾ ಸ್ವಯಂಭೂ ಸ್ವರವು ಷಡ್ಜ ಪಂಚಮ ಭಾವದಿಂದ ಕೂಡಿದ್ದಿರುವದು. ಇವುಗಳ ಹೊರತು ಬರುವ ಸ್ವರಗಳು ತ್ಯಾಜ್ಯವಾಗಿ ಎಣಿಸಲ್ಪಡುವವು.

(೯) ಆಲಾಪ ಹಾಗು ತಾನುಗಳು :— ಆಲಾಪನೆಯಲ್ಲಿ ರಾಗದಲ್ಲಿಯ ಜೀವಭೂತ ಭಾಗದ ಉಚ್ಚಾರ ಹಾಗು ಉಚ್ಚಾರಣದ ಕಾಲ ಇವೆರಡಕ್ಕೂ ಪ್ರಾಮುಖ್ಯತೆಯನ್ನು ಕೊಟ್ಟು ಉಳಿದ ಭಾಗಕ್ಕೆ ಗೌಣತ್ವವು ಕೊಡಲ್ಪಡುತ್ತದೆ. ತಾನ ಪ್ರಯೋಗದಲ್ಲಿ ಮಾತ್ರ ಎಲ್ಲ ಸ್ವರಗಳು ಒಂದೇ ದರ್ಜೆಯವಾಗಿ ಉಚ್ಚರಿಸಲ್ಪಡುತ್ತವೆ. ಆದರೆ ಆಲಾಪನೆಯಲ್ಲಿ ಮಾತ್ರ ತಾರತಮ್ಯದ ಪ್ರಕಾರ ಯಾವ ಯಾವ ಸ್ವರಗಳಿಗೆ ಎಷ್ಟೆಷ್ಟು ಮಹತ್ವವಿರಬೇಕೆಂದಿದೆಯೋ ಅಷ್ಟಷ್ಟೇ ಪ್ರಮಾಣದಿಂದ ಕೊಡಲ್ಪಡುತ್ತದೆ. ಉದಾ:— ಬೀಗರಿಗೆ ಮಾನಕೊಡುವಕಾಲಕ್ಕೆ ವರನಿಗೆ ಕೊಡುವ ಮಾನ ಬೇರೆ, ವರನತಂದೆಗೆ ಹಾಗೂ ತಾಯಿಅಪ್ತರು ಇಪ್ಪರು ವರನ ಸಂಗಡ ಬಂದವರು ಇವರಿಗೆ ಕೊಡುವ ಮಾನವು ಅವರವರ ಯೋಗ್ಯತೆಗನುಗುಣವಾಗಿ ಬೇರೆ ಬೇರೆಯಾಗಿರುವಂತೆ— ಆಲಾಪನೆಯ ಪ್ರತಿಸ್ವರಗಳಿಗೂ ಹೆಚ್ಚು ಕಡಿಮೆ ಪ್ರಾಧಾನ್ಯವು ಕಲ್ಪಿಸಲ್ಪಡುತ್ತಿದೆ. ತಾನುಗಳಲ್ಲಿ ತಾರತಮ್ಯವಿಲ್ಲ. ಎಲ್ಲ ಬೀಗರಿಗೂ ಒಂದೇ ಮರ್ಯಾದೆ ಎನ್ನುವ ಹಾಗೆ ಆಗುವದು. ಅಂತೆಯೇ ಧ್ರುಪದದಲ್ಲಿ ತಾನುಗಳಿಗೆ ಬಹಿಷ್ಕಾರವಿದೆ. ಇದಕ್ಕೆ ಮೂಲ ಕಾರಣವು ರಾಗಹಾನಿ ಯಾಗುವದೆಂಬದೇ ಮಹತ್ವದ ವಿಷಯವಾಗಿ ಪರಿಣಮಿಸಿದೆ. ತಾನುಗಳನ್ನು ತಯಾರಿಸಿ ರಾಗಹಾನಿಯಾಗದಂತೆ ಮಾಡುವದು ಒಳ್ಳೆ ಶ್ರಮದ ಸಂಗತಿಯಾಗಿದೆ. ಇಂಥ ತಾನುಗಳನ್ನು ಒಳ್ಳೆ ಜಲದ ರೀತಿಯಲ್ಲಿ ತಯಾರಿಸಿ ಹಾಡುವವರು ವಿರಳ. ಯಾಕಂದರೆ ಒಳ್ಳೆ ಕಸರತ್ತಿನಿಂದ ಅವುಗಳನ್ನು ತಯಾರಿಸಬೇಕಾಗುತ್ತದೆ. ಸಫೆದ, ಸುರೇಲ ತಾನುಗಳನ್ನು ತೆಗೆದುಕೊಳ್ಳುವವರು ಅತಿವಿರಳ. ಹುಚ್ಚರಹಾಗೆ ಏನೋ ಒಂದು ಬಗೆಯ ತಾನುಗಳನ್ನು ತಯಾರಿಸಿ ಜನರಿಗೆ ವಿಚಿತ್ರಕಾಣುವಹಾಗೆ ಹಾಡುವ ಕ್ರಮವನ್ನು ಇಟ್ಟುಕೊಂಡ ಎಷ್ಟೋ ಕಲಾವಿದರನ್ನು ನೋಡುತ್ತಿರುವೆನು. ಇದರಿಂದ ಸಂಗೀತದ ಹಾನಿಯಷ್ಟೇ ಅಲ್ಲ ಅದರ ಅಪಮಾನವೆಂದೇ ಹೇಳಬೇಕಾಗಿದೆ.

(೧೦) ಈ ಪ್ರಕಾರ ಗಾಯಕರು ಮೇಲೆ ಹೇಳಿದ ರೀತಿಯಾಗಿ ರಾಗವಿಸ್ತಾರ ಮಾಡುತ್ತ ವರ್ಣೋಚ್ಚಾರವನ್ನಾದರೂ

ಮನೋಹರವಾಗುವಂತೆ ಮಾಡಿ ಅರ್ಥವು ಜನಮನಗಳಿಗೆ ಬಿಂಬಿಸುವ ರೀತಿಯಿಂದ ಹಾಡುತ್ತಾ ಹೋದಲ್ಲಿ ಸಂಗೀತದ ಕಾರ್ಯವು ದ್ವಿವಿಧವಾಗಿ ಅಂದರೆ ನೈಸರ್ಗಿಕ ರಂಜಕತ್ವ ಹಾಗು ಭಾವನಾ ವಿಲಾಸ ಇವೆರಡೂ ಅಂಗಗಳಿಂದ ಕೂಡಿದ್ದಾಗುತ್ತದೆ. ಇವೆರಡೂ ಅಂಗಗಳ ಸಂಕಲನವು ಅಭೇದ್ಯವಾಗಿದ್ದು ಬೇರೆ ಬೇರೆ ಮಾಡುವದು ಸಾಧ್ಯವಿಲ್ಲ. ಅಂತೆಯೇ ಸಂಗೀತದ ಎರಡು ಕಾರ್ಯಗಳೆಂದು ಹೇಳಿದೆ. ಒಂದೇ ರೀತಿಯಾದ ದ್ವಿವಿಧ ಕಾರ್ಯವೆಂದು ಹೇಳಿದ್ದಾಗಿದೆ. ಇವೆರಡೂ ಅಂಗಗಳಿಂದ ಹೊಂದಿಕೆಯಾದ ಒಂದೇ ಅಂಗರೂಪವಾದ ಗಾಯನವು ಮೊದಲಿನ ಅಂಗಮಯ ನೈಸರ್ಗಿಕ ರಂಜಕತ್ವದ ವಿಷಯವಾಗಿ ಚರ್ಚಿಸಿದ್ದಾಯಿತು. ಉಳಿದ ಅಂಗವಾದ ಭಾಷಾಪ್ರಯೋಗದ ಬಗೆಗೆ ಸಂಗೀತದ ಭಾವನಾವಿಲಾಸದಲ್ಲಿ ವಿಚಾರಿಸೋಣ.

— ಸಂಪಾದಕ

---

# "ನೃತ್ಯಕಲೆಯು"

**नाटचवेदं ददौ पूर्वं भारताय चतुर्मुखः ।**<br>
**ततश्चभरतः सार्धंगंधर्वाप्सरसांगणैः ॥ १ ॥**<br>
**नाटचनृत्तं तथा नृत्यमग्रेशंभोः प्रयुक्तवान् ।**<br>
**प्रगमुयोद्धृतं स्मृत्वा स्व प्रयुक्तं ततो हरः ॥ २ ॥**

अभिनय दर्पणम्

೧ ಎಲ್ಲ ಕಲೆಗಳಲ್ಲಿ ನೃತ್ಯಕಲೆಯು ಅತಿ ಪ್ರೌಢವಾದದ್ದೂ ಉನ್ನತ ಶ್ರೇಣಿಯಲ್ಲಿ ಅತಿ ಉನ್ನತವಾದದ್ದೂ ಮನಸ್ಸನ್ನು ಕರಗಿಸುವ ನವರಸಗಳನ್ನು ಹರಡಿಸಿ, ಮಾನವನ ಮನೋ ಭೂಮಿಕೆಯಲ್ಲಿ ಮನೆ ಮಾಡಿ ಅಂತಃಕರಣವನ್ನು ಪ್ರಚೋದಿಸುವ ಅತಿ ಸುಂದರವಾದ ಕಲೆಗಳಲ್ಲಿ ಇದು ಒಂದು ಕಲೆಯಾಗಿದೆ. ಏಕೆಂದರೆ ಇದು ಜೀವನದ ಬರಿಯ ಪ್ರತಿಬಿಂಬ ಅಥವಾ ಅಪಕರ್ಷಣವಲ್ಲ. ಜೀವನವೇ ಆಗಿದೆ.

೨ ಅಭಿನಯದರ್ಪಣಕಾರನು ನಿರೂಪಿಸಿದನುಗುಣವಾಗಿ ಈ ನೃತ್ಯ ಕಲೆಯನ್ನು ಅಂದರೆ ನಾಟ್ಯವೇದವನ್ನು ಬ್ರಹ್ಮನು ಮೊಟ್ಟ ಮೊದಲು ಭರತ ಮಹಾ ಮುನಿಗೆ ಉಪದೇಶಿಸಿದನು. ಅನಂತರ ಭರತನು ಗಂಧರ್ವರಿಗೂ, ಅಪ್ಸರಾ ಸ್ತ್ರೀಯರಿಗೂ ಕ್ರಮೇಣ ಉಪದೇಶವನ್ನಿತ್ತನು. ಈ ನಾಟ್ಯ ನೃತ್ಯ, ನೃತ್ಯಗಳ ಪ್ರಯೋಗವು ಮೊಟ್ಟ ಮೊದಲು ಮಹಾದೇವರ ಸನ್ನಿಧಾನದಲ್ಲಿ ಜರುಗಿತು. ಆಗ್ಗೆ ಶ್ರೀ ಮಹಾದೇವರು ಪ್ರಯೋಗಿಸಲ್ಪಟ್ಟ ನೃತ್ಯವಿಧಾನವನ್ನು ಕಂಡು ಯಥೋಚಿತವಾಗಿ ಭರತ ಮಹಾ ಮುನಿಗೆ ಉಪದೇಶಿಸಿದರು. ಮಹಾದೇವರ ಗಣದಲ್ಲಿ ಅಗ್ರಣಿಯಾದ ತಂಡನೆಂಬವನು ಹೆಚ್ಚಾಗಿ ಅಭ್ಯಸಿಸಿ ಅದರ ಉಪದೇಶವನ್ನು ಭರತನಿಗೆ ಮಾಡಿದನು. ಆ ಉಪದೇಶಿಸಲ್ಪಟ್ಟ ವಿಧಾನವೇ ನೃತ್ಯದಲ್ಲಿ ತಾಂಡವನೃತ್ಯವಾಗಿಯೂ ಪಾರ್ವತಿಯಿಂದ ಉಪದೇಶಿಸಲ್ಪಟ್ಟದ್ದು ಲಾಸ್ಯವಾಗಿಯೂ ಪರಿಣಮಿಸಿತು. ಈ ಲಾಸ್ಯವನ್ನು ಪಾರ್ವತಿಯು ಬಾಣಾಸುರನ ಪುತ್ರಿಯಾದ ಉಷಾನಿಗೆ ಹೇಳಿಧಳು. ಮುಂದೆ ಉಷಾದೇವಿಯಿಂದ ದ್ವಾರಾವತಿಯ ಸ್ತ್ರೀಯರೆಲ್ಲರೂ ಲಾಸ್ಯವನ್ನು ಮಾಡಹತ್ತಿದ್ದರು. ಈ ರೀತಿಯಾಗಿ ತಾಂಡವ ಹಾಗೂ ಲಾಸ್ಯ, ನೃತ್ಯಗಳ ಪರಂಪರೆಯು ಅನಾದಿ ಕಾಲದಿಂದ ಈ ಕಾಲದವರೆಗೆ ಅಬಾಧಿತವಾಗಿ ಬಂದಿವೆ.

ಯಾವದಾದರೂ ಒಂದು ಕಲೆಯು ದೇಶದ ಸಂಸ್ಕೃತಿಯನ್ನು ಜನಸಾಮಾನ್ಯರ ಮನೋ ಭೂಮಿಕೆಯನ್ನು ಚಿತ್ರಿಸುವಂತಹದಾಗಿರುತ್ತದೆ. ಜೀವನವು ಇರುವವರೆಗೂ ಚಟುವಟಿಕೆಗಳಿಂದ ಹೊಂದಿದ ಮಾನವ ಪ್ರಾಣಿಯು ಹೊರಹೊಮ್ಮುವ ಮನೋಭಾವನೆಗಳನ್ನು ಅದಲು ಬದಲಾಗುತ್ತಿರುವ ಕಾಲ ಸಂದರ್ಭಗಳನ್ನೂ ಕಲೆಯು ಬಹಳ ಅಂಶದಿಂದ ಪ್ರತಿಬಿಂಬಿಸುತ್ತದೆ ಕಲೆಗಾರನೋರ್ವನ ಉತ್ಪಾದಕ ಬುದ್ಧಿ ಸಾಮರ್ಥ್ಯವು ದೇಶದ ಸ್ಥಿತ್ಯಂತರಗಳ ಹಾಗೂ ಆ ಕಾಲದ ಸನ್ನಿವೇಶಗಳ ರಾಜಕೀಯ, ಆರ್ಥಿಕ ಮತ್ತು ಸಂಸ್ಕೃತಿಯ ಹಿನ್ನೆಲೆಯ ಮೇಲೆ ತುಂಬಾ ಹೊಂದಿಕೊಂಡಿರುತ್ತದೆ. ಮೊಗಲ ಬಾದಶಹನ ಕಾಲದ ಬಂಗಾರ ಯುಗದ ಸಾಕ್ಷಿಯಾಗಿ ಈ ಹೊತ್ತು ನಾವು ಅತ್ಯಾಶ್ಚರ್ಯಕರವಾದ ಹಾಗೂ ಸುಂದರತೆಯು ಬಟ್ಟುಳಿಗೂಡಿದ ತಾಜಮಹಾಲ ಕಾಣುತ್ತೇವಲ್ಲವೇ ? ಶ್ರೀ ತ್ಯಾಗರಾಜಸ್ವಾಮಿಗಳು, ಶ್ಯಾಮಶಾಸ್ತ್ರಿಗಳ ಮತ್ತು ಬಾಬಾ ಹರಿದಾಸ ಸ್ವಾಮಿಗಳು ಮತ್ತು ಮಿಯಾತಾನಸೇನ ಇವರ ಸಂಗೀತವು ನಮ್ಮ ಹಳೇ ಸಂಸ್ಕೃತಿಯ ಗುಣಗಾನವನ್ನು ಇಂದಿನ ವರೆಗೆ ಸಾರುತ್ತಿರುವದಿಲ್ಲವೇ ? ಹಿಂದುಸ್ತಾನಿ ಸಂಗೀ-



ವನಿತಾ ಸಂಗೀತ ಶಾಲೆಯ ಶಿಕ್ಷಕ ವರ್ಗ



ವನಿತಾ ನೃತ್ಯವರ್ಗದವರ ಪಾಠ ನಡೆದಾಗ



ವನಿತಾ ವಿದ್ಯಾಲಯದ ಬ್ಯಾಂಡ್ ಸೆಟ್ಟ್ ವಿದ್ಯಾರ್ಥಿನಿಯರು

ತಕ್ಕೆ ಹಾಗೂ ಕರ್ನಾಟಕೀ ಸಂಗೀತಕ್ಕೆ ಒಂದು ಅಸಾಧಾರಣವಾದ ರೂಪವನ್ನು ಕೊಟ್ಟು ಯುಗಯುಗಾಂತರಗಳಲ್ಲೂ ಮೀರಲು ಅಸಾಧ್ಯವಾದ ಅಂತಸ್ತನ್ನು ಕಟ್ಟಿಕೊಟ್ಟಿಲ್ಲವೇ ? ಕರ್ನಾಟಕದಲ್ಲಿಯ ದಾಸರ ಹಾಡುಗಳನ್ನು ಹಾಗು ಉತ್ತರ ಹಿಂದುಸ್ತಾನದಲ್ಲಿಯ ಮೀರಾ ಭಜನೆಯನ್ನೂ ಹಾಗು ಕಬೀರ ದಾಸ, ಗುಲಾಬದಾಸ, ತುಳಸೀದಾಸರ ಭಕ್ತಿ ಪರವಶ ಗೀತೆಗಳನ್ನು ಕೇಳಿದಲ್ಲಿಸಾಧುಸಂತರೂ ದೇವಾರಾಧಕರೂ ಭಕ್ತರೂ ಜನ್ಮವೆತ್ತಿದ ಕಾಲವು ಕಣ್ಣು ಮುಂದೆ ಕಟ್ಟಿದಂತಾಗುತ್ತವೆ.

ಅಜಂತಾ, ಎಲ್ಲೋರ ಗುಹೆಗಳ ಚಿತ್ರಕಲೆಗಳು ಆ ಕಾಲದ ಅವರ್ಣನೀಯ ಸಂಸ್ಕೃತಿಯ ಸಂಪತ್ತನು ಹೊರಪಡಿಸುತ್ತವೆ. ಅಂತೆಯೇ ತಾಜಮಹಾಲ, ಬೇಲೂರ, ತಂಜಾವೂರ ಚಿದಂಬರಂ ರಾಮೇಶ್ವರ ಮಧುರೆಯ ಶಿಲ್ಪ ಕಲಾಕೃತಿಗಳು ಶಿಲ್ಪಿಯ ಕಲಾತ್ಮಕ ಸಾಮರ್ಥ್ಯವನ್ನು ಭಕ್ತಿಪ್ರಧಾನರಾದ ಜನತೆಯ ಪ್ರೋತ್ಸಾಹವನ್ನೂ ಸಾರುತ್ತಿವೆ. ಅಲ್ಲದೆ ಆಗಿನ ಕಾಲದ ಅರಸರುಗಳು ತಮ್ಮ ಶಿಲ್ಪಿಗಳಿಗೆ ಕೊಟ್ಟಿದ್ದ ಗೌರವವನ್ನೂ ಅವರ ಕಾರ್ಯಗಳಲ್ಲಿ ತೋರಿಸುತ್ತಿರುವ ಆಸಕ್ತಿ ಉತ್ಸಾಹಗಳನ್ನೂ ಅವು ಪ್ರಕಟಿಸುತ್ತವೆ.

ಒಂದು ದೇಶದ ಅಥವಾ ರಾಷ್ಟ್ರದ ಯಾವದಾದರೂ ಒಂದು ಕಾಲದ ವೈಶಿಷ್ಟ್ಯವನ್ನು ಅದರ ಪ್ರೇರಣೆಯಿಂದ ಪಡೆದಿರುವ ಅನೇಕ ಕಲ್ಮಾತಕ ವಿಷಯಗಳಿಂದ ತಿಳಿದುಕೊಳ್ಳುತ್ತೇವೆ. ಇದು ಇಂದಿನ ವರೆಗೆ ನಡೆದು ಬಂದ ವಿಚಾರವಾಯಿತು. ಈಗಿನ ಜೀವನದಲ್ಲಿಯೂ ರಾಷ್ಟ್ರದ ಮಹತಿಯು ಹಾಗೂ ವರ್ಚಸ್ಸು ಎಲ್ಲ ಲಲಿತಕಲೆಗಳಲ್ಲಿಯೂ ಬೀರುವದನ್ನು ನಾವು ಕಾಣಬಹುದು.

ಈಗ ಜನರ ಮೆಚ್ಚಿಗೆಗೆ ಪಾತ್ರವಾದ ಭರತನಾಟ್ಯಪದ್ಧತಿಯು ಬುನಾದಿಯಿಂದ ಪ್ರಾರಂಭವಾದದ್ದು. ಬ್ರಹ್ಮನಿಂದ ಉದಿತವಾದ ಈ ಭರತನಾಟ್ಯವು ಅತೀ ಪ್ರಾಚೀನಕಾಲದಲ್ಲಿ ಮೊಟ್ಟಮೊದಲು ಪ್ರವೇಶವಾದದ್ದು ಸೌರಾಷ್ಟ್ರದಲ್ಲಿ ಅಂದರೆ ದ್ವಾರಾವತಿಯಲ್ಲಿ. ಜಗನ್ಮಾತೆ ಪಾರ್ವತಿಯು ಬಾಣಾಸುರನ ಮಗಳಾದ ಉಷಾದೇವಿಗೆ ಹೇಳಿದ್ದುಂಟು. ಮುಂದೆ ದೇಶದಲ್ಲಿ ಹರಡುತ್ತ ಈ ಭರತನಾಟ್ಯವು ೨ಂನೇ ಶತಮಾನದಲ್ಲಿ ಸರಭೋಜ ಅರಸರ ಕಾಲದಲ್ಲಿ ಪ್ರಾರಂಭವಾಯಿತು. ಈ ವಿಷಯವು ಎಲ್ಲರಿಗೂ ಸಮ್ಮತವಾದದ್ದು. ತಂಜಾವೂರ ದರ್ಬಾರದಲ್ಲಿ ಶೋಭಿಸುತ್ತಿದ್ದ ಪೊನ್ನಯ್ಯ, ಚಿನ್ನಯ್ಯ, ವಡಿವೇಲ, ಶಿವಾನಂದರು ಎಂಬವರು ಈಗ್ಗೆ ನಾವು ಕಾಣುವ ಭರತನಾಟ್ಯ ರೂಪವನ್ನು ರೂಪಿಸಿದ ಮೂಲಪುರುಷರಾಗಿರುವರು. ಕೊಟ್ಯಾರಕರರ ಅರಸರು ಬರೆದು ಪ್ರದರ್ಶಿಸಿದವರಾಮನಾಟ್ಯಂ, ಇದು ಇಂದು ಕಥಕ್ಕಳಿಯಾಗಿ ಎಲ್ಲ ಜನಾಂಗಕ್ಕೆ ಹೊಸ ಹುರುಪನ್ನೂ ಸ್ಫೂರ್ತಿಯನ್ನೂ ಕೊಡುವಂತಹ ಅದ್ಭುತ ಕಲೆಯಾಗಿದೆ. ಇದೇ ರೀತಿಯಾಗಿ ಕಥಕ ಮತ್ತು ಮಣಿಪುರಿ ನೃತ್ಯಗಳ ಚರಿತ್ರೆಯಲ್ಲೂ ಅವುಗಳಿಗೆ ಜನ್ಮವಿತ್ತ ಮಹಾನುಭಾವರ ಭಾವೋದ್ರೇಕ ಜೀವನವನ್ನು ಗುರುತಿಸಬಹುದು.

ಭಾರತದ ನೃತ್ಯಗಳ ಚರಿತ್ರೆಯು ಪೂಜ್ಯವಾಗಿಯೂ ಘನವಾಗಿಯೂ ಕೀರ್ತಿಕರವಾಗಿಯೂ ಇದೆ. ಕೆಲವು ಕಾಲಗಳ ಹಿಂದೆ ಈ ನೃತ್ಯಕಲೆಗೆ ಅವನತಸ್ಥಿತಿಯು ಪ್ರಾಪ್ತವಾಗಿದ್ದಿತು. ಅಂದರೆ ಮುಸಲ್ಮಾನರ ಆಳಿಕೆಯ ಕಾಲದಲ್ಲಿ ನೃತ್ಯಕಲೆಯು ವೇಶ್ಯೆಯರ ಸೊತ್ತಾಗಿತ್ತು. ವೇಶ್ಯಾಂಗನೆಯರೇ ಈ ಕಲೆಯನ್ನು ಅಭ್ಯಸಿಸುವವರು. ಬೇರೆ ಯಾರೂ ಈ ಕಲೆಯ ಕಡೆಗೆ ಹೊರಳಿ ನೋಡುತ್ತಿರಲಿಲ್ಲ. ಹೀಗಾಗಿ ಆಕಾಲದಿಂದ ಪ್ರಾರಂಭವಾದ ಅವನತಿಯು ಇಂಗ್ಲೀಷ ರಾಜ್ಯದ ಕಾಲದಲ್ಲಿಯೂ ಹಾಗೇ ಉಳಿಯಿತು. ಸ್ವತಂತ್ರ ಭಾರತವಾದಂದಿನಿಂದ ಈ ಕಲೆಗೆ ಹೆಚ್ಚಾಗಿ ಪ್ರೋತ್ಸಾಹನೆಯು ಸಿಕ್ಕು ಎಲ್ಲರೂ ಈ ಕಲೆಗಾಗಿ ಹವಣಿಸಹತ್ತಿದರು. ಈಗಂತೂ ರಾಜ್ಯಸರಕಾರಗಳಿಂದ ಮನ್ನಣೆ ಪಡೆದ ಈ ಕಲೆಯು ಶಾಲೆಕಾಲೇಜುಗಳಲ್ಲೂ ಅಭ್ಯಾಸಪತ್ರಿಕೆಗಳಲ್ಲೂ ಪ್ರವೇಶ ಮಾಡಿದ್ದು ಆಶ್ಚರ್ಯವಲ್ಲ. ಇಂದಿನ ನೃತ್ಯಗಾರರು ತಮ್ಮ ತಿಳುವಳಿಕೆಗೆ ಭರತನಾಟ್ಯಶಾಸ್ತ್ರವನ್ನೂ, ನಂದಿಕೇಶ್ವರನ ಅಭಿನಯ ದರ್ಪಣವನ್ನೂ, ವಿಷ್ಣುಧರ್ಮೋತ್ತರ ಸಂಗೀತ ರತ್ನಾಕರ ಹಸ್ತಲಕ್ಷಣ ದೀಪಿಕೆ ಮುಂತಾದ ಗ್ರಂಥಗಳನ್ನು ಮುಲಾಧಾರವಾಗಿ ಇಟ್ಟುಕೊಂಡು ಆ ಗ್ರಂಥಗಳು ಸರ್ವಮಾನ್ಯವಾಗಿರುವದರಿಂದ ಅವುಗಳಿಗನ್ನುಗುಣವಾಗಿ ನೃತ್ಯಕಲೆಯ ಅಭ್ಯಾಸವನ್ನು ಮಾಡಹತ್ತಿರುವರು. ನಮ್ಮ ಪೂರ್ವಜರರಿಂದ!ಪರಂಪರಾಗತ ನಡೆದುಬಂದ ಸಾಂಪ್ರದಾಯವು ಇಂದು ನಮಗೆ ಸ್ಫೂರ್ತಿಯನ್ನು ಕೊಡುವಂತಹದಾಗಿದೆ.

ಜಾನಪದ ನೃತ್ಯಗಳು ಕೂಡ ಬೇಕಾದಷ್ಟು ಬದಲಾವಣೆಯನ್ನು ಪಡೆದಿರಬಹುದು. ಯಾಕಂದರೆ ಜಾನಪದ ನೃತ್ಯಗಳನ್ನು ಅನುಸರಿಸುವ ಜನಾಂಗವು ಕೂಡ ಆಧುನಿಕ ಜಗತ್ತನ್ನು ಎದುರಿಸುವಾಗ ತನ್ನ ನೃತ್ಯಪದ್ಧತಿಯಲ್ಲಿ ಮಾರ್ಪಾಟು ಮಾಡಿಕೊಂಡಿರಲು ಸಾಕು. ಮಾನವ ಶಾಸ್ತ್ರಜ್ಞರ ಅಭಿಮತದಂತೆ ಕೆಲವು ಜನಾಂಗಗಳು ನಾಗರಿಕತೆ ಮತ್ತು ಆಧುನಿಕ ಸಂಸ್ಕೃತಿಯ ಗಂಧ ಕೂಡಾ ಇಲ್ಲದಿರುವ ದೇಶದಲ್ಲಿದ್ದು ಪೂರ್ವಜರು ಅನುಸರಿಸುತ್ತ ಬಂದಂತಹ ಸಾಂಪ್ರದಾಯವನ್ನು ಕಾಪಾಡಿಕೊಂಡು ಬರುವವರಿದ್ದಾರೆ. ಆದರೆ ಈ ಮಾತು

ಕೇವಲ ಅನಾಗರಿಕ ಪಂಗಡಗಳಿಗೆ ಅನ್ವಯಿಸುವದಲ್ಲದೆ ಚಾರಿತ್ರಿಕ ಘಟನೆಗಳ ಏರಿಳಿತಗಳಲ್ಲಿ ಜೀವಿಸಿರುವ ನಮ್ಮ ಹಳ್ಳಿಯವರಿಗೆ ಅನ್ವಯಿಸುವದಿಲ್ಲ. ಇವರ ಜಾನಪದ ನೃತ್ಯಗಳಲ್ಲಿ ಖಂಡಿತವಾಗಿಯೂ ಮಾರ್ಪಾಡು ಇದೆ.

ಭಾರತದಲ್ಲಿ ನೃತ್ಯಕಲೆಯು ಕೀಳು ದರ್ಜೆಯ ಕಲಾವಂತರೆಂದೆನಿಸಿಕೊಂಡವರ ಕೈಯಲ್ಲಿ ಸಿಕ್ಕು ಕೆಟ್ಟ ಸ್ಥಿತಿಯನ್ನು ಪಡೆದ ಹಾಗು ತುಚೀಕರಣ ಹೊಂದಿದ ಸಂಗತಿಯನ್ನು ಈ ಮೊದಲೇ ನಿವೇದಿಸಲಾಗಿದೆ, ಆಗಿನ ಕಾಲದ ನಾಣ್ ನುಡಿಯು ಕೂಡ ಈ ರೀತಿಯಾಗಿದೆ. '**क्वचित्नर्तकः शुचिः**' ಈ ಭವಿಷ್ಯವನ್ನು ಪತಂಜಲಿಯು ಕ್ರಿ. ಶ. ಪೂರ್ವ ಎರಡು ಶತಮಾನಗಳ ಹಿಂದೆಯೇ ಸಾರಿದ್ದಾನೆ. ಆದರೆ ಈ ಸ್ಥಿತಿಯು ನೃತ್ಯಕಲೆಗೆ ಆಗಿನ ಕಾಲಕ್ಕೆ ಒದಗಿದ್ದು ಆಗಿನ ಜನಗಳ ತಿರಸ್ಕಾರ ಮತ್ತು ಜನತೆಯು ತೋರುತ್ತಿರುವ ಅಸಹ್ಯತನವೇ ಕಾರಣವಾಗಿದೆ. ಮುಸಲ್ಮಾನರ ಕಾಲದಿಂದ ೨೦ನೇ ಶತಮಾನದ ವರೆಗೆ ನೃತ್ಯಗಾರನು ಮರ್ಯಾದೆಗೆ ಯೋಗ್ಯನಲ್ಲವೆಂದೆನಿಸಿಕೊಳ್ಳುತ್ತಿದ್ದನು. ಈ ಕಲಂಕವನ್ನು ಕೆಲವರು ಈಗಲೂ ಒಪ್ಪುವರು. ಈಕಲೆಗೆ ಸರಕಾರವು ಪ್ರೋತ್ಸಾಹಿಸಿದಂದಿನಿಂದ ಕೆಲವು ಸುಶಿಕ್ಷಿತ ಪುರುಷರೂ ಕುಲೀನ ಸುಸಿಕ್ಷಿತೆ ಸ್ತ್ರೀಯರೂ ಅಭ್ಯಾಸಮಾಡಿ ಈ ಕಲೆಯ ಅಂದಿನ ಕಲಂಕವನ್ನು ಇಂದು ದೂರಮಾಡಲು ಪ್ರಯತ್ನಿಸಿದರು. ಪೂರ್ತಿಯಾಗಿ ಅದು ಅಳಿಸಿಹೋಗದಿದ್ದರೂ ಬಳಿಕೆಯಲ್ಲಿ ಜನಪ್ರೀತಿಗೆ ಪಾತ್ರವಾಗಿದೆ. ನೂರಾರು ವರ್ಷಗಳಿಂದ ಹೆಸರನ್ನು ಕೆಡಿಸಿಕೊಂಡಿರುವ ಒಂದು ಕಲೆಯ ಜೀರ್ಣೋದ್ಧಾರವು ೫೦ ವರುಷಗಳಲ್ಲಿ ಮರಳಿ ಬರುವದು ಸಾಧ್ಯವಾಗದಿದ್ದರೂ ಕೆಲವುದಿನಗಳಲ್ಲಾದರೂ ಈ ಕಲಂಕವು ದೂರಾಗುವದೆಂಬ ಆಶೆಯು ಉತ್ಪನ್ನವಾಗುವಲ್ಲಿ ಸಂದೇಹವಿಲ್ಲ.

ಆದರೆ ಈಗಮಾತ್ರ ನೃತ್ಯಕಲೆಯು ಸ್ವತಂತ್ರ ಭಾರತದಲ್ಲಿ ಒಳ್ಳೇ ಸ್ಥಾನವನ್ನು ಪಡೆದಿದೆ. ಹಡೆದವರು ತಮಗೆ ನೃತ್ಯಕಲೆಯಲ್ಲಿ ಅಭಿರುಚಿ ಇಲ್ಲದಿದ್ದರೂ ಆದರದಿಂದ ಹಾಗೂ ಆಸಕ್ತಿಯಿಂದ ತಮ್ಮ ಮಕ್ಕಳಿಗೆ ನೃತ್ಯಕಲೆಯನ್ನು ಹೇಳಿಸುತ್ತಾರೆ. ಈಗ ನೃತ್ಯಕಲೆಯು ಕುಮಾರಿಯರಿಗೆ ಒಂದು ಭೂಷಣವೆಂದು ಎಲ್ಲರೂ ತಿಳಿದುಕೊಳ್ಳಹತ್ತಿರುವರು. ಅದುಕಾರಣ ಇಂದು ನೃತ್ಯಕಲೆಯು ವಿಶೇಷವಾಗಿ ಜನರ ಪ್ರೋತ್ಸಾಹಕ್ಕೆ ಪಾತ್ರವಾಗಿದೆಂದು ಹೇಳಲು ಧಾರಾಳವಾದ ಸಂಗತಿಯಾಗಿದೆ. ಆದರೆ ಅಧಿಕ ಸಂಖ್ಯಸ್ಥರ ಅಭ್ಯಾಸದಿಂದ ಈ ಕಲೆಯು ಅವನತಿ ಹೊಂದುವದೋ ಏನೋ! ಎಂಬ ಭೀತಿಯು ತಜ್ಞರಿಗೆ ಬರಹತ್ತಿರುವದಲ್ಲಿ ಆಶ್ಚರ್ಯವಲ್ಲ. ಯಾಕಂದರೆ ಕಲೆಯುಎಲ್ಲರಿಗೂ ಬರುವಂತಹದಲ್ಲ. ವಿದ್ಯೆಯು ಮಾತ್ರ ಎಲ್ಲರ ಸೊತ್ತಾಗಿದೆ. ಪರಮಾತ್ಮನಿಂದ ದತ್ತ ಪ್ರಭಾವಿಜನಗಳು ಮಾತ್ರ ಕಲಾವಂತರಾಗಬಹುದು. ತಾಳಗೇಡಿಗೆ ನೃತ್ಯವೂ ಸ್ವರಗೇಡಿಗೆ ಗಾಯನವೂ ಬರುವದು ಸಾಧ್ಯವಿಲ್ಲ. ಈ ಕಲೆಯ ಬೀಜವನ್ನು ದೇವರು ಅವನ ಮಿದುಳಿನಲ್ಲಿ ಒಂದು ಅಂಶರೂಪವಾಗಿ ಬಿತ್ತಿದಾದರೇನೇ ಕಲೆಯು ಬರಬಲ್ಲದು. ಅಂತೆ ಬಹುಸಂಖ್ಯಾಕ ಕಲಾ ವಿದ್ಯಾರ್ಥಿಗಳಲ್ಲಿ ಜೊಳ್ಳು ವಿದ್ಯಾರ್ಥಿಗಳ ಸಂಖ್ಯೆಯೇ ಹೆಚ್ಚಾಗಿರುವದು ಕಂಡುಬರುತ್ತದೆ. ಕಲೆಯಲ್ಲಿ ಪ್ರಥಮಪ್ರವೇಶ ಮಾಡುವ ಕಾಲದಲ್ಲಿಯೇ ಬಾಲಬಾಲಕಿಯರ ಪರೀಕ್ಷಣ ಮಾಡಿಕೊಂಡು ಯೋಗ್ಯರಾದವರಿಗೇನೇ ಕಲಾ ಪ್ರವೇಶಮಾಡಿಸುವದು ಒಳಿತು. ಇಲ್ಲವಾದರೆ ಕಲೆಗೆ ಅವಹೇಳನ ಸ್ಥಿತಿಯು ಬರುವಲ್ಲಿ ಸಂದೇಹವಿಲ್ಲ.

ಹೆಸರುವಾಸಿಗಳಾದ ನಾಟ್ಯಾಚಾರ್ಯರನ್ನು ಪ್ರತಿಭೆಯುಳ್ಳ ಹಾಗು ಪ್ರತಿಭೆ ಇಲ್ಲದ ವಿದ್ಯಾರ್ಥಿಗಳು ಬಯಸುತ್ತಿದ್ದಾರೆ. ಹೆತ್ತವರ ಸ್ಪರ್ಧೆಯು ಹೆಚ್ಚಾಗಿ ಚಿಕ್ಕಮಕ್ಕಳು ರಂಗಸ್ಥಳಕ್ಕೆ ಬರುವದು ಬಹಳ ರೂಢಿಯಾಗಿದೆ. ಚಿಕ್ಕಮಕ್ಕಳು ಪ್ರತಿಭಾವಂತರಾಗಿದ್ದರೆ ಮಾತ್ರ ಅವರು ಉತ್ತಮ ನೃತ್ಯಗಾರರಾಗುವದರಲ್ಲಿ ಸಂಶಯವಿಲ್ಲ. ಆದರೆ ಚಿಕ್ಕಮಕ್ಕಳ ದೇಹಕ್ಕೂ ಮನಸ್ಸಿಗೂ ಕೂಡಿ ಬೆಳವಣಿಗೆಯು ಮುಗಿಯುವವರೊಳಗೇನೇ ಹೆತ್ತವರು ಆತುರವನ್ನು ತೋರಿಸಿ ಅವರ ಕಲಾಪ್ರದರ್ಶನಕ್ಕೆ ಹಾತೊರೆಯುತ್ತಾರೆ. ಗುರುಗಳು ಹೇಳಿಕೊಟ್ಟ ಬೋಲುಗಳನ್ನು ಬಾಯಿಂದ ಅಂದು ಗಿಳಿಪಾಠಮಾಡಿ ಸಭಿಕರ ಮನರಂಜನೆಯಾಗುವಂತೆ ಕುಣಿದರೆ ಅದು ನೃತ್ಯವಲ್ಲ ಕಲೆಯೂ ಅಲ್ಲ. ಕಲೆಯೆಂದರೆ ಗುರುಗಳು ಗಿಳಿಯಂತೆ ಪಾಠಮಾಡಿಸಿದ ಪಾಠವಲ್ಲ. ಆದರೆ ಗುರುಗಳ ಚರಣದಲ್ಲಿ ವಿಲೀನರಾಗಿ ಕಲಿತುಕೊಂಡ ಆಧಾರದ ಮೇಲಿಂದ ಸ್ವಂತ ವ್ಯಕ್ತಿತ್ವವನ್ನು ಬೀರಿ ನಾನಾತರಹ ವಿಚಾರಗಳ ಸಂಕೀರ್ಣದಿಂದ ಒಡಗೂಡಿದ ಕಲೆಯೇ ನಿಜವಾದ ಕಲೆಯಾಗಿದೆ ಇಂಥ ಉನ್ನತಸ್ಥಾನವನ್ನು ಈಗಿನವಿದ್ಯಾರ್ಥಿಗಳು ಹೊಂದಲು ಹಡೆದವರು ಅವಕಾಶವನ್ನೇ ಕೊಡುವದಿಲ್ಲ. ಅವರು ಪ್ರಾಪ್ತವಯಸ್ಕರಾಗಿ ಕಲೆಯ ಆಳವನ್ನು ಪರಿಗಣಿಸುವಷ್ಟರಲ್ಲಿ ನೃತ್ಯಾಭ್ಯಾಸವನ್ನು ಕೊನೆಗೊಳಿಸುವ ಪ್ರಸಂಗಗಳು ಒದಗುತ್ತವೆ. ಪ್ರಾಂತೀಯ ಹಾಗು ಕೇಂದ್ರಸರಕಾರಗಳು ಯೋಗ್ಯ ಕಲಾವಂತರಿಗೇನೇ ಪ್ರೋತ್ಸಾಹವನ್ನು ನೀಡಹತ್ತಿವೆ. ಇನ್ನು ಕೇಲವೇ ವರ್ಷಗಳಲ್ಲಿ ನೃತ್ಯಕಲೆಯು ಭಾರತದಲ್ಲಿ ಅಭ್ಯಾಸದ ಒಂದು ಮುಖ್ಯ ವಿಷಯವಾಗುವದರಲ್ಲಿ ಸಂದೇಹವಿಲ್ಲ.

---

# ಸೂಚನೆ

* ಲೇಖನಗಳು, ಅಸ್ಪಷ್ಟ ರೀತಿಯಲ್ಲಿ ಬರೆದವು ಬರುತ್ತಿದ್ದು, ಮುದ್ರಣ ಕಾರ್ಯಕ್ಕೆ ತುಂಬಾ ತೊಂದರೆಯಾಗುತ್ತದೆ. ಲೇಖಕರು ಸುಸ್ಪಷ್ಟ ರೀತಿಯಲ್ಲಿ ಬರೆದ ಲೇಖನಗಳನ್ನು ಸಂಪಾದಕರ ವಿಳಾಸಕ್ಕೆ ಕಳುಹಿಸಬೇಕು.

* ಇನ್ನೂ ವರೆಗೂ ಚಂದಾ ಹಣವನ್ನು ಕಳಿಸದ ಚಂದಾದಾರರು ಅದನ್ನು ಕೂಡಲೆ ಕಾರ್ಯದರ್ಶಿ 'ವೀರಮಾತೆ' ವನಿತಾ ಸೇವಾ ಸಮಾಜ, ಧಾರವಾಡ. ಈ ವಿಳಾಸಕ್ಕೆ ಚಂದಾಹಣವನ್ನು ಕಳುಹಿಸಿಕೊಡಬೇಕು.

* ಚಂದಾದಾರರು, ತಮ್ಮ ವಿಳಾಸ ಬದಲಾದಲ್ಲಿ, ಹಾಗೆ ತಿಳಿಸಿದರೆ, 'ವೀರಮಾತೆ' ಯು ತ್ವರಿತವಾಗಿ ಮುಟ್ಟುವಂತೆ ದಕ್ಷತೆ ವಹಿಸಲಾಗುವದು.

* ಲೇಖಕರು ಅಥವಾ ವಾಚಕರು, ಲೇಖ ಕಳಿಸುವದಾಗಲಿ ಉಳಿದ ಯಾವದೇ ಪತ್ರವ್ಯವಹಾರ ಮಾಡುವಾಗ ತಮ್ಮ ವಿಳಾಸವನ್ನು ಸ್ಪಷ್ಟ ರೀತಿಯಲ್ಲಿ ಬರೆದು ತಿಳಿಸಲು ಮರೆಯಬಾರದು.

* ಹೊಸದಾಗಿ ಚಂದಾದಾರರಾಗಬಯಸುವವರು, ಚಂದಾ ಹಣವನ್ನು ಮೊದಲು ಕೊಟ್ಟು, ಕಳಿಸಿದರೆ, ಮಾಸಿಕವನ್ನು ಅವರ ವಿಳಾಸಕ್ಕೆ ಕಳಿಸುವತ್ತ ಗಮನಿಸಲಾಗುವದು.

* ಸೋದರ, ಸೋದರಿಯರು, ಅಕ್ಕನಟ್ಟಿಗೆಯ ವಿಭಾಗದಲ್ಲಿ ಬರುವ ಸ್ಪರ್ಧೆಗಳಿಗೆ ಉತ್ತರಗಳನ್ನು ಪ್ರತಿತಿಂಗಳ ೧೦ ನೇ ತಾರೀಖಿನ ಒಳಗಾಗಿ ಕಳುಹಿಸಬೇಕು,

* * * * * *

---

‘ಸಮಾನಾಧಿಕಾರ’ ಕೃತಿಯಲ್ಲಿ ಬರಬೇಕಿದ್ದರೆ
ಮಹಿಳೆಯರ ‘ಬೌದ್ಧಿಕ ಉನ್ನತಿ’ ಅತ್ಯವಶ್ಯವಾದುದು
ಜ್ಞಾನ, ಮನೋರಂಜನೆಗಾಗಿ ವಿವಿಧ ಲೇಖಗಳಿದ್ದ
ಪ್ರಗತಿಪರ ವಿಚಾರಗಳಿಂದೊಡಗೂಡಿದ
ಮಹಿಳೆಯರ ಮಾಸಪತ್ರಿಕೆ

# ವೀರಮಾತೆ

ಇಂದೇ ಚಂದಾದಾರರಾಗಿರಿ

ಸಂಪಾದಕರು :— **ಪ್ರೊ. ಸರೋಜನಿ ಮಹಿಷಿ,**
**ಎಂ. ಎ., ಎಲ್‌ಎಲ್. ಬಿ.**

**ಸ್ತ್ರೀಯರ ವಿಕಾಸಕ್ಕಾಗಿ ಮೀಸಲಾಗಿಟ್ಟ**

## ಮಾಸಪತ್ರಿಕೆ

ವಾರ್ಷಿಕ ಚಂದಾಹಣ ೫ ರೂಪಾಯಿ
ಬಿಡಿಸಂಚಿಕೆ ೬೨ ನ.ಪೈ. ಮಾತ್ರ

**ಮನೆಮನೆಯಲ್ಲಿಯೂ ಸುಖಸಂತೋಷಗಳನ್ನು**
**ಬೀರಬಲ್ಲ ಕನ್ನಡ ಮಾಸಪತ್ರಿಕೆ**

[ ಮುಂಬಯಿ, ಮೈಸೂರು ಮತ್ತು ಮದ್ರಾಸ
ಸರಕಾರಗಳಿಂದ ಮಾನ್ಯತೆ ದೊರೆತಿದೆ.]

ವಿಳಾಸದಾರರು ದೊರೆಯದಿದ್ದಲ್ಲಿ
ಕಳುಹಿಸಬೇಕಾದ ವಿಳಾಸ :—
“ವೀರಮಾತೆ” ಕಾರ್ಯಾಲಯ
ವನಿತಾ ಸೇವಾ ಸಮಾಜ
ಪುರಾಣಿಕ ರೋಡ
ಧಾರವಾಡ

ADDRESS

ಶ್ರೀ.

ಮುದ್ರಕರು : ಶ್ರೀಯುತ ಕುಲಕರ್ಣಿ ರಾಮರಾಯರು
ಸ್ಥಳ : ವನಿತಾ ಪ್ರಿಂಟಿಂಗ ಪ್ರೆಸ್, ಧಾರವಾಡ
ಪ್ರಕಾಶಕರು : ಶ್ರೀ. ಎ. ರಂ. ಪುರಾಣಿಕ
ಸ್ಥಳ : ವನಿತಾ ಸೇವಾ ಸಮಾಜದಲ್ಲಿಯ ಕಾರ್ಯಾಲಯ, ಧಾರವಾಡ




ಸಂಪುಟ ೮ ] ಮಾರ್ಚ ೧೯೬೦ [ ಸಂಚಿಕೆ ೧೦

# 'VEERAMATE' WOMEN'S VOICE

The Largest Circulated

KANNADA MONTHLY

---

ರಜಿಸ್ಟ್ರೇಶನ್ ಆಫ್ ನ್ಯೂಜ ಪೇಪರ್ಸ (ಸೆಂಟ್ರಲ್) ರೂಲ್ಸ ೧೯೫೬ರ ಆನೇ ನಿಯಮಕ್ಕೆ ಸಂಬಂಧಿಸಿದಂತೆ "ವೀರಮಾತೆ" ಮಾಸಪತ್ರಿಕೆಯ ಸ್ವಾಮಿತ್ವ ಮತ್ತು ಇತರ ವಿಷಯಗಳ ಬಾಬತ ವಿವರ:—

೧. ಪ್ರಕಾಶನ ಸ್ಥಳ— ವನಿತಾ ಸೇವಾ ಸಮಾಜ ಧಾರವಾಡ.
೨. ನಿಯಮಿತ ಕಾಲಿಕತೆ— ಮಾಸಪತ್ರಿಕೆ
೩. ಮುದ್ರಕರ ಹೆಸರು— ರಾಮರಾವ ಕುಲಕರ್ಣಿ
ರಾಷ್ಟ್ರೀಯತೆ— ಭಾರತೀಯ
ವಿಳಾಸ— ವೀರಮಾತೆ ಕಾರ್ಯಾಲಯ ಧಾರವಾಡ
೪. ಪ್ರಕಾಶಕರ ಹೆಸರು— ಲ. ರಂ. ಪುರಾಣಿಕ
ರಾಷ್ಟ್ರೀಯತೆ— ಭಾರತೀಯ
ವಿಳಾಸ— ವನಿತಾ ಸೇವಾ ಸಮಾಜ ಧಾರವಾಡ
೫. ಸಂಪಾದಕರ ಹೆಸರು— ಸರೋಜನಿ ಮಹಿಷಿ ಎಮ್. ಎ. ಎಲ್‌ಎಲ್. ಬಿ.
ರಾಷ್ಟ್ರೀಯತೆ— ಭಾರತೀಯ
ವಿಳಾಸ— ಲೈನಬಝಾರ ಧಾರವಾಡ
೬. ಪತ್ರಿಕಾ ಸ್ವಾಮಿತ್ವ ವಿಳಾಸ— ಕಾರ್ಯಕಾರಿ ಮಂಡಳ
ಮತ್ತು ಬಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ— ವನಿತಾ ಸೇವಾ ಸಮಾಜ ಧಾರವಾಡ

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣಿಕನಾದ ನಾನು ಮೇಲಿನ ವಿವರಗಳಲ್ಲಿಯ ಎಲ್ಲ ವಿಷಯಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣಿಕ.

# ಪರಿವಿಡಿ

# ಸ್ತ್ರೀ-ಧರ್ಮ

ಕನ್ನಡ ರಾಜ್ಯದಲ್ಲಿನ ಐವತ್ತು ತತ್ವಾನ್ವೇಷಣ (Theosophy) ಸಂಘಗಳ ಸಂಯುಕ್ತ ಸಂಘದ ಕಾರ್ಯದರ್ಶಿಗಳಾದ ಶ್ರೀ. ರಾಚಪ್ಪ ಅವರು ಸ್ಥಳೀಯ ತತ್ವಾನ್ವೇಷಣ ಸಂಘದ ವಾರ್ಷಿಕೋತ್ಸವಕ್ಕಾಗಿ ಬಂದುದರ ಪ್ರಯೋಜನವನ್ನು ಪಡೆದು ಅವರನ್ನು ದಿ. ೧೬–೧೧–೫೯ರಂದು ವನಿತಾ ಸೇವಾ ಸಮಾಜಕ್ಕೆ ಬರಮಾಡಿಕೊಂಡು ಸತ್ಕರಿಸಲಾಯಿತು. ಇಳಿಹೊತ್ತಿನ ೪–೩೦ ರಿಂದ ೬ರ ವರೆಗೆ ಶ್ರೀ. ರಾಚಪ್ಪ ಅವರು ವನಿತಾ ಸೇವಾ ಸಮಾಜದ ಸಭಾಂಗಣದಲ್ಲಿ ಕಿಕ್ಕಿರಿದು ನೆರೆದಿದ್ದ ಜನಸಮೂಹವನ್ನುದ್ದೇಶಿಸಿ ಸ್ತ್ರೀಧರ್ಮದ ಪ್ರವಚನವನ್ನಿತ್ತರು. ವನಿತಾ ಸೇವಾ ಸಮಾಜದ ಸಂಸ್ಥಾಪಕರೂ ಕಾರ್ಯದರ್ಶಿಗಳೂ ಆಗಿದ್ದ ಶ್ರೀ. ದಾದಾ (ಲ. ರಂ. ಪುರಾಣಿಕ) ಅವರು ಕಿರಿದರಲ್ಲಿ ಸಂಸ್ಥೆಯ ಗೊತ್ತುಗುರಿಗಳನ್ನು ವಿವರಿಸಿ ಬಿನ್ನವಿಸಿದ ಮೇರೆಗೆ ಅವರೊಡನಿದ್ದ ಸ್ಥಳಿಯ ತತ್ವಾನ್ವೇಷಣ ಸಂಘದ ಕಾರ್ಯವಾಹಕರಾದ ಶ್ರೀ. ಸು. ಶಿ. ದೇಸಾಯಿ ಅವರು ಮುಖ್ಯಾತಿಥಿಗಳಾದ ಶ್ರೀ. ರಾಚಪ್ಪ ಅವರ ಪರಿಚಯವನ್ನು ಮಾಡಿ ಕೊಡುತ್ತ ತತ್ವಾನ್ವೇಷಣ (ಥಿಓಸೊಫಿ) ಬಳ್ಳಿಯು ನೂರು ವರುಷಗಳ ಹಿಂದೆ ಪರದೇಶ (ಅಮೇರಿಕ) ದಿಂದ ಇಲ್ಲಿಗೆ ಬಂದು ನೆಲಿಸಿದುದೆಂದು ಹಲವರು ಗ್ರಹಿಸಿರುವರುವದು ತಪ್ಪಿನದೆಂದೂ ಅದರ ಪ್ರವರ್ತಕರಾದ ಅಮೇರಿಕೆಯ ಹೆರ್ಲೆ ಆಕ್ಕಾರ್ಟರು ಹಾಗೂ ರಶಿಯದ ಸ್ತ್ರೀರತ್ನ ಬ್ಲಾವಟ್‌ಸ್ಕಿ ಅವರು ಭಾರತೀಯ ಸಂಸ್ಕೃತಿಯ ಪ್ರಭಾವಾನ್ವಿತರಾಗಿದ್ದು ಅವರಿಗೆ ಗುರುಗಳಾಗಿದ್ದವರು ಭಾರತೀಯರೇ ಆಗಿದ್ದರಿಂದೂ ಅಧಿ–ಆತ್ಮದ ಬಗೆಯ ಚಿಂತನೆಗೆ ನೆಲವೀಡಾದ ಭಾರತವೇ ಸುಕ್ಷೇತ್ರವು ಎಂದವರು ಗುರುವಿನಾಜ್ಞೆಯಿಂದೆಣಿಸಿ ಅನಿಬಿಸೆಂಟಮ್ಮನವರು ನೆಲೆಸಿದ್ದ ಮದರಾಸಿನ ಅದ್ಯರವನ್ನು ಕೇಂದ್ರವನ್ನಾಗಿರಿಸಿರುವರೆಂದೂ ಜಗತ್ತಿನ ಎಲ್ಲ ದೇಶಗಳಲ್ಲಿ ಅದರ ಶಾಖೆಗಳು ಹಬ್ಬಿರುವವೆಂದೂ ತಿಳುಹಿ ದೇಶ, ಜಾತಿ, ಮತ, ಪಂಥ ಮುಂತಾದ ಯಾವುದೇ ಭೇದವನ್ನೆಣಿಸದೆ ಮಾನವ ಕುಟುಂಬವೆಲ್ಲ ಒಂದೇ ಒಂದು. ಮಾನವರ ಅಂತಿಮ ಸುಖಕ್ಕಾಗಿ ಅನಂತತ್ವವನ್ನರಸುವದೆಯೇ ಥಿಯೊಸೊಫಿಯ (ತತ್ವಾನ್ವೇಷಣದ) ಗುರಿಯಾಗಿದೆಯೆಂದೂ ಅರುಹಿದರು. ಶ್ರೀ. ರಾಚಪ್ಪನವರ ಪ್ರವಚನದ ಸಾರವಿಂತಿದೆ.

ಹೆಂಣು ಮಕ್ಕಳ ಏಳ್ಗೆಯ ಕುರಿತಾದ ನಿಮ್ಮ ಈ ದರ್ಶನೀಯವಾದ ಸಂಸ್ಥೆಯನ್ನು ಕಂಡು ನನಗೆ ಅತೀವ ಹರುಷವಾಗುತಿದೆ. ವಿಶ್ವಾತ್ಮನ ಸೃಷ್ಟಿಯಲ್ಲಿ ಗಂಡು ಹೆಣ್ಣು ಎಂಬ ಭೇದಕ್ಕೆಡೆಯಿಲ್ಲ. ಗಂಡು ಹೆಂಣು ಅಸಮರಲ್ಲ ಗಂಡು ಮೇಲು ಹೆಂಣು ಕೀಳು ಎಂಬ ಭಾವನೆ ಸಲ್ಲದು. ಅವರಿಬ್ಬರೂ ಒಂದೇ ಹಕ್ಕಿಯ ರೆಂಬೆಗಳಿದ್ದಂತೆ. ಹಕ್ಕಿಯು ಒಂದೇ ರೆಕ್ಕೆಯಿಂದ ಹಾರಬಲ್ಲುದೇ ? ಅಥವಾ ವಿದ್ಯುತ್ತಿನಲ್ಲಿರುವ ಸಂವೇದಾತ್ಮಕ (positive) ಹಾಗೂ ನಿವೇದಾತ್ಮಕ (nagative) ಶಕ್ತಿಗಳಿದ್ದಂತೆ. ಇವುಗಳ ಸಂಯೋಗವಾದರೆನೆಯೇ ವಿದ್ಯುತ್‌ಶಕ್ತಿಯುಂಟಾಗುವದಲ್ಲವೇ ? ಬರಿ ಸಂವೇದನ ಶಕ್ತಿ ಅಥವಾ ಬರಿ ನಿವೇದನ ಶಕ್ತಿ ನಿಷ್ಪ್ರಯೋಜನಕಾರಿ. ಆದ್ದರಿಂದ ಇಲ್ಲಿ ಕೀಳು ಮೇಲೆಂಬುದಕ್ಕೆ ಎಡೆಯಿದೆಯೆ ? ಸೃಷ್ಟಿ ಎಲ್ಲವೂ ಹೀಗೆಯೆ. ಅಲ್ಲಿ ಕೀಳು ಮೇಲು ಎಂಬುದಿಲ್ಲ. ಇನ್ನು ಲೌಕಿಕವಾಗಿ ನೋಡುವ. ಹೆಂಣು ಮತ್ತು ಗಂಡನ್ನು ಬೀಸುವ ಚಕ್ಕಿಯ ಹೋಳುಗಳಿಗೆ ಹೋಲಿಸಬಹುದಾಗಿದೆ. ಕಡಿಯಲ್ಲಿದ್ದ ಹೋಳು ಸ್ಥಿರವಾಗಿದ್ದು ಮೇಲಿನ ಹೋಳು ತಿರುಗಿದಾಗಲೆ ನಮಗೆ ಧಾನ್ಯ ಅಥವಾ ಹಿಟ್ಟು ದೊರೆಯುವುದು. ಎರಡೂ ತಿರುಗಿದರೆ ಏನಾಗುವದೆಂಬುವದನ್ನು ಹೇಳಬೇಕಿಲ್ಲ. ಹೆಂಗುಸು ತಿರುಗಿ ಕೆಟ್ಟಳು ಗಂಡುಸು ಕೂತು ಕೆಟ್ಟ ಎಂದು ಹಿರಿಯರು ಮಾಡಿದ ನಾಣ್ಣುಡಿ ಅರ್ಥಗರ್ಭಿತವಾಗಿದೆ. ಇದರ ಉಲ್ಲಂಘನೆ ನಡೆದು, ಗಂಡು ಹೆಂಣಿನಲ್ಲಿ ಈಚೆ ಸ್ಪರ್ಧೆಯಾಗುತ್ತಿರುವದು ವಿಷಾದ ಹಾಗೂ ಹಾನಿಕರವಾಗಿದೆ. ನಮ್ಮ ಹೆಣ್ಣು ಮಕ್ಕಳಿಂದಲೇ ನಮ್ಮ ಸಂಸ್ಕೃತಿಯ ಉಳಿವು, ಸತ್ ಪ್ರಜೆಯನ್ನೀಯುವದರಿಂದ, ಮಕ್ಕಳನ್ನು ಹೆರುವದು ಎಂದು ತಾಯಿತನವನ್ನು ಕೀಳುಗಳೆಯದಿರಿ. ತಾಯಿತನವು ಅತ್ಯಂತ ಹಿರಿದಾದ ಹೊಣೆಯಾಗಿದೆ. ನಿಸರ್ಗ ನಿಯಮಾನುಸಾರವಾಗಿ ಮಗು ತಾಯಿಯನ್ನು ಬೇರೆಯವರ ನೆರವಿಲ್ಲದೆ ಗುರುತಿಸುವದು. ತಂದೆ, ಅಪ್ಪ ಆರೆಂಬುದನ್ನು ತಾಯಿ ಅದಕ್ಕೆ ತಿಳುಹಿ ಕೊಡಬೇಕು. ಎಂತೆಯೆ ತಾಯಿಗಿಂತ ಬಂಧುವಿಲ್ಲ ಎಂಬ ನಾಣ್ಣುಡಿ ಇದೆ. ಹೆಣ್ಣು ತನ್ನ ಕರುಳಿನ ಮಗುವಾಗಿ ತನ್ನನ್ನು ಸವೆಯಿಸಿ ಮಾಡುವ ತ್ಯಾಗವು ನಿಷ್ಕಾಮವೂ ನಿಷ್ಕಲ್ಮಷವೂ ಆದುದರಿಂದ ಹಿರಿದಾದುದಾಗಿದೆ

(೪೦ ನೇ ಪುಟಕ್ಕೆ ಸಾಗಿದ್ದು)

# ವೀರಮಾತೆ



ಕೇವಲ ಹೆಣ್ಣುಮಕ್ಕಳ ವಿಕಾಸಕ್ಕಾಗಿ ಮೀಸಲಾದ
ಕನ್ನಡ ಮಾಸಪತ್ರಿಕೆ

ಸಂಪುಟ ೮ | ಮಾರ್ಚ | ಸಂಚಿಕೆ ೧೦

## ಸಂಪಾದಕೀಯ

ಸಭೆ, ಸಮ್ಮೇಲನ, ಪರಿಷತ್ತುಗಳನ್ನು ಎಲ್ಲರೂ ಸೇರಿಸುವಂತೆ ಮಹಿಳೆಯರೂ ಸೇರಿಸುತ್ತಾರೆ, ಗೊತ್ತುವಳಿಗಳನ್ನು ಪಾಸು ಮಾಡುತ್ತಾರೆ. ಸಭೆಗಳಿಗಾಗಿ ಗೊತ್ತುವಳಿಗಳೋ, ನಮಗಾಗಿ ಗೊತ್ತುವಳಿಗಳೋ ಎಂಬುವನ್ನು ವಿಚಾರಿಸುವ ಗೋಜಿಗೂ ನಾವು ಹೋಗುವದಿಲ್ಲ. ಗೊತ್ತುವಳಿಗಳನ್ನು ಪಾಸು ಮಾಡಿ, ಸಭೆ ಮುಗಿಸಿದರೆ, ಲೆಕ್ಕಪತ್ರ ಒಂದನ್ನು ಬಿಟ್ಟರೆ ಎಲ್ಲವೂ ಕೊನೆಗೊಂಡಂತೆಯೇ: ಇನ್ನುಳಿದವರು ಹೇಗೆ ಸಭೆ ಸೇರಿಸಿ ಗೊತ್ತುವಳಿಗಳನ್ನು ಪಾಸು ಮಾಡಿ, ಮರುವರ್ಷದ ಸಭೆಯಲ್ಲಿಯೂ ಅವುಗಳನ್ನೇ ಮತ್ತೆ ಪಾಸು ಮಾಡಿ ಹೇಗೆ ಸುಮ್ಮನೆ ಕುಳಿತುಕೊಳ್ಳುವರೋ, ಅದರಂತೆ ಮಹಿಳೆಯರು ಅದರಲ್ಲಿಯೂ ನಾವು ಕಡಿಮೆಯವರಲ್ಲ ಎಂದು ಸಿದ್ಧ ಮಾಡಿಕೊಡುತ್ತಿರುವರೋ ! ಮಹಿಳೆ ಮನಸ್ಸು ಮಾಡಿದರೆ ತನ್ನ ಶಕ್ತಿಯನ್ನು ವಿಧಾಯಕ ಕಾರ್ಯಕ್ಕಾಗಿ, ಸುತ್ತಲಿನ ಸಮಾಜದ ಉನ್ನತಿಗಾಗಿ ಉಪಯೋಗಿಸಬಹುದು. ಆದರೆ ಇದ್ದ ಅಂಧಶ್ರದ್ಧೆಗಳನ್ನು ದೂರಿರಿಸುವದು ಅವಳಿಗೊಂದು ಸಾಹಸದ ಮಾತು. ಮನುಷ್ಯನ ಮನಸ್ಸಿನ ಪ್ರವೃತ್ತಿಯೇ ಹಾಗೆಂದರೆ, ಅದಕ್ಕೆ ಬಹುದಿನಗಳಿಂದ ಶಿಕ್ಷಣದ ಸಂಸ್ಕಾರವಿಲ್ಲದೆ ದೂರವುಳಿದ ಮಹಿಳೆ ಜೀವಂತ ಉದಾಹರಣೆಯಾಗಿದ್ದಾಳೆ. ಯಾವ ಗೊತ್ತುವಳಿಯೇ ಆಗಲಿ ಕೃತಿಯಲ್ಲಿ ಬರಬೇಕಾದರೆ ಅದಕ್ಕೆ ಮೊದಲು ಮನಸ್ಸಿನ ಸಿದ್ಧತೆ ಬೇಕು. ಮಾಡಬಾರದ್ದನ್ನು ಮಾಡಿದರೆ ಪಾಪವುಂಟಾಗುವಂತೆ, ಮಾಡಬೇಕಾದ್ದನ್ನು ಬಿಟ್ಟರೂ ಪಾಪವುಂಟಾಗುತ್ತದೆಂಬ ತಿಳುವಳಿಕೆ ಮೂಡಬೇಕಾಗಿದೆ.

ಮನಸ್ಸಿನ ಪರಿವರ್ತನೆಯಾಗದೆ ಯಾವ ಯೋಜನೆಯೇ ಆಗಲಿ, ಯಾವ ಗೊತ್ತುವಳಿಯೇ ಆಗಲಿ ಎಷ್ಟು ಮಟ್ಟಿಗೆ ಕಾರ್ಯರೂಪದಲ್ಲಿ ಬಂದೀತೆಂದು ಹೇಳುವದು ಅಸಾಧ್ಯ. ಇನ್ನೇನು, ಸಭೆ-ಸಮ್ಮೇಲನಗಳು ನಡೆದರೂ ಹೊರಬರಲು ಹಿಂದೆ ಮುಂದೆ ನೋಡುತ್ತಿದ್ದ ಮಹಿಳೆಯರು ಇಂದು ಬಂದು ತಾವೇ ಸಭೆಸೇರುತ್ತಿದ್ದಾರೆ ಎಂಬುದೇ ಪ್ರಗತಿಯೆಂದು ತಿಳಿಯಬಹುದೇನೋ ! ಆದರೆ ಸಭೆ ಸೇರುವದೇ ಗುರಿ ಅಲ್ಲ ಎಂಬುದರ ಅರಿವೂ ಉಂಟಾಗಬೇಕಾದರೆ ಕಾಲ ಬೇಕು. ಎಲ್ಲ ವಿಧದ ಗೋಷ್ಠಿಗಳನ್ನು ಸಾಹಿತ್ಯದ ಭಿನ್ನ ಭಿನ್ನ ಅಂಗಗಳನ್ನು ಕುರಿತು ಸಾಹಿತ್ಯಸಮ್ಮೇಲನದಲ್ಲಿ ಸೇರಿಸಿದರೆ, ಮಹಿಳಾಗೋಷ್ಠಿಯೊಂದು ಸಾಹಿತ್ಯದ ವಿಶಿಷ್ಟ ಅಂಗದ ಮೇಲೆ ಅವಲಂಬಿಸದೆ, ಮಹಿಳೆಯರು ಎಂಬ ವಿಶಿಷ್ಟ ಆಧಾರದ ಮೇಲೆಯೇ ಕೂಡುತ್ತದೆ. ಮಹಿಳೆಯರು, ಹಿಂದುಳಿದವರು ಎಂಬ ಕಾರಣಗಳಿಗಾಗಿ ಸೌಕರ್ಯಗಳನೇಕ ದೊರೆಯುತ್ತಿದ್ದರೂ, ಆ ಸೌಕರ್ಯಗಳನ್ನು ಪಡೆಯುವದಕ್ಕೋಸುಗವೇ ನಾವು ಹಿಂದುಳಿದವರಾಗಿ ಉಳಿಯುತ್ತೇವೆ ಎಂಬ ಮನೋವೃತ್ತಿ ಬೆಳೆದು ಬರಕೂಡದಲ್ಲವೆ ?

# ವನಿತಾ ಸೇವಾ ಸಮಾಜದ ೩೧ನೇ ವರ್ಧಂತಿಉತ್ಸವ

## ಡಿ. ಪಿ. ಆಯ್. ಶ್ರೀ. ದೇವೇಗೌಡ ಅವರ ಹಿತೋಪದೇಶ

ವನಿತಾ ಸೇವಾ ಸಮಾಜದ ೩೧ ನೇ ವರ್ಧಂತಿ ಉತ್ಸವವು ದಿ. ೨೭ ರಂದು ಡಿ. ಪಿ. ಆಯರಾದ ಶ್ರೀ ದೇವೇಗೌಡ ಅವರ ಅಧ್ಯಕ್ಷತೆಯಲ್ಲಿ ನಗರ ಸಭೆಯ ಅಟ್ಟದಲ್ಲಿ ವಿಜೃಂಭಣೆಯಿಂದ ಜರುಗಿತು. ಇದಕ್ಕೂ ಮೊದಲು ಅತಿಥಿಗಳ ಹಸ್ತದಿಂದ ವನಿತಾ ಟ್ರೇನಿಂಗ ಕಾಲೇಜ ಕುಟೀರದ ಶಂಕುಸ್ಥಾಪನೆಯು ಸಮಾಜದ ಆವಾರದಲ್ಲಿ ಜರುಗಿತು. .

ಸಮಾಜದ ಕಾರ್ಯಕಾರೀ ಮಂಡಳದ ಅಧ್ಯಕ್ಷರಾದ ಶ್ರೀ. ಡಿ. ಎಲ್. ಪಾಟೀಲರು ಅತಿಥಿಗಳ ಪರಿಚಯ ಮಾಡಿಕೊಟ್ಟ ನಂತರ ಶ್ರೀಮತಿ ಸರೋಜನಿ ಮಹಿಷಿಯವರು ವರದಿ ಓದಿ ಸಮಾಜದ ಚಟುವಟಿಕೆಗಳ ವಿಸ್ತರಣದ ಬಗ್ಗೆ ಸ್ಥಳದ ಸಂಕೋಚ ಇರುವದನ್ನು ವಿಶದ ಪಡಿಸಿದರು. ವನಿತಾ ಟ್ರೇನಿಂಗ ಕಾಲೇಜ ಪ್ರಿನ್ಸಿಪಾಲರಾದ ಶ್ರೀಮತಿ ಯಮುನಾಬಾಯಿ ನಾಡಕರ್ಣಿಯವರು ನಿರಪೇಕ್ಷ ಬುದ್ಧಿಯಿಂದ ಸೇವೆ ಸಲ್ಲಿಸುತ್ತಿರುವ ಬಗ್ಗೆ ಅವರಿಗೆ ‘ ನಿಸ್ಸೀಮ ನಿರಪೇಕ್ಷ ಸೇವಿಕಾ, ಎಂಬ ಬಿರಿದನ್ನು ಕೆತ್ತಿದ ಸುವರ್ಣ ಪದಕವನ್ನು ಅಧ್ಯಕ್ಷರ ಹಸ್ತದಿಂದ ಕೊಡಿಸಲಾಯಿತು. ಹಾಗೂ ನವಲಗುಂದದ ವಕೀಲರಾದ ಶ್ರೀ. ಎಲ್. ಎಸ್. ಕುಲಕರ್ಣಿಯವರು ತಮ್ಮ ತಾಯಿಯವರ ಹೆಸರಿನಲ್ಲಿ ೨೫೦ ರೂಪಾಯಿಗಳನ್ನು ಬ್ಯಾಂಕಿನಲ್ಲಿಟ್ಟು, ಅದರಿಂದ ಬಂದ ೨ ವರ್ಷದ ಬಡ್ಡಿ ೩೦ ರೂಪಾಯಿಗಳನ್ನು ಸಮಾಜದ ಯೋಗ್ಯ ಬಡ ವಿದ್ಯಾರ್ಥಿನಿಯರಿಗೆ ಸಹಾಯವೆಂದು ಸಲ್ಲಿಸಿ, ಅದನ್ನು ಹೀಗೆಯೇ ಸಾಗಿಸಿಕೊಂಡು ಹೋಗುದಾಗಿ ಆಶ್ವಾಸನ ನಿತ್ತದ್ದಕ್ಕೆ ಅವರನ್ನು ಅಭಿನಂದಿಸಲಾಯಿತು. ತರುವಾಯ ಗಾಯನ ಹಾಗೂ ನೃತ್ಯ ಪರೀಕ್ಷೆಗಳಲ್ಲಿ ಉತ್ತಮರೀತಿ ಉತ್ತೀರ್ಣರಾದವರಿಗೆ ಅಧ್ಯಕ್ಷರ ಹಸ್ತದಿಂದ ಪ್ರಶಸ್ತಿಪತ್ರಗಳ ವಿತರಣವಾಗಿ ಆ ಮೇಲೆ ಅಧ್ಯಕ್ಷರ ಭಾಷಣವಾಯಿತು.

ಅವರು ಮಾತಾಡುತ್ತ “ಈ ಸಂಸ್ಥೆಯನ್ನು ನೋಡಿ ಸಂತೋಷವಾಯಿತು. ಇಲ್ಲಿ ನಡೆಯುತ್ತಿರುವ ಕಾರ್ಯವು ಸ್ತುತ್ಯವಾದುದು. ಇಂಥ ಸಂಸ್ಥೆಗಳು ನಮ್ಮಲ್ಲಿ, ಅಲ್ಲಲ್ಲಿ ಪ್ರಾರಂಭವಾಗಿ, ದೇಶದಲ್ಲಿ ಬಡವರು ಅನಾಥರೆಂದು ಯಾರೂ ಉಳಿಯದೆ, ಎಲ್ಲರಿಗೂ ಜೀವನದ ಯೋಗ್ಯ ಮಾರ್ಗವನ್ನು ಕಲ್ಪಿಸಿ ಕೊಡುವ ಕಾರ್ಯವು ಇಂಥ ಸಂಸ್ಥೆಗಳ ಮುಖಾಂತರ ಆಗಬೇಕು.

ಕೆಲವೊಂದೆಡೆ ಇಂತಹ ಸಂಸ್ಥೆಗಳು ಸರಿಕಾರದಿಂದ ಯಾವ ಸಹಾಯವನ್ನೂ ಪಡೆಯದೆ, (ಹಾಗೆ ಪಡೆಯುವದರಿಂದ ತಮ್ಮ ಕಾರ್ಯದಲ್ಲಿ ಕೆಲವೆಡೆ ಸರಕಾರಿ ನಿಯಮಗಳ ತೊಂದರೆ ಬರುವದೆಂಬ ವಿಚಾರದಿಂದ,) ಸಾರ್ವಜನಿಕರಸಹಾಯದಿಂದಲೇ ಸಾಗುತ್ತಿರುವದನ್ನು ಕಾಣುತ್ತಿದ್ದೇವೆ. ಆ ಸಂಸ್ಥೆಗಳಾದರೂ ನಿಜವಾಗಿಯೂ ಅತ್ಯುತ್ತಮ ಸಂಸ್ಥೆಗಳಾಗಿ ನಡೆಯುತ್ತಿವೆಯೆಂದು ಹೇಳಲು ಆನಂದವೆನಿಸುತ್ತದೆ. ಸಾರ್ವಜನಿಕರ ಸಹಾಯದೊಂದಿಗೆ ಸರಕಾರದ ಸಹಾಯವೂ ಸಿಕ್ಕಲ್ಲಿ ಸಂಸ್ಥೆಗೆ ಹೆಚ್ಚು ಲಾಭ ಸಿಕ್ಕಂತಾಗಿ, ಕಾರ್ಯವನ್ನು ಬೆಳೆಯಿಸಲು ಅನುಕೂಲವಾಗುವದರಿಂದ, ಸರಕಾರದ ಸಹಕಾರದಿಂದ ನಡೆದು, ಅದರ ಲಾಭವನ್ನು ಪಡೆಯುವದು ಒಳಿತು. ಸರಕಾರದಿಂದ ಸಹಾಯ ಪಡೆಯಲು ಕೇವಲ ಒಂದೇ ಮಾರ್ಗವಲ್ಲ. ವೆಲ್‌ಫೇರ್ ಬೋರ್ಡ, ರಿಮಾಂಡ್ ಹೋಂ, ಔದ್ಯೋಗಿಕ ಶಾಲೆಗಳು, ವಿದ್ಯಾಸಂಸ್ಥೆಗಳು ಹೀಗೆ ಅನೇಕ ಮಾರ್ಗಗಳಿವೆ, ಎಂದು ಹೇಳಿದರಲ್ಲದೆ, ಹೆಣ್ಣುಮಕ್ಕಳು ತಮ್ಮ ಧ್ಯೇಯ, ಗುರಿಗಳಿಗನುಸಾರವಾಗಿ ಹೆಚ್ಚು ಹೆಚ್ಚು ವಿವಿಧ ತೆರನಾದ ಶಿಕ್ಷಣ ಪಡೆದವಿನಾ ದೇಶವು ಸುಧಾರಿಸಲಾರದು ಎಂದು ಹೇಳಿದರು. ಕೊನೆಯದಾಗಿ ಅವರು “ನನ್ನನ್ನು ಇಲ್ಲಿ ಕರೆಯಿಸಿ ನನಗೆ ಮರ್ಯಾದೆ ಸಲ್ಲಿಸಿದಕ್ಕಾಗಿ, ಹಾಗೂ ಇಲ್ಲಿ ನಡೆದಂತಹ ಸ್ತುತ್ಯ ಕಾರ್ಯಗಳನ್ನು ನೋಡಿ ಆನಂದ ಪಡಲು ಅವಕಾಶ ಕಲ್ಪಿಸಿಕೊಟ್ಟದ್ದಕಾಗಿ ಸಂಸ್ಥೆಯ ಎಲ್ಲ ಕಾರ್ಯಕರ್ತರ ಆಭಾರವನ್ನು ಮತ್ತೊ ಒಮ್ಮೆ ಮನ್ನಿಸುತ್ತೆನೆ”ಂದು ಹೇಳಿದರು.

ತರುವಾಯ ಸಮಾಜದ ತಾಯಿಯವರಾದ ಮಾ. ಮಾಯಿಯವರು ಸಮಯೋಚಿತ ಭಾಷಣ ಮಾಡಿ, ಅಧ್ಯಕ್ಷರಿಗೆ ಕೃತಜ್ಞತೆಯನ್ನು ಸಲ್ಲಿಸಿ, ಅವರಿಗೆ ಮತ್ತು ಸಭಿಕರಿಗೆ ದೀರ್ಘಾಯುರಾರೋಗ್ಯ ಸಂಪತ್ತನ್ನು ಕೋರಿದರು.

ಕೊನೆಯದಾಗಿ ವನಿತಾ ಹ್ಯಾಸ್ಕೂಲಿನ ಮುಖ್ಯ ಗುರುಗಳಾದ ಶ್ರೀಮಾನ್ ಓಂಕಾರರು, ನಗರ ಸಭೆಯವರ, ಸಭಿಕರ, ನಮಗೆ ಕಾರಿನ ಸಹಾಯವಿತ್ತು ನೆರವಾದ ಶ್ರೀಮಾನ್ ಆಕಳವಾಡಿ ಲಕ್ಷ್ಮಣರಾಯರ ಹಾಗೂಎಲ್ಲಕಾರ್ಯಗಳಲ್ಲಿ ನೆರವಿತ್ತಜ್ಞಾತ ಅಜ್ಞಾತ ಸಹಾಯಕರ, ಮೇಳ ಸಂಗೀತಗಾರರ ಹಾಗೂ ವನಿತಾ ವಿಭಾಗಗಳ ಬೇರೆ ಬೇರೆ ವಿಭಾಗಗಳಿಂದ ಸ್ವಯಂಸೇವಿಕೆರಾಗಿ ನಿಂತು ಕಾರ್ಯನಿರ್ವಹಿಸಿಕೊಟ್ಟ ವಿದ್ಯಾರ್ಥಿನಿಯರ ಉಪಕಾರ ಸ್ಮರಿಸಿದನಂತರ ಮಾತೃವಂದನೆಯೊಂದಿಗೆ ಸಭೆಯು ಮುಕ್ತಾಯವಾಯಿತು.

# ದೇವರಲ್ಲಿ ಪ್ರಾರ್ಥನೆ

ಪದ : ರಾಗ : ಭೂಪ ತಾಳ : ತ್ರಿವಟ

ಪ್ರಾರ್ಥಿಸುವೆವು ದೇವಾ। ವಿನಯದಿ। ಪ್ರಾರ್ಥಿಸುವೆವು ದೇವಾ॥ಪ॥

ದೀನ ದಲಿತ–ಅಬಲೆಯರೆಂದೆಮ್ಮನು।
ಹೀನ ದೆಶೆಯೊಳಿಟ್ಟಾಳುವ ಪುರುಷರ।
ಮಾನಸದೊಳು ಸಮಭಾವನೆಯನು ಕೊ–।
ಟ್ಟೀ ನರ ಜನ್ಮವ ಪಾವನ ಗೊಳಿಸಲು ॥ ೧ ॥

ಶಕ್ತಿಯೆ ಸತಿ, ಯುಕ್ತಿಯೆ ಪತಿ ಎನ್ನುತ।
ಮುಕ್ತಿ ಮಾರ್ಗದೊಳು ಬಾಳಿ ಬೆಳಗಿದಾ।
ಅಕ್ಕಮಹಾದೇವಿಯು ದ್ರೌಪದಿಯರು।
ಧಿಃಕ್ಕರಿಸದ ಪೆಣ್ಮಕ್ಕಳಲ್ಲವೆ ನಾವ್ ॥ ೨ ॥

ಶಾಪಶರಗಳಲಿ ರೂಪ ಲಾವಣ್ಯದಿ।
ಭೂಪ ಪದವ ಭೋಗಿಸಿದ ಮಹಿಳೆಯರು।
ಆ ಪದವನು ಪೊಂದುವ ಬಗೆಯನು ನೀ।
ರೂಪಿಸಿ ಸನ್ಮಾರ್ಗವ ತೋರೆನ್ನುತ ॥ ೩ ॥

ವನಿತಾ ಹಿತೈಷಿ

# ಪ್ರಾರ್ಥನೆಯ ಸ್ವರೂಪ

## " ಓಂ ಸತ್ ತತ್ "

ಲೇಖಕಿ:— ಕುಮಾರಿ ಶಾಂತಾ ನೆಂ. ಜೋಶಿ, ಗದಗ.

ಪ್ರಾರ್ಥನೆಯು ಧರ್ಮದ ಸಾರಸರ್ವಸ್ವವು. ಧರ್ಮವಿಲ್ಲದೆ ಜಗತ್ತಿನಲ್ಲಿ ಯಾವನೂ ಬಾಳಲಾರನು. ಮಾನವನ ಪ್ರಾಣ ಪದಕವೆಂದರೆ ಧರ್ಮದ ತಿರುಳಾದ 'ಪ್ರಾರ್ಥನೆ' ಎಂದು ಹೇಳಬಹುದು. ಆದಿಕಾಲದ ಋಷಿಪುಂಗವರು ಪ್ರಭಾತ ಪ್ರಭಾಕರನನ್ನು ಆಹ್ವಾನಿಸುವದಕ್ಕಾಗಿ ತಮ್ಮ ಉಚ್ಚ ಕಂಠ ಗಳಿಂದ ಅನ್ನುತ್ತಿದ್ದ ವೇದ ಘೋಷಗಳು ಈ ವರೆಗೂ ಅಜರಾ ಮರವಾಗಿವೆ.

"ಯಂ ಬ್ರಹ್ಮವರುಣೇಂದ್ರ ರುದ್ರಮರುತಃ ಸ್ತುನ್ವಂತಿದಿವ್ಯೈಸ್ತವೈ।
ವೇದೈಃ ಸಾಂಗಪದಕ್ರಮೋಪನಿಷದೈರ್ಗಾಯಂತಿ ಯಂ ಸಾಮಗಾಃ ।
ಧ್ಯಾನಾವಸ್ಥಿತ ತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನೋ ।
ಯಸ್ಯಾಂತಂ ನ ವಿದುಃ ಸುರಾಸುರ ಗಣಾ ದೇವಾಯ ತಸ್ಮೈ ನಮಃ ॥

ಹೀಗೆ ಮಾನವರು ತಮ್ಮ ವಿಚಾರದಿಂದ ಉದ್ಭವಿಸಿದ ಶ್ರದ್ಧೆ ಯಿಂದಾಗಲಿ, ಮೂಢ ನಂಬಿಕೆಯಿಂದಾಗಲಿ ಇಲ್ಲವೆ ಹುಟ್ಟು ಗುಣದಿಂದಾಗಲಿ ಆ ಜಗದೀಶನೊಡನೆ ಒಂದಿಲ್ಲೊಂದು ಸಂಬಂಧವನ್ನು ಇಟ್ಟುಕೊಂಡಿರುವರು. ಪ್ರಾರ್ಥನೆಯು ಅಂತ ರಾತ್ಮನೊಡನೆ ಸಮರಸವಾಗುವ ನಿಃಶಬ್ದ ಸನ್ನಿವೇಶ. ಮಾನವನು ದೇವನಲ್ಲಿ ತನಗೆ ವಿಹಿತ ಸುಖೋಪಭೋಗಗಳನ್ನು ದಯಪಾಲಿಸಲೆಂದು ಬೇಡಿಕೊಳ್ಳುವದು ಅವನ ಕೀಳತನವೇ ಸರಿ. ಆತ್ಮಕ್ಕೆ ಅಂಟಿಕೊಂಡ ಅಜ್ಞಾನ ತಿಮಿರವನ್ನು ಕಳೆದು, ಅದರ ಪರಿಶುದ್ಧಿಗಾಗಿ ದೇವನನ್ನು ಪ್ರಾರ್ಥಿಸುವದೇ ಮಿಗಿಲಾದ ಪ್ರಾರ್ಥನೆ. ಆದರೆ ಭಕ್ತಿ ಇಲ್ಲದ ಪ್ರಾರ್ಥನೆ ನಿರುಪಯುಕ್ತ ಪ್ರಾರ್ಥನೆಯ ಅದ್ಭುತ ಪ್ರಭಾವವನ್ನು ಅನುಭವಿಸಿದವನು ಅನ್ನವಿಲ್ಲದೆ ಅನೇಕ ದಿನ ಜೀವಿಸಬಹುದು. ಆದರೆ ಪ್ರಾರ್ಥನೆ ಇಲ್ಲದೆ ಒಂದು ಅರಗಳಿಗೆಯಾದರೂ ಜೀವಿಸಲಾರನು. ಕಾರಣ ಪ್ರಾರ್ಥನೆಯಿಲ್ಲದೆ ಆತ್ಮಶಾಂತಿ ದೊರಕಲಾರದು. ನಮ್ಮ ದೈನಿಕ ವ್ಯವಹಾರದಲ್ಲಿ ಓರಣ, ಶಾಂತಿ, ಸಮಾಧಾನ ಈ ಅಮೌಲ್ಯ ವಸ್ತುಗಳನ್ನು ದೊರಕಿಸಿಕೊಡುವ ದಿವ್ಯಶಕ್ತಿ ಪ್ರಾರ್ಥನೆ ಯಲ್ಲಡಗಿದೆ "ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ" ಎಂಬಂತೆ.

ಯಂ ಶೈವಾಃ ಸಮುಪಾಸತೆ ಶಿವಇತಿ ಬ್ರಹ್ಮೇತಿ ವೇದಾಂತಿನಃ।
ಬೌದ್ಧಾ ಬುದ್ಧ ಇತಿಹ್ಮಹೂರ ಇತಿವಾ ಝೊರಾಸ್ಟರ ಸ್ಯಾನುಗಃ ।
ಮಾಶೀ ಹ್ಯೇತಿ ಯಹೂದಿನೋಜಿನೆ ಇತಿ ಧ್ಯಾನಸ್ಥ ತೀರ್ಥಂಕರಾಃ।
ಕ್ರೈಸ್ತ ಯೇಸುರಿತಿ ಪ್ರಭುಃ ಸವಿಜಯೇತ್ ತುರ್ಕಸ್ಯ ಪೈಗಂಬರಃ ॥

ನಾವು ಪೈಗಂಬರ, ಶಿವ, ಬ್ರಹ್ಮ, ಯೇಸು ಬೇಕಾದ ಹೆಸರಿ ನಿಂದ ಕರೆದರೂ ಕೂಡಾ ಅವೆಲ್ಲ ಒಬ್ಬ ಸೃಷ್ಟಿಕರ್ತನಾದ ದೇವನಿಗೆ ಮುಟ್ಟುತ್ತವೆ. ಪರಮೇಶ್ವರನ ರೂಪವು ಅನಂತವೂ ಅಗೋಚರವೂ ಆಗಿದ್ದು, ಸರ್ವಸಮ್ಮತವಾಗಿರುವದು. ಅಂತಲೇ ಕಬೀರದಾಸರು "ದೇವರೊಬ್ಬ; ಹಲವು ನಾಮ" ಎಂದು ಹಾಡಿರುವರು. ಅಂದಮೇಲೆ ಎಲ್ಲ ದೇವರಿಗೂ ಪ್ರಾರ್ಥನೆ ಯನ್ನು ಸಲ್ಲಿಸಬಹುದು.

ಪ್ರಾರ್ಥನೆಯೆಂದರೆ ದೇವನ ಸಾನ್ನಿಧ್ಯಕ್ಕಾಗಿ ಹೆಣಗಾಡುವ ಭಕ್ತನ ಹೃದಯದ ಹಂಬಲ. ನಮ್ಮನ್ನು ವಿನಯಶಾಲಿಗಳನ್ನಾಗಿ ಮಾರ್ಪಡಿಸಿ ಸಾತ್ವಿಕ ಜೀವನದಲ್ಲಿ ಹೆಜ್ಜೆಯಿಡಲು ಪ್ರೇರಿಸು ವದೇ ಪ್ರಾರ್ಥನೆಯ ಉದ್ದೇಶ. ಆ ದೇವದೇವನ ಆಜ್ಞೆ ಇಲ್ಲದೆ ಒಂದು ಹುಲ್ಲು ಕಡ್ಡಿಯೂ ಕೂಡಾ ಅಲ್ಲಾಡದಿರುವಾಗ ಈ ಹುಲು ಮಾನವನ ಪಾಡೇನು? ಅಂದಮೇಲೆ ಪ್ರಾರ್ಥನೆಯನ್ನು ತಮಗೆ ತಿಳಿದಪ್ರಕಾರ ಮಾಡಬಹುದು. ಕೆಲವರಿಗೆ ಪ್ರಾರ್ಥನೆಯ ವೇಳೆ ಸ್ವಲ್ಪೇ ಹೊತ್ತು ಹಿಡಿಯಬಹುದು. ಕೆಲವರಿಗೆ ಐದೇ ನಿಮಿಷ ಅತ್ಯಲ್ಪವೆಂದೆನಿಸುವದು. ಆದರೆ ದೇವ ಧ್ಯಾನ ಮಾಡು ವದು ತುಟಿಯಿಂದಲ್ಲ; ಭಕ್ತಿಪೂರ್ಣವಾದ ಹೃದಯದಿಂದ. ಶ್ರದ್ಧೆಯು ಪ್ರಾರ್ಥನಾಪರ ಜೀವಿಗೆ ಇರಬೇಕಾದ ಅವಶ್ಯಕ ಗುಣವು. ಸಂಸಾರ ಸಾಗರದ ನೌಕೆಯಲ್ಲಿ ಜಯಶೀಲರಾಗಲು ಬುದ್ಧಿಯು ಕೆಲಮಟ್ಟಿಗೆ ಸಹಾಯ ಮಾಡಬಹುದು. ಆದರೆ ಶ್ರದ್ಧೆಯು ಬುದ್ಧಿಯ ಸೀಮೆಯನ್ನು ದಾಟಿ ನಿಲ್ಲುವದು. ಕಷ್ಟಗಳ ಕಗ್ಗತ್ತಲು ಕವಿದಾಗ ಬುದ್ಧಿಗೆ ಮಂಕು ಬಡಿದಾಗ ದೇವನಲ್ಲಿ ನಮ್ಮ ವಿಶ್ವಾಸವು ಅತ್ಯಂತ ಉಜ್ವಲವಾಗಿ ಪ್ರಕಾಶಿ ಸುವದು. ಇಂತಹ ಅಚಲ ವಿಶ್ವಾಸವೇ ನಮಗೆ ಬಂಧುವಾಗು ವದು. ಶ್ರದ್ಧೆ ನಮ್ಮಲ್ಲಿ ಮೂಡಬೇಕಾದರೆ ಬುದ್ಧಿಯ ಬಗೆಗಿರುವ

ಮದವು ನಿರ್ಮೂಲವಾಗಬೇಕು. ನಮ್ಮ ಜೀವನ ದೇವನ ಅಧೀನದಲ್ಲಿ ಇರುವದೆಂಬ ಭಾವನೆ ಬೇಕು. ಕೇವಲ ನಾವು ಕ್ಷಣಿಕ ಸುಖೋಪಭೋಗಗಳನ್ನು ಭೋಗಿಸಲು ಬಂದಿಲ್ಲ. ನಮ್ಮ ಕರ್ತವ್ಯಕರ್ಮದ ಧ್ಯೇಯವನ್ನು ಪೂರ್ಣಮಾಡಲು ಬಂದ ರಂಗಸ್ಥಳದ ಮೇಲಿನ ಪಾತ್ರಗಳಷ್ಟೇನಾವು. ಈಸಂಸಾರ ವೆಂಬುದು ಮಾಯೆಯ ರಂಗಭೂಮಿ ಅದರ ಮೇಲೆ ಕಾಲಕ್ಕನು ಸಾರವಾಗಿ ಪಾತ್ರಗಳನ್ನು ಬದಲಿಸಿ ನಾಟಕ ಮಾಡುವ ನಾವೆಲ್ಲ ಮಾನವರು, ನಮ್ಮ ಪಾತ್ರ ಮುಗಿದ ಮೇಲೆ ಅವನಡಿ ಯಲ್ಲಿಯೇ ಸೇರುವೆವು. "ಸಾಗರದಲ್ಲಿಯ ಶುಭ್ರ ಮುತ್ತು ಗಳನ್ನು ತೆಗೆಯಬೇಕೆಂಬ ಉದ್ದೇಶದಿಂದ ಸಾಗರಕ್ಕೆ ಬಂದು ಅಲ್ಲಿ ಮರಳಿನ ಮೇಲಿನ ಕೇವಲ ಸಿಂಪು ಶಂಖಗಳಿಗೆ ಮರು ಳಾಗಿ ಬಾಲಕರು ಅವುಗಳನ್ನು ಉಡಿಯಲ್ಲಿ ತುಂಬಿಕೊಳ್ಳು ವಂತೆ, ಮಾನವರು ಕೂಡಾ ಸಾಗರವೆಂಬ ಪ್ರಪಂಚದಲ್ಲಿ ಸತ್ಯ, ಅಹಿಂಸೆ, ಪರೋಪಕಾರ ಮೊದಲಾದ ದೇವನ ಪ್ರಾರ್ಥನೆಯ ಅಂಗಗಳನ್ನು ಹುಡುಕಲು ಬಂದು, ಸಿಂಪು ಶಂಖಗಳನ್ನು ತುಂಬುವಂತೆ ಸಂಸಾರದ ಆಡಂಬರ ವಸ್ತುಗಳಿಗೆ ಮರುಳಾಗಿ ತಮ್ಮ ಉದ್ದೇಶವನ್ನು ಮರೆಯುವರು" ಎಂದು ಶ್ರೀ ಪರಮ ಹಂಸರು ಒಂದೆಡೆಯಲ್ಲಿ ಹೇಳಿರುವರು.

ಪ್ರಾಥಮಿಕ, ಮಾಧ್ಯಮಿಕ ಶಾಲೆ ಕಾಲೇಜುಗಳಲ್ಲಿ ಮೊದಲು ಪ್ರಾರ್ಥನೆಯನ್ನು ಮಾಡಿ ತದನಂತರ ಮುಂದಿನ ಕಾರ್ಯಾರಂಭವು. ಈ ಪದ್ಧತಿಯು ಅನಾದಿಕಾಲದಿಂದಲೂ ಬಂದಿದೆ. "ಪ್ರಾರ್ಥನೆಯು ಆತ್ಮವನ್ನು ಪರಿಶುದ್ಧಗೊಳಿ ಸುವ ಪರಿಶುದ್ಧ ದಿವ್ಯಗಂಗೆ. ಅದ್ಭುತ ಶಕ್ತಿದಾಯಕ ಮಹೌ ಷಧಿ, ಹೇಡಿತನವನ್ನು ಜಯಿಸುವ ವಜ್ರಾಯುಧ, ದುಷ್ಟ ಭಾವನೆಗಳನ್ನು ಭಸ್ಮಮಾಡುವ ವಡವಾಗ್ನಿ" ಎಂದು ಬಾಪೂ ಜಿಯವರು ಪ್ರಾರ್ಥನೆಯ ಬಗ್ಗೆ ತಮ್ಮ ಅಭಿಪ್ರಾಯ ಹೇಳಿರು ವರು. ಸನಾತನ ಧರ್ಮಕ್ಕನುಸಾರವಾಗಿ ಪ್ರಾಚೀನ ಕಾಲದಲ್ಲಿ ಸ್ತ್ರೀಪುರುಷರು ಶುದ್ಧ ಮನಸ್ಸಿನಿಂದಪ್ರಾರ್ಥನೆಸಲ್ಲಿಸುತ್ತಲಿದ್ದರು. ಅವರ ಪ್ರಾರ್ಥನೆಯ ತಪಃಪ್ರಭಾವದಿಂದ ದೇಶವು ಸುಖ ಸಂಪತ್ತಿನಿಂದ ವಿರಾಜಿಸುತ್ತಿತ್ತು. ಆದರೆ ಇಂದು ಪ್ರಾರ್ಥ ನೆಯ ಸಲ್ಲು ಅಡಗಿ, ಭಾರತಾಂಬೆಯ ಸುಖಸಂಪತ್ತು ಇಲ್ಲ ದಾಗಿದೆ. ಪೂರ್ವಜರು ಮಾತಿಗಿಂತ ಮಾನ ಪ್ರಾರ್ಥನೆಯೇ ಮಿಗಿಲಾದದ್ದು' ಎಂಬ ತತ್ವವನ್ನು ಅನುಸರಿಸಿದರು. ಆಧು ನಿಕ ಕಾಲದ ಬಣ್ಣದ ವಸ್ತುಗಳಿಗೆ ಮರುಳಾದ ಜನಕ್ಕೆ ಪ್ರಾರ್ಥ ನೆಯ ಅವಶ್ಯಕತೆ ಇಲ್ಲ. ಅಂತಲೇ ಕನ್ನಡ ರಾಜೇಶ್ವರಿಯು ತನ್ನ ಸಂಪತ್ತನ್ನು ಕಳೆದುಕೊಂಡು ಕೊರಗತೊಡಗಿದ್ದಾಳೆ. ಹರಿದು ಹಂಚಿಹೋದ ಚಲುವ ಸುಖಸಂಪನ್ನ ಕರಿನಾಡು ವಿದ್ಯಾರಣ್ಯರ ಕಾಲದಂತೆ ಸುವರ್ಣ ವೃಷ್ಟಿಗರೆಯಲು ಶುದ್ಧ ಮನಸ್ಸಿನಿಂದ ಒಂದು ನಿಮಿಷವಾದರೂ ತನ್ನ ನಾಡಿನ ಬಗ್ಗೆ ಪ್ರಾರ್ಥನೆಯನ್ನು ಸಲ್ಲಿಸಬೇಕು. ಪ್ರಾರ್ಥನೆಯು ಆಲಸ್ಯದ ಪೂರ್ವ ಪೀಠಿಕೆಯಲ್ಲ. ಆದರೆ ನಿಸ್ವಾರ್ಥ ಸೇವೆಯಲ್ಲಿ ನಮ್ಮನ್ನು ನೂಕುವ ಪ್ರಚೋದನ ಶಕ್ತಿ, ಕತ್ತಲದ ಮಾರ್ಗದಲ್ಲಿ ನಿಚ್ಚಳ ಬೆಳಕನ್ನು ಕೊಡುವ ಅದ್ಭುತ ಜ್ಯೋತಿ. ಹೃದಯ ನೈರ್ಮ ಲ್ಯವೇ ಪ್ರಾರ್ಥನೆಯ ಗುರಿ, ಆದುದರಿಂದ ನಮ್ಮ ದಿನಚರಿ ಯನ್ನು ಪ್ರಾರ್ಥನೆಯಿಂದಲೇ ಆರಂಭಿಸಿ, ಅದರಿಂದಲೇ ಮುಕ್ತಾಯಗೊಳಿಸಬೇಕು. ನಮ್ಮ ಪ್ರಾತಃಸ್ಮರಣೆಯ ಪ್ರಭಾ ವವು ಸಂಜೆಯವರೆಗೆ ನಮ್ಮನ್ನು ತಪ್ಪು ಹೆಜ್ಜೆಯಿಂದ, ಅಜ್ಞಾನ ಮಾರ್ಗದಿಂದ ಕಾಪಾಡುವಂತಾಗಬೇಕು. ಸಾಯಂ ಪ್ರಾರ್ಥ ನೆಯು ಸ್ವಪ್ನ ದುಃಸ್ವಪ್ನಗಳ ಬಾಧೆಯಿಲ್ಲದೆ ಶಾಂತನಿದ್ರೆಯನ್ನು ದಯಪಾಲಿಸುವಂತಾಗಲೆಂದು ಆದಿ ಮೂರುತಿಗೆ ನಮಿಸಿ ನನ್ನ ಪ್ರಥಮ ಲೇಖನ 'ಪ್ರಾರ್ಥನೆ' ಮುಗಿಸುವೆನು.

ಓಂ ಶಾಂತಿ ! ಶಾಂತಿ !! ಶಾಂತಿಃ !!!

---

### ಸ್ವಾಮಿ ರಾಮತೀರ್ಥರು ಹೇಳುವದೇನೆಂದರೆ:—

೧) ನಮ್ಮ ವೇದಗಳನ್ನು ಯಾರೂ ಬರೆಯಲಿಲ್ಲ. ಸೂರ್ಯನಿಂದ ಪ್ರಕಾಶದ ಕಿರಣಗಳು ಹೇಗೆ ಹೊರಡುತ್ತ ವೆಯೋ, ಪುಷ್ಪದಿಂದ ಸುಗಂಧವು ಹೇಗೆ ಸುತ್ತಲೂ ವ್ಯಾಪಿಸು ತ್ತದೆಯೋ, ಹಾಗೆಯೇ ಋಷಿಗಳು ಆತ್ಮಾನುಭವದಲ್ಲಿ ಲೀನ ರಾಗಿದಾಗ ಅವರ ಅಂತಃಕರಣದಿಂದ ವೇದವು ತನ್ನಿಂದತಾನೇ ಪ್ರಕಟವಾಯಿತು. ಆದುದರಿಂದಲೇ ಓಂಕಾರವೆಂಬ ಬೀಜ ದಿಂದ ವೇದವೆಂಬ ವೃಕ್ಷವುಂಟಾಯಿತು.

೨) ಆತ್ಮ ಸಾಕ್ಷಾತ್ಕಾರವನ್ನು ಹೊಂದುವ ನಿಮ್ಮ ಸತ್ಯ ಮಾರ್ಗಕ್ಕೆ ನಿಮ್ಮ ತಂದೆಯು ವಿರೋಧ ಮಾಡಿದರೆ ಪ್ರಲ್ಹಾದ ನಂತೆಯೂ, ತಾಯಿ ಪ್ರತಿಬಂಧ ಪಡಿಸಿದರೆ ಭರತನಂತೆಯೂ, ಸಹೋದರರು ವಿರೋಧಿಸಿದರೆ ವಿಭೀಷಣನಂತೆಯೂ, ಪತಿಯು ವಿಘ್ನಕಾರಿಯಾದರೆ ಮೀರಾದೇವಿಯಂತೆಯೂ, ಗುರುಗಳು ದುರುಪದೇಶಮಾಡಲುಪಕ್ರಮಿಸಿದರೆ ಭೀಷ್ಮನಂತೆಯೂ ಅದರ ಉಪದೇಶವನ್ನು ನಿರಾಕರಿಸಿರಿ. ಏಕೆಂದರೆ, ಸತ್ಯವೂ ಆತ್ಮ ಪ್ರಕಾ ಶವೂ ಮಾತಾಪಿತೃಗಳಿಗಿಂತಲೂ, ಗುರುಹಿರಿಯರಿಗಿಂತಲೂ ಶ್ರೇಷ್ಠ ವಾದುದಾಗಿದೆ.

೩) ಪತಿ ಪತ್ನಿಯರು ಆ ತಮ್ಮ ಜಡದೇಹವನ್ನೇ ಪ್ರೀತಿಸುತ್ತಿದ್ದಾರೆ ವಿನಾ ಅದರಲ್ಲಿರುವ ಆತ್ಮವನ್ನು ಪ್ರೀತಿಸುವದಿಲ್ಲ. ಅದರಿಂದಲೇ ಜಡದೇಹಿಯಾದ ಒಂದು ವ್ಯಕ್ತಿಯು ಕಾಲವಶವಾದರೆ (ಸತ್ತರೆ) ವೃಥಾ ಮನಃಕ್ಷೋಭೆಗೆ ಒಳಗಾಗುತ್ತಾರೆ.

೪) ಯಾವ ಅಪೇಕ್ಷೆಯನ್ನೂ ಮಾಡದಿರುವದೇ ಎಲ್ಲ ಅಪೇಕ್ಷೆಗಳನ್ನು ಪೂರೈಸಿಕೊಳ್ಳುವ ನಿಜವಾದ ಮಾರ್ಗವು. ನಿಮಗೆ ಏನೇನು ಬೇಕೆಂಬುದನ್ನು ಪರಮಾತ್ಮನು ಬಲ್ಲನು.

೫) ಈ ದೇಹದಿಂದ ಜೀವವು ಹೋದ ನಂತರ ದೇಹವು ಹಳದಿ ಬಣ್ಣವನ್ನು ಹೊಂದುತ್ತದೆಯಷ್ಟೇ? ಆದುದರಿಂದಲೇ ಬೌದ್ಧ ಸನ್ಯಾಸಿಗಳು ದೇಹ ಭಾವನೆಯು ಮೃತಪಟ್ಟಿತೆಂಬುದನ್ನು ಸೂಚಿಸುವದಕ್ಕಾಗಿ ಹಳದಿ ವಸ್ತ್ರವನ್ನು ಧರಿಸುತ್ತಾರೆ.

೬) "ನೀನು ನನ್ನನ್ನು ಪ್ರೀತಿಸು" ಎಂಬುದಾಗಿ ಒಬ್ಬನಿಗೆ ಅಪ್ಪಣೆ ಮಾಡಿದರೆ, ಆತನು ಪ್ರೀತಿಸುವದಕ್ಕೆ ಪ್ರತಿಯಾಗಿ ನಮ್ಮನ್ನು ತಿರಸ್ಕರಿಸುತ್ತಾನೆ. ಪ್ರೇಮವು ಆಜ್ಞೆಯನ್ನು ಮಾಡಿ ಸಂಪಾದಿಸತಕ್ಕ ಪದಾರ್ಥವಲ್ಲ. ಅದು ಕೇವಲ ತನ್ನ ಸದ್ಗುಣಗಳಿಂದ ದೊರೆಯುವದು.

೭) ಯಾವುದು ನಿಮಗೆ ಪಾಪಕೃತ್ಯವೆಂದು ತಿಳಿಯುವದೋ ಅದನ್ನು ನೀವು ಮಾಡಬೇಡಿರಿ. ಪಾಪವನ್ನು ದ್ವೇಷಿಸಿರಿ, ಆದರೆ ಪಾಪಿಯನ್ನು ಮಾತ್ರ ದ್ವೇಷಿಸಬೇಡಿರಿ.

೮) ಅನ್ಯರು ಮಾಡುವ ಸ್ತುತಿ, ನಿಂದೆಗಳ ಪರಿಣಾಮವನ್ನು ತನ್ನ ಮನಸ್ಸಿನ ಮೇಲೆ ಪರಿಣಾಮ ಮಾಡಿಕೊಳ್ಳುವಷ್ಟು ಆತ್ಮಘಾತಕವಾದ ಕಾರ್ಯವು ಬೇರೊಂದಿಲ್ಲವು.

೯) ಹಿತೋಕ್ತಿಗಳಿಂದ ಒಂದು ವಿಷಯವು ನಿಮ್ಮ ಮೆದುಳಿನಲ್ಲಿ ಹೋಗದಿದ್ದರೆ ಆಗ ನೀವು ನಿಮ್ಮ ಕೆನ್ನೆಯ ಮೇಲೆ ಹೊಡೆದು ಬುದ್ಧಿ ಕಲಿಸಿರಿ.

೧೦) ಯಾರು ಎಷ್ಟು ಪದಾರ್ಥಗಳನ್ನು ಅನ್ಯರಿಗೆ (ಕೊಡುತ್ತಾರೊ) ದಾನಮಾಡುತ್ತಾರೊ ಅವರು ಅಷ್ಟು ಹೆಚ್ಚು ಧನಿಕರಾಗುತ್ತಾರೆ. ತ್ಯಾಗದಿಂದಲೇ ಧನಿಕತ್ವವನ್ನು ತೂಗಬೇಕು.

೧೧) ಇದು ನನ್ನದು, ಅದು ನನ್ನದು, ಎಂದು ಯಾವಾಗಲೂ ಮಮಕಾರದಲ್ಲಿ ಮಗ್ನನಾಗಿರುವವನೇ ನಿಜವಾದ ದರಿದ್ರನು. ಅವನೇ ನಿಜವಾದ ಶೂದ್ರನು. ಅವನೇ ಕತ್ತಲೆ ಕೋಣೆಯಲ್ಲಿರುವ ಕರಿಯಾಳು.

೧೨) ನೀವು ಒಬ್ಬ ರಾಜನ ದರ್ಶನಕ್ಕೆ ಹೋಗಬೇಕಾದರೆ ಹೇಗೆ ಉತ್ತಮೋತ್ತಮ ವಸ್ತ್ರಗಳನ್ನು ಧರಿಸುತ್ತೀರೋ, ಹಾಗೆಯೇ ಪರಮಾತ್ಮನ ದರ್ಶನವು ನಿಮಗಾಗಬೇಕಾದರೆ ನೀವು ನಿರಿಚ್ಛೆಯೆಂಬ ಶ್ರೇಷ್ಠತರವಾದ ಉಡುಪನ್ನು ಧರಿಸಲೇಬೇಕು.

—ಕು. ಪದ್ಮಾವತಿ. ಶಿ. ಕುಲಕರ್ಣಿ
ಗದಗ

---

# ಕರ್ನಾಟಕ ಪ್ರಾಂತೀಯ
# ಮಹಿಳಾ ಪರಿಷತ್ತು
## ಹೆಜಮಾಡಿ-ಕೋಡಿ, ಮುಲ್ಕಿ

ಶ್ರೀಮತಿ ಸರೋಜಿನಿ ಮಹಿಷಿ, ಎಂ. ಎ, ಎಲ್‌ಎಲ್. ಬಿ.

## ಅಧ್ಯಕ್ಷೀಯ ಭಾಷಣ

೨೫ ಅಕ್ಟೋಬರ, ೧೯೫೫

[ ೧೯೫೫ ನೇ ಡಿಶಂಬರ ಸಂಚಿಕೆಯಿಂದ ಮುಂದುವರಿದದ್ದು ]

ಗೋಡೆಗೆ ಹಚ್ಚಬಹುದು. ಅಂದಿನದು ನೀತಿ, ಇಂದಿನದು ಅನೀತಿಯೇ ? ಅಂದಿನ ಹುಡಿಗೆ ಶಾಲೆಯ ಕಟ್ಟೆಯನ್ನೇ ಹತ್ತಿರಲಿಲ್ಲ, ಇಂದಿನವಳು ಶಾಲೆಯಲ್ಲಿ ಕಲಿಸುತ್ತಿದ್ದಾಳೆ ! ವ್ಯತ್ಯಾಸ ಹೊಂದುತ್ತಿರುವ ಬೆಲೆಗಳನ್ನು ನಾವು ಮೈಗೂಡಿಸಿಕೊಳ್ಳಲು ಕಲಿಯಬೇಕು. ದುಡಿಯುವ ಮಹಿಳೆಯ ಬಗ್ಗೆ ನಮ್ಮ ಜನ ಇನ್ನೂ ಕರುಣೆಬಡುತ್ತಾರೆ. ‘ ಪಾಪ ! ದುಡಿದು ಹಾಕುವವರರು ಯಾರೂ ಇಲ್ಲವೇನೋ !’ ಎಂದು ಮರುಕತೋರುತ್ತಾರೆ. ಹೀಗೆ ಮರುಕ ತೋರುವವರು ಸಮಾಜದ ದೃಷ್ಟಿಯಲ್ಲಿ ಅಜ್ಞರು ! ಮುಂದುವರಿದವರು “ಅವಳು ಪುರುಷನ ಜೊತೆಗೆ ಸ್ಪರ್ಧಿಸುತ್ತಾಳೆ” ಎಂದು ಅರ್ಥ ಮಾಡುತ್ತಾರೆ. ಎಲ್ಲರೂ ಸ್ಪರ್ಧೆಯಿಂದ ದುಡಿದರೆ ಎಷ್ಟು ಒಳ್ಳೆಯದಾದೀತು ! ಆದರೆ ಇಲ್ಲಿ ಮಾತ್ರ ಸ್ಪರ್ಧೆ ಅಲ್ಲ, ಪರಸ್ಪರರು ಪೂರಕವಾಗಿ ದುಡಿಯುತ್ತಿದ್ದಾರೆಯೆಂದು ತಿಳಿಯುವದು ಅವಶ್ಯ ! ಮಹಿಳೆ ತಾನು ಸ್ಪರ್ಧಿಸುತ್ತಿದ್ದಾಳೆ ಎಂದು ತಿಳಿದಿದ್ದರೆ ಅದೂ ತಪ್ಪು ! ಇದು ಅನೇಕ ಸಲ ನಮ್ಮ ಸಮಾಜದಲ್ಲಿ ಅರ್ಥವಾಗುತ್ತಿಲ್ಲ. ಸ್ಪರ್ಧೆಯಲ್ಲ ಅನ್ನುವದಕ್ಕೆ ನಮ್ಮ ಸಮಾಜವೇ ಕೊಡುವ ವಿವರಣೆಯನ್ನೂ ಬೇಕಿದ್ದರೆ ನೋಡಬಹುದು. ಒಬ್ಬ ಮಹಿಳೆ ಹಾಗೂ ಒಬ್ಬ ಪುರುಷ ಇವರಿಬ್ಬರಲ್ಲಿ ಯಾವುದೇ ಒಂದು ಕೆಲಸದಲ್ಲಿ ಸ್ಪರ್ಧೆ ನಡೆದಾಗ ಪುರುಷನು ಸೋತರೆ, “ಆ ಮಹಿಳೆಯ ಕೈಯಲ್ಲಿಯೂ ಸೋತ,” ಎನ್ನುತ್ತಾರೆ; ಗೆದ್ದರೆ, “ಏನು ಮಹಾ ಮಹಿಳೆಯ ಜೊತೆ ಸ್ಪರ್ಧಿಸಿ ಗೆದ್ದನಂತೆ,” ಅನ್ನುತ್ತಾರೆ. ಯಾವ ರೀತಿಯಲ್ಲೂ ಪುರುಷನಿಗೆ ಶ್ರೇಯಸ್ಸಿಲ್ಲ !

ಮಧ್ಯಮ ವರ್ಗದ ಮಹಿಳೆ ತಾನು ಅನಿವಾರ್ಯವಾಗಿ ದುಡಿಯುತ್ತಿದ್ದೇನೆ, ಎಂಬ ಭಾವನೆಯಿಂದ ದುಡಿಯುತ್ತಾಳೆ. ಒಳ್ಳೇ ಕಾಲ ಬಂದರೆ ಹೊರಗಿನ ದುಡಿಮೆಯನ್ನು ಬಿಡುತ್ತಾಳೆ. ಇಷ್ಟೇ ಅಲ್ಲ, ಮನೆಯೊಳಗಿನ ದುಡಿಮೆಯನ್ನೂ ಬಿಟ್ಟುಕೊಡುವ ಸಿದ್ಧತೆಯಲ್ಲಿರುತ್ತಾಳೆ. ಮಧ್ಯಮ ವರ್ಗದ ಮಹಿಳೆ ಮದುವೆಯಾದರೆ, ತನ್ನ ಭಾರವನ್ನು ಹೊರಲು ಒಬ್ಬರು ಸಿಕ್ಕರಲ್ಲ ಎಂದು ಸಮಾಧಾನ ಪಡುತ್ತಾಳೆ. ಕೂಲಿಕಾರ ವರ್ಗದ ಮಹಿಳೆ ಮದುವೆಯಾದರೆ, ದುಡಿಯಲು ಒಂದು ಆಳು ಸಿಕ್ಕಿತು ಎಂದು ಮದುವೆಯಾದವನು ಸಂತಸಪಡುತ್ತಾನೆ. ಮದುವೆಯಾದರೆ ತನ್ನ ದುಡುಮೆ ತಪ್ಪಿತು ಎಂದು ಆ ಸ್ತ್ರೀಯೂ ತಿಳಿದಿರುವದಿಲ್ಲ. ಸಮಾಜದ ಬೆನ್ನೆಲುವಾದ ಮಧ್ಯಮವರ್ಗದಿಂದ ಈ ತರದ ಭಾವನೆಗಳು ತೊಲಗಿ ಹೋಗುವದು ಅತ್ಯಾವಶ್ಯಕವಾಗಿದೆ.

ದುಡಿಮೆಯ ಬಗ್ಗೆ ಗೌರವವನ್ನು ತಂದೆ-ತಾಯಿಗಳು ಉತ್ಪನ್ನ ಮಾಡಿದರೆ ಮಕ್ಕಳಲ್ಲಿ ಅಂತಹ ಒಲವು ಹುಟ್ಟೀತು. ಸುಶಿಕ್ಷಿತಳಾದ ತಾಯಿ ಮನೆಯಲ್ಲಿದ್ದರೆ ಒಂದು ಕುಟುಂಬ ವಿದ್ಯೆಕಲಿಯುತ್ತದೆ ಎಂದು ಹೇಳುವ ಮಾತು ನಿಜ, ಆದರೆ ಆ ಸುಶಿಕ್ಷಿತೆ ಇದರ ಅರ್ಥವನ್ನು ತಿಳಿದು ಆಚರಿಸಿದಾಗ ಮಾತ್ರ ! ಇಲ್ಲದಿದ್ದರೆ ಪುರುಷನಿಗೆ ಶಿಕ್ಷಣಕೊಟ್ಟರೆ, ವ್ಯಕ್ತಿಗೆ ಕೊಟ್ಟಂತೆ ಎಂಬ ಮಾತು ಅವಳಿಗೂ ಅನ್ವಯಿಸೀತು ! ಅಂದು ನಮ್ಮಜ್ಜ ಒಳ್ಳೆಯ ಮಾವಿನ ಸಸಿ ನೆಟ್ಟಿದ್ದರೆ, ಅದರ ಫಲ ಇವತ್ತು ನಮಗೆ ದೊರೆಯುತ್ತದೆ. ಹಾಗೆ ಒಳ್ಳೆ ಪೀಳಿಗೆಯ ಜನ ನಿರ್ಮಾಣವಾಗಬೇಕಾದರೆ ಈಗಿನಿಂದಲೇ ಒಳ್ಳೇ ಗುಣಗಳನ್ನು ಮೈಗೂಡಿಸಿಕೊಳ್ಳುವಂತೆ ಎಚ್ಚರಿಕೆಯಿಂದಿರುವದು ಒಳ್ಳೆಯದು.

ನಮ್ಮ ದೇಶದಲ್ಲಿ ಸಾಕ್ಷರರ ಸಂಖ್ಯೆ ನೂರಕ್ಕೆ ಹನ್ನೆರಡರಷ್ಟು ಇದೆ. ಹೆಣ್ಣುಮಕ್ಕಳಲ್ಲಿ ಈ ಸಂಖ್ಯೆ ಇನ್ನೂ ಕಡಿಮೆಯಿದೆ. ಈ ಸಂಖ್ಯೆಯಲ್ಲಿ ಉಚ್ಚ ಶಿಕ್ಷಣ ಪಡೆದವರೂ

ಬಂದರು, ಸಹಿಮಾಡಲು ಬಲ್ಲವರೂ ಬಂದರು. ಭಾರತದ ಒಂದೊಂದು ಪ್ರಾಂತಗಳನ್ನೇ ತೆಗೆದುಕೊಂಡರೆ, ಮುಂದುವರಿದ ಪ್ರಾಂತಗಳಲ್ಲಿ ಇನ್ನೂ ಸ್ವಲ್ಪ ಹೆಚ್ಚು ಕಡಿಮೆ ಆದೀತು! ಗ್ರಾಮಾಂತರ ಪ್ರದೇಶಗಳಲ್ಲಿ ವಾಸಿಸುವವರಲ್ಲಿ ಈ ಪ್ರಮಾಣ ಬಹಳ ಕಡಿಮೆ. ಹಿಂದಿನ ಪೀಳಿಗೆಯಂತೂ ಸರಿ. ಇಂದಿನ ಪೀಳಿಗೆಯೂ ನಿರಕ್ಷರಿ ಹಳ್ಳಿಯಲ್ಲಿ ಶಾಲೆಯಿದ್ದರೂ ಮಕ್ಕಳು ಅದರ ಲಾಭ ತೆಗೆದುಕೊಳ್ಳುವದಿಲ್ಲ. ಹೀಗೆಯೇ ಒಂದು ಸಲ ಪ್ರಯೋಗ ಮಾಡಿದೆವು. ೧೪ ವರ್ಷದೊಳಗಿನ ಮಕ್ಕಳನ್ನು ಯಾರು ಶಾಲೆಗೆ ಕಳಿಸುವದಿಲ್ಲವೋ ಅವರಿಗೆ ಎರಡುರೂಪಾಯಿ ದಂಡ ಎಂದು! ಒಬ್ಬಿಬ್ಬರು ಪಾಲಕರು ಎರಡು ರೂಪಾಯಿ ತೆಗೆದುಕೊಂಡೇ ಬಂದು ಬಿಟ್ಟರು. ಒಂದು ಸಲ ಎರಡು ರೂಪಾಯಿ ಕೊಟ್ಟರೆ ಇವರ ಪೀಡೆಯಾದರೂ ತಪ್ಪೀತು ಎಂದರೇನೊ! "ಮಕ್ಕಳನ್ನು ಶಾಲೆಗೆ ಕಳಿಸಿಕೊಡಿರಿ ಅವ್ವಾ," ಎಂದು ಕೇಳಿದರೆ ಅವ್ವ ನಮ್ಮನ್ನೇ ಒಂದು ಪ್ರಶ್ನೆ ಕೇಳುತ್ತಾಳೆ. "ಶಾಲೆ ಕಲಿತರೇ ಬಾಳ್ವೆ ಮಾಡುವದಕ್ಕೆ ಬರುತ್ತದೆಯೇ? ನಾವೆಲ್ಲ ಶಾಲೆಯನ್ನೇ ಕಲಿತಿದ್ದೇವೆಯೇ?—ಎಂದು ಒಳ್ಳೇ ರೀತಿಯಾಗಿ ಜೀವನ ಸಾಗಿಸಲು ಜ್ಞಾನಬೇಕು ಎಂಬುದು ಅವರಿಗಿನ್ನೂ ಮನವರಿಕೆಯಾಗಿಲ್ಲ. ಮನೆ ಸ್ವಚ್ಛವಾಗಿರಬೇಕು, ನಮ್ಮ ಹಳ್ಳಿ ಸ್ವಚ್ಛವಾಗಿರಬೇಕು, ನಾವು ಕುಡಿಯುವ ನೀರು ಒಳ್ಳೆಯದಾಗಿರಬೇಕು ಎಂಬ ಆರೋಗ್ಯದ ಸಾಮಾನ್ಯ ಮಾತುಗಳೂ ಅವರಿಗೆ ಮನವರಿಕೆಯಾಗವು. ಒಬ್ಬರ ಮನೆಯ ಕಸ ಹೇಗೆ ಹೋಯಿತು ಎಂದರೆ ಅದು ಇನ್ನೊಬ್ಬರ ಮನೆಯ ಮುಂದೆಯೇ ಬೀಳಬೇಕೇ? ಸಾರ್ವಜನಿಕ ಆರೋಗ್ಯ ಬಹು ಮುಖ್ಯವಾದದ್ದು. ಒಂದು ಮನೆಯಲ್ಲಿ ಪಿಡುಗಿನಬೇನೆ ಬಂದರೆ, ಆ ಮನೆಯ ಮಟ್ಟಿಗೇ ಅದು ಉಳಿಯುವದಿಲ್ಲ ಹಳ್ಳಿಯನ್ನೇ ವ್ಯಾಪಿಸಿ, ಸುತ್ತುಮುತ್ತಲಿನ ಹಳ್ಳಿಗಳಲ್ಲಿಯೂ ಕೈ ಚಾಚುತ್ತವೆ. ಅಂದ ಮೇಲೆ ನಮ್ಮ ಮನೆಯ ಮಟ್ಟಿಗೆ ನಾವಿದ್ದರಾಯಿತು. ಎಂದು ಯಾವ ಸ್ತ್ರೀಯೂ ಇಂದು ಅಲಕ್ಷ್ಯ ಮಾಡುವಂತಿಲ್ಲ.

ವಿಚಾರ ಮಾಡುವ ಶಕ್ತಿಯನ್ನು ನಮ್ಮ ಮಹಿಳೆಯರು ಬೆಳೆಸಿಕೊಂಡಿಲ್ಲ. ಹೆಂಗಸು ಅನ್ನುವ ಒಂದೇ ಕಾರಣದಿಂದ ತನಗೆ ತಿಳಿಯುವದಿಲ್ಲವೆಂದು ಹೇಳಲು ಅಧಿಕಾರವಿದೆ ಎಂದು ಅವಳು ತಿಳಿದಿದ್ದಾಳೆ. "ಹೆಂಗಸು, ನನಗೇನು ತಿಳಿಯುತ್ತದೆ?" ಎಂದಂದು ಅವಳು ಪಾರಾಗಬಹುದು. ಸಮಾಜವು ಅದನ್ನು ಒಪ್ಪುತ್ತದೆ. ಇದರಿಂದ ನಾವು ಪಾರಾದೆವೆಂದು ತಿಳಿದರೂ, ನಾವೇ ಆಹುತಿಯಾಗಿರುವ ಕೆಲವೊಂದು ದುಷ್ಟ ಸಂಪ್ರದಾಯ ಪರಂಪರೆಗಳಿಂದ ನಾವು ಹೊರ ಬರುವುದು ಅವಶ್ಯವಿದೆ; ಅದಕ್ಕೆ ವಿಚಾರಶಕ್ತಿಯು ಬೆಳವಣಿಗೆಯಾಗಬೇಕು. ಮಗುವಿಗೆ ನೈಯಲ್ಲಿಸರಿಯಿಲ್ಲದಾಗ ದೇವರು ಕಾಡುತ್ತಿದ್ದಾನೆ ಎಂಬುದು ಅವಳ ತಲೆಯಲ್ಲಿ ಹೊಕ್ಕರೆ ಯಾವ ದೇವರಿಗೂ ಅದನ್ನು ಬಿಡಿಸಲು ಸಾಧ್ಯವಿಲ್ಲ!

ಇಂತಹ ಮಹಿಳೆಯರಿಗೆ ಒಳ್ಳೇ ರೀತಿಯಲ್ಲಿ ಬದುಕಲು ಅವಕಾಶವನ್ನು ಕಲ್ಪಿಸಿಕೊಡುವ ಉದ್ದೇಶದಿಂದ ರಾಷ್ಟ್ರದಲ್ಲಿ ಅಖಿಲ ಭಾರತ ಮಹಿಳಾ ಪರಿಷತ್ತು, ಕಸ್ತೂರಬಾ ಗಾಂಧಿ ಸ್ಮಾರಕ ನಿಧಿ ಸಂಸ್ಥೆಗಳು, ಸಮಾಜ ಕಲ್ಯಾಣ ಕೇಂದ್ರಗಳು ರಾಷ್ಟ್ರದಾದ್ಯಂತವೂ ಪ್ರಯತ್ನ ಮಾಡುತ್ತಿವೆ. ಪದವೀಧರ ಮಹಿಳೆಯರ ಸಂಘಟನೆಯೂ ಇನ್ನೊಂದು ದೃಷ್ಟಿಯಲ್ಲಿ ಮಹಿಳೆಯರ ಶಕ್ತಿಯ ವಿಕಾಸಕ್ಕೆ ಹೆಣಗುತ್ತಿದೆ. ಮಹಿಳೆಯ ಸಾಮಾಜಿಕ, ಆರ್ಥಿಕ ತೊಂದರೆಗಳನ್ನು ದೂರ ಮಾಡಲು ಈ ಸಂಸ್ಥೆಗಳು ಯತ್ನಿಸುತ್ತಿವೆ. ಜೊತೆಗೆ ಸಾಂಸ್ಕೃತಿಕ, ಶೈಕ್ಷಣಿಕ ಮೌಲ್ಯಗಳನ್ನು ಅವರಿಗೆ ತಿಳಿಸಿಕೊಡಲು ದುಡಿಯುತ್ತಿವೆ. ಆದರೆ ಸಾಮಾನ್ಯ ಮಹಿಳೆಗೆ ಕೂಲಿ ಮಾಡಿ ಜೀವನ ಸಾಗಿಸುವ ಮಹಿಳೆಗೆ–ತಾಳ್ಮೆಯಿಲ್ಲ. ಶಾಲೆ ಕಲಿಯುವದರಿಂದ ಕೂಡಲೆ ನನ್ನ ಕೈಗೆ ಏನು ಬರುತ್ತದೆ? ಎಂದವಳು ಕೇಳುತ್ತಾಳೆ. ದುಡಿದು ಅದರ ಫಲಕ್ಕಾಗಿ ನಿಲ್ಲುವ ಶಕ್ತಿ ಅವಳಲ್ಲಿಲ್ಲ; ಆದರೆ ಸಾಮೂಹಿಕ ಲಾಭಗಳ ಅರಿವು ಮಾತ್ರ ಅವಳಿಗೀಗ ಆಗುತ್ತಿದೆ. ಗಿರಣಿಯ ಕೂಲಿ ಕೆಲಸಕ್ಕೆ ಹೋಗುವ ಹೆಣ್ಣುಮಗಳು ತನ್ನ ಮಗುವನ್ನು, ತಾನು ಬರುವವರೆಗೆ ಒಳ್ಳೇ ರೀತಿಯಲ್ಲಿ ನೋಡಿಕೊಳ್ಳುವ ಶಿಶುವಿಹಾರದಲ್ಲಿ ಇಟ್ಟು ಹೋಗಲು ಸಂಕೋಚಪಡುವದಿಲ್ಲ. ಕೊಳಚೆ ಪ್ರದೇಶಗಳ ನಿರ್ಮೂಲನೆಗಾಗಿ, ಸರಕಾರವು ಹೊಸವಸತಿ ನಿರ್ಮಾಣಕ್ಕೆ ದುಡ್ಡು ಕೊಟ್ಟರೆ, ಅವರಿಗೆ ಸಮ್ಮತ, ಆದರೆ ಈ ಲಾಭಗಳ ಹಿಂದೆ ತಮ್ಮ ಕರ್ತವ್ಯವೂ ಅಡಗಿರುತ್ತದೆಂಬ ಕಲ್ಪನೆ ಮಾತ್ರ ಅವರಲ್ಲಿ ಮೂಡಿಬರದು.

ಶತಮಾನದ ವರೆಗೆ ಜನರನ್ನು ಅಜ್ಞಾನ, ದಾರಿದ್ರ್ಯದಲ್ಲಿ ಅಲಕ್ಷತನದಿಂದ ಇಟ್ಟದ್ದರ ಪರಿಣಾಮವಿರಬೇಕು. ಯಾರಾದರೂ ನಮಗೆ ಒಳ್ಳೆಯದನ್ನು ಮಾಡುತ್ತಾರೆಂದೂ ಜನರಿಗೆ ಸಂಶಯ ಬರುತ್ತದೆ. ಹಳ್ಳಿಗಳಿಗೆ ಹೋಗಿ 'ನಿಮ್ಮ ಮಕ್ಕಳಿಗಾಗಿ ಪುಕ್ಕಟೆ ಹಾಲು ಹಂಚುತ್ತೇವೆ;' ಎಂದು ಹೇಳಿದಾಗ ಅವರಿಗೆ ಸಂಶಯ. ಮಕ್ಕಳಿಗೆ ವಿಷಹಾಕಿದ ಕಥೆ, ಅವರನ್ನು ಹೊತ್ತುಕೊಂಡು ಹೋದ ಕಥೆ ಇವೆಲ್ಲ ಅವರಿಗೆ ನೆನಪಾಗುತ್ತವೆ. ರಾಷ್ಟ್ರದಲ್ಲಿ ಇಷ್ಟೊಂದು ಕಲ್ಯಾಣ ಯೋಜನೆ

ಗಳು ತಮಗೋಸ್ಕರ ಇವೆಯೆಂಬಲ್ಲಿ ಅವರಿಗೆ ವಿಶ್ವಾಸವುಂಟಾಗಬೇಕು. ಸುಶಿಕ್ಷಿತ ಮಹಿಳೆಯರು, ಈ ದಿಕ್ಕಿನಲ್ಲಿ ಬಹಳಷ್ಟು ಕಾರ್ಯ ಮಾಡಬಲ್ಲರು. ಮನುಷ್ಯನು ಜನ್ಮತಾಳಿ ಬಂದಾಗ ಅವನಿಗೆ ಮೂರು ಬಗೆಯ ಋಣಗಳಿರುತ್ತವೆಯೆಂದು ಹಿಂದೂ ಧರ್ಮಶಾಸ್ತ್ರ ಹೇಳುತ್ತದೆ. ನಮಗೆ ಹಲವಾರು ವಿಧಗಳಲ್ಲಿ ಶಕ್ತಿಯನ್ನು ಕೊಟ್ಟ ಸಮಾಜಕ್ಕೂ ನಾವು ಸೇವೆಸಲ್ಲಿಸಬೇಕಾದ್ದು ನಾಲ್ಕನೆಯ ಋಣ! ಎಂದು ನಾನು ನಂಬುತ್ತೇನೆ! ತಲೆ-ತಲಾಂತರಗಳಿಂದ ಅವರನ್ನು ಅಜ್ಞಾನದಲ್ಲಿಟ್ಟು, ಶಿಕ್ಷಣದ, ಮನಸ್ಸಿನ ಬೆಳವಣಿಗೆಯ ಯಾವುದೇ ಸೌಕರ್ಯವನ್ನು ಒದಗಿಸದೇ ಹೋದುದಕ್ಕಾಗಿ, ಇಂದು ಸುಶಿಕ್ಷಿತರೆನ್ನುವವರು ತೀರಿಸಬೇಕಾದ ಈ ಋಣದ ಭಾರ ಹೆಚ್ಚಿದೆ.

ಹುಟ್ಟಿದ ಮಕ್ಕಳ ಮಹಾಸಂಖ್ಯೆ, ಬಾಲವಿವಾಹ.ತನ್ಮೂಲಕ ಸಮಾಜದಲ್ಲಿ ಹೆಚ್ಚುವ ವಿಧವೆಯರ ಸಂಖ್ಯೆ, ಪರಿತ್ಯಕ್ತೆಯರ ಸಂಖ್ಯೆ, ಇನ್ನೊಂದು ದಿಕ್ಕಿನಲ್ಲಿ ಬೆಳೆಯುತ್ತಿರುವ ವೇಶ್ಯೆಯರ ಸಂಖ್ಯೆ ಇವೆಲ್ಲ ಸಮಾಜದ ದೌರ್ಬಲ್ಯಗಳಲ್ಲವೆ? ಇವುಗಳನ್ನೇ ಮೈಗೂಡಿಸಿಕೊಂಡು ಬೆಳೆದಿರುವ ಬಹುಸಂಖ್ಯಾಕರಿಗೆ ಇವುಗಳ ಬಗ್ಗೆ ವಿಚಾರಮಾಡುವದೂ ಪಾಪವೆನಿಸುತ್ತದೆ. ರಾಜಾರಾಮ ಮೋಹನರಾಯ, ಈಶ್ವರಚಂದ್ರ ವಿದ್ಯಾಸಾಗರರಂಥವರು ಕೂಡ ಬಾಲವಿವಾಹ ನಿರೋಧಕ ಕಾನೂನನ್ನೂ, ವಿಧವೆಯರ ಪುನರ್ವಿವಾಹದ ಕಾನೂನನ್ನೂ ಜನತೆಯ ಎದುರು ಇಟ್ಟಾಗ ವಿರೋಧವನ್ನು ಸಹಿಸಬೇಕಾಯ್ತು! ಆರ್ಯಸಮಾಜ ಇದಾವುದಕ್ಕೂ ಬಗ್ಗದೆ, ಇವುಗಳನ್ನು ಆಚರಣೆಯಲ್ಲಿಯೇ ತಂದಿತು! ಜನತೆಯ ಎದುರು ಇನ್ನೂ ಈ ಸಮಸ್ಯೆಗಳು ಇದ್ದೇ ಇವೆ. ಜನತೆಯಲ್ಲಿ ವಿಚಾರ ಮಾಡುವ ಶಕ್ತಿ ಬೆಳೆದಾಗ ಮಾತ್ರ ಕಾನೂನು ಅವರ ಸಹಾಯಕ್ಕೆ ಬರುತ್ತದೆ. ಕಾನೂನು ಜನತೆಯ ಮನಸ್ಸನ್ನು ಪಕ್ವಗೊಳಿಸಬಹುದೇ?

ಅಂದು ಅಖಿಲ ಭಾರತ ಮಹಿಳಾ ಪರಿಷತ್ತು,ರಾಷ್ಟ್ರೀಯ ಮಟ್ಟದ ಒಂದೇ ಒಂದಾದ ಮಹಿಳೆಯರ ಸಂಸ್ಥೆಯಾಗಿತ್ತು ಎಂದು ಹೇಳಬಹುದು. ಇಂತಹ ಒಂದು ಸಂಸ್ಥೆ, ಭಾರತೀಯ ಮಹಿಳೆಯರ ಅಭಿಪ್ರಾಯಕ್ಕೆ ಅವಶ್ಯಕವೆಂಬುದನ್ನು ಕಂಡು ಅದರ ಸಂಸ್ಥಾಪನೆಗೆ ದುಡಿದವರೂ ಡಾ. ಅನಿಬೆಜಂಟ, ಮಾರ್ಗರೆಟ ಕಝಿನ್ಸರಂಥವರು! ಸುಮಾರು ನಾಲ್ವತ್ತು ವರುಷಗಳ ಆಯುಷ್ಯವನ್ನು ಇಂಗ್ಲಂಡಿನಲ್ಲಿ ಕಳೆದು ಭಾರತಕ್ಕೆ ಬಂದ ಅನಿಬೆಜಂಟರು ನಮ್ಮ ಜನರನ್ನು ತಿಳಿಯಲು, ನಮ್ಮ ಸಂಸ್ಕೃತಿಯನ್ನು ತಿಳಿಯಲು, ಸಂಸ್ಕೃತದ ಅಭ್ಯಾಸಮಾಡಿ, ದೇಶವನ್ನೆಲ್ಲ ಸುತ್ತಿ,ಜಾಗೃತಿಯ ಕಹಳೆಯೂದಿದರು! ಯುವಕರಿಗಾಗಿ,ಮಕ್ಕಳಿಗಾಗಿ, ಮಹಿಳೆಯರಿಗಾಗಿ ಹಲವಾರು ಸಂಸ್ಥೆಗಳನ್ನು ತೆಗೆದರು. ಆವರ ಜೀವನ ಚರಿತ್ರೆಯೇ ನಮಗೆ ಸ್ಫೂರ್ತಿದಾಯಕ; ಅದೇ ರೀತಿ ಮಾರ್ಗರೆಟ ಕಝಿನ್ಸ ಕೂಡ ಅಖಿಲ ಭಾರತ ಸ್ವರೂಪದ ಮಹಿಳಾ ಪರಿಷತ್ತಿಗಾಗಿ ತುಂಬ ಪರಿಶ್ರಮವಹಿಸಿದವರು.

ಭಾರತೀಯ ಸಾಮಾಜಿಕ ಕಾನೂನುಗಳ ಇತಿಹಾಸದಲ್ಲಿ ಮಹಿಳೆಯರ ಹಾಗೂ ಮಕ್ಕಳ ಪ್ರಶ್ನೆ ಬಂದಾಗ, ಅಖಿಲ ಭಾರತ ಮಹಿಳಾ ಪರಿಷತ್ತು ಧೈರ್ಯವಾಗಿ ವಿಚಾರ ಮಾಡಿ ಅಭಿಪ್ರಾಯವನ್ನು ಕೊಟ್ಟಿದೆ. ತಾನು ಇರುವದರ ಮಹತ್ವವನ್ನು ಜನತೆಗೂ, ಸರಕಾರಕ್ಕೂ ತಿಳಿಸಿಕೊಟ್ಟಿದೆ.

ಬಾಲಿಕೆಯ ಮದುವೆಯನ್ನು ೧೪ ವರ್ಷಗಳಿಗೆ ಮೊದಲು ಮಾಡಕೂಡದೆಂಬ ಆಶಯದ ಸಾರಡಾ ಕಾನೂನಿಗೆ ಅಖಿಲ ಭಾರತ ಮಹಿಳಾ ಪರಿಷತ್ತು ತನ್ನ ಸ್ಪಷ್ಟವಾದ ಆಧಾರವನ್ನು ಕೊಟ್ಟಿದೆ; ಇಂದು ಇಂತಹ ಹಲವಾರು ಸಮಸ್ಯೆಗಳಿವೆ. ಗಣಿಯಲ್ಲಿ ಕೆಲಸ ಮಾಡುವ ಹೆಂಗಸರಿಗೆ ಸಂಬಂಧಪಟ್ಟ ಕಾನೂನು. ಗಿರಣಿಗಳಲ್ಲಿ ಐವತ್ತಕ್ಕಿಂತ ಹೆಚ್ಚು ಜನ ಕಾರ್ಮಿಕ ಮಹಿಳೆಯರಿದ್ದರೆ, ಅವರ ಮಕ್ಕಳಿಗೋಸ್ಕರ ಶಿಶುವಿಹಾರಗಳನ್ನು ತೆರೆಯಲೇಬೇಕೆಂಬ ಕಾನೂನು, ಕಾರ್ಯನಿರತ ಮಹಿಳೆಯರಿಗೆ ಸವೇತನ ಹೆರಿಗೆಯ ರಜೆದೊರೆಯಬೇಕೆಂಬ ಕಾನೂನು, ಅನೈತಿಕ ವ್ಯವಹಾರವನ್ನು ತಡೆಗಟ್ಟುವಕಾನೂನು, ಇವೆಲ್ಲವುಗಳು ಎಲ್ಲ ಹಂತಗಳಲ್ಲಿಯೂ ದುಡಿಯುತ್ತಿರುವ ಮಹಿಳೆಯರಿಗೆ ಸೌಕರ್ಯಗಳನ್ನು ಒದಗಿಸಿ ಕೊಡಲು ಮುಂದೆ ಬಂದಿವೆ. ಹಿಂದೂ ಕಾಯಿದೆಯ ಕ್ರೋಢೀಕರಣನಡೆದಿದ್ದಾಗ ದೇಶದಲಕ್ಷ್ಯವನ್ನೇಸೆಳೆದ ದೊಡ್ಡ ಸಮಸ್ಯೆಯೆಂದರೆ ಮಗನಂತೆಯೇ ಮಗಳೂ ಕೂಡ ತಂದೆಯ ಆಸ್ತಿಯಲ್ಲಿ ಪಾಲು ಪಡೆಯಬಹುದು. ಅನೇಕ ಜನ ಮಹಿಳೆಯರೇ ಇದಕ್ಕೆ ತಮ್ಮ ವಿರೋಧವನ್ನು ವ್ಯಕ್ತ ಮಾಡಿದರು. "ಧರ್ಮಕೆಟ್ಟು ಹೋದೀತು! ಅಣ್ಣ-ತಂಗಿಯರಲ್ಲಿ ಪ್ರೀತಿ ಉಳಿಯದೆ ಹೋದೀತು!" ಎಂದು ಅನೇಕ ಹಿರಿಯರೂ ಗಾಬರಿಯಾದರು. ಮಹಿಳೆ, ಅಜ್ಞಾನಿ, ಅವಳಿಗೆ ಆಸ್ತಿಯನ್ನು ನಿರ್ವಹಿಸುವ ಶಕ್ತಿಯಾದೀತೇ! ಎಂದು ಸಂಶಯಪಟ್ಟರು. ನ್ಯಾಯಮೂರ್ತಿ ಗಜೇಂದ್ರಗಡಕರರು ಇದಕ್ಕೆಲ್ಲ ಯೋಗ್ಯ ಉತ್ತರವನ್ನು ಕೊಟ್ಟಿದ್ದಾರೆ. ಎಷ್ಟುಜನ ಅಜ್ಞಾನಿಗಳಾದ, ಹಾಗೂ ನಿರಕ್ಷರಿಗಳಾದ ಪುರುಷರು ಆಸ್ತಿಯನ್ನು ನೋಡಿಕೊಳ್ಳುತ್ತಿಲ್ಲ! ಆಸ್ತಿಯಲ್ಲಿ ಪಾಲು ಪಡೆಯದಿದ್ದರೆ ಅಣ್ಣ-ತಂಗಿಯರಲ್ಲಿ ಪ್ರೀತಿ ಹಾಗೇ ಉಳಿಯುತ್ತದೆ ಎಂದು ನಿಶ್ಚಿತವಾಗಿ ಹೇಳಲು ಆಧಾರವೇನಿದೆ? ಆಸ್ತಿಗೆ ಒಡತಿಯಾಗಿ, ಮನೆಗೆ ಯಜಮಾನಿಯಾಗಿದ್ದ ಮಹಿಳೆ; ಇಂದು ತಾನೇ ಪುರುಷನ ಆಸ್ತಿಯೆನಿಸಿಕೊಳ್ಳುವವರೆಗೂ, ಸಾಮಾಜಿಕ ಇತಿಹಾಸದಲ್ಲಿ

ಪುಟಗಳನ್ನು ಮುಗಚಿ ಹಾಕಿದ್ದಾಳೆ. ಪತ್ನಿ ಮಾಡಿದ ತಪ್ಪಿಗೆ ಪತಿ ದಂಡವನ್ನು ಅನುಭವಿಸಬೇಕಾಗುತ್ತಿದ್ದ ಕಾಲವೊಂದು ಇಂಗ್ಲಿಷಿನ ಇತಿಹಾಸದಲ್ಲಿತ್ತು!

ಸಂಧಿಕಾಲದ ಇಂದಿನ ಸಂದರ್ಭದಲ್ಲಿ ಹೊಸದಾಗಿ ಸಮಾಜವನ್ನು ರಚಿಸಬೇಕೆಂದಾಗ, ಧಾರ್ಮಿಕ ಸಾಮಾಜಿಕ ವಿಷಯುಗಳಲ್ಲನೇಕಕ್ಕೆ ಹೊಸ ಬೆಲೆಯನ್ನು ಕೊಡಬೇಕಾದಾಗ, ಹೆಚ್ಚು ಔದಾರ್ಯದಿಂದ ಸಹಿಷ್ಣುತೆಯಿಂದ ಇನ್ನೊಬ್ಬರನ್ನು ನೋಡುವ ದೃಷ್ಟಿ ನಮಗೆ ಬರಬೇಕು. ವಿಶಾಲವಾದ ಪ್ರಪಂಚದಲ್ಲಿ ಬದುಕಬೇಕೆಂದಾಗ, ವಿವಿಧ ಹಂತಗಳಲ್ಲಿ ಬರುವ ಸಮಸ್ಯೆಗಳನ್ನು ಎದುರಿಸುವ ಧೈರ್ಯವನ್ನು ಪಡೆಯಬೇಕೇ ವಿನಾ ಸಮಸ್ಯೆಗಳೇ ಬರಕೂಡದೆಂದು ಆಶಿಸುವದು ನಮ್ಮ ಮೂರ್ಖತನ. ಒಳ್ಳೆಯ ಸ್ಥಿತಿಯಲ್ಲಿದ್ದ ಮಧ್ಯಮ ವರ್ಗದ ಮಹಿಳೆ, ಇಂದು ತಾನು ಹೊರಗೆ ಬರುತ್ತಿರುವದು ಅಗೌರವವೆಂದು ತಿಳಿಯುತ್ತಾಳೆ. ಹೊರಗೆ ಬಂದು ದುಡಿಯಬೇಕಾದುದು ಇನ್ನೂ ಅಗೌರವ; ಅವಳ ಬಾಯಿಂದ ಮಾತುಗಳೇ ಹೊರಡವು. ಅನೇಕ ಸಾಮಾಜಿಕ ಸಮಸ್ಯೆಗಳಿಂದಾಗಿ, ಆಸ್ತಿಯ ಕಾನೂನುಗಳಿಂದಾಗಿ ಅವರ ಸುಖಮಯ ಜೀವನಕ್ಕೆ ಆಘಾತ ವುಂಟಾಗಿದೆ. ಆದರಿಂದ ಚೇತರಿಸಿಕೊಳ್ಳಲು ಅವಳಿಗೆ ಸಮಯ ಬೇಕು, ಶಕ್ತಿ ಬೇಕು. ಪರಂಪರೆಯಿಂದ ಬಂದ ಪ್ರಿಯವಾದುದನ್ನು ಅವಳು ಬಿಟ್ಟು ಹೊಸ ದೃಷ್ಟಿಯನ್ನು ಬೆಳೆಸಿಕೊಳ್ಳಬೇಕಾಗಿದೆ. ಅವಳಿಗೆ ಸಮಾಜದ ಉದಾರ ದೃಷ್ಟಿ ಬೇಕಾಗಿದೆ. ಮಗು ಕೆಸರಿನಲ್ಲಿ ಬಿದ್ದಾಗ, ಬಿದ್ದ ಪೆಟ್ಟಿಗಿಂತ ಯಾರಾದರೂ ನೋಡಿದರೋ ಹೇಗೆಂಬ ಭಯ-ಸಂಕೋಚ ಹೆಚ್ಚು! ಅಂತಹ ಸ್ಥಿತಿಯಲ್ಲಿ ಇಂದು ಮಹಿಳೆಯೂ ಕೂಡ ಇದ್ದಾಳೆ!

ಇಂದು ಮಹಿಳೆಯರ ಕಾರ್ಯ ಕ್ಷೇತ್ರ ಎಲ್ಲ ರಂಗಗಳಿಗೂ ಹಬ್ಬಿದೆ. ಅವರ ಶಿಕ್ಷಣದ ಸಮಸ್ಯೆ ಪ್ರತ್ಯೇಕವಾಗಿಯೇ ಜನತೆಯ ಲಕ್ಷ್ಯವನ್ನು ಸೆಳೆದಿದೆ. ತೃತೀಯ ಪಂಚವಾರ್ಷಿಕ ಯೋಜನೆಯಲ್ಲಿ ೧೦೦ ಕೋಟಿ ರೂಪಾಯಿಗಳನ್ನು ಅವರ ಶಿಕ್ಷಣಕ್ಕಾಗಿ ತೆಗೆದಿಡಲು ಶ್ರೀಮತಿ ದುರ್ಗಾಬಾಯಿಯವರು ಪ್ರಯತ್ನ ನಡೆಸಿದ್ದಾರೆ. ಶ್ರೀಮತಿ ಇಂದಿರಾ ಗಾಂಧಿಯವರು ಕಾಂಗ್ರೆಸ್ಸಿನ ಅಧ್ಯಕ್ಷಿಣಿಯಾಗಿ ರಾಷ್ಟ್ರದ ಭವಿತ್ಯವದ ಚುಕ್ಕಾಣಿಯನ್ನೇ ಹಿಡಿದಿದ್ದಾರೆ. ಹೀಗಿರುವಾಗ ಮಹಿಳೆ ಎಂಬ ಒಂದೇ ಕಾರಣಕ್ಕಾಗಿ ಯಾವುದೇ ಕ್ಷೇತ್ರದಲ್ಲಿ ಪ್ರಾತಿನಿಧ್ಯ ಕೊಟ್ಟಿದ್ದೇವೆ ಎಂಬುದು, ಮಹಿಳೆ ಎಂಬ ಕಾರಣಕ್ಕಾಗಿಯೇ ಕೊಟ್ಟಿಲ್ಲವೆಂಬುದು ಅಸಮಂಜ! ಇವತ್ತು ಸಾಹಿತ್ಯ ಅಕಾಡೆಮಿಯಂಥ ಸಂಸ್ಥೆಯಲ್ಲಿ ಮಹಿಳೆಯರೇ ಇಲ್ಲವೆಂಬುದು ವಿಷಾದಕರ! ಸಾಹಿತ್ಯ ದೃಷ್ಟಿಯಿಂದ, ಸಾಹಿತ್ಯವನ್ನು ಸೃಜಿಸುವರಿಂದ ಅವಳು ಹೊರಗುಳಿದಿಲ್ಲ ಎಂಬುವನ್ನು ಸಮಾಜವು ನೆನೆಯಬೇಕು.

ಸ್ವತಂತ್ರ ಭಾರತದಲ್ಲಿ ಬೆಳೆಯುತ್ತಿರುವ ಮಕ್ಕಳು ಆರೋಗ್ಯಸಂಪನ್ನರಾಗಿ, ಶಿಕ್ಷಣ ಪಡೆದು, ಉತ್ಸಾಹದಿಂದ ಹೊಣೆಯನ್ನು ಹೊರಲು ಮುಂದೆ ಬರುವಂತೆ ಅವಕಾಶಗಳನ್ನು ಕಲ್ಪಿಸಿಕೊಡುವದು, ಪಾಲಕರಿಗೆ ಆ ಬಗ್ಗೆ ತಿಳಿಹೇಳುವದು ಮಹತ್ವದ ಕರ್ತವ್ಯವಾಗಿದೆ. ಅಂದರೆ ಮಾತ್ರ ಜನಾಂಗದ ಜೀವನದ ಪ್ರಗತಿಗೆ ಗತಿಯುಂಟಾದೀತು! ಅದರ ಹೊಣೆಯನ್ನು ಸುಶಿಕ್ಷಿತ ಮಹಿಳೆಯರು, ಶಕ್ತರಾದ ಮಹಿಳೆಯರು, ಇಂತಹ ಮಹಿಳಾಸಂಸ್ಥೆಗಳು ಹಲವಾರು ವಿಧಗಳಲ್ಲಿ ನಿರ್ವಹಿಸಬಹುದು. ಅದಕ್ಕಾಗಿ ನಾವೆಲ್ಲ ಒಟ್ಟಿಗೆ ದುಡಿಯೋಣ ಎಂದು ಹೇಳಿ, ತಾವೆಲ್ಲ ನನ್ನನ್ನು ಅತ್ಯಂತ ಆತ್ಮೀಯತೆಯಿಂದ ಕಂಡುದಕ್ಕಾಗಿ ತಮಗೆಲ್ಲರಿಗೂ ನಾನು ಮತ್ತೊಮ್ಮೆ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

---

# ತಂಗಿಯರೆ ! ಕೇಳುವಿರಾ ನನ್ನದಿಷ್ಟು ಕಥೆ !

ಬರೆದವಳು— **ಸತ್ಯವಾದಿನಿ.**

## ೫ನೇ ಪ್ರಕರಣ. ತ್ರಿಮೂರ್ತಿಗಳು !

[ ೧೯೫೫ನೇ ಡಿಶಂಬರ ಸಂಚಿಕೆಯಿಂದ ಮುಂದೆ ಸಾಗಿದ್ದು. ]

**ಕಥೆಯ ಸಾರಾಂಶ:—** ನಾನೋರ್ವ ಭಾವಸಾರ ಕ್ಷತ್ರಿಯ ಬಡಕುಟುಂಬದಲ್ಲಿ ಹುಟ್ಟಿದವಳು. ಓರ್ವ ತೇಜೋಹೀನ, ಹೇಡಿ, ಕುರೂಪಿ ಅಪ್ಪನನ್ನು ಲಗ್ನವಾಗಿದ್ದು ತಂದೆ ಮತ್ತು ಗಂಡ ಇಬ್ಬರು ಕುಡುಕರು. ಆದ್ದರಿಂದ ಮನೆಯಲ್ಲಿ ಸ್ವಾಸ್ಥ್ಯವಿಲ್ಲ. ನಾನು ಸಾಧಾರಣ ಚಲುವೆ, ಚುರುಕು ಬುದ್ಧಿಯುವಳು, ಸಂಘಟನಾ ಚತುರಳು, ಮಾತುಗಾರಳು, ಆಕರ್ಷಕಳು ಇದ್ದ ಮೂಲಕ, ಎಲ್ಲರು ನನ್ನನ್ನು ವಿಶೇಷವಾಗಿ ತರುಣರು ಪ್ರೀತಿಸುತ್ತಿದ್ದರು. ಓರ್ವ ಸೆಕ್ರೆಟರಿ ಬಲೆಯೊಳಗೆ ಸಿಕ್ಕಬಿದ್ದೆನು. ಗಂಡನು ಸಂಶಯ ಪಿಶಾಚಿಗೆ ಬಲಿಬಿದ್ದನು. ಕೊನೆಗೆ ಓರ್ವ ಮೋಟಾರ ಡ್ರಾಯಿವ್ಹರನ ಕೂಡ ಓಡಿ ಹೋಗಿದ್ದಕ್ಕೆ ನನ್ನನ್ನು ಒಂದು ಹೆಣ್ಣುಮಕ್ಕಳ ಸಂಸ್ಥೆಯಲ್ಲಿ ಆ ಸೆಕ್ರೆಟರಿಯು ತಂದುಬಿಟ್ಟನು. ಸಂಸ್ಥೆಯು ಆಗಲೇ ಪ್ರಾರಂಭವಾಗಿದ್ದರಿಂದ ನೋಡಲು ಭವ್ಯವಾಗಿದ್ದಿಲ್ಲ. ಎಲ್ಲವು ಅಸ್ತವ್ಯಸ್ತ. ಮೂವರು ವ್ಯವಸ್ಥಾಪಕರಿದ್ದರೂ. ಒಬ್ಬರಿಗೊಬ್ಬರಿಗೆ ತಾಳು ಮೇಳಿಲ್ಲ. ಕುರುಡ ದಂಪತಿಗಳ ಕೂಡ ಇರುವಿಕೆ. ಮೊದಲೆ ಮನಸಿನ ಮೇಲೆ ಸಂಸ್ಥೆಯ ಬಗ್ಗೆ ಅನಾದರ ಹುಟ್ಟಿ ಇರಬಾರದೆಂಬ ಭಾವನೆ ಹುಟ್ಟಿದ್ದು. ಆ ಸೆಕ್ರೆಟರಿಯ ದುಷ್ಟ ಮಾತುಗಳಿಂದ ಮನಸು ನೊಂದಿದ್ದರೂ ಚಡಪಡಿಕೆಯಿಂದ ಸಂಸ್ಥೆಯಲ್ಲಿ ನಿರುಪಾಯವಾಗಿ ಇರಬೇಕಾಯಿತು ಹೊತ್ತು ಬಂದಾಗ ಕತ್ತೆ ಕಾಲು ಹಿಡಿದು ಬದಕೆಂಬಂತೆ ಮನೆ ಬಿಟ್ಟು ಅಪರಿಚಿತವಾದ ಸಂಸ್ಥೆಯಲ್ಲಿದ್ದ ಮೂಲಕ ಉಂಟಾದ ಬಳಲುವಿಕೆಯು ದಿನದಿನಕ್ಕೆ ಕಾಲುಗತಿಗನುಸಾರವಾಗಿ ಕಡಿಮೆಯಾಗುತ್ತ ಹೋಯಿತು. ಮತ್ತು ಇಲ್ಲಿದ್ದವರ ಸ್ವಭಾವಗಳನ್ನು ಕಂಡು ಹಿಡಿದು ನನಗೆ ಬೇಕಾದ ಸೌಕರ್ಯಗಳನ್ನು ಒದಗಿಸಿಕೊಂಡು ಹೇಗೆ ಬಾಳಬೇಕೆಂಬುದನ್ನರಿತು ನಡೆದೆನು ಇದರಿಂದ ಜೀವಿತವು ಸಹ್ಯವಾಗುತ್ತ ನಡೆಯಿತು. ಎಲ್ಲಿದ್ದರೂ ಮಾನವಸ್ವಭಾವ ಒಂದೆ ಎಂಬಂತೆ ನಮ್ಮೂರು ಬಿಟ್ಟು ಇಲ್ಲಿಗೆ ಬಂದರೂ ನನ್ನ ಸ್ವಭಾವದಲ್ಲಿ ಬದಲಾಗದೆ ಒಬ್ಬ ತರುಣನ ಕೂಡ ರಹಸ್ಯವಾಗಿ ನಡೆದ ಪತ್ರ ವ್ಯವಹಾರವು ಬೈಲಿಗೆ ಬಿದ್ದುದರಿಂದ ಹೌಹಾರಿ ಹೋಯಿತು.

ಮಹಾಮಾಯಿಯವರು ಬಂದಕೂಡಲೆ ಸಹಾನುಭೂತಿಯಿಂದ ಯಾವ ಸಂಗತಿಯನ್ನು ವಿಚಾರಿಸದೆ ತಮ್ಮ ಶೀಘ್ರಕೋಪಿ ಸ್ವಭಾವಕ್ಕನುಗುಣವಾಗಿ ಬೈಯ್ಯಲು ಪ್ರಾರಂಭಿಸಿಬಿಟ್ಟರು. ಸಂಸ್ಥೆಗೆ ಬರಬೇಕಾದರೆ ಯಾವಾಗಲೂ ನೆರಳಿನಂತೆ ಅವರನ್ನು ಹಿಂಬಾಲಿಸುತ್ತಿದ್ದ ಚಾಚಾ ಇವರು ಅಂದು ಅವರ ಜೊತೆಗೆ ಇರಲಿಲ್ಲ. ಇದ್ದರೂ ಕೂಡ ವಿಶೇಷವೇನು ಬದಲಾಗುತ್ತಿರಲಿಲ್ಲ. ಏಕೆಂದರೆ ಅಪರಿಚಿತ ಯಾ ಪರಿಚಿತದ ಸ್ತ್ರೀಗೆ ಹೆದರಿದಂತೆ ಅಪರಿಚಿತ ಯಾ ಪರಿಚಿತ ಸಜ್ಜನರಿಗೆ ಮಹಾಮಾಯಿಯವರು ಎಂದು ಹೆದರುತ್ತಿರಲಿಲ್ಲ. ಯಾರ ಮನಸು ನೊಂದೀತು, ತಮ್ಮ ಗೌರವಕ್ಕೆ ಕುಂದು ಬರುವದೋ ಹೇಗೆ, ಮೊದಲು ಸಜ್ಜನರು ಅಥವಾ ಪುಕ್ಕರಿದ್ದವರು, ಇವರ ಬಿರಸು, ಹಿಂದು ಮುಂದೆ ಸಂದರ್ಭವಿಲ್ಲದೆ ಆಡಿದ, ಅರ್ಥವಾಗದ ತತ್ವಜ್ಞಾನಯುಕ್ತ ಮಾತುಗಳಿಂದ ದುರ್ಜನರು ಯಾ ಘಾತಕರಾಗುವರು ಅವರಲ್ಲಿ ಮೊದಲಿದ್ದ ಕೋಮಲ ಭಾವನೆಗಳು ಕಮರಿ ಹೋಗಿ, ಇವರ ಸಲುವಾಗಿ ಮೊದಲಿದ್ದ ಆದರಭಾವವು ಅಳಿದು ಹೋಗಿ, ಇವರಿಗಾಗಿ ಭೀತಿ, ತಾತ್ಸಾರ ಅಸಹಕಾರದ ಭಾವನೆ ಹುಟ್ಟಿ ಇವರ ಒಳ್ಳೆ ಕಾರ್ಯ, ತ್ಯಾಗ, ಸಾಹಸ, ವ್ಯವಹಾರ ಚಾತುರ್ಯ, ಕರ್ತವ್ಯದಕ್ಷತೆ ಇವುಗಳ ಬಗ್ಗೆ ತಿರಸ್ಕಾರ

ಹುಟ್ಟಿ 'ದೇವರೆ ಮಿತ್ರರಿಂದ ಕಾಪಾಡು!' ಎಂಬಂತೆ ಎಂಥ ಇಕ್ಕಟ್ಟಿನ ಪ್ರಸಂಗ ಬಂದು ಸರ್ವಸ್ವ ನಾಶವಾದರೂ ಚಿಂತೆ ಇಲ್ಲ ಇವರ ಉಪಕಾರದಿಂದ ಬದಕುವದೊಳ್ಳೆಯದಲ್ಲವೆಂದು ಅನಿಸುತ್ತದೆ.

"ಆ ಚಾಚಾಗೆ ಎಷ್ಟು ಸಾರೆ ಕೈಮುಗಿದು ಕಾಲಬಿದ್ದು ಇಂಥ ಕೆಟ್ಟವರನ್ನು ತೆಗೆದುಕೊಳ್ಳಬೇಡ. ಹುಟ್ಟಾ ದುಷ್ಟರು, ಕೆಟ್ಟ ನಡತೆ ಇದ್ದವರನ್ನು ತಿದ್ದುವದೆಂದೂ ಸಾಧ್ಯವಿಲ್ಲ. ಕಸಬರಿಗೆಯು ಕೈಲಾಸಕ್ಕೆ ಹೋದರು ಚಾಮರವಾಗಲಾರದು. ಇಂಥವರ ದುಃಖ ನಿವಾರಣೆ ಮಾಡಲು ಹೋಗುವದೆಂದರೆ ಹಾವಿಗೆ ಹಾಲು ಎರದಂತೆಯೆ ಸರಿ. ಇವರಿಗೆ ಸಹಾಯ ಮಾಡದೆ ಹಾಗೆ ಬಿಟ್ಟರೆ ಅವರು ಲೌಕಿಕದಲ್ಲಿ ಪೆಟ್ಟು ತಿಂದು ಬುದ್ಧಿ ಕಲಿಯುವರು. ತಮ್ಮ ದಾರಿ ತಾವೇ ನೋಡಿಕೊಳುವರು. ಇವರ ಸಂಕಟದಲ್ಲಿ ನಾವು ಪಾಲುಗಾರರಾದರೆ ಅದರ ಪೆಟ್ಟು ನಾವು ತಿನಬೇಕಾಗುವದು. ಈ ರಂ...ಸಂಕಟಮುಕ್ತರಾದಕೂಡಲೆ ಪರಿ ಉಚ್ಚಿದ ಹಾವಿನಂತೆ ತಿರುಗಿ ಬೀಳುವರು. ಮತ್ತೆ ಪ್ರಸಂಗ ಬಂದಕೂಡಲೆ ಹೊತ್ತು ಬಂದಾಗ ಕತ್ತೆ ಕಾಲು ಹಿಡಿ ಎಂಬಂತೆ ಸಿಹಿ ಸಿಹಿ ಮಾತಾಡಿ ದುಃಖಗಳನ್ನು ತಂದು ನಮ್ಮ ಮೇಲೆ ಒಟ್ಟುವರೆಂದೊದರಾಡಹತ್ತಿದರು. ಮೊದಲೆ ಒಳ್ಳೆ ಸ್ವಭಾವದವರು, ಒಳ್ಳೆ ಸಂಸ್ಕಾರಗಳುಳ್ಳವರಿದ್ದರೆ, ಏನೋ ಸ್ವಲ್ಪ ಮೋಸಕ್ಕೊಳಪಟ್ಟು ದಾರಿ ತಪ್ಪಿದ್ದರಿಂದ ಪಶ್ಚಾತ್ತಾಪಕ್ಕೊಳಪಟ್ಟವರಿಗೆ ಸಹಾಯ ಮಾಡಿದರೆ ಚಿಂತೆಯಿಲ್ಲ. ಅವರ ಸುಧಾರಣೆಯಾದೀತು.ನಮ್ಮ ಸಹಾಯಧನ ಸಾರ್ಥಕವಾದೀತು. ಅದನ್ನು ಬಿಟ್ಟು ಎಲ್ಲೊ ಕೆಟ್ಟ ತಾಯಿ ತಂದೆಗಳಿಂದ ಹುಟ್ಟಿ ಕೆಟ್ಟ ಜನರ ಸಹವಾಸದಿಂದ ಕೆಟ್ಟುಹೋದ ಇಂಥ ಬಸವಿಯರ ಉದ್ಧಾರ ಮಾಡುವನಂತೆ ಈ ಚಾಚಾ! ಬರಲಿ ನಾಳೆ! ಈ ಎಲ್ಲ ಸುದ್ಧಿಯನ್ನು ಅವನ ಮುಂದೆ ಹೇಳುತ್ತೇನೆ. ಇವಳ ಉದ್ಧಾರ ಮಾಡತಾನಂತ ಉದ್ಧಾರ! ಉದ್ಧಾರ ಮಾಡುತ್ತಾನೋ ಏನು ಉದ್ಧ ಧಾರದಿಂದ ಉರಲು ತಾನೇ ಹಾಕಿಕೊಳ್ಳುತ್ತಾನೋ! ನೋಡೆ ಬಿಡುವೆನು? ತನ್ನ ಗಂಡನನ್ನೆ ಬಿಟ್ಟು ಪಿರಿಪಿರಿ ಓಣಿಗುಂಟೆ ತಿರುಗುವ, ತನ್ನ ಮಕ್ಕಳದೆ ತನಗೆ ಖಬರಿಲ್ಲದ ಈ ಅಸೂಯಾ ಏನೋ ಈ ಆಶ್ರಮದ ಮಕ್ಕಳ ಕಾಳಜಿ ತೆಗೆದುಕೊಳ್ಳುವಳಂತೆ! ಹಾ; ! ಹಾ; ! ಹಾ; ! ಕಾಳಜಿ ತೆಗೆದುಕೊಳ್ಳುವಳೋ ಏನೋ (ಮರಾಠಿಯಲ್ಲಿ ಅನ್ನುತ್ತಾರಲ್ಲ ಹೃದಯಕ್ಕೆ) ಕಾಳೀಜ ತೆಗೆದುಕೊಳ್ಳುವಳೊ! ಎಲ್ಲರು ಅವರೆ! ವಿದ್ಯಾರ್ಥಿನಿಯರು, ಗುರುಗಳು; ಆಶ್ರಿತರು ಆಶ್ರಯದಾತರು! ಏಕು ಜೇಕು ಬಂದಾದ ಮೇಲೆ ಎಂಟು ಎತ್ತಿನವನು ಏನು.......ಹರಿಯುವ"ನೆಂದು ಹಿಂದು ಮುಂದು ನೋಡದೆ ಏತರ ಖಬರಿಲ್ಲದವರಂತೆ ಒದರ್ಯಾಡಿ ಸಂತಾಪದಿಂದ ಯಾವ ಉಪಾಯವನ್ನು ಹೇಳದೆ ಹೊರಟು ಹೋಗಿಬಿಟ್ಟರು. ಇವರ ಮಾತಿನ ಅರ್ಥ ಸಂದರ್ಭ ಯಾವದು ತಿಳಿಯದೆ ಮಂಕಳಾಗಿ ಬಿಟ್ಟೆನು. "ನನ್ನದು ಸರ್ವಸ್ವಿ ತಪ್ಪಾಗಿದೆ. ಇನ್ನು ಮುಂದೆ ಇಂಥ ತಪ್ಪುಗಳನ್ನೆಂದು ಮಾಡುವದಿಲ್ಲ" ಎಂದು ಅಂಗಲಾಚಿ ಕ್ಷಮೆ ಬೇಡಿಕೊಳ್ಳೋಣವೆಂದು ಕಾಲು ಬೀಳಲು ಹೋದರೆ "ಸಾಕು! ಸಾಕು! ನಿನ್ನದೀ ದಾಂಭಿಕತನ! ಮೊದಲು ಮಾಡಬಾರದ್ದನ್ನು ಮಾಡುವದು ಮತ್ತೆ ಮೇಲೆ ತಪ್ಪಾಯಿತೆನ್ನುವದು! ಈ ಎಲ್ಲ ಗುಣಗಳನ್ನು ಆ ಚಾಚಾನೆ ನಿಮಗೆ ಕಲಿಸಿದ್ದಾನೆ. ನಿಮ್ಮಂಥವರನ್ನು ತಲೆಯ ಮೇಲೆ ಕೂಡಿಸಿಕೊಂಡು! ನಡೆ ಇಲ್ಲಿಂದ! ನಾಳೆ ಅವನೇ ಬಂದು ಏನು ಮಾಡುತ್ತಾನೆ ನೋಡೋಣ." ಎಂದಂದು ಬಿಂಕದಿಂದ ಹೊರಟು ಹೋದದ್ದಾಯಿತು. ಇತ್ತ ಅಸೂಯಾಬಾಯಿಯವರು ಇವರ ಈ ದೋಷ ಹೊರಿಸುವ ದುಷ್ಟ ಮಾತುಗಳಿಂದ ಸಂತಾಪಗೊಂಡು ಕಾಲ ಅಪ್ಪಳಿಸಹತ್ತಿದರು. "ನಿನ್ನಿಂದ ಇಷ್ಟೆಲ್ಲ ಆದದ್ದು! ನಿನಗಾರು ಹೇಳಿದರು ಈ ಹಾಳು ಪತ್ರವ್ಯವಹಾರ ಮಾಡಲು! ನಿನಗಾಗಿ ನಾನು ಬೈಗಳನ್ನು ತಿನ್ನಬೇಕಾಯಿತು. ಇಂಥದೆಲ್ಲ ಮಾಡಬೇಕಾಗಿದ್ದರೆ ಇಲ್ಲಿಗೇಕೆ ಬಂದಿ! ನಿಮ್ಮೂರಲ್ಲೇನು ಗಂಡಸರಿರಲಿಲ್ಲವೇ! ನೀನು ಮಾಡಿ ನನ್ನ ಮೋತಿಗೆ ಬೆಂಕಿ ಹಚ್ಚಿದಿ! ಅವರಾದರು (ಗಂಡ) ಇಂಥವರೆ! ಎರಡು ಕಾಸಿಗಾಗಿ ಹೆಂಡರು ಮಕ್ಕಳ ಕೊಲೆ ಮಾಡುವರು! ಏತಕ್ಕೆ ಬೇಕಾಗಿತ್ತು ಇಂಥ ಸೆಗಣಿ ತಿನ್ನುವ ಕಾರಭಾರ! ಎಲ್ಲಿಯಾದರು ಕೂಲಿ ಮಾಡಿ ಎರಡು ಕಾಸು ಗಳಿಸಬೇಕಾಗಿತ್ತು! ಮಹಾಮಾಯಿಯವರು ನನ್ನನ್ನು ಏಕಾಂತದಲ್ಲಿ ಕರೆದು ಎರಡು ಮುಚ್ಚಿ ಪೆಟ್ಟು ಹಾಕಬೇಕಾಗಿತ್ತು! ಅದನ್ನು ನಾನು ಆನಂದದಿಂದ ತಡಕೊಳ್ಳುತ್ತಿದ್ದೆ! ಆದರೆ ಇಷ್ಟು ಜನರ ಎದುರಿನಲ್ಲಿ, ಅದರಲ್ಲಿಯೂ ಯಾರ ಮೇಲ್ವಿಚಾರಕಳೆಂದಿರುವೆನು ಅವರ ಮುಂದೆ ನನ್ನದಿಷ್ಟು ಅಪಮಾನ ಮಾಡಿದರೆ ಅವರು ಹೆಜ್ಜೆಹೆಜ್ಜೆಗೆ ನನ್ನದೆಷ್ಟು ಅವಮಾನ ಮಾಡಲಿಕ್ಕಿಲ್ಲ! ಏಕೆ ನಾನು ಈ ಸಂಸ್ಥೆಯಲ್ಲಿ ಬಂದೆ! ಇಲ್ಲಿ ಬಾರದೆ ಎಲ್ಲಿಯಾದರೂ ಬಿಕ್ಷೆ ಬೇಡಿ ಹೊಟ್ಟೆಹರೆದುಕೊಂಡಿದ್ದರೆ ತಪ್ಪೇನಾಗುತ್ತಿತ್ತು! ನನ್ನ ಮರ್ಯಾದೆಯಾದರು ಉಳಿಯುತ್ತಿತ್ತಲ್ಲ! ಅಯ್ಯೊ! ಏನು ಮಾಡಲಿ! ನನ್ನ ಕೈತೆಳಗಿನವರ ಎದುರಿನಲ್ಲಿ ಆದ ಅಪಮಾನವನ್ನು ಹೇಗೆ ಸಹಿಸಲಿ! ಈ ಸುದ್ದಿ ನಾಳೆ ಊರ ತುಂಬ ಹರಡಿ ಎಲ್ಲರು ನನ್ನನ್ನು ಕೇಳುವರೆ! ಏನೆಂದು

ಹೇಳಲಿ! ನನ್ನ ಗಂಡನೆ ಇದಕ್ಕೆಲ್ಲ ಕಾರಣವೆಂದು ಹೇಳಲ್ಯಾ! ಅಥವಾ ಈ ಹುಡುಗಿಯೆ ಇಂಥ ಕೆಟ್ಟವಳು! ತನ್ನ ಊರಲ್ಲಿ ಬೆಳಕು ಕೆಡವಿ ಇಲ್ಲಿ ಬೆಳಗಲು ಬಂದಿರುವಳೆಂದು ಹೇಳಲ್ಯಾ! ಅಯ್ಯೊ ದೈವವೆ! ಎಂಥ ಕೆಟ್ಟ ಪ್ರಸಂಗ ತಂದಿರುವಿ ನನ್ನ ಮೇಲೆ! ಏನು ಮಾಡಲಿ! ಎಲ್ಲಿಯಾದರು ಓಡಿ ಹೋಗಲ್ಯಾ! ಭಾವಿಯಾದರು ಬೀಳಲ್ಯಾ! ಇಂಥ ಮಾತುಗಳನ್ನು ಚಾಚಾ ಇವರ ಮುಂದೆ ಹೇಳಿದರೆ ಅವರೇನೇನೋ ವೇದಾಂತದ ಮಾತುಗಳನ್ನು ಹೇಳಿ ಸಂತಯಿಸಲು ಪ್ರಯತ್ನಿಸುವರು. ಮಹಾತ್ಮರಾಯಿರುವರ ಸ್ವಭಾವವೆ ಹಾಗೆ! ಅವರ ಮಾತುಗಳು ಬಿರುಸಾಗಿದ್ದರು ಅವರ ಆ ಬಿರಸು ಮಾತುಗಳ ಹಿನ್ನೆಲೆ ನೋಡಿ! ಮತ್ತೊಬ್ಬರ ಮನ ನೊಯ್ಯಬಹುದೆಂಬ ಕಲ್ಪನೆಯ ಕಿಂತ ಪರಂಪರಾಗತವಾಗಿ ಬಂದ ಸಂಸ್ಕಾರದ ಸಿಷ್ಟೆ. ಎಲ್ಲಿಯೋ ಮೂಲಿಯಲ್ಲಿದ್ದ ಪ್ರಯುಕ್ತ ಜಗದೊಳಗೆ ನಡೆದ ಅತ್ಯಾಚಾರ ಅನಾಚಾರದ ಕಲ್ಪನೆಯು ಸರಿಯಾಗಿಲ್ಲದ್ದರಿಂದ ಇವುಗಳ ಪ್ರತ್ಯಕ್ಷ ಪ್ರಥಮ ದರ್ಶನದಿಂದ ಬೆದರಿ ಚದರಿ ಹೋದ ಅಸ್ವಸ್ಥ ಮನಸಿನಿಂದ ಏನು ಮಾಡಬೇಕು ತಿಳಿಯದೆ ಅವರು ಹೀಗೆ ಮಾಡುತ್ತಿರುವರು! ಅವರಿಗೆ ಪ್ರತ್ಯಕ್ಷ ಅನುಭವ ದಿಂದ ಬಂದ ಜ್ಞಾನವೆ ಸಾಧನ ಹೊರ್ತಾಗಿ ಆಧುನಿಕ ಮಾನಸಶಾಸ್ತ್ರದ ಸಂಪರ್ಕವಿಲ್ಲ. ಏನೋ ಒಂದು ತಪ್ಪು ತಿಳುವಳಿಕೆಯಿಂದ ಕಾರ್ಯವು ಹೇಗೆ ಸಾಧಿಸುವದು ಇದರ ಮರ್ಮ ಅರಿಯದೆ 'ನಿಸ್ಪೃಹಸ್ಯ ತೃಣಂ ಜಗತ್ತೆಂ'ಬುದರ ಪರಿಯಿಂದ ಅರ್ಥದ ಮರ್ಮ ತಿಳಿಯದೆ ತಮಗೆ ತೋಚಿದ ಮಾರ್ಗವೆ ಯೋಗ್ಯ, ತಾವು ಹೇಳಿದ್ದೆ ಪ್ರಮಾಣವೆಂದು ಅವರಿಗೆ ಅನಿಸುತ್ತದೆ. ಆದ್ದರಿಂದ ಅವರು ಹಾಗೆ ಹೇಳುತ್ತಾರೆ. ಅತ್ತ ಲಕ್ಷ್ಯ ಕೊಡಬೇಡಿ ಎಂದು ಚಾಚಾ ಇವರು ಹೇಳುವರು. ಅವಮಾನ ಹೊಂದಿದವರ, ಅನಿಸಿಕೊಂಡವರ ವ್ಯಥೆ ಅವರಿಗೇನು ಗೊತ್ತಾಗುವದು!'' ಎಂದು ಎದೆ ಎದೆ ಬಡೆದುಕೊಂಡು ಎಲ್ಲರ ಮೇಲೆ ಹರಿಹಾಯುತ್ತ ಚಡಪಡಿಸಹತ್ತಿದರು ಅಸೂಯಾಬಾಯಿಯವರು

ಇದನ್ನೆಲ್ಲ ನೋಡಿ ನನಗೇನು ತೋಚದಂತಾಯಿತು. ಇಷ್ಟೆಲ್ಲ ಮಾಡುವವರು, ಬೈಯ್ಯುವವರು ಏನು ತಪ್ಪುಗಳನ್ನೆ ಮಾಡುತ್ತಿರಲಿಲ್ಲವೆ! ಸ್ವಯಂಸಿದ್ಧ ಹುಟ್ಟಾ ಸದ್ಗುಣಗಳೆ ಇವರಿರುವರೆ! ಮಾಯಾ ಮೋಹ, ಸಿಟ್ಟು ಸೆಡವು ಅಹಂಕಾರ ಪಾಪವು ಇವರಲ್ಲಿರಲಿಕ್ಕಿಲ್ಲವೆ! ಹೀಗಿದ್ದರೆ ಒಳ್ಳೆ ಸಂಸ್ಕಾರ ಗಳುಳ್ಳ ಆದರೆ ಸ್ವಲ್ಪ ಕಾಲು ಜಾರಿದಂಥವರ ಸಲುವಾಗಿಯೇ ಈ ಸಂಸ್ಥೆಯನ್ನು ತೆಗೆಯಬೇಕಾಗಿತ್ತು! ಅದನ್ನು ಬಿಟ್ಟು ಪತಿತರು, ಗಂಡ ಬಿಟ್ಟವರು ಅಡ್ಡದಾರಿ ಹಿಡಿದವರು, ಮೋಸ ಹೋದವರು, ದುಷ್ಪರ ಜಾಲದಲ್ಲಿ ಸಿಕ್ಕವರು, ಅಸಹಾಯಕರು, ಅಜ್ಞಾನಿಗಳು, ಪರಾವಲಂಬಿಗಳು, ಪರಂಪರಾಗತವಾಗಿ ಬಂದ ರೂಢಿಯ ದಾಸರು, ಅನ್ಯಾಯ ನೀತಿ, ಧರ್ಮ ಕಾಯಿದೆ ಕಾನೂನುಗಳಗೊಳಪಟ್ಟವರು, ದೇಶಾಚಾರ ಲೋಕಾಚಾರದ ಬಂಧನಗಳಿಗೊಳಪಟ್ಟವರು ಇಂಥ ಹೆಣ್ಣುಮಕ್ಕಳ ಉದ್ಧಾರ ಕ್ಕಾಗಿ ಏಳಿಗೆಗಾಗಿ ಈ ಸಂಸ್ಥೆಯು ಹುಟ್ಟಿದೆಯೆಂದು ಇದರ ಉದ್ದೇಶ ಪತ್ರಿಕೆಯಲ್ಲಿ ಬರೆಯಲಾಗಿದೆಯಲ್ಲ! ಇದರ ಅರ್ಥ ವೇನು! ಬರೆಯುವದೊಂದು ಮಾಡುವದೊಂದೊ! ಅಥವಾ ಯಾವಾಗಲು ಚಾಚಾಯವರು ಹೇಳುವಂತೆ ಪರಿಪೂರ್ಣವಾದ ಸೃಷ್ಟಿಯ ಅಥವಾ ದೇವರ ನಿಯಮಗಳಂತೆ ನಡೆಯದೆ ಮನುಷ್ಯನು ಅದರಲ್ಲಿಯೂ ಬುದ್ಧಿಯುಳ್ಳ ಗಂಡಸು ತನಗೆ ಅನುಕೂಲ ವಾಗುವಂತೆ ಕೃತ್ರಿಮವಾಗಿ ಸಮಾಜ ರಚನೆ ಮಾಡಿಕೊಂಡಿದ್ದರಿಂದ ಸರ್ವಜ್ಞನಲ್ಲದ ಮನುಷ್ಯನಿಂದ ಸಾವಿರಾರು ತಪ್ಪುಗಳು ಆಗುವವು. ಈ ತಪ್ಪುಗಳಿಂದ ಪೆಟ್ಟು ತಿಂದು ಗಂಡಸು ಚುರುಕಬುದ್ಧಿಯವನಾಗಿ ಸುಧಾರಿಸುತ್ತ ಹೋಗುವನು ಅಂದರೆ ಈ ಇಹಲೋಕದಲ್ಲಿಯು ಸುಖ ಸೌಕರ್ಯಗಳನ್ನು ಅನುಭವಿಸುತ್ತ ಪುರುಷಾರ್ಥಗಳನ್ನು ಗಳಿಸಿ ದೊಡ್ಡವನು ಅಥವಾ ಜೀವನಮುಕ್ತನಾಗುವನು. ಇದರಂತೆ ಹೆಂಗಸಿಗಾದರು ಅಧಿಕಾರ ಇರುವದು. ಅವರಿಗೆ ಕೊಡುವದು ಯೋಗ್ಯ ಇಷ್ಟೇ ಅಲ್ಲ, ಕೊಡದಿದ್ದರೆ ಅದನ್ನು ದೊರಕಿಸುವದು ಹೆಣ್ಣುಮಕ್ಕಳ ಜನ್ಮಸಿದ್ಧ ಹಕ್ಕು ಇದೆ. ಇದಕ್ಕೆ ನೆರವು ಕೊಡುವದು ಈ ಸಂಸ್ಥೆಯ ಗುರಿ ಇದೆ. ಹಾಗಾದರೆ ಇಲ್ಲಿ ಚಾಲಕರಲ್ಲಿ ಇಷ್ಟು ಮತಭೇದ ಏಕಿರುವದೊ! ಅಥವಾ ಪ್ರಾರಂಭದಲ್ಲಿ ಅನುಭವ ಇಲ್ಲದ್ದರಿಂದ ಬರೆದ ಈ ಸಂಸ್ಥೆಯ ಧ್ಯೇಯವು ಇಂಪು ಕಂಡಿದ್ದು ಆಚಾರದಲ್ಲಿ ತರುವದು ಕೇವಲ ಚಾಚಾ ಇವರಿಗೆ ಶಕ್ಯವಿದ್ದು ಮಿಕ್ಕವರಿಗೆ ಶಕ್ಯವಾಗದೆ ತಾಕಲಾಟ ನಡೆದಿರುವದೋ ನನ್ನಂಥ ಪಾಮರಳು ಏನು ಬಲ್ಲೆ! ಚಾಚಾ ಇವರು ಹೇಳುತ್ತಿರುವ ತತ್ವಗಳು ಒಮ್ಮೊಮ್ಮೆ ನಿಜವೆನಿಸುವವು. ಆ ದೃಷ್ಟಿಯಿಂದ ನೋಡಿದರೆ ನನ್ನದೇನು ತಪ್ಪು ಎಂಬ ಭ್ರಮೆಯುಂಟಾಗುವದು. ತಪ್ಪಿಲ್ಲದಿದ್ದರೆ ನನ್ನಂತೆ ಎಲ್ಲರೂ ಮನಬಂದಂತೆ ನಡೆದರೆ ಸಮಾಜಸುಧಾರಣೆಯಾಗಬಹುದೆ! ತಪ್ಪುಗಳು ಮನುಷ್ಯನಿಂದ ವಿವಿಧ ಕಾರಣಗಳಿಂದಾಗಬಹುದು. ನಮ್ಮ ಸ್ವಾಭಾವಿಕ ಪ್ರವೃತ್ತಿಗಳಿಗೆ ತಡೆಹಾಕುವ ಮನುಷ್ಯನ ಕೃತ್ರಿಮ ನೀತಿ ಧರ್ಮ ನಿಯಮಗಳ ಭಂಗರೂಪದಲ್ಲಾಗುವ ತಪ್ಪುಗಳು ಸತತವಾಗಿ ಇಂದಿಲ್ಲ ನಾಳೆಯಾದರೂ ಆಗಿಯೇ

ತೀರುವವು. ಇಲ್ಲವಾದರೆ ದಾಂಭಿಕತನವು ಹೆಚ್ಚಾಗಿ ಬೆಳೆದು ಇಡೀ ಜೀವನವು ದುಃಖಮಯವಾಗುವದು ಇಲ್ಲವೆ ಆ ನಿಯಮ ಗಳನ್ನು ಪಾಲಿಸಲು ಹೋದರೆ ಮಾನವಿ ಜೀವನವು ರೋಗ ಗ್ರಸ್ತವಾಗುವದು. ಮನುಷ್ಯನು ಮಾಡಿದ ಸಮಾಜರಚನೆಯ ನಿಯಮಭಂಗ ಒಂದು ಮಾದರಿ ತಪ್ಪು. .ಇದು ಆ ನಿಯಮ ಗಳ ಜ್ಞಾನದಿಂದ ತಿದ್ದಲು ಸಾಧ್ಯವಾಗುವದು. ಒಂದು ಮಾದರಿ ತಪ್ಪು ಎರಡನೇ ಮಾದರಿ ತಪ್ಪಿನಲ್ಲಿ ಬೆರಸುವದರಿಂದ ಬಹಳ ತೊಡಕುಂಟಾಗುವದು. ಹಸಿವೆಯಾದಾಗ ಕದ್ದು ತಿಂದ ಪಾಪಕ್ಕೆ ರೊಕ್ಕ ಕೊಡಬಾರದೆಂಬ ಉದ್ದೇಶದಿಂದ ರೊಕ್ಕವಿಲ್ಲೆಂದು ಸುಳ್ಳು ಹೇಳಿದ ಪಾಪಕ್ಕೆ ಬಹಳ ವ್ಯತ್ಯಾಸವುಂಟು. ಯಾರುಮಾಡದಿದ್ದ ಅಂಥಾ ತಪ್ಪಾದರೂನನ್ನಿಂದಾಗಿರುವದು. ಇದೆಲ್ಲ ಚಾಚಾ ಇವರಿಗೆ ತಿಳಿದರೆ ನಾಳೆ ಅವರು ಯಾವ ಶಿಕ್ಷೆ ಕೊಡುವರು ಅಥವಾ ಸಮಾಧಾನ ಹೇಳುವರು. ಇವೆ ಮೊದಲಾದ ವಿಚಾರಗಳಿಂದ ತಲೆ ಬೇಸರಾಗಿ ಸೃಷ್ಟಿ ದೇವಿಯು ನಿದ್ರಾಸ್ತ್ರಬಿಟ್ಟದ್ದರಿಂದ ಗಾಢನಿದ್ರೆಯೂ ಹತ್ತಿತು ಯಾವಾಗ ಎಚ್ಚರಾದೆನು ತಿಳಿಯಲಿ ಇಲ್ಲ.

(ಮುಂದುವರಿಯುವದು)

## ಕಾಮದಹನ

ಮೂಡಲದ ಮನೆಗೇರಿತ್ತು ಆ ದಿವ್ಯ ಬೆಳಕು
ಬೆಡಗಿನಲಿ ನಡೆದಿತ್ತು ಹೊಡೆದಾಟ
ಕಡುಕಾವಿನ ಉರಿಯನು ಕಾರುತ್ತಿತ್ತು ಘನಬೆಳಕು
ಬಡಬಡನೆ ಓಡಿತ್ತು ಓಕುಳಿಯಾಟ ॥೧॥

ಕತ್ತೆಯನೇರಿದ್ದರು ಹತ್ತಾರು ಜನರು ಜನರಾಗ
ಧಿತ್ತೆಂದು ಧುಃಮುರಿತ್ತು ಧೂಮ್ರಬಂಣ
ನೆತ್ತಿಯಲಿ ಹತ್ತಾರು ಕುಳ್ಳುಕಟ್ಟಿಗೆಗಳಾಗ
ಸುತ್ತಿ ಮತ್ತೆ ಗುಂಪಿಗೇರಿ ಎಳೆದಿತ್ತು ॥೨॥

ಉರಿಯದೊಂದು ನಾಲಿಗೆ ಚಾಚಿ ಬಂದಿತು ಗುಂಪಿಗೆ
ಧರೆಗೆಲ್ಲ ಕಾರಿತು ಹೊಗೆಯು ಬೇಗೆಯನಲ್ಲಿ,
ಗರುವದಿ ಕುಳಿತ ಕಾಮರತಿಗಳಿಗೆ ಉರಿಬೀಸಿತು ಕೆಂಪಿಗೆ.
ತೊರೆಯ ತೆರದಿ, ಉರಿಸುತ್ತಿತ್ತು ಅವರನಲ್ಲಿ ॥೩॥

ಅಲ್ಲಿಯವರೆಗೆ ಚಲ್ಲಾಟದ ನಲ್ಮೆಯಲೆ ಮೆರೆದ ಕಾಮ
ಶಿವನುರಿಗಣ್ಣ ಗುರುತಿಗಾ ಬೆಂಕಿ
ಚಲ್ಲಾಟದ ರಕುತದೋಕುಳಿ, ಉರಿಭೀಮ
ನಟನಂತೆ ಬಿಗಿದು ಬೆಂಕಿಯನು ತೆರದಿ ಲಂಕಿ ॥೪॥

ಶಿವನ ಕಾರುಣ್ಯವು ಕಳೆಯದೆ ಉಳಿಯಿತು, ಅಳಿಯಿತು
ಅನೇಕಾಸೆಗಳು ದೇವತೆಗಳಿಂದಾಗ
ದೇವಿಯು ತಾನುಣ್ಯವು ಬೆಳೆಯುತುಳಿದು, ಅಳಿಯಿತು
ಅನೇಕಾಸೆಗಳು ಆಕೆಯಿಂದಾಗ ॥೫॥

—ಎಸ್. ಎಮ್. ಜಾಡರ ಮಾಡಳ್ಳಿ

# ಕರೆನಾಡಿನ ಸುವ್ವಾಲೆ ಹಾಡುಗಳು

ಕನ್ನಡದ ಭಾಷಾ ಸಮುದ್ರವು ಬಹು ಮುಖವಾದ ಸಾಹಿತ್ಯ ನದಿಗಳಿಂದ ಕೂಡಿಕೊಂಡಿದೆ. ಗದ್ಯಮಯವಾಗಿಯೂ, ಪದ್ಯಮಯವಾಗಿಯೂ, ಮಿಶ್ರರೂಪವಾಗಿಯೂ ವಿಶಾಲ ವಿಸ್ತೀರ್ಣವೆನಿಸಿದ ಈ ಸಾಹಿತ್ಯವು ಜಾನಪದ ಮತ್ತು ಅಜಾನ ಪದಗಳೆಂಬ ವಿಭೇದತೆಯಿಂದ ಆರಂಭವಾಗಿ, ಹಲವು ರೀತಿಯ ವೈವಿಧ್ಯಗಳನ್ನೊಳಗೊಂಡು, ಕನ್ನಡಮ್ಮನನ್ನು ಸರ್ವಾಂಗ ಸುಂದರವಾಗಿ ಶೋಭಿಸುವಂತೆ ಮಾಡಿದೆ. ಅವುಗಳಲ್ಲಿ ಸುವ್ವಾಲೆ ಹಾಡುಗಳು, ಓ ಬೇಲೆ ಹಾಡುಗಳು ಬಯಲಾಟದ ಹಾಡುಗಳು ಮುಂತಾದವುಗಳೇ ಇಡೀ ಜಾನಪದ ಸಾಹಿತ್ಯದ ಜೀವಾಳಗಳಾಗಿವೆ.

ಸುವ್ವಾಲೆ ಹಾಡುಗಳು ನಮ್ಮ ಆ ರಾಶೀಯ ಸಂಸ್ಕೃತಿಯ ಮಂಗಳಮಯ ವಾತಾವರಣದ ಪ್ರತೀಕವಾಗಿಯೇ ಶುಭಸಂದರ್ಭಗಳಲ್ಲಿ ಇಂತಹ ಹಾಡುಗಳು ನಮ್ಮ ನಾಡಿನ ಮುತ್ತೈದೆಯರ ಮಧುರ ಕಂಠದಿಂದ ಹಾಡಿ ಹರಿದ ಸುಂದರ ಸಾಹಿತ್ಯಧಾರೆಗಳೆನಿಸುತ್ತವೆ.

ಹೃದಯದ ರಂಗ ಭೂಮಿಯಲ್ಲಿ, ಆನಂದ-ಉತ್ಸವಗಳ ಮಧುರನಾಟ್ಯ ನಡೆದಾಗ, ಭಾವಾವೇಶದಿಂದ ತಾನೇ ತಾನಾಗಿ-ಗಾನಾವ್ಯೈಕವಾಹಿನಿ, ಅಲೆಯಲೆಯಾಗಿ ಹೊರಹೊಮ್ಮುತ್ತದೆ. ಆ ಅಲೆಯಲೆಗಳ ಗಂಭೀರ ಸಾಗರದಲ್ಲಿ ಮುಳುಗಿ ಮಿಂದು ಮಡಿಯಾದರೆ ಆ ಆನಂದ, ಆ ಉತ್ಸವಗಳ ಬಗ್ಗೆ ಸಹೃದಯರು ಕಂಡುಕೊಂಡ ಉದ್ದೇಶ ಯಶಸ್ವಿಯಾಗುತ್ತದೆ ಅಂತೆಯೇ ನಮ್ಮ ವೈದಿಕ ಲೌಕಿಕ ಸಂಸ್ಕೃತಿಗಳಲ್ಲಿ ಹೆಚ್ಚಾಗಿ ಮಂಗಳಮಯ ಸನ್ನಿವೇಶಗಳಲ್ಲಿ, ನಾಡಿನ ಹದಿಬದೆಯರು ಈ ರೀತಿಯ 'ಸುವ್ವಿಯಾಲೆ' ಹಾಡುಗಳನ್ನು ಹಾಡುವುದು ರೂಢಿಯಾಗಿದೆ. ಆದರೆ ಈಗಿನ ಸುಧಾರಿತ ವಾತಾವರಣದಲ್ಲಿ ಆ ತೆರನಾದ ಹಿಂದಿನ ಪರಂಪರೆಯ ಸಂಸ್ಕೃತಿಯ ಸ್ವರೂಪಗಳೇ ಮೆಲ್ಲ ಮೆಲ್ಲನೆ ಮಾಯವಾಗಲಾರಂಭಿಸಿವೆ. ಶಾಸ್ತ್ರೀಯ ಸಂಗೀತವು ಪ್ರಚಾರಕ್ಕೆ ಬಂದಾಗ, ಆ ಕಲಾವೈಭವದ ಎದುರು ಸಂಕೋಚಪಟ್ಟು, ಸಾಂಪ್ರದಾಯಿಕವಾಗಿ ಬಂದ ತಮ್ಮ ಜಾನಪದ ಸಂಸ್ಕೃತಿಯ ಹಳೆಯ ಹಾಡುಗಳನ್ನು ಅಡಗಿಸುವ ಪ್ರಯತ್ನ ಎಲ್ಲೆಲ್ಲೂ ನಡೆದಿದೆ. ಸದ್ಯ ನಮ್ಮ ಸಂಶೋಧನೆಗೆ ಸಿಕ್ಕಿದ ಅಂತಹ ಕೆಲವು ಹಾಡುಗಳನ್ನು ನಾವಿಲ್ಲಿ ಹಾಡಿತೋರಿಸಲಿದ್ದೇವೆ. ಮೊದಲನೆಯದಾಗಿ 'ಮನೆ ತುಂಬಿಸುವ ಹಾಡು' ಶ್ರಾವಣ ಮಾಸದಲ್ಲಿ ತುಂಬಿದ ಭತ್ತದ ತೆನೆಯನ್ನು ತಂದು 'ಬಾರವ್ವ ಮಹಾಲಕ್ಷ್ಮಿ ಮನೆಯೊಳಗೆ ನೆಲೆಸವ್ವ' ಎಂದು ಪ್ರಾರ್ಥಿಸಿ, ಒಂದು ಬಿತ್ತಿಗೆ ನೂರು ಬೆಳೆಬೆಳೆಯಲಿ' ಎಂಬ ಭಾರತೀಯ ರೈತರ ಉದಾರ ಹಾರೈಕೆಯೊಂದಿಗೆ ಮನೆಯೆಲ್ಲಾ ತೆನೆತುಂಬುವ ಈ ಸಂಪ್ರದಾಯ ಕೆಲವೆಡೆ ರೂಢವಾಗಿ ಬಂದಂತಿದೆ.

**ಮನೆ ತುಂಬಿಸುವ ಹಾಡು:—**

ಮೂಡಲಾಗಿರಿಯಿಂದ ಮುಗಿಲೆದ್ದು ಮುನ್ನೂರು
ಹನಿ ಬಿತ್ತು ನಮ್ಮಾ ಅಣ್ಣಯ್ಯನ ।
ಹೊಗೆಬಿತ್ತಣ್ಣಯ್ಯನ ಒಂದು ಬಿತ್ತಿಗೆ ನೂರು
ಬೆಳೆಯಲಿ ॥೧॥

ಹೋಗುವಾಗ ಕುಕ್ಕೆಯಲಿ ಬರುವಾಗ ದಂಡಿಗೆಯಲಿ ।
ಎಲ್ಲಾ ಧಾನ್ಯಗಳ ಹಿರಿಯವಳು ।
ಹಿರಿಯವಳು ಮಾಲಕ್ಷ್ಮೀ ಒಲಿದು ಬಾ ನಮ್ಮ ಮನೇ
ತುಂಬ ॥೨॥

ಮಹಲಕ್ಷ್ಮಿ ಬರುವಾಗ ದಾರಿಯಲಿ ನಾನಿದ್ದೆ
ಬಟ್ಟಲಲಿ ಮುತ್ತು ಹಿಡೀಶೀದ್ದೆ ।
ಹಿಡೀಶಿದ್ದೆ ಮಹಾಲಕ್ಷ್ಮೀ ಒಲಿದು ಬಾ ನಮ್ಮ
ಮನೇ ತುಂಬ ॥೩॥

ಬೊಟ್ಟೆಟ್ಟು ಒಳಗಿಂದ ಬಾರವ್ವ ಮಹಲಕ್ಷ್ಮಿ
ಗಟ್ಟ್ಯಾಗಿ ಒಳಗೆ ನೆಲೆಸವ್ವ ।
ನೆಲೆಸವ್ವ ಮಹಾಲಕ್ಷ್ಮಿ ಕುಂಕುಮದಾರತೀಯಾ
ಬೆಳಗೀರೆ ॥೪॥

ಚಿನ್ನದ ತಟ್ಟೆಗೆ ಬಣ್ಣದ ನೆನೆ ಹಾಕಿ
ಉಣ್ಣೆಯನೆರೆದೂ ಜಗಂಜ್ಯೋತಿ ।
ಜಗಂಜ್ಯೋತಿ ಹೊತ್ತಿಸಿ ಮಂಗಳಾರತಿಯಾ
ಬೆಳಗೀರೆ ॥೫॥

ದಾಂಪತ್ಯ ಜೀವನದ ಪೂರ್ವದಲ್ಲಿ ಪ್ರತಿಯೊಬ್ಬ ವಯಸ್ಕನೂ ತನ್ನ ಹೃದಯದ ಪರಿಶುದ್ಧತೆಗಾಗಿ, ಸಂಸ್ಕಾರದ ಮೂಸೆಯಲ್ಲಿ ಸಂಯಮದ ಬುದ್ಧಿವಂತಿಕೆಯನ್ನು ಸಶಕ್ತವನ್ನಾಗಿ ಮಾಡಲು ಬ್ರಹ್ಮಚರ್ಯದ ಬಾಳನ್ನು ಕೆಲವು ಕಾಲವಾದರೂ ಅನುಷ್ಠಿಸಬೇಕಾಗುತ್ತದೆ ಎಂಬುದು ನಮ್ಮ ಪ್ರಾಚೀನ ವಿಜ್ಞಾನಿಗಳ ಅನುಭವ ಅಥವಾ ಶಾಸನವೆಂದರೂ ಸರಿಯೆ. ಅದೇ ಅರ್ಥವನ್ನು ಪುಷ್ಟೀಕರಿಸುವ 'ಮದುವೆಯಾಗುವತನಕ ಸಂಯಮವ ನಡೆಸಿಕೋ, ಎಂಬ ಭಾವವನ್ನು ಬೋಧಿಸುವ ಈ ಹಾಡನ್ನು ಕೇಳಿರಿ.

**"ಬ್ರಹ್ಮಚಾರಿಯಾಗಿರು ನೀನು"**

ಆನೆಯನೇರದಿರು ಪಗಡೇಯ ಆಡದಿರು ।
ಚಾಂಡಾಳರ ಕೂಡೆ ನುಡಿಯದಿರು ।
ನುಡಿಯದಿರು ಅಣ್ಣಯ್ಯ ಒಂದು ವರುಷಕ್ಕೆ
ವ್ರತದೀರೊ ॥೧॥

ಕುದುರೆಯ ನೇರದಿರೊ ಚದುರಂಗ ಆಡದಿರೊ
ರಂಭೆಯರ ಕೂಡೆ ನುಡಿಯದಿರೊ
ನುಡಿಯದಿರೊ ಅಣ್ಣಯ್ಯ ಒಂದೂ ವರುಷಕ್ಕೆ
ವ್ರತದೀರೊ ॥೨॥

ಯತಿಪತಿಗಳ ವ್ರತವನ್ನು ಪ್ರತಿನಿತ್ಯವು ನಡೆಸಿಕೊ
ಉಂಡಿಗೆ ಮಾವ-ಮದುವೆಯಾ
ಮದುವೆ ಮಾಡುವತನಕ ಅಂದಿಗೂ ವ್ರತವಾ
ಸಲಿಸಿಕೋ ॥೩॥

ಮಂಗಳಮಯವಾದ ಜೀವನವನ್ನು ಹಾರೈಸುವವರು ಕೆಲವೊಂದು ಶುಭಾಭಿಲಾಷೆಯ ಉತ್ಸವದ ಸನ್ನಿವೇಶದಲ್ಲಿ ಮಂಗಲ ಸ್ನಾನವನ್ನು ಮಾಡುವುದು ಭಾರತೀಯ ಸಂಪ್ರದಾಯದ ಇನ್ನೊಂದು ರೂಢಿ. ಆ ಸನ್ನಿವೇಶವನ್ನು ಚಿತ್ರಿಸುತ್ತದೆ. ಈ ಹಾಡು—

**ಕಲಶಸ್ನಾನ:—**

ಅಂಬುಜೋದ್ಭವ ಮೊದಲಾದವರೆಲ್ಲ
ವಂದಿಪ ಗಣಪನ ಚರಣಕೆರಗುವೆನು ।
ಅಂಬುಜೋದ್ಭವನರ್ಧಾಂಗಿ ವಾಣಿಯನು ।
ವಂದಿಸಿ ಮನದಿ ಕೊಂಡಾಡುತ್ತ ವಿನಯದಿ
ಎಂಬಾ ದಯದಿಂದಾ ಕರುಣಿಸು ॥
ಮುತ್ತಿನೊಂಟಿಯ ತೆಗೆದಿರಿಸುತಲಂದು ।
ಮುತ್ತಿನ ಮಣಿಯ ಮೇಲಿರಬೇಕೆಂದು ।
ಮುತ್ತೈದೆಯರೆಲ್ಲ ನೆರೆದು ನಿಂತಿರಲು ।
ಮುತ್ತಿನ ಸರವನು ಧರಿಸಿದ ರಾಮಗೆ
ಮುತ್ತಿನ ಕಲಶೋದಕವಾ ಎರದಾರು ॥
ಭೇರಿ ದುಂದುಭಿ ಶಂಖವಾದ್ಯಕಹಳೆಗಳು ।
ಭೋರೆಂದು ಮೊಳಗುವ ನಾದ ಘೋಷಗಳು
ಭೂರಿಪರಾಕ್ರಮನತಿ ಬೇಗ ಬಂದು ।
ಧೀರ ಶಿಖಾಮಣಿ ರಾಮಗೆ ಹರುಹದಿ
ಪ್ರೇಮದಲಿ ತಂದೂ ಎರೆದಾರು ॥

ಪ್ರತಿಯೊಂದು ಮಂಗಲೋತ್ಸವದ ಕೊನೆಯಲ್ಲೂ ಹೆಚ್ಚಾಗಿ ಹಾಡುವ ಈ ಇನ್ನೊಂದು ಹಾಡಿದ ರೂಪವನ್ನು ಗುರುತಿಸಿರಿ

**ಪುಷ್ಪವೃಷ್ಟಿ:—**

ವಸುದೇವ ಸುತನಾಗಿ ಜನಿಸೀ ವಸುಧೆಯೊಳೂ
ವಸುಧೇಯ ಭಾರಾವ ನಿಳುಹ ಬೇಕೆನುತ ।
ವಸುದೇವ ದೇವಕಿಯುದರದಿ ಜನಿಸಿ ।
ಅಸುರ ಕಂಸನ ಗೆಲಲೆಂಬಂತೆ ಭರದಿ ।
ಮಥುರೆಯೊಳಗೆ ಬಲು ಚದುರನೆಂದೆನಿಸಿ ।
ನಂದಗೋಪಿಗೆ ಮಗನಾದ ಮುಕುಂದಗೆ
ಕರೆದಾರಂಬರದಿ ಹೂಮಳೆಯ ॥೧॥

ನಂದಗೋಪಿಯು ತನ್ನ ಕಂದಾನ ನೋಡಿ ।
ಒಂದೊಂದು ಮಹಿಮೆಗಳಾರು ಬಲ್ಲವರು
ಇಂದಿರೆಯರಸನಿ ಕೇಳೆನ್ನ ಮಾತ ।
ಮಂದಿರದೊಳಗೆಲ್ಲ ಸುಳಿದಾಡಬೇಡ ।
ಅಮ್ಮನ ಮಾತಿಗೆ ಗಮ್ಮನೆ ನಗುತ
ಚಿಣ್ಣರ ಕಂಡರೆ ಹಲ್ಲು ಬಿಡುತ
ಗೊಲ್ಲರ ಮನೆಪಾಲ್ ಮೊಸರನ್ನೆ ಕುಡಿಯುತ್ತ
ಮೆಲ್ಲನೆ ಸೀರಿಯೆ ಸೆಳದೋಡಿದ ಹರಿಗೆ
ಕರದಾರಂಬರದಿ ಹೂಮಳೆಯ ॥೨॥

ಗರ್ಭಿಣಿಯಾದ ಮಗಳನ್ನು ತೌರೂರಿಗೆ ಕರೆದುಕೊಂಡು ಹೋಗಿ, ಸನ್ಮಾನ ಮಾಡಿಸುವುದು, ಹೆಚ್ಚು ಕಡಿಮೆ ಎಲ್ಲಾ ಸಮಾಜದಲ್ಲಿಯೂ ರೂಢಿಯಾಗಿದೆ. ಎಲ್ಲಾ ಹೆಣ್ಣುಮಕ್ಕಳ ಮೊದಲ ಬಾಣಂತಿತನದ ಜವಾಬ್ದಾರಿಯು ತೌರೂರಿನವರಿಗೆ ಮೀಸಲೆಂದರೂ ಸರಿಯೆ. ಅಲ್ಲಿ ಆಗ ಬೇಕಾದ ಸನ್ಮಾನ ನಡೆಯುತ್ತದೆ. ಅಂತಹ ಒಂದು ಸನ್ನಿವೇಶದಲ್ಲಿ ಹಾಡುವ ಹಾಡು—ಇದು.

**ಗರ್ಭಿಣಿಗೆ ಸನ್ಮಾನದ ಊಟ ಹಾಕುವಾಗ:—**

ದ್ವಾರಕಾಪುರದೊಳು ನಾರಿ ರುಕ್ಮಿಣಿಗೆ ।
ಮಾರನು ಗರ್ಭದೊಳುದಿಸುತ್ತ ಬೆಳಗೆ
ಭೂರಿ ವೈದರ್ಭನು ತಿಳಿದು ಭಾಮಿನಿಗೆ ।
ವಾರಂತೆ ಕಳುಹಲು–ಬರುವ ಸಂಭ್ರಮವನು
ಯಾರೂ ಬಣ್ಣಿಸಾರೂ । ಜಗದೊಳು　　॥೧॥

ಮಂದ ಗಮನೆ ತನ್ನ ಮಗಳಿಗೆಂದೆನುತ ।
ಅಂದಣವೇರೀಸ್ವರ ಕೂಡಿ ಬರುತ ।
ಗಂಧ ಕುಂಕುಮ ಸಕಲ ಕೂಡಿಸುತ ।
ವಂದಿ ಮಾಗಧರು ಕೈವಾರಿಸುತಾಕ್ಷಣ ।
ಚಂದದಿ ದ್ವಾರಕಿಗೆ ನಡದಾರು　　॥೧॥

ಸಮ್ಮಾನವ ನಡೆಸುವ ಬಗೆಗಾಗಿ
ಒಮ್ಮನದಲಿ ಸನ್ನಾಹ ಹೊಸತಾಗಿ ।
ಗಮ್ಮನೆ ಕೂಡಿ ಕೊಂಡಾಡುತ ಪಾಡಿ ।
ಬ್ರಹ್ಮನಪಿತನರಸಿಗೆ ಮುದದಿಂದಲೆ
ನಿರ್ಮಲ ಚಿತ್ತದಲಿ ಬಡಿಸ್ಯಾರು　　॥೩॥

ಲೇ : ವೆಂಕಟರಾಜ ಪುಣಿಂಚತ್ತಾಯ, ನೆಕ್ರಾಜೆ
ಕಾಸರಗೋಡು

---

# ಬೇಲೂರಿನ ಶ್ರೀ ಚನ್ನಕೇಶವ ದೇವಾಲಯ

ಹೇಗೆ ಮರೆಯಲಿ ಶಿಲ್ಪಕಲೆಯ
ನೆಂತುಮರೆಯಲಿ ॥ಪ॥

ಮೊತ್ತ ಮೊದಲು ಸುತ್ತುಗಟ್ಟ
ಭಿತ್ತಿಯನ್ನು ಹೊತ್ತು ನಿಂತ
ಒಸ್ತು ಒಡವೆಗಳನು ಇಟ್ಟು
ಶಿಸ್ತಿನಿಂದ ನಿಂತ ಗಜವ　　॥೧॥

ಮಧ್ಯದಲ್ಲಿ ತಿದ್ದಿ ಕೊರೆದ
ಮುದ್ದು ಬರುವ ಮೂರ್ತಿಗಳನು
ಯುದ್ಧ ಸನ್ನಿವೇಶವನ್ನು
ಸಿದ್ಧಿಸಿರುವ ಶಿಲ್ಪಿಗನನು　　॥೨॥

ಮೇಲು ಬದಿಗೆ ಕೆತ್ತಿದಂಥ
ನೃತ್ಯಭಾವ ಚಿತ್ರವನ್ನು
ಚಿತ್ರವಿಟ್ಟು ನೋಡಲೆನ್ನ
ನೇತ್ರಕ್ಕಿಲ್ಲಿವೆನಿತು ದಣಿವು　　॥೩॥

ಕಾಲಗತಿಸಿ ಹೋದರೆನಿತು
ಮೂಲ ರೂಪಕಿಲ್ಲ ಕೊರತೆ
ಬಾಗಿಲಲ್ಲಿ ತೋರುತಿರುವ
ಚನ್ನಕೇಶವನ ನಾನು　　॥೪॥

ಶ್ರೀಮತಿ ಸುಶೀಲಾ ನಾವಣ್ಣವರ
ವ. ಟ್ರೇ. ಕಾ. ಧಾರವಾಡ

# ಭೂದಾನ ಯಜ್ಞ

ಲೇ : ಪಿ. ಎಮ್. ಕಾಮತ, ಕುಮಟಾ

ರಾಷ್ಟ್ರಪಿತಾಮಹ ಮಹಾತ್ಮಾ ಗಾಂಧಿಯವರ ನಂತರ ಅಷ್ಟೇ ಮಹತ್ವ ವ್ಯಕ್ತಿಯು ಭೂಧಾನಯಜ್ಞ ಪಿತಾಮಹರು ಆದ ವಿನೋಬಾ ಭಾವೆಯವರ ಹೆಸರನ್ನು ಕೇಳದ ಭಾರತೀಯ ನಿಲ್ಲ. ಮಹಾತ್ಮಾಜಿಯು ಹಾಕಿಕೊಟ್ಟ ದಾರಿಯಲ್ಲಿಯೇ ನಡೆದು ಅವರಷ್ಟೇ ವ್ಯಕ್ತಿತ್ವವನ್ನು ಗಳಿಸಿ ಜಗದ್ವಂದ್ಯ ವ್ಯಕ್ತಿಯಾದವ ರಲ್ಲಿ ಇವರ ಹೆಸರನ್ನು ಅಲ್ಲಗಳೆದರೆ ಬರುವ ಪಾಪ ಮತ್ಯಾವದ ರಿಂದಲೂ ಬಾರದು.

ನಮ್ಮ ದೇಶವು ಹಳ್ಳಿಯ ಮಿಲನದಿಂದಾಗಿದೆ. ಅನೇಕರು ಹಳ್ಳಿಯಲ್ಲಿಯೇ ವಾಸಿಸುತ್ತಿರುವದು ಭಾರತದಲ್ಲಿಯೇ ಆಗಿದೆ. ಹಳ್ಳಿಯಲ್ಲಿ ವಾಸಿಸುವವರಲ್ಲಿ ಅನೇಕರು ಬಡವರೇ ಆಗಿದ್ದಾರೆ. ಬಡವರ ಬಂಧುವಾಗಿ ವಿನೋಬಾಜಿಯವರು ಇಂದು ಭಾರತದ ಮೂಲೆ ಮೂಲೆಯನ್ನು ಸಂಚರಿಸಿ ಬಡವರ ಹಿತಕ್ಕೋಸ್ಕರ ಭೂಮಾತೆಯ ದಾನವನ್ನು ಕೇಳಿ ಸಾವಿರ ಗಟ್ಟಿಲೆ ಎಕರೆ ಭೂಮಿಯನ್ನು ಸಂಗ್ರಹಿಸಿದ್ದು ಯಾರಿಗೆ ತಾನೆ ಗೊತ್ತಿಲ್ಲದ ಸಂಗತಿ? ಭಾವೆಯವರು ಕೇವಲ ಭೂಮಿಯನ್ನೇ ದಾನಕೇಳುತ್ತಿಲ್ಲ ಹಳ್ಳಿಹಳ್ಳಿಗಳನ್ನೇ ದಾನವಾಗಿ ಕೇಳುತ್ತಿದ್ದಾರೆ. ಅನೇಕ ಹಳ್ಳಿಗಳು ದಾನವಾಗಿ ದೊರಕಿಸಿ ಹಳ್ಳಿಗರ ಉದ್ಧಾರ ಗೈಯುತ್ತಿದ್ದಾರೆ. ದೊರಕಿಸಿದ ಭೂಮಿಯನ್ನು ಸದ್ವಿನಿಯೋಗ ಮಾಡುವದೇ ಅವರ ಉದ್ದೇಶ! ಅದಕ್ಕಾಗಿ ಈ ಕಾರ್ಯವನ್ನು ಟೊಂಕಕಟ್ಟಿ ಮಾಡುತ್ತಿದ್ದಾರೆ. ಜನತೆಯನ್ನು ಟೊಂಕಕಟ್ಟಲು ಹುರಿದುಂಬಿಸುತ್ತಿದ್ದಾರೆ

ಭೂದಾನವೆಂಬ ಮಹಾಯಜ್ಞವನ್ನೇ ಆರಂಭಿಸಿ ಜನತೆಗೆ ಯಜ್ಞಕಾರ್ಯದಲ್ಲಿ ಸಹಕರಿಸುವದಕ್ಕೋಸ್ಕರ ಕರೆಯುತ್ತಿರುವದು ಭಾರತೀಯರಾದ ನಮ್ಮೆಲ್ಲರಿಗೂ ವಿದಿತವಾದ ವಿಷಯವೇ ಆಗಿದೆ ಎಂಥಮಹಾಕಾರ್ಯ!! ಭಾರತದ ಅನೇಕ ಜನತೆ ಅನ್ನ ಬಟ್ಟೆಗಾಗಿ ಬಳಲುತ್ತಿದ್ದಾಗ; ಅಂಥವರ ಸುಖ ಸಾಧನೆಗಾಗಿ ಟೊಂಕಕಟ್ಟಿ ಸಿರಿವಂತರಿಂದ, ದಾನಿಗಳಿಂದ, ಭೂಮಿಯನ್ನು ದಾನವಾಗಿ ಪಡೆದು ಯೋಗ್ಯರಾದವರಿಗೆ ಹಂಚಿಕೊಡುತ್ತಿರುವ ವಿನೋಬಾಜಿಯ ಸದ್ಗುಣವನ್ನು ಎಷ್ಟೆಂದು ವರ್ಣಿಸೋಣ?

ದಾನವಾಗಿಪಡೆದ ಹಳ್ಳಿಯನ್ನು ಅಲ್ಲಿಯೇವಾಸಿಸುವಬಡ ಬಗ್ಗರಿಗೆ ಆ ಎಲ್ಲ ಭೂಮಿಯನ್ನು ದಾನ ಮಾಡಿ ಅಲ್ಲಿ ಬೆಳೆಯುವ ಪೈರು, ಆಗುವ ಉತ್ಪನ್ನ ಎಲ್ಲವನ್ನು ಹಳ್ಳಿಗರಿಗೇ ಬಿಟ್ಟು ಆ ಗ್ರಾಮದ ಆಡಳಿತ ಅವರೇ ನಿರ್ವಹಿಸುವಂತೆ ವ್ಯವಸ್ಥೆ ಮಾಡಲಾಗುವದು. ದಾನವಾಗಿ ಪಡೆದ ರೈತರು ತಮ್ಮ ಭೂಮಿಯಲ್ಲಿ ದುಡಿದು ಕಾಳು ಗಳನ್ನು ಬೆಳೆಯಿಸಿ ತಮ್ಮೂರ ನಿವಾಸಿಗಳಿಗೆ ಒದಗಿಸಬೇಕು. ಅನೇಕ ಪದಾರ್ಥಗಳು ಆ ಊರಲ್ಲಿ ದೊರಕದಿರಬಹುದು. ಆಗ ತಮ್ಮೂರಲ್ಲಿ ಬೆಳೆಯುವ ಕಾಳು ಕಡಿಗಳನ್ನು ನೆರೆ ಊರಿಗೆ ಕೊಟ್ಟು, ತಮಗೆ ಬೇಕಾದವುಗಳನ್ನು ನೆರೆ ಊರಿನಿಂದ ಪಡೆಯಬೇಕು. ಹೇಗೆಂದರೆ ನಾವು ನಮ್ಮಲ್ಲಿ ಸಿಗುವ ಮಸಾಲೆ ಸಾಮಾನು, ಚರ್ಮ, ಕಚ್ಚಾ ಸರಕುಗಳನೇಕ ವನ್ನು ಪರದೇಶಗಳಿಗೆ ನಿರ್ಯಾತ ಮಾಡಿ ಯಾಂತ್ರಿಕ ಸಾಮಾನುಗಳನ್ನು ತರಿಸುವದಿಲ್ಲವೆ? ಎಲ್ಲವನ್ನು ನಮ್ಮಲ್ಲಿಯೇ ತಯಾರಿಸುವದು ಅಸಾಧ್ಯ! ಆದ್ದರಿಂದ ನಮ್ಮೂರಿನ ಧನಲಕ್ಷ್ಮಿಯನ್ನು ಪರರಿಗೆ ಒಪ್ಪಿಸದೇ ಉಪಯುಕ್ತವಾದ ಜೀನಸುಗಳನ್ನು ಕೊಟ್ಟು ಅವರಿಂದ ಉಪಯುಕ್ತವಾದವುದಳನ್ನು ಪಡೆಯಬಹುದಲ್ಲ! ಅದರಂತೆ ಇತರೆ ಎಲ್ಲ ವಿಷಯಗಳಲ್ಲಿಯೂ ಊರವರದೇ ಕಾರಭಾರವೇ ಮುಖ್ಯವಾದದ್ದು. ನ್ಯಾಯಕ್ಕಾಗಿ ಕೋರ್ಟು ಕಟ್ಟೆಯನ್ನು ಹತ್ತಬೇಕಿಲ್ಲ. ನಮ್ಮ ಹಳ್ಳಿಗಳಲ್ಲಿ ಉದ್ಭವಿಸಿದ ನ್ಯಾಯವನ್ನು ಊರವರೇ ಬಗೆಹರಿಸಿದರೆ ಚೆನ್ನ! ಅದಕ್ಕಾಗಿ ಊರವರದೇ ನ್ಯಾಯಕಮಿಟಿ ಇಟ್ಟು ಅದರಿಂದ ಊರಲ್ಲಿ ಆಗುವ ಚಿಕ್ಕಪುಟ್ಟ ನ್ಯಾಯಗಳನ್ನು ಬಗೆಹರಿಸಲು ಸುಲಭವಾಗುವದು. ಯಾರೂ ಯಾರಿಗಾಗಿಯೂ ಇಲ್ಲ. ಆದರೆ ಹಳ್ಳಿಯವರು ಮಾತ್ರ ಎಂದಿಗೂ ಹಾಗೆ ಎಣಿಸರು! ತಮ್ಮ ಉದ್ಧಾರದೊಡನೆ ಪರರ ಹಿತಚಿಂತನೆಯನ್ನು ಮಾಡಿಯೇ ಮಾಡುತ್ತಾರೆ. ನಿಜವಾಗಿಯೂ ಹಳ್ಳಿಗರಲ್ಲಿರುವ ಸಹೃದಯ ಪ್ರೇಮ ಪಟ್ಟಣಿಗರಲ್ಲಿ ವಿರಳವಾಗಿ ದೊರಕುವದು. ಕೇವಲ ತೋರಿಕೆಯ ಭಯ ಭೀತಿ, ಪ್ರೀತಿ ಎಲ್ಲವು ಸಿನೇಮಾಗಳಲ್ಲಿ ನಟಿಸುವಂತೆಯೇ ಇವೆ.

ಭೂದಾನದ ಉದ್ದೇಶ ವ್ಯಾಪ್ತಿ ಅದರ ಪ್ರಯೋಜನಗಳು ಈ ಪುಟ್ಟ ಲೇಖದಲ್ಲಿ ತಿಳಿಸಲು ಪ್ರಯತ್ನಪಟ್ಟಿದ್ದು ನಿರರ್ಥಕವಾಗದಿದ್ದರೆ; ನಾನು ವಿನೋಬಾ ಭಾವೆಯವರ ಸೇವೆಯಲ್ಲಿ ಶಿಲಾಂಶವನ್ನು ಸಲ್ಲಿಸಿದಂತಾಗುವದು.



# ಭೇರಿ !

( ಐತಿಹಾಸಿಕ ನಾಟಕ ) ಎರಡನೇ ಅಂಕು.

ಲೇ:—ರತ್ನಾ ಶಾಸ್ತ್ರಿ.

[ ಡಿಸೆಂಬರ ಸಂಚಿಕೆಯಿಂದ ಮುಂದುವರೆದದ್ದು. ]

ಕೃಷ್ಣಾಜಿಪಂತ— ಶ್ರದ್ಧೆ ವಿಶ್ವಾಸಗಳನ್ನು ತೋರಿಸುವ ಪ್ರಸಂಗ ಬಂದಾಗ ಅವರ ವಿಚಾರವನ್ನು ಮಾಡಲು ಬಂದೀತಂತೆ! ಈಗೇಕೆ ಅದರ ವಿಚಾರ?

ಬಾಬಾಸಾಹೇಬ—ಕೃಷ್ಣಾಜಿಪಂತ, ಅಂತಹ ಪ್ರಸಂಗ ಈಗ ಬಂದಿಲ್ಲವೆಂದು ನಿಮ್ಮ ಅಭಿಪ್ರಾಯವೆ?

ಕೃಷ್ಣಾಜಿಪಂತ—ಬಂದಿದೆ........ಬರಬಹುದು.

ರಾಮರಾಯ— ( ಕೋಪದಿಂದ ) ಕೃಷ್ಣಾಜಿಪಂತ, ಎಚ್ಚರಿಕೆ ವಹಿಸಿ ಮಾತಾಡಿರಿ! ನರಗುಂದದ ಸಿಂಹಾಸನದ ಏಕನಿಷ್ಠ ಸೇವಕರಲ್ಲಿ ನೀವೊಬ್ಬರೆಂಬುದನ್ನು ಮರೆಯಬೇಡಿರಿ! ಈ ರೀತಿಯ ಅಯೋಗ್ಯ ಮಾತುಗಳು ನಿಮ್ಮ ಮುಖದಿಂದಾದರೂ ಹೊರಡಬಾರದು!

ಕೃಷ್ಣಾಜಿಪಂತ— ಅಮಾತ್ಯರು ಕ್ಷಮಿಸಬೇಕು! ತುಂಬ ಎಚ್ಚರಿಕೆ ವಹಿಸಿಯೆ ಮಾತಾಡುತ್ತಿರುವೆನು. ತಾವುಗಳು ಈ ತೆರದಿ ಮಾತಾಡುವದು....ಸಮಂಜಸವಲ್ಲ!

ರಾಮರಾಯ—ಅಂದರೆ!

ಕೃಷ್ಣಾಜಿಪಂತ— ಅಮಾತ್ಯರೆ ಶಾಂತರೀತಿಯಿಂದ ಮಾತಾಡಿರಿ! ಒದರಿ ಮಾತಾಡಿ ಕೃತಕ ರಾಜನಿಷ್ಠೆಯ ಪ್ರದರ್ಶನವನ್ನು ಮಾಡಬೇಡಿರಿ! ಮಹಾರಾಜರು ಕೇಳುತ್ತಿರುವ ಪ್ರಶ್ನೆಗಳಿಗೆ ಕೊಡಬೇಕಾದ ಯೋಗ್ಯ ಉತ್ತರಗಳನ್ನು ನಾನು ಕೊಡುತ್ತಿದ್ದೇನೆ. ನಡುವೆ ಮಾತಾಡಿ, ಸುಮ್ಮನೆ ಹಣ್ಣಾದ ಜೀವಕ್ಕೆ ತೊಂದರೆಯನ್ನು ಕೊಡುತ್ತಿದ್ದೀರಿ!

ರಾಮರಾಯ—ಕೃಷ್ಣಾಜಿಪಂತ. ನಿಮ್ಮ ಮಾತು ಸಾವಿರ ಸಲಕ್ಕೂ ಸತ್ಯವಿದೆ. ಶತ್ರುಗಳು ಮನೆಯಲ್ಲಿಯೆ ಬೀಡುಬಿಟ್ಟಿರುವದರಿಂದ ಹಾಗೆ ಮಾತಾಡುವದು ಕ್ರಮಪ್ರಾಪ್ತವಾಗಿರುವದು. ನರಗುಂದದ ದೊರೆಗಳ ಅನ್ನವನ್ನು ನಾನೊಬ್ಬನೆ ತಿಂದಿಲ್ಲ! ನಾನೊಬ್ಬನೆ ಈ ಗದ್ದುಗೆಯ ಸೇವೆಯನ್ನು ಮಾಡಿಲ್ಲ. ನಿಮ್ಮೆಲ್ಲರ ಜೊತೆಗೆ ನಾನೊಬ್ಬನಿದ್ದೇನೆಂಬುದನ್ನು ಮರೆಯಬೇಡಿರಿ!

ಬಾಬಾಸಾಹೇಬ—ಹೀಗೆ ಮಾತಾಡಿ ನಿಮಗೆ ಯಾವ ನಿಷ್ಕರ್ಷವನ್ನು ಮಾಡುವದಿದೆ ಕೃಷ್ಣಾಜಿಪಂತ? ನರಗುಂದದ ಸಿಂಹಾಸನಕ್ಕಾಗಿ ಹಲುಬಿ ಹಣ್ಣಾದ ಜೀವಕ್ಕೆ ಮತ್ತಿಷ್ಟು ತೊಂದರೆಯನ್ನು ಕೊಡಬೇಡಿರಿ! ಪ್ರಕೃತ ನೀವು ನರಗುಂದದ ಸಿಂಹಾಸನದ ಎದುರಿನಲ್ಲಿ ನಿಂತು ಮಾತಾಡುತ್ತಿರುವಿರೆಂಬುದನ್ನು ಲಕ್ಷದಲ್ಲಿಡಿರಿ.

ಕೃಷ್ಣಾಜಿಪಂತ—ಮಹಾರಾಜರ ಮಾತುಗಳು ಸ್ವಲ್ಪ ವಿಚಿತ್ರವಾಗಿ ತೋರುವವು.

ಬಾಬಾಸಾಹೇಬ—ಮಾತಷ್ಟೇ ಅಲ್ಲ-ಕೃತಿಯೂ ವಿಚಿತ್ರವಾಗಿ ತೋರಬಹುದು.

ರಾಮರಾಯ—ಮಹಾರಾಜ....ಮಹಾರಾಜ....ಸುಮ್ಮನೆ ಕುಳಿತುಕೊಳ್ಳಿರಿ! ಏನೊಂದನ್ನೂ ಮಾತಾಡಬೇಡಿರಿ!

ಬಾಬಾಸಾಹೇಬ—ಮಾತಾಡುವ ಪ್ರಸಂಗ ಬಂದರೆ ಮಾತಾಡಿ ಬಿಡುತ್ತೇನೆ—ನರಗುಂದದಲ್ಲಿಯ ದ್ರೋಹಿಗಳಿಗೆ ಎಚ್ಚರಿಕೆಯನ್ನು ಕೊಟ್ಟಂತಾದರೂ ಆದೀತು! ಕೃಷ್ಣಾಜಿಪಂತ ನಾವು ತೀರ ಎಚ್ಚರಿಕೆ ವಹಿಸಿ ನಡೆಯಬೇಕಾಗಿರುವದು.

ಕೃಷ್ಣಾಜಿಪಂತ—ಯಾವ ವಿಷಯದಲ್ಲಿ ಮಹಾರಾಜ—?

ಬಾಬಾಸಾಹೇಬ—ಯಾವ ವಿಷಯದಲ್ಲಿ ಅಂದರೆ—ನರಗುಂದದ ರಾಜ್ಯದ ವಿಷಯದಲ್ಲಿ—ತಾವು ಎಚ್ಚರಿಕೆ ವಹಿಸಬೇಕು ಕೃಷ್ಣಾಜಿಪಂತ! ದ್ರೋಹಿಗಳ ತಂಡಗಳ ಮಧ್ಯದಲ್ಲಿ ನಾವಿದ್ದೇವೆಂಬುದನ್ನು ಮರೆಯಬೇಡಿರಿ! ತೆಗೆದುಕೊಳ್ಳುವ ಉಸಿರು

ಇಡುವ ಹೆಜ್ಜೆ, ನೋಡುವ ದೃಷ್ಟಿ ಮತ್ತು ಆಡುವ ಆಟಗಳಲ್ಲಿ ತುಂಬ ಜಾಗರೂಕತನವನ್ನು ನೀವು ವಹಿಸಬೇಕು.

ಕೃಷ್ಣಾಜಿಪಂತ—ಬೇಡವೆಂದು ಯಾರು ಅನ್ನುತ್ತಾರೆ—! ಅವಶ್ಯವಾಗಿ ಎಚ್ಚರಿಕೆ ವಹಿಸಿ ವರ್ತಿಸೋಣ! ಆದರೆ ಮಹಾರಾಜರು ಈ ರೀತಿಯಾಗಿ ಮಾತಾಡುವ ಉದ್ದೇಶವು ಸೇವಕನಿಗೆ ತಿಳಿದರೆ ಒಳಿತೇ ಆದೀತು.

ರಾಮರಾಯ-ರಾಜಕಾರಣಪಟುಗಳು ಈ ರೀತಿ ಕೇಳುವದು ಆಶ್ಚರ್ಯದ ಸಂಗತಿ!

ಕೃಷ್ಣಾಜಿಪಂತ—ತಿಳಿಯದ್ದರಿಂದ ಕೇಳಿದೆ! ಪ್ರಮಾದವಾಗಲಿಲ್ಲವಷ್ಟೇ?

ಬಾಬಾಸಾಹೇಬ—ಕೃಷ್ಣಾಜಿಪಂತ, ನೀವು ನಮ್ಮಲ್ಲಿಗೆ ಬಂದಾಗ ಅಮಾತ್ಯರೆ ನಿಮ್ಮ ವಿಷಯದಲ್ಲಿ ಮಹಾರಾಜರು ಮುಂದೆ ಶಿಫಾರಸು ಮಾಡಿದ್ದರಿಂದ ನಿಮಗೆ ನಮ್ಮಲ್ಲಿ ನೌಕರಿ ದೊರೆಯಿತು. ದೊರೆತ ನೌಕರಿಯನ್ನು ಪ್ರಾಮಾಣಿಕತನದಿಂದ ಮಾಡಿಕೊಂಡು ಹೋಗುವದು-ಬಹಳ ಕಷ್ಟ! ಆದ್ದರಿಂದ ಅನ್ನುತ್ತೇನೆ....ನರಗುಂದದ ಸಿಂಹಾಸನ ನಿಮ್ಮದಿದೆ! ನೀವು ಅದನ್ನು ಸಂರಕ್ಷಿಸಬೇಕು!

ಕೃಷ್ಣಾಜಿಪಂತ—ಮಹಾರಾಜ, ನಮ್ಮ ಪರಿಯಿಂದ ಈ ನರಗುಂದದ ಸಿಂಹಾಸನಕ್ಕೆ ಏಕನಿಷ್ಠೆಯಿಂದ ಸೇವೆಸಲ್ಲಿಸುತ ಬಂದಿದ್ದೇನೆ. ಆದರೆ ಕೆಲವು ಮಹತ್ವಾಕಾಂಕ್ಷಿಗಳು ನಮ್ಮ ರಾಜ್ಯದಲ್ಲಿದ್ದುದರಿಂದ ಅವರ ಮಹತ್ವಾಕಾಂಕ್ಷೆಗೆ ನಮ್ಮ ನಿಷ್ಠೆಯು ಸೇವೆಯೂ ಬಲಿಯಾಗಬಾರದು.

ರಾಮರಾಯ—ಮಹತ್ವಾಕಾಂಕ್ಷಿಗಳ ಜೊತೆಗೆ ಸ್ವಾರ್ಥದಿಂದ ಹುಚ್ಚರಾದವರೂ ನಮ್ಮ ರಾಜ್ಯದಲ್ಲಿದ್ದಾರೆ. ಅವರ ಸ್ವಾರ್ಥದ ಕುಂಡದಲ್ಲಿ ನಮ್ಮ ಸೇವೆ ಆಹುತಿಯಾಗಬಾರದು.

ಕೃಷ್ಣಾಜಿಪಂತ—ಅಮಾತ್ಯರ ಮಾತು ಸಾವಿರ ಸಲಕ್ಕೂ ಸತ್ಯ ಮಹಾರಾಜ! ಇಂತಹ ದ್ರೋಹಿಗಳ ಬೆನ್ನು ತಟ್ಟಿಕೊಂಡು ನಿಂತವರು ರಾಜನಿಷ್ಠ ಸೇವಕರೆಂದು ಮಹಾರಾಜರ ಪ್ರೀತಿಗೆ ಪಾತ್ರರಾಗಿದ್ದಾರೆ! ಇಂಥವರಿಂದಲೂ ಮಹಾರಾಜರು ಎಚ್ಚರಿಕೆ ವಹಿಸಬೇಕು.

ರಾಮರಾಯ—ಮಹಾರಾಜರು ಇಂತಹ ದ್ರೋಹಿಗಳನ್ನು ಚೆನ್ನಾಗಿ ಬಲ್ಲರು ಕೃಷ್ಣಾಜಿಪಂತ! ನಮ್ಮ ರಾಜ್ಯದಲ್ಲಿಯ ಮಹತ್ವಾಕಾಂಕ್ಷಿಗಳು-ಸ್ವಕೀಯರ ದ್ರೋಹವನ್ನು ಬಗೆಯುತ್ತಿರುವರೆಂಬುದನ್ನೂ ಅರಿತವರಾಗಿದ್ದಾರೆ!

ಕೃಷ್ಣಾಜಿಪಂತ—ಮಹಾರಾಜರು ಅರಿಯರು! ಆದ್ದರಿಂದಲೆ ಅವರ ಎದುರಿನಲ್ಲಿ....ಸಂಕಟಗಳ ರಾಶಿ ಬಿದ್ದಿರುವದು! ಪುನರವಲೋಕನಮಾಡಿಕೊಂಡರೆ ಒಳಿತು!

ಬಾಬಾಸಾಹೇಬ—ಕೃಷ್ಣಾಜಿಪಂತ, ಏನು ಮಾಡಬೇಕೆಂಬುದು ನಮಗೆ ಸಂಪೂರ್ಣ ಗೊತ್ತಿದೆ. ಇಂದಿನ ನಿಮ್ಮ ಮಾತಿನ ಶೈಲಿಯೆ ಬದಲಾಗಿರುವದಲ್ಲ....? ನೀವು ಈಗ ಇರುವದೆಲ್ಲಿ? ಯಾರ ಎದುರಿನಲ್ಲಿ ಮಾತಾಡುತ್ತಿರುವಿರೆಂಬ ಎಚ್ಚರವಿದೆಯಲ್ಲವೆ?

ಕೃಷ್ಣಾಜಿಪಂತ—ಸಂಪೂರ್ಣವಾಗಿದೆ. ಪೂರ್ಣ ಎಚ್ಚರ ವಹಿಸಿಯೆ ಮಾತಾಡುತ್ತಿದ್ದೇನೆ.

ಬಾಬಾಸಾಹೇಬ—ಕೃಷ್ಣಾಜಿಪಂತ....ಜೋಕೆ!

ರಾಮರಾಯ—ಮಹಾರಾಜ......ಮಹಾರಾಜ ಸಾವಧಾನ! ಸಾವಧಾನ! ಕೋಪವನ್ನು ತಡೆದು ಹಿಡಿಯಿರಿ. ಇಲ್ಲದಿದ್ದರೆ ಎಲ್ಲವೂ ಬುಡಮೇಲು ಆದೀತು.

ಬಾಬಾಸಾಹೇಬ—ಆಗಲಿ! ಬುಡಮೇಲು ಆಗುವ ಕಾಲವನ್ನು ರಾಜ್ಯದಲ್ಲಿಯ ದ್ರೋಹಿಗಳು ತಂದೊಡ್ಡಿದ್ದಾರೆ. ಈಗ ಸಾವಧಾನ....ವ್ಯವಧಾನಗಳ ಪ್ರಯೋಜನವಿಲ್ಲ....? ಬಲಿದಾನವಾಗಬೇಕು! ಈ ನರಗುಂದದ ಗದ್ದುಗೆಗೆ ಸಹಸ್ರ ಸಹಸ್ರ ಜನರ ಬಲಿದಾನವಾಗಬೇಕು.

ರಾಮರಾಯ—ಕೃಷ್ಣಾಜಿಪಂತ ಕಾಲ ಅತಿ ಸೂಕ್ಷ್ಮವಾಗಿರುವದು. ನರಗುಂದದ ಸಿಂಹಾಸನ ಆಧಾರಸ್ತಂಭರು ನೀವು! ಸೇವೆಯನ್ನು ಸಲ್ಲಿಸುವಾಗ ಸ್ವಲ್ಪವೂ ಕಡಿಮೆಯಾಗಕೂಡದು.

ಕೃಷ್ಣಾಜಿಪಂತ—ನರಗುಂದದ ಸಿಂಹಾಸನವನ್ನು ಸಂರಕ್ಷಿಸುವ ನಮ್ಮ ಪಾಲನ್ನು ಯೋಗ್ಯ ರೀತಿಯಲ್ಲಿ ಕಾರ್ಯರೂಪದೊಳಗೆ ನಾವು ತರುತ್ತಿದ್ದೇವೆ. ರಾಜಕೀಯ ದೃಷ್ಟಿಯಿಂದ ನಮ್ಮ ಸ್ಥಾನಮಾನಗಳು ಬೇರೆಬೇರೆಯಾಗಿರಬಹುದು. ಆದರೆ ನಿಷ್ಠೆಯ ಎದುರಿನಲ್ಲಿ ನಾವೆಲ್ಲ ಒಂದು!

ಬಾಬಾಸಾಹೇಬ—ಇಲ್ಲವೆಂದು ಅಮಾತ್ಯರು ಹೇಳಿಲ್ಲ. ಇದಲ್ಲದೆ ನಿಷ್ಠೆಯ ಪರೀಕ್ಷೆಗೂ ಯಾರೂ ಹೊರಟಿಲ್ಲ. ನಿಷ್ಠೆಯ ಸ್ಥಳದಲ್ಲಿ ಯಾರಾದರೂ ದ್ರೋಹ ಬಗೆದರೆ ಬಗೆದ ದ್ರೋಹವು ಮಾತ್ರ ಸಿಂಹಾಸನದ ಎದುರಿನಲ್ಲಿ ಸಮವಾಗಲಾರದು! ಅಧಿಕಾರ ದೊಡ್ಡದಿದ್ದಂತೆ ಬಗೆಯುವ ದ್ರೋಹವೂ ದೊಡ್ಡದು! ಕೃಷ್ಣಾಜಿಪಂತ. ಅಂಥ ದ್ರೋಹಿಗಳ ಪಾಡು ನಿಮಗೆ ಗೊತ್ತೇ ಇರುವದು.

ರಾಮರಾಯ—ಮಹಾರಾಜರಿಗೆ ನನ್ನ ನಿಷ್ಠೆಯ ಬಗ್ಗೆ ಸಂಶಯವುಂಟಾದಂತೆ ತೋರುವುದು. ಇದೋ ನೋಡಿರಿ

( ಸಿಂಹಾಸನವನ್ನು ಮುಟ್ಟಿ ) ಪರಮ ಪವಿತ್ರವಾದ ಈ ಸಿಂಹಾಸನವನ್ನು ಮುಟ್ಟಿ ಹೇಳುತ್ತೇನೆ. ನರಗುಂದದ ರಾಜನ ವಿಷಯದಲ್ಲಿ ರಾಜ್ಯದ ವಿಷಯದಲ್ಲಿ ನಾನು ಯಾವುದೇ ದ್ರೋಹವನ್ನು ಮಾಡಲಿಕ್ಕಿಲ್ಲ....? ಈ ದೇಹದಲ್ಲಿ ಉಸಿರಿರುವ ವರೆಗೆ ಏಕನಿಷ್ಠೆಯಿಂದ ವರ್ತಿಸುತ್ತೇನೆ.

ಬಾಬಾಸಾಹೇಬ—ಕೃಷ್ಣಾಜಿಪಂತ, ಅಮಾತ್ಯರ ನಿಷ್ಠೆಯ ಬಗ್ಗೆ ಖಾತ್ರಿ ಆಯಿತಲ್ಲವೆ? ನೀವು ನಿಮ್ಮ ಬುದ್ಧಿಕೌಶಲ್ಯವನ್ನು ಉಪಯೋಗಿಸಿ ಅದರ ಪರೀಕ್ಷೆ ಮಾಡಿದಿರಿ. ಅಮಾತ್ಯರಂತೆ ನೀವು ಸಹ ತಿಂದ ಉಪ್ಪಿಗೆ, ಉಂಡ ಅನ್ನಕ್ಕೆ ಪ್ರಾಮಾಣಿಕರಾಗಿರಿಂದು ಸಿಂಹಾಸನವನ್ನು ಮುಟ್ಟಿ ಹೇಳಿರಿ.

ರಾಮರಾಯ—ಮುಂದಾಗಿ ಬನ್ನಿರಿ.... ಕೃಷ್ಣಾಜಿಪಂತ! ಹಿಂದಕ್ಕೆ ಸರಿಯಬೇಡಿರಿ

ಕೃಷ್ಣಾಜಿಪಂತ—( ಹಿಂದೆಮುಂದೆ ನೋಡುವನು )

ಬಾಬಾಸಾಹೇಬ—ಹಾಗೇಕೆ ಮಾಡುವಿರಿ ? ರಾಜನಿಷ್ಠೆಯನ್ನು ಜನರಿಗೆ ಕಲಿಸುವ ನೀವು ಹೆದರುವಿರೇಕೆ ? ಬನ್ನಿ ಮುಂದಕ್ಕೆ....( ಕೃಷ್ಣಾಜಿಪಂತ ಸ್ವಲ್ಪ ಮುಂದಕ್ಕೆ ಬರುವನು )

ರಾಮರಾಯ—ತಡೆಯಿರಿ ಕೃಷ್ಣಾಜಿಪಂತ.... ! ಹೇಡಿಗಳ ಸಿಂಹಾಸನವಲ್ಲ! ವೀರಪುಂಗವರಿಂದ ಈ ಸಿಂಹಾಸನವು ಸ್ಥಾಪಿತವಾಗಿರುವದು! ಸಾವಿರಾರು ವೀರಯೋಧರು ಇದಕ್ಕಾಗಿ ತಮ್ಮ ಆತ್ಮವನ್ನು ಸಮರ್ಪಿಸಿದ್ದಾರೆ. ಅದೋ ನೋಡಿ.... ಅವರ ಶರೀರದಿಂದ ಹೊರಚಿಮ್ಮುತ್ತಿರುವ ರಕ್ತದ ತುಷಾರಗಳಿಂದ ಈ ಸಿಂಹಾಸನವು ರಕ್ತರಂಜಿತವಾಗಿರುವದು! ಇದು ಧರ್ಮ-ಸಂಸ್ಕೃತಿಯ ಪ್ರತೀಕ! ಆದ್ದರಿಂದ ಅನ್ನುತ್ತೇನೆ ಮುಟ್ಟುವಾಗ ಜಪ್ಪಿಸಿ ಮುಟ್ಟಿರಿ ಇಲ್ಲದಿದ್ದರೆ........

ಬಾಬಾಸಾಹೇಬ—ಕೃಷ್ಣಾಜಿಪಂತ, ಮುಂದಾಗಿರಿ....

ಕೃಷ್ಣಾಜಿಪಂತ—( ತಡವರಿಸುತ್ತ ) ಸಿಂಹಾಸನವನ್ನು ಮುಟ್ಟಿ ಹೇಳುವ ಮೊದಲು ಒಂದು ಸಂಗತಿಯನ್ನು ವಿದಿತಪಡಿಸಬೇಕೆಂದಿದ್ದೇನೆ.

ಬಾಬಾಸಾಹೇಬ—ನಿಮಗೆ ಹೇಳಬೇಕಾದ್ದನ್ನು ಹೇಳಲಿಕ್ಕೆ ಸಂಪೂರ್ಣ ಸ್ವಾತಂತ್ರ್ಯವಿರುವದು.

ಕೃಷ್ಣಾಜಿಪಂತ—ಭಾವನೆಯ ಉದ್ವೇಗದಿಂದ-ಸಿಂಹಾಸನವನ್ನು ಮುಟ್ಟಿ ಹೇಳಿದರೆ ರಾಜನಿಷ್ಠೆಯಿಂದ ನಡೆದಂತೆ ಆಗುತ್ತದೆಂದು ನನಗೆ ಅನಿಸುವದಿಲ್ಲ. ಅದೊಂದು ನಟನೆ ಮಾತ್ರ ಆದೀತು!

ಬಾಬಾಸಾಹೇಬ—( ಕ್ರೋಧದಿಂದ ) ಕೃಷ್ಣಾಜಿಪಂತ, ಅದು ನಮ್ಮ ಶ್ರದ್ಧೆಯ ಪ್ರಶ್ನೆಯಿದೆ....! ವಿಶ್ವಾಸದ ಪ್ರಶ್ನೆಯಿದೆ! ಶ್ರದ್ಧೆ—ವಿಶ್ವಾಸಗಳು ಕಣ್ಣಿಗೆ ಗೋಚರವಾಗದಿದ್ದರೂ ಇವೆಯೆಂದು ನಾವು ನಂಬುತ್ತೇವೆ. ಇದು ನಮ್ಮ ಮಾನಬಿಂದುವಿನ ಪ್ರಶ್ನೆಯೂ ಇರುವದು....! ಭಾರತೀಯರಾದ ನಮಗೆ ಶ್ರದ್ಧೆ ವಿಶ್ವಾಸಗಳಲ್ಲಿ ಭರವಸೆ ಇಲ್ಲದಿದ್ದರೆ ಈ ಪ್ರಸಂಗದಲ್ಲಿ ನೀವು ನಿಮ್ಮ ಭಾವನೆಯ ಉದ್ವೇಗವನ್ನು ತೋರಿಸಿರಿ! ಅದನ್ನು ನಾವು ರಾಜನಿಷ್ಠೆಯೆಂದು ತಿಳಿಯುತ್ತೇವೆ. ದೂರ ಸರಿಯಬೇಡಿರಿ! ಬನ್ನಿ ಮುಂದಕ್ಕೆ........

ಕೃಷ್ಣಾಜಿಪಂತ—( ಬನ್ಯಾಬಾಪು ಈತನೆಡೆಗೆ ನೋಡಿ ) ನನ್ನ ಮಾತುಗಳಲ್ಲಿ ತಮಗೆ ಭರವಸೆಯಿಲ್ಲದಿದ್ದರೆ ಇದೋ ( ಈ ಸಿಂಹಾಸನವನ್ನು ಮುಟ್ಟಿ ) ಋಷಿಮುನಿಗಳಿಂದ ಪುನೀತವಾದ, ಧರ್ಮ-ಸಂಸ್ಕೃತಿಯ ಪ್ರತೀಕವಾದ ಈ ಸಿಂಹಾಸನವನ್ನು ಮುಟ್ಟಿ ಹೇಳುತ್ತೇನೆ-ಈ ಶರೀರದಲ್ಲಿ ಪ್ರಾಣವಿರುವ ವರೆಗೆ ಸಿಂಹಾಸನಕ್ಕೆ ಏಕನಿಷ್ಠನಾಗಿ ವರ್ತಿಸುವೆನು.

ರಾಮರಾಯ—ಬನ್ಯಾಬಾಪು, ನೀವು ಅಷ್ಟೊಂದು ದೂರೇಕೆ ನಿಂತುಕೊಂಡಿರುವಿರಿ? ನೀವು ಸಹ ನರಗುಂದದ ಸಿಂಹಾಸನದ ಏಕನಿಷ್ಠ ಸೇವಕರು! ರಾಜ್ಯದ ಆಧಾರಸ್ತಂಭರು! ನೀವು ಕೂಡ ಈ ಸಿಂಹಾಸನವನ್ನು ಮುಟ್ಟಿ ಕೃಷ್ಣಾಜಿಪಂತರಂತೆ ನಿಮ್ಮ ನಿಷ್ಠೆಯನ್ನು ತೋರಿಸಿರಿ.

ಬನ್ಯಾಬಾಪು—ಈ ಸಿಂಹಾಸನವನ್ನು ಮುಟ್ಟಿ ಹೇಳಲೆ ನಾನು ?

ಬಾಬಾಸಾಹೇಬ—ಹೌದು! ಈ ಸಿಂಹಾಸನವನು ಮುಟ್ಟಿ ಹೇಳಬೇಕು ?

ಕೃಷ್ಣಾಜಿಪಂತ—ಬನ್ಯಾಬಾಪು, ನೀವು ಏಕನಿಷ್ಠರಿರುವಾಗ ಹೆದರುವಿರೇಕೆ? ಸಿಂಹಾಸನವನ್ನು ಮುಟ್ಟಿ ಹೇಳಿರಿ!

ಬನ್ಯಾಬಾಪು—( ಅಂಜುತ್ತ.... .... ಸಿಂಹಾಸನವನ್ನು ಮುಟ್ಟಿ ಸಾಯುವ ವರೆಗೆ....ಹಿಂದೂ-ಧರ್ಮ-ಸಂಸ್ಕೃತಿಯ ಪ್ರತೀಕವಾದ ಈ ಸಿಂಹಾಸನಕ್ಕೆ ಏಕನಿಷ್ಠನಾಗಿ ಉಳಿಯುವೆನು.

ಬಾಬಾಸಾಹೇಬ—ಆನಂದ! ಅತ್ಯಾನಂದವಾಯಿತು ನನಗೆ! ನಿಮ್ಮಂತ ನಿಷ್ಠಾವಂತ ಜನರಿದ್ದ ಮೇಲೆ ಫಿರಂಗಿಗಳೊಡನೆ ಯುದ್ಧಕ್ಕೆ ನಿಲ್ಲಲು ನಾವೆಂದಿಗೂ ಹೆದರುವದಿಲ್ಲ. ಕೃಷ್ಣಾಜಿಪಂತರೆ, ವೈಯಕ್ತಿಕ ದ್ವೇಷಸೂಯೆಗಳನ್ನು ಬದಿಗಿರಿಸಿ ನರಗುಂದದ ಸಿಂಹಾಸನದ ಸಂರಕ್ಷಣೆಯನ್ನು ಮಾಡೋಣ! ಅಧಿಕಾರಿಗಳ ನಿಷ್ಠೆಯು ಈ ತೆರದಿ ಒರೆಗಲ್ಲಿಗೆ ಹತ್ತುವ ಪ್ರಸಂಗ ಬಂದುದನ್ನು ಕಂಡು ನನಗೆ ತೀರ ವಿಷಾದವೆನಿಸುವದು. ನರಗುಂದದ ಸಿಂಹಾಸನ ನನ್ನದಲ್ಲ! ಅಮಾತ್ಯರದಲ್ಲ! ನಮ್ಮ ಪ್ರಜೆಗಳದೆಂಬುದನ್ನು ಮರೆತು ನಡೆಯುವದಿಲ್ಲ! ಜನತಾಜನಾ

ರ್ದನನ ಸ್ವರೂಪಿಯಾದ ಈ ಸಿಂಹಾಸನವನ್ನು ರಕ್ಷಿಸುವದು ನಮ್ಮ ಕರ್ತವ್ಯ !

ಕೃಷ್ಣಾಜಿಪಂತ—ಜನತಾಜನಾರ್ದನನ ಸೇವೆಗೆ ನಾನು ಸರ್ವಸಿದ್ಧ ಮಹಾರಾಜ !

ಬನ್ಯಾಬಾಪು—ನನ್ನ ಜೀವನವಮಟ್ಟವನ್ನು ಬೇಕಾದ ಪ್ರಸಂಗದಲ್ಲಿ ಈ ಸಿಂಹಾಸನಕ್ಕೆ ಸಮರ್ಪಿಸಲು ನಾನು ಸಿದ್ಧನಿದ್ದೇನೆ.

ಬಾಬಾಸಾಹೇಬ—ಭಲೆ ! ಬನ್ಯಾಬಾಪು ಭಲೆ ! ನಿಮ್ಮಂಥ ರಾಜಕಾರಣಿಗಳ ಬುದ್ಧಿಯ ಮಿಂಚಿನಲ್ಲಿ, ನಾಡಿನ ಜನರ ಶಸ್ತ್ರಗಳ ಹೊಳಪು ಕೂಡಿಕೊಳ್ಳಲಿ ! ಇವೆರಡು ಶಕ್ತಿಗಳು ಜೊತೆಗೂಡಿ, ನರಗುಂದದ ಸಿಂಹಾಸನವನ್ನು ಸಂರಕ್ಷಿಸಲಿ !

ರಾಮರಾಯ—ಕೃಷ್ಣಾಜಿಪಂತ, ಪಹರೆಯವರ ಮೇಲೆ ತೀಕ್ಷ್ಣ ಕಟಾಕ್ಷವಿರಲಿ ! ಅವರ ಜೊತೆಗೆ ಕೋಟೆಯ ಆಯಕಟ್ಟಿನ ಸ್ಥಳಗಳ ಭದ್ರತೆಯ ಕಡೆಗೂ ಲಕ್ಷಪೂರೈಸಿರಿ.

ಕೃಷ್ಣಾಜಿಪಂತ—ಪಹರೆಯವರಲ್ಲಿ ಏನಾದರೂ,

ರಾಮರಾಯ—ಸಂಶಯಗ್ರಸ್ತ ಸಂಗತಿ ನಡೆದು ಹೋಗಿರದಿದ್ದರೂ—ನಡೆದುಹೋಗದಂತೆ ಎಚ್ಚರವಹಿಸುವದು ಒಳ್ಳೆಯದು—!

ಬಾಬಾಸಾಹೇಬ—ಕೃಷ್ಣಾಜಿಪಂತ ಮತ್ತು ಬನ್ಯಾಬಾಪು ನೀವು ಮುದ್ದಿನುಗ್ರಾಣದ ಅಧಿಕಾರಿಗಳು ! ತುಂಬ ಎಚ್ಚರಿಕೆ ವಹಿಸಿ ವರ್ತಿಸಿರಿ. ಯಾವ ಹೊತ್ತಿನಲ್ಲಿ ತೋಫುಗಳಿಗೆ ಕೊಳ್ಳಿಯಿಡುವ ಪ್ರಸಂಗ ಬರುವದೋ ಇದನ್ನು ಹೇಳಲಿಕ್ಕಾಗುವದಿಲ್ಲ ! ಅದರಂತೆ ಕೋಟೆಯ ಮೇಲೆ ಬರಹೋಗುವವರತ್ತ ಸಂಪೂರ್ಣ ಲಕ್ಷವಿರಲಿ ! ವಹಿಸಿದ ಕಾರ್ಯಗಳನ್ನು ಜಾಗರೂಕತನದಿಂದ ಮಾಡಿರಿ ! ಯಾವ ಸಮಯಕ್ಕೆ ಯುದ್ಧ ಕುಂಡ ಹೊತ್ತೀತೆತೆಂಬುದು ಹೇಳಲಿಕ್ಕೆ ಬರದು ! ಜನತೆಯೂ ಸರ್ವಬದಿಯಿಂದ ಸಿದ್ಧವಾಗಿದೆ ಇನ್ನೊಮ್ಮೆ ಹೇಳುತ್ತೇನೆ ಸರ್ವರೀತಿಯಿಂದ ಎಚ್ಚರವಹಿಸೋಣ ! ನೀವಿನ್ನು ಹೋಗಬಹುದು.

ಕೃಷ್ಣಾಜಿಪಂತ-ಬನ್ಯಾಬಾಪು—ಆಗಲಿ ಪ್ರಭು (ನಮಿಸಿ ಹೋಗುವರು.)

ರಾಮರಾಯ—( ಸ್ವಲ್ಪ ತಡೆದು ) ಯಾರಲ್ಲಿ ?

ಸಿಪಾಯಿ—( ಪ್ರವೇಶಿಸಿ ನಿಲ್ಲುವನು )

ರಾಮರಾಯ—ಕೃಷ್ಣಾಜಿಪಂತ ಮತ್ತು ಬನ್ಯಾಬಾಪು ಇವರ ಮೇಲೆ ಸಂಪೂರ್ಣ ಲಕ್ಷವಿರಲಿ ! ಏನಾದರೂ ಸಂಶಯ ಬಂದರೆ ಕೂಡಲೆ ನನಗೆ ತಿಳಿಸಿರಿ ( ಸಿಪಾಯಿ ನಮಸ್ಕರಿಸಿ ಹೋಗುವನು )

ಬಾಬಾಸಾಹೇಬ— ಅಮಾತ್ಯರೆ.... ಅಮಾತ್ಯರೆ....ಅಧಿಕಾರಿ ವರ್ಗದ ಮೇಲೆ ಹೀಗೆ ಒಮ್ಮೆಲೆ ಸಂಶಯಗ್ರಸ್ತರಾಗುವದು ಸರಿಯಲ್ಲ ! ಕೃಷ್ಣಾಜಿಪಂತರು ನಮ್ಮ ವಿಶ್ವಾಸದ ಅಧಿಕಾರಿಗಳಲ್ಲಿಯ ಅಧಿಕಾರಿಗಳೊಬ್ಬರು !

ರಾಮರಾಯ—ಇದ್ದರು ! ಆದರೆ ಈಗ ಇಲ್ಲ.

ಬಾಬಾಸಾಹೇಬ—ಯಾವ ಆಧಾರದ ಮೇಲಿಂದ ?

ರಾಮರಾಯ—ಆಧಾರ ನನ್ನ ಕೈಯಲ್ಲಿ ಇದ್ದುದಾಗಿದ್ದರೆ—ಈ ನರಾಧಮನನ್ನು....ಇಷ್ಟರಲ್ಲಿಯೆ ತೋಫಿನ ಬಾಯಿಗೆ ಕೊಡುತ್ತಿದ್ದೆ....! ಆಧಾರವನ್ನು ಹುಡುಕುತ್ತಿದ್ದೇನೆ ! ದೊರೆತ ಪುರಾವೆ ಅವನ ಜೀವನದ ಕೊನೆಯ ಉಸಿರಾದೀತು !

ಬಾಬಾಸಾಹೇಬ—ಅಮಾತ್ಯರೆ ನನಗೊಂದೂ ತಿಳಿಯದು ! ಅಧಿಕಾರಿವರ್ಗದಲ್ಲಿ ದ್ರೋಹಿಗಳಿರುವರೆ ?

( ವಿಷ್ಣು ಧಾವಿಸುತ್ತ ಪ್ರವೇಶಿಸುವನು- )

ವಿಷ್ಣು—ಮಹಾರಾಜ ...ಮಹಾರಾಜ....ಬೇಟೆಯು ಬಲಿಯಲ್ಲಿ ಸಿಕ್ಕುಬಿದ್ದಿದೆ. ಅಮಾತ್ಯರೆ, ನೀವು ಹೇಳಿದಂತೆಯೆ ಎಲ್ಲವೂ ನಡೆಯಿತು.

ರಾಮರಾಯ— ಜೈವೆಂಕಟೇಶ ! ಬಲಿಯಲ್ಲಿ ಸಿಕ್ಕುಬಿದ್ದ ಬೇಟೆಯನ್ನು ರಣಚಂಡಿಗೆ ಬಲಿಯಾಗಿ ಕೊಡೋಣ ! ವಿಷ್ಣು, ವಿಷ್ಣು....ನಮ್ಮ ಅರ್ಧ ಕಾರ್ಯ ಕೈಗೂಡಿದಂತಾಯಿತು.

ಬಾಬಾಸಾಹೇಬ ಯಾವ ವಿಷಯದಲ್ಲಿ ಮಾತಾಡುವಿರಿ ಅಮಾತ್ಯರೆ ?

ಅಮಾತ್ಯ—ಮಹಾರಾಜ ಎಲ್ಲವನ್ನೂ ಹೇಳುತ್ತೇನೆ.... ನಡೆಯಿರಿ. ( ಹೋಗುವರು )

---

# ಬರ್ತೇನೆ

## (ಹರಟೆ)

ಲೇಖಕರು—ಜಿ. ಬಿ. ಕುಲಕರ್ಣಿ ಧಾರವಾಡ

ಇದೇನಿದು? ಬರ್ತೇನೆ ಎನ್ನುವ ತಲೆಬರಹ ನೋಡಿ ನಕ್ಕರೂ ನಗಬಹುದು, ಗೊಂದಲದಲ್ಲಾದರೂ ಬೀಳಬಹುದು. ಅದೂ ಹರಟೆಯಲ್ಲಿ "ಬರ್ತೇನೆ!" ಎಂದರೇನು? ಬರ್ತೇನೆ ಎಂದರೆ ಬರುತ್ತೇನೆ. ಅದೆಲ್ಲರಿಗೂ ತಿಳಿದದ್ದೇ. "ಹರಟೆ"ಯ ಮೇಲೆಯೇ ಹರಟೆಹೊಡೆಯುವ ಜನವೆಷ್ಟೋ. ಬರ್ತೇನೆ ಇದು ವ್ಯವಹಾರದಲ್ಲಿ ಸಂಕ್ಷಿಪ್ತವಾಗಿರಬಹುದು. ಅದೇನೋ ಇರಬಹುದು ಆದರೂ ಬರ್ತೇನೆ ಎನ್ನುವದೊಂದು ಸಂಬೋಧನ ಇದೇನೂ ಅಪರಿಚಿತವಲ್ಲ. ಹಾಗಾದರೆ ಸುಪರಿಚಿತವಾದ ಈ "ಬರ್ತೇನೆ" ಎಂಬುದರ ಕಡೆಗೆ ಬರೋಣ. ಹೇಗೂ ಹರಟೆ ಹೊಡದೇ ಬಿಟ್ಟಂತಾಯಿತು.

'ಬರ್ತೇನೆ' ಇದನ್ನು ಸಾಧಾರಣ ಎಲ್ಲರೂ ಕೇಳಿರ ಬಹುದು. ಕೇಳಿದ್ದೀರಿ ಅಂತಾ ನಂಬುತ್ತೇನೆ. ಹಾಗಾದರೆ ಬರ್ತೇನೆ ಇದರ ಗೂಡಾರ್ಥವೇನಿರಬಹುದು? ಸಾಮಾನ್ಯವಾಗಿ ಯಾರಾದರೂ ನೆಂಟಸ್ಥರು ಊರಿಗೆ ಬಂದು ಇದ್ದು ಉಪಚಾರ ಸೇವಿಸಿ ಊರಿಗೆ ಹೊರಟು ನಿಲ್ಲುತ್ತಾರೆ. ಸಾಧಾರಣವಾಗಿ ಹೇಳಬೇಕೆಂದು ಮರೆತುಳಿದ ಮಾತುಗಳೆಲ್ಲವನ್ನೂ ಸ್ಮರಣೆಗೆ ತಂದುಕೊಳುತ್ತ ಚಿಕ್ಕವರಿಗೆ ಉಪದೇಶ, ದೊಡ್ಡವರಿಗೆ ಸಂದೇಶ ನಡೆದೇ ಇರುತ್ತದೆ. ಆಗ ಊರಿಗೆ ಹೊರಟುನಿಂತವ್ಯಕ್ತಿ ನುಡಿಯದೇ ಬಿಡುತ್ತದೆ. ಏನೆಂದು? "ಬರ್ತೆನೆ" ಎಂದು. ಈಗ ತಿಳಿದಿರಬಹುದಲ್ಲವೇ "ಬರ್ತೆನೆ" ಎಂಬುದರ ಅರ್ಥ. ಅತಿ ಸಂತೋಷದಲ್ಲಿಯೇ ಹೊರಟಿರಲಿ ಅಸಂತೋಷದಿಂದಲೇ ಹೊರಟಿರಲಿ, ಬಂದ ಕೆಲಸ ಸಾಧಿಸಲಿ ಅಥವಾ ಸಾಧಿಸದಿರಲಿ, ನಡೆಯುತ್ತಲೇ ಬಸ್ ಸ್ಟ್ಯಾಂಡಿಗೋ ಅಥವಾ ರೇಲ್ವೆ ಸ್ಟೇಶನ್ನಿಗೋ ಹೊರಟಿರಲಿ, ಟಾಂಗಾದಲ್ಲಿಯೇ ಹೊರಟಿರಲಿ, ಟಾಂಗಾ ಹತ್ತಿದಕೂಡಲೇ "ಬರ್ತೇನೆ" ಬರಲಿಕ್ಕೇ ಬೇಕು. ಇದನ್ನಾರು ಕಲಿಸಿಕೊಡಬೇಕಾಗಿಲ್ಲ. ಲೋಕಾರೂಢಿ. ನಿಸರ್ಗ ದತ್ತ ಬುದ್ಧಿಯು ಓಟವದು ಆಯಿತು ಬಾಗಿಲವರೆಗೆ ಆಪ್ತೇಷ್ಟರೆಲ್ಲ ಬಂದುನಿಂತು, "ಹಾದಿಯಲ್ಲಿ ಜೋಕೆ ಸಾಮಾನುಗಳ ಮೇಲೆ ಎಚ್ಚರವಿಟ್ಟುಕೊಳ್ಳಿ, ಮುಟ್ಟಿದ ಕೂಡಲೇ ಕ್ಷೇಮಕ್ಕಾಗಿ ಪತ್ರ ಬರೆಯಿರಿ," ಇತ್ಯಾದಿ ಇತ್ಯಾದಿ. ಉಪಚಾರಗಳಾದನಂತರ ಟಾಂಗಾದವನು ಕುದುರೆಗೆ 'ಹೈ ಹೈ' ಎನ್ನುವಾಗ ಹೊರ ಬೀಳುವ ಶಬ್ದವಿದು ಯಾವದು? "ಬರ್ತೇನೆ". ನೋಡಿ ಎಷ್ಟು ಉಪಯುಕ್ತವಾದ ಶಬ್ದವಿದು. ತಮ್ಮ ಮನೆಯಿಂದಲೇ ಹೊರಟಿರಲಿ, ಇತರರ ಮನೆಯಿಂದಲೇ ಹೊರಟಿರಲಿ, ಇದರ ಉಪಯೋಗ ಪ್ರತಿಯೊಬ್ಬನೂ ಮಾಡಿಕೊಳ್ಳುವದು ಸಹಜ. ಮನೆಯ ಮುಂದೆ ಹೇಳಿದ್ದೇ ಸಾಕಾಗಲಿಕ್ಕಿಲ್ಲ, ಬಸ್ಸಿನಲ್ಲಿಯೋ ರೈಲಿನಲ್ಲಿಯೋ ಕುಳಿತು, ಅದು ಹೊರಟಿತೆಂದರೆ ಬಂದೇ ಬಿಡುತ್ತದೆ, ಈ ಬರ್ತೇನೆ ಎನ್ನುವದು. ಬರ್ತೇನೆ ಎನ್ನುತ್ತ ಹೋಗುವವರೂ ಹೋಗಿಯೇ ಬಿಡುತ್ತಾರೆ. ಆದರೆ ನಮಗೆ ಕೇಳಿಸುವದು 'ಬರ್ತೇನೆ' ಮಾತ್ರ. ಈಗಲಾದರೂ ಸ್ಪಷ್ಟವಾಯಿತಲ್ಲ ಅರ್ಥ. ಬರ್ತೇನೆ ಎಂದರೆ ಹೊರಟಿರುವವರು ತಿರುಗಿ ಬರುತಾರೆಂದಲ್ಲ, ಹೊರಟುನಿಂತಾಗ ಹೋಗಿ ಪುನಃ ಬರುತ್ತೇನೆ ಎಂದು ಪರ್ಯಾಯವಾಗಿ ಸೂಚಿಸುವ ಸಂಕೇತ. ಹಾಗಾದರೆ ಹೋದವರು ಮತ್ತೆಂದಾದರೂ ಬರಬಹುದು. ಬರೀ 'ಹೋಗ್ತೇನೆ' ಎಂದು ಹೇಳಿದರೇನು ತಪ್ಪು? ಎಂಬ ಸಮಸ್ಯೆ ಉದ್ಭವಿಸ ಬಹುದು, ಹೋಗ್ತೇನೆ ಎಂದು 'ತಪ್ಪಿ' ಅಥವಾ 'ಮರೆತು' ಹೇಳಿ ತಿರುಗಿ ಬಂದವರೆಷ್ಟೋ ಇರಬಹುದು. ಒಂದುವೇಳೆ ಹೋಗುವಾಗಲೇ "ಹೋಗ್ತೇನೆ" ಎಂದು ಸ್ಪಷ್ಟವಾಗಿ ನುಡಿದು ನಿಲ್ದಾಣದವರೆಗೆ ತೇಕು ಹತ್ತಿಕೊಳ್ಳುತ್ತ, ಓಡಿ ನಿಲ್ದಾಣದ ಗೇಟು ತಲ್ಪುವ ಹೊತ್ತಿಗೇ ನಮ್ಮನ್ನು ಮೋಜು ನೋಡುವ ಹಾಗೆ ಗಾಡಿ ಹೊರಟೇ ಬಿಟ್ಟರೆ ಮಾಡುವದೇನು? ನಡೆಯುತ್ತ ಹೋಗುವದಂತೂ ಅಸಾಧ್ಯಕೋಟಿಯೊಳಗಿನ ಮಾತು. ಅದೂ ಇಂಥ ಯಾಂತ್ರಿಕ ಯುಗದಲ್ಲಿ! ಪೂರ್ವ ಕಾಲದಂತಿದ್ದರೆ ನಡೆಯುತ್ತಾದರೂ ಹೋಗಬಹುದಿತ್ತು. ಆದರೆ ನಾವು ತಲುಪುವ ಊರಿಗೆ ಸರಿಯಾದ ವೇಳೆ ಇದ್ದರೆ ಚಂದ ಅವಸ್ಥೆ. ಇಲ್ಲದೇ ಇದ್ದರೆ ಪುನಃ ಬಂಧುಗಳ ಅರ್ಥಾತ್ ಬಿಟ್ಟು ಬಂದ ಮನೆಗೆ ಪ್ರಯಾಣ. ತಿರುಗಿ ಬಂತರಂತೂ ನೆಂಟರಿಗೆ ನಿಶ್ಚಯ ಏನಾದರೂ ಮರೆತಿರಬಹುದು ಅಥವಾ ಗಾಡಿ ತಪ್ಪಿರ ಬಹುದು ಎಂದು. ಆದರೆ ಹೋಗುವಾಗ "ಹೋಗ್ತೇನೆ" ಎಂದು ಹೇಳಿ, ಗಾಡಿ ತಪ್ಪಿ ತಿರುಗಿ ಮನೆಗೆ ಬಂದಾಗ ಬರ್ತೇನೆ ಅನ್ನಕೂಡದು. ಬಹುಶಃ ಯಾರೂ ಅನ್ನಲಾರರು. ಹೋಗುವಾಗ ಬರ್ತೇನೆ ಎನ್ನುವದರ ಉಪಯೋಗವೇ ಹೊರತು, ಬಂದಾಗ ಅನ್ನ ಕೂಡದು. ಅಂದರೆ ಹೋಗುವಾಗ "ಹೋಗ್ತೇನೆ" ಎಂದರೆ ಗಾಡಿ ತಪ್ಪುತ್ತದೆಂದರ್ಥವಲ್ಲ.

ನಮ್ಮ ನಾಡಿನಲ್ಲಿ ಮಾತುಗಳಿಗೂ ಸಂಪ್ರದಾಯಿಕತೆ ಅಂಟಿಯೇ ಬಿಟ್ಟಿದೆ. ಅರಿಯದವರು ಊರಿಗೆ ಹೊರಟು ನಿಂತಾಗ "ಹೋಗ್ತೇನೆ" ಎಂದರೆ, ಹತ್ತಿರವೇ ಇದ್ದ ಹಿರಿಯರು ಇದನ್ನು ಸಹಿಸದೆ ಪರ್ಯಾಯವಾಗಿ ಸೂಚಿಸಲೋಸುಗ

"ಹೋಗಿ ಬಾ" ಎನ್ನುತಾರೆಯೇ ಹೊರತು "ಹೋಗು" ಎನ್ನಲಾರರು. ಬರೀ ಬರ್ತೇನೇ ಎನ್ನುವದರ ಬದಲು ಹೋಗಿ ಬರ್ತೇನೆಂದರೂ ಅಸಂಮಜಸವಾಗಲಾರದು. ಹಾಗಾದರೆ ಬರ್ತೇನೆ ಎಂಬದು ಒಂದು ಶಿಷ್ಟಾಚಾರದ ಚಿಹ್ನೆ ಅಂದರೆ ಪುನಃ ಮತ್ತೆ ಬರ್ತೇನೆ.

ಮಾನವ ಪ್ರಾಣಿ ಅಂತ್ಯಕಾಲದಲ್ಲಿ, ಅಂತಕನ ಪಾಶ ಬಂದು ಬಿದ್ದಾಗ, ಆ ಜೀವಿ ಎಲ್ಲರನ್ನೂ ಅಗಲುವದು ಖಂಡಿತ, ಆದರೂ ಕೊನೆಯುವರೆಗೂ ಅದೇನು ಊರಿಗೆ ಹೋದವರ ಹಾಗೇನೂ ತಿರುಗಿ ಬರಲಾರರೆಂದು ಅರಿತ ಸಂಗತಿ, ಆದರೆ ಅದು ಮಾತ್ರ "ಹೋಗ್ತೇನೆ" ಅನ್ನಲು ಅಡ್ಡಿಯಿರಲಿಕ್ಕಿಲ್ಲ. ಇರಲಿಕ್ಕಿಲ್ಲವಷ್ಟೇ ಅಲ್ಲ ಅದಕ್ಕೆ ಅನ್ನುವ ಅಧಿಕಾರ ಕೂಡಾ ಯುವು ದಯಪಾಲಿಸಿರುವದಿಲ್ಲ. ಅಂದ ಮೇಲೆ ಅದು "ಹೋಗ್ತೇನೆ" ಅಂತಷ್ಟೇ ಅಲ್ಲ ಬರ್ತೆನೆ ಎನ್ನುವದಂತೂ ದೂರದ ಮಾತು. ತನ್ನವರೊಡನೆಯೇ ತನಗೆ ಮಾತನಾಡಲು, ಸ್ವಾತಂತ್ರ್ಯವಿಲ್ಲದ ಜೀವ ಕೃತಿಯಿಂದಲೇ ತೋರಿಸಿ ಬಿಡುತ್ತದೆ. ತನ್ನ ಗಮನವನ್ನು ಅದರ ದೃಷ್ಟಿಯಲ್ಲಿ ಅಡಿ ತೋರಿಸುವದಕ್ಕಿಂತಲೂ ಮಾಡಿತೋರಿಸುವದಕ್ಕೇ ಪ್ರಾಧಾನ್ಯ. ಪಾಪ! ಅದಕ್ಯಾರೂ "ಹೋಗಿ ಬಾ" ಅಥವಾ "ಹೋಗು" ಎಂದಾದರೂ ಬೀಳ್ಕೊಡುವದಿಲ್ಲವಲ್ಲ.

ಅಂತೂ ಈ 'ಬರ್ತೇನೆ' ಎಂಬಂಥ ವಿಶಿಷ್ಟರೀತಿಯ ಶಿಷ್ಟ ಶಬ್ದಗಳು ನಮ್ಮಲ್ಲಿ ರೂಢಿಯಲ್ಲಿವೆ. ಉದಾಹರಣಾರ್ಥವಾಗಿ ಬೆಳಗಿನಲ್ಲಿ ಎದ್ದು ಒಬ್ಬರಿಗೊಬ್ಬರು ಬೆಟ್ಟಿಯಾದಾಗ 'ಎದ್ದಿರಾ' ಎಂಬುದು. ಅವರು ಕೂಡಾ 'ಎದ್ದೆವು ನೀವೆದ್ದಿರಾ' ಎಂದೇ ಉತ್ತರ ಕೊಡುತ್ತಾರೆಯೇ ಹೊರತು, 'ಯಾಕೆ ಎದ್ದದ್ದು ಕಣ್ಣೆದಿರಿಗೆ ನಿಂತದ್ದು ಕಾಣಿಸುವದಿಲ್ಲವೇ ಎಂದು ಉತ್ತರ ನೀಯುಲಾರರು. ಮಧ್ಯಾಹ್ನದಲ್ಲಿ ಊಟಕ್ಕೆ ಕುಳಿದ್ದನ್ನೂ ನೋಡಿಯೂ ಊಟ ನಡೆದಿದೆಯೇ? ಎನ್ನುವದು, ಊಟವಾದದ್ದು ನೋಡಿ ಆಯಿತೆ? ಎನ್ನುವದು. ಮಧ್ಯಾಹ್ನ ಮಲಗಿದ್ದು ನೋಡಿ, ನಿದ್ದೆ ನಡೆದಿದೆಯೇ? ಎಂದುಕೊಳ್ಳುವದು, ಇತ್ಯಾದಿ ಇತ್ಯಾದಿ. ಆದರೆ ಕೆಲ ಸಾಂಪ್ರದಾಯಿಕ ಶಬ್ದಗಳನ್ನು ಬಿಟ್ಟರೆ, ಉಳಿದವುಗಳಿನ ಮಾತನಾಡಿಸುವ ನೆವಕ್ಕಾಗಿ ಉಪಯೋಗಿಸಲ್ಪಡುವವೆಂದೇ ತಿಳಿಯುವದು. ಕೆಲಜನಕ್ಕೆ ಈ ತರದ ಮಾತು ಮನಸ್ಸಿಗೆ ಬರದಿರಬಹುದು. ಆದರೆ ಮಾತನಾಡುವವರ ಮನಸ್ಸಿಗೆ ಬಂದಿದ್ದರೆ ಉಳಿದವರೇನು ಪ್ರತಿಭಟಿಸುವದೇ? ಅದು ಯುಕ್ತವೂ ಅಲ್ಲ, ಅಷ್ಟೇ ಅಲ್ಲ ಮೊದಲಿನಿಂದ ನಡೆದು ಬಂದ ಸಂಪ್ರದಾಯ. ಹಿರಿಯುರು ಹಾಕಿಟ್ಟ ಪರಿಪಾಠ. ಆದರೆ ಈ "ಬರ್ತೆನೆ" ಮಾತ್ರ ಪಂಡಿತರೂ, ಅಜ್ಞರೂ, ಚಿಕ್ಕವರೂ, ದೊಡ್ಡವರೂ, ಬಡವರೂ, ಶ್ರೀಮಂತರೂ ಒಪ್ಪಬೇಕಾಗುವಂತಹದು. ಇದರಲ್ಲಾರದೂ ಭಿನ್ನಾಭಿಪ್ರಾಯವಿರಲಾರದೆಂದೇ ನನ್ನ ಮತ. ಏನೇ ಆಗಲಿ. ಎಷ್ಟೇ ಅರಿಯದವರ ಬಾಯಿಂದಲಾದರೂ "ಬರ್ತೇನೆ" ಎನ್ನುವದು ತಾನಾಗಿಯೇ ಬರಬಲ್ಲಶಬ್ದ.

ಮಾನವ ಶರೀರ ನಶ್ವರವಾದರೂ ಮತ್ತೆ ಮತ್ತೆ ಬರ್ತೆನೆ ಎನುವದರಲ್ಲಿ ಏನರ್ಥ ಎಂದು ಕೇಳಿದರೆ ಕೇಳಬಹುದು. ಅದಕ್ಕೂ ಹೀಗೆ ಉತ್ತರ ಕೊಡಬಹುದು. ಮಾನವನ ದೇಹ ನಶ್ವರವಿರಬಹುದು, ಹಾರ್ಟ ಫೇಲ್ (Heart fail) ಆಗುವ ಈ ಯುಗದಲ್ಲಿ, ಇಂದಿದ್ದ ಮನುಷ್ಯ ಮರುದಿನ ಇಲ್ಲಲ್ಲ, ಅಷ್ಟೇ ಏಕೆ? ಇನ್ನೈದು ನಿಮೀಷಗಳಲ್ಲಿ ಇರುತ್ತಾನೆಂದು ಹೇಳಲು ಬರುವಂತಿಲ್ಲವಲ್ಲ. ಆದರೂ ಬರ್ತೇನೆ ಎನ್ನುವದು ಬರಿಯ ಭೂಷಣದ ಮಾತೇ. "ಹೋಗುತೇನೆ" ಎಂಬುದಕ್ಕೆ ವಿಪರೀತಾರ್ಥ ಕಲ್ಪಿಸಿದರೆ, ವಿಪರೀತ ತಿಳವಳಿಕೆಯೂ ಆಗ ಬಹುದು. ಆದ್ದರಿಂದ "ಬರ್ತೇನೆ" ಅಥವಾ ಅದಕ್ಕೆ ಉಪಪದ ಹಚ್ಚಿ "ಹೋಗಿ ಬರ್ತೇನೆ" ಎಂದೂ ಅನ್ನಬಹುದಲ್ಲ.

ಆದ್ದರಿಂದ ಮತ್ತೆ ಮತ್ತೆ ಬರುವದು ಹೋಗುವದು ಭೂಷಣವಾದದ್ದು ಎಂದು ಹಿಂದಿನ ಹಿರಿಯುರು ತಿಳಿದು ಬರ್ತೇನೆ ಎಂಬುದನ್ನು ಬಳಕೆಯಲ್ಲಿ ತಂದಿರಬಹುದು. ಹೋಗುವಾಗ ಸಂಗಡ ದೊಡ್ಡ ದೊಡ್ಡ ಟ್ರಂಕುಗಳೂ, ಕೈಚೀಲಗಳೂ, ಗಂಟುಗಳೂ, ಟಾಂಗಾ ಕಿರ್ ಕಿರ್, ಎಂದು ಸಪ್ಪಳಮಾಡುವಷ್ಟು ತೂಕವುಳ್ಳ ವ್ಯಕ್ತಿಗಳೂ, ಇತ್ಯಾದಿಯಾಗಿ ಅನೇಕರಿದ್ದರೂ, ಕ್ಷಣಕ್ಷಣಕ್ಕೆ ಚಮತ್ಕಾರದ ರೀತಿಯಲ್ಲಿ ನಮಸ್ಕಾರ ನಡೆದು ಹಿರಿಯರ ಆಶೀರ್ವಾದ ಮಳೆಗರೆದರೂ 'ಬರ್ತೆನೆ" ಅಥವಾ "ಹೋಗಿ ಬರ್ತೇನೆ" ಎನ್ನದಿದ್ದರೆ ಭಣ ಭಣವೇ, ಏನೂ ಇಲ್ಲದಿದ್ದರೂ ಅದು ಬೇಕೆ ಬೇಕು. ಒಂದು ವೇಳೆ ಮನೆಯವರೆಲ್ಲ ಊರಿಗೆ ಹೊರಟರೂ ಕಳಿಸಲು ನಿಂತ ನೆರೆಯವರಿಗಾದರೂ ನುಡಿಯಲೇ ಬೇಕಾದ ಶುಭ ಸೂಚಕ, ತುಂಬುನುಡಿಯು ಶಬ್ದವದು ಮನೆಯಿಂದ ಪೇಟೆಗೆ ಹೋಗುವಾಗಾಗಲಿ ನಾಲ್ಕೇದಿನ ವಿದ್ದು ಬರಲು ಊರಿಗೆ ಹೊರಡಲಿ, ಬಹುದಿವಸ ಅಲ್ಲಿಯೇ ಇರಲಿ, ಒಂದು ವೇಳೆ ಅಲ್ಲಿ ಇರಲು ಹೋಗಿ ಬರಲು ದೈವೇಚ್ಛೆಯಿಂದ ಆಗದಿರಲಿ, "ಬರ್ತೇನೆ" ಎನ್ನುವದು ಸಂಪ್ರದಾಯ. ಇದನ್ನು ಅನ್ನಬೇಕೆಂಬ ಕಡ್ಡಾಯವಿಲ್ಲ. ಆದರೆ ಅನ್ನದಿದ್ದರೆ ವಿಧಿಯಿಲ್ಲ. "ಬರ್ತೇನೆ" ಬರಲೇಬೇಕು

ಆಯಿತು, ತಿಳಿದೆವಲ್ಲ "ಬರ್ತೇನೆ" ಎಂಬುದನ್ನು ಹೇಳಿ ಕೇಳಿ ಹರಟೆ. ಬರ್ತೆನೆ ಎನ್ನುವದೇ ಹರಟೆಯ ವಿಷಯ ಹರಟೆ ಹೊಡೆದಂತೂ ಆಯಿತು. ನಾನೂ "ಬರ್ತೇನೆ".

---

ಡಾ. ಆರ್. ಕೆ. ಹಾನಗಲ್ಲರವರು ( ಪ್ರಕೃತಿ ಭಾವದಲ್ಲಿ ) ಬರೆದ ಸ್ತ್ರೀ ಸ್ವಾತಂತ್ರ್ಯದ ಧ್ವಜಾರೋಹಣೆ ಎಂಬ ಪದದ

# ಭಾವ ನಿ ರೀ ಕ್ಷ ಣೆ

**ಲೇಖಾಂಕ:—೨**

( ಡಿಸೆಂಬರ ಸಂಚಿಕೆಯಿಂದ ಮುಂದುವರೆದದ್ದು )

ವೀರಮಾತೆ ನಾವಲ್ಲದೆ ಪುರುಷರ ಸಾರಸುಖದ ಯಂತ್ರಗಳಲ್ಲ ।
ನಾರಿ ಸರ್ವಕಾಧಾರಿಯಿರಲು ಕೈ, ಜೋರಿಗಂಜಿ ಬಾಳುವದಲ್ಲ ॥ ೨ ॥
ಕಾಮ ಕಾಂಚನದ ಸ್ವಾತಂತ್ರ್ಯಯವಿದು ಕಾಮಿನಿಯರ ಜನ್ಮದಹಕ್ಕು ।
ಪ್ರೇಮಬಂಧನವದಲ್ಲದೆ ರೂಢಿಯ ನೇಮಕಂಜಿ ಬಿಡುವರೆ ದಿಕ್ಕು ॥ ೩ ॥

ಮಾನವ ಜನಾಂಗದಲ್ಲಿ ಈಶ ನಿರ್ಮಿತವಾದ ಜಾತಿಗಳೆಂದರೆ ಸ್ತ್ರೀ ಹಾಗು ಪುರುಷರು. ಇವುಗಳಲ್ಲಿ ಸ್ತ್ರೀ ಜಾತಿಯ ನೈಜಧರ್ಮವನ್ನು, "ಅಂದರೆ, ಸ್ತ್ರೀಯರುಪ್ರಜೋತ್ಪಾದನೆಗಾಗಿ ಮಾತೃಪದವನ್ನು ಪಡೆಯಲು ಕರ್ತವ್ಯದಕ್ಷರೇ ವಿನಾ ಪುರುಷರ ಕಾಮತೃಪ್ತಿಯೇ ಅವರ ಕರ್ತವ್ಯವಲ್ಲವೆಂದೂ ಪುರುಷರು ಹಾಗೆ ತಿಳಿದುಕೊಂಡಿದ್ದರೆ ಅವರಿಗೆ ಬುದ್ಧಿಗಲಿಸಲು ಸ್ತ್ರೀಯರು ಬದ್ಧಕಂಕಣರಾಗಿರೆಂದೂ " ಮೊದಲನೇ ಚರಣವು ಬೋಧಿಸುತ್ತಿದೆ. ಈ ಚರಣದಲ್ಲಿ ಮುಗ್ಧ ರೀತಿಯಿಂದಾಗಲಿ ಭಿಡೆಯ ಸ್ವಭಾವದಿಂದಾಗಲಿ ಪುರುಷರ ವಶರಾಗುವ ಸ್ತ್ರೀಯರಿಗೆ ಚುರುಕು ಮುಟ್ಟಿಸಲು ನಿರ್ಜೀವ ಯಂತ್ರಗಳಂತೆ ಮಾನವತ್ವವನ್ನೇ ಕಳೆದುಕೊಳ್ಳಬೇಡಿರೆಂದು ಕೊಟ್ಟ ಸಾಮ್ಯದ ಭಾವನೆಯು ಒಳ್ಳೇ ಹೃದಯಂಗಮವಾಗಿದೆ. ಇಚ್ಛೆಯ ವಿರುದ್ಧ ವರ್ತಿಸುವ ಹಾಗೂ ಬಲಾತ್ಕಾರದಿಂದ ಭೋಗವನ್ನು ಅಪೇಕ್ಷಿಸುವ ಪುರುಷರೂ ಈ ಸಾಮ್ಯದಿಂದ ಬುದ್ಧಿಗಲಿಯುವಂತಿದೆ.

ಎರಡನೇ ಚರಣವು ಮೇಲೆ ವಿವರಿಸಿದಂತಹ ಸ್ತ್ರೀವೃಂದವನ್ನೇ ಕುರಿತು, ಹೇಳಿದ್ದಾಗಿದೆ. ಗೃಹಿಣೀಪದದ ಅಧಿಕಾರವನ್ನೂ ಪುರುಷರ ಸರ್ವ ಪ್ರಗತಿಗೂ ಸ್ತ್ರೀಯು ಆಧಾರಸ್ಥಂಭವಂತೆ ಮಹತ್ವದ ಜೀವನವಾಗಿರುವದನ್ನೂ ಇದು ಬೋಧಿಸುತ್ತಿದೆ. ಕೌಟುಂಬಿಕ ಯೋಜನೆಯಲ್ಲಿ ಸ್ತ್ರೀ ಪಾತ್ರವೇ ಸರ್ವಾಧಾರವಾಗಿರುವದು. ಆದರೆ ದೈಹಿಕ ಶಕ್ತಿಯು ಪುರುಷನಲ್ಲಿ ಹೆಚ್ಚಿರಬಹುದು ಅದಾದರೂ ಸ್ತ್ರೀಯರಿಗೆ ಸಾಧಿಸಿಕೊಳ್ಳಬಾರದ ಮಾತೇನೂ ಅಲ್ಲ. ಇಂತಹ ಸ್ಥಿತಿಯಲ್ಲಿ ಅಂಜಿಕೆಯಿಂದ ಬಾಳಬೇಕುವ ಮಹಿಳೆಯರು ಅನೇಕರಿದ್ದಾರೆ. ಅವರು ಸಹ ಕಣ್ದೆರೆದು ಪುರುಷರಂತೆ ದೈಹಿಕ ಪರಿಶ್ರಮವನ್ನು ಕೂಡಾ ಪ್ರಸಂಗದಲ್ಲಿ ನಿರ್ವಹಿಸಲು ಯೋಗ್ಯತೆಯನ್ನು ಪಡೆಯಬಹುದೆಂದೂ ಈ ಚರಣವು ಸೂಚಿಸುತ್ತದೆ.

ಇನ್ನು ಮೂರನೇ ನುಡಿಯ ಮೊದಲಿನ ಚರಣವನ್ನು ನಿರೀಕ್ಷಿಸಿದರೆ ಕಾಮ, ಕಾಂಚನಗಳು ಕೇವಲ ಸ್ತ್ರೀಯರ ಜನ್ಮಸಿದ್ಧ ಹಕ್ಕೆಂದು ಬೋಧಿಸಿದ್ದು ಕಂಡುಬರುವದು. ಕಾಮ ಶಬ್ದಾರ್ಥವು ಸರ್ವ ಅಪೇಕ್ಷೆಗಳೆಂದು ವಿಶಾಲಾರ್ಥದಲ್ಲಿದ್ದರೂ ಪ್ರಸ್ತುತಕ್ಕೆ ಭೋಗಾಪೇಕ್ಷೆ ಎಂದೇ ಗ್ರಹಿಸಿ ವಿಚಾರಿಸೋಣ. ಭೋಗಾಪೇಕ್ಷೆಯು ಸ್ತ್ರೀಯರ ಹಕ್ಕು. ಮಾನವ ಜನಾಂಗದ ಮಾನಸಶಾಸ್ತ್ರದ ದೃಷ್ಟಿಯಿಂದ ಒಳಹೊಕ್ಕು ನೋಡಿದರೆ ಸಂತಾನಾಪೇಕ್ಷೆಯು ಸ್ತ್ರೀಯರಲ್ಲಿಯೇ ಹೆಚ್ಚಾಗಿರುವದು ಕಂಡುಬರುತ್ತದೆ. ಅಂದ ಮೇಲೆ ತನ್ಮೂಲವಾದ ಭೋಗಾಪೇಕ್ಷೆಯು ಅದರ ಸೊತ್ತೆಂದು ಹೇಳಿದರೆ ಇಲ್ಲಿ ಯಾವ ಬಾಧಕವೂ ಕಂಡುಬರಲಾರದು. ಹೀಗೆಂದ ಮಾತ್ರಕ್ಕೆ ಸ್ತ್ರೀಜನ್ಮದ ಸಾರ್ಥಕ್ಯವೇ ಭೋಗೋಪಭೋಗವೆಂದೂ, ಮಾತೃಪದವನ್ನು ಹೊಂದುವದೆಂದೂ, ತಿಳಿಯಲಾಗದು. ಇದು ಕೇವಲ ಗೃಹಿಣಿಯಾಗಿ ಬಾಳುವ ಸ್ತ್ರೀಯರ ಧರ್ಮದ ತಿರುಳೇ ವಿನಾ, ಸ್ತ್ರೀಯು ಬ್ರಹ್ಮಚಾರಿಣಿಯಾಗಬಾರದೆಂದಾಗಲಿ, ಅಥವಾ ಪ್ರಾಪಂಚಿಕ ಸುಖವನ್ನು ಬದಿಗೊತ್ತಿ ಪಾರಮಾರ್ಥದ ಮಾರ್ಗವನ್ನು ಅಕ್ಕಮಹಾದೇವಿಯಂತೆ ಸ್ವೀಕರಿಸಬಾರದೆಂದಾಗಲಿ, ಹೇಳಿದಂತಲ್ಲ ಪುರುಷರಂತೆ ಸ್ತ್ರೀಯರಿಗಾದರೂ ವ್ಯಕ್ತಿತ್ವವಿದೆ. ವ್ಯಕ್ತಿಸ್ವಾತಂತ್ರ್ಯವಿದೆ. ಅವಳು ತನ್ನ ಜೀವಿತದ ಸುಖದುಃಖ

ಗಳನ್ನು ತಾನು ಅರಿತು ನಡೆಯಲು ಸಂಪೂರ್ಣ ಸ್ವಾತಂತ್ರ್ಯ ವಿದೆ. ಇದೆಲ್ಲ ವ್ಯಕ್ತಿ ಸ್ವಾತಂತ್ರ್ಯದ ತಿರಳನ್ನೆ "ಕಾಮು" ವೆಂಬ (ಅಪೇಕ್ಷೆ) ವ್ಯಾಪಕಾರ್ಥದ ಶಬ್ದದಲ್ಲಿ ಕವಿಯು ನುಡಿದದ್ದು ಕಂಡುಬರುವದು.

ಇನ್ನು ಕಾಂಚನದ (ಹಣದ) ಹಕ್ಕು ಸ್ತ್ರೀಯರದೆಂದು ಹೇಳಿದ ಭಾವನೆಯೂ ಬಹಳೇ ವ್ಯಾಪಕಾರ್ಥವನ್ನು ಒಳಗೊಂಡದೆ. ಪುರುಷ ಪ್ರಧಾನವಾದ ಈ ಪ್ರಾಪಂಚಿಕ ರೂಢಿಯಲ್ಲಿ ಇದು ಅಶ್ಲಾಘ್ಯವೆಂದೂ ತಟ್ಟನೆ ನೋಡುವವರಿಗೆ ಅನಿಸಬಹುದು ಆದರೆ ವೇದಕಾಲದಿಂದ ಸ್ತ್ರೀಯರಿಗೆ ಕೊಟ್ಟ ಮಾನ್ಯತೆಯನ್ನೂ ಅಧಿಕಾರವನ್ನೂ ನೋಡಿದರೆ ಹೀಗೆಂಬುದು ಸಮಂಜಸನೆಂದೇ ಹೇಳಬಹುದು. ಇದು ಹೇಗೆಂಬುದನ್ನು ಸ್ವಲ್ಪ ಸೂಕ್ಷ್ಮವಾಗಿ ವಿಚಾರಿಸೋಣ. ಗೃಹಿಣಿಯಿಂದಲೇ ಗೃಹಸ್ಥಾಶ್ರಮದ ಮಾನಮರ್ಯಾದೆಗಳು ಸುಖಸಂತೋಷಗಳು ಎಂಬ ಮಾತು ನಿರ್ವಿವಾದವಾಗಿದೆ. ಪುರುಷನು ಧನಾರ್ಜನೆಯನ್ನು ಮಾಡಿದ ಮಾತ್ರಕ್ಕೆ ಆದರಿಂದ ಅವನಿಗೆ ಸುಖಸಂತೋಷಗಳು ಲಭಿಸಲಾರವು. ಅದನ್ನು ಅವನಿಗೆ ಸುಖವಾಗುವಂತೆ ವಿನಿಯೋಗಿಸುವ ಅಧಿಕಾರವನ್ನು ಸ್ತ್ರೀಯರಿಗೆ ಕೊಟ್ಟದ್ದಾಗಿದೆ. ಗಂಡಸು ಗಳಿಸುವವನಾದರೆ ಸ್ತ್ರೀಯು ಅದನ್ನು ಬಳಸುವವಳೂ ಉಳಿಸುವವಳೂ ಆಗಿದ್ದಾಳೆ. ಅಂದಮೇಲೆ ಧನದ ಮೇಲಿನ ಅಧಿಕಾರವು ಸ್ತ್ರೀಯರದೇ ಆಗುವದೆನ್ನಲು ಅಡ್ಡಿಯಿಲ್ಲ. ಗಳಿಸುವದು ಎಷ್ಟು ಮಹತ್ವವೋ ಅದಕ್ಕಿಂತಲೂ ಹೆಚ್ಚು ಮಹತ್ವವು ಬಳಿಸುವದಕ್ಕೂ ಉಳಿಸುವದಕ್ಕೂ ಇರುವದೆಂಬದು ಅನುಭವದ ಸಿದ್ಧಾಂತ. ಪ್ರಪಂಚದಲ್ಲಿ ಸ್ತ್ರೀಯು ದುಂದುಗಾರಳಾದರೆ ಕುಟುಂಬವು ಎಂದೂ ಸುರಳೀತವಾಗಿ ಸಾಗಲು ಸಾಧ್ಯವಿಲ್ಲ. ಅಂಥವಳು ಗೃಹಿಣೀಪದಕ್ಕೆ ಅಯೋಗ್ಯಳೆಂದೇ ಹೇಳಲು ಅಡ್ಡಿಯಿಲ್ಲ. ಇಲ್ಲಿ ಆ ವಿಷಯದ ವಿವೇಚನೆಯು ವಿಷಯಾಂತರವೆನಿಸುವದು. ಪ್ರಸ್ತುತಕ್ಕೆ ಗೃಹಸ್ಥಾಶ್ರಮದಲ್ಲಿ ಗಳಿಸಿದ ದ್ರವ್ಯದ ಮೇಲೆ ಪುರುಷರಕಿಂತಲೂ ಸ್ತ್ರೀಯರದೇ ಅಧಿಕಾರವು ಹೆಚ್ಚೆಂದು ಹೇಳುವ ವಿಷಯವನ್ನು ಕುರಿತು ವಿಚಾರ ನಡೆದಿದೆ. ಪುರುಷರು ಗಳಿಸಿ ತಂದು ಇಡುವದು ಗೃಹಿಣಿಯಿದ್ದ ಗೃಹದಲ್ಲಿ, ಅಥವಾ ಅವಳ ಸ್ವಾಧೀನದಲ್ಲಿ. ಮುಂದೆ ಅದನ್ನು ಬಳಿಸುವದು ಅವಳ ಹೇಳಿಕೆಯಂತೆ ಅಥವಾ ಗೃಹಿಣಿಯೇ ಎಂದರೂ ಸಲ್ಲುವದು. ಉಳಿದ ಹಣದ ಬೆಳ್ಳಿ-ಬಂಗಾರದ ಒಡಿವೆಗಳನ್ನು ಮಾಡಿಸಿ ಕೊಡುವದು ಗೃಹಿಣಿಗೆ ಅಂದ ಮೇಲೆ ಆ ದ್ರವ್ಯದ ಮೇಲೆ ಪುರುಷರ ಅಧಿಕಾರವು ಎಷ್ಟು ಉಳಿಯಿತೆಂಬುದನ್ನು ವಾಚಕರೇ ಯೋಚಿಸಿಕೊಳ್ಳಬೇಕು. ಇಂಥಹ ಮಾನ-ಮರ್ಯಾದೆಯನ್ನು ಉಪಭೋಗಿಸುವ ಸ್ತ್ರೀವೃಂದವು ತಮ್ಮ ಹಕ್ಕುಬಾಧ್ಯತೆಗಳನ್ನು ವಿಚಾರಿಸಿ ಅವನ್ನು ನಿರ್ವಹಿಸಲು ಸಮರ್ಥರಾಗಬೇಕೇ ವಿನಾ ತಮ್ಮ ಪಟ್ಟವನ್ನೇ ತಾವು ಅರಿಯದಷ್ಟು ವಿದ್ಯೆಬುದ್ಧಿ ಇಲ್ಲದವರಾದರೆ, ದಾಂಪತ್ಯವು ಅವರ ಪಾಲಿಗೆ ಕಟ್ಟಿ ಇಟ್ಟದ್ದೇ ಆಗಿದೆ. ಈ ಮೇರಿಗೆ ಯೋಗ್ಯ ರೀತಿಯಿಂದ ವರ್ತಿಸುವ ಮಹಿಳೆಯರಿಗೆ ಪ್ರೇಮದ ವಿನಾ ಯಾವ ಬಂಧನವೂ ಇಲ್ಲ. ಅಂಥವರು ರೂಢಿಯ ಅಪ್ರಯೋಜಕವಾದ ನಿಯಮಗಳಿಗೆ ಅಂಜಿ ದಿಕ್ಕನ್ನು (ತಮ್ಮ ಗುರಿಯನ್ನು) ಬಿಡಲಾಗದೆಂದು ಮೂರನೇ ನುಡಿಯ ಮಥಿತಾರ್ಥವಿದೆ.

(ಲೇಖಾಂಕ ೩ರಲ್ಲಿ ಮುಂದುವರಿಯುವದು)



ಬಂದ



# ಜೀವ-ತೀರ್ಥ

ಭಾವಗೀತೆಗಳ ಸಂಗ್ರಹ. ಬರೆದವರು— ಕೋ. ಚನ್ನಬಸಪ್ಪ ಕ್ರೌನ್ ೧೬ ಆಕಾರದ ಅರವತ್ತೆಂಟು ಪುಟಗಳ ನವೀನ ಕಾವ್ಯಗ್ರಂಥ. ಬೆಲೆ ೧-೦೦. ಸಜೀವ ಸಾಹಿತ್ಯಮಾಲೆ ಬಳ್ಳಾರಿ.

ಶ್ರೀ. ಕೋ. ಚೆನ್ನಬಸಪ್ಪನವರು ಪುಸ್ತಕದ ಹೆಸರಿಗೆ ತಕ್ಕಂತೆ ವಿಷಯವನ್ನು ಆಯ್ದುಕೊಂಡು, ಓದುಗರ ಜೀವವು, ಕಾವ್ಯದರಸ ತೀರ್ಥದಲ್ಲಿ ಮಿಂದು ಪುನೀತವಾಗುವಂತೆ ಉದಾತ್ತ ವಿಚಾರಗಳನ್ನೊಳಗೊಂಡ ಕವಿತೆಗಳನ್ನು ಕನ್ನಡಿಗರಿಗೆ ದಯ ಪಾಲಿಸಿದ್ದಾರೆ. ಕವನಗಳು ಸಾಂಪ್ರದಾಯಿಕ ಕವಿತೆಗಳ ಕಟ್ಟುನಿಟ್ಟುಗಳನ್ನು ಮಿಕ್ಕಿ ಸ್ವಚ್ಛಂದ ವೃತ್ತಗಳಲ್ಲಿ ಸಾಗಿವೆ. ತಾಳಲಯಗಳ ಬಂಧನವನ್ನಳಿದು ಶಬ್ದಲಾಲಿತ್ಯವನ್ನೂ ರಸ ಗಾಂಭೀರ್ಯವನ್ನೂ ಎಥೇಚ್ಛವಾಗಿ ಸಲ್ಲಿಸುವ ಇವರ ಕಾವ್ಯ ಸರಣಿಯು ಅನುಕರಣೀಯವಾಗಿದೆ. ವ್ಯಾಕರಣ ಛಂದೋ ಭಂಗಾದಿ ದೋಷಗಳ ಬಗೆಗೆ ಕಾವ್ಯಕರ್ತರೇ ಪ್ರಸ್ತಾವನೆಯ ಎರಡನೇ ಪುಟದಲ್ಲಿ ಸ್ಪಷ್ಟೋಕ್ತವಾಗಿ ತಮ್ಮ ಸೌಜನ್ಯ ದ್ಯೋತಕವಾದ ಆತ್ಮಖಂಡನೆಯನ್ನು ಮಾಡಿಕೊಂಡಿದ್ದಾರೆ. ಆಡಿದಂತೆ ಕೃತಿಯನ್ನೂ ಮಾಡಿತೋರಿದ್ದಾರೆ. ಆದರೆ "ನನ್ನ ಸಾಮರ್ಥ್ಯದ ಎಲ್ಲೆ" ಇಷ್ಟೆ. ಎಂಬ ಸಂಕುಚಿತ ಭಾವನೆ ಯನ್ನು ಬದಲಿಸಿದಲ್ಲಿ (ಶಿವಸಾನ್ನಿಧ್ಯವನ್ನು ಸಹ ಪಡೆಯಬಲ್ಲ) ಜೀವನವು ಬೇಕಾದ ವಸ್ತುವನ್ನು ಗಳಿಸಲಾರದೆಂಬ ಸಂದೇಹವು ದೂರಾಗಬಹುದೆಂದು ನನಗೆ ತೋರುತ್ತದೆ.

ಎರಡನೇ ವಿಭಾಗದ ಕಥನಕವನಗಳೂ, ಒಳ್ಳೇ ರಸ ವತ್ತಾಗಿವೆ. ಕೊನೆಯ ೧-೨ ಪುಟದಲ್ಲಿ ಇವರ ಇತರ ಗ್ರಂಥ ಗಳ ಪಟ್ಟಿಯು ಕೊಡಲ್ಪಟ್ಟಿದೆ ಅವುಗಳನ್ನು ನೋಡಿದರೆ ಇವರು ಸಲ್ಲಿಸಿದ ಕನ್ನಡ ಸೇವೆಯು ವಿಪುಲವಾಗಿದೆ ಎಂದು ತೋರುವದು. ಇಂತಹ ಉತ್ಸಾಹಿಗಳಿಗೆ ಆಯುರಾರೋಗ್ಯ ವನ್ನೂ, ಕೃತಿಗಳು ಹೆಚ್ಚು ಸುಸಂಸ್ಕೃತವಾಗುವಂತಹ ನುಡಿ ಜಾಣ್ಮೆಯನ್ನೂ, ಪರಶಿವನು ಪರಿಪಾಲಿಸಲೆಂದು ನಮ್ಮ ಹಿರಿಯಾಸೆ.

—ನಿರೀಕ್ಷಕ.

---

# ಪೂಜೆ

ಬರೆದವರು—ಅಮಾಜಿ, (ಅ. ಮಾ. ಗಿರಿಯಪ್ಪ) ಕ್ರೌನ ೧೬ ಸೈಜಿನ ೧೦ ಪುಟಗಳ ಚಿಕ್ಕ ಕವಿತೆಯ ಪುಸ್ತಕ ಬೆಲೆ ೨೫ ನ. ಪೈ ೧೯೫೭. ಪ್ರಕಾಶಕರು ಕಾವ್ಯಕರ್ತರೇ.

ಪುಸ್ತಕವು ಚಿಕ್ಕದಾದರೂ ಮಾನವನ ಜೀವಿತದಲ್ಲಿ ಅತ್ಯವಶ್ಯಕವಾದ ಸಮಸ್ಯೆಗಳ ವಿಷಯವನ್ನು ಒಳಗೊಂಡಿದೆ. ಕವಿತೆಗಳು ನವೀನತೆಯನ್ನವಲಂಬಿಸಿದ್ದರೂ ಭಾವನೆಯೂ ವರ್ಣನಾರಚನೆಯೂ ಪ್ರಾಚೀನ ಹಿನ್ನೆಲೆಯನ್ನು ಬಿಟ್ಟಿಲ್ಲ. ಇವರಲ್ಲಿ ಕವಿತಾಶಕ್ತಿಯಿದೆ. ಆದರೆ ತಾಳಲಯಗಳೂ ಲಾಲಿ ತ್ಯವೂ ಇನ್ನೂ ಹೆಚ್ಚು ಸುಸಂಸ್ಕೃತವಾಗಬೇಕು. ಆದರೂ ಓದುಗರ ಮನಮೆಚ್ಚುವಂತೆ ಇದ್ದ ಭಾವನೆಯು ಈ ಕೊರತೆ ಯನ್ನು ತುಂಬಿಕೊಡಬಲ್ಲದು.

—ನಿರೀಕ್ಷಕ

---

# "ನೃತ್ಯಕಲೆ"

ಲೇ:- ನಾಯಣಾಚಾರ್ಯ, ದಂಡಾಪೂರ
ಪ್ರಿನ್ಸಿಪಾಲ ವನಿತಾ ಸಂಗೀತ ವಿದ್ಯಾಲಯ, ಧಾರವಾಡ.

ಇತರ ಕಲೆಗಳಂತೆ ನೃತ್ಯಕಲೆಯ ಪಾಠ ಕೊಡುವದು ಸುಲಭಸಾಧ್ಯವಲ್ಲ. ಕಲೆಯ ಬಗೆಗೆ ವಿಚಾರ ಪರಿಪ್ಲುತ ಮಾತುಗಳನ್ನಾಡಿ ನೃತ್ಯಕಲೆಯ ಬಗೆಗೆ ವಿಸ್ತರಿಸಿ ಮಾದ್ರಾ; ಹಾವಭಾವ, ಕರಚಾಲನ, ಶಿರಚಾಲನ, ಅಂಗವಿಕ್ಷೇಪ ಇವುಗಳ ವಿಷಯವಾಗಿ ಮನಮೂಡುವಂತೆ ಹೇಳುವದಕ್ಕೆ ಪ್ರವಚನವೆನ್ನುವ ರೂಢಿ ಇರುತ್ತದೆ. ಸಂಸ್ಕೃತ ಅಭ್ಯಾಸ, ಮೂಲ ಗ್ರಂಥಾವಲೋಕನ, ಅಧಾರಭೂತ ಶ್ಲೋಕಗಳ ಭಾವದ ಅರ್ಥವನ್ನು ತಿಳಿಸಿಹೇಳುವದು ಸಾಮಾನ್ಯ ಕೆಲಸವಲ್ಲ. ನಟನಾಗಿದ್ದವನಿಗೆ ಈ ಕಾರ್ಯವು ಸಾಧಿಸಲಾರದು. ಅವನು ನಾಟ್ಯಕಲೆಯನ್ನು ಹೇಳಿಕೊಡಲು ಸಮರ್ಥನಾಗುವದಿಲ್ಲಾ. ಒಳ್ಳೆ ನೃತ್ಯಗಾರರು ಪ್ರಸಿದ್ಧಿಯನ್ನು ಹೊಂದಿರುವರೆಂಬ ಮಾತ್ರಕ್ಕೆ ನೃತ್ಯಕಲೆಯನ್ನು ಪರರಿಗೆ ಹೇಳಿಕೊಡುವ ಸಾಮರ್ಥ್ಯಉಳ್ಳವರೆಂಬ ಭಾವನೆಯು ತೀರಾ ತಪ್ಪಾದದ್ದು. ಒಳ್ಳೆ ತಾಳ್ಮೆ, ಶಾಸ್ತ್ರದ ಸಂಪೂರ್ಣ ಜ್ಞಾನ, ನೃತ್ಯ ಅಭ್ಯಾಸದ ತಳಹದಿ, ಹಾಗು ಶಿಷ್ಯರ ಮಾನಸಿಕ ವೃತ್ತಿಯ ಯೋಗ್ಯತೆಯನ್ನು ಅಳೆಯುವ ಕುಶಲತೆ, ಮುಖ್ಯವಾಗಿ ಹೊಸ ಹೊಸ ನೃತ್ಯಗಳನ್ನು ಸೃಷ್ಟಿಸುವ ಶಕ್ತಿ, ಇವು ನಾಟ್ಯಾಚಾರ್ಯರಲ್ಲಿರಬಹುದಾದ ಸದ್ಗುಣಗಳಾಗಿವೆ. ಇಷ್ಟೊಂದು ಯೋಗ್ಯತೆ ಇದ್ದವರೇ ನೃತ್ಯದ ವಿಷಯವಾಗಿ ಶಿಷ್ಯರಿಗೆ ಪಾಠ ಹೇಳಬಲ್ಲರು. ನಮ್ಮ ಭಾರತದಲ್ಲಿ ಮೇಲೆ ನಿರೂಪಿಸಿದ ಪ್ರಕಾರ ಗುಣಗಳುಳ್ಳ ಕೆಲವೇ ಜನರುಗಳಿರುವರು. ಅಂದರೆ ಒಂದು ಕೈಬೆರಳಿನಿಂದ ಎಣಿಸುವಷ್ಟು ಇರುವರು. ನೃತ್ಯಕಲೆಯನ್ನು ವಿಶ್ವವಿದ್ಯಾಲಯಗಳಲ್ಲಿ ಪಠ್ಯ ವಿಷಯವನ್ನಾಗಿಟ್ಟರೆ ನಾಟ್ಯಗುರುಗಳ ಕೊರತೆಯು ಬಹಳ ಮಟ್ಟಿಗೆ ಕಡಿಮೆಯಾಗಲು ಸಾಧ್ಯವಿದೆ.

ಈಗಿನ ಶಾಸ್ತ್ರೋಕ್ತ ನೃತ್ಯವಾಗಲಿ, ಜಾನಪದ ನೃತ್ಯವಾಗಲಿ, ತನ್ನದೇ ಆದ ಒಂದು ವೈಶಿಷ್ಟ್ಯವನ್ನು ಬೆಳೆಸಿಕೊಂಡು ಬಂದಿದೆ. ಆಧುನಿಕ ನೃತ್ಯಗಳು ಭರತನು ಬರೆದ ನಾಟ್ಯ ಶಾಸ್ತ್ರವನ್ನೇ ಆಧಾರವಾಗಿಟ್ಟುಕೊಂಡಿದ್ದರೂ ಬೇರೆ ಬೇರೆ ದಾರಿಯನ್ನು ಹಿಡಿದಿವೆ. ಈಗಿನ ನಾಟ್ಯಗುರುಗಳು ನಾಟ್ಯಶಾಸ್ತ್ರವನ್ನು ಅನುಸರಿಸುವದಕ್ಕಿಂತ ಹೆಚ್ಚಾಗಿ "ನಂದಿಕೇಶ್ವರ ಅಭಿನಯದರ್ಪಣ" ವನ್ನೂ "ಸಂಗೀತ ರತ್ನಾಕರವನ್ನೂ" ಉಪಯೋಗಿಸುತ್ತಾರೆ. ಅವುಗಳಲ್ಲಿ ತಿಳಿಸಿದ ವಿನಿಯೋಗಗಳು ಬರಿಯ ಸೂಚನೆಗಳಾಗಿವೆ ಹೊರ್ತು ವಿವರಣಾತ್ಮಕವಾಗಿಲ್ಲಾ. ನಂದೀಕೇಶ್ವರ ನಿರೂಪಿತ ಮುದ್ರೆಗಳು ಸಹಾ ಅದಲು ಬದಲಾಗಿ ಪ್ರಚಾರದಲ್ಲಿ ಬಂದಿವೆ. ಅದು ಕಾರಣ ಇನ್ನು ಮೇಲಾದರೂ ಅಭಿನಯದರ್ಪಣದ ಅಭ್ಯಾಸ ಚೆನ್ನಾಗಿ ಮಾಡಿ ಅದರಲ್ಲಿ ನಿರೂಪಿತ ಪ್ರಕಾರ ಎಲ್ಲ ನೃತ್ಯ ವಿಧಾನಗಳನ್ನು ಬಳಿಕೆಯಲ್ಲಿ ತಂದರೆ ಭಾರತದ ಆದ್ಯಂತ ಒಂದೇಬಗೆಯಾದ ರೀತಿಯು ಕಂಗೊಳಿಸುವದು.

ಈಗಿನ ಭರತನಾಟ್ಯವು ತಾತ್ಕಾಲಿಕ ಸಂಸ್ಕೃತಿಯನ್ನು ರೂಪಿಸುತ್ತದಲ್ಲದೆ ಪ್ರಾಚೀನ ಸಾಂಪ್ರದಾಯವಾಗಿ ಬಂದುದಾಗಿಲ್ಲಾ. ಕೇರಳದಲ್ಲಿರುವ "ಕಥಕ್ಕಳಿಯು" ಬಹಳ ಮಟ್ಟಿಗೆ ನಾಟ್ಯಶಾಸ್ತ್ರವನ್ನು ಅನುಸರಿಸುತ್ತದೆ. ದೇಹದ ಚಲನೆಗಳು, ಕಾಲಿನ ಕೆಲಸವೆಲ್ಲವೂ, ನಾಟ್ಯಶಾಸ್ತ್ರವನ್ನು ಹೊಂದಿಕೊಂಡಿದ್ದು ಕೈಮುದ್ರೆಗಳಲ್ಲಿ ಮಾತ್ರ ವ್ಯತ್ಯಾಸ ಕಂಡು ಬರುತ್ತದೆ. ಕಥಕ್ಕಳಿಯೂ, ಭರತನಾಟ್ಯವೂ ಅವುಗಳ ಜನ್ಮಸ್ಥಾನವನ್ನು ಬಿಟ್ಟರೆ ಇತರ ಕಡೆಗಳಲ್ಲಿ ಬೇರೆ ಬೇರೆ ರೂಪವನ್ನು ತಾಳಿವೆ. ಪಂಡಿತರು ಎಷ್ಟು ತರ್ಕಿಸಿದರೂ ಮೈಸೂರ ಸಾಂಪ್ರದಾಯ, ತಂಜಾವೂರ ಸಾಂಪ್ರದಾಯ, ಆಂಧ್ರ ಸಾಂಪ್ರದಾಯ, ಮದ್ರಾಸ ಸಾಂಪ್ರದಾಯ, ಎಂದು ಬೇರೆ ಬೇರೆಯಾಗಿ ವಿಂಗಡಿಸಲು ಸಾಧ್ಯವಾಗಿದೆ. ಈ ಸಾಂಪ್ರದಾಯಗಳು ಕಾಲಕ್ಕೆ ತಕ್ಕಂತೆ ಗುರುಶಿಷ್ಯರಿಗೆ ಅನುಕೂಲವಾಗುವಂತೆ ಬದಲಾಗುತ್ತ ಬಂದಿವೆ. ಹಾಗೆಯೇ ದಕ್ಷಿಣ ಮಲಬಾರದ ಕಥಕ್ಕಳಿಗೂ ಉತ್ತರ ಮಲಬಾರದ ಕಥಕ್ಕಳಿಗೂ ತುಂಬಾ ವ್ಯತ್ಯಾಸವಿದೆ. ಇದರಂತೆಯೇ ವ್ಯತ್ಯಾಸವನ್ನು ದಿಲ್ಲಿ, ಲಖನೌ,

ಜಯಪುರ, ದ ಕಥಕ್ಕದಲ್ಲಿಯೂ ಕಾಣಬಹುದು. ಮಣಿಪುರಿಯು ಬೇರೆ ಬೇರೆ ಗುರುಗಳಿಂದ ಬೇರೆ ಬೇರೆ ಮಾರ್ಪಾಟ ಹೊಂದುತ್ತ ಬಂದಿದೆ. ಮೇಲೆ ಹೇಳಿದ ಅಭಿಪ್ರಾಯಗಳು ಆಧುನಿಕ ಭಾರತ ನೃತ್ಯಸಾಂಪ್ರದಾಯಕ್ಕೆ ಇರುವ ರೂಪರೇಷೆಗಳನ್ನು ಸೂಚಿಸುತ್ತವೆ.

ಈ ಬದಲಾವಣೆಗೆ ಕಾರಣರು ಗುರುಗಳು ದೇಶ ವಿಭಾಗವೂ. ಆದರೆ ಶಾಸ್ತ್ರವಲ್ಲವೆಂಬ ಮಾತನ್ನು ಯಾರೂ ಮರೆಯಕೂಡದು. ಎಲ್ಲ ರೀತಿಯಿಂದ ಸಂಶೋಧನವಾದ ಭಾರತದ ಆದ್ಯಂತ ಒಂದೇ ಒಂದು ಬಗೆಯಾದ ಒಂದೊಂದು ನೃತ್ಯವಿಭಾಗಕ್ಕೆ ಒಂದೇ ರೀತಿಯಾದ ಆದೇಶವನ್ನೀಯುವ ಗ್ರಂಥಗಳ ಮನ್ನಣೆಯೊಂದಿಗೆ ಚರ್ಚಿಸಿ ನೃತ್ಯದ ಸ್ಥಿರ ಸ್ವರೂಪವು ಬೆಳಕಿಗೆ ಬರಬೇಕಾಗಿ ಲೇಖಕರ ಹಾರೈಕೆ.

ನೃತ್ಯಕಲೆಯ ಸಂಬಂಧವಾಗಿ ಭರತನಾಟ್ಯ ಶಾಸ್ತ್ರದಂತಹ ಗ್ರಂಥವು ಬೇರೊಂದಿಲ್ಲಾ. ನಾವು ಓದುವ ನಾಟ್ಯಶಾಸ್ತ್ರವು "ದ್ವಾದಶಸಹಸ್ರಿ" ಎಂಬ ಗ್ರಂಥದಿಂದ ಸಂಗ್ರಹಿಸಿದ "ಷಟ್‌ಸಹಸ್ರಿ" ಎಂಬ ಗ್ರಂಥದ ರೂಪವಾಗಿದೆ. ಪ್ರಾಚೀನ ಗ್ರಂಥಗಳು ಕಾಲಕ್ರಮೇಣ ಸಂಕ್ಷಿಪ್ತವಾಗಿರುವಂತೆ ಈ ನಾಟ್ಯಶಾಸ್ತ್ರವೂ ೬೬೦೦೦ ಶ್ಲೋಕಗಳಿರುವ ಬ್ರಹ್ಮವಿರಚಿತ ನಾಟ್ಯವೇದದ ಸಂಕ್ಷಿಪ್ತ ರೂಪವೆಂದು ಊಹಿಸಲಾಗಿದೆ. ನಾಟ್ಯಶಾಸ್ತ್ರದಲ್ಲಿ ೬೦೦೦ ಶ್ಲೋಕಗಳನ್ನು ಭರತನು ಬರೆದಿರುವದುಂಟು. ಭರತನ ಕಾಲದ ನಂತರ ಆಗಿಹೋದ ಅಭಿನವಗುಪ್ತ, ಧನಂಜಯ ಮುಂತಾದವರು ಭರತನನ್ನು "ಷಟ್‌ಸಹಸ್ರಕಾರ" ನೆಂಬದಾಗಿ ಸಂಬೋಧಿಸಿದ್ದಾರೆ. ಅಭಿನವಗುಪ್ತನು "ಧ್ವನ್ಯಾಲೋಕ" ಎಂಬ ಗ್ರಂಥವನ್ನೂ ಧನಂಜಯನು "ದಶರೂಪಕ" ಎಂಬ ಗ್ರಂಥವನ್ನೂ ಬರೆದಿದ್ದಾನೆ. ಇವೆರಡೂ ಕಲೆ ಮತ್ತು ವಿಮರ್ಶಾತ್ಮಕ ಗ್ರಂಥಗಳಾಗಿವೆ. ನೃತ್ಯಕಲೆಗೆ ಸಂಬಂಧಿಸಿದ ಇತರ ಗ್ರಂತಗಳು ಯಾವೆಂದರೆ ೧ ಭರತಾರ್ಣವ, ೨ ಭರತಾರ್ಥಚಂದ್ರಿಕಾ, ೩ ಅಭಿನಯದರ್ಪಣ ಇವೆಲ್ಲವೂ ನಂದೀಕೇಶ್ವರನ ಬರವಣಿಗೆಗಳು. ಅಭಿನಯದರ್ಪಣವು ಭರತಾರ್ಣವದ ಸಂಕ್ಷಿಪ್ತರೂಪವೆಂದು ಕೆಲವರು ಅಭಿಪ್ರಾಯಪಡುತ್ತಾರೆ. ನಂದಿಕೇಶ್ವರನು ಸಂಗೀತಕಲೆ, ತಾಳ, ಅಭಿನಯ, ನೃತ್ತಾಭಿನಯ, ಕಾಯಶಾಸ್ತ್ರ, ಯೋಗತಂತ್ರ, ಪೂರ್ವ ಮೀಮಾಂಸ ಮುಂತಾದವುಗಳ ಮೇಲೆ ಗ್ರಂಥಗಳನ್ನು ಬರೆದಿರುವನೆಂಬ ಊಹೆ ಇದೆ. ಸಾರಂಗದೇವನ ಸಂಗೀತ ಮತ್ತು ನೃತ್ಯಕಲೆಗಳ ವಿಚಾರವಾಗಿ ಬರೆದ "ಸಂಗೀತ ರತ್ನಾಕರ" ವೆಂಬ ಗ್ರಂಥವು ಪ್ರಸಿದ್ಧವಾಗಿದೆ.

ನೃತ್ಯಕಲೆಯು ಧಾರ್ಮಿಕ ಸಂಸ್ಕಾರವಾಗಿ ಉತ್ಪನ್ನವಾಯಿತು. ಇದೇ ಕಾರಣದಿಂದ ಇಂದಿನ ಭರತನಾಟ್ಯದ ವಿಷಯಗಳು ಕೂಡಾ ಪುರಾಣ ಮತ್ತು ಭಕ್ತಿಮಾರ್ಗವನ್ನೇ ಆಧಾರವಾಗಿಟ್ಟುಕೊಂಡಿವೆ. ಇತ್ತೀಚೆಗೆ ಆಧುನಿಕ ಮತ್ತು ಲೌಕಿಕ ವಿಷಯಗಳ ಪ್ರವೇಶವಾಗಹತ್ತಿದೆ. ಇದು ಸರಿಯಾದುದಲ್ಲವೆಂಬದು ಲೇಖಕನ ಅಭಿಮತವಾಗಿದೆ. ನೃತ್ಯವು ದೇವರಿಗೆ ಅರ್ಪಿಸುವ ಪೂಜಾ ವಿಧಾನವಾಗಿತ್ತು. ಪ್ರಾಚೀನ ಕಾಲದಲ್ಲಿ ಮಹರ್ಷಿಗಳೂ, ತಪಸ್ವಿಗಳೂ ಆನಂದಪರರಾಗಿ ಯಜ್ಞಕಾಲದಲ್ಲಿ ಕುಣಿಯುತ್ತಿದ್ದರೆಂಬದು ಆಧಾರಭೂತ ಸಂಗತಿಯಾಗಿದೆ. ದೇವರ ಪೂಜೆಯ ೧೬ ಪ್ರಕಾರ ಸಮರ್ಪಣೆಗಳಲ್ಲಿ ನೃತ್ಯವು ಒಂದಾಗಿದೆ. ಪೂಜಕನು "ನೃತ್ಯಂ ಸಮರ್ಪಯಾಮಿ" ಎಂದು ನಿವೇದನ ಮಾಡುವ ರೂಢಿಯಾಗಿತ್ತು.

ಇದರ ಸಾಕ್ಷಿಯಾಗಿಯೇ ನಾವು ನಮ್ಮ ದೇವಾಲಯಗಳಲ್ಲಿ ನೃತ್ಯಭಂಗಿಗಳನ್ನು ಶಿಲ್ಪವಸ್ತುವಾಗಿಯೂ ಚಿತ್ರಕಲೆಯ ವಸ್ತುವಾಗಿಯೂ ಉಪಯೋಗಿಸಿರುವದನ್ನು ಕಾಣುತ್ತೇವೆ. ಭಕ್ತನು ನೃತ್ಯಕಲೆಯಲ್ಲಿ ವಿಶ್ವಾಸವನ್ನು ಇಟ್ಟಿದ್ದು ಆ ಕಲೆಯು ಶ್ರೀ ನಟರಾಜನಿಂದಲೇ ಹುಟ್ಟಿರುವದೆಂದು ಭಾವಿಸಿದ್ದನು. ಹಿಂದೂ ಧರ್ಮದಲ್ಲಿ ರೌದ್ರಾವೇಶದಲ್ಲಿ ಆನಂದಾವೇಶದಲ್ಲಿ ದೇವತೆಯರೆಲ್ಲ ಕುಣಿಯುವ ಹಲವಾರು ಸಂದರ್ಭಗಳಿವೆ.

ಶಿವ, ಕಾಳಿ, ಸರಸ್ವತಿ, ಬ್ರಹ್ಮ, ಅಪ್ಸರೆಯರು, ಶ್ರೀಕೃಷ್ಣ, ಗೋಪಿಕಾಸ್ತ್ರೀಯರು, ಶ್ರೀಗಣೇಶನು ಕೂಡಾ ನರ್ತಿಸಿದ ಸನ್ನಿವೇಶಗಳು ಪುರಾಣಗಳಲ್ಲಿ ಉಪಲಬ್ಧವಾಗಿವೆ. ಮಹಾದೇವರಂತೂ ಅತಿ ಪ್ರಸಿದ್ಧ ನರ್ತಕರೆಂಬದು "ಶಿವತಾಂಡವ" ನೃತ್ಯದ ಹೆಸರಿನಿಂದ ಗೊತ್ತಾಗುವದು. ಅಂದರೆ ಶಿವನು ತಾಂಡವ ನೃತ್ಯವನ್ನು ಯಾವ ರೀತಿಯಾಗಿ ಅಭಿನಯಿಸಿದನೋ ಅದೇ ರೀತಿಯನ್ನು ಶಾಸ್ತ್ರಾದಿಗಳು ನಿರೂಪಿಸುತ್ತವೆ. ಹಿಂದೂ ದೇಶದಲ್ಲಿ ಧರ್ಮ ಸಂಸ್ಕಾರಕ್ಕೂ ನೃತ್ಯಕ್ಕೂ ಆತ್ಮೀಯತೆಯ ಸಂಬಂಧವಿದೆ ಎಂಬ ನಂಬಿಕೆಯನ್ನು ಈ ಸನ್ನಿವೇಶಗಳು ಸೂಚಿಸುತ್ತವೆ.

ಇದೇ ನಂಬಿಕೆಯಿಂದಾಗಿ ದೇವದಾಸಿ ನೃತ್ಯ ಸಾಂಪ್ರದಾಯವು ಪ್ರಾರಂಭವಾಯಿತು. ಈ ದೇವದಾಸಿಯರ ನೃತ್ಯವು ಈಗಲೂ ದಕ್ಷಿಣ ಕಡೆಯ ಎಲ್ಲ ದೇವಸ್ಥಾನಗಳಲ್ಲಿ ಪ್ರಚಾರದಲ್ಲಿ ಇದೆ. ನೃತ್ಯಕಲೆಯು ಹಿಂದಿನ ಕಾಲದ ಅರಸಿಯರೂ ರಾಜಕುಮಾರಿಯರೂ ಕಲಿಯುವಂತಹ ಘನವಾದ ವಿದ್ಯೆಯಾಗಿತ್ತು.

ತ್ರಿಲೋಕಕ್ಕೆ ಧುರಂಧರ ಪರಾಕ್ರಮಿಯಾದ ಅರ್ಜುನನು ಒಳ್ಳೆ ಉತ್ತಮನಾದ ನರ್ತಕನಾಗಿದನು. ಅವನು ವಿರಾಟ

ಪುತ್ರಿ ಉತ್ತರೆಗೆ ಕಲಿಸಿಕೊಡುತ್ತಿದ್ದನೆಂಬ ಕಥೆಯು ಪುರಾಣ ದಲ್ಲಿ ಪ್ರಸಿದ್ಧವಾಗಿದೆ. ಮೊದಲಿನ ಕಾಲದಲ್ಲಿ ಪ್ರತಿಯೊಬ್ಬರೂ ಈ ವಿದ್ಯೆಯನ್ನು ಯಥಾಸಾಂಗವಾಗಿ ಕಲಿಯುತ್ತಿದ್ದರು. ೧ ನೇಯ ಪರಾಕ್ರಮಿ ಬಾಹುವಿನ ರಾಣಿ " ರೂಪವತಿಯೂ " ಹೊಯಿಸಳ ಶಾಂತಲಾದೇವಿಯೂ, ಮಾಲವಿಕೆಯೂ, ನರ್ತಿಸಿ ನೃತ್ಯಕಲೆಯ ಮಹತ್ವವನ್ನು ತೋರಿಸಿದ ಸಂದರ್ಭಗಳು ಚರಿತ್ರೆಗಳಲ್ಲಿ ಅಡಕವಾಗಿವೆ. ಅರಸರು ವೀಣೆಯನ್ನೂ ಕೊಳ ಲನ್ನೂ ತಮ್ಮ ಸ್ತ್ರೀಯರಿಗೆ ಪ್ರೋತ್ಸಾಹಿಸುವದನ್ನು ಓದಿದ್ದೇನೆ. ರುದ್ರಾಯ ಅರಸನು ತನ್ನ ಹೆಂಡತಿ ಚಂದ್ರವತಿಯ ನೃತ್ಯಕ್ಕೆ ಕೊಳಲು ಬಾರಿಸುವದನ್ನು ಕೇಳಿದ್ದೇವೆ. ಸಮುದ್ರಗುಪ್ತ, ಅಗ್ನಿವರ್ಮ ಮತ್ತು ಇನ್ನೂ ಅನೇಕರು ಈ ಕಲೆಯನ್ನು ಅಭಿ ಮಾನದಿಂದ ಅಭ್ಯಸಿಸಿ ಪ್ರಚಾರದಲ್ಲಿ ಇಟ್ಟುಕೊಂಡದ್ದನ್ನು ಚರಿತ್ರೆಯಿಂದ ಓದಿ ತಿಳಿಸಿದ್ದೇವೆ. ಈ ಮಾತು ಭಾರತದಲ್ಲಿ ಪರಕೀಯರ ದಾಳಿಯಾಗುವ ಮುನ್ನ ಇತ್ತೆಂದು ವಿಷಾದವಾಗಿ ಹೇಳಬೇಕಾಗುತ್ತದೆ. ಯಾವ ಕಾಲಕ್ಕೆ ಪರಕೀಯರು ದಾಳಿ ಮಾಡಹತ್ತಿದರೋ ಆಗ್ಗೆ ಅರಸರೂ ಸೇನಾಪತಿಗಳೂ ದಾಳಿ ಯಿಂದ ತಮ್ಮ ರಾಜ್ಯವನ್ನು ಸಂರಕ್ಷಿಸುವ ಗೊಂದಲದಲ್ಲಿ ಬಿದ್ದು ಎಲ್ಲರೂ ಈ ಕಲೆಯನ್ನು ಮರೆಯಬೇಕಾಯಿತು. ಶಾಂತಿಕಾಲದಲ್ಲಿ ವಿಶೇಷ ಪ್ರೋತ್ಸಾಹಹೊಂದುತ್ತಿದ್ದ ಈ ಕಲೆಯು ಕ್ಷೀಣವಾಗುತ್ತ ಕೇವಲ ದೇವದಾಸಿಯರಲ್ಲಿ ಮಾತ್ರ ನೆಲೆಗೊಳಿಸುತ್ತ ಬಂದಿತು. ಅವರಾದರೂ ಬಳಲಿ ಬೆಂಡಾಗಿ ಹೊಟ್ಟೆಯ ಪಾಡಿಗಾಗಿ ಮರ್ಯಾದೆ ಇಟ್ಟುಕೊಳ್ಳದೆ ಕಲೆಯನ್ನು ಕಾಪಾಡಲು ಅಶಕ್ತರಾಗಿ ಉಜ್ವಲವಾದ ಈ ಕಲೆ ಯನ್ನು ಕಲಂಕಿತವನ್ನಾಗಿ ಮಾಡಿಬಿಟ್ಟರು. ನೃತ್ಯಕ್ಕೂ ದುರಾ ಚಾರಕ್ಕೂ ಗಂಟುಹಾಕುವ ಜನರು ಇನ್ನೂ ಇದ್ದಾರೆ. ಪರ ಕೀಯರ ಸಂಪರ್ಕ ಭಾರತಕ್ಕೆ ಹೆಚ್ಚಾದಂತೆ ನೃತ್ಯಗಾರರ ಸ್ಥಿತಿಯು ಕೆಡುತ್ತ ಬಂತು. ಒಂದಾನೊಂದು ಕಾಲದಲ್ಲಿ ದೇವಸ್ಥಾನದಲ್ಲಿ ಭಕ್ತಿಯುತವಾಗಿ ದೈವಕ್ಕೆ ಅರ್ಪಿತವಾಗಿದ್ದ ಶ್ರೇಷ್ಠವಾದ ಕಲೆಯು ಆ ಮೇಲೆ ಅರಸರುಗಳ ಅಥವಾ ಬಾದಶಹರ ಮನೋಲ್ಲಾಸಕ್ಕಾಗಿ ಬಳಸಹತ್ತಿತು. ದೈವಿಕ ಭಾವನೆಯಿಂದ ಕೂಡಿದ ಕಲೆಗೆ ಕಾಮುಕತೆಯ ಲಕ್ಷಣಗಳು ತಲೆದೋರಹತ್ತಿದವು. ಆದರೆ ವಿಂಧ್ಯ ಪರ್ವತಗಳ ದಕ್ಷಿಣದಲ್ಲಿ ಪರಕೀಯರ ದಾಳಿ ಕಡ್ಮಿ ಇದ್ದ ಮೂಲಕ ಇಲ್ಲಿಯ ಅರಸರು ಗಳು ದಂಡೆತ್ತಿರುವವರನ್ನು ತಡೆದದ್ದರಿಂದ ಕಲೆಯು ಅಷ್ಟು ಅವನತಿಹೊಂದದೆ ತನ್ನ ಪೂರ್ವ ರೂಪದಲ್ಲಿ ಇರಹತ್ತಿತು. ಹೊಯ್ಸಳ ರಾಜರೂ, ಪಾಂಡ್ಯ, ಚೋಳ, ರಾಷ್ಟ್ರಕೂಟ, ರಾಜವಂಶದವರು ನೃತ್ಯಕಲೆಯ ಆಶ್ರಯದಾತರಾದರು. ಅವರು ಕಲೆಗಿತ್ತ ಪ್ರೋತ್ಸಾಹವನ್ನು ಯಾರೂ ಎಂದೂ ಮರೆಯದಂತಹ ಸಂಗತಿಯಾಗಿದೆ. ಇದು ಕಾರಣದಿಂದ ದಕ್ಷಿಣದಲ್ಲಿ ನೃತ್ಯಕಲೆ ಜೀವಂತವಾಗಿ ಉಳಿಯಿತು. ಈ ಕಲೆಯ ಉಗಮವು ಉತ್ತರದಲ್ಲಿ ಆದರೂ ಬದುಕಿಸಿದ್ದು ದಕ್ಷಿಣ ದೇಶವೆಂಬ ಮತಕ್ಕೆ ಯಾರೂ ವಿರೋಧ ಮಾಡ ಲಾರರು.

ಬ್ರಿಟಿಶರ ಕಾಲದಲ್ಲಿಯಾದರೂ ಈ ಕಲೆಗೆ ಪ್ರೋತ್ಸಾಹ ದೊರೆಯಲಿಲ್ಲಾ. ಈಗ ತಾನೆ ಸ್ವತಂತ್ರ ಭಾರತವು ಎಲ್ಲ ಕಲೆಗಳ ಜೀರ್ಣೋದ್ಧಾರ ಕಾರ್ಯವನ್ನು ಕೈಕೊಂಡಿದೆ. ಇನ್ನು ಮೇಲಾದರೂ ಮೊದಲಿನ ಗ್ರಂಥಗಳೂ ನರ್ತನ ಪದ್ಧ ತಿಯೂ ಪ್ರಚಾರದಲ್ಲಿ ಬಂದು ಆದರಣೀಯವಾದ ಕಲೆ ಎಂದು ಜನಗಳಿಂದ ಪೋಷಿಸಲ್ಪಡಲೆಂದು ಹಾರೈಸುತ್ತೇನೆ. ಇನ್ನು ಮೇಲೆ ಭಾರತವು ಜಗತ್ತಿನಲ್ಲಿ ಕಲೆಯ ಉಗಮಸ್ಥಾನವಾಗಿ ಮೆರೆಯಲೆಂದೂ, ಪರದೇಶಿಯರಿಗೆ ಕೂಡಾ ಇರದ ಅಭ್ಯಾಸ ಮಾಡಿಸಲೆಂದೂ, ದಯಾಘನನಾದ ಪರಮಾತ್ಮನಲ್ಲಿ ಬೇಡಿ ಕೊಳ್ಳುತ್ತೇನೆ.



# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ ಅಕ್ಕನ ಪೆಟ್ಟಿಗೆ 'ಗೆ ಓಲೆಗಳನ್ನು ಕಳುಹಿಸಬಹುದು; ಮತ್ತು ನೀವೇ ಬರೆದ ಸಣ್ಣ ಕತೆ, ಕವನ, ಆಟ ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ. ನೀವೇ ತೆಗೆದ ಅಂದವಾದ ಚಿತ್ರವಿದ್ದರೆ ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು 'ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು, ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲಾ ಬರೆದು, ಪಾಕೇಟಿನಲ್ಲಿ ಹಾಕಿ, ಕಳಿಸಿಬಿಡಿ. 'ಅಕ್ಕನ ಪೆಟ್ಟಿಗೆ'ಗೆ ಈಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರ ವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರದ (ಬ್ಲಾಕ) ಕಳಿಸಿದರೆ,ಅದನ್ನೂ ಅವರ ಪರಿಚಯ ವನ್ನೂ ಸಾಧ್ಯವಾದ ಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

**ಅಕ್ಕನ ಪೆಟ್ಟಿಗೆ**

**ವೀರಮಾತಾ ಕಾರ್ಯಾಲಯ,**

ವನಿತಾಸೇವಾ ಸಮಾಜ ಧಾರವಾಡ.

**ಧಾರವಾಡ.**

**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು ..............................

ವಯಸ್ಸು ಮತ್ತು ಓದುತ್ತಿರುವ ಇಯತ್ತೆ ..............................

ಅಲ್ಪ ಪರಿಚಯ ..............................

ಪೂರ್ಣ ವಿಳಾಸ ..............................

..............................(ಮನೆ ನಂಬರ ಸಹಿತ)..............................

೨ ಆಣೆ ಸದಸ್ಯತ್ವದ ಫೀಯನ್ನು ಕೊಟ್ಟು ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು ಇಂದಿನಿಂದ ನಾನು ಸದಸ್ಯ ನಾ/ಳಾಗಿದ್ದೇನೆ.

ತಾರೀಖು .............. ಸಹಿ

## ಈ ತಿಂಗಳ ಹೊಸ ಸದಸ್ಯರು

೧) ವೆಂಕಟರಮಣ ಸುಬ್ರಾವ ಭಟ್ಟ, ವಯ ೧೪ ಓದುವ ತರಗತಿ ೮ ನಾಡಿಗಲ್ಲಿ ಸಿರ್ಸಿ.

೨) ಪ್ರೇಮಾ ನಾರಾಯಣರಾವ ಉಡಪಿ ವಯ ೧೪ ಓದುವ ತರಗತಿ ೧೦, ಕತೆಕಾದಂಬರಿಗಳನ್ನು ಓದುವದರಲ್ಲಿ ಆಸಕ್ತಿ, ಅಡ್ರೆಸ್– ಹನುಮನ ಗಲ್ಲಿ ಹುಬ್ಬಳ್ಳಿ.

೩) ಶಿವಲೀಲಾ ಬಸಲಿಂಗಪ್ಪ ಅಳಗುಂಡಗಿ ವಯ ೧೫ ಓದುವ ತರಗತಿ ೧೦, ಕತೆ ಕವನ ಚುಟುಕುಗಳನ್ನು ಬರೆಯುವದರಲ್ಲಿಯೂ ಆಸಕ್ತಿ, ಅಡ್ರೆಸ್ ಅಳಗುಂಡಿ ಓಣಿ ಹುಬ್ಬಳ್ಳಿ.

## ಸದಸ್ಯರ ಪತ್ರಕ್ಕೆ ಉತ್ತರ

೧) ವೆಂಕಟರಮಣ ಸುಬ್ರಾವ ಭಟ್ಟ, ತಮ್ಮಾ ನಿನ್ನ ಒಗಟೆ ಹಾಗು ಚಿಕ್ಕ ಹಾಡನ್ನು ಮುದ್ರಿಸಿದೆ. ಚಿಕ್ಕ ಕತೆ ಕವಿತೆಗಳನ್ನೂ ಬರೆಯುಲು ಪ್ರಯತ್ನಿಸು. ಬರವಣಿಗೆಯ ಕಲೆಯು ನಿನಗೆ ಸಾಧಿಸುವಂತಿದೆ.

ನಿನ್ನ ಮಮತೆಯ
ಹಿರಿಯಕ್ಕ

## ಅಕ್ಕನ ಬಳಗದ ಎಲ್ಲ ಸದಸ್ಯರಿಗೆ

ಹಿಂದಿನ ಎರಡು ಸಂಚಿಕೆಗಳು ನಮ್ಮ ವಿದ್ಯಾ ಸಂಸ್ಥೆಯ ವಿಶೇಷ ಸಂಚಿಕೆಯಾಗಿ ಹೊರಟಿದ್ದರಿಂದ ಅಕ್ಕನ ಬಳಗದ ಸದಸ್ಯರ ಲೇಖನ ಕವಿತೆ ಬರೆಹಗಳು ಪ್ರಸಿದ್ಧವಾಗಿಲ್ಲ. ವಿಶೇಷ ಸಂಚಿಕೆಯಲ್ಲಿ ಪ್ರಸಿದ್ಧವಾದ ಒಗಟಗಳ ಉತ್ತರಗಳನ್ನೂ ಯಾರೂ ಕಳಿಸಿಲ್ಲ. ಮುಂದಿನ ಸಂಚಿಕೆಯಲ್ಲಿ ವಿಶೇಷ ಸಂಚಿಕೆಯ ಹಾಗೂ ಮಾರ್ಚ ತಿಂಗಳ ಸಂಚಿಕೆಯ ಒಗಟಗಳ ಉತ್ತರಗಳನ್ನು ಪ್ರಸಿದ್ಧಿಸುವೆವು. ಕಾರಣ ಮಾರ್ಚ ೨೦ ನೇ ತಾರೀಖಿನ ಒಳಗಾಗಿ ಒಗಟಗಳ ಉತ್ತರಗಳನ್ನು ಕವಿತೆ ಲೇಖನಗಳನ್ನೂ ಅಕ್ಕನ ಬಳಗದ ಸದಸ್ಯರು ಕಳಿಸಬೇಕಾಗಿ ಅಕ್ಕನ ಅಪೇಕ್ಷೆ.

ಮಮತೆಯ ಹಿರಿಯಕ್ಕ

## ಒಗಟಗಳು

೧+೨ ಒಕೂಡಿಸಿದರೆ ಜ್ಞೆ ಎಂದು
೨+೩ ,, ತೇರು ಎಂದು
೩+೪ ,, ಸಹೋದರನೆಂದು
೪+೫ ,, ತಾಯಿಯೆಂದು.
ಅರ್ಥವಾಗುವ ಐದು ಅಕ್ಷರದ ಶಬ್ದವಾವುದು.

ವ್ಹಿ. ಎಸ್. ಭಟ್ಟ

## ವಿಠ್ಠಲರಾಯನ ಸಂಸಾರ

ವಿಠ್ಠಲರಾಯನ ಸಂಸಾರ ।
ಕೇಳಲು ಬಾರೋ ರಘುವೀರಾ ॥ಪ॥

ಹೆಂಡತಿಯೇ ರಾಯನ ಪ್ರಾಣಾ ।
ಆಕೆಯ ಮಾತೆ ಕೇಳೋಣಾ ।
ಕನ್ನಡಿ ಬೇಕೆಂದಳು ಆಕೆ ।
ದಿನಾಲು ಮೊರೆಯ ನೋಡಲಿಕೆ ॥೧॥

ಕನ್ನಡಿ ಕೊಳ್ಳುವಸಲುವಾಗಿ ।
ರಾಯರು ಮಂಚವ ಮಾರಿದರು ।
ಪ್ರೀತಿಯ ಪತ್ನಿಯ ಸಲುವಾಗಿ ।
ನೆಲದಲಿ ಚಾಪೆಯ ಹಾಸಿದರು ॥೨॥

# ದೋಸೆಯ ಆಸೆ

ಒಂದೂರಿನಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನ ಹೆಸರು ಸುಬ್ಬಯ್ಯ ಆತನ ಹೆಂಡತಿಯ ಹೆಸರು, ಸುಬ್ಬಮ್ಮ. ಸುಬ್ಬಯ್ಯನಿಗೆ ದೋಸೆ ತಿನ್ನಬೇಕೆಂಬ ಆಸೆ. ಸುಬ್ಬಮ್ಮ ಅದಕ್ಕೆ ಎರಡು ಪಟ್ಟು ಆಸೆ ಆದರೆ ಹತ್ತರ ಕಿಲುಬು ಕಾಸು ಕೂಡ ಇಲ್ಲ. ಹೇಗಾದರೋ ದೋಸೆಯನ್ನು ಮಾಡಲೇ ಬೇಕೆಂದು ಸುಬ್ಬಯ್ಯ ಹೆಂಡತಿಗೆ ಪೀಡಿಸಿದ. ಅವಳೇನು ಮಾಡಿಯಾಳು? ತಪಸ್ಸು ಮಾಡಿ ದೋಸೆ ಸಂಪಾದಿಸಿಕೊಳ್ಳಿ ಎಂದಳು.

ಕೂಡಲೆ ಅವನು ತಪಸ್ಸಿಗೆ ಕುಳಿತೇ ಬಿಟ್ಟ. ಎಷ್ಟೋ ವರ್ಷ ಕಾಲ ತಪಸ್ಸು ಮಾಡಿದ ಬಳಿಕ ಈಶ್ವರ ಪ್ರತ್ಯಕ್ಷನಾಗಿ ನಿನ್ನ ತಪಸ್ಸಿಗೆ ಮೆಚ್ಚಿ ಬಂದಿರುವೆ ಎಂದ. ಸುಬ್ಬಯ್ಯ ಏನು ಹೇಳುವದಕ್ಕೂ ತೋಚದೆ ನನಗೆ ಯಾವಾಗಲೋ ದೋಸೆ ತಿನ್ನ ಬೇಕೆಂಬ ಆಸೆ ಎಂದು ಬಿಟ್ಟ. ಈಶ್ವರ ನಗುತ್ತ ೧ ಕಾಸಿನ ಬಿಲ್ಲಿಯನ್ನು ಕೊಟ್ಟು ಮಾಯವಾದ. ಸುಬ್ಬಯ್ಯ ೧ ಕಾಸಿನ ಬಿಲ್ಲಿಯಲ್ಲಿ ಏನು ಮಾಡುವದಕ್ಕೂ ತೋಚದೆ ಮನೆಗೆ ಬಂದ. ಸುಬ್ಬಯ್ಯ ತನ್ನ ಹೆಂಡತಿಗೆ ನಡೆದ ಎಲ್ಲ ವಿಷಯವನ್ನು ಹೇಳಿದ. ನೀವು ಇಷ್ಟು ದಿವಸ ತಪಸ್ಸು ಮಾಡಿ ಇಷ್ಟನೆಯಾ ತಂದದ್ದು? ಎಂದಳು. ಸುಬ್ಬಯ್ಯ ಹಿಟ್ಟು ಎಣ್ಣೆ ಮುಂತಾದ ಸಾಮಾನು ತರಲು ಅಂಗಡಿಗೆ ಹೋದ ಅಂಗಡಿಯವನಿಗೆ ೧ ಕಾಸು ಬಿಲ್ಲೆ ಕೊಟ್ಟರೆ ಮತ್ತೊಂದು. ಕೈಯಲ್ಲಿ ಇರುತ್ತಿತ್ತು. ಅದನ್ನು ಕೊಟ್ಟರೆ ಇನ್ನೊಂದು ಇರುತ್ತಿತ್ತು. ಸುಬ್ಬಯ್ಯ ತನ್ನ ಅದೃಷ್ಟ ತಿಳಿದುಕೊಂಡಿದ್ದ ದೋಸೆಯ ಸಾಮಾನಿನ ಗಂಟು ಕಟ್ಟಿ ತಲೆಯಮೇಲೆ ಹೊತ್ತುಕೊಂಡು ಮನೆಗೆ ಬಂದ ತಲೆಯಮೇಲೆ ಇದ್ದ ಗಂಟು ತೆಗೆದಿಟ್ಟ ಆದರೆ ಆ ಗಂಟೂ ಕೂಡ ಅಕ್ಷಯವಾಗುತ್ತಲೇ ಇತ್ತು. ಯಾವಾಗಲೂ ತಲೆಯ ಮೇಲೆ ಗಂಟು ಕೈಯಲ್ಲಿ ೧ ಕಾಸು ಇದ್ದೇ ಇರುತ್ತಿತ್ತು. ಈ ಹೊಸ ಸಮಸ್ಯೆಯನ್ನು ಹೇಗೆ ಬಿಡಿಸುವದು ಎಂದು ಸುಬ್ಬಯ್ಯ ಯೋಚಿಸುತ್ತ ಕುಳಿತಿದ್ದ ಸುಬ್ಬಮ್ಮ ಮಾತ್ರ ಸಂಭ್ರಮದಿಂದ ಬೇಕಾದಷ್ಟು ಹಿಟ್ಟು ಕಲಿಸಿ ದೋಸೆ ಹುಯ್ಯಲು ಸುರು ಮಾಡಿದಳು ಹಂಚಿನ ಮೇಲಿಂದ ದೋಸೆ ತೆಗೆದರೆ ಇನ್ನೊಂದು ದೋಸೆ ಸಿದ್ಧ. ಹೀಗೆ ತೆಗೆದು ತೆಗೆದು ಸುಬ್ಬಮ್ಮನಿಗೆ ಸಾಕಾಗಿ ಹೋಯಿತು. ಆ ಸಮಯಕ್ಕೆ ಸರಿಯಾಗಿ ಸುಬ್ಬಯ್ಯ ಬಂದ. ಬಹಳ ಆಸೆಯಿಂದ ಒಂದು ದೋಸೆಯನ್ನು ಬಾಯಿಗೆ ಒಟ್ಟಿಗೆ ಹಾಕಿಕೊಂಡುಬಿಟ್ಟ.

ಅದನ್ನು ನೋಡಿ ಸುಬ್ಬಮ್ಮನು ಎರಡು ದೋಸೆಗಳನ್ನು ಬಾಯಿಗೆ ಹಾಕಿಕೊಂಡುಬಿಟ್ಟಳು. ಇಬ್ಬರೂ ಅದನ್ನು ಅಗಿದು ನುಂಗಿದರು. ಎಷ್ಟು ನುಂಗಿದರೂ ಮತ್ತೊಂದು ದೋಸೆ ಬಾಯಲ್ಲಿಯೇ ಇರುತ್ತಿತ್ತು. ಸುಬ್ಬಯ್ಯನಿಗೆ ಕೈಯಲ್ಲಿ ೧ ಕಾಸು ತಲೆಯಲ್ಲಿ ಒಂದು ಗಂಟು ಬಾಯಲ್ಲಿ ಒಂದು ದೋಸೆ ಹೀಗೇಕೆ ಆಯಿತು ಗತಿ. ಸುಬ್ಬಯ್ಯನಿಗೆ ದೋಸೆ ಸಾಕಾಗಿ ದೇವರನ್ನೇಕೆ ದೋಸೆ ಕೇಳಿದೆನೋ ಎಂದು ಪೇಚಾಡಿದ. ಕಡೆಗೆ ದೇವರನ್ನು ನಿನ್ನ ೧ ಕಾಸು ಬೇಡ ದೋಸೆಯು ಬೇಡ ಎಂದು ಮನದಲ್ಲಿ ಸ್ಮರಿಸಿದ ಕೂಡಲೆ ಈಶ್ವರ ನಗುತ್ತ ದೋಸೆಯನ್ನು ೧ ಕಾಸನ್ನು ಮಾಯಮಾಡಿ ಬಿಟ್ಟ. ಸುಬ್ಬಯ್ಯ ಸಂತೋಷದಿಂದ ಸುಬ್ಬಮ್ಮನ ಮುಖದ ಕಡೆಗೆ ನೋಡಿದ. ಸುಬ್ಬಮ್ಮನ ಬಾಯಲ್ಲಿಯ ದೋಸೆ ಕೂಡ ಮಾಯವಾಗಿತ್ತು. ಆಮೇಲೆ ಅವರಿಬ್ಬರು ಉಳಿದ ದೋಸೆಗಳನ್ನು ತಿಂದು ಹೆಚ್ಚು ಆಸೆ ಪಡದೆ ಸುಖವಾಗಿದ್ದರು.

---

## ಇರುವೆ

ಮಕ್ಕಳು :— ಇರುವೆ ಇರುವೆ ಇದ್ದೆ ಇರುವೆ  
ಇರುವೆ :— ಬರುವೆ ಬರುವೆ ಬಂದೆ ಬರುವೆ  
ಮಕ್ಕಳು :— ಎಲ್ಲಾ ಕಡೆಯಲಿ ನೀನೆ ಇರುವೆ  
ಇರುವೆ :— ಎಲ್ಲಿಗೆ ಹೋದರು ನಾನೇ ಬರುವೆ  
ಮಕ್ಕಳು ;— ಅಡಿಗೆಯ ಮನೆಯಲಿ ನೀ ತುಂಬಿರುವೆ  
ಇರುವೆ :— ಊಟದ ತಟ್ಟೆಗೂ ನಾ ಬರುತಿರುವೆ  
ಮಕ್ಕಳು :— ಸಕ್ಕರೆ ಡಬ್ಬಕೆ ನೀ ಮುತ್ತಿರುವೆ  
ಇರುವೆ :— ಬೆಲ್ಲದ ಅಚ್ಚಿನ ಮೇಲೆಯು ಇರುವೆ  
ಮಕ್ಕಳು :— ಶಾಲೆಗೂ ಬರುವೆಯ ನೀ ಮರಿ ಇರುವೆ?  
ಇರುವೆ :— ಹಾಲನು ಇಟ್ಟರೆ ನಾನೇ ಬರುವೆ  
ಮಕ್ಕಳು :— ತಿಂಡಿಕೊಡುವೆನು ಬರುವೆಯ ಇರುವೆ?  
ಇರುವೆ :— ಸಿಹಿ ಎಂದರೆ ಸಿರಿ, ಕುಣಿಯುತ ಬರುವೆ.

**ಕುಮಾರಿ ವೃಂದಾವತಿ ಪುರಾಣಿಕ**

Std. VIII

# ಕಾಯಕವೇ ಕೈಲಾಸ

(ವಿಚಾರ ಧಾರೆಯಲ್ಲಿ)

ವನಿತಾ ಸಮಾಜದ ಏಳ್ಗೆ ಬೇಕಾದರೆ
ಮಾನಿನಿಯರ ಮನಸೊಂದಿರ ಬೇಕು ||ಪ||
ಮಾನಿನಿಯರ ಮನಸೊಂದಿರ ಬೇಕಾದರೆ
ಮಾತೆಯರ ಗುರಿ ಒಂದಿರಬೇಕು ||೧||
ಮಾತೆಯರ ಗುರಿ ಒಂದಿರ ಬೇಕಾದರೆ
ಸ್ತ್ರೀಯರ ಸ್ಥಿತಿ ಒಂದಿರಬೇಕು ||೨||
ಸ್ತ್ರೀಯರ ಸ್ಥಿತಿ ಒಂದಿರ ಬೇಕಾದರೆ
ಸ್ತ್ರೀಯರ ಸ್ಮೃತಿ ಒಂದಿರ ಬೇಕು ||೩||
ಸ್ತ್ರೀಯರ ಸ್ಮೃತಿ ಒಂದಿರ ಬೇಕಾದರೆ
ಜಾಣೆಯರಲಿ ಜಾಗ್ರತಿ ಬೇಕು ||೪||
ಜಾಣೆಯರಲಿ ಜಾಗ್ರತಿ ಬೇಕಾದರೆ
ಮಾತೆಯರ ಮನಃ ಕ್ರಾಂತಿಯಾಗಬೇಕು ||೫||
ಮಾತೆಯರ ಮನಃಕ್ರಾಂತಿಯಾಗಲು
ಚಂಚಲೆಯರಿಗೆ ಚೇತನೆ ಬೇಕು ||೬||
ಚಾರು ಚಂಚಲೆಯರಲಿ ಚೇತನೆ ಬರಲು
ಚಂಚಲೆಯರ ಚಿಂತನೆ ಬೇಕು ||೭||
ಚಂಚಲೆಯರಲಿ ಚಿಂತನೆ ಬರಲು
ಸ್ತ್ರೀಯರ ಸಂಸ್ಕಾರೊಂದಿರಬೇಕು ||೮||
ಸ್ತ್ರೀಯರ ಸಂಸ್ಕಾರೊಂದಿರ ಬೇಕಾದರೆ
ಹೆಂಗಸರ ಹೊಸ ಸೃಷ್ಟಿಯಾಗಬೇಕು ||೯||
ಹೆಂಗಸರ ಹೊಸ ಸೃಷ್ಟಿಯಾಗಲು
ಸ್ತ್ರೀಯರ ಸಶಕ್ತಿ ಒಂದಾಗಬೇಕು ||೧೦||
ಸ್ತ್ರೀಯರ ಶಕ್ತಿ ಒಂದಾಗ ಬೇಕಾದರೆ
ಸ್ತ್ರೀಯರ ಭಕ್ತಿ ಯೊಂದಾಗಬೇಕು ||೧೧||
ಸ್ತ್ರೀಯರ ಭಕ್ತಿ ಯೊಂದಾಗಬೇಕಾದರೆ
ಸ್ತ್ರೀಯರಿಗೆ ಮುಕ್ತಿಯ ಮನಬೇಕು ||೧೨||
ಯಾವದೊಂದು ಕಾರ್ಯವಾಗಲು
ಯಾವದೊಂದು ಕಾರಣಬೇಕು ||೧೩||
ಕಾರಣವಿಲ್ಲದೇ ಕಾರ್ಯವಾಗುವದೆ ?
ಕಾರ್ಯಕೆ ಕಾಯಕವೇ ಬೇಕು ||೧೪||
ಕಾಮಿನಿಯರು ಕಾಯಕಕೆ ಕೈ ಹಾಕಲು
ಕಾಯಕವೇ ಕೈಲಾಸವೆಂದರಿಯಬೇಕು ||೧೫||

**ಲೇ : ಪ್ರೇಮಾ ಮಂಗಳೂರ** Std XI

# ಆಹಾರ ಧಾನ್ಯ ರಕ್ಷಣೆ

ನಮ್ಮ ದೇಶದ ಸಮಸ್ಯೆಗಳಲ್ಲಿ ಆಹಾರ ಸಮಸ್ಯೆ ಹಿರಿಯದಾಗಿದೆ. ಆಹಾರ ಉತ್ಪಾದನೆಯ ಹೆಚ್ಚಳಕ್ಕಾಗಿ ನಮ್ಮ ಸರಕಾರದವರು ಹಲವಾರು ಹವಣಿಕೆ-ಹಂಚಿಕೆ ಹೂಡಿದ್ದಾರೆ. ಉತ್ಪಾದನೆಯ ಉಪಾಯ ಯೋಜನೆಗಳನ್ನು ಕೈಕೊಂಡಿದ್ದಾರೆ. ಆದರೆ, ಬೆಳೆದ ಆಹಾರ ಧಾನ್ಯ ರಕ್ಷಣೆಯ ಉಪಾಯಗಳನ್ನು ಕೈಕೊಳ್ಳದಿರುವದು ದೊಡ್ಡ ಅಪರಾಧವೆಂದು ಹೇಳಿದರೆ ತಪ್ಪಾಗದು. ಗಳಿಕೆಗಿಂತ ಉಳಿಕೆಯಲ್ಲಿ ಜಾಣತನವಿದೆ. ಉತ್ಪಾದನೆಗಿಂತ ರಕ್ಷಣೆಯಲ್ಲಿ ಹೆಚ್ಚು ಉಳಿತಾಯವಿದೆ.

ರಾಷ್ಟ್ರೀಯ ಯೋಜನಾನ್ವಯ ದ್ವಿತೀಯ ಪಂಚವಾರ್ಷಿಕ ಯೋಜನೆಯಂತೆ ಕೊನೆಗೆ ನಾವು ಎಂಬತ್ತು ದಶಲಕ್ಷ ಟನ್ ಆಹಾರ ಧಾನ್ಯ ಬೆಳೆಯ ಬೇಕಾಗಿತ್ತು. ಆ ಗುರಿಗೆ ಮುಟ್ಟದಿದ್ದರೂ ಎಪ್ಪತ್ತೈದುದಶಲಕ್ಷ ಟನ್ ಆಹಾರ ಧಾನ್ಯವನ್ನು ಪರದೇಶಗಳಿಂದ ಆಯಾತ ಮಾಡಬೇಕಾಗುವದೆಂದು ಯೋಜನಾ ಆಯೋಗದವರು ಹೇಳುತ್ತಾರೆ. ಕೊರತೆ ಬೀಳುವ ಎಂಟು ದಶಲಕ್ಷ ಟನ್ ಆಹಾರಧಾನ್ಯ ಆಯಾತ ಮಾಡಲು ನಾವು ಪ್ರತಿವರುಷ ನಾಲ್ಕು ನೂರು ಕೋಟಿ ರೂಪಾಯಿ ವೆಚ್ಚಮಾಡ ಬೇಕಾಗುವದು. ಪ್ರತಿ ವರುಷ ನುಸಿ ಹುಳಗಳಿಂದ ಹಾಳಾಗುತ್ತಿರುವ ಆಹಾರ ಧಾನ್ಯಗಳನ್ನು ರಕ್ಷಿಸಿದರೆ ಪ್ರತಿವರುಷವೂ ೩೫೦ ಕೋಟಿ ರೂಪಾಯಿ ಉಳಿಸಿಕೊಂಡಂತಾಗುವದು.

ನಮ್ಮ ದೇಶದ ಮಂತ್ರಿಗಳು, ಮುಂದಾಳುಗಳು ಭಾಷಣ ಬಂಟರಾಗಿರುವರು. ಯೋಜನೆ ಮಾಡುವರು. ಹಾಳಾಗುವದನ್ನು ರಕ್ಷಿಸಲು ಚೀನ ದೇಶದವರಂತೆ ಉಪಾಯ ಕೈಕೊಂಡಿಲ್ಲ. ಆಹಾರ ಧಾನ್ಯದ ಬೆಳೆಯನ್ನು ಹಾಳುಮಾಡುತ್ತಿರುವ ಗುಬ್ಬಿಗಳ ಕುಲವನ್ನೇ ಎರಡು ವರ್ಷಗಳಲ್ಲಿ ಚೀನದವರು ನಾಶಮಾಡಿದ್ದಾರೆ. ಈ ತರದ ವಿಚಾರವು ನಮ್ಮ ಜನರ ತಲೆಗೆ ಹಿಡಿಯುವದು ಬಹಳ ಕಠಿಣ. ನಮಗೆ ಹಿತವಾಗುವ ಮತ್ತು ಉಳಿತಾಯವಾಗುವ ಕಾರ್ಯವನ್ನು ಕೈಕೊಳ್ಳದಿದ್ದರೆ ನಾವು ಬದುಕಲಾರೆವು. ಆಹಾರ ಧಾನ್ಯ ಹಾಳುಮಾಡುವ ತೊಂದರೆ ಕೊಡುವ ಇಲಿ ಹೆಗ್ಗಣಗಳನ್ನು ನಾಶಮಾಡುವ, ಯೋಜನೆಯನ್ನು ಸರಕಾರವೂ, ಜನತೆಯೂ ಕೈಕೊಳ್ಳ ಬೇಕು. ಈ ಉಪಾಯ ಕೈಕೊಳ್ಳುವದರಿಂದ ಕಾಲರಾ ಬೇನೆಯೂ ದೂರಾಗುವದು. ಆಹಾರ ಧಾನ್ಯವನ್ನು ರಕ್ಷಿಸುವ ಎಲ್ಲ ಉಪಾಯಗಳನ್ನು ಕ್ರಮೇಣ ಕೈಕೊಂಡು ಕೊರತೆಯ ಬಾಧೆಯನ್ನು ನಿವಾರಿಸಿ ಕೊಳ್ಳುವದರಲ್ಲಿ ಜಾಣತನವಿದೆ

**ವೀರುಬಾಯಿ ಉಮಚಗಿ**

# ಮುತ್ತಿನ ಹಾರ !

ಲೇಖಕ:- ಶಿವರಾಮ ಹೆಗಡೆ ಹಿರೇಕೈ, ಸಿರಸಿ.

ಢಣ್...., ಢಣ್...., ಢಣ್...., ಢಣ್...., ಢಣ್.

ಮಧ್ಯಾಹ್ನ ಐದು ಘಂಟೆ ಸಾಲೆಯ ಬಿಡುವಿನ ಬೆಲ್ ಬಡಿಯಿತು. ಎಲ್ಲರ ಕಿವಿ ನೆಟ್ಟಗಾದವು ರಾಧಾ ತನ್ನ ಗೆಳತಿಯರೊಡನೆ ಮನೆಯ ಕಡೆ ದಾರಿ ಹಿಡಿದಿದ್ದಳು ಇತ್ತ ಮನೆಯಲ್ಲಿ ಸಾವಿತ್ರಮ್ಮ ಮಗಳು ಶಾಲೆಯಿಂದ ಬರುವ ಹೊತ್ತಾಯಿತೆಂದುಕೊಂಡು ಮನೆಯ ಹೊರಬಾಗಿಲಲ್ಲಿ ಬಂದು ನಿಂತರು. ದೂರದಲ್ಲಿ ರಾಧಾ ತನ್ನ ಗೆಳತಿಯರೊಂದಿಗೆ ಬರುವದು ಕಾಣಿಸಿತು. ಅವಳನ್ನು ಅದೆಷ್ಟು ಬಾರಿ ನೋಡಿದರೂ ತೃಪ್ತಿಯಿಲ್ಲ ಸಾವಿತ್ರಮ್ಮನಿಗೆ ! ಎಷ್ಟು ಮಾಟಾಗಿ ನಡೆದುಬರುತ್ತಿದ್ದಾಳೆ ತನ್ನ ರಾಧಾ ಎಂದುಕೊಂಡರು ಮನದಲ್ಲಿಯೇ !

ರಾಧಾ ನಿಜವಾಗಿಯೂ ನೋಡಲು ಅತೀ ಮುದ್ದು ಮುದ್ದಾಗಿದ್ದಳು. ವಯಸ್ಸು ಇನ್ನೂ ಹನ್ನೆರಡಕ್ಕೆ ಮಿಕ್ಕಿರಲಿಲ್ಲ. ಚಿಕ್ಕಂದಿನ ತುಂಟುತನ ಮೋರೆಯ ಮೇಲೆ ಎದ್ದು ಕಾಣುತ್ತಿತ್ತು. ಆಕರ್ಷಣೀಯವಾದ ವ್ಯಕ್ತಿತ್ವ ನಯವಾದ ನಡತೆ ಇವುಗಳಿಗಾಗಿ ರಾಧಾ ಎಲ್ಲರಿಗೂ ಬೇಕಾಗಿದ್ದಳು. ಎಂಥವರನ್ನಾದರೂ ಮುಗ್ಧಗೊಳಿಸುವಂತಹ ಮತ್ತು ಆಕರ್ಷಿಸಲ್ಪಡುವ ಒಂದು ತರದ ವಿಲಕ್ಷಣ ಆಕರ್ಷಕ ಶಕ್ತಿಯಿತ್ತು ಅವಳ ಆ ನಗುವಿನಲ್ಲಿ ! "ಏನಮ್ಮ ರಾಧಾ, ಎಂದರೆ ನಿಜವಾಗಿಯೂ ರಾಧಾನೆ ಆಗುತ್ತಾಳೆ" ಎನ್ನುವರು ನೆರಮನೆಯ ನಾಗಮ್ಮ, "ಎಷ್ಟು ದೊಡ್ಡ ಮನಸ್ಸು ಅಂತೀರಿ ನಿಮ್ಮ ರಾಧಾಂದು, ಇಷ್ಟು ಸಣ್ಣವಳಾದರೂ ಅವಳ ಬುದ್ಧಿ ನೋಡಿ ನನಗೆ ಬಹಳ ಆಶ್ಚರ್ಯವಾಗುತ್ತದೆ" ಎಂದು ಎದುರುಮನೆಯ ಮೀನಾಕ್ಷಮ್ಮ ಉದ್ಗಾರ ತೆಗೆಯುವರು. ಹೀಗೆಂದಾಗಲೆಲ್ಲ ಸಾವಿತ್ರಮ್ಮನ ಹೃದಯ ಆನಂದದಿಂದ ತುಂಬಿ ತುಳುಕುತ್ತಿತ್ತು. ಅಂತೆ ಒಮ್ಮೊಮ್ಮೆ ದುಃಖದ ಕಡಲೂ ಉಕ್ಕಿಬರುತ್ತಿತ್ತು.

ಸಾವಿತ್ರಮ್ಮ ಗಂಗಾಭಾಗೀರಥಿಯಾಗಿ ಆಗಲೇ ನಾಲ್ಕು ವರ್ಷಗಳು ಗತಿಸಿದ್ದವು. ಬಡತನದ ಭಾರದಿಂದ ತುಂಬಾ ಮುಪ್ಪಾದವಳಂತೆ ತೋರುತ್ತಿದ್ದಳು. ಮೊಟ್ಟ ಮೊದಲು ಶ್ರೀನಿವಾಸರಾಯರೊಡನೆ ಬಾಳುವೆ ಮಾಡಲು ಮಂಗಲಸೂತ್ರ ಧರಿಸಿ ಈ ಊರಿಗೆ ಬಂದಾಗ ಅವರಲ್ಲಿ ಉತ್ಸಾಹ-ಭಾವೀ ಬಾಳುವೆಯ ಸುಖ ಸ್ವಪ್ನದ ಮೂಲಕ ಆಶೆ ತುಂಬಿತ್ತು. ಮನೆಯಲ್ಲಿ ಸರ್ವ ಸುಖ-ಶಾಂತಿ ನೆಲೆಸಿತ್ತು. ಆ ಊರಿನ ಕನ್ನಡ ಶಾಲೆಯ ಬಡ ಉಪಾಧ್ಯಾಯರಾಗಿದ್ದರು ಶ್ರೀನಿವಾಸರಾಯರು. ಅವರ ಹೃದಯದ ವಿಶಾಲತೆ, ನಿಜಗುರುವಿನಲ್ಲಿರಬೇಕಾದ ಸಕಲ ಗುಣಗಳೂ ಅವರಲ್ಲಿದ್ದುದರಿಂದ ಅವರ ಜೀವನ ಕಷ್ಟಮಯವಾಗಿ ಕಾಣಲಿಲ್ಲ. ಅವರ ಪ್ರತಿಯೊಂದು ಕಾರ್ಯಕ್ಕೆ ಊರವರ ಸಹಾಯ ಸಹಕಾರವಿದ್ದೇ ಇರುತ್ತಿತ್ತು. ರಾಜು-ರಾಧಾ ಇವರಿಂದ ಅವರ ಜೀವನಕ್ಕೆ ಹೊಸ ಕಳೆ ಬಂದಂತಾಗಿತ್ತು. ಬಡತನದಿಂದ ಬಾಳುವೆ ಸಾಗಿಸುತ್ತಿದ್ದರೂ ಅವರ ಜೀವನ ನಿಜವಾಗಿಯೂ ಚಿನ್ನದ ಸಂಸಾರವಾಗಿತ್ತು.

ಸಾವಿತ್ರಮ್ಮ ಈ ರೀತಿಯ ಸಂಸಾರ ಸುಖವನ್ನು ಏಳೆಂಟು ವರ್ಷ ಸವಿದರೋ ಇಲ್ಲವೋ ಅಂತೂ ಕ್ರೂರ ವಿಧಿ ಕೊನೆಗೆ ಅವರ ಸಂಸಾರ ಸುಖವನ್ನು ಸೂರೆಮಾಡಿತು. ಅದೇ ಮನೆಯಲ್ಲಿಯೇ ಪ್ರಜ್ವಲಿಸುತ್ತಿದ್ದ ಬಾಳಿನ ದೀಪ ಅದೇ ಮನೆಯಲ್ಲಿಯೇ ನಂದುವದನ್ನು ಸಾವಿತ್ರಮ್ಮ ನೋಡಬೇಕಾಯಿತು. ಇಹಲೋಕದ ಕಷ್ಟ ಸುಖಗಳನ್ನೆಲ್ಲಾ ಅನುಭವಿಸಿ ಪರಲೋಕದ ಚಿರಶಾಂತಿಯನ್ನು ಪಡೆಯಲು ಶ್ರೀನಿವಾಸರಾಯರು ತೆರಳಿದರು. ಅವರ ಸ್ಮಶಾನಯಾತ್ರೆ ಕಣ್ಣೀರಿನ ಸಾಗರದಲ್ಲಿ ವಿಹರಿಸುತ್ತ ಮುಂದೆ ಮುಂದೆ ಸಾಗಿತ್ತು. ಎಂದೆಂದೂ ಮರಳಿ ಬರದಂತಹ ಸ್ಥಳಕ್ಕೆ ಪ್ರೀತಿಯ ಪತ್ನಿ ಪುತ್ರರನ್ನಗಲಿ ಬಹು ದೂರ ಪ್ರಯಾಣ ಬೆಳೆಸಿದ್ದರು ಸಾವಿತ್ರಮ್ಮನ ಪತಿ ಶ್ರೀನಿವಾಸರಾಯರು.

ಆಗ ತಾನೆ ರಾಜೂಗೆ ೧೫ ವರ್ಷ ರಾಧಾಳಿಗೆ ೮ ವರ್ಷ. ಆಗ ಸಾವಿತ್ರಮ್ಮನ ಕರುಳಿನ ಮೇಲೆ ಬಿದ್ದ ಬರೆ ಅಂತಿಂತಹದಲ್ಲ. ಆದರೂ ಮಕ್ಕಳನ್ನು ನೋಡಿ ಅಳುವನ್ನು ನುಂಗಿ ನಗಬೇಕಾಯಿತು. ಈಗ ನಾಲ್ಕೈದು ವರ್ಷಗಳಿಂದ ಅವರು

ಬಡತನದಲ್ಲಿ ಬೆಂದು ಬಳಲಿದ್ದರು. ಇದ್ದ ಅಲ್ಪ ಸ್ವಲ್ಪ ಒಡವೆ ವಸ್ತುಗಳನ್ನೆಲ್ಲಾ ಮಗನ ವಿದ್ಯೆಗಾಗಿ ಮಾರಿಯಾಯ್ತು. ಇದೀಗ ಅವರ ಬಳಿಯಲ್ಲಿದ್ದ ಅಲ್ಪ ಆಸ್ತಿಯೆಂದರೆ ಅವರುಳಿದುಕೊಂಡ ಜೀರ್ಣಾವಸ್ಥೆಗೆ ಬಂದ ಆ ಅರೆ ಮುರುಕಲು ಮನೆಯೊಂದೇ. ಇದುವೆ ಅವರ ಮುಂದಿನ ಜೀವನದ ಆಧಾರವಾಗಿದ್ದವು. ಅವರ ಗಂಡ ಭವಿಷ್ಯದ ಬಾಳುವೆಗಾಗಿ ಪತ್ನಿ-ಪುತ್ರರಿಗೆ ಸಂಗ್ರಹಿಸಿಟ್ಟ ಆಸ್ತಿ.

ರಾಜುವೂ ಕಷ್ಟ ಜೀವಿಯಾಗಿದ್ದ. ಅವನೀಗ ಕಾಲೇಜಿನ ಕೊನೆಯ ವರ್ಷದಲ್ಲಿದ್ದ. ಅಲ್ಲಿ ಅವನ ಜೀವನದಾರಿ "ಭವತಿ ಭಿಕ್ಷಾಂದೇಹಿ" ತನದಿಂದ, ಈ ವರ್ಷ ಹೇಗಾದರೂ ಕಳೆದರೆ ತಮ್ಮ ಬಡತನದ ಕಷ್ಟ ದೂರಾಗುವದೆಂದು ಆಗಾಗ ನಿಟ್ಟುಸಿರು ಬಿಡುತ್ತಿದ್ದರು ಸಾವಿತ್ರಮ್ಮ.

ದೀವಳಿಗೆ ಹಬ್ಬ ಸಮೀಪಿಸಿತ್ತು. ಊರಿಗೆ ಊರೆ ಉತ್ಸಾಹದಿಂದ ತುಂಬಿತ್ತು. ಚಿಂತೆಯ ಭಾರದಿಂದ ತಲೆ ತಗ್ಗಿಸಿ ಕುಳಿತಿದ್ದರು ಸಾವಿತ್ರಮ್ಮ. "ಅಮ್ಮಾ ಓ ಅಮ್ಮಾ ಅಣ್ಣನ ಪತ್ರ ಬಂದಿದೆ ನೋಡು" ಎನ್ನುತ್ತ ರಾಧಾ ಅಲ್ಲಿಂದ ಓಡುತ್ತ ಬಂದಳು. ಪತ್ರವನ್ನು ಓದತೊಡಗಿದಳು. ಸಾವಿತ್ರಮ್ಮ ಕುತೂಹಲದಿಂದ ಕೇಳತೊಡಗಿದರು.

ಮುದ್ದು ರಾಧಾ,

ನಿನ್ನಣ್ಣ ಆಶೀರ್ವಾದಗಳು.

ತಂಗೀ ಈಗ ಹದಿನೈದು ದಿನಗಳಿಂದ ನಿನಗೆ ಪತ್ರ ಬರೆಯಲಿಲ್ಲವೆಂದು ನೀನು ಮತ್ತು ಅಮ್ಮ ಬೇಸರುಪಟ್ಟುಕೊಂಡಿರಬೇಕು. ನನಗೆ ಇಲ್ಲಿ ಒಂದು ಕ್ಷಣ ಕೂಡ ವಿರಾಮವಿಲ್ಲದಂತಾಗಿದೆ. ಎರಡು ತಿಂಗಳ ಹಿಂದೆಯೇ ನಾನು ಮೊದಲನೇ ವರ್ಗದಲ್ಲಿ ಪಾಸಾದ ಬಗ್ಗೆ ನಿಮ್ಮೆಲ್ಲರ ಪ್ರೀತಿಯ ಮುತ್ತಿನ ಪತ್ರ ಕೈಸೇರಿತ್ತು. ಇದಕ್ಕೆಲ್ಲ ನಮ್ಮ ಆ ಸ್ವರ್ಗವಾಸಿ ತಂದೆಯವರ ಆಶೀರ್ವಾದ, ನಮ್ಮೀರ್ವರ ಬಾಳುವೆಯ ಉಜ್ವಲ ಆಶಾವಾದದ ಗೋಪುರವನ್ನೇ ಕಟ್ಟಿ, ಅದು ಎಂತಹ ಗಾಳಿಗಳಿಗೂ ಬಲಿ ಬೀಳದಂತೆ, ಜಾಗ್ರತಾವಸ್ಥೆಯಲ್ಲೇ ಇರುವ ಆ ಮಹಾ ಪೂಜ್ಯ ತಾಯಿಯ ಹಿತಚಿಂತನೆಯೇ ಕಾರಣ. ಇಷ್ಟು ದಿನಗಳ ನಮ್ಮ ಆ ತಾಯಿಯ ತಪಸ್ಸ ಫಲಿಸುವ, ನಮ್ಮ ಭಾಗ್ಯ ತೆರೆಯುವ ಕಾಲ ಸನ್ನಿಹಿತವಾಗಿದೆಯೆಂದು ಆಶಿಸಿದ್ದೇನೆ. ಈಗ ಹದಿನೈದು ದಿನಗಳಿಂದ ವೆಂಕಟರಾಯರು ತಮ್ಮ ಕಂಪನಿಯಲ್ಲಿ ಜನರಲ್ ಅಕೌಂಟರ ಎಂದು ನಿಯಮಿಸಿಕೊಂಡಿದ್ದಾರೆ. ಇನ್ನು ಮೂವತ್ತು ದಿನಗಳಲ್ಲಿಯೇ ನಮ್ಮ ಕೈಗೆ ಒಂದುನೂರಾ ಇಪ್ಪತ್ತು ರೂಪಾಯಿಗಳು ಸಿಗುತ್ತವೆ. ಇನ್ನಾದರೂ ಅಮ್ಮನ ಕಣ್ಣೀರು ಕಡಿಮೆಯಾಗುವದೆಂದು ಆಶಿಸಿದ್ದೇನೆ.

ರಾಧಾ ! ದೀಪಾವಳಿ ತೀರ ಹತ್ತಿರ ಬಂದಿದೆಯಲ್ಲವೇ ? ದೀಪಾವಳಿ ಹಬ್ಬದ ದಿನವೇ ನಿನ್ನ ಹುಟ್ಟುಹಬ್ಬ ತಾನೇ ? ನಿನ್ನ ಹುಟ್ಟು ಕಾಣಿಕೆಯೆಂದು ನಿನಗೇನು ತರಲಿ? ಹಾ, ಅದನ್ನೇ ಮರೆತಿದ್ದೆ ನೀನು ಬಹುದಿನಗಳಿಂದ ಹಾತೊರೆಯುತ್ತಿದ್ದ ನಿನ್ನ ನೆಚ್ಚು-ಮೆಚ್ಚಿನ ಮುತ್ತಿನ ಹಾರ! ಅದನ್ನೇ ತರುತ್ತೇನೆ ಸರಿಯಷ್ಟೇ? ಅಮ್ಮನಿಗೇನು ತರಲಿ, ಅವಳಿಗೊಂದು ಸೀರೆ ಇದ್ದರೆ ಸಾಕು! ಅಮ್ಮನಿಗೆ ನನ್ನ ಶಿರಸಾವಂದನೆ ತಿಳಿಸು. ನೆರೆಮನೆಯ ಸರಸು, ಎದುರುಮನೆಯ ಮೀನಾಕ್ಷಮ್ಮ, ಬದಿಮನೆಯ ಬಾಲು ಇವರೆಲ್ಲರಿಗೆ ನನ್ನ ವಂದನೆ ತಿಳಿಸಲು ಮರೆಯದಿರು.

ಇತಿ ಆಶೀರ್ವಾದಗಳೊಡನೆ

ನಿನ್ನಣ್ಣ 'ರಾಜು'

ಚಿಕ್ಕಂದಿನಿಂದಲೂ ರಾಧಾಳಿಗೆ ಮುತ್ತಿನಹಾರದ ಮೇಲೆ ಬಲು ಪ್ರೀತಿ. ನೆರೆಮನೆಯ ಸರಸು ಮುತ್ತಿನ ಹಾರವನ್ನು ಹಾಕಿಕೊಂಡು ಮೆರೆದಾಡುತ್ತಿದ್ದಾಗ, ರಾಧಾ ಆಶಾಗಣ್ಣಿನಿಂದ ನೋಡಿದ್ದಳು. ತನಗೂ ಅಂತಹದಿದ್ದರೆ....ಎಂದು ತ್ರಿಲೋಕದ ರಾಣಿಯಾಗುತ್ತಿದ್ದಳು. ಇದನ್ನು ತಾಯಿಯೊಡನೆ ಹಟ ಮಾಡಿಯೂ ಇದ್ದಳು. ಈ ಸಂಗತಿ ರಾಜುವಿಗೆ ಚನ್ನಾಗಿ ಜ್ಞಾಪಕವಿತ್ತು. ಇಷ್ಟು ಸಣ್ಣ ಆಶೆಯನ್ನು ಪೂರೈಸದಿದ್ದರೆ ತನ್ನ ಪ್ರೀತಿಯ ಬೆಲೆಯೇನು? ತಾನು ಅಣ್ಣಾ ಎಂದು ಕರೆಯಿಸಿಕೊಳ್ಳಲು ಯೋಗ್ಯನೇ ಮುಂತಾಗಿ ಎನಿಸುತ್ತಿತ್ತು ರಾಜುವಿಗೆ. ನಿಜ, ಅಂದಿನಿಂದ ಇಂದಿನ ವರೆಗೆ ರಾಧಾಳಿಗೆ "ಮುತ್ತಿನ ಹಾರ" ವೆಂಬುದು ಒಂದು ಆಶಾದಾಯಕ ಪ್ರೀತಿಯ ವಸ್ತುವಾಗಿಯೂ, ಕನಸಿನಂತೆಯೂ ಅವಳಿಗೆ ಹಲವು ಬಾರಿ ಅನಿಸುತ್ತಿತ್ತು.

ಇನ್ನೇನು ಅಣ್ಣ ರಾಜು-ಬರಲು ಕೇವಲ ಎರಡೇ ದಿನಗಳು ಉಳಿದವು ಎಂದು ರಾಧಾ ದಿನ ಲೆಕ್ಕ ಮಾಡುತ್ತಿದ್ದಳು. ಮುತ್ತಿನ ಹಾರದೊಂದಿಗೆ ತನಗಾಗಿ ಒಂದು ಪುರಂದರದಾಸರ ಪದ್ಯಾವಲಿಯನ್ನೂ, ಅಮ್ಮನಿಗೊಂದು ಉತ್ತಮ ಸೀರೆಯನ್ನೂ ತರುವಂತೆ ಮತ್ತೊಮ್ಮೆ ಕೇಳಿಕೊಂಡಿದ್ದಳು. "ನೀನು ಬರುವ ದಿನ ಜಾತಕ ಪಕ್ಷಿಯಂತೆ ಏಕಾಗ್ರ ಚಿತ್ತದಿಂದ ನಿನ್ನ ದಾರಿಯನ್ನೇ ಕಾಯುತ್ತಿರುತ್ತೇನೆ ನಿನ್ನನ್ನು ಯಾವಾಗ ಕಂಡೇನು ಎಂದೆನಿಸುತ್ತಿದೆ" ಎಂದು ಮುಂತಾಗಿ ಬರೆದಿದ್ದಳು.

ಅಣ್ಣ ಬಂದೊಡನೆಯೆ ತಾನು ವರ್ಗದಲ್ಲಿ ಮೊದಲನೆಯ ನಂಬರ ಬಂದ ವಾರ್ತೆಯನ್ನು ತಿಳಿಸಬೇಕು. ತಾನು ಕಸೂತಿ ಹಾಕಿದ ವಸ್ತ್ರಗಳನ್ನು ತೋರಿಸಿದಾಗ ಅವನು ನನ್ನನ್ನು ಬಾಯಿ ತುಂಬ ಹೊಗಳಬೇಕು. ಹೀಗೆಲ್ಲ ಅನೇಕ ಕೊನೆ ಮೊದ ಲಿಲ್ಲದ ವಿಚಾರಗಳು ಆಕೆಯ ಮನದಲ್ಲಿ ಮೂಡಿದವು. ಕೊನೆಗೆ ಅಣ್ಣನು ತಂದ ಮುತ್ತಿನ ಹಾರವನ್ನು ತಾನು ಹಾಕಿಕೊಂಡಾಗ ಆಗೆಷ್ಟು ಸುಂದರಳಾಗಿ ತಾನು ಕಾಣುತ್ತಿರಬಹುದು ಎಂದೆಲ್ಲ ರಾಧಾ ಮನಸ್ಸಿನಲ್ಲಿಯೇ ಮಂಡಿಗೆ ತಿನ್ನುತ್ತಿದ್ದಳು. ಗಾಳಿಯಲ್ಲಿ ಗೋಪು ಕಟ್ಟುತ್ತಿದ್ದಳು. ದೀಪ ಕ್ಷೀಣತೆಯ ಕಡೆಗೆ ಒಲಿದಿತ್ತು ಕೋಣೆಯೊಳಗೆ ಮಂದ ಪ್ರಕಾಶ ಪಸರಿಸಿತ್ತು.

ಅಷ್ಟರಲ್ಲಿ ಮನೆಗೆಲಸಕ್ಕೆ ಹೋಗಿದ್ದ ಸಾವಿತ್ರಮ್ಮ ಕೆಲಸ ಮುಗಿಸಿ ಮನೆಗೆ ಬಂದಳು. ಆಗಷ್ಟೆ ಗಡಿಯಾರದ ಮುಳ್ಳು ಹತ್ತರ ಮನೆಯನ್ನು ಪ್ರವೇಶಿಸಿತ್ತು. ರಾಧಾ ಇನ್ನೂ ಮಲಗದೇ ಇದ್ದುದನ್ನು ನೋಡಿ, “ರಾಧಾ, ಇನ್ನೂ ಮಲಗುವದಿಲ್ಲವೇನೆ?-ಗಂಟೆ ಹತ್ತಾಯಿತು. ಬೇಗನೆ ಮಲಗು. ನಾಳೆ ನಿನ್ನಣ್ಣ ಬರುವವನಿದ್ದಾನೆ” ಎಂದು ಹೇಳಿ ತಾವು ಮಲಗುವ ಕೋಣೆಗೆ ನಡೆದರು. ಎಂದೂ ಬಾರದ ನಿದ್ರಾದೇವಿ ಅವರನ್ನು ಅಂದು ಬೇಗನೆ ಆವರಿಸಿದ್ದಳು.

ಇನ್ನೂ ಹನ್ನೊಂದು ಹೊಡೆದಿರಲಿಲ್ಲ, ರಾಧಾ ಪುಸ್ತಕಗಳನ್ನು ಓದುತ್ತಿದ್ದಂತೆಯೇ ಅಲ್ಲಿಯೇ ನಿದ್ದೆ ಹೋದಳು. ಅವಳ ಕೈಯಲ್ಲಿದ್ದ ಪುಸ್ತಕ ಜಾರಿ ದೀಪದ ಮೇಲೆ ಬಿತ್ತು. ದೀಪ ಹಾಸಿಗೆಯ ಮೇಲೆ ಉರುಳಿತು. ಬುಗ್ಗೆಂದು ಕ್ಷಣಾರ್ಧದಲ್ಲಿಯೇ ಹಾಸಿಗೆಗೆ ಬೆಂಕಿ ಹಿಡಿಯಿತು. ಅಷ್ಟಕ್ಕೂ ಅಗ್ನಿದೇವ ತೃಪ್ತಿಹೊಂದದೇ ರಾಧಾಳ ಸುಕೋಮಲ ಶರೀರವನ್ನೂ ಆವರಿಸಿತು. “ಅಯ್ಯೋ ಬೆಂಕಿ....ಬೆಂಕಿ....” ಎಂದು ಚೀರಿ ಎಚ್ಚರದಪ್ಪಿದಳು ರಾಧಾ !

ಆಗ ಸಾವಿತ್ರಮ್ಮನ ಗೋಳು ಹೇಳತೀರದಷ್ಟು ಅಗ್ನಿದೇವನ ಹಸಿವೆಗೆ ರಾಧಾಳ ಅರ್ಧದೇಹ ಸುಟ್ಟು ಆಹಾರವಾಗಿತ್ತು. ಬೆಳಗಿನ ವರೆಗೆ ಗಾಳಿ ಹಾಕುತ್ತ ಉಳಿದರು. ನೆರೆಹೊರೆಯವರೆಲ್ಲರೂ ಹಲವು ರೀತಿಯಿಂದ ಸಮಾಧಾನ ಹೇಳಿದರು. ಆದರೂ ಸಾವಿತ್ರಮ್ಮನ ದುಃಖ ದೂರಾಗಲಿಲ್ಲ.

ರಾಧಾಳಿಗೆ ಮತ್ತೆ ಎಚ್ಚರ ಬಂದಾಗ ಉರಿಯನ್ನು ತಡೆಯಲಾರದೇ ಗೋಳಾಡುತ್ತಿದ್ದಳು. “ಅಯ್ಯೋ, ಅಪ್ಪಾ ಅಮ್ಮಾ, ಅಣ್ಣಾ” ಕರುಳು ಕೊರೆದಂತಾಗುತ್ತಿತ್ತು ಸಾವಿತ್ರಮ್ಮನಿಗೆ! ಹೇಗಾದರೂ ನನ್ನ ಮುದ್ದು ಮಗುವನ್ನು ಉಳಿಸಿಕೊಡಿ ಎಂದು ಹಲವಾರು ಡಾಕ್ಟರುಗಳ ಕಾಲನ್ನು ಹಿಡಿದಳು. ಕಂಡ ಕಂಡ ದೇವರಿಗೆ ಹರಕೆಯನ್ನು ಹೊತ್ತಳು. ಆದರೆ ವಿಧಿಯ ಆಟದೆದರು ಅವಳದೆಲ್ಲಿ ?

ಸಂಜೆ ಐದು ಘಂಟೆಯಾಗಿರಬಹುದು. ರಾಜು ಮೋಟಾರಿನಿಂದ ಇಳಿದು ಮನೆಯ ಕಡೆಗೆ ಸಾಗಿದ್ದ. ಅಮ್ಮ, ತಂಗಿ ರಾಧಾ ಎಲ್ಲ ತನ್ನ ಸ್ವಾಗತಕ್ಕಾಗಿ ಕಾದು ನಿಂತಿರಬಹುದೆಂದು ವೇಗವಾಗಿ ನಡೆದ. ಮನೆ ಸಮೀಪಿಸಿತು. ಆಶೆಯಿಂದ ಬಿಡುಗಣ್ಣನಾಗಿ ನೋಡಿದ ರಾಧೆಯು ಸುಳಿವಿರಲಿಲ್ಲ. ಬಹಳ ಅಚ್ಚರಿಯುಂಟಾಯಿತು. ಹಾಗೆಯೇ ಮನೆಯ ಒಳನುಗ್ಗಿದ.

ಒಳಗೆ ಹೋಗಿ ನೋಡಿದರೆ ನಗೆ ಮಾತಿನ ಸ್ವಾಗತಾರ್ಹದ ಬದಲು ಕಣ್ಣೀರಿನ ತೆರೆ ಅವನ ಸ್ವಾಗತಕ್ಕಾಗಿ ಕಾದು ಕುಳಿತಿತ್ತು. ರಾಜು ಒಮ್ಮೆಲೇ ‘ರಾಧಾ’! ಎಂದು ಚೀರಿ ರಾಧೆಯನ್ನು ಅಪ್ಪಿಕೊಂಡ. ರಾಧೆಯು ಮುಖವನ್ನು ತನ್ನ ಕಣ್ಣೀರಿನಿಂದ ತೋಯಿಸಿದ. ಅರಿಯದ ಅಬಾಲರಂತೆ ಇಬ್ಬರೂ ರೋದಿಸಿ ರೋದಿಸಿ ಮೂಕರಂತಾದರು.

ಕೆಲವು ವೇಳೆಯ ನಂತರ ಸಾವಿತ್ರಮ್ಮ ಕಣ್ಣೀರುಗರೆಯುತ್ತ ನಡೆದ ಸಂಗತಿಯನ್ನೆಲ್ಲಾ ತಿಳಿಸಿದರು. ರಾಜುವಿಗೆ ಏನೂ ತೋಚದಾಯಿತು. ರಾಧಾಳ ಕಣ್ಣಿನಿಂದ ಕಣ್ಣೀರು ಕೋಡಿ ಕೋಡಿಯಾಗಿ ಹರಿಯುತ್ತಿತ್ತು. ತನ್ನ ಮುತ್ತಿನ ಹಾರವನ್ನೊಮ್ಮೆ ನೋಡಬೇಕೆಂಬ ಆಶೆ ರಾಧಾಳಿಗೆ “ಅಣ್ಣಾ, ಮುತ್ತಿನ ಹಾರ” ಎಂದಳು ಕ್ಷೀಣ ಧ್ವನಿಯಲ್ಲಿಯೇ ! ರಾಜು ತಕ್ಷಣ ತಾನು ತಂದಿದ್ದ ಮುತ್ತಿನ ಹಾರವನ್ನು ತೋರಿಸಿದ. ರಾಧಾ ನೋಡಿದಳು ಕಣ್ತುಂಬ ನೋಡಿದಳು. ತನ್ನ ಕೊನೆಯ ಆಶೆಯೊಂದು ಪೂರೈಸಿದ್ದಕ್ಕೆ ಅತೀವ ಸಂತೋಷವಾಗಿರಬೇಕು. ಹಾಗೆಯೇ ಎಂಬಂತೆ ಕಣ್ಣು ಮುಚ್ಚಿದಳು. ಮತ್ತೆ ಕಣ್ಣು ತೆರೆಯಲಿಲ್ಲ.

ರಾಧಾಳ ಪ್ರಾಣ ಪಕ್ಷಿ ಆಗಲೇ ಹಾರಿಹೋಗಿತ್ತು. ಅವಳ ಜೀವನ ಕುಸುಮ ಅರಳಿ ಕಂಪನ್ನು ಸೂಸುವ ಮೊದಲೇ ಬಾಡುವದೆಂದು ಯಾರಿಗೆ ಗೊತ್ತಿತ್ತು. ದೀಪಾವಳಿಯ ದಿನ ಮನೆಮನೆಯಲ್ಲಿ ಊರ ಊರಲ್ಲಿ ದೀಪ ಪ್ರಕಾಶಮಾನವಾಗಿ ಉರಿಯುತ್ತಿತ್ತು. ಇವಳ ಮನೆಯಲ್ಲಿ ಗಾಢಾಂಧಕಾರ ಪಸರಿಸಿತ್ತು.

೨ ನೇ ಪುಟದಿಂದ ಮುಂದೆ ಬಂದದ್ದು

ಮಾರ್ಪಡುತಲಿರುವ ಇಂದಿನ ಸಮಾಜರಚನೆಯಲ್ಲಿ ಮಕ್ಕಳ ಪ್ರಾಥಮಿಕ ಶಿಕ್ಷಣ ಹಂತದಲ್ಲಿ ಶಿಕ್ಷಕ ವರ್ಗವು ಒಂದು ದಶಕ ದೊಳಗಾಗಿ ಬರಿ ಹೆಂಣುಮಕ್ಕಳದೆಯೇ ಆಗಬಹುದು. ಇದು ಸೂಕ್ತವೂ ಆಗಿದೆ. ಆದರೆ ಗಂಡುಸಿನಂತೆಯೆ ಹೆಂಣುಮಕ್ಕಳು ಕಚೇರಿಗಳಲ್ಲಿ ಕಾರಕೂನರು ಅಥವಾ ಪೋಲೀಸು ಕಾನಿಸ್ತೇಬಲರು ಆಗುವದು ನಮ್ಮ ಸಮಾಜವ್ಯವಸ್ಥೆಯ ರಚನೆಗೆ ಹಿತ ಕಾರಿಯೆನಿಸದು. ಮನೆತನದ ಹಿರಿಯಳಾಗುವ ಹೊಣೆ ಏನೂ ಸಣ್ಣದಲ್ಲ. ಇದನ್ನು ಒಲೆಯ ಮುಂದೆ ಕುಳಿತು ಮನೆಮೂಳಿಯಾಗುವದು ಎಂದು ಹಳಿಯದಿರಿ. ಕಾಯಕ ಎಲ್ಲವೂ ಪವಿತ್ರ ವಾಗಿದೆ. ಮನೆತನವೆಂದರೆ ಸಂಸ್ಕೃತಿಯನ್ನು ಕಾಪಾಡುವದೇ ಆಗಿದೆ ಮನೆಯಲ್ಲಿ ಸಂಸ್ಕೃತಿಯನ್ನು ಕಾಪಾಡಿ ಮಕ್ಕಳನ್ನು ಸು-ಸಂಸ್ಕೃತರನ್ನಾಗಿಸುವ ಹೊಣೆ ಹೆಂಣುಮಕ್ಕಳದಾಗಿದೆ. ಇದಕ್ಕೆ ನೆರವಾಗುವದು ಗಂಡುಸಿನ ಕರ್ತವ್ಯ ಧರ್ಮವಾಗಿದೆ. ನಮ್ಮ ಹೆಂಣುಮಕ್ಕಳು ಗಂಡುಸರಂತೆ ಹೊರಗಲೆಯುವಕ್ಕಿಂತ ನಮ್ಮ ಮನೆಗಳಲ್ಲಿ ನಮ್ಮ ಸಂಸ್ಕೃತಿಯ ನೆಲೆಗಲ್ಲುಗಳಾಗಿ ನಿಲ್ಲುವದು ನಮ್ಮ ಸಮಾಜದ ನೆಮ್ಮದಿಗೆ ವಿಹಿತವಾಗಿದೆ. ಅಪವಾದಗಳು ಈ ಸಾಮಾನ್ಯ ನಿಯಮುವನ್ನೆ ದೃಢೀಪಡಿಸುತ್ತಿವೆ.

ಒಟ್ಟಾರೆ ಹೇಳುವದಾದರೆ ನಮ್ಮ ಹೆಂಣು ಮಕ್ಕಳು ಭಾರತೀಯ ಸಂಸ್ಕೃತಿಯ ಪ್ರತೀಕಗಳಾಗಿ ಇರಬೇಕು. 'ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ' ಎಂದು ಇರುವ ಭಗವದ್ಗೀತೆಯ ನುಡಿಯನ್ನು ನೆನೆಯ ಬೇಕು. ಧರ್ಮ ಈ ಶಬ್ದವು ಅತ್ಯಂತ ವ್ಯಾಪಕವಾದ ಅರ್ಥವುಳ್ಳದ್ದಾಗಿದೆ. ಹೊರಗಣಿದರಲ್ಲಿಯ ಒಳಿತನ್ನು ಮಾತ್ರ ಅಳವಡಿಸಿಕೊಂಡು ನಮ್ಮ ವೈಶಿಷ್ಟ್ಯವನ್ನು ಕಾಯ್ದುಕೊಳ್ಳಬೇಕು. ಹೀಗೆ ಮೈಗೂಡಿಸಿಕೊಳ್ಳುವಂತೆ ಮಾನವಧರ್ಮವು ವ್ಯಾಪಕವೂ ಇದೆ. ಈ ದಾರಿಯು ಶ್ರೇಯಸ್ಕರವಾಗಿದೆ. ಅಂಧಾನುಕರಣ ಎಂದಿಗೂ ಕೂಡದು ಎಂದು ಮುಂತಾಗಿ ವಿವೇಚನಾಪೂರ್ವಕ ವಾಗಿ ತಿಳುಹಿದರು.

ಮರುದಿನ (೧೭-೧೧-೫೯) ಮಧ್ಯಾಹ್ನ ೩-೩೦ರಿಂದ ೫-೩೦ರ ವರೆಗೆ ಇದೇ ವಿಷಯದ ಬಗ್ಗೆ ಶ್ರೀ. ರಾಚಪ್ಪ ಅವರ ಹಿರಿಯತನದಲ್ಲಿ ವಿಚಾರಗೋಷ್ಠಿಯು ವನಿತಾ ಸೇವಾ ಸಮಾಜದಲ್ಲಿ ನಡೆಯಿತು. ಅನೇಕ ವಿದ್ಯಾರ್ಥಿನಿಯರು ತಮಗೆ ಹೊಳೆದಂತೆ ತೊಡಕುಗಳ ಪ್ರಶ್ನೆಗಳನ್ನಿರಿಸಿದರು. ಎಷ್ಟೋ ಪ್ರಶ್ನೆಗಳು ಅಸ್ಪಷ್ಟವಿದ್ದರೂ ಸಾಮಾನ್ಯವಾಗಿ ಅವುಗಳೆಲ್ಲದರ ಮತಿತಾರ್ಥವು ಗಂಡಿನಂತೆ ಹೆಣ್ಣುಮಕ್ಕಳೂ ಕೂಡ ಜೀವನದ ಎಲ್ಲ ರಂಗಗಳಲ್ಲಿ ಪ್ರವೇಶಿಸುವಂತಾಗಿ ಸ್ಪರ್ಧಿಸಬಾರದೇಕೆ ಎಂಬುದಾಗಿತ್ತು. ಆವುದೇ ರಂಗದಲ್ಲಿ ಮೇಧಾವಿಗಳಾದವರು— ಗಂಡುಸು ಆಗಲಿ ಹೆಂಗುಸು ಆಗಲಿ— ತಮ್ಮ ಪ್ರತಿಭೆಯನ್ನು ಬೀರಬಲ್ಲರು. ಆದರೆ ನಿಸರ್ಗ ನಿಯಮುಗಳಿಗನುಸಾರವಾಗಿ ಅವರವರಿಗೆ ಉಚಿತವಾದ ರಂಗಗಳಲ್ಲಿ ಸ್ವಾರ್ಥತ್ಯಾಗ ಬುದ್ಧಿಯಿಂದ ಪರಿಶ್ರಮಿಸುವದು ಶ್ರೇಯಸ್ಕರವಾಗಿದೆ. ತ್ಯಾಗದಿಂದಲೇ ಮಾನವ ಜೀವನದ ಸಾಫಲ್ಯ, ಇದಕ್ಕೆ ನಮ್ಮ ತಾಯಂದಿರು ಸಾಕ್ಷ್ಯರಾಗಿದ್ದಾರೆ. ಗಂಡು ಹೆಂಣು ಭೇದ್ಯವಲ್ಲದ ಒಂದೇ ಶಕ್ತಿಯ ರೂಪಗಳಾದ್ದು ಪೂರಕಗಳೇ ಆಗಿವೆ. ಇವುಗಳಲ್ಲಿ ಹಾನಿಕಾರಿಯಾದ ಸ್ಪರ್ಧೆ ಸೃಷ್ಟಿಗೆಯೆ ವಿನಾಶಕಾರಿಯಾಗಿದೆ. ಕೀಳು ಮೇಲು ಎಂಬುದು ಬರಿ ಭ್ರಾಂತಿ, ಈ ಸೃಷ್ಟಿಗಧೀಶಳು ಆದಿಶಕ್ತಿಯಲ್ಲವೇ ? ಹೆಂಣು ಮಕ್ಕಳೂ ಉಚಿತವಾದ ಶಿಕ್ಷಣವನ್ನು ಹೊಂದಿ ಆದರ್ಶ ತಾಯಂದಿರಾಗಬೇಕು. ಹೀಗಾದರೇನೇ ಜಗದುದ್ಧಾರ, ಮಾನವ ಕಲ್ಯಾಣದ ಸಿದ್ಧಿ ಎಂಬುದೇ ಅವರ ಉತ್ತರದ ಸಾರವಾಗಿದ್ದು ಅದನ್ನವರು ಮಾರ್ಮಿಕವಾಗಿ ತಿಳಿಯಪಡಿಸಿದರು. ತರುಣ ವಿದ್ಯಾರ್ಥಿನಿಯರು ಹೀಗೆ ವಿಚಾರಪರರಾಗಿ ಸಾಗುತ್ತ ತಮ್ಮ ಸಂಶಯ ಸಂದೇಹಗಳನ್ನು ನಿವಾರಿಸಿಕೊಳಲೆತ್ನಿಸುತ್ತಿರುವದನ್ನು ಸ್ವಾಗತಿಸಿ ಹೆಚ್ಚು ಆಳವಾಗಿ ವಿಚಾರಿಸಬೇಕೆಂದೂ ಇಂತಹ ಗೋಷ್ಠಿಗಳಲ್ಲಿಸುಸಂಬದ್ಧತೆ ಶಿಸ್ತು-ಸಂಯಮಗಳನ್ನು ಕಾಯುವದಕ್ಕೆ ಅಣುಕು ಸಂಸತ್ತನ್ನು ನಿರ್ಮಿಸಿ ಮೌಖಿಕವಲ್ಲದೆ ಲಿಖಿತ ಪ್ರಶ್ನೆಗಳನ್ನೂ ಉತ್ತರ ಗಳನ್ನೂ ಕಾಯ್ದಿರಿಸುವಂತೆ ಏರ್ಪಾಟು ಮಾಡುವದು ಸೂಕ್ತವಾಗಿದೆ ಎಂದೂ ಇಂದಿನ ಗೋಷ್ಠಿಯ ಹಿರಿಯರಾದ ಶ್ರೀ. ರಾಚಪ್ಪನವರು ಸೂಚಿಸಿದರು.

ಅತಿಥಿಗಳಿಗೆ ಪಾನೀಯವನ್ನೂ ವನಿತಾ ಸೇವಾ ಸಮಾಜದ ತೋಟದಲ್ಲಿಯೇ ಬೆಳೆಸಿದ ಹೂಗಳಿಂದ ಸಿದ್ಧವಾದ ಪುಷ್ಪಗುಚ್ಛವನ್ನೂ ಅರ್ಪಿಸಲಾಯಿತು. ಹೆಂಣುಮಕ್ಕಳು ತಮ್ಮ ಏಳ್ಗೆಗಾಗಿ ಸ್ವಾವಲಂಬನವನ್ನಾಧರಿಸಿದ್ದ ಈ ಸಂಸ್ಥೆ—ವನಿತಾ ಸೇವಾ ಸಮಾಜದ ಬಗೆಗೆ ತತ್ಪ್ರನ್ವೇಕ್ಷರಾದ ಶ್ರೀ. ರಾಚಪ್ಪ ಅವರು ತನ್ನ ಮೆಚ್ಚುಗೆಯನ್ನು ಪ್ರದರ್ಶಿಸಿದರು.

---

## ಸೂಚನೆ

* ಲೇಖನಗಳು, ಅಸ್ಪಷ್ಟ ರೀತಿಯಲ್ಲಿ ಬರೆದವು ಬರುತ್ತಿದ್ದು, ಮುದ್ರಣ ಕಾರ್ಯಕ್ಕೆ ತುಂಬಾ ತೊಂದರೆಯಾಗುತ್ತದೆ. ಲೇಖಕರು ಸುಸ್ಪಷ್ಟ ರೀತಿಯಲ್ಲಿ ಬರೆದ ಲೇಖಗಳನ್ನು ಸಂಪಾದಕರ ವಿಳಾಸಕ್ಕೆ ಕಳುಹಿಸಬೇಕು.

* ಇನ್ನೂ ವರೆಗೂ ಚಂದಾ ಹಣವನ್ನು ಕಳಿಸದ ಚಂದಾ ದಾರರು ಆದಷ್ಟು ಕೂಡಲೆ ಕಾರ್ಯದರ್ಶಿ 'ವೀರಮಾತೆ' ವನಿತಾ ಸೇವಾ ಸಮಾಜ, ಧಾರವಾಡ. ಈ ವಿಳಾಸಕ್ಕೆ ಚಂದಾಹಣವನ್ನು ಕಳುಹಿಸಿಕೊಡಬೇಕು.

* ಚಂದಾದಾರರು, ತಮ್ಮ ವಿಳಾಸ ಬದಲಾದಲ್ಲಿ, ಹಾಗೆ ತಿಳಿಸಿದರೆ, 'ವೀರಮಾತೆ' ಯು ತ್ವರಿತವಾಗಿ ಮುಟ್ಟುವಂತೆ ದಕ್ಷತೆ ವಹಿಸಲಾಗುವದು.

* ಲೇಖಕರು ಅಥವಾ ವಾಚಕರು, ಲೇಖ ಕಳಿಸುವದಾಗಲಿ ಉಳಿದ ಯಾವದೇ ಪತ್ರವ್ಯವಹಾರ ಮಾಡುವಾಗ ತಮ್ಮ ವಿಳಾಸವನ್ನು ಸ್ಪಷ್ಟ ರೀತಿಯಲ್ಲಿ ಬರೆದು ತಿಳಿಸಲು ಮರೆಯಬಾರದು.

* ಹೊಸದಾಗಿ ಚಂದಾದಾರರಾಗಬಯಸುವವರು, ಚಂದಾ ಹಣವನ್ನು ಮೊದಲು ಕೊಟ್ಟು ಕಳಿಸಿದರೆ, ಮಾಸಿಕವನ್ನು ಅವರ ವಿಳಾಸಕ್ಕೆ ಕಳಿಸುವತ್ತ ಗಮನಿಸಲಾಗುವದು.

* ಸೋದರ, ಸೋದರಿಯರು, ಅಕ್ಕನಟ್ಟಿಗೆಯ ವಿಭಾಗ ದಲ್ಲಿ ಬರುವ ಸ್ಪರ್ಧೆಗಳಿಗೆ ಉತ್ತರಗಳನ್ನು ಪ್ರತಿತಿಂಗಳ ೧೦ ನೇ ತಾರೀಖಿನ ಒಳಗಾಗಿ ಕಳುಹಿಸಬೇಕು.

* * * * * *

---



## ಜಾಹಿರಾತಿಗಾಗಿ ಕಾದಿರಿಸಿದೆ.

### ದರಗಳು

| | ೧ ವರ್ಷಕ್ಕೆ | ಅರ್ಧ ವರ್ಷಕ್ಕೆ | ೩ ತಿಂಗಳಿಗೆ | ೧ ತಿಂಗಳಿಗೆ |
|---|---|---|---|---|
| ಪೂರ್ಣ ಪುಟ .... | ೮೦ ರೂ. .... | ೪೫ ರೂ. .... | ೨೫ ರೂ. .... | ೧೫ ರೂ |
| ಅರ್ಧ ಪುಟ .... | ೪೫ ,, .... | ೨೫ ,, .... | ೧೫ ,, .... | ೧೦ ,, |
| ಕಾಲು ಪುಟ .... | ೨೫ ,, .... | ೧೫ ,, .... | ೧೨ ,, .... | ೮ ,, |

'ಸಮಾನಾಧಿಕಾರ' ಕೃತಿಯಲ್ಲಿ ಬರಬೇಕಿದ್ದರೆ ಮಹಿಳೆಯರ 'ಬೌದ್ಧಿಕ ಉನ್ನತಿ' ಅತ್ಯವಶ್ಯವಾದುದು ಜ್ಞಾನ, ಮನೋರಂಜನೆಗಾಗಿ ವಿವಿಧ ಲೇಖಗಳಿದ ಪ್ರಗತಿಪರ ವಿಚಾರಗಳಿಂದೊಡಗೂಡಿದ ಮಹಿಳೆಯರ ಮಾಸಪತ್ರಿಕೆ

# ವೀರಮಾತೆ

ಇಂದೇ ಚಂದಾದಾರರಾಗಿರಿ

ಸಂಪಾದಕರು :— ಪ್ರೊ. ಸರೋಜನಿ ಮಹಿಷಿ, ಎಂ. ಎ., ಎಲ್‌ಎಲ್. ಬಿ.

ಸ್ತ್ರೀಯರ ವಿಕಾಸಕ್ಕಾಗಿ ಮೀಸಲಾಗಿಟ್ಟ ಮಾಸಪತ್ರಿಕೆ

ವಾರ್ಷಿಕ ಚಂದಾಹಣ ೫ ರೂಪಾಯಿ

ಬಿಡಿಸಂಚಿಕೆ ೩೭ ನ.ಪೈ. ಮಾತ್ರ

ಮನೆಮನೆಯಲ್ಲಿಯೂ ಸುಖಸಂತೋಷಗಳನ್ನು ಬೀರಬಲ್ಲ ಕನ್ನಡ ಮಾಸಪತ್ರಿಕೆ

[ಮುಂಬಯಿ, ಮೈಸೂರು ಮತ್ತು ಮದ್ರಾಸ ಸರಕಾರಗಳಿಂದ ಮಾನ್ಯತೆ ದೊರೆತಿದೆ.]

ವಿಳಾಸದಾರರು ದೊರೆಯದಿದ್ದಲ್ಲಿ

ಕಳುಹಿಸಬೇಕಾದ ವಿಳಾಸ :—

"ವೀರಮಾತೆ" ಕಾರ್ಯಾಲಯ
ವನಿತಾ ಸೇವಾ ಸಮಾಜ
ಪುರಾಣಿಕ ಕೋಡ
ಧಾರವಾಡ

ಶ್ರೀ.

ADDRESS

ಮುದ್ರಕರು : ಶ್ರೀಯುತ ಕುಲಕರ್ಣಿ ರಾಮರಾಯರು
ಸ್ಥಳ : ವನಿತಾ ಪ್ರಿಂಟಿಂಗ ಪ್ರೆಸ್, ಧಾರವಾಡ
ಪ್ರಕಾಶಕರು : ಶ್ರೀ. ಲ. ರಂ. ಪುರಾಣಿಕ
ಸ್ಥಳ : ವನಿತಾ ಸೇವಾ ಸಮಾಜದಲ್ಲಿಯ ಕಾರ್ಯಾಲಯ, ಧಾರವಾಡ




ಸಂಪುಟ ೮ ] ಏಪ್ರಿಲ ೧೯೬೦ [ ಸಂಚಿಕೆ ೧೧

# 'VEERAMATE' WOMEN'S VOICE

The Largest Circulated

KANNADA MONTHLY

---

ರಜಿಸ್ಟ್ರೇಶನ್ ಆಫ್ ನ್ಯೂಜ ಪೇಪರ್ಸ (ಸೆಂಟ್ರಲ್) ರೂಲ್ಸ ೧೯೫೬ರ ೮ನೇ ನಿಯಮಕ್ಕೆ ಸಂಬಂಧಿಸಿದಂತೆ "ವೀರಮಾತೆ" ಮಾಸಪತ್ರಿಕೆಯ ಸ್ವಾಮಿತ್ವ ಮತ್ತು ಇತರ ವಿಷಯಗಳ ಬಾಬತ ವಿವರ:—

| | | |
|---|---|---|
| ೧. | ಪ್ರಕಾಶನ ಸ್ಥಳ— | ವನಿತಾ ಸೇವಾ ಸಮಾಜ ಧಾರವಾಡ. |
| ೨. | ನಿಯಮಿತ ಕಾಲಿಕತೆ— | ಮಾಸಪತ್ರಿಕೆ |
| ೩. | ಮುದ್ರಕರ ಹೆಸರು— | ರಾಮರಾವ ಕುಲಕರ್ಣಿ |
| | ರಾಷ್ಟ್ರೀಯತೆ— | ಭಾರತೀಯ |
| | ವಿಳಾಸ— | ವೀರಮಾತೆ ಕಾರ್ಯಾಲಯ ಧಾರವಾಡ |
| ೪. | ಪ್ರಕಾಶಕರ ಹೆಸರು— | ಲ. ರಂ. ಪುರಾಣೀಕ |
| | ರಾಷ್ಟ್ರೀಯತೆ— | ಭಾರತೀಯ |
| | ವಿಳಾಸ— | ವನಿತಾ ಸೇವಾ ಸಮಾಜ ಧಾರವಾಡ |
| ೫. | ಸಂಪಾದಕರ ಹೆಸರು— | ಸರೋಜನಿ ಮಹಿಷಿ ಎಮ್. ಎ. ಎಲ್ಎಲ್. ಬಿ. |
| | ರಾಷ್ಟ್ರೀಯತೆ— | ಭಾರತೀಯ |
| | ವಿಳಾಸ— | ಲೈನಬಝಾರ ಧಾರವಾಡ |
| ೬. | ಪತ್ರಿಕಾ ಸ್ವಾಮಿತ್ವ ವಿಳಾಸ— | ಕಾರ್ಯಕಾರಿ ಮಂಡಳ |
| | ಮತ್ತು ಬಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ— | ವನಿತಾ ಸೇವಾ ಸಮಾಜ ಧಾರವಾಡ |

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣೀಕನಾದ ನಾನು ಮೇಲಿನ ವಿವರಗಳಲ್ಲಿಯ ಎಲ್ಲ ವಿಷಯಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣೀಕ.

# ಪರಿವಿಡಿ

# ವೀರಮಾತೆಯ ಚಂದಾದಾರರಲ್ಲಿ

## ಸವಿನಯ ವಿನಂತಿ

ಸನ್ಮಾನ್ಯ ಬಂಧು-ಭಗಿನಿಯರೇ, ವೀರಮಾತೆ ಮಾಸ ಪತ್ರಿಕೆಯು ಪ್ರಾರಂಭವಾಗಿ ಬರುವ ಜೂನಕ್ಕೆ ೮ ಸಂಪುಟ (ವರುಷ) ಗಳು ಪೂರ್ತಿಗೊಂಡವು. ಚಂದಾ ಹಣವು ಬಹಳೇ ಉಳಿದಿದ್ದು, ಈ ವರೆಗೂ ಅದರ ಬಗ್ಗೆ ನಾವು ಹೆಚ್ಚು ಕ್ರಮ ತೆಗೆದುಕೊಂಡಿಲ್ಲ. ಮಹಿಳೆಯರ ಉನ್ನತಿಯ ವಿಚಾರ ಪ್ರಚಾರವೇ ನಮ್ಮ ಮುಖ್ಯ ಗುರಿ ಯಾದ್ದರಿಂದ ನಿರ್ದಾಕ್ಷಿಣ್ಯವಾಗಿ ವ್ಹಿ. ಪಿ. ಮಾಡಿ ಹಣ ವಸೂಲ ಮಾಡುವದನ್ನು ಬುದ್ಧಿ ಪೂರ್ವಕವಾಗಿ ಅಲಕ್ಷಿ ಸಿದ್ದೇವೆ. ಆದರೆ ಪರಿಸ್ಥಿತಿಯ ವೈಚಿತ್ರ್ಯವು ನಮ್ಮ ದಾಕ್ಷಿಣ್ಯತೆಯನ್ನು ಸಡಲಿಸಿದೆ. ಆರ್ಥಿಕ ಅಡಚಣಿಯು ಪ್ರಗತಿಗೆ ಬಲವಾದ ಅಡ್ಡಿಯನ್ನು ತಂದೊಡ್ಡಿದೆ. ಕಾರಣ ನಿರುಪಾಯದಿಂದ ತಮ್ಮೆಲ್ಲರಿಗೂ ನಾವು ಚಂದಾಹಣದ ಬಗೆಗೆ ಒತ್ತಾಯದ ಬೇಡಿಕೆಯನ್ನು ಸಲ್ಲಿಸಬೇಕಾಗಿದೆ.

ಬರುವ ಜೂನಕ್ಕೆ ಚಂದಾದಾರರ ಹೊಸ ಲೆಖ್ಖ ಪತ್ರದ ಪಟ್ಟೆಯನ್ನು ತಯಾರಿಸಬೇಕಾಗಿದೆ. ಕಾರಣ ಪ್ರಾರಂಭದಿಂದ ೧೯೬೦ ನೇ ಜೂನದ ವರೆಗೆ ಇದ್ದ ಚಂದಾ ಹಣದ ಬಾಕಿಯನ್ನು ನಮ್ಮ ಲೆಕ್ಕ ಪತ್ರಿ ಕೆಯ ಮೇರೆಗೆ ಲೆಖ್ಖ ಮಾಡಿ ಪ್ರತ್ಯೇಕ ಕಾರ್ಡಿನಲ್ಲಿ ಬರೆದು ತಮ್ಮೆಲ್ಲರಿಗೆ ಕಳಿಸಿರುತ್ತೇವೆ. ಅದನ್ನು ತಾವು ಚನ್ನಾಗಿ ಪರಿಶೀಲಿಸಿ ಬಾಕಿ ಇದ್ದ ಹಣವನ್ನು ಮೇ ತಿಂಗಳ ೨೦ ನೇ ತಾರಿಖಿನ ಒಳಗಾಗಿಕಳಿಸಿ, ವೀರ ಮಾತೆಯು ಬಾಳಿಬೆಳಗುವಂತೆ ಪ್ರೋತ್ಸಾಹಿಸುವಿರಾಗಿ ನಂಬಿದ್ದೇವೆ. ನಮೂದಿಸಿದ ಲೆಖ್ಖದಲ್ಲಿ ಏನಾದರೂ ತಫಾವತ ಇದ್ದಲ್ಲಿ ಅವಶ್ಯವಾಗಿ ನಮಗೆ ತಿಳಿಸಿ ಅದನ್ನು ಸರಿಪಡಿಸಿಕೊಳ್ಳಲು ನಮ್ಮ ಆಗ್ರಹದ ಸೂಚನೆ. ಮೇ ೨೦ ನೇ ತಾರಿಖಿನ ನಂತರ ಬಂದ ತಕರಾರುಗಳನ್ನು ನಾವು ಗಮನಿಸುವದಿಲ್ಲ. ಆ ಒಳಗಾಗಿ ಏನೂ ತಿಳಿಸದೇ ಇದ್ದ, ಹಾಗೂ, ಚಂದಾ ಹಣವನ್ನು ಕಳಿಸದೇ ಇದ್ದ ಚಂದಾರರಿಗೆ ಜೂನ ತಿಂಗಳ ಸಂಚಿಕೆಯು ವ್ಹಿ. ಪಿ. ಮಾಡಲ್ಪಡುವದು. ದಯವಿಟ್ಟು ವ್ಹಿ ಪಿ ಯನ್ನಾನರೂ ಸ್ವೀಕರಿಸಿ ವೀರಮಾತೆಗೆ ಕೃತಜ್ಞತೆಯನ್ನು ಸಲಿಸಬೇಕಾಗಿ ವಿನಂತಿ.

ಒಮ್ಮೆಲೆ ಕಳಿಸಲಾಗದ ಪಕ್ಷಕ್ಕೆ ತಮಗೆ ಸಾಧ್ಯ ವಿದ್ದಷ್ಟು ವಿಭಾಗದಿಂದ (ಕಂತಿನಿಂದ) ಕಳಿಸಲು ಅಡ್ಡಿ ಯಿಲ್ಲ. ಅದರ ಬಗೆಗೆ ಮೇ ೨೦ ನೇ ತಾರಿಖಿನ ಒಳಗೆ ಕಾರ್ಯಾಲಕ್ಕೆ ಅವಶ್ಯ ತಿಳಿಸಬೇಕು. ವೀರಮಾತೆಯ ಬರವನ್ನು ನಿರಾಕರಿಸದೆ ಪ್ರೇಮ ವಿಶ್ವಾಸಗಳಿಂದ ಮಾತೆಯ ಮರ್ಯಾದೆ ಎಂದು ಸಾಧ್ಯವಿದ್ದಷ್ಟು ಕಳಿಸಿ ಪರಸ್ಪರ ಪ್ರೇಮವನ್ನು ಬಳೆಸುತ್ತಿರಬೇಕಾಗಿ ಆಗ್ರಹದ ಬೇಡಿಕೆ.

ವ್ಯವಸ್ಥಾಪಕ "ವೀರಮಾತೆ"

# ವೀರಮಾತೆ



ಕೇವಲ ಹೆಣ್ಣು ಮಕ್ಕಳ ವಿಕಾಸಕ್ಕಾಗಿ ಮೀಸಲಾದ
ಕನ್ನಡ ಮಾಸಪತ್ರಿಕೆ

ಸಂಪುಟ ೮ | ಎಪ್ರಿಲ | ಸಂಚಿಕೆ ೧೧

## ಸಂಪಾದಕೀಯ

### ಹೊಸ ವರ್ಷದ ಹಾರೈಕೆ

'ವಿಕಾರಿ' ನಾಮ ಸಂವತ್ಸರವು ಹಿಂದೆ ಸರಿದು, 'ಶಾರ್ವರಿ' ನಾಮ ಸಂವತ್ಸರವು ಆರಂಭವಾಯ್ತು. ಹೊಸ ವರುಷದ ಹೊಸ ಹರುಷದೊಂದಿಗೆ 'ಯುಗಾದಿ' ಭಾರತೀಯರಿಂದ ಆಚರಿಸಲ್ಪಟ್ಟಿತು. ಬೇವು ಬೆಲ್ಲದ ಕಹಿ-ಸಿಹಿಗಳಿಂದ ಬಾಯಿ ಚಪ್ಪರಿಸಿದೆವು. ಹಿಂದೆ ಸರಿದ ವರ್ಷವು ಕೆಲವರಿಗೆ ಕಹಿಯಾಗಿ ಕಂಡರೆ, ಮತ್ತೆ ಕೆಲವರಿಗೆ ಸಿಹಿಯಾಗಿಯೇ ಸಾಗಿರಬೇಕು. ಇನ್ನೂ ಕೆಲವರಿಗೆ ಕಹಿ-ಸಿಹಿಗಳ ಬೆರಿಕೆಯಾಗಿರಲೂಬಹುದು. ಅದರಂತೆ ಮುಂದಿನ ವರ್ಷವೂ ಆಗುವದು. ಆದರೆ ಈ ಬೇವು ಬೆಲ್ಲದ ಮೂಲ ಉದ್ದೇಶವು, ನಮ್ಮ ಜೀವನದ ಕಹಿ-ಸಿಹಿಗಳ ಉದ್ದೇಶಕ್ಕಿಂತ, ವ್ಯವಹಾರದಲ್ಲಿ ಕಹಿ-ಸಿಹಿ ಜನರೊಂದಿಗೆ ನಡೆದುಕೊಳ್ಳುವ ಒಂದು ವಿಚಾರವಿದೆ. ಅಲ್ಲದೆ ದೇಹಾರೋಗ್ಯಕ್ಕೆ ಬೇವಿನಿಂದಾಗುವ ಲಾಭದ ಉದ್ದೇಶವೂ ಇದೆ. ಹೊಸ ವರ್ಷವು ಸರ್ವರಿಗೂ ಶುಭದಾಯಕವಾಗಲಿ.

### "ಎಪ್ರಿಲ್ ಫೂಲ್" ಆಚರಣೆ ಭಾರತೀಯರಿಗೇಕೆ ?

ನಮ್ಮ ಹೊಸ ವರ್ಷಾರಂಭದ ನಂತರ ಮೂರೇ ದಿನಗಳಲ್ಲಿ ಮಾರ್ಚ ತಿಂಗಳು ಮುಗಿದು ಎಪ್ರಿಲ ಆರಂಭವಾಯ್ತು. ಕೊಡಕೊಳ್ಳುವ ವ್ಯವಹಾರವೂ ಹಳೆಯದನ್ನು ಮುಗಿಸಿ, ಹೊಸದಕ್ಕೆ ಪ್ರಾರಂಭಿಸಿತು. ಅದರೊಂದಿಗೇ 'ಎಪ್ರಿಲ್ ಫೂಲ್' ಗಲಾಟೆಯೂ ಸುರುವಾಯ್ತು. ನಮ್ಮ ನಾಡ, ನಮ್ಮ ಹಬ್ಬಗಳ ಉಚ್ಚ ಆಚಾರಗಳನ್ನು ಪರಕೀಯರು ಆಚರಿಸುವ ಗೊಡವೆಗೇ ಹೋಗುವದಿಲ್ಲ. ನಮ್ಮ 'ಹೋಳೀಹುಣ್ಣಿಮೆ' ಯನ್ನಾಗಲೀ, 'ಯುಗಾದಿ' ಯನ್ನಾಗಲೀ ಯಾವ ಪರಕೀಯರೂ ಆಚರಿಸಿದ್ದು ನಾವು ಕಾಣೆವು. ಆದರೆ ಪರಕೀಯರು ಹೊರಟರೂ ಸಹ ಅವರ ಕರಿಛಾಯೆ ನಮ್ಮಿಂದ ದೂರವಾಗಗೊಡದೆ, ಅವರು ಆಚರಿಸುವ ಹಬ್ಬ 'ಎಪ್ರಿಲ್ ಒಂದನೇ ತಾರೀಖಿನ ಫೂಲ್' ತಮಾಷೆಯನ್ನು ಅನುಕರಣೆ ಮಾಡುವ ಮೂಢತನಕ್ಕೆ ಸಂಪೂರ್ಣ ಅಂಟಿಕೊಂಡಿದ್ದೇವೆ. ಇಷ್ಟೇ ಅಲ್ಲ, ಈ ಅಂಟು ಜಾಡ್ಯವು ದಿನದಿನಕ್ಕೆ ಜನರಲ್ಲಿ ವಿಚಾರ ಬೆಳೆದು ಕಡಿಮೆಯಾಗುವದಕ್ಕಿಂತ, ಹೆಚ್ಚಾಗಿರುವದು ವಿಷಾದದ ಸಂಗತಿ. ಅಂತಹ ವಿನೋದದ ಆಚರಣೆಯು ನಮ್ಮಲ್ಲಿಲ್ಲವೆಂದು ಕೆಲವರ ಹೇಳಿಕೆ. ಪಾಪ! ಅವರು ಹಿಂದುಗಳಾಗಿ ಹುಟ್ಟಿ ಸಹ ಗಂಡಸರಿಗಾಗಿಯೇ ಮೀಸಲಾಗಿರುವ ನಮ್ಮ 'ಹೋಳೀ' ಹಬ್ಬದ ಹಾಗೂ ಹೆಣ್ಣುಮಕ್ಕಳ ವಿನೋದಕ್ಕಾಗಿಯೇ ಮೀಸಲಾಗಿರುವ ದೀವಳಿಗೆಯ ಅಕ್ಕನತದಿಗೆ ಮುಂತಾದ ಹಬ್ಬಗಳ ಹಿನ್ನೆಲೆ ಗೊತ್ತಿಲ್ಲವೇನೋ!

ಈ ಆಚರಣೆಯಿಂದ ಎಷ್ಟೋ ಬಡ ಜನರು ಹಾನಿಗೊಳಗಾಗಿದ್ದಾರೆ. ಬಡ ಹೆಣ್ಣುಮಗಳೊಬ್ಬಳು ವಿನೋದಕ್ಕೆಂದು

ತಂದೆಗೆ ಬರೆದ ಪತ್ರದಿಂದ ಗಾಭರಿಯಾದ ತಂದೆಯು ಗಂಜಿಗೆ ಕಾಸಿಲ್ಲದಾಗ ಗಾಡಿಗೆ ಖರ್ಚಮಾಡಿದ ಸಂಗತಿ ತಿಳಿಯಿತು. ಅನೇಕ ಕರ್ತವ್ಯದಕ್ಷರು ಪರರ ವಿನೋದದಿಂದಾಗಿ ತಮ್ಮ ಅಮೌಲ್ಯ ವೇಳೆಯನ್ನು ಸಹ ಹಾಳುಮಾಡಿಕೊಂಡು, ಮಹತ್ವದ ಕೆಲಸ ಬಿಟ್ಟು ವಂಚಿತರಾಗಿದ್ದಾರೆ. ಇದರಿಂದ ಫೂಲ್ ಮಾಡಿಸಿಕೊಂಡವರಿಗಿಂತ, ಮಾಡಲು ಹೊರಟವರೇ ನಿಜವಾಗಿಯೂ 'ದೊಡ್ಡ ಮೂರ್ಖರು' ಎಂದಲ್ಲಿ ತಪ್ಪಲ್ಲ.

ಇರಲಿ, ಇನ್ನಾದರೂ ನಮ್ಮ ಹಿಂದೂ ಜನರು ಪರರಾಷ್ಟ್ರದ ಹಬ್ಬಗಳಿಗೆ ಮರುಳಾಗದೆ, ಉಚ್ಚ ವಿಚಾರ ಆಚಾರಗಳಿಂದ ತುಂಬಿರುವ ನಮ್ಮ ಅನೇಕ ಹಬ್ಬಗಳ ಹಿನ್ನೆಲೆಯರಿತು ಆಚರಿಸುವರೆಂದಾಶಿಸಿದಲ್ಲಿ ತಪ್ಪಾಗಲಿಕ್ಕಿಲ್ಲಪ್ಪೇ?

ಹೊಸ ವರುಷಾರಂಭದೊಂದಿಗೆ ನಮ್ಮ ವನಿತಾ ಸೇವಾ ಸಮಾಜದ ೩೩ ನೇ ವರ್ಷಾರಂಭವೂ ಪ್ರಾರಂಭವಾಗಿದೆ. ಸಂಸ್ಥೆಯು ದಿನದಿನಕ್ಕೆ ಪರಿಪುಷ್ಟವಾಗಿ ಬೆಳೆದು ಅನೇಕ ಮಹಿಳೆಯರಿಗೆ ಆಶ್ರಯವಿತ್ತು, ರಾಷ್ಟ್ರದ ಬಲ ಬೆಳೆಯಲು ಅನುಕೂಲವಾಗಿರುವಂತೆ, ಸಂಸ್ಥೆಯ ಪೋಷಣೆಯಲ್ಲಿ ಬೆಳೆಯುತ್ತಿರುವ 'ವೀರಮಾತೆ'ಯೂ ಅನೇಕ ಮಹಿಳೆಯರ ವಿಚಾರಶಕ್ತಿಗೆ ಚಾಲನೆ ಇತ್ತು, ಸುವಿಚಾರಿ ಮಹಿಳೆಯರನ್ನು ಹೆಚ್ಚಿಸುವಂತಾಗಲೆಂದು ಹಾರೈಕೆ.

## ನಮ್ಮ ಮಾತು

ತಾ. ೨೪-೩-೬೦ ಕರಿಯಪ್ಪ ಸಂಗೂರ ಎಂಬ ಮಹನೀಯರು ಇಂದು ಸಮಾಜಕ್ಕೆ ಬೆಟ್ಟಿಯನ್ನು ಕೊಟ್ಟು ನಮ್ಮ ಸಂಸ್ಥೆಯ ಎಲ್ಲ ಚಟುವಟಿಕೆಗಳನ್ನು ನಿರೀಕ್ಷಿಸಿದರು. ಅಂದೇ ಸಾಯಂಕಾಲ ೬ ಗಂಟೆಗೆ ಶ್ರೀ. ಡಿ. ಎಲ್. ಪಾಟೀಲ ಶ್ರೀ ಭೀಮರಾವ ದೇಶಪಾಂಡೆ (ಸಮಾಜ ಕಾರ್ಯಕರ್ತರು) ಮೊದಲಾದ ಸದ್ಗೃಹಸ್ಥರೊಡನೆ ಸಭೆ ಸೇರಿ ಶ್ರೀ. ಭೀಮರಾವ ದೇಶಪಾಂಡೆ ಇವರ ಅಧ್ಯಕ್ಷತೆಯಲ್ಲಿ ಸಭೆಯು ಪ್ರಾರಂಭವಾತು. ಶ್ರೀ. ಡಿ. ಎಲ್. ಪಾಟೀಲರು ಅತಿಥಿಗಳ ಪರಿಚಯವನ್ನು ಮಾಡಿಕೊಟ್ಟನಂತರ ಮುಖ್ಯ ಅತಿಥಿಗಳಾದ ಶ್ರೀ. ಕರಿಯಪ್ಪ ಸಂಗೂರ ಇವರು ತಮ್ಮ ಅಪಾರವಾದ ಅನುಭವಯುಕ್ತವಾದ ಭಾಷಣವನ್ನು ಪ್ರಾರಂಭಿಸಿ "ಇಲ್ಲಿಯ ಶಿಕ್ಷಣ ಸಂಸ್ಥೆಯ ವರುವರುಷದ ಪ್ರಗತಿಯನ್ನು ನಾನು ದೂರಿಂದ ಕೇಳುತ್ತಿದ್ದೆ. ಇಂದು ಸಮಕ್ಷಮ ನೋಡಿ ನನಗೆ ಆತ್ಯಾನಂದವಾಗಿದೆ. ವಿದ್ಯಾಕೇಂದ್ರವಾಗಿದ್ದ ಧಾರವಾಡದಲ್ಲಿ ತಾವು ಶಾಲೆ ಕಾಲೇಜುಗಳಲ್ಲಿ ಪ್ರಾವೀಣ್ಯತೆಯನ್ನು ಪಡೆದು ನಂತರ ಹೊಟ್ಟೆಯ ಪಾಡಿಗಾಗಿ ಒಂದು ನೌಕರಿಯನ್ನು ಸ್ವೀಕರಿಸಿ ಪುರುಷರಂತೆ ನಾವೂ ಗಳಿಸಾಳಿಗಳಾದರೆ ನಮ್ಮ ಜನ್ಮ ಸಾಫಲ್ಯವಾಯಿತೆಂದು ಮಾತ್ರ ತಿಳಿಯಬಾರದು. ಸ್ತ್ರೀಜನ್ಮವು ಗಂಗೆಯಂತೆ ಪತಿತರ ಪಾವನಗೊಳಿಸುವ ಅಮೂಲ್ಯ ಸ್ಥಾನವಾಗಿರುವದರಿಂದ ಹಿಂದುಳಿದ ನಮ್ಮ ಹಳ್ಳಿಯ ಮಹಿಳೆಯರನ್ನು ಸುಧಾರಿಸುವ ಮಹತ್ಕಾರ್ಯವೇ ನಿಮ್ಮ ಜನ್ಮ ಸಾಫಲ್ಯದ ಹೆಗ್ಗುರಿಯೆಂದೂ, ಅನಿವಾರ್ಯವಾಗಿ ನೀವು ನೌಕರಿಯನ್ನು ಸ್ವೀಕರಿಸಬೇಕೆ ವಿನಾ ನೌಕರಿಯಿಂದಲೇ ನಮ್ಮ ಗೌರವವು, ನಮ್ಮ ಮುಂದಾಳುತನವು, ಎಂದು ಸರ್ವಥಾ ಊಹಿಸಲಾಗುವದು. ಸ್ತ್ರೀಯರು ಸಮಾಜದ ಆಧಾರಸ್ತಂಭರಾಗಿದ್ದುದರಿಂದ, ಸಹನೆ ಶೀಲತೆ ಕಷ್ಟಸಹಿಷ್ಣುತೆ, ಮೊದಲಾದ ಸದ್ಗುಣಗಳು ದೇವರಿಂದ ಅವರಿಗೆ ದೊರೆತ ಸೊತ್ತಾಗಿವೆ. ಅನುಕರಣೀಯವಾದ ಈ ಸದ್ಗುಣಗಳ ಉಪಯೋಗವು, ಅನುಕರಣ ಮಾಡುವ ಚಿಕ್ಕ ಮಕ್ಕಳ ಮೇಲೆ ತೀವ್ರ ಪ್ರಭಾವ ಭೀರುವದರಿಂದ ಮಕ್ಕಳ ಪಾಲನೆ ಪೋಷಣೆ ಪ್ರಾಥಮಿಕ ಶಿಕ್ಷಣ ಇವುಗಳ ಹೊರೆಯನ್ನು ನಮ್ಮ ಪ್ರಾಚೀನ ಸಮಾಜ ಸುಧಾರಕರು ಅವರ ಮೇಲೆ ಇಟ್ಟದ್ದು ಅತ್ಯಂತ ಸ್ತುತ್ಯವಾಗಿದೆ. ಇಂಥ ಮಹತ್ಕಾರ್ಯದ ಹೊಣೆಯನ್ನು ನಿರ್ವಹಿಸುವ ಮಹಿಳೆಯರು ನಿರಕ್ಷರಿಗಳಾದರೆ ಅದು ಸರಿಯಾಗಿ ಸಾಗದು, ಎಂದು ಅತಿ ಮಹತ್ವದ ಭಾಷಣವನ್ನು ೧॥ ತಾಸು ಮಾಡಿದರು. ನಂತರ ಅಧ್ಯಕ್ಷರು ಸ್ತ್ರೀಶಿಕ್ಷಣದ ಮಹತ್ವವನ್ನು ಸಮಯೋಚಿತವಾಗಿ ಬಣ್ಣಿಸಿ, ಮುಖ್ಯಾತಿಥಿಗಳ ಆಭಾರ ಮನ್ನಣೆಯನ್ನು ಮಾಡಿದರು. ಮಾತೃವಂದನೆಯಾದ ನಂತರ ಸಭೆಯು ಮುಕ್ತಾಯವಾಯಿತು.

ದಿನಾಂಕ ೨೮-೩-೬೦ ನೇ ದಿನ ಧಾರವಾಡ ಮುನಸೀಪಾಲಟಿಯ ಅಡ್ಮಿನಿಸ್ಟ್ರೇಟೀವ್ಹ ಅಫೀಸರರಾದ ಶ್ರೀ ಛಿಪ್ರೆ ದಂಪತಿಗಳ ಅದ್ಯಕ್ಷತೆಯಲ್ಲಿ ನಮ್ಮ ವನಿತಾಸೇವಾಸಜದ ೩೩ನೇ ವರುಷದ ಹುಟ್ಟು ಹಬ್ಬದಸಭೆಯು ಒಳ್ಳೇವಿಜ್ರಂಭಣೆಯಿಂದ ಆಚರಿಸಲ್ಪಟ್ಟಿತು. ಶ್ರೀ. ಸರೋಜಿನಿ ಮಹಿಷಿಯವರೂ ವ. ಟ್ರೇನಿಂಗ ಕಾಲೇಜದ ಪ್ರಿನ್ಸಿಪಾಲರಾದ ಶ್ರೀ. ಯಮುನಾಬಾಯಿ ನಾಡಕರ್ಣಿಯವರೂ ಸಮಾಜದ ಮುನ್ನಡೆಯನ್ನು ವಿವಿಧ ಪ್ರಗತಿಪರ ಚಟುವಟಿಕೆಗಳನ್ನು ವರ್ಣಿಸಿ ಹೆಣ್ಣುಮಕ್ಕಳ ಪ್ರಗತಿ ಪಥದಲ್ಲಿ ಆದ ಸುಧಾರಣೆಯನ್ನು ಪ್ರಶಂಸಿದರು. ಆದರೂ ಇನ್ನೂ ನಮ್ಮ ಹೆಣ್ಣು ಮಕ್ಕಳಲ್ಲಿ ಬಹುಸಂಖ್ಯಾಕರು ನಿರಕ್ಷರಿಗಳೂ, ಮುಂದೆ ಬರಲು ಹಿಂಜರಿಯುವವರೂ ಇದ್ದು ಅವರನ್ನು ಸುಧಾರಿಸುವ ಹುರಿದುಂಬಿಸುವ ಕಾರ್ಯವು ಕಲಿತು ಮುಂದುವರೆದ ಮಹಿಳೆಯರ ಮೇಲೆ ಇದೆ, ಎಂಬದನ್ನು ತಿಳಿಸಿ ಹೇಳಿದರು. ಮಾತೃವಂದನೆಯ ನಂತರ ಸಭೆಯು ಮುಕ್ತಾಯವಾಯಿತು.

#  ಜೀವನದಲ್ಲಿ ಸಾಹಿತ್ಯದ ಸ್ಥಾನ 

ಲೇಖಕ—ಶ್ರೀ. ಬಿ. ವ್ಹಿ. ಡಂಬಳ, ರೋಣ.

ಜೀವನವೆಂದರೆ ಕೇವಲ ತಿನ್ನುವದು, ನಿದ್ರಿಸುವದು ಕೊನೆಗೆ ಸಾಯುವದಲ್ಲ. ಈ ಮೂರೂ ಪ್ರವೃತ್ತಿಗಳನ್ನು ಪಶುಗಳಿಗೇ ಬಿಟ್ಟು ಕೊಡತಕ್ಕದ್ದು. ನಮ್ಮಲ್ಲಿ ಇನ್ನೂ ಬೇರೆ ಕೆಲವು ಪ್ರವೃತ್ತಿಗಳಿವೆ. ಅವುಗಳಲ್ಲಿ ಕೆಲವು ಸಾಧಕಗಳಾಗಿವೆ, ಕೆಲವು ಬಾಧಕಗಳಾಗಿವೆ. ಬಾಧಕ ಪ್ರವೃತ್ತಿಗಳೆಂದರೆ ಅಹಂಕಾರ ಮತ್ತು ಮತ್ಸರ ಇವು ಅವುಗಳಲ್ಲಿ ಅತಿ ಮುಖ್ಯ. ಅವುಗಳನ್ನು ಬೆಳೆಯಗೊಟ್ಟರೆ ನಮ್ಮ ಜೀವನವು ದುರ್ಮಾರ್ಗಕ್ಕೆ ಳಿಯುವದು. ಆದ್ದರಿಂದ ಅವುಗಳಿಗೆ ಬೇಗನೆ ಲಗಾಮನ್ನು ಹಾಕಬೇಕು. ಅವುಗಳ ಮೇಲೆ ನಾವು ಎಷ್ಟೆಷ್ಟು ಸಂಯಮನ ಮಾಡುವೆವೋ ಅಷ್ಟಷ್ಟು ನಮ್ಮ ಜೀವನವು ಮಂಗಲಮಯವಾಗುವದು. ಅದೇ ಜೀವನವು; ಹೀಗೆ ಮಾಡುವವನೇ ಧನ್ಯವೆನಿಸುವದು.

ಹೀಗೆ ಮಾಡಲು ಶಕ್ತಿಯನ್ನು ನೀಡುವದೇ ಸಾಹಿತ್ಯ; ಇಂಥ ಸಾಹಿತ್ಯದಿಂದಲೇ ಜೀವನ ಸುಂದರವಾಗುವದು, ಅಖಂಡ ಆನಂದ ಪ್ರಾಪ್ತವಾಗುವದು. ಹೀಗೆ ಆನಂದಿಸುವದೇ ಜೀವನದ ಉದ್ದೇಶವು.

ಸಾಹಿತ್ಯದ ಆಧಾರವೆಂದರೆ ಜೀವನ. ಇದರ ಆಧಾರದ ಮೇಲೆ ಸಾಹಿತ್ಯದ ಗೋಡೆ ನಿರ್ಮಿತವಾಗಿದೆ. ಜೀವನ ಪರಮಾತ್ಮನ ಕೃತಿಯು. ಆದ್ದರಿಂದ ಅದು ಅನಂತವಿದೆ; ಅಬೋಧವಿದೆ; ಅಗಮ್ಯವೂ ಇದೆ. ಸಾಹಿತ್ಯವು ಮನುಷ್ಯನ ಕೃತಿಯು. ಆದ್ದರಿಂದ ಅದು ಸುಬೋಧವಿದೆ; ಸುಗಮವಿದೆ; ಮತ್ತು ಪರಿಮಿತಗೊಂಡಿದೆ. ಜೀವನವು ಪರಮಾತ್ಮನಿಗೆ ಅವನ ಕೃತಿಯು ಬಗ್ಗೆ ಉತ್ತರ ಕೊಡಬಹುದು; ಅಥವಾ ಬಿಡಬಹುದು; ಅದು ನಮಗೆ ಗೊತ್ತಿಲ್ಲ. ಆದರೆ ಸಾಹಿತ್ಯವು ಮನುಷ್ಯನ ಎದುರಿಗೇ, ಅವನ ಕೃತಿಯ ಬಗ್ಗೆ ಉತ್ತರಿಸಬಲ್ಲದು.

ಜೀವನೋದ್ದೇಶವೇ ಆನಂದ. ಮನುಷ್ಯನು ಜೀವನ ಪರ್ಯಂತ ಆನಂದವನ್ನು ಹುಡುಕುವದರಲ್ಲಿಯೇ ನಿರತನಾಗಿರುತ್ತಾನೆ. ಕೆಲವರಿಗೆ ರತ್ನದಲ್ಲಿ, ಕೆಲವರಿಗೆ ದ್ರವ್ಯದಲ್ಲಿ, ಕೆಲವರಿಗೆ ಬಹಳ ಪರಿವಾರದಲ್ಲಿ, ಕೆಲವರಿಗೆ ಉದ್ದ-ಅಗಲವಾದ ಮನೆ ಕಟ್ಟಿಸುವದರಲ್ಲಿ, ಕೆಲವರಿಗೆ ಐಶ್ವರ್ಯದಲ್ಲಿ, ಮತ್ತು ಹಲವರಿಗೆ ಇನ್ನೂ ಹಲವು ತರದಲ್ಲಿ ಆನಂದವುಂಟಾಗುವದು. ಆದರೆ ಈ ಎಲ್ಲ ಆನಂದಗಳಿಗಿಂತ ಸಾಹಿತ್ಯದ ಆನಂದವು ಮಿಗಿಲಾದುದು. ಯಾಕಂದರೆ ಅದಕ್ಕೆ ಪವಿತ್ರತೆಯುಂಟು, ಸುಂದರತ್ವವಿದೆ; ಸತ್ಯದರ್ಶನವಿದೆ; ಅದರಿಂದ ಜೀವನವು ಸುಖಮಯವಾಗುವದು. ಆದರೆ ಐಶ್ವರ್ಯದಲ್ಲಿ ಅಥವಾ ಭೋಗದ ಆನಂದದಲ್ಲಿ ಬರಬರುತ್ತಾ ಕ್ಷೀಣತ್ವವುಂಟಾಗುವದು; ಅಲ್ಲಿಂದ ಅದರಲ್ಲಿ ಅರುಚಿ ಹುಟ್ಟುತ್ತದೆ; ನಂತರ ಜೀವನ ನಿಃಸಾರವಾಗುವದು.

ಸಾಹಿತ್ಯದಲ್ಲಿ ಒಂಬತ್ತು ರಸಗಳುಂಟು. ಅವೆಲ್ಲವೂ ಒಂದೊಂದು ಬಗೆಯ ಆನಂದವನ್ನು ಉಣಬಡಿಸುತ್ತವೆ. ಬೀಭತ್ಸ್ಯ ರಸದಲ್ಲಿ ಯಾವ ಆನಂದವಿದೆ ಎಂದು ಸಂದೇಹ ಉಂಟಾಗಬಹುದು. ಭಾರತೇಂದು ಮಾಡಿದ ಸ್ಮಶಾನ ವರ್ಣನೆಯಲ್ಲಿ ಬೀಭತ್ಸ್ಯ ರಸವು ಭೋರ್ಗರಿದಿದೆ. ಪ್ರೇತ ಪಿಶಾಚಿಗಳು ಅರ್ಧ ಸುಟ್ಟ ಹೆಣದ ಮಾಂಸದ ತುಕಡಿಗಳನ್ನು ಹರಿದು ಹರಿದು ಕಿತ್ತುಕೊಳ್ಳುವದು; ಎಲುವುಗಳನ್ನು "ಚಟ್ ಚಟ್" ಎಂದು ಮುರಿಸಿ ಬಕ್ಕರಿಸುವದನ್ನು ನೋಡಿದರೆ ಎಂಥ ಕಲ್ಲೆದೆಯವನೂ ಸಹಿತ ನಡುಗದೆ ಇರನು. ಆದರೆ ಇದರ ಹಿಂದೆ ಸುಂದರತ್ವವಿದೆ. ಅದು ಸ್ವರ್ಗೀಯ ಸುಖದ ಅರಿವನ್ನು ಮಾಡುವದು; ಹಾಗೂ ಅದನ್ನು ಬೇಗನೆ ಪಡೆಯಲು ಪ್ರೇರೇಪಿಸುವದು. ಮನಸ್ಸನ್ನು ಸತ್ಕಾರ್ಯದತ್ತ ತಿರುಗಿಸುವದು. ಸತ್ಕಾರ್ಯದ ಆನಂದ ಲಾಭವನ್ನು ಒದಗಿಸುವದು. ಸಾಹಿತ್ಯಕ್ಕೆ ಪ್ರತಿಯೊಂದೆಡೆಯಲ್ಲಿಯೂ ತನ್ನ ಕೆಲಸವನ್ನು ಮಾಡಬಲ್ಲ ಶಕ್ತಿ ಇದೆ. ರಾಜನ ಅರಮನೆಯಲ್ಲಿ, ತಿರುಕನ ಮುರುಕು ಗುಡಿಸಲದಲ್ಲಿ, ಪರ್ವತದ ತುದಿಯಲ್ಲಿ, ಹೊಲಸು ನಳಗಳ ಮಧ್ಯದಲ್ಲಿ, ವೇಶ್ಯಯ ಮನೆಯಲ್ಲಿ, ಶ್ರಾವಣಮಾಸದ ರಾತ್ರಿಯಲ್ಲಿ, ಹೀಗೆ ಎಲ್ಲೆಡೆಯಲ್ಲಿಯೂ, ಅದು ತನ್ನ ಚಲ್ಲಾಟವನ್ನು ಆಡಬಲ್ಲದು.

ಸತ್ಯದ ಆನಂದವು ಮೂರು ಭಾಗವಾಗಿ ಹೊರಟಿದೆ. ೧) ಜಿಜ್ಞಾಸದ ಸಂಬಂಧ ೨) ಪ್ರಯೋಜನದ ಸಂಬಂಧ ೩) ಸಾಹಿತ್ಯ ಸಂಬಂಧ. ಜಿಜ್ಞಾಸದ ಆನಂದದರ್ಶದ ವಿಷಯವಾಗಿದೆ; ಪ್ರಯೋಜನದ ಆನಂದ ವಿಜ್ಞಾನದ ವಿಷಯವಾಗಿದೆ. ಆದರೆ ಸಾಹಿತ್ಯದ ಆನಂದ ಕೇವಲ ಆನಂದಕ್ಕೆ ಮೀಸ

ಲಾಗಿದೆ. ಎಲ್ಲಿ ಆನಂದದ ಅಲೆಗಳು ಏಳುತ್ತವೆಯೋ ಅಲ್ಲಿ ಸಾಹಿತ್ಯದ ಉಗಮವಿದೆ ಎಂದು ತಿಳಿಯಬೇಕು. "ಕಲಾಕಾರನು ಕಲೆಯನ್ನು ನಿರ್ಮಿಸುತ್ತಲೇ, ಆನಂದದ ಅತಿರೇಕದಲ್ಲಿ ತನ್ನನ್ನು ತಾನೇ ಮರೆತು ಬಿಡುತ್ತಾನೆ, ಸಮಾಧಿ ಸುಖದಲ್ಲಿಯೇ ಸದಾ ನಿದ್ದೆ ಹೋಗುತ್ತಾನೆ." ಇದೇ ಸಾಹಿತ್ಯವು. ಇದೇ ಜೀವನಕ್ಕಾಗಿ ಕೊಡುವ ಅದರ ದಿವ್ಯ ಕಾಣಿಕೆ. ಅದಕ್ಕಾಗಿ ಜೀವನದಲ್ಲಿ ಸಾಹಿತ್ಯಕ್ಕಾಗಿ ಮೊದಲನೆಯ ಸ್ಥಾನ ಕಾದಿರಿಸಿದೆ.

ಒಬ್ಬ ರಸಋಷಿಯು ಮಾಡುವ ಮಹತ್ಕಾರ್ಯವನ್ನು ಮತ್ಯಾರಿಂದಲೂ ಮಾಡಲು ಸುಲಭ ಸಾಧ್ಯವಿಲ್ಲ. ಪವಿತ್ರ ಗ್ರಂಥಗಳ ಅವಲೋಕನದಿಂದ ಮಹಾ ಮಹಾ ಕ್ರೂರಾತ್ಮರೂ ಸಹಿತ ಪುಣ್ಯಾತ್ಮರಾಗುವರು. ಬಾಲ್ಯದಲ್ಲಿ ಅತಿ ಕಾಮಾಂಧರಾಗಿದ್ದ ಗಾಂಧೀಜಿಯವರು ಲೋಕಕ್ಕೇ ಪೂಜ್ಯರಾದದ್ದು ಯಾತರಿಂದ? ಕೇವಲ ಎರಡೇ ಎರಡು ಪವಿತ್ರ ಗ್ರಂಥಗಳಾದ "ಥಿಯಾಸಫಿ" ಮತ್ತು ರಶ್ಕಿನ್‌ನ "ಅಂಟುದ ಲಾಸ್ಟ" ಗಳಿಂದಲ್ಲವೆ? ಇದಕ್ಕಿಂತಲೂ ಸಾಹಿತ್ಯವು ನಮ್ಮ ಜೀವನಮಟ್ಟವನ್ನು ಎಷ್ಟು ಏರಿಸಬೇಕು? ಪವಿತ್ರ ಗ್ರಂಥಗಳು ಈ ಲೋಕದ ಚೈತನ್ಯಾಪ್ರೃತವೇ ಸರಿ! ಸಾಧು ಸಂತರ ವಿಚಾರಗಳಲ್ಲಿ ಅದ್ಭುತ ಶಕ್ತಿ ಇರುವದು; ಬ್ರಹ್ಮ ವಿದ್ಯೆಯ ಪ್ರಚಂಡ ಕೋಶವನ್ನು ಒಳಗೊಂಡಿರುವದು. ಚಿತ್ತವನ್ನು ಶುದ್ಧೀಕರಿಸಿ, ಈಶ್ವರನ ಕಡೆಗೆ ತಿರುಗಿಸುವ ಶಕ್ತಿ ಎಲ್ಲಿಯಾದರೂ ಇದ್ದುದಾದರೆ, ಅದು ಸಾಹಿತ್ಯದಲ್ಲಿಯೇ ಇದೆ ಎಂದು ಹೇಳಲೇಬೇಕು.

ನಾದಿರಶಹನು ಆಗ ದಿಲ್ಲಿಯ ಅರಸರಲ್ಲಿ ಅತಿ ಅತ್ಯಾಚಾರ ಮಾಡುವ ಅರಸನೆಂದು ಇತಿಹಾಸದಲ್ಲಿ ಹೆಸರಾಗಿದ್ದನು ಆದರೆ ಒಂದೇ ಒಂದು ಮಾತಿನಿಂದ ತನ್ನ ಅತ್ಯಾಚಾರವನ್ನು ಬಂದು ಮಾಡಲು ಆಜ್ಞೆಯನ್ನಿತ್ತನು. ಆ ಮಾತೆಂದರೆ ಪಾರಸಿಯ ಒಬ್ಬ ಸುಪ್ರಸಿದ್ಧ ಕವಿಯು ಹೇಳಿದ ಒಂದು ಶೃಂಗಾರಭರಿತವಾದ ಶ್ಲೋಕ, ಅದನ್ನು ಒಬ್ಬ ರಸಿಕನು ಅರಸನಿಗೆ ಹಾಡಿತೋರಿಸಿದನು. ಅದರಿಂದ ತಕ್ಷಣವೇ ಅವನ ಹೃದಯದ ಕೋಮಲತೆಯು ಚಿಗುರಿತು. ಕ್ರೂರನಾದ ಅರಸನನ್ನು ನಮ್ರವಾಗಿ ಮಾಡಿತು ಸಾಹಿತ್ಯ!

ಮನುಷ್ಯನು ಸ್ವಭಾವತಃ ದೇವತುಲ್ಯನಾಗಿರುತ್ತಾನೆ. ಪ್ರಪಂಚದ ಕ್ಷುದ್ರತನಕ್ಕಾಗಲಿ, ಅಥವಾ ಪರಿಸ್ಥಿತಿಯ ಗುಲಾಮಗಿರಿಗಾಗಲಿ ಸಿಕ್ಕು ತನ್ನ ದೇವತ್ವವನ್ನು ಕಳೆದುಕೊಳ್ಳುವನು. ಈ ದೇವಾಂಶವನ್ನು ಸ್ಥಿರಗೊಳಿಸಲು ಪ್ರಯತ್ನ ಮಾಡುವದು ಸಾಹಿತ್ಯ! ಎಲ್ಲ ರಾಷ್ಟ್ರಗಳಲ್ಲಿ ಎಲ್ಲಕ್ಕಿಂತಲೂ ಅತ್ಯಮೂಲ್ಯವಾದ ಸಂಪತ್ತೆಂದರೆ ಸಾಹಿತ್ಯದ ಆದರ್ಶ. ವ್ಯಾಸ ಮತ್ತು ವಾಲ್ಮೀಕಿ ಈ ಸಂಪತ್ತನ್ನು ಹೆಚ್ಚಿಸಿದರು; ಭಾರತ ಮಾತೆಯ ಮುದ್ದು ಮಕ್ಕಳಾಗಿ ಉಳಿದರು. ರಾಮನು ವಾಲ್ಮೀಕಿಯ ದೃಷ್ಟಿಗೆ ಬೀಳದಿದ್ದರೆ, ರಾಮಚಂದ್ರನಾಗಿ ಇರುತ್ತಿರಲೇ ಇಲ್ಲ; ಸೀತಾ ಸೀತಾದೇವಿಯಾಗುತ್ತಿರಲಿಲ್ಲ. ಅವರನ್ನು ದೇವತ್ವಕ್ಕೇರಿಸಿತು ಸಾಹಿತ್ಯ.

ಸಾಹಿತ್ಯವು ಜೀವನವನ್ನು ಉದ್ಧರಿಸುವ ಕಾಮಧೇನು ಚಿರಶಾಂತಿಯನ್ನೀವ ಅಮೃತ; ಹಾಗೂ ಅಖಂಡ ಯಶವನ್ನು ಕೋರುವ ಕಲ್ಪವೃಕ್ಷ!

—ಸಾಹಿತ್ಯಕ್ಕೆ ಜಯವಾಗಲಿ.

---

# ಸೋದರಿಗೆ ಪತ್ರ

ತಂಗೀ, ನಿನ್ನೆಯೇ ನಿನ್ನ ಪತ್ರ ಕೈಸೇರಿತು. ನೀನು ನಿನ್ನ ಅಕ್ಕ ತಂಗಿಯರನೇಕರ ಜೀವನದ ಬಗ್ಗೆ ತಿಳಿದುಕೊಳ್ಳುವ ಲವಲವಿಕೆಯಿಂದ ಕೇಳಿದ ಪ್ರಶ್ನೆಯ ಬಗ್ಗೆ ನಾನು ಹೆಚ್ಚಿಗೆ ಬರೆಯಲಾರೆ. ಆದರೆ ನನಗೆ ಬಿಡುವಾದಾಗೊಮ್ಮೆ ನನ್ನ ಸಮೀಪದಲ್ಲಿದ್ದ, ದಿನವೂ ನನ್ನೆಡೆಗೆ ಬರುತ್ತಿರುವ ಅನೇಕ ವ್ಯಕ್ತಿಗಳ ಪತ್ರಗಳ ಅಭ್ಯಾಸದಿಂದಾಗಿ, ನಿನಗೆ ಕೆಲವೊಂದು, ಅತ್ಯಂತ ಹೃದಯದ್ರಾವಕ ಜೀವಿಗಳ ಹಾಗೂ ವಿಚಿತ್ರ ಪರಿಸ್ಥಿತಿಯವರ ಬಗ್ಗೆ ತಿಳಿಸಿಕೊಡುತ್ತ ಹೋಗುತ್ತೇನೆ. ಇಂದಿನ ದಿನ ಮೂರು ಜನ ನಿನ್ನ ಅಕ್ಕ ತಂಗಿಯರ ಕರುಣಾಮಯ ಜೀವನವನ್ನು ನಿನ್ನೆದುರಿಡುತ್ತೇನೆ.

೧ ನಮ್ಮೂರ ಬಳಿಯೇ ಇದ್ದ ಹೆಣ್ಣುಮಗಳೊಬ್ಬಳ ಜೀವನ ಕತೆ ಇದು. ಸಣ್ಣ ವಯಸ್ಸಿನಲ್ಲೇ ತಾಯ್ತಂದೆಯರನ್ನೂ ಕಳೆದುಕೊಂಡು, ವೇಶ್ಯೆಯರೊಬ್ಬರ ನೆರಳಿನಲ್ಲಿ ಬೆಳೆದಳು. ಸಾಕುತಾಯಿಯು ವೇಶ್ಯೆಯಾದರೂ ಸುಸ್ವಭಾವಿ, ಹಲವು ಪುರುಷರ ಆಶ್ರಯ ಬಯಸದೆ, ಕೇವಲ ಒಬ್ಬ ಸದ್ಗೃಹಸ್ಥನ ಆಶ್ರಯದಲ್ಲಿ ನಿಂತ ಶ್ರೀಮಂತ ಸಾಧುಜೀವಿ. ಕುಲೀನೆ ಎಂದರೂ ಅಡ್ಡಿ ಇಲ್ಲ. ಆದರೆ ವಿಧಿಗೆ, ಆ ಹುಡುಗೆಗೆ ಇಷ್ಟು ಆಶ್ರಯ ಸಿಕ್ಕಿದ್ದು ಸರಿಎನಿಸಲಿಲ್ಲವೇನೋ! ಆ ವೇಶ್ಯೆ ಕಾಲವಶಳಾದಳು. ಚಂದ್ರಹಾಸನ ಬಾಲ್ಯವಾಯಿತು ಹುಡುಗಿಗೆ. ಆ ಸಾಕು ತಾಯಿಯು ತಾನು ಸಾಯುವ ಮುನ್ನ ತನ್ನ ಆಸ್ತಿಯನ್ನೆಲ್ಲಾ ಸಾಕುಮಗಳ ಹೆಸರಿನಲ್ಲಿ ಬರೆದಿಟ್ಟು, ಸತ್ತಳು. ಇವಳೊಡನೆ ಮತ್ತೊಂದು ಹುಡುಗಿಯನ್ನು ಸಾಕಿದ್ದಳಾದರೂ ಸಹ, ಅವಳನ್ನು ತಾನು ಮೊದಲೇ ಬೆಂಗಳೂರಿನಲ್ಲಿ ಮತ್ತೊಬ್ಬರಿಗೆ ಸಾಕಲು ಕೊಟ್ಟು ಬಿಟ್ಟಿದ್ದಳಾದ್ದರಿಂದ, ಆ ತಾಯಿಯ ನಾಲ್ಕಾರು ಸಾವಿರ ರೂಪಾಯಿಯ ಆಸ್ತಿಗೆ ಇವಳೊಬ್ಬಳೇ ಭಾಗೀದಾರಳಾದಳು. ಆದರೆ ಇವಳ ಬೆನ್ನು ಹತ್ತಿ ಕಾಡುವ ವಿಧಿಗೆ ಅದೂ ಸಹನವಾಗದೆ, ಇವಳ ಸಾಕುತಾಯಿಯ ಸ್ವಂತ ಅಣ್ಣನ ಮಗಳೊಬ್ಬಳು ದಾಯಾದಿಯಾಗಿ ಇವಳ ಪಾಲಿಗೆ ಬಿದ್ದಳು. ಇವಳಿನ್ನೂ ಆಗ ೧೦–೧೨ ವರ್ಷದ ಬಾಲೆ. ಇವಳನ್ನು ತಾನು ಮನೆಯಲ್ಲಿಟ್ಟುಕೊಂಡು ಮಕ್ಕಳಂತೆ ಸಂರಕ್ಷಿಸುವೆನಾಗಿ ಕೋರ್ಟಿನಲ್ಲಿ ಹೇಳಿ, ಅವಳ ಆಸ್ತಿಯನ್ನಪಹರಿಸುವ ಉದ್ದೇಶದಿಂದ ಹುಡುಗಿಯನ್ನು ಬೆಂಗಳೂರಿಗೆ ತನ್ನ ಮನೆಗೆ ಒಯ್ದಳು. ಹೇಗಾದರೂ ಕಾಲ್ತೊಡಕಾಗಿರುವ ಈ ಬಳ್ಳಿಯು ನಾಶವಾದರೆ ಆಸ್ತಿಯೆಲ್ಲವೂ ತನ್ನ ಕೈಸೇರುವದೆಂಬ ಹಂಚಿಕೆಯಿಂದ ಮನೆಯಲ್ಲಿ ಕೊಡಬಾರದ ಹಿಂಸೆಯೆಲ್ಲ ಕೊಟ್ಟಳು. ಅವಳ ಕಿರುಕುಳವನ್ನು ಸಹಿಸುವದು ದಿನದಿನಕ್ಕೆ ಕಠಿಣವಾಗತೊಡಗಿತು. ನೆರೆಹೊರೆಯ ಮನೆಯಿಂದ ಸಾಮಾನು ಕಳವು ಮಾಡಿ ತಾರೆಂದು ಇವಳಿಗೆ ಹೇಳುವದು, ತಾರದಿದ್ದಲ್ಲಿ ಊಟಕ್ಕೆ ಹಾಕುವಂತಿಲ್ಲ. ಹೀಗಾಗಿ ನಾಲ್ಕು ದಿನಗಳವರೆಗೆ ಉಪವಾಸಬೀಳುವ ಪ್ರಸಂಗ, ಹೊಟ್ಟೆಯ ತಾಪ ತಾಳದೆ ಕಳವು ಮಾಡಲು ಹಿಂಜರಿಯದಾದಳು ಹುಡುಗಿ. ಇದನ್ನು ಕಂಡು ನೆರೆಹೊರೆಯವರು ದೂರೊಯ್ದರೆ ತಿರುಗಿ ಇವಳಿಗೇ ನಾಲ್ಕು ಬಾರುಕೋಲಿದ ಪೆಟ್ಟು ಆ ಮಹತಾಯಿಯಿಂದ. ಮತ್ತೆ ಮೂರು ದಿನ ಉಪವಾಸ, ಹಸಿವಿನ ಬಾಧೆ ತಾಳದೆ ಎಷ್ಟೋ ಸಾರೆ ಮಂದಿಯ ಮನೆಯಲ್ಲಿ ಅನ್ನ ಬೇಡಿ ತಂದು ಯಾರಿಗೂ ಕಾಣಿಸದಂತೆ ಪಾಯಖಾನೆ ಮನೆಯಲ್ಲಿ ಸಹ ಅದನ್ನು ತಿಂದು ಬಂದ ದಿನಗಳುಂಟು. ಈ ಸಂಗತಿಯೇನಾದರೂ ಆ ಮಾರಿಗೆ ಗೊತ್ತಾಯ್ತೋ, ತೀರಿತು; ಕಡುಗೋಲಿನಿಂದ ಜೀವ ಅರಜೀವವಾಗುವವರೆಗೂ ಪೆಟ್ಟು, ಗಂಡ ಬಂದೊಡನೆ ಇಲ್ಲದ ಸಲ್ಲದ ಚಾಡಿ ಹೇಳಿ ಅವನಿಂದಲೂ ಅನೇಕ ಲತ್ತಾಪ್ರಹಾರ. ಹೀಗಾಗಿ ಇವಳಿಗೆ ಜೀವನದಲ್ಲೇ ಬೇಸರ ಬಂದಿತು. ಮುಂದೆ ಹೇಗೋ ಮತ್ತೊಬ್ಬನು ಇವಳ ಆಸ್ತಿಯನ್ನು ತಾನು ಅಪಹರಿಸುವ ಉದ್ದೇಶದಿಂದ ಇವಳಿಗೆ ಏನೇನೋ ಕಲಿಸಿ ತನ್ನ ಮನೆಗೊಯ್ದು ಕೋರ್ಟಿಗೆ ಕರೆದೊಯ್ದು, ಆ ಹೆಣ್ಣುಮಗಳ ವಿರುದ್ಧ ಹೇಳಿಸಿದ. ನಾಲ್ಕಾರು ಭಾರಿ ಕೋರ್ಟಿನ ಕಟ್ಟೆ ಏರಿದ ನಂತರ ಜೀವನದಲ್ಲಿ ಒಂದು ವಿಧ ನಿರಾಶೆ ಹುಟ್ಟಿ ಹುಡುಗಿಗೆ ತನ್ನಿಂದ ತಾನೇ ಸ್ವಲ್ಪ ಧೈರ್ಯವೇನೋ ಬಂದಿತ್ತು. ಇವಳಿಗೆ ಬೆಂಬಲಿಗನಾಗಿ ನಿಂತ ಆ ಮತ್ತೊಬ್ಬನ ಗುಣವನ್ನು ಸೂಕ್ಷ್ಮಮತಿಯಾದ ಇವಳು ಕೂಡಲೇ ಗ್ರಹಿಸಿದಳಾದ್ದರಿಂದ, ಅವನ ಮನೆಯಲ್ಲೂ ನಿಲ್ಲಲು ಇವಳು ಒಪ್ಪಲಿಲ್ಲ. ಕಷ್ಟವೋ ಸುಖವೋ ಆ ಹೆಣ್ಣುಮಗಳ ಮನೆಯಲ್ಲಿಯೇ ಇರುವದೆಂದು ನಿರ್ಧರಿಸಿದಳು. ಇವಳು ಸಣ್ಣವಳಾದ್ದರಿಂದ ಆಸ್ತಿಯಂತೂ ಸರ್ಕಾರದ ಕೈಯ್ಯಲ್ಲಿ ಸಿಕ್ಕಿತ್ತು. ಆಸ್ತಿಯ ಬಹ್ವಂಶವನ್ನು ಅಂದರೆ ಮನೆಯಲ್ಲಿದ್ದ ಅನೇಕ ಒಡವೆ ವಸ್ತು, ಪಾತ್ರೆಪದಾರ್ಥಗಳನ್ನು

ಮುಚ್ಚುಮರೆಯಾಗಿ ಆ ಹೆಣ್ಣುಮಗಳು ಮೊದಲೇ ಒಯ್ದಿದ್ದಳು. ಮುಂದೆ ಹುಡುಗಿಯ ಮೈಮೇಲಿದ್ದ ನಗ, ನಾಣ್ಯಗಳನ್ನು ಸಹ ಅಪಹರಿಸಿ ಬಿಟ್ಟಳು. ಒಂದು ದಿನ ಮನೆಯಲ್ಲಿ ಅವಳ ಗಂಡನು ಕುಡಿದು ಬಂದು ಈ ಹುಡುಗಿಯನ್ನು ಮೈಮುರಿಯೇ ಥಳಿಸಿದನು. ಆಗ ಹೊಡೆದ ಪೆಟ್ಟಿನ ಗುರ್ತು ಇನ್ನಾದರೂ ಇವಳ ಮೈಮೇಲಿದೆ. ಅಂದು ಬಹಳಬೇಸತ್ತು ಇವಳು ಸಾವನ್ನಾದರೂ ಅರಸುತ್ತ ಹೊರಡೋಣವೆಂದು ವಿಚಾರ ಮಾಡಿದಳು. ಆದರೆ ಅವಳ ಆಯುಷ್ಯದಲ್ಲಿ ಇನ್ನೂ ಒಂದು ಆಶಾಕಿರಣವಿದ್ದುದರಿಂದ ಅದನ್ನಷ್ಟು ನೋಡಿ ಬಿಡೋಣವೆಂದು, ಬೆಂಗಳೂರಿನಲ್ಲೇ ಇರುವ ತನ್ನೊಡನೆ ತನ್ನ ಸಾಕುತಾಯಿಯು ಸಾಕಿದ ತನ್ನ ಸಾಕುತಂಗಿಯ ಮನೆ ಹುಡುಕಲು ಅಪರಾತ್ರಿಯಲ್ಲಿ ಮನೆಯಿಂದ ಹೊರಬಿದ್ದಳು. ಆವಳ ಮನೆಯನ್ನು ಕೇವಲ ಒಂದೇ ಒಂದು ಭಾರಿ ಮಾತ್ರ ನೋಡಿದ್ದಳು. ಹೇಗೋ ಆ ಹಾದಿ ಹುಡುಕುತ್ತ ಹೊರಟಾಗಬಂದು ಹಾಳು ಮನೆಯ ಹಿಂದಿನಿಂದ ಹೊರಡುವಾಗ ಅಲ್ಲಿ ಯಾರೋ ಒಬ್ಬರು "ಯಾರದು ?" ಎಂದು ಗಡುಸಾದ ಸ್ವರದಲ್ಲಿ ಕೇಳಿದರು. ಹುಡುಗಿಯು ಬೆಚ್ಚಿದಳು. ಆದರೂ ಧೈರ್ಯತಂದುಕೊಂಡು, ತಾನು ತನ್ನ ತಂಗಿಯ ಮನೆಗೆ ಹೊರಟಿರುವೆನೆಂದೂ. ಅವರ ಮನೆ ಹಾದಿ ತಿಳಿಸಬೇಕೆಂದೂ ಕೇಳಿಕೊಂಡಳು. ಅಪರಾತ್ರಿಯಲ್ಲೇಕೆ ? ಎಂದು ಅವರು ಕೇಳಲು, ಏನೋ ತನ್ನ ಮನಸ್ಸಿಗೆ ಬಂದದ್ದನ್ನಷ್ಟು ಸುಳ್ಳು ಸತ್ಯಗಳನ್ನು ಕೂಡಿಯೇಹೇಳಿಅವರ ಕಡೆಯಿಂದಪಾರಾಗಲುಪ್ರಯತ್ನಿಸಿದಳು. ಸುದೈವದಿಂದ ಅವರಾದರೂ ಹೆಚ್ಚು ವಿಚಾರಿಸದೆ ಮನೆ ಹಾದಿ ತಿಳಿಸಿಕೊಟ್ಟು, "ಮಗೂ ನೀನು ಇನ್ನು ಸ್ವಲ್ಪ ಮುಂದೆ ಈ ಕತ್ತಲಲ್ಲಿ ಇದೇ ರಸ್ತೆಯಲ್ಲಿ ಹೋಗಿದ್ದರೆ, ಹೊಳೆಯ ಪಾಲಾಗುತ್ತಿದ್ದಿ" ಎಂದು ಹೇಳಿ ಸಮೀಪವಿರುವ ಹೊಳೆ ತೋರಿಸಿದರು. ಅಂತೂ ಇಂತೂ ಹೇಗೋ ಮಾಡಿ ತನ್ನ ತಂಗಿಯ ಮನೆ ಸೇರಿದಳು. ಇವಳು ಬಂದ ಸ್ಥಿತಿನೋಡಿ ಅವರ ಮನೆಯಲ್ಲಿ ಎಲ್ಲರೂ ಗಾಬರಿಯಾದರು. ಮುಂದೆ ಇವಳ ವಿಷಯಗಳನ್ನು ಕೇಳಿ, ಮರುಗಿ, ಒಂದೆರಡು ದಿನ ಮನೆಯಲ್ಲಿಟ್ಟುಕೊಂಡು ನಂತರ ಶಿವಮೊಗ್ಗೆಯಲ್ಲಿ ಇವಳ ಕೇಸ್ ಹಿಡಿದಿದ್ದ ವಕೀಲರ ಕಡೆಗೆ ಇವಳನ್ನು ಕಳಿಸಿದರು. ಆ ವಕೀಲರು ಇವಳ ಯಾವ ಪರಿಸ್ಥಿತಿಯನ್ನೂ ವಿಚಾರಿಸದೆ "ಏ ಹುಡುಗೀ, ಯಾರನ್ನು ನಾಶಮಾಡಬೇಕೆಂದಿರುವಿ ? ಏನಿದು ನಿನ್ನ ಈ ವರ್ತನೆ ? ಎಲ್ಲಿ ಓಡಿಹೋಗಿದ್ದಿ ?" ಮುಂತಾಗಿ ಅನೇಕ ವಿಚಿತ್ರ ಪ್ರಶ್ನೆಗಳನ್ನು ಕೇಳಿದಾಗ, ಅನೇಕ ತೊಂದರೆ, ಕಷ್ಟಗಳನ್ನನುಭವಿಸಿ ಗಟ್ಟಿಯಾದ ಇವಳ ಜೀವವು ಅವರ ಮಾತಿನಿಂದಾಗಿ ಹೆದರಲಿಲ್ಲ. ತನ್ನೆಲ್ಲ ಪರಿಸ್ಥಿತಿಯನ್ನು ಧೈರ್ಯದಿಂದಬಿಚ್ಚಿ ಹೇಳಿ,ತಾನಿನ್ನು ಅವರ ಮನೆಗೆ ಕಾಲನ್ನು ಸಹ ಇಡಲಾರೆನೆಂದು ಖಂಡಿತ ಹೇಳಿಬಿಟ್ಟಳು. ಕೋರ್ಟಿನಲ್ಲಿ ವಿಚಾರ ನಡೆದು, ಇವಳನ್ನು ಶಿವಮೊಗ್ಗೆಯಲ್ಲೇ ಒಬ್ಬರ ಮನೆಯಲ್ಲಿಟ್ಟರು. ಮುಂದೆ ಯೋಗಾಯೋಗವು ಕೂಡಿಬಂದು ಇವಳು ಅಲ್ಲಿನ ವಕೀಲರೊಬ್ಬರ ಮುಖಾಂತರನಮ್ಮ ವನಿತಾಸೇವಾ ಸಮಾಜಕ್ಕೆ ಕಲಿಯಲು ಬಂದು, ತನ್ನ ಮ್ಯಾಟ್ರಿಕ್ಯುಲೇಶನ್ ಶಿಕ್ಷಣವನ್ನು ಮುಗಿಸಿ, ಲಗ್ನವಾದಳು. ಇವಳಿಗೆ ಇಲ್ಲಿ ಕಳೆದ ಅಂದರೆ ಮದುವೆಯಾಗಿ ಅತ್ತೆಯಮನೆಗೆ ಹೋಗುವವರೆಗೆ ಕಳೆದ ೧೦ ವರ್ಷಗಳೆಂದರೆ, ತನ್ನ ಆಯುಷ್ಯದಲ್ಲಿನ ಅತಿಸುಖದ ದಿನಗಳೆನಿಸಿದ್ದವು. ಆದರೂ ನಡುವೆ ಕೆಲವು ಕೆಟ್ಟ ಚಟದ ಗೆಳತಿಯರ ಸಂಗಕ್ಕೆ ಬಿದ್ದು, ಸ್ವಲ್ಪ ಪೆಟ್ಟು ತಿನ್ನುವ ಪ್ರಸಂಗಬಂದು ಮುಂದೆ ಅದರಿಂದ ಎಚ್ಚತ್ತಳು. ಲಗ್ನವಾಗಿ ಗಂಡನ ಮನೆಯಲ್ಲಿ ನಾಲ್ಕು ವರ್ಷ ಸಂಸಾರನಡೆಸಿದ್ದು ಎರಡು ಹೆಣ್ಣು ಮಕ್ಕಳ ತಾಯಾದಳು. ಹಾಯ್ ! ಆದರೆ ಕ್ರೂರ ವಿಧಿಗೆ ಇವಳ ಇರುವಿಕೆಯು ಮತ್ತೂ ಸಹನವಾಗದೆ, ಗಂಡನಿಗೆ ಏನೇನೋ ಕಾರಣದಿಂದಾಗಿ ಕೆಲಸದಿಂದ ಕಿತ್ತಿಹಾಕಲಾಯ್ತು. ಪೋಲೀಸರ ಕಣ್ಣಿನ ಕೆಳಗೇ ಇವಳ ಗಂಡನಿರಬೇಕಾಯ್ತು. ಇದರಿಂದಾಗಿ ಪುನಃ ಇವಳು ನಮ್ಮಲ್ಲಿಗೇ ಬಂದು ಆಶ್ರಯ ಹೊಂದುವ ಪ್ರಸಂಗ ಬಂದಿತು. ನೋಡಿದೆಯಾ ಹೇಗಿದೆ ದೈವದಾಟ ! ಈಗಂತೂ ಇವಳಿಗೆ ಎರಡು ಮಕ್ಕಳು ಸಣ್ಣ ಸಣ್ಣವರು. ತಾನು ಸ್ವತಃ ದುಡಿದು ಹೊಟ್ಟೆ ತುಂಬಿಸಿಕೊಳ್ಳುವೆನೆಂಬ ಧೈರ್ಯವಿಲ್ಲ. ಮೊದಲಿನಿಂದ ಕಡೆ ವರೆಗೂ ಶನಿಯು ಕೈತೊಳೆದುಕೊಂಡು ತನ್ನ ಬೆನ್ನು ಹತ್ತಿರುವದರಿಂದಾಗಿ ಆಯುಷ್ಯದಲ್ಲೇ ನಿರಾಶೆ. ಯಾವದೋ ಒಂದು ಮುಂದಿನ ಕನಸಿನ ಸುಖರಾಜ್ಯನೆನೆಸಿ, ಮದುವೆಯಾದೊಡನೆ ಮನೆಯ ಖರ್ಚಿಗಾಗಿ ಇದ್ದ ಬಿದ್ದ ಆಸ್ತಿಯನ್ನೆಲ್ಲಾ ಖರ್ಚು ಮಾಡಿಬಿಟ್ಟದ್ದರಿಂದ ಈಗ ಒಂದು ಬಿಡಿ ಕಾಸಿಗಾಗಿ ಸಹ ಪರಾವಲಂಬನ. ಇಂತಹ ಪರಿಸ್ಥಿತಿಯಲ್ಲಿ ಅವಳೇನು ಮಾಡಲು ಸಾಧ್ಯವಿತ್ತು. ಈಗ ಸಂಸ್ಥೆಯು ಅವಳಿಗೆ ಆಶ್ರಯಕೊಟ್ಟಿತೆಂದು ಚನ್ನಾಗಿದೆ. ಇಲ್ಲವಾದರೆ ಅವಳ ಪಾಡೇನಾಗುತ್ತಿತ್ತು? ಹೆಣ್ಣು ಮಕ್ಕಳ ಜೀವನವೆಂದರೆ, ನಾವು ಮನೆಯಲ್ಲಿ ಕುಳಿತು ನೆನೆಸುವಷ್ಟು ಸುಲಭವಲ್ಲ. ಇಂತಹ ಇನ್ನೂ ಅನೇಕ ಮುಖದ ಉದಾಹರಣೆಗಳು ದಿನವೂ ಒಂದಲ್ಲ, ಎರಡಲ್ಲ ಅನೇಕವನ್ನು ನೋಡುತ್ತಿದ್ದೇವೆ ಮೊದಮೊದಲು ಮನಸ್ಸಿಗೆ ಬಹಳಬೇಸರ

ವೆನಿಸುತ್ತಿತ್ತು. ಈಗೀಗ ಅದೂ ರೂಢಿಯಾಗಿ ಬಿಟ್ಟಿದೆ. ಮನಸ್ಸು ರೋಸಿ ರೋಸಿ ಘಟ್ಟಿ ಕಲ್ಲಾಗಿದೆ. ಏನೂ ಅರಿಯದ ನಿನಗೆ ಈ ಮೇಲಿನ ವಿಷಯದಿಂದ ತಲೆಯಲ್ಲಿ ಈಗ ಏನೇನೋ ಆಗುತ್ತಿರಬಹುದು. ಆದರೆ ಮುಂದೆ ಇವಳು ನಮ್ಮ ಸಂಸ್ಥೆಯ ಆಶ್ರಯದಲ್ಲೆ ನಾಲ್ಕು ವರ್ಷಗಳಿದ್ದು ಪುನಃ ಟೀಚರ್ಸ ಟ್ರೇನಿಂಗ, ಗಾಯನಾಭ್ಯಾಸಗಳನ್ನು ಮಾಡಿ, ಈಗ ಬೋರ್ಡಿನ ಒಂದು ಶಾಲೆಯಲ್ಲಿ ಶಿಕ್ಷಕಿಯಾಗಿ ನಿಂತಿದ್ದಾಳೆ. ಇರಲಿ, ಮತ್ತೊಂದು ಸಂಗತಿ ತಿಳಿಸುತ್ತೇನೆ ಕೇಳು.

ಈಗ ಎಷ್ಟೋ ವರ್ಷಗಳ ಹಿಂದೆ ಇದೇ ಸಮಾಜದಲ್ಲೇ ನಾಲ್ಕಾರು ವರ್ಷಗಳಿದ್ದು, ಮುಂದೆ ವಸತಿಗೃಹದ ಅನೇಕ ಗೊಂದಲಖೋರ ಹೆಣ್ಣುಮಕ್ಕಳೊಡಗೂಡಿ ಇಲ್ಲೇ ಕಾರ್ಯ ಮಾಡುತ್ತಿದ್ದ ಒಬ್ಬ ಕಪಟಿ ಕಾರ್ಯಕರ್ತನೊಡನೆ ಅವನ ಮಾತಿಗೆ ಮರುಳಾಗಿ, ಸಂಸ್ಥೆಯಿಂದ ಹೊರಗೆ ಹೋಗಿ ಬಿಟ್ಟ ವಿಧವಾ ಹೆಣ್ಣು ಮುಂದೆ ಅವನ ಮನೆಯಲ್ಲಿ ಅವನ ಹೆಂಡಿರು ಮಕ್ಕಳುಗಳಿಂದ ಮಗಳಿಗೆ ಹಾಗೂ ಸ್ವತಃ ಅವನಿಂದಲೇ ತೊಂದರೆ, ಕಿರುಕುಳಕ್ಕೆ ಪ್ರಾರಂಭವಾಗಲು, ಜೀವನದಲ್ಲಿ ಬೇಸತ್ತ ಅವಳು ತನ್ನ ಮುಂದಿನ ಹಾದಿ ಕಳ್ಳತನದಿಂದ ಹುಡುಕಹತ್ತಿದಳು. ಮನೆಯೆಂದರೆ ಅವಳಿಗೆ ಬಂದೀಖಾನೆಯಾಗಿತ್ತು. ಅವನು ಮನೆಯಲ್ಲಿಲ್ಲದಾಗ ಕಳುವಿನಿಂದ ಸಮಾಜಕ್ಕೆ ಬಂದು, ಇಲ್ಲಿನ ಅಧಿಕಾರಿಗಳ ಕಾಲಿಗೆ ಬಿದ್ದು, ತಾನು ಹಿಂದೆ ಮಾಡಿದ್ದು ತಪ್ಪಾಯ್ತೆಂದೂ, ತಿಳಿಯದೆ ಮಾಡಿದ್ದನ್ನು ಕ್ಷಮಿಸಬೇಕೆಂದೂ, ತನ್ನನ್ನು ಹೇಗಾದರೂ ಈ ಬಂಧನದಿಂದ ಪಾರುಮಾಡಿ ಮತ್ತೊಂದು ಲಗ್ನ ಮಾಡಿಕೊಡಬೇಕೆಂದೂ ಅಂಗಲಾಚಿದಳು. ಮುಂದೆ ಯೋಗಾಯೋಗವು ಕೂಡಿ ಬಂದು, ಒಬ್ಬ ಸಾಮಾನ್ಯ ಆಫೀಸಕ್ಲಾರ್ಕನೊಂದಿಗೆ ಪುನರ್ವಿವಾಹವಾಯ್ತು. ನಾಲ್ಕಾರು ವರ್ಷ ಸಂಸಾರವು ಜಗಳ, ತಂಟೆಯಲ್ಲೇ ನಡೆದಿತ್ತು. ಆದರೆ ಅದೂ ಸಹನವಾಗದೆ ದೈವವು ಪುನಃ ಅವಳ ಮರು ಮಾಂಗಲ್ಯವನ್ನು ಕೊಂಡೊಯ್ದಿತು. ಅವಳ ಆಯುಷ್ಯವು ಬಟಾ ಬಯಲಾಯ್ತು. ಆದರೆ ಈ ದುಃಖ ಮರೆಯಲು ಹಾಗೂ ಚಿಂತೆ ಮಾಡಲು ಇಷ್ಟರಲ್ಲೇ ಅವಳು ಒಂದು ಗಂಡು ಮಗುವಿನ ತಾಯಾಗಿದ್ದಳು. ಎಂತಹ ಆಟ ನೋಡು ! ಮನುಷ್ಯನು ತಾನೇನೋ ಸುಖವಾಗಿರುವೆನೆಂದೇ ನೆನೆಸುತ್ತಾನೆ. ಆದರೆ ಬೆನ್ನ ಹಿಂದೆ ಏನಿದೆ ಎಂಬದನ್ನು ನೋಡಲಾರ ಅಲ್ಲವೆ ? ಆ ಎಳೆಯಬಾಲಕನನ್ನು ಕಟ್ಟಿಕೊಂಡು ಅಲ್ಲಿ ಇಲ್ಲಿ ಕೆಲಸ ಮಾಡುತ್ತಾ ಹೊರಟಳು. ಎಲ್ಲೂ ಸರಿಯಾದ ನೆಲೆ ಸಿಗಲಿಲ್ಲ. ಮುಂದೆ ಏನೋ ವೇಳೆಯು ಕೂಡಿ ಬಂದು ಪುನಃ ನಮ್ಮ ಸಂಸ್ಥೆಗೇ ಬಂದಳು. ನೋಡಿದೆಯಾ ಆ ವಿಧಿಯಾಟ ! ಈ ಹೆಣ್ಣುಮಗಳು ತನ್ನ ನಡುವಯಸ್ಸಿನಲ್ಲಿ ಒಬ್ಬಂಟಿಗಳಾಗಿ ಒಂದು ಮಗುವನ್ನಿಟ್ಟುಕೊಂಡು ಎಲ್ಲಿರಬಲ್ಲಳು ? ಮಂದಿಯ ಮನೆಯಲ್ಲಾಗಲೀ, ಆಪ್ತೇಷ್ಟರ ಮನೆಯಲ್ಲೇ ಆಗಲಿ ಎಷ್ಟು ದಿನ ಇರಲು ಸಾಧ್ಯ ! ನೀನೇ ಹೇಳು. ನಮ್ಮಲ್ಲಿ ಬರುವ ಪ್ರತಿಯೊಂದು ವ್ಯಕ್ತಿಯ ಜೀವನವನ್ನು ನಿನಗೆ ಸಂಪೂರ್ಣ ತಿಳಿಸುತ್ತ ಹೋದರೆ ಒಂದು ದೊಡ್ಡ ಹೊತ್ತಿಗೆಯೇ ಆಗಬಹುದು. ಆದರೆ ಅಷ್ಟು ತಿಳಿಸಲು ನಾನು ಸಮರ್ಥಳಿಲ್ಲ. ಸ್ವಲ್ಪದರಲ್ಲೇ ಹೇಳಿ, ಸಾಧಾರಣ ಸಮಾಜದ ಆದರಲ್ಲೂ ಸ್ತ್ರೀ ಸಮಾಜದ ಬಗ್ಗೆ ನಿನಗೆ ಸ್ವಲ್ಪ ತಿಳುವಳಿಕೆ ಕೊಡಬೇಕೆಂಬುದಿಷ್ಟೇ ನನ್ನ ವಿಚಾರ. ಇನ್ನು ಮೂರನೆಯದಾಗಿ,

ಮೈಸೂರು ಸೀಮೆಯಲ್ಲಿಯ ಒಂದು ಸಣ್ಣ ಹಳ್ಳಿಯಲ್ಲಿಯ ಹೆಣ್ಣುಮಗಳೊಬ್ಬಳ ಚಿತ್ರ. ಅವಳು ತನ್ನ ಅಕ್ಕನ ಬಾಣಂತಿತನಕ್ಕಾಗಿ ಎಂದು ಅಕ್ಕನ ಮನೆಗೆ ಬಂದಿದ್ದಳು. ಅಕ್ಕನಿಗಿನ್ನೂ ಒಂದು ತಿಂಗಳಾಗಿತ್ತೇನೋ ಬಾಣಂತಿಯಾಗಿ, ಮನೆಯಲ್ಲೆಲ್ಲಾ ಇವಳದೇ ಓಡಾಟ. ಮನೆಯಲ್ಲಿ ಹಿರಿಯರಾರೂ ಇರದ್ದರಿಂದ ಭಾವನಿಗೂ ಇವಳೊಡನೆ ಮಾತುಕತೆಯಾಡುವ ಸಂದರ್ಭ ಹೆಚ್ಚು ಹೆಚ್ಚು ಬರಹತ್ತಿತು. ಹೀಗಾಗಿ ಅವರಿಬ್ಬರಲ್ಲಿ ಸಲಿಗೆ ಬೆಳೆದು, ಕುಮಾರಿಯಾದ ಇವಳು ಭಾವನ ಕಾಮುಕ ಕೃತಿಗೆ ಬಲಿಯಾದಳು. ಎರಡು ಮೂರು ತಿಂಗಳವರೆಗೂ ಅಕ್ಕನಿಗೆ ಇದರ ಸುಳಿವೇ ಆಗಲಿಲ್ಲ. ಆದರೆ ದೇಹ ಧರ್ಮವನ್ನೆಂತು ತಡೆಯಲು ಸಾಧ್ಯ ! ದಿನವಾದಂತೆ ಹುಡುಗಿಗೆ ಬಯಕೆಗಳು ಒಂದೊಂದೇ ಶುರುವಾಗಿ, ಊರಲ್ಲಿ ಬೊಬ್ಬಾಟವಾಗ ಹತ್ತಿತು. ಅಕ್ಕನು ಎಷ್ಟೇ ಪ್ರಯತ್ನಿಸಿದರೂ ಗರ್ಭವು ಹಾಳಾಗದೆ ಇವಳು ಒಂದು ಹೆಣ್ಣುಮಗುವಿನ ತಾಯಾದಳು. ಮಾಡುವದೇನು ? ಸ್ವತಃ ಅವರ ಜಾತಿಯೇ ಒಂದಾನೊಂದು ಕಾಲದಲ್ಲಿ ಕೆಟ್ಟು, ಬ್ರಾಹ್ಮಣ ವರ್ಗದಿಂದ ದೂರಿಡಲ್ಪಟ್ಟು ಮಾಲೆಯರೆಂದು ಹೆಸರಾಗಿದ್ದರೂ ಸಹ ಈಗ ಪುನಃ ಆ ಹುಡುಗಿಯನ್ನು ತಮ್ಮದೂ ಜಾತಿಯಿಂದ ದೂರವಿಟ್ಟರು. ಏನೇನೋ ಕಟುಬಂಧನಗಳನ್ನು ಹಾಕಿದರು. ಹುಡುಗಿಗೆ ಮನೆಯೆಂದರೆ ನರಕರೂಪವಾಯ್ತು. ದಿನವೂ ಕಣ್ಣೀರಿನಿಂದ ಕೈತೊಳೆಯುವಷ್ಟಾಯ್ತು. ಮಗುವಿಗೆ ೪–೫ ವರ್ಷಗಳಾಗುವವರೆಗೂ ಹೇಗೋ ಕಾಲ ತಳ್ಳಿದಳು. ಮೊದಮೊದಲು ಅಕ್ಕನು ದ್ವೇಷಿಸಿದರೂ ಸಹ ಭಾವನು ಸ್ವಲ್ಪ ಮಮತೆಯಿಂದ ನೋಡುತ್ತಿದ್ದ. ಆದರೆ ಮುಂದೆ ಭಾವನಿಗೂ ಡಂಭಾಚಾರದ ಮರ್ಯಾದೆಗೆ ಕುಂದು ಬರುವಂತಾಗಲು ಅವನೂ

ಇವಳೊಡನೆ ಮಾತುಕತೆಯಾಡುವದನ್ನು ಬಿಟ್ಟು ಬಿಟ್ಟನಷ್ಟೇ ಅಲ್ಲ, ಅವಳು ಮನೆಯಲ್ಲಿದ್ದರೆ ಸಹ ತನಗೆ ಅಪಮಾನವೆನ್ನುವಷ್ಟು ಮನಃಸ್ಥಿತಿಯಾಯ್ತು ಅವನದು. ಹುಡುಗಿಯಗೋಳನ್ನು ನೋಡಲಾರದೆ, ಅಕ್ಕಪಕ್ಕದವರು ಅವಳನ್ನು ನಮ್ಮಲ್ಲಿಗೆ ಕಳಿಸುವ ವ್ಯವಸ್ಥೆ ಮಾಡಿದರು. ಮುಂದೆ ಇವಳು ಮಗುವಿನೊಂದಿಗೆ ನಮ್ಮಲ್ಲಿಗೆ ಬಂದು ನಾಲ್ಕು ವರ್ಷ ಓದು ಬರಹ ಕಲಿತಳು. ತಾನೊಬ್ಬ ಒಳ್ಳೇ ಮನೆತನದವನೊಂದಿಗೆ ಮದುವೆಯಾಗಿ ನಾಲ್ಕು ಜನರಂತೆ ಸಂಸಾರ ಮಾಡಬೇಕೆಂಬ ಹಂಬಲವಿದ್ದುದರಿಂದ ಅವಳು ಲಗ್ನವಾಗುವದಾಗಿ ಹೇಳಿದಳು. ಮುಂದೆ ಒಂದು ಒಳ್ಳೇ ಮನೆತನದ ವರರೊಬ್ಬರು ಬಂದು ಇವಳನ್ನು ಲಗ್ನವಾಗಲು ಒಪ್ಪಿಗೆ ಇತ್ತಿದ್ದರಿಂದ ಲಗ್ನ ಮಾಡಿಕೊಡಲಾಯ್ತು. ಈಗ ಅವರ ಸಂಸಾರವು ಚನ್ನಾಗಿಸಾಗಿದೆ. ಈಗ ಹುಡುಗಿಯು ನಾಲ್ಕು ಮಕ್ಕಳ ತಾಯಾಗಿ ಸುಖದಿಂದಿದ್ದಾಳೆಂದು ಹೇಳಲು ಹೆಮ್ಮೆ ಎನಿಸುತ್ತದೆ.

ನೆಂ. ಕೊ.

---

##  ಯುಗಾದಿ 

ಹಳತುಗಳನು ಕುಣಿಗೆ ಮುಚ್ಚಿ
ಹೊಸತುಗಳನು ಹಣಿಗೆ ಹಚ್ಚಿ
ನವರಸಗಳನು ಬೆಣಿಗೆ ಚುಚ್ಚಿ
ಸೃಷ್ಟಿಗೆ ಸುಳಿಯಿತು ಯುಗದಯುಗಾದಿ ॥೧॥

‡ ‡ ‡ ‡

ಜೀವನದ ಸಾರವನು ನೀರಿನಂದದಿ ಕುಡಿದು
ಸಾವಿನಂಚಿನ ಸೀಮೆಯನು ಮೀರಿ ಜಡಿದು
ಬೇವು ಬೆಲ್ಲದಲಿ ಮೊದಲ್ಗೊಂಡು ಹಾರಿ ನಡೆದು
ಸೃಷ್ಟಿಗೆ ಸುಳಿಯಿತು ಯುಗಯುಗಾದಿ ॥೨॥

‡ ‡ ‡ ‡

ಯುಗಯುಗಗಳ ಬೇಗೆಯ ಬಳಸಿ
ಮಾಗಿಯ ಕಾಲದಿ ಜಗವನು ನಳನಳಿಸಿ
ಜಗಕೆಲ್ಲಕೆ ಹೊಸಕಾಂತಿ ತಳೆಸಿ
ಸೃಷ್ಟಿಗೆ ಸುಳಿಯಿತು ಯುಗದಯುಗಾದಿ ॥೩॥

‡ ‡ ‡ ‡

ಬಾಲರಿಗೆಲ್ಲ ಚೇತನ ತುಂಬಿ
ಇಳೆಯನ್ನೆಲ್ಲ ಹರುಷದಿ ನುಂಗಿ
ಶೀಲಸಂವರ್ಧನೆಗೆ ದಾರಿದೋರಿ, ಜಂಗಿ
ಸೃಷ್ಟಿಗೆ ಸುಳಿಯಿತು ಯುಗದಯುಗಾದಿ ॥೪॥

‡ ‡ ‡ ‡

—ಎಸ್. ಎಮ್. ಜಾಡರ ಮಾಢಳ್ಳಿ

---

# ಪುರುಷರ ದೃಷ್ಟಿಯಲ್ಲಿ ಇಂದಿನ ಮಹಿಳಾ ಸಮಾಜಗಳು.

ಲೇಖಕರು: ಎಸ್. ಜಿ. ಉಳಿಗೆರೆ.

ಒಂದು ರಾಷ್ಟ್ರದ ಉನ್ನತಿ ಆ ರಾಷ್ಟ್ರದ ಪುರುಷ ಹಾಗೂ ಮಹಿಳೆಯರನ್ನು ಅವಲಂಬಿಸಿಕೊಂಡಿದೆ. ಪುರುಷನಿಗೆ ಮಹಿಳೆ ಪೂರಕ, ಮಹಿಳೆಗೆ ಪುರುಷ ಪೂರಕ. ಹೀಗೆ ಪರಸ್ಪರ ಅವಲಂಬನೆಯು ಎರಡೂ ಸಮಾಜಗಳೂ ಸಮಾನವಾಗಿ ಮುಂದುವರಿದರೇನೇ ದೇಶದ ಉನ್ನತಿ. ಪುರುಷರಿಗೆಷ್ಟು ಸ್ವಾತಂತ್ರ್ಯ ಸ್ವಾಯತ್ತಗಳು ಇರುವಸೋ ಮಹಿಳೆಯರಿಗೂ ಅಷ್ಟೇ ಸ್ವಾತಂತ್ರ್ಯ, ಸ್ವಾಯತ್ತಾಧಿಕಾರ ಇರಬೇಕಾದ್ದು ಇಂದಿನ ಮುನ್ನಡೆಯ ಜಗತ್ತಿನಲ್ಲಿ ಅತಿ ಅವಶ್ಯ. ಒಂದು ಕಾಲದಲ್ಲಿ "ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಎಂದು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಂಡು ತೆರೆಯ ಮರೆಯಲ್ಲಿದ್ದ ಭಾರತೀಯ ಮಹಿಳೆಯರನ್ನು ಜಾಗ್ರತ ಪ್ರಪಂಚದ ಚಟುವಟಿಕೆಯಲ್ಲಿ ಭಾಗವಹಿಸುವಂತೆ ಮಾಡಿದ ಹೆಸರು ಪೂಜ್ಯ ಮಹಾತ್ಮಾ ಗಾಂಧಿಯವರಿಗೆ ಸಲ್ಲಬೇಕು. ಗಾಂಧಿಯವರು ತಮ್ಮ ಸ್ವಾತಂತ್ರ್ಯಹೋರಾಟ ಕಾಲದಲ್ಲಿ ಭಾರತೀಯ ಮಹಿಳೆಯರಿಗೆ ಕರೆ ಕೊಡುತ್ತಾ "ಭಾರತೀಯ ಮಹಿಳೆಯ ಕಾರ್ಯಕ್ಷೇತ್ರ ಕೇವಲ ಮನೆಯ ಹೊಸ್ತಿಲೊಳಗೇ ಮಾತ್ರವಲ್ಲ. ಅವರ ಸೇವೆ ಮನೆಮುಂದಿಗೇನೇ ಮಾತ್ರವಲ್ಲ. ಅವರು ಘನತೆ ಗೌರವವನ್ನು ಕಾಪಾಡಿಕೊಂಡು ರಾಷ್ಟ್ರಹಿತದ ಎಲ್ಲಾ ಕೆಲಸ ಕಾರ್ಯಗಳಲ್ಲಿಯೂ ಭಾಗವಹಿಸಬೇಕು. ಆದಕ್ಕಾಗಿ ಅವರು ಮನೆಬಿಟ್ಟು ಹೊರಗೆ ಬರಬೇಕು. ಅಂದಿನಿಂದಲೇ ನಮಗೆ ಸ್ವರಾಜ್ಯ ಸಿಕ್ಕ ನನ್ನ ಕನಸಿನ ಭಾರತ ರಾಮರಾಜ್ಯ ಮೂಡಿ ಬರಲು ಸಾಧ್ಯ" ಎಂದು ಹೇಳಿದ್ದರು. ಅವರ ಈ ಕರೆಗೆ ನಮ್ಮ ಮಹಿಳೆಯರು ಓಗುಟ್ಟು ಸ್ವಾತಂತ್ರ್ಯಹೋರಾಟದಲ್ಲಿ ಭಾಗವಹಿಸಿದ್ದಾರೆ. ತಮ್ಮಲ್ಲಿಯ ಶಿಸ್ತು, ಸಂಯಮ, ಸಂಘಟನೆ, ಶಕ್ತಿಸಾಮರ್ಥ್ಯಗಳನ್ನು ಜಗತ್ತಿನ ಮುಂದಿರಿಸಿದ್ದಾರೆ. ನಿಜವಾಗಿಯೂ ಸ್ವಾತಂತ್ರ್ಯಹೋರಾಟದಲ್ಲಿ ಮಹಿಳೆಯರ ಪಾತ್ರ ಶ್ಲಾಘನೀಯವಾದದ್ದು. ಯಾವುದೇ ಸುಶಿಕ್ಷಿತಾಭಿಮಾನಿ ರಾಷ್ಟ್ರನಿಷ್ಠ ಸೈನಿಕರೂ ಚಾಚೂ ತಪ್ಪದೆ ಭಾರತೀಯ ಮಹಿಳೆಯರಂತೆ ಶಿಸ್ತು, ಸಂಘಟನೆ, ಸಂಯಮದಿಂದ ನಡೆಯಲಾರೆಂದು ಸ್ವಾತಂತ್ರ್ಯಹೋರಾಟದ ಇತಿಹಾಸವನ್ನು ಓದುವುದರಿಂದ, ಹಿರಿಯರು ಹೇಳುವುದನ್ನೂ ಕೇಳುವದರಿಂದ ನಮಗೆ ತಿಳಿದುಬರುತ್ತದೆ.

ಅಂದು ಮಹಿಳೆಯರ ಸಾಮಾಜಿಕ ಚಟುವಟಿಕೆಯನ್ನು ಮೆಚ್ಚುತ್ತಿದ್ದ ಪುರುಷ ಸಮಾಜವಿಂದು, ಅದೇಕೋ ಮಹಿಳೆಯರ ಚಟುವಟಿಕೆಯನ್ನು ವಕ್ರದೃಷ್ಟಿಯಿಂದ ನೋಡುತ್ತಿದೆ. ಸ್ವತಂತ್ರ ಭಾರತ ಸಂವಿಧಾನದಲ್ಲಿ ಮಹಿಳೆಯರಿಗೆ ವಿಶೇಷ ಹಕ್ಕುಬಾಧ್ಯತೆಯನ್ನು ಒದಗಿಸಿಕೊಟ್ಟಿದ್ದಾರೆ. ಇಂದುಮಹಿಳೆಯರು ತಮ್ಮ ಮನಸ್ಸಿಗೆ ಬಂದಂತೆ ರಾಜಕೀಯ, ಸಾಮಾಜಿಕ, ವೈಜ್ಞಾನಿಕ, ಆರ್ಥಿಕ, ಶೈಕ್ಷಣಿಕ ಮುಂತಾದ ಕ್ಷೇತ್ರಗಳಲ್ಲಿ ತಮ್ಮ ಸೇವೆಯನ್ನು ಸಲ್ಲಿಸಲು ಅವಕಾಶವಿದೆ. ಈ ಬಗೆಯ ದೇಶದುನ್ನತಿಯ ಸೇವಾ ಕ್ಷೇತ್ರಗಳಲ್ಲಿ ಇಂದು ಮಹಿಳೆಯರು ಹೆಚ್ಚು ಹೆಚ್ಚಾಗಿ ದುಡಿಯುತ್ತಿದ್ದಾರೆ. ದುಡಿಯುವ ಹುಮ್ಮಸ್ಸನ್ನು ತೋರಿಸುತ್ತಿದ್ದಾರೆ. ದೇಶದ ತುಂಬೆಲ್ಲಾ ಮಹಿಳಾ ಕಾಲೇಜುಗಳು, ತಾಂತ್ರಿಕ ತರಬೇತಿ ಕೇಂದ್ರಗಳು, ಮಹಿಳಾ ಸಮಾಜಗಳು ತಲೆ ಎತ್ತಿಕೊಂಡಿವೆ. ಈ ಎಲ್ಲಾ ಸಂಘ ಸಂಸ್ಥೆಗಳನ್ನು ಅವರು ತಮ್ಮದೇ ಆದ ಒಂದು ರೀತಿಯಲ್ಲಿ ಚೆನ್ನಾಗಿ ನಡೆಸಿಕೊಂಡು ಹೋಗುತ್ತಿದ್ದಾರೆ. ಅವರಲ್ಲಿ ಜಾಗ್ರತ ಪ್ರಪಂಚಕ್ಕೆ ಹೊಂದಿಕೊಂಡು ಹೋಗುವ ಭಾವನೆಯು ಜಾಗ್ರತಿಯಾಗಿದೆ. ಅದಕ್ಕಾಗಿಯೋ ಏನೋ ಪುರುಷ ಸಮಾಜದಲ್ಲಿ ಒಂದು ಬಗೆಯ ಅಸಮಾಧಾನತೆ ತಲೆ ಎತ್ತಿಕೊಂಡಿದೆ. ಮಹಿಳೆಯರ ಎಲ್ಲಾ ಕೆಲಸ ಕಾರ್ಯಗಳನ್ನೂ ವಕ್ರದೃಷ್ಟಿಯಿಂದ ನೋಡುತ್ತಿದ್ದಾರೆ. ಇದು ನಿಜವಾಗಿಯೂ ರಾಷ್ಟ್ರದ ಹಿತದದೃಷ್ಟಿಯಿಂದ ಖಂಡಿತವಾಗಿಯೂ ಒಳ್ಳೆಯದಲ್ಲ. ಇದಕ್ಕೆ ನಮ್ಮ ಅನುಭವದ ಒಂದು ಉದಾಹರಣೆಯನ್ನು ವಾಚಕರ ಮುಂದಿಡುತ್ತೇನೆ.

ನನ್ನ ಊರಿನ ಸಮೀಪದ ತಾಳಗುಪ್ಪಾ ಹಾಗೂ ಕಲಗಾರು ಈ ಎರಡು ಊರುಗಳಲ್ಲಿ ಮಹಿಳಾ ಸಮಾಜಗಳಿವೆ. ಎರಡೂ ಊರಿನ ಸುಶಿಕ್ಷಿತ ಕೆಲವು ಅಕ್ಕಂದಿರು ಹಳ್ಳಿಯ ಎಲ್ಲಾ ಮಹಿಳೆಯರನ್ನೂ ಸೇರಿಸಿಕೊಂಡು ಮೊನ್ನೆ ಮೊನ್ನೆ ಮಹಿಳಾ ಸಮಾಜವನ್ನು ಸ್ಥಾಪಿಸಿಕೊಂಡಿದ್ದಾರೆ. ತಮ್ಮ

ತಮ್ಮಲ್ಲಿ ಸ್ವಲ್ಪ ಚಂದಾ ಹಾಕಿಕೊಂಡು, ಸರಕಾರದಿಂದ ಸಿಗುವ ಸಹಾಯವನ್ನು ಪಡೆದುಕೊಂಡು ಸಣ್ಣಪುಟ್ಟ ಕೆಲಸ ಕಾರ್ಯವನ್ನು ನಡೆಸಿಕೊಂಡು ಹೋಗುತ್ತಿವೆ. ನನ್ನ ದೃಷ್ಟಿಯಲ್ಲಿ ಆ ಸಮಾಜಗಳು ಚಿಕ್ಕವಾದರೂ ಚೊಕ್ಕವಾಗಿ ಸಮಾಜವನ್ನು ಮುನ್ನಡಿಸಿಕೊಂಡು ಹೋಗುತ್ತಿದ್ದಾರೆ. ಆದರೆ ಇಲ್ಲಿಯ ಬಹುಸಂಖ್ಯಾಕರ ದೃಷ್ಟಿಯಲ್ಲಿ ಆ ಸಮಾಜಗಳ ಸ್ಥಾಪನೆ, ಅವುಗಳ ಚಟುವಟಿಕೆ ಏನೊಂದೂ ಹಿಡಿಸಿಲ್ಲ. ನಾನು ಒಂದು ಕಾರ್ಯದ ಮನೆಗೆ ಹೋಗಿದ್ದೆ. ಅಲ್ಲಿ ಕೂಡಿದವರ ಮಾತಿನ ವಿಷಯವೆಂದರೆ ಈ ಮಹಿಳಾ ಸಮಾಜಗಳು. ಒಬ್ಬರಂತೂ "ಏನಯ್ಯಾ ಕಾಲ? ನಮ್ಮ ಮುಂದೆ ನಮ್ಮ ಹೆಂಡಿರು ತಮ್ಮ ಮಕ್ಕಳನ್ನು ನಮ್ಮ ಕೈಯಲ್ಲಿ ಕೊಟ್ಟು, ವಾಯಿಲ ಸೀರೆ ಉಟ್ಟು, ಚಪ್ಪಲಿಗಳನ್ನು ತುಳಿದು, ಚಷ್ಮ ಹಾಕಿಕೊಂಡು ಸಮಾಜದ ಮೀಟಿಂಗಿಗೆ ಹೋಗಹತ್ತಿದ್ದಾರೆ. ಏನು ಮೀಟಿಂಗ ಮಾಡುವರೋ ಏನೋ! ಜಾತಿ ಇಲ್ಲ. ಕುಲವಿಲ್ಲ. ಮಧ್ಯಾಹ್ನ ಮೂರು ಘಂಟೆಗೆ ಮನೆ ಬಿಟ್ಟರೆ ತಿರುಗಿ ಮನೆಗೆ ಬರುವುದು ರಾತ್ರಿ ಒಂಬತ್ತಾದರೂ ಆಗುವುದು. ಮಹಿಳೆಯರ ಇಂದಿನ ವ್ಯವಹಾರವೆಂದರೆ ಅವರು ಸ್ವಚ್ಛಂದವಾಗಿ ಇರುವುದು. ನಾವು ನಮ್ಮ ದಿನಗೆಲಸದಲ್ಲಿ ಒಳಗಿನ ಕೈಸುಟ್ಟುಕೊಳ್ಳುವ ಕೆಲಸದ ಅಭ್ಯಾಸ ಇಟ್ಟುಕೊಳ್ಳಬೇಕಾಗಿದೆ. ಆದಿಲ್ಲದಿದ್ದರೆ ಉಪವಾಸವಿರುವ ಪ್ರಸಂಗವೇ ಸರಿ" ಎಂದರು.

ಮತ್ತೊಬ್ಬರು:— "ಅಷ್ಟೇ ಅಲ್ಲ. ನಮ್ಮ ಹೆಂಡಿರು, ಪ್ರಾಯಕ್ಕೆ ಬಂದ ಹೆಣ್ಣುಮಕ್ಕಳು ನಮ್ಮೆದುರಿಗೇನೇ ಸಮಾಜಕ್ಕೆ ಬಂದ ಅಧಿಕಾರಿಗಳಿಗೆ ಮಾಲೆ ಹಾಕಿ, ಹಸ್ತಲಾಘವ ಕೊಟ್ಟು, ಎಲ್ಲರೆದುರಿಗೆ ಉದ್ದಕ್ಕೆ ಭಾಷಣ ಬಿಗಿಯುತ್ತಾರೆ. ನನಗಂತೂ ಇದಾವುದೂ ಹಿಡಿಸುವುದಿಲ್ಲ. ಮಹಿಳೆಯರು ಹೇಗಿರಬೇಕೋ ಹಾಗಿರಬೇಕು" ಎಂದರು ಹೀಗೆ ಕೂಡಿದವರೆಲ್ಲಾ ಒಂದೊಂದು ರೀತಿಯಲ್ಲಿ ಪ್ರತಿಕೂಲವಾದ ಅಭಿಪ್ರಾಯವನ್ನೇ ಸೂಚಿಸಿದರೇ ವಿನಾ ಅನುಕೂಲ ಅಭಿಪ್ರಾಯವಿದ್ದ ಒಬ್ಬ ಮಹನೀಯರೂ ನನಗೆ ಕಾಣಲಿಲ್ಲ! ಇಂತವರಿಂದಾಗಿಯೇ ಎಲ್ಲಾ ಸಮಾಜಗಳೂ ದುರ್ಬಲವಾಗಿರುವುದು. ತಾವೂ ಮಾಡದೆ, ಇತರರಿಗೂ ಮಾಡಗೊಡದ ''ಅಪ್ಪನಟ್ಟ ಆಲದ ಮರಕ್ಕೆ ಸುತ್ತು ಹಾಕು ಮಗನೇ" ಎನ್ನುವವರಿಗೆ ಏನನ್ನ ಬೇಕೋ ತಿಳಿಯದಾಗಿದೆ. ಸಾಮಾನ್ಯವಾಗಿ ನಾನು ತಿರುಗಿದ ಎಲ್ಲಾ ಕಡೆಗಳಲ್ಲಿಯೂ ಬಹು ಸಂಖ್ಯಾಕರು ಇದೇ ಅಭಿಪ್ರಾಯದವರಾಗಿದ್ದಾರೆ. ಎಲ್ಲರೂ ಮಹಿಳೆಯರ ಇಂದಿನ ಇರುವಿಕೆಯನ್ನು ಟೀಕಿಸುವವರೇ ವಿನಾ ಸುಧಾರಣೆಯ ಕ್ರಮವನ್ನು ಹೇಳುವವರೇ ಇಲ್ಲ. ಪ್ರಾಯಶಃ ಮಹಿಳೆಯ ಮುನ್ನಡೆ ತಮ್ಮ ಗೌರವ, ಘನತೆಗೆ ಕುಂದು ಎಂದು ತಿಳಿದಿರುವರೇನೋ?

ಕೇವಲ ಟೀಕಿಸುವುದರಿಂದ ಯಾವ ವ್ಯಕ್ತಿಯೂ, ಸಮಾಜದಲ್ಲಿ ಸುಧಾರಿಸುವುದಿಲ್ಲ. ಒಬ್ಬ ವ್ಯಕ್ತಿಯಲ್ಲಿಯ, ಒಂದು ಸಮಾಜದಲ್ಲಿಯ ಆದರ್ಶವನ್ನು ಎತ್ತಿ ಹಿಡಿದು, ಸುಧಾರಣೆಯ ಮಾರ್ಗ ತೋರಿ ಬಾಳುವ ತುಂಬ ಗುಣ ಪ್ರತಿಯೊಬ್ಬನಲ್ಲಿಯೂ ಇರಬೇಕು. ಆದಿಲ್ಲದೆ ಒಬ್ಬ ವ್ಯಕ್ತಿಯನ್ನೊ, ಒಂದು ಸಮಾಜವನ್ನೊ ಯಾವಾಗಲೂ ಎಲ್ಲಾ ಕಡೆಯಲ್ಲಿಯೂ ಟೀಕಿಸುವುದರಲ್ಲಿ, ಹೇಳಿಕೊಳ್ಳುವ ಯಾವ ಘನತೆಯೂ ಇಲ್ಲ. ಒಮ್ಮೊಮ್ಮೆ ತಪ್ಪಿ ನಡೆಯಲೂ ಬಹುದು. ತಪ್ಪಿದಾಗ ಅವರಿಗೆ ವಿಧಾಯಕವಾದ ಸಲಹೆ ಸೂಚನೆಗಳನ್ನಿತ್ತು ಮಾರ್ಗದರ್ಶನ ಮಾಡುವುದರಲ್ಲಿ ಘನತೆ ಇದೆ. ಗೌರವವಿದೆ. ಒಳ್ಳೆಯದನ್ನು ಅನುಕರಿಸುವ, ಸ್ವೀಕರಿಸುವ ಉದಾತ್ತಭಾವನೆ ಸಾಮಾನ್ಯ ಎಲ್ಲಾ ಮಹಿಳೆಯರಲ್ಲಿಯೂ ಇರುತ್ತದೆ. ಒಂದು ಚಕ್ಕಡಿಯ ಎರಡು ಚಕ್ರದಂತಿರುವ ಮಹಿಳೆಯರು ಮತ್ತು ಪುರುಷರು ಬದಲಾದ ಪರಿಸ್ಥಿತಿಗೆ ಹೊಂದಿಕೊಂಡು ಹೋಗುವುದು ತುಂಬಾ ಅನಿವಾರ್ಯ. ಯಾವ ಚಕ್ರ ಸ್ವಲ್ಪವಾದರೂ ಕೆಟ್ಟರೆ ಚಕ್ಕಡಿ ಹೇಗೆ ನಡೆಯಲಾರದೋ ಹಾಗೆ ಮಹಿಳೆಯರಾಗಲೀ ಪುರುಷರಾಗಲೀ ಹಿಂದುಳಿದುಕೊಂಡರೆ ರಾಷ್ಟ್ರದ ಏಳಿಗೆ ಕನ್ನಡಿಯೊಳಗಿನ ಗಂಟೇಯಾದೀತು. ಇದೇ ಒಂದು ಮಾತನ್ನು ಭಾರತ ಕಣ್ಮಣಿ ಸ್ವಾಮಿ ವಿವೇಕಾಂದರ ಮಾತಿನಲ್ಲಿ ಹೇಳುವದಾದರೆ, "ಒಂದು ಪಕ್ಷಿ ಒಂದೇ ರಕ್ಕೆಯಿಂದ ಹೇಗೆ ಹಾರಲಾರದೋ ಹಾಗೆ ರಾಷ್ಟ್ರದೇಳಿಗೆಯ ಜವಾಬ್ದಾರಿಯನ್ನು ಹೊರಬಲ್ಲ ಮಹಿಳೆಯರ ಇಂದಿನ ಪರಿಸ್ಥಿತಿ ಸುಧಾರಿಸಕೊಡದೆ, ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಳ್ಳಲು ಅವಕಾಶ ಕಲ್ಪಿಸಿಕೊಡದಿದ್ದರೆ ಯಾವುದೇ ರಾಷ್ಟ್ರದ ಕಲ್ಯಾಣವೂ ಸಾಧ್ಯವಿಲ್ಲ" ಅಂತೆ ಮಹಿಳೆಯರಾಗಲೀ ಪುರುಷರಾಗಲೀ ಇಂದು ತಮ ತಮಗೆ ಸಿಕ್ಕ ನಾಗರಿಕ ಹಕ್ಕುಬಾಧ್ಯತೆಗಳನ್ನು ಉದಾತ್ತ ರೀತಿಯಿಂದ ಉಪಯೋಗಿಸಿಕೊಂಡು ರಾಷ್ಟ್ರದೇಳಿಗೆಯ ದಾರಿಯಲ್ಲಿ ನಡೆಯುವುದರಿಂದ, ಗಾಂಧೀಜಿಯವರು ಅಂದು ಕಾಣುತ್ತಿದ್ದ ರಾಮರಾಜ್ಯದ ಕನಸನ್ನು ನೆನಸು ಮಾಡಿ ಅವರಾತ್ಮ ತಣಿಸಬಹುದು.

———

॥ಶ್ರೀ ರಾಮ ಸಮರ್ಥ॥

# ಪುಣ್ಯ-ಪುರುಷರಾದ ವೇದಾಂತ ದೇಶಿಕರ ನೆನಹು.

ಬರೆದವರು : ಡಾ. ಆರ್. ಕೆ. ಹಾನಗಲ್ಲ ಕಮಲಾಪೂರ, ಧಾರವಾಡ

ಭಾರತದ ವೇದಧರ್ಮವನ್ನು ಜೀರ್ಣೋದ್ಧಾರಗೊಳಿಸಿದ ಮಹದ್ವ್ಯಕ್ತಿಗಳಲ್ಲಿ ಇವರೊಬ್ಬರು. ವಿಜಯನಗರದ ಸಿಂಹಾಸನ ಸ್ಥಾಪನಾಚಾರ್ಯರಾದ ಶ್ರೀ. ವಿದ್ಯಾರಣ್ಯರ ಸಮಕಾಲೀನರೂ ಸನ್ಮಿತ್ರರೂ, ಸಹಪಾಠಿಗಳೂ ಆಗಿದ್ದರೆಂದು ಐತಿಹಾಸಿಕ ಪ್ರಮಾಣಗಳಿಂದ ಹೇಳಲು ಬರುವಂತಿದೆ. ವಿಶಿಷ್ಟಾದ್ವೈತದ ಮತಸ್ಥಾಪಕರಾದ ಶ್ರೀ ರಾಮಾನುಜಾಚಾರ್ಯರು ತಮ್ಮ ಸಿದ್ಧಾಂತ ಪ್ರಚಾರಕ್ಕಾಗಿ "ಸಿಂಹಾಸನಾಧಿಪತಿ"ಗಳೆಂದು ಬಿರುದನ್ನು ಕೊಟ್ಟು ೭೪ ಜನ ಶಿಷ್ಯರನ್ನು ನೇಮಿಸಿದ್ದರು. ಆ ಶಿಷ್ಯರಲ್ಲಿ ಉಭಯ ಸಿಂಹಾಸನಾಧಿಪತಿಗಳೆಂದು ಹೆಚ್ಚಿನ ಹೆಚ್ಚಳವನ್ನು ಪಡೆದ ವಂಶದಲ್ಲಿ ಇವರು ಶಾಲಿವಾಹನ ಶಕೆ ೧೧೯೧ (ಕ್ರಿ. ಶ. ೧೨೬೮) ರಲ್ಲಿ ಜನ್ಮ ತಾಳಿದರು. ಕಂಚಿಯ ತೂಪ್ಪಿಲ್ ಅಗ್ರಹಾರವೇ ಜನ್ಮಸ್ಥಳ. ಸತ್ಪುರುಷರೆಂದು ಪ್ರಖ್ಯಾತರಾದ ಸೋಮಯಾಜಿ ಅನಂತ ಸೂರಿಗಳೂ, ತೋತಾರಂಬಾ ಎಂಬ ಅವರ ಧರ್ಮಪತ್ನಿಯೂ ವೇದಾಂದ ದೇಶಿಕರಿಗೆ ಜನ್ಮಕೊಟ್ಟ ತಂದೆ ತಾಯಿಗಳು.

ಈ ದಂಪತಿಗಳಿಗೆ ಬಹುಕಾಲ ಮಕ್ಕಳಾಗಲಿಲ್ಲ. ಆಗ ಅವರು ಸಂತಾನಾರ್ಥವಾಗಿ ತಿರುಪತಿಗೆ ಆಗಮಿಸಿ, ವೆಂಕಟಪತಿಯ ಸೇವೆಯಲ್ಲಿ ಕೆಲವು ದಿವಸ ಇರುತ್ತಿರಲು, ಒಂದು ದಿನ ಶ್ರೀ ವೆಂಕಟೇಶನೆ ಬಂದು, ಒಂದು ಗಂಟೆಯನ್ನು ದಯಪಾಲಿಸಿ ಅದನ್ನು ನುಂಗಿಸಿ "ಜಗದ್ವಿಖ್ಯಾತನಾದ ಪುತ್ರನನ್ನು ನೀನು ಪಡೆಯುವೆ" ಎಂದು ಆಶೀರ್ವದಿಸಿದಂತೆ ತೋತಾರಂಬೆಯವರಿಗೆ ನಿಶಾಂತಯಾಮದಲ್ಲಿ ದೃಷ್ಟಾಂತವಾಯಿತಂತೆ. ಆ ದಿವಸದಿಂದ ದೇವರ ಹತ್ತಿರಿದ್ದ ಗಂಟೆಯೇ ಮಾಯವಾಗಿ ಇಂದಿಗೂ ಗಂಟೆಯಿಲ್ಲದೆ ಪೂಜೆಯು ನಡೆಯುತ್ತದೆ. ಅದೇ ಗರ್ಭವು ಸಿಜವಾಗಿ ವೇದಾಂತ ದೇಶಿಕರು ಜನಿಸಿದರು. ಈ ಕಾರಣದಿಂದ ಇವರಿಗೆ ವಿಷ್ಣುವಿನ ಘಂಟಾವತಾರವೆಂದು ಭಾವಿಕರು ನಂಬುತ್ತಾರೆ.

ತಿರುಪತಿ ವೆಂಕಟೇಶನ ಘಂಟಾ ಪ್ರಸಾದದಿಂದ ಹುಟ್ಟಿದ ಈ ಶಿಶುವಿಗೆ ಅನಂತ ಸೂರಿಗಳು ವೆಂಕಟನಾಥ ನೆಂದೇ ನಾಮಕರಣ ಮಾಡಿದರು. ಐದುವರುಷ ದೊಳಗೇ ಅಕ್ಷರಾಭ್ಯಾಸವಾಗಿ ವಿದ್ಯೆಯು ಪ್ರಾರಂಭವಾಯಿತು. ಸೋದರ ಮಾವಂದಿರಾದ ಆತ್ರೇಯ ರಾಮಾನುಜಾಚಾರ್ಯರೆ ಇವರ ವಿದ್ಯಾಗುರುಗಳಾದರು. ಏಕಪಾಠಿಗಳಾದ ಇವರ ಬುದ್ಧಿಮತ್ತೆಯು ಗುರುಗಳನ್ನೂ ನೆರೆಹೊರೆಯ ಪಂಡಿತರನ್ನೂ ಬೆರಗುಗೊಳಿಸಿತು. ಒಂದು ದಿನ ಪ್ರಖ್ಯಾತ ವಿದ್ವಾಂಸರಾದ ನಡಾದೂರು ವರದಾಚಾರ್ಯರ ಪಾಠ ಪ್ರವಚನವನ್ನು ಕೇಳುವದಕ್ಕಾಗಿ ಆತ್ರೇಯರು ವೆಂಕಟನಾಥನೊಡನೆ ಅವರಲ್ಲಿಗೆ ಆಗಮಿಸಿದರು. ವರದಾಚಾರ್ಯರೂ ಅವರ ಶಿಷ್ಯರೂ ಇವರನ್ನು ಸನ್ಮಾನಿಸುವುದರಲ್ಲಿಯೂ, ಸಂಗಡ ಇದ್ದ ವೆಂಕಟನಾಥನ ತೇಜ ಗಾಂಭಿರ್ಯಗಳನ್ನು ನೋಡುದರಲ್ಲಿಯೂ ಮುಗ್ಧರಾಗಿ ಚರ್ಚೆನಡೆದ ವಿಷಯದ ಕೊಯನ್ನೇ ಮರೆತು, ಎಲ್ಲಿಗೆ ಬಂದಿತ್ತೆಂದು ತಮ್ಮ ತಮ್ಮೊಳಗೆ ವಾದಹಾಕಹತ್ತಿದರು ಆಗ ಆತ್ರೇಯ ರೊಡದೆ ಬಂದಿದ್ದ ೭-೮ ವರುಷದ ಈ ದೇಶಿಕರೇ (ವೆಂಕಟನಾಥರೆ) ಚರ್ಚೆ ನಡೆದ ವಿಷಯದ ಕೊನೆಯನ್ನು ಸುಸಂಬದ್ಧವಾಗಿ ಸೂಚಿಸಲು ಎಲ್ಲರೂ ಬಾಲಕನ ಸ್ಮರಣ ಶಕ್ತಿಗೂ, ಬುದ್ಧಿಮತ್ತೆಗೂ ಬಟ್ಟು ಕಚ್ಚಿದರು. ಆಗ ವರದಾಚಾರ್ಯರು ಅತ್ಯಾನಂದದಿಂದ—

"ಪ್ರತಿಷ್ಠಾಪಿತ ವೇದಾಂತಃ ಪ್ರತಿಕ್ಷಿಪ್ತ ಬಹಿರ್ಮತಃ
ಭೂಯಾಸ್ತ್ರೈವಿದ್ಯ ಮಾನ್ಯಸ್ತ್ವಂ ಭೂರಿಕಲ್ಯಾಣಭಾಜನಂ॥"

"ವೇದಾಂತ ಮತವನ್ನು ಸ್ಥಿರಗೊಳಿಸಿ ಅದಕ್ಕೆ ವಿರುದ್ಧವಾದ ಮತಗಳನ್ನು ಖಂಡಿಸಿ, ಪಂಡಿತರ ಸನ್ಮಾನಕ್ಕೆ ಪಾತ್ರನಾಗಿ, ವಿಪುಲ ಮಂಗಲವನ್ನು ನೀನು ಅನುಭವಿಸು" ಎಂದು ಆಶೀರ್ವಾದ ರೂಪದಿಂದ ಇವರ ಭವಿಷ್ಯವನ್ನೆ ಪ್ರಸ್ಥಾಪಿಸಿದ ಉಲ್ಲೇಖವಿದೆ.

ವಯೋವೃದ್ಧರಾದ ವರದಾಚಾರ್ಯರು, ಈ ಬಾಲಕನ ವಿದ್ಯಾಭ್ಯಾಸವು ಮುಗಿಯುವವರೆಗೆ ತಾವು ಇರಲಾರೆವೆಂದು ವಿದ್ಯಾಭ್ಯಾಸದ ಎಲ್ಲ ಹೊಣೆಯನ್ನೂ ಸೋದರ ಮಾವಂದಿರಾದ ಆತ್ರೇಯರಿಗೇ ಒಪ್ಪಿಸಿದರು. ಅದರಂತೆ ಆತ್ರೇಯರ ಶಿಷ್ಯತ

ದಲ್ಲಿಯೇ ದೇಶಿಕರು ಅಭ್ಯಸಿಸಿ, ವೇದ, ವೇದಾಂತ ತರ್ಕ ವ್ಯಾಕರಣ ಮೀಮಾಂಸ, ಇತಿಹಾಸ, ಪುರಾಣ, ಆಗಮ ಸಾಂಖ್ಯ ಯೋಗ ಇತ್ಯಾದಿಗಳನ್ನು ಮುಗಿಸಿದರು. ಆಗ ಇವರ ವಯಸ್ಸು ೨೦ ವರುಷ ಮಾತ್ರ. ವಿದ್ಯಾಭ್ಯಾಸವು ಪರಿಪೂರ್ಣ ವಾದ ನಂತರ ಸೋದರ ಮಾವಂದಿರೇ ಇವರ ವಿವಾಹವನ್ನು ಮಾಡಿದರು. ಇವರ ಧರ್ಮಪತ್ನಿಯ ಹೆಸರು ತಿರುಮಂಗೈ ಎಂದು. ಚಿಕ್ಕಂದಿನಿಂದಆತ್ರೇಯರ ಆಶ್ರಯದಲ್ಲಿಯೂ ಶಿಷ್ಯತ್ವ ದಲ್ಲಿಯೂ ಇದ್ದುದರಿಂದಲೂ ವಿವಾಹವನ್ನಾದರೂ ಆತ್ರೇಯರೆ ಮಾಡಿದ್ದರಿಂದಲೂ, ದೇಶಿಕರೆಂದು ಇವರು ಪ್ರಸಿದ್ಧರಾದ್ದ ರಿಂದಲೂ, ಚಿಕ್ಕ ವಯಸ್ಸಿನಲ್ಲಿಯೇ ಇವರಿಗೆ ತಂದೆ ತಾಯಿಗಳ ವಿಯೋಗವಾಗಿತ್ತೆಂದು ಊಹಿಸಬಹುದಾಗಿದೆ. ವಿವಾಹದ ನಂತರ ಅಲ್ಪಾವಧಿಯಲ್ಲಿಯೇ ಆತ್ರೇಯರೂ ಪರಂಧಾಮವನ್ನೈದಿದರು.

ಮುಂದೆ ವೆಂಕಟನಾಥರು ಸತಿಸಮೇತರಾಗಿ ತೀರ್ಥ ಯಾತ್ರೆಗೆ ಹೊರಟು ಕಡಲೂರಿಗೆ ಸಮೀಪದಲ್ಲಿದ್ದ ತಿರು- ಮಹೀಂದ್ರ ಪುರಕ್ಕೆ ಬಂದು ಕೆಲಕಾಲ ಅಲ್ಲಿಯೇ ವಾಸವಾಗಿದ್ದರು. ಪ್ರತಿನಿತ್ಯ ಅಲ್ಲಿಯೂ ಶಿಷ್ಯರಿಗೆ ವಿಶಿಷ್ಟಾದ್ವೈತದ ಸಿದ್ಧಾಂತವನ್ನೂ ಇತರ ಶಾಸ್ತ್ರೀಯ ತತ್ವಗಳನ್ನೂ ಬೋಧಿಸುತ್ತ ಹಯಗ್ರೀವಸ್ತೋತ್ರ, ದೇವನಾಯಿಕ ಪಂಚಾಸತ್, ಗೋಪಾಲವಿಂಶತಿ, ರಘುವೀರ ಗದ್ಯ, ಎಂಬ ಗ್ರಂಥಗಳನ್ನು ರಚಿಸಿದರು. ಅದೇ ಊರಲ್ಲಿಯೇ ಇವರಿಗೆ ಗರುಡ ಹಾಗೂ ಹಯಗ್ರೀವ ದೇವರ ದರ್ಶನವಾಯಿತೆಂದು ಪ್ರತೀತಿ ಇದೆ. ಅಚ್ಯುತ ಶತಕ ಎಂಬ ಪ್ರಾಕೃತ ಸ್ತೋತ್ರವನ್ನೂ ಪರಮತ ಭಂಗವೆಂಬ ತಮಿಳು ಗ್ರಂಥವನ್ನೂ ಅಲ್ಲಿಯೇ ರಚಿಸಿರುವರಾಗಿ ತಿಳಿಯುತ್ತದೆ.

ಅನಂತರ ಕಂಚಿಗೂ ಕೆಲಕಾಲದ ಮೇಲೆ ತಿರುಪತಿಗೂ ಬಂದು. ವಾಸಮಾಡಿ, ಅಲ್ಲಿಯೇ ದಯಾಶತಕವೆಂಬ ಶ್ರೀನಿ- ವಾಸನ ದಯಾಪರ ಸ್ತೋತ್ರ ಗ್ರಂಥವನ್ನು ರಚಿಸಿದರು. ಈ ಗ್ರಂಥವು ಭಕ್ತಿರಸ ಪೂರಿತವೂ ಭಾವಗರ್ಭಿತವೂ ಗಂಭೀರವೂ ಆಗಿದ್ದು ಒಳ್ಳೇ ಪ್ರಖ್ಯಾತಿಯನ್ನು ಪಡೆದಿದೆ. ಆ ಮೇಲೆ ತಿರುಪತಿಯಿಂದ ಹೊರಟು ಕ್ರಮೇಣ ತುಂಗಭದ್ರೆಯ ತೀರವನ್ನು ಸೇರಿ, ಸಂಚರಿಸುತ್ತ ಪ್ರಖ್ಯಾತ ತಪೋನಿಧಿಗಳಾದ ಶ್ರೀ ವಿದ್ಯಾರಣ್ಯರನ್ನು ಕಂಡರು.

ದೇಶಿಕರೂ ವಿದ್ಯಾರಣ್ಯರೂ ಬಾಲ್ಯ ಸ್ನೇಹಿತರೆಂದೂ ಕಂಚಿಯಲ್ಲಿ ಸಹಪಾಠಿಗಳಾಗಿದ್ದರೆಂದೂ ಆಖ್ಯಾಯಿಕೆಯಿದೆ. ಇದಕ್ಕೆ ಆಧಾರಗಳು ದೊರೆಯದಿದ್ದರೂ ಈರ್ವರೂ ಪರಮ ಮಿತ್ರರಿದ್ದು ಒಬ್ಬರನೊಬ್ಬರು ಗೌರವಿಸುತ್ತಿದ್ದರೆಂಬುದಕ್ಕೆ ಏನೂ ಸಂದೇಹವಿಲ್ಲ. ಈ ಉಭಯ ವಿದ್ವಾಂಸರ ಸಂಗಮವು ಕಂಚಿಯಲ್ಲಿ ಬಹುಕಾಲ ಉಳಿಯಲಿಲ್ಲ. ಇದಕ್ಕೆ ಕಾರಣ ವೆಂದರೆ ಓರ್ವ ರಾಜನ ಮಗಳು ಗೃಹಪೀಡಿತಳಾಗಲು ಆ ಪೀಡೆಯನ್ನು ನಿವಾರಿಸಲು ಯಾರೂ ಸಮರ್ಥರಾಗಲಿಲ್ಲ. ಆಗ ಆ ರಾಜನು ಇವರಿದ್ದೆಡೆಗೆ ಬಂದು ಬಿನ್ನವಿಸಲು ವಿದ್ಯಾರಣ್ಯರು ಸಮ್ಮತಿಸಿ ಅಲ್ಲಿಗೆ ಬಂದರು. ದೇಶಿಕರು ನಿರ್ಧರಿಸಿದಂತೆ ತೀರ್ಥ ಯಾತ್ರೆಗೆ ಹೊರಟರು. ಈ ರಾಜನು ವಿಜಯನಗರದ ಬುಕ್ಕ ರಾಯನೆಂದು ದೇಶಿಕರು ತಮ್ಮ “ವೈಭವ ಪ್ರಕಾಶಿಕಾ” ಎಂಬ ಗ್ರಂಥದಲ್ಲಿ ಉಲ್ಲೇಖಿಸಿರುವರು. ಕೆಲವಿದ್ವಾಂಸರು ಬುಕ್ಕರಾಯನಲ್ಲವೆಂದೂ ತರ್ಕಿಸುತ್ತಾರೆ. ಆದರೆ ಪ್ರತ್ಯಕ್ಷ ದೇಸಿಕರೇ ತಮ್ಮ ಕೃತಿಯಲ್ಲಿ ಉಲ್ಲೇಖಿಸಿರಲು ತರ್ಕವನ್ನು ಅವಲಂಬಿಸುವದು ಸಯುಕ್ತಿಕವಾಗಿ ತೋರುವದಿಲ್ಲ.

ದೇಶಿಕರು ತೀರ್ಥಯಾತ್ರೆಗೆಂದು ಸಂಚರಿಸುತ್ತ ಮಥುರೆ, ವೃಂದಾವನ, ಕಾಶಿ ಯಾತ್ರೆಗಳನ್ನು ಮುಗಿಸಿಕೊಂಡು, ಪುರಿ ಮದ್ರಾಸ ಶ್ರೀ ಪರಂಬುದೂರುಗಳ ಮಾರ್ಗವಾಗಿ ಪುನಃಕಂಚಿಗೆ ದಯಮಾಡಿಸಿದರು.

ನಿರ್ಲೋಭಿಗಳೂ ಸ್ವಾವಲಂಬನ ಪ್ರಿಯರೂ ಆದ ಇವರು ಧನಾರ್ಜನೆಗೆ ಮಹತ್ವವನ್ನು ಕೊಡದೆ, ಪವಿತ್ರ ವಾದ ಉಂಛ ವೃತ್ತಿ (ಭಿಕ್ಷಾವೃತ್ತಿ) ಯಿಂದಲೇ ಕಂಚಿಯಲ್ಲಿ ಉದರ ನಿರ್ವಾಹವನ್ನು ಸಾಗಿಸುತ್ತಿದ್ದರು. ಯಾರಿಂದಲೂ ಹಿಡಿಯಲ್ಲದೆ ಪಡಿ ಅಕ್ಕಿಯನ್ನು ಇವರು ಸ್ವೀಕರಿಸುತ್ತಿದ್ದಿಲ್ಲ. ಇದರಂತೆ ಹಲವು ವರ್ಷಗಳು ಗತಿಸಿ ಹೋದವು. ಆ ಅವಧಿ ಯಲ್ಲಿ ಶ್ರೀ ವಿದ್ಯಾರಣ್ಯರು ವಿಜಯನಗರದಲ್ಲಿ ಸಿಂಹಾಸನ ಸ್ಥಾಪನಾಚಾರ್ಯರೆಂದು ಪ್ರಸಿದ್ಧಿಯನ್ನು ಪಡೆದು ರಾಜ್ಯದ ಪ್ರಧಾನ ಮಂತ್ರಿ ಪದವನ್ನೇ ಸ್ವೀಕರಿಸಿದ್ದರು. ಅವರಿಗೆ ತಮ್ಮ ಪರಮ ಮಿತ್ರರೂ ಘನ ಪಂಡಿತರೂ ಆದ ದೇಸಿಕರು ಉಂಛ ವೃತ್ತಿಯಿಂದ ಉಪಜೀಸುವದು ತಿಳಿಯಿತು. ಆಗ ವಿದ್ಯಾರಣ್ಯರು “ತಾವು ವಿಜಯನಗರಕ್ಕೆ ದಯಮಾಡಿಸಬೇಕು. ಇಲ್ಲಿ ಸಕಲ ವೈಭವದಿಂದಲೂ ಮರ್ಯಾದೆಯಿಂದಲೂ ಇರುವ ವ್ಯವಸ್ಥೆಯನ್ನು ನಾನು ಮಾಡುತ್ತೇನೆ” ಎಂದು ಸಂದೇಶವನ್ನು ಕಳುಹಿಸಿದರು. ಅದಕ್ಕೆ ದೇಶಿಕರು “ಕ್ಷುದ್ರ ರಾಜರ ಸೇವೆಯು ನನಗೆ ಇಷ್ಟವಿಲ್ಲ. ಪರಮಾತ್ಮನ ಸೇವೆಗೂ ಭಾಷಾ ಸೇವೆಗೂ ನನ್ನ ಶರೀರವನ್ನು ಧಾರೆ ಎರೆದಿರುವೆನು.” ಎಂದು ಉತ್ತರ ವನ್ನು ಕಳುಹಿಸಿದರಂತೆ. ವಿಶಾಲ ಹೃದಯದ ವಿದ್ಯಾರಣ್ಯರು ಈ ಉತ್ತರಕ್ಕೆ ಸಮಾಧಾನ ಪಡದೆ “ನೀವು ವಿಜಯನಗರಕ್ಕೆ ರಾಜರಿದ್ದೆಡೆಗೆ ಬರಬೇಕಾಗಿಲ್ಲ. ಅವರಿಗೆ ಯಾವ ಬಗೆ ಯಿಂದಲೂ ಕೇಳಬೇಕಾಗಿಲ್ಲ. ವಿಜಯನಗರದ ಸಮೀಪದಲ್ಲಿ

ಬಂದು ಇದ್ದರೆ ಸಾಕು. ರಾಜರೇ ತಮ್ಮಲ್ಲಿಗೆ ಬಂದು, ತಮ್ಮ ಪಾಂಡಿತ್ಯಕ್ಕೆ ಸರಿಯಾದ ಮನ್ನಣೆಯನ್ನು ಮಾಡುವರು ಎಂಬ ಸಂದೇಶವನ್ನು ಪುನಃ ಕಳುಹಿಸಿದರು. ದೇಶಿಕರು ಅದನ್ನೂ ನಿರಾಕರಿಸಿ

ಭೂಮೀಶ್ವರರ ಬಾಗಿಲು ಕಾಯುವ ಕಾಯಕವನ್ನು ನಾನು ಸರ್ವಥಾ ಮಾಡಲಾರೆ. ನನ್ನ ಬದ್ಧಾಂಜಲಿಯು ಭಗವಂತನಲ್ಲಿ ಮಾತ್ರ ನನ್ನ ಉಂಛವೃತ್ತಿಯಿಂದ ನಾನು ನಿರ್ಧನಿಕನೆಂದು ನೀವು ಭಾವಿಸ ಕೂಡದು.

ನಾಸ್ತಿ ಪಿತ್ರಾರ್ಜಿತಂ ಕಿಂಚಿತ್ । ನಮಯಾಕಿಂಚಿದಾರ್ಜಿತಂ॥
ಅಸ್ತಿಮೇ ಹಸ್ತಿಶೈಲಾಗ್ರೇ । ವಸ್ತುಪೈತಾಮಹಂ ಧನಂ ॥

ನಮ್ಮ ಅಪ್ಪನು ಸಂಪಾದಿಸಿದ ಆಸ್ತಿ ಏನೂ ಇಲ್ಲ. ನಾನೂ ಏನನ್ನೂ ಸಂಪಾದಿಸಿಲ್ಲ. ಆದರೆ ನಮ್ಮ ಅಜ್ಜನು (ಪಿತಾಮಹನು) ಸಂಪಾದಿಸಿದ ಮಹದ್ಧನವು ಕಂಚಿಯಲ್ಲಿದೆ.

ಎಂಬ ಶ್ಲೇಷಾರ್ಥದ ಶ್ಲೋಕವನ್ನು ಬರೆದು ಕಳುಹಿಸಿದರು. ಇದರಲ್ಲಿ ಪೈತಾಮಹಂ ಎಂಬಪದದಲ್ಲಿ ವಿಶೇಷವಾದ ಶ್ಲೇಷಾರ್ಥವಿದೆ ಅಜ್ಜನೆಂಬುವ ಅರ್ಥವಂತೂಸರಿ. ಪಿತಾಮಹನೆಂದರೆ ಬ್ರಹ್ಮನು ನನಗಾಗಿ ಕಂಚಿಯಲ್ಲಿ ಕಾಮಿತ ಫಲವನ್ನು ಕೊಡುವ ವರದರಾಜನನ್ನೇ ಸ್ಥಾಪಿಸಿಟ್ಟಿರಲು ಅನ್ಯರ ಆಸೆ ಏಕೆ? ಎಂದು ಶ್ಲೇಷಾರ್ಥ. ಕಂಚಿಯ ವರದರಾಜನನ್ನು ಬ್ರಹ್ಮದೇವನೇ ಸ್ಥಾಪಿಸಿದನೆಂದು ಪೌರಾಣಿಕ ಆಧಾರವಿದೆ. ಈ ಉತ್ತರವನ್ನು ನೋಡಿ ವಿದ್ಯಾರಣ್ಯರು ನಿರುಪಾಯರಾದರು.

ಮುಂದೆ ಕೆಲದಿನಗಳಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತಿಗಳ ಕೇಂದ್ರ ಸ್ಥಾನವಾದ ಶ್ರೀರಂಗದಲ್ಲಿ ವಿದ್ವಾಂಸರು ಕಡಿಮೆಯಾಗಲು ರಂಗನಾಥ ದೇವಾಲಯದ ಅರ್ಚಕರು ದೇಶಿಕರಿಗೆ "ತಾವು ಇಲ್ಲಿಗೆ ಬಂದು ಪರಮತಗಳ ಬಾಧೆಯನ್ನು ತಪ್ಪಿಸಿ ರಾಮಾನುಜಾಚಾರ್ಯರ ಪೀಠವನ್ನು ಪರಿಪಾಲಿಸಬೇಕು." ಎಂದು ವಿಜ್ಞಾಪಿಸಿಕೊಂಡರು. ಆದಕ್ಕಾಗಿ ದೇಶಿಕರು ಶ್ರೀರಂಗಕ್ಕೆ ಬಂದು ಪರಮತದ ವಿದ್ವಾಂಸರನ್ನು ವಾದದಲ್ಲಿ ಸೋಲಿಸಿ ಪೀಠದ ಮರ್ಯಾದೆಯನ್ನು ಉಳಿಸಿದರು. ಈ ವಾದದ ಸಾರವನ್ನು ಇವರ "ಶತ ದೂಷಣೀ" ಎಂಬ ಗ್ರಂಥದಲ್ಲಿ ಕಾಣಬಹುದು. ಇದಕ್ಕೆ ಅಪ್ಪಯ್ಯ ದೀಕ್ಷಿತರ ಸಮಕಾಲೀನರಾದ ದೊಡ್ಡಯ್ಯಾಚಾರ್ಯರು "ಚಂಡಮಾರುತ" ಎಂಬ [illegible] ವ್ಯಾಖ್ಯಾನವನ್ನು ಬರೆದಿದ್ದಾರೆ. ದೇಶಿಕರು ಶ್ರೀರಂಗದಲ್ಲಿದ್ದಾಗಲೇ ಶ್ರೀಭಾಷ್ಯದ ತತ್ವ ಟೀಕೆಯನ್ನೂ, [illegible] ಗೀತಾ ಭಾಷ್ಯಕ್ಕೆ "ತಾತ್ಪರ್ಯ ಚಂದ್ರಿಕೆ" ಎಂಬ ವ್ಯಾಖ್ಯಾನವನ್ನೂ ಬರೆದರು. ಇವಲ್ಲದೆ "ಅಧಿಕರಣ ಸಾರಾವಳಿ" ತತ್ವ ಮುಕ್ತಾ ಕಲಾಪ "ಪಂಚರಾತ್ರ ರಕ್ಷಾ" "ಗೀತಾರ್ಥ ಸಂಗ್ರಹ ರಕ್ಷಾ" ಮುಂತಾದ ಉದ್ಗ್ರಂಥಗಳನ್ನು ರಚಿಸಿದರು. ಇವರ ಅದ್ವಿತೀಯ ವೇದಾಂತ ಪಾಂಡಿತ್ಯಕ್ಕೆ ಮೆಚ್ಚಿ ಶ್ರೀರಂಗನಾಥನೇ ವೇದಾಂತಾಚಾರ್ಯರೆಂಬ ಬಿರುದನ್ನು ದಯಪಾಲಿಸಿದಂತೆ, ಸಂಕಲ್ಪ ಸೂರ್ಯೋದಯದಲ್ಲಿ ಇವರೇ ಉಲ್ಲೇಖಿಸಿದ್ದಾರೆ. ಕವಿತಾ ತಾರ್ಕಿಕ ಸಿಂಹರೆಂದೂ ಇವರಿಗೆ ಬಿರುದುಂಟು.

ದೇಶಿಕರು ಶ್ರೀರಂಗದಲ್ಲಿದ್ದಾಗ ಶ್ರೀಮಧ್ವಾಚಾರ್ಯರ ದ್ವೈತ ಪೀಠದ ನಾಲ್ಕನೇ ಗುರುಗಳಾದ ಅಕ್ಷ್ಯೋಭ್ಯತೀರ್ಥರು, ಶ್ರೀ. ವಿದ್ಯಾರಣ್ಯರೊಡನೆ ವಾದವನ್ನು ಪ್ರಾರಂಭಿಸಿದರು. ಇದರ ನಿರ್ಣಯಕ್ಕೆ ಈ ದೇಶಿಕರನ್ನು ಆಹ್ವಾನಿಸಲು ಅವರು ಅಲ್ಲಿಗೆ ಬರಲು ಒಪ್ಪದೆ "ಈರ್ವರ ವಾದವನ್ನೂ ಬರೆದು ಕಳಿಸಿದಲ್ಲಿ ನಿರ್ಣಯವನ್ನು ಕೊಡಬಹುದು" ಎಂದು ತಮ್ಮ ಸಂದೇಶವನ್ನು ಕಳಿಸಿದರು. ಆದರಂತೆ ಈರ್ವರ ವಾದವೂ ಬರೆದು ಬರಲು "ಅಕ್ಷ್ಯೋಭ್ಯಂ ಕ್ಷೋಭಯಾ ಮಾಸ । ವಿದ್ಯಾರಣ್ಯೋ ಮಹಾಮುನಿಃ" ಎಂದರೆ ವಿದ್ಯಾರಣ್ಯರು ಅಕ್ಷೋಭ್ಯರನ್ನು ಕ್ಷೋಭಿಸಿದರು. (ಸೋಲಿಸಿದರು) ಎಂದು ನಿರ್ಣಯವಿತ್ತಿರುವರಾಗಿ ಅದ್ವೈತರೂ, "ಅಸಿನಾ ತತ್ವ ಮಸಿನಾ ಪರಜೀವ ಪ್ರಭೇದಿನಾ । ವಿದ್ಯಾರಣ್ಯ ಮಹಾರಣ್ಯ ಮಕ್ಷೋಭ್ಯ ಮುನಿರಚ್ಛಿನತ್ ॥" ಎಂದರೆ ತತ್ವಮಸಿ ಎಂಬ ಉಪನಿಷದ್ವಾಕ್ಯ ಖಡ್ಗದಿಂದ ವಿದ್ಯಾರಣ್ಯವೆಂಬ ಮಹದಾರಣ್ಯವನ್ನು ಅಕ್ಷ್ಯೋಭ್ಯರು ಕತ್ತರಿಸಿದರೆಂಬುದು ದೇಶಿಕರ ನಿರ್ಣಯವಾಗಿದ್ದಿತೆಂದು ದ್ವೈತರೂ ಪ್ರತಿಪಾದಿಸುತ್ತಾರೆ. ಯಾವದು ಸತ್ಯವೆಂದು ಹೇಳಲು ಬರದಂತಿದ್ದರೂ ಉಭಯ ಪೀಠದ ವಿದ್ವಾಂಸರಿಗೆ ನಿರ್ಣಯವನ್ನು ಕೊಡುವ ಅಧಿಕಾರಕ್ಕೂ ಪೂಜ್ಯತೆಗೂ ದೇಶಿಕರು ಪಾತ್ರರಿದ್ದರೆಂದು ಹೇಳಲು ಏನೂ ಅಡ್ಡಿಯಿಲ್ಲ. ಇವರ ಈ ಹೆಚ್ಚಳವು ಸಹನವಾಗದಿದ್ದ ಕೆಲವು ಅರೆ ಪಂಡಿತರು, ಇವರ ಮತದಲ್ಲಿಯೇ ಗೂಢವಾಗಿದ್ದ ಪಕ್ಷಪಂಗಡಗಳನ್ನು ಬೆಳೆಸಿ ದ್ವೇಷಿಸ ತೊಡಗಿದರು. ಒಂದು ದಿನ ಕೆಲವು ಕ್ಷುದ್ರರು ಪಾದರಕ್ಷೆಯ ತೋರಣವನ್ನು ಇವರಿಲ್ಲದಾಗ್ಗೆ ಮನೆಯ ಬಾಗಿಲುಗೆ ಕಟ್ಟಿದ್ದರಂತೆ. ದೇಶಿಕರು ಬಂದು ನೋಡಿ,

"ಕರ್ಮಾವಲಂಬಿಕಃ ಕೇಚಿತ್ । ಕೇಚಿತ್ ಜ್ಞಾನಾವಲಂಬಿಕಾಃ ।
ವಯಂತು ಹರಿದಾಸಾನಾಂ । ಪಾದರಕ್ಷಾವಲಂಬಿನಃ॥"

ಕೆಲವರು ಮೋಕ್ಷಕ್ಕೆ ಕರ್ಮಮಾರ್ಗವನ್ನೂ, ಕೆಲವರು ಜ್ಞಾನಮಾರ್ಗವನ್ನೂ ಅವಲಂಬಿಸಿದರೆ, ನಾವು ಹರಿದಾಸರ ಪಾದ

ರಕ್ಷಾ ಮಾರ್ಗವನ್ನು ಅವಲಂಬಿಸುತ್ತೇವೆ.” ಎಂಬ ತಾತ್ಪರ್ಯದ ಶ್ಲೋಕವನ್ನು ನುಡಿದು ತಲೆಬಗ್ಗಿಸಿ ಗ್ರಹವನ್ನು ಪ್ರವೆಸಿಸಿದ ರಂತೆ. ಇದರಿಂದ ಮಹದ್ವ್ಯಕ್ತಿಗಳಾಗಲು ಬೇಕಾಗುವ ಅಗಮ್ಯ ಸಹನ ಶೀಲತೆಯು ವ್ಯಕ್ತವಾಗುವದು.

ಇದರಂತೆ ದೇಶಿಕರಲ್ಲಿ ಕಾರ್ಯ ಕುಶಲತೆಯೂ, ಧೈರ್ಯ ಸಾಹಗಳೂ ಇದ್ದವೆಂಬುದು ಕೆಳಗಿನ ಸಂದರ್ಭದಿಂದ ತಿಳಿದು ಬರುವದು. ೧೩೨೭ ನೇ ಇಸ್ವಿಯಲ್ಲಿ ಮಹಮ್ಮದೀಯರ ಸೈನ್ಯವು ಶ್ರೀರಂಗ ಮೇಲೆ ದಾಳಿ ಮಾಡಿತು. ಆಗ್ಗೆ ಆ ಸೈನ್ಯವು ಕೊಂಡ ಮಂಡಲದ ಹತ್ತಿರಕ್ಕೆ ಬರುವ ಮುಂಚಿತವೇ ದೇಶಿಕರಿಗೆ ಸುದ್ದಿ ತಿಳಿಯಲು ೧೨೦೦೦ ಜನ ಬ್ರಾಹ್ಮಣರನ್ನೂ ಇತರ ರನ್ನೂ ಕೂಸಿ ಅವರನ್ನು ಆದಷ್ಟು ಅಡ್ಡಗಟ್ಟಲು ಹೇಳಿದರು. ಶ್ರೀರಂಗನಾಥನ ಹಾಗೂ ಶ್ರೀದೇವಿಯ ಉತ್ಸವ ವಿಗ್ರಹಗಳನ್ನು ಬೇರೆಕಡೆಗೆ ಕಳಿಸಿ, ಮೂಲವಿಗ್ರಹದ ಸುತ್ತಲೂ ಗೋಡೆ ಹಾಕಿ ಕೃತ್ರಿಮ ವಿಗ್ರಹವನ್ನೊಂದು ಹೊರಗಿರಿಸಿದರು. ಆಗ ಅಲ್ಲಿದ್ದ ಘನವಿದ್ವಾಂಸರಾದ ಸುದರ್ಶನಾಚಾರ್ಯರು ತಮ್ಮ ಅಮೂಲ್ಯವಾದ “ ಶ್ರುತಿ ಪ್ರಕಾಶಿಕಾ ” ಭಾಷ್ಯವನ್ನೂ ಇಬ್ಬರು ಮಕ್ಕಳನ್ನೂ ಜೋಪಾನ ಮಾಡಲು ಇವರಿಗೆ ವಿಜ್ಞಾಪಿಸಿದರು ಅದಕ್ಕೆ ದೇಶಿಕರು ಒಪ್ಪಿ, ತಮ್ಮ ಹಾಗೂ ಅವರ ಗ್ರಂಥಗಳನ್ನೂ ಚಿಕ್ಕಮಕ್ಕಳನ್ನೂ ಕರೆದು ಕೊಂಡು ಕಾವೇರಿಯ ಮಳಲಲ್ಲಿ ಗ್ರಂಥಗಳನ್ನು ಮುಚ್ಚಿಟ್ಟು ಮಕ್ಕಳೊಡನೆತಾವೂ ಮರೆಗೆಅವಿತು ಕೊಂಡರು. ಸೈನ್ಯವು ಮರೆಯಾದ ಮೇಲೆ, ಸತ್ಯಮಂಗಲದ ಕಡೆಗೆ ಹೋಗಿ ಗ್ರಂಥದೊಡನೆ ಪಾರಾದರು. ಸುದರ್ಶನಾಚಾರ್ಯರೂ, ಅಲಘಿಯಮನವಾಳರೂ ಮಹಮ್ಮದೀಯರಿಂದ ಹತರಾದರು. ರಂಗನಾಥನ ವಿಗ್ರಹವನ್ನು ರಕ್ಷಣಾರ್ಥವಾಗಿವೈಯ್ದ ಪಿಳ್ಳೆ ಲೋಕಾಚಾರ್ಯರು ಅಹೋರಾತ್ರಿ ಪರಿಶ್ರಮದಿಂದ ಜ್ಯೋತಿಷ್ಕುಡಿ ಗ್ರಾಮಕ್ಕೆ ತಲುಪಿ ಅತುಲ ಆಯಾಸದಿಂದ ಜ್ವರಬಂದು ಪರಂಧಾಮವನ್ನೈದಿದರು. ಇಂತಹ ಮಹಾತ್ಮರ ಆತ್ಮಾರ್ಪಣೆಯಿಂದ ಮತವೂ ಆರಾಧ್ಯದೇವ ಮೂರ್ತಿಗಳೂ ಉಳಿದವು. ಇದೆಲ್ಲ ದೆವಬ್ರಾಹ್ಮಣರ ಅಸಹನೀಯವಾದ ಹಿಂಸೆಯು ವಿದ್ಯಾರಣ್ಯರಿಗೆ ತಿಳಿದು ಬುಕ್ಕರಾಯನ ಸಹಾಯದಿಂದ ಮಹಮ್ಮದೀಯರ ಹಾವಳಿಯನ್ನು ಪೂರ್ಣ ನಿಲ್ಲಿಸಿದರು. ಸುಮಾರು ೧೩೬೫ ರಲ್ಲಿ ಶ್ರೀರಂಗನಾಥನ ವಿಗ್ರಹವನ್ನು ಪುನಃ ಶ್ರೀರಂಗದಲ್ಲಿ ಸ್ಥಾಪಿಸಿ ಮೊದಲಿನಂತೆ ಎಲ್ಲ ಪೂಜಾ ವೈಭವವನ್ನೂ ಏರ್ಪಡಿಸಿದರು. ಈ ಆನಂದದ ಸುದ್ದಿಯು ದೇಶಿಕರಿಗೆ ತಿಳಿದಾಗ ಅವರಿಗಾದ ಸಂತೋಷವು ವರ್ಣಿಸಲು ಅಸಾಧ್ಯವಾಗಿದೆ. ಇಂತಹ ಆಪತ್ತನ್ನು ಪರಿಹರಿಸಿದ ವಿದ್ಯಾರಣ್ಯರನ್ನು ಅವರು ಎಷ್ಟು ಬಗೆಯಿಂದ ವರ್ಣಿಸಿರಬಹುದೆಂಬುದು ಊಹಿಸಲು ಅಗಮ್ಯವಾಗಿದೆ.

ಕೂಡಲೇ ದೇಶಿಕರು ಶ್ರೀರಂಗಕ್ಕೆ ದಯಮಾಡಿಸಿದರು. ಆಗ ಇವರ ವಯಸ್ಸು ಸುಮಾರು ೯೫ ವರುಷ ಆದರೂ ದೇಹ ದಾರ್ಢ್ಯವೂ ಇಂದ್ರಿಯಗಳ ಕಾರ್ಯ ದಕ್ಷತೆಯೂ ಕುಂಠಿತವಾಗಿದ್ದಿಲ್ಲ. “ ರಹಸ್ಯ ತ್ರಯಸಾರ ” ಎಂಬ ಮಣಿಪ್ರವಾಳ ತಮಿಳು ಗ್ರಂಥವನ್ನು ಇದೇ ವಯಸ್ಸಿನಲ್ಲಿ ಬರೆದರಾಗಿ ತಿಳಿದು ಬರುತ್ತದೆ. ಇದೇ ಸಮಯಕ್ಕೆ ಇವರ ಸರ್ವತಂತ್ರ ಸ್ವತಂತ್ರರೆಂಬ ಬಿರುದನ್ನು ಪರೀಕ್ಷಿಸುವುದಕ್ಕಾಗಿ ಓರ್ವ ಶಿಲ್ಪವಿದ್ಯಾ ಪ್ರವೀಣನು ಬಂದು, ಈ ಬಿರುದನ್ನು ನೀವು ಧರಿಸಬೇಕಾದರೆ ಶಿಲ್ಪ ವಿದ್ಯೆಯಲ್ಲಿ ನಿಮ್ಮ ಪ್ರಾವೀಣ್ಯತೆಯನ್ನು ತೋರಿಸಬೇಕೆಂದು ಕೇಳಲು, ತಮ್ಮ ವಿಗ್ರಹವನ್ನೇ ಕಲ್ಲಿನಲ್ಲಿ ಕೆತ್ತಿ ತೋರಿಸಿದರಂತೆ. ಇದಲ್ಲದೆ “ ಶಿಲ್ಪಾರ್ಥಸಾರ ” ವೆಂಬಗ್ರಂಥವನ್ನು ರಚಿಸಿದ ಉಲ್ಲೇಖವೂ ಇದೆ. ಈ ಮೇರೆಗೆ ಇವರು ತಮ್ಮ ಜೀವಿತದ ೧೦೦ ವರುಷಗಳಲ್ಲಿ ೧೨೦ ಉದ್ಗ್ರಂಥಗಳನ್ನು ರಚಿಸಿ ಶ್ರೀರಂಗದಲ್ಲಿಯೇ ತಮ್ಮ ಆಶ್ರಮದಲ್ಲಿ ಕುಮಾರರಾದ ನಯನಾಚಾರ್ಯರ ತೊಡಿಯ ಮೇಲೆ ತಲೆಯಿಟ್ಟು ಶ್ರೀರಂಗನಾಥನನ್ನು ಭಜಿಸುತ್ತ ಸೌಮ್ಯ ಸಂವತ್ಸರದ ಕಾರ್ತಿಕ ಪೌರ್ಣಿಮೆಯ ದಿನ ಅಂದರೆ ದಿನಾಂಕ ೧೪ ನೇ ನವ್ಹಂಬರ ೧೩೬೯ ನೇ ದಿವಸ ಪರಂಧಾಮವನ್ನೈದಿದರು. ಇಂಥ ಪುಣ್ಯಾತ್ಮರನ್ನು ಪಡೆದ ತಂದೆ ತಾಯಿಗಳೂ ಭಾರತ ಮಾತೆಯೂ ದಿಗಂತ ಕೀರ್ತಿ ಶಾಲಿಗಳಾಗಿರುವದರಲ್ಲಿ ಆಶ್ಚರ್ಯವೇನು.

ಜೈ-ಹಿಂದ

---

ಶ್ರೀರಾಮ ವಿಠ್ಠಲ ವಿರಚಿತ

## ಚಾರಿತ್ರ್ಯಾತ್ಮಕ ಶ್ರೀರಾಮ ಭಜನೆ

ರಘುಪತಿ ರಾಘವ ರಾಜಾರಾಮ । ಪತಿತ ಪಾವನ ಸೀತಾರಾಮ ॥ ಪ ॥

ಕಾವ್ಯಾ ಧ್ವರಫಲ ರೂಪಕ ರಾಮ। ರಮ್ಯರಘುಕುಲೋದ್ಧಾರಕ ರಾಮ ॥ ೧ ॥

ದಶರಥ ಕೌಶಲ್ಯಾತ್ಮಜ ರಾಮ । ಋಷಿ ಕೌಶಿಕ ಮುಖ ರಕ್ಷಕ ರಾಮ ॥ ೨ ॥

ಲಕ್ಷ್ಮಣ ಭರತಾಗ್ರಜ ರಘುರಾಮ । ಸುಕ್ಷೇಮಪ್ರದ ರಘುಪತಿ ರಾಮ ॥ ೩ ॥

ಅಹಲ್ಯೋದ್ಧಾರಕ ರಾಜಾ ರಾಮ । ಸಹಜಾನಂದ ಮನೋಹರ ರಾಮ ॥ ೪ ॥

ಹರಧನುಭಂಗ ಮಹಾಬಲರಾಮ । ಧರಣಿಜೆ ಸೀತಾವಲ್ಲಭ ರಾಮ ॥ ೫ ॥

ಜನಕಸಾಜ್ಞೆ ಪರಿಪಾಲಕ ರಾಮ । ವನವಾಸಸ್ಥಿತ ಸುವ್ರತ ರಾಮ ॥ ೬ ॥

ಮಾಯಾಮೃಗ ಸಂಹಾರಕ ರಾಮ । ಜಾಯಾದುಃಖ ವಿದಾರಿತ ರಾಮ ॥ ೭ ॥

ವಾಲೀಮರ್ದನ ಜೈ ಜೈ ರಾಮ । ಲೀಲಾ ನಾಟಕ ರೂಪಕ ರಾಮ ॥ ೮ ॥

ಅಂಗದ ಸುಗ್ರೀವಾರ್ಚಿತ ರಾಮ । ಮಂಗಲಮಯ ಮಾರುತಿಪತಿ ರಾಮ ॥ ೯ ॥

ಭಾವಿಕ ಭಕ್ತ ವಿಭೀಷಣ ರಾಮ । ರಾವಣ ಹರಣಾಂತಕ ರಘುರಾಮ ॥ ೧೦ ॥

ಸೀತಾದುಃಖವಿಮೋಚಕ ರಾಮ । ಸೇತೂ ಬಂಧನ ಸೀತಾರಾಮ ॥ ೧೧ ॥

ಶ್ರೀರಾಮ ಜೈ ರಾಮ ಜೈಜೈರಾಮ । ತಾರಕ ಭಕ್ತೋದ್ಧಾರಕ ರಾಮ ॥ ೧೨ ॥

ಕಾಮಿತ ಫಲದಾಯಕ ಜಯರಾಮ । ರಾಮವಿಠಲ ಭಯ ಭಂಜನ ರಾಮ ॥ ೧೩ ॥

## ವೃಂದಾವನ ಸಂದರ್ಶನ

( ಮೈಸೂರು )

ಈ ಮೋಹಕ ಆಕರ್ಷಕ
ಸುಮ ಸುಂದರ ಸುಖ ಮಂದಿರ
ವೃಂದಾವನವ ।
ಸಂದರ್ಶಿಸಲಾನಂದಿಸ
ದಿದು ಯಾವನ ವನವ?
ಶ್ಯಾಮೌಘದ ಸಸ್ಯಾಳಿಯು
ತಂಗಾಳಿಯು ಭೃಂಗಾಳಿಯು
ನವನೂತನವ!
ಕಂಡಾನಂಸದಿದಂತಹ
ನರನಾವಾತನವ ?
ಸೀಮಾ ವಿರಹಿತ ಶೋಭಾ
ಸಂಸ್ಥಾನದ ವಿಸ್ತಾರದ
ಭೂಮಾನುಭವ !
ಬೇರೆಲ್ಲಿಯು ಇದು ದೊರೆವುದೆ
ಇಂತಹ ಸಿರಿವಿಭವ ?
ವ್ಯೋಮಾಂತರ ಸಂವ್ಯಾಪಿತ
ವಿದ್ಯುಚ್ಛವಿ ಸೌಷವ್ಯುವ
ಮರೆವುದೆ ವಹವ್ವಾ ?
ಕಾರಂಜಿಗೆ ಅಪರಂಜಿಯು
ಬೆಲೆಕಟ್ಟೆದ ನಾವ ?
ಇದ ನೋಡಿದ ಸುಸಹೃದಯನ
ಹೃದಯಕೆ ಪಿಂತಿರುಗಲು ದಯ
ವಪ್ಪುದು ನಿಜವೆ ?
ಈ ಸೌಂದರ್ಯದ ಶರಧಿಯ
ವರ್ಣಿಸಲಿಕ್ಕಳವೆ !
ಇದೆ ಭೂಮಿಯ ನವನಾಕವು
ಕನ್ನಡಿಗರ ಶುಭಲೋಕವು
ಎನಿಸಿರುವುದಿದೆ
ಇದ ಬೇರೊಂದಕೆ ಹೋಲಿಸ
ಬಹುದೆ ? ಸರಿಯಹುದೆ ?

ವೆಂಕಟರಾವ ಪುಣಿಂಚಿತ್ತಾಯ

## ಮುಳ್ಳು ಗುಲಾಬಿ

ದೇಹವೆಲ್ಲ ಮುಳ್ಳಾಗಿ ।
ತುದಿಯಲ್ಲಿ ಮೃದುವಾಗಿ ।
ಬಿಟ್ಟೆಸೀ ಹೂವನ್ನು ।
ಮುಟ್ಟಲು ಚುಚ್ಚುವಿ ।
ನೀಕೈಯ್ಯನ್ನು ।
ನಟ್ಟಮನ ಬಿಡದು
ನಿನ್ನನ್ನು ।

‡ ‡ ‡ ‡

ಮೃದುದಳ ತಾಳಿ
ಪರಿಮಳ ಬೀರುವ
ಮಧುರ ದೇಹದ
ಮುಳ್ಳು ಗುಲಾಬಿಯೇ ॥

‡ ‡ ‡ ‡

ಮನ ಮಂದಿರ
ಮನಗಳಲಿ ತುಂಬಿ
ಬಯಲು ಬಾಳಿಗೆ
ಸೋಭೆಯ ನೀಡಿ
ನಿಲ್ಲುವಾ ನೀರೆ ನೀನು

‡ ‡ ‡ ‡

ಅಚ್ಚು ಸೀರೆಯು ನುಟ್ಟು
ಸುತ್ತು ಕಂದಿಯು ಕಟ್ಟು
ತುದಿಯಲ್ಲಿಪುಷ್ಪ
ಎಲರಿಗೆ ಗಂಧಕೊಟ್ಟು
ದೈವಕ್ಕೆ ಮುಡಿಯಿಟ್ಟು
ನಿಂತಿರುವೆ ನೀನಿಂದು

‡ ‡ ‡ ‡

ಮೈಯ್ಯಲ್ಲ ಮುಳ್ಳಾಗಿ
ತುದಿಯಲ್ಲಿ ಮೃದುವಾಗಿ
ದೇವರಿಗೆ ದಾರ್ಯಾಗಿ
ನಿಂತಿರುವಿಯಲ್ಲವೇ ನೀನು ॥

—ಆರ್. ಸಿ. ಪಾಟೀಲ, ಅಸಿ.ಂಡಿ

# ಸದ್ಗುರು ಶ್ರೀಮಾತೆ ರಮಾದೇವಿಯವರು

ಲೇಖಕ : ಎನ್. ಎಸ್. ಕಾರಂತ, ಧಾರವಾಡ

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ನಗರದಲ್ಲಿ ಶ್ರೀ ಕುಡ್ಪಿ ಗೋಪಾಲಕೃಷ್ಣ ಶೆಣೈ ಮತ್ತು ಶ್ರೀ ಶ್ರೀದೇವಿ ಎಂಬ ಆದರ್ಶ ದಂಪತಿಗಳಿದ್ದರು. ಇಬ್ಬರೂ ತುಂಬಾ ಧಾರ್ಮಿಕರು, ಶೀಲವಂತರು, ಸತ್ವಗುಣಸಂಪನ್ನರು, ದೇವಿ ಉಪಾಸಕರು. ಶ್ರೀ ಶೆಣೈಯವರು ಧ್ಯಾನ, ಪೂಜನದಲ್ಲಿಯೆ ಬಹಳ ವೇಳೆಗಳೆಯುತ್ತಿದ್ದರು. ಅವರ ಪತ್ನಿ ಕುಲದೇವತೆಯಾದ ಜಗದಂಬೆಯ ನಿಸ್ಸೀಮ ಭಕ್ತೆ; ವ್ರತ ನಿಯಮಗಳಿಂದ, ಪ್ರಾರ್ಥನೆ-ಉಪಾಸನೆ ಪರಿಶುದ್ಧಳಾದ ಸಾಧ್ವೀಮಣಿ. ಒಮ್ಮೆ ಶ್ರೀ ಶೆಣೈಯವರು ಧ್ಯಾನ ಮಗ್ನರಾಗಿರುವಾಗ ಒಂದು ಪ್ರಕಾಶಸ್ತಂಭ ಅವರ ದೇಹದಲ್ಲಿ ಪ್ರವೇಶಿಸಿತು—ಶ್ರೀ ಕೃಷ್ಣ ಜನ್ಮದ ಮುಂಚೆ ವಸುದೇವನ ದೇಹದಲ್ಲಿ ಪ್ರವೇಶಿಸಿದಂತೆ. ಈ ಅನುಭವವು ದಂಪತಿಗಳೀರ್ವರನ್ನೂ ಅಪಾರಆನಂದದಲ್ಲಿ ತೇಲಾಡುವಂತೆಮಾಡಿತು. ಅಲ್ಲಿಂದ ಕೆಲವು ಸಮಯದ ಮೇಲೆ ಈ ಧರ್ಮನಿಷ್ಠ ಪತಿಪತ್ನಿಯರಿಗೆ ಹುಟ್ಟಿದ ಶಿಶುವೇ ಶ್ರೀ ರಮಾದೇವಿ. ಅವರು ಜನಿಸಿದುದು ೧೯೧೧ ಮಾರ್ಚ ೪ ರಂದು.

ಚಿಕ್ಕಂದಿನಿಂದಲೂ ಶ್ರೀ ರಮಾದೇವಿಗೆ ರಾಮನಾಮದಲ್ಲಿ ತುಂಬಾ ಆಸಕ್ತಿ. ತಂದೆಯಿಂದ ಬಂದ ಬಳುವಳಿಯದು. ಐದನೆಯ ವರ್ಷದ ಬಾಲವಯಸ್ಸಿನಲ್ಲಿ ಧ್ಯಾನದಲ್ಲಿ ತಲ್ಲೀನಳಾಗಿದ್ದುದು ಕಂಡುಬರುತ್ತಿತ್ತು. ದಿನಗಳೆದಂತೆ ನಡೆನುಡಿಗಳಲ್ಲಿ ದೈವೀ ಸಂಪತ್ತು ಹೊರಸೂಸತೊಡಗಿತು. ಮನಮೋಹಕ ಗಾಂಭೀರ್ಯ ಮತ್ತು ಪಕ್ವವಾದ ತಿಳುವಳಿಕೆಯಿಂದೊಡಗೂಡಿದ ಆ ಬಾಲಿಕೆಯ ನಡೆನುಡಿಗಳು ನೋಡುವವರನ್ನು ಬೆರಗುಗೊಳಿಸುತ್ತಿತ್ತು; ಲೋಹ ಚುಂಬಕದಂತೆ ಆಕರ್ಷಿಸುತ್ತಿತ್ತು. ಹದಿನಾಲ್ಕನೆಯ ವಯಸ್ಸಿನಲ್ಲಿ ಶ್ರೀ ಕೃಷ್ಣ ಭಗತ ಎಂಬ ತೆಲ್ಲಿಚೇರಿಯ ಧನಿಕ ಜಮೀನದಾರರೊಂದಿಗೆ ಶ್ರೀ ರಮಾದೇವಿಯವರ ವಿವಾಹವಾಯಿತು. ಇಳಿ ವಯಸ್ಸಿನ ವರ, ಅದೂ ತೃತೀಯ ಸಂಬಂಧ; ಆದರೂ ಎಳೆ ವಯಸ್ಸಿನ ಶ್ರೀ ರಮಾದೇವಿಯವರು ಸಂತೋಷದಿಂದ ವರನನ್ನು ಒಪ್ಪಿಕೊಂಡರು. ಅಷ್ಟೇ ಅಲ್ಲ, ತಮಗೆ ಅವರೇ ಯೋಗ್ಯ ವರ ಎಂದು ಆಗ್ರಹತೊಟ್ಟರು. ಶ್ರೀ ರಾಮಕೃಷ್ಣ ಪರಮಹಂಸರ ಜೀವನದಲ್ಲಿನ ತತ್ಸಮ ಘಟನೆಗಳಂತೆ ಇವೂ ಶ್ರೀ ರಮಾದೇವಿಯವರ ಮುಂದಿನ ಅವತಾರಕಾರ್ಯದ ಮುನ್ಸೂಚನೆಗಳಾಗಿವೆ. ಪತಿಯೇ ಪ್ರತ್ಯಕ್ಷ ಪರದೈವತ ಎಂಬ ಭಾವನೆಯಿಂದ ಶ್ರೀ ರಮಾದೇವಿಯವರು ಆದರ್ಶ ಪತಿವ್ರತೆಯಾಗಿ ಜೀವನ ಸಾಗಿಸಿದರು. ಅನುಪಮ ವಿಧೇಯತೆ, ನಿಸ್ಸೀಮ ತಾಳ್ಮೆ ಮತ್ತು ಭಕ್ತಿಯುಕ್ತ ನಿಸ್ವಾರ್ಥ ಸೇವೆಯ ಮೂಲಕ ಪತಿಯ ಸ್ವಭಾವದಲ್ಲಿ ಪರಿವರ್ತನೆಯನ್ನುಂಟುಮಾಡಿದರು. ಪತಿ ಇವರಿಗೆ ಸಾಧನಕ್ಕೆ ಬೇಕಾದ ಅನುಕೂಲತೆಯನ್ನು ಒದಗಿಸಿದರು. ಇಬ್ಬರೂ ಬ್ರಹ್ಮಚರ್ಯ ಜೀವನವನ್ನು ನಡೆಯಿಸಿದರು.

ಸಂಸಾರದ ಸಕಲ ಹೊಣೆಗಳನ್ನು ನಿರ್ವಹಿಸುತ್ತಲೂ ಶ್ರೀ ರಮಾದೇವಿಯವರ ಪ್ರಖರ ಸಾಧನವನ್ನು ಮಾಡಿದರು. ಹಗಲು ಮನೆಗೆಲಸ– ಪತಿಸೇವೆ, ರಾತ್ರಿ ಅಖಂಡ ರಾಮನಾಮ ಜಪ–ಧ್ಯಾನ–ಪ್ರಾರ್ಥನೆ; ಕಡುತರ ವೈರಾಗ್ಯ ಪ್ರಾಪಂಚಿಕ ವಿಷಯಗಳಲ್ಲಿ ಸಂಪೂರ್ಣ ನಿಃಸ್ಪೃಹತೆ– ಈ ರೀತಿ ಹನ್ನೆರಡು ವರ್ಷ ಅವ್ಯಾಹತವಾಗಿ ಪ್ರಖರ ತಪಶ್ಚರ್ಯೆ ನಡೆಯಿತು. ಇಪ್ಪತ್ತೆಂಟು ವರ್ಷ ವಯಸ್ಸಾದಾಗಲೇ ಆತ್ಮಸಾಕ್ಷಾತ್ಕಾರವು ಇವರಿಗೆ ಸಿದ್ಧಿಸಿತು.

ಆತ್ಮಸಾಕ್ಷಾತ್ಕಾರವಾಗುವ ಸ್ವಲ್ಪ ಸಮಯದ ಮೊದಲು ಒಂದು ರಾತ್ರಿ ಶ್ರೀ ರಮಾದೇವಿಯವರಿಗೆ ಪರಶಿವನ ದರ್ಶನವಾಗಿ ಸ್ಪರ್ಶವಾಯಿತು. ಅದೊಂದು ಅರ್ಥಗರ್ಭಿತವಾದ ಅದ್ಭುತರಮ್ಯ ಘಟನೆ. ಆಹೊತ್ತಿನಿಂದ ಅವರ ನರನರಗಳಲ್ಲಿ ಪ್ರಚಂಡ ದೈವೀ ಶಕ್ತಿಯ ಪ್ರವಾಹ ಹರಿಯಲಾರಂಭಿಸಿತು. ಅಂದಿನಿಂದ ದಿನಕ್ಕೆ ಒಂದೇ ಒಂದು ಕಿತ್ತಳೆ ಹಣ್ಣು ಅವರ ಆಹಾರವಾಯಿತು. ಈ ರೀತಿ ತೀವ್ರ ಸಾಧನೆ ನಡೆಯುತ್ತಾ ಹದಿನೈದು ದಿನ ಕಳೆಯಿತು. ಮೂರು ದಿನ ಕೇವಲ ನೀರೇ ಅವರ ಆಹಾರವಾಯಿತು. ನಾಲ್ಕನೆಯ ದಿನ ಅವರ ಮನೆಗೆ ಓರ್ವ ವೃದ್ಧ ತೇಜಸ್ವಿ ಸಂನ್ಯಾಸಿಯು ಆಗಮಿಸಿ, ಇನ್ನು ಈ ತರದ ತೀವ್ರ ತಪಶ್ಚರ್ಯೆಯ ಅಗತ್ಯವಿಲ್ಲವೆಂದುಸುರಿ, ಶ್ರೀ ರಮಾದೇವಿಯವರು ಅನ್ನಗ್ರಹಣ ಮಾಡುವಂತೆ ಮನವೊಲಿಸಿದನು. ಪತಿಪತ್ನಿಯರಿಂದ ಆದರಾತಿಥ್ಯಗೊಂಡು

ಬೀಳ್ಕೊಂಡ ಆ ಸಾಧುವು ಕೆಲವು ಹೆಜ್ಜೆ ಮುಂದೆ ಹೋದ ಕೂಡಲೇ ಅದೃಶ್ಯನಾದನು. ಪ್ರಭು ಶ್ರೀ ರಾಮಚಂದ್ರನೇ ತನ್ನ ಉಪವಾಸ ಬಿಡಿಸಲು ಈ ರೂಪದಿಂದ ಬಂದುದನ್ನರಿತು ಶ್ರೀ ರಮಾದೇವಿಯವರು ಭಾವಪರವಶರಾದರು.

ಇದಾದ ಬಳಿಕ ಕೆಲವೇ ದಿನಗಳಲ್ಲಿ ಶ್ರೀ ರಮಾದೇವಿಯವರಿಗೆ ಭಾರತಮಾತೆಯ ದರ್ಶನವಾಯಿತು. ಭಾರತದ ಮಹಿಳಾಮಣಿಯರು ದಿನೇ ದಿನೇ ಅವನತಿ ಹೊಂದುವುದನ್ನು ನೋಡಿ ಭಾರತಾಂಬೆ ಮ್ಲಾನವದನಳಾಗಿದ್ದಳು. ಭಾರತೀಯ ಸ್ತ್ರೀಯರ ಉದ್ಧಾರ ಹಾಗೂ ಧರ್ಮಪ್ರತಿಷ್ಠಾಪನೆ—ಎಂಬ ಎರಡು ಕಾರ್ಯಗಳಿಗೆ ಭಾರತಾಂಬೆಯ ಪ್ರೇರಣೆಯಂತೆ ಶ್ರೀ ರಮಾದೇವಿಯವರು ತಮ್ಮನ್ನು ಆಗ ನಿವೇದಿಸಿಕೊಂಡರು.

ಸಾಧನೆಯ ಕೊನೆಗೊಂದು ದಿವ್ಯಾನುಭವ. ಆ ಚಿರಸ್ಮರಣೀಯ ದಿನ ಶ್ರೀ ರಮಾದೇವಿಯವರು ಆಳವಾದ ಧ್ಯಾನದಲ್ಲಿ ಮುಳುಗಿದ್ದರು. ಧ್ಯಾನವು ಸಮಾಧಿಯಾಗಿ—ನಿರ್ವಿಕಲ ಸಮಾಧಿಯಾಗಿ ಫಲಗೊಂಡಿತು. ಅವರು ಆಧ್ಯಾತ್ಮಿಕ ಸಾಧನದ ಅತ್ಯುಚ್ಚ ಶಿಖರವನ್ನೇರಿದರು. ಜ್ಞಾತೃ—ಜ್ಞಾನ—ಜ್ಞೇಯ ಎಂಬ ತ್ರಿಪುಟಿ ಮಾಯ ವಾಯಿತು. ಏಕಮೇವಾದ್ವಿತೀಯಂ ಬ್ರಹ್ಮ! ಆ ಸ್ಥಿತಿಯಲ್ಲಿ, ಅದ್ವೈತಾನುಭೂತಿಯ ಉತ್ತುಂಗ ಶಿಖರದಲ್ಲಿ ಶ್ರೀ ರಮಾದೇವಿಯವರು ಆರವತ್ತು ಗಂಟೆ ಕಾಲ ಇದ್ದರು.

ಮರಳಿ ದೇಹಭಾನ ಬಂದಾಗ ಶ್ವೇತ—ನೀಲ—ಸ್ವರ್ಣ ವರ್ಣಗಳ ಪ್ರಭಾಗೋಲವು ಇದಿರಿನಲ್ಲಿ ಕಂಗೊಳಿಸುತ್ತಿತ್ತು. ಪೂರ್ಣಚಂದ್ರನ ಚಂದ್ರಿಕೆಗಿಂತಲೂ ಅದು ಶೀತಲವಾಗಿತ್ತು; ಮಧ್ಯಹ್ನ—ಸೂರ್ಯನಿಗಿಂಲೂ ತೇಜಸ್ವಿಯಾಗಿತ್ತು. ಅದರ ಮಧ್ಯದಲ್ಲಿ ಅವರ ಪ್ರಾಣಪ್ರಿಯ ಆರಾಧ್ಯದೇವತೆ, ಕೋದಂಡಧಾರಿ ಶ್ರೀ ರಾಮ—ಚಂದ್ರನ ಮಧುರ ರೂಪವು ಮಿನುಗುತ್ತಿತ್ತು. ಹನ್ನೆರಡು ವರ್ಷಗಳ ದೀರ್ಘ ತಪಸ್ಸಿನ ತರುವಾಯ ಈ ಪರಮಪಾವನ ದರ್ಶನ!

ಧರ್ಮಸಂಸ್ಥಾಪನೆ ಮಾಡಿ ಮಾನವರನ್ನು ಉದ್ಧರಿಸುವುದೇ ಶ್ರೀ ರಮಾದೇವಿಯವರ ಅವತಾರಕಾರ್ಯವೆಂದು ಶ್ರೀ ರಾಮಚಂದ್ರನಿಂದ ಆಗ ಆದೇಶ ಬಂದಿತು. "ಧರ್ಮವೇ ಜೀವನದ ನೆಲೆ; ಅದರಿಂದಲೇ ಶಾಂತಿ—ಮುಕ್ತಿ; ಈ ಸಾಧ್ಯ ಸಾಧನೆಗೆ ಸರ್ವೋತ್—ಕೃಷ್ಟ ಮಾರ್ಗವೆಂದರೆ ಭಕ್ತಿ" ಎಂದು ಆ ಅಮೃತನಿಮಿಷದಲ್ಲಿ ಶ್ರೀ ರಮಾದೇವಿಯವರಿಗೆ ಸ್ಪಷ್ಟಪಡಿಸಲಾಯಿತು. ಅಂದಿನಿಂದ ಅವ್ಯಾಹತವಾಗಿ ತಮ್ಮ ಅವತಾರ ಕಾರ್ಯವನ್ನು ಮುಂದುವರಿಸಿದ್ದಾರೆ ಅವರು.

ಸಾಮಾನ್ಯ ಸ್ತ್ರೀ ಪುರುಷರನ್ನು ಕುರಿತಾಗಿಯೇ ಇದೆ ಸದ್ಗುರು ಶ್ರೀ ರಮಾದೇವಿಯವರ ಸಂದೇಶ, "ಸತ್ಯವನ್ನು ತಿಳಿಯಿರಿ, ಧರ್ಮದಿಂದ ನಡೆಯಿರಿ; ಸ್ವಾರ್ಥತ್ಯಾಗಿಗಳಾಗಿರಿ; ಕರ್ತೃತ್ವಭಾವವನ್ನು ತೊರೆದು ಕರ್ಮಕ್ಕಾಗಿ ಕರ್ಮಗಳನ್ನು ಮಾಡಿರಿ" ಎಂದವರು ಕಳಕಳಿಯಿಂದ ಬೋಧಿಸುತ್ತಾರೆ. "ಸ್ವಾರ್ಥತ್ಯಾಗಿಯೇ ಕರ್ಮಯೋಗಿ. ಕರ್ಮಗಳು ಎಂದಿಗೂ ನಿಮ್ಮನ್ನು ಬಂಧಿಸುವುದಿಲ್ಲ. ಕರ್ತೃತ್ವಭಾವವನ್ನು ತೊರೆದು ಮಾಡಿದ ಕರ್ಮಗಳೇ ಯಜ್ಞಸ್ವರೂಪ ಇಂತಹ ಕರ್ಮದಿಂದ ಚಿತ್ತಶುದ್ಧಿ ಯುಂಟಾಗುವುದು. ಚಿತ್ತಶುದ್ಧಿಯಿಂದ ಭಕ್ತಿಯ ಉದಯವಾಗವುದು, ಆಗ ಮಾತ್ರವೇ ಸರ್ವರಲ್ಲಿಯೂ ವ್ಯಾಪಿಸಿರುವ ಆ ಪರಮಾತ್ಮ ಚೈತನ್ಯವನ್ನು ಈಕ್ಷಿಸುವುದಕ್ಕೂ, ಪ್ರೇಮಿಸುವುದಕ್ಕೂ, ಸೇವಿಸುವುದಕ್ಕೂ ಸಾಧ್ಯವಾಗುವುದು. ಇಂತಹ ನಿಷ್ಕಾಮ ಸೇವೆಯಿಂದ ಅನ್ಯೋನ್ಯ ಪ್ರೇಮ-ಸೌಹಾರ್ದತೆಯಿಂದೊಗೂಡಿದ ಐಕಮತ್ಯವೆಂಬ ಪ್ರಚಂಡ ಶಕ್ತಿಯನ್ನು ಉದ್ದೀಪನಗೊಳಿಸುವುದಕ್ಕೆ ಸಾಧ್ಯವಾಗುವುದು. ಐಕಮತ್ಯವೇ ಮಹಾಬಲವು. ಇದರಿಂದ ಮಾನವನ ಉದ್ಧಾರವೂ, ರಾಷ್ಟ್ರದ ಅಭಿವೃದ್ಧಿಯೂ, ಲೋಕಕಲ್ಯಾಣವೂ ಆಗುವುದು"=ಎಂದು ಶ್ರೀಮಾತೆ ರಮಾದೇವಿಯವರು ಹೇಳುತ್ತಾರೆ.

ಸದ್ಗುರು ಶ್ರೀ ರಮಾದೇವಿಯವರು ಭಕ್ತಿ ಮಾರ್ಗದ ಪ್ರವರ್ತಕರು. ಸಕಲ ಸಾಧನಗಳಲ್ಲಿ ಭಕ್ತಿಯೇ ಪರಮಸುಲಭ, ಬಹುಜನರಿಗೆ ಸಾಧ್ಯ, ಜಾತಿ ಮತಗಳ ಭೇದಭಾವವಿಲ್ಲದೆ ಆಚರಣೀಯ; ಭಕ್ತಿಯು ಧರ್ಮವನ್ನು ನೆಲೆಗೊಳಿಸುವುದು, ಧ್ಯಾನ-ಸಮಾಧಿ-ಮೋಕ್ಷ ಎಲ್ಲವನ್ನೂ ಒದಗಿಸವುದು-ಎಂದವರು ಬೋಧಿಸುತ್ತಾರೆ. ನಾಮಜಪ, ಧ್ಯಾನ ಹಾಗೂ ಭಜನೆ ಶ್ರೀ ರಮಾದೇವಿಯವರು ಸರ್ವರಿಗೂ ಹೇಳುವ ಸಾಧನಗಳು. ಭಜನೆಯ ಹೊತ್ತಿನಲ್ಲಿ ಅವರು ಮೈಮರೆತು ಭಾವಸಮಾಧಿ ಹೊಂದುವುದು ವಾಡಿಕೆಯ ಅನುಭವನಾಗಿದೆ. ಭಕ್ತಿಯಲ್ಲಿ—ಭಾವನೆಯಲ್ಲಿ ಎಂತಹ ಬಲವಿದೆ ಎಂಬುದನ್ನು ತೋರಲೆಂದೋ ಶ್ರೀ ಮಾತೆ ರಮಾದೇವಿಯವರು ಅವತಾರ ತಾಳಿದುದು—ಎಂದು ಇಂತಹ ಅಪೂರ್ವ ದೃಶ್ಯಗಳನ್ನು ನೋಡಿದಾಗ ಎಂತಹ ನಾಸ್ತಿಕನಿಗೂ ಅನಿಸದೆ ಹೋಗುವುದಿಲ್ಲ.

ಆದರೆ ಶ್ರೀಮಾತೆ ರಮಾದೇವಿಯವರು ಬೋಧಿಸುವ ಭಕ್ತಿ ಕುರುಡು ಭಕ್ತಿಯಲ್ಲ, ಮೂಢತ್ವವಲ್ಲ, ಅವಿವೇಕತೆಯೂ ಅಲ್ಲ; ಅದು ಜ್ಞಾನಯುಕ್ತ ಭಕ್ತಿ. "ಕೇವಲ ವ್ರತ-ನಿಯಮ ಭಜನ—ಪೂಜ ನಾದಿಗಳೂ ಭಕ್ತಿಯಲ್ಲ. ಭಕ್ತಿ ಎಂದರೆ ಅದೊಂದು ಪರಿಶುದ್ಧವಾದ ಸ್ನೇಹದ ಪ್ರವಾಹ; ಪರಮಾತ್ಮಾನುಸಂಧಾನ; ಚಿತ್ತವೃತ್ತಿಯನ್ನು ಏಕೀಕರಿಸುವ ಆವೇಶಜನಕ

ವಾದ ಅನುಭೂತಿ. ಭಕ್ತಿಯಲ್ಲಿ ಸ್ವಾರ್ಥಮೋಹಗಳಿ., ದ್ವಂದ್ವ–ದ್ವೈತಗಳಿಲ್ಲ. ಅಹಂಕಾರ, ಭಯ, ಲಜ್ಜೆ, ಅಧೀರತೆ ಮುಂತಾದ ಸಂಕುಚಿತಭಾವಗಳು ಈ ಅಲೌಕಿಕವಾದ ಸ್ನೇಹದ ಪ್ರವಾಹದಲ್ಲಿ ಹರಿದು ಹೋಗುವುವು. ಜೀವಾತ್ಮ–ಪರಮಾತ್ಮ ಐಕ್ಯಹೊಂದುವ' ಚಿತ್ತವೃತ್ತಿನಿರೋಧಿಸುವ ಯೋಗದ ಸುಲಭ ನಿಶ್ಚಿತ ಮಾರ್ಗವೇ ಭಕ್ತಿ" ಎಂಬುದು ಶ್ರೀ ಸದ್ಗುರುಮಾತೆಯವರ ಉಪದೇಶ.

ಸದ್ಗುರುಕೃಪೆಯಿಲ್ಲದೆ ಮೋಕ್ಷದ್ವಾರ ತೆರೆಯದು, ಜೀವನದಗುರಿ ಮುಟ್ಟಲಾಗದು, ಎಂದು ಶ್ರೀ ಮಾತೆಯವರು ಹೇಳುತ್ತಾರೆ. ಸದ್ಗುರುವೆಂದರೆ ಭಗವಂತನ ಸಾಕಾರರೂಪ. ಶಿಷ್ಯನು ಸದ್ಗುರುವಿಗೆ ಪೂರ್ಣ ಆತ್ಮಸಮರ್ಪಣೆ ಮಾಡಿಕೊಳ್ಳಬೇಕು. ಚಿತ್ತಶುದ್ಧಿ–ಬುದ್ಧಿಸ್ಥೈರ್ಯಗಳಿಗೆ, ಅಹಂಕಾರ ನಾಶಕ್ಕೆ, ಸಾರಾಸಾರ ವಿವೇಚನೆಗೆ ಇದು ಅತ್ಯಗತ್ಯ. ಆಗ ಗುರುಕೃಪೆ ನಿರಾತಂಕವಾಗಿ ಕಾರ್ಯಕಾರಿಯಾಗುವುದು. ಆದರೆ ಸದ್ಗುರು ಶ್ರೀ ರಮಾಮಾತೆಯವರ ಸಾಧನಕ್ರಮದಲ್ಲಿ ಕಠೋರ ನಿಯಮಗಳ ಬಂಧನವಿಲ್ಲ. ತಮ್ಮ ಮಧುರ, ಮಾತೃ ವಾತ್ಸಲ್ಯದಿಂದ ಭಕ್ತ ವೃಂದವನ್ನು ಅವರು ಗೊತ್ತಾಗದ ರೀತಿಯಲ್ಲಿ ತಮ್ಮೆಡೆಗೆ ಎಳೆದುಕೊಳ್ಳುವರು, ಮೋಕ್ಷ ಮಾರ್ಗದಲ್ಲಿ ಕೊಂಡೊಯ್ಯುವರು.

ಶ್ರೀ ಮಾತೆಯವರೊಂದು ಅದ್ಭುತ ಸ್ಪರ್ಶಮಣಿ. ಇವರ ಸ್ಪರ್ಶ-ದಿಂದ ಏನೂ ಅರಿಯದ ನಿರಕ್ಷರಕುಕ್ಷಿಗಳೂ, ಸಾಮಾನ್ಯ ಮಾನವರೂ ಪಾವನರಾಗಿದ್ದಾರೆ, ನಿಜಮಾನವರಾಗಿದ್ದಾರೆ, ತಮ್ಮ ಆಂತರಿಕ ಜ್ಯೋತಿಯನ್ನು ಕಂಡುಕೊಂಡು ಧನ್ಯರಾಗಿದ್ದಾರೆ.

ಗೃಹಸ್ಥಾಶ್ರಮಿಗಳಿದ್ದೂ ಎಂತಹ ಉನ್ನತ ಅನುಭವ ಪಡೆಯ ಬಹುದು ಎಂಬದಕ್ಕೆ, ಶ್ರೀ ಮಾತೆಯವರೊಂದು ಸುಂದರ ದೃಷ್ಟಾಂತ. ಖಿಲವಾಗುತ್ತಿರುವ ಭಾರತೀಯ ಕುಟುಂಬ ಜೀವನವು ಮತ್ತೆ ಗಟ್ಟಿಮುಟ್ಟಾದ ತಳಹದಿಯನ್ನು ಪಡೆಯಬೇಕು, ಧರ್ಮವೇ ಆ ತಳಹದಿ; ಧರ್ಮವೇ ಜೀವನದ ಆದಿ–ಮಧ್ಯ-ಅಂತ ಎಂಬುದು ಶ್ರೀ ಮಾತೆಯವರ ಬೋಧೆ. ಗೃಹಸ್ಥ ಜೀವನವನ್ನು ದಿವ್ಯಗೊಳಿಸ ಬೇಕು, ಗೃಹವನ್ನೇ ದೇಗುಲವನ್ನಾಗಿ ಮಾರ್ಪಡಿಸಬೇಕು, ಎಂದವರು ಸಾರಿ ಹೇಳುತ್ತಾರೆ. ಅಂತೆಯೆ ಸಾಮಾನ್ಯ ಗೃಹಸ್ಥರಿಗೆ ಅದರಲ್ಲಿಯೂ ಸ್ತ್ರೀಯರಿಗೆ ಅವರ ಆವಾಹನವಿದೆ. ಸ್ತ್ರೀಯು ಧರ್ಮಪರಾಯಣೆಯಾದರೆ ಪತಿಯ ಪರಿವರ್ತನೆ ಮಾಡಬಲ್ಲಳು; ಮಕ್ಕಳಲ್ಲಿ ದೇವಭಕ್ತಿಯ ಸಂಸ್ಕಾರವನ್ನು ದೃಢವಾಗಿ ಊರಿಸುವುದರ ಮೂಲಕ ಮುಂದಿನ ಪೀಳಿಗೆಯೂ ವ್ಯಕ್ತಿಗತ ಹಾಗೂ ರಾಷ್ಟ್ರೀಯ ಶೀಲದ ಅಭಿವೃದ್ಧಿಗೆ ಸಹಾಯವಾಗುವಂತೆ ಮಾಡಬಲ್ಲಳು. ತಾವು ಮಾಡುತ್ತಿರುವ ಉಪದೇಶಕ್ಕೆ ಶ್ರೀಮಾತೆಯವರ ಜೀವನವೆ ಒಂದು ಜಾಜ್ವಲ್ಯವಾದ ಉದಾಹರಣೆ. ಸಹಸ್ರಾರು ಶಿಷ್ಯರನ್ನು ಪಡೆದ ಶ್ರೀ ರಮಾದೇವಿಯವರು ತಮ್ಮ ವೃದ್ಧ ಪತಿಯ ಆರೈಕೆಯನ್ನು ಈಗಲೂ ಅತಿ ಭಕ್ತಿಯಿಂದ ಮಾಡುತ್ತಿರುವುದನ್ನು ನೋಡುವವರ ಕಂಗಳು ಆನಂದಾಶ್ರುಗಳನ್ನು ಕರೆಯದಿರವು!

ಶ್ರೀ ಸದ್ಗುರುಮಾತೆಯವರ ಉಪದೇಶವನ್ನು ಕಾರ್ಯಕಾರಿಯಾಗಿಸಲು "ಶ್ರೀ ರಮಾದೇವಿ ಭಕ್ತಮಂಡಲಿ" ಯ ಹಲವಾರು ಶಾಖೆಗಳು ಕರ್ನಾಟಕ–ಕೇರಳ-ತಮಿಳ್ನಾಡು ಮುಂಬಯಿ ಮೊದಲಾದ ಕಡೆ ತಲೆಯೆತ್ತಿರುವುವು. ಮಂಗಳೂರಿನ "ಸಾಧನ ಮಂದಿರವು" ಶ್ರೀಮಾತೆಯವರ ಪಾವನ ಸಾನ್ನಿಧ್ಯದಿಂದ ಒಂದು ತೀರ್ಥಕ್ಷೇತ್ರವಾಗಿದೆ.

ಶ್ರೀ ಸದ ರ್ುುಮಾತೆಯವರ ಬೋಧನೆಯ ಹಿಂದೆ ಅವರ ತಪಸ್ಸು, ಗಾಢ ಅನುಭವ ಇವೆ; ಆಧ್ಯಾತ್ಮಿಕ ಶಕ್ತಿ ಇದೆ. ಆದುದರಿಂದ ಅವರ ಮಾತುಗಳು ಕೇಳುವವರ ಹೃದಯದೊಳಗೆ ಆಳವಾಗಿ, ನೇರವಾಗಿ ಇಳಿಯುವುವು; ಅವರಲ್ಲಿಯ ಸುಪ್ತ ಆಧ್ಯಾತ್ಮಿಕ ಚೈತನ್ಯವನ್ನು ಜಾಗೃತಗೊಳಿಸುವುವು. ಭಾವಸಮಾಧಿಯಿಂದಹೊರಬಂದ ಮೇಲೆ ಅವರ ಮುಖಾರವಿಂದದಿಂದ ಹೊರಹೊಮ್ಮುವ ಬೋಧ–ಪ್ರವಚನಗಳು ಅತಿಮಾನುಷವಾದ ದೈವೀ ಪ್ರಕೃತಿಯ ನಿಲುವಿನಿಂದ ಬಂದವುಗಳಾಗಿರುತ್ತವೆ. ಆಗ ಮಾತನಾಡುವವರು ಸಾಕ್ಷಾತ್ ಜಗಜ್ಜನನಿಯೇ ಎಂದು ಕೇಳುವವರ ಅಂತಃಪ್ರಜ್ಞೆಗೆ ಖಚಿತವಾಗುತ್ತದೆ.

ಶ್ರೀಮಾತೆಯವರಿಗೆ ಭಾವಸಮಾಧಿಯು ಅತಿ ಸಹಜವಾದ ಅವಸ್ಥೆ. ಸಾಧನೆಯಲ್ಲಿ, ತಪಸಿನಲ್ಲಿ ಜನ್ಮಕಳೆದರೂ ಸಾಧ್ಯವಾಗದ ಸ್ಥಿತಿ ಅವರಿಗೆ ಕರತಲಾಮಲಕವಾಗಿದೆ. ಪ್ರಚಂಡ ಜನಸಮುದಾಯದ ನಟ್ಟನಡುವೆ ಕೂಡ ಇದು ಅವರಿಗೆ ಸುಲಭವಾಗಿ ಪ್ರಾಪ್ತವಾಗುತ್ತದೆ. ಆ ಸ್ಥಿತಿಯಲ್ಲಿ ನೆರೆದ ಭಕ್ತ ವೃಂದಕ್ಕೆ ದೊರಕುವ ಕೃಪಾಪ್ರಸಾದ ಅತ್ಯಮೋಘ. ಆ ಸ್ಥಿತಿಯು ನೋಡಸಿಗುವುದೂ ಜನ್ಮದ ಸುಕೃತ.

ಓಂ ಶಾಂತಿಃ ಶಾಂತಿಃ ಶಾಂತಿಃ




## ಮೂರನೆಯ ಅಂಕು (ಐತಿಹಾಸಿಕ ನಾಟಕವು)

ಬರೆದವರು : ರತ್ನಾಶಾಸ್ತ್ರಿ

[ ಮಾರ್ಚ ಸಂಚಿಕೆಯಿಂದ ಮುಂದುವರೆದದ್ದು. ]

ನಿವೇದಕ—ದೇಶಾಭಿಮಾನಿಗಳು ರೆಸಿಡೆಂಡ್ ಮೆನ್ ಸನ್ನನ ರುಂಡವನ್ನು ನರಗುಂದದ ಕೋಟೆಯ ಬಾಗಿಲಿಗೆ ಕಟ್ಟಿದ್ದಾರೆ. ಅದ್ದರಿಂದ ರಾಜ್ಯದಲ್ಲಿ ಭೀಕರ ಪರಿಸ್ಥಿತಿಯು ಪ್ರಾಪ್ತವಾಗಿರುವದು ! ನರಗುಂದವನ್ನು ವಶಪಡಿಸಿಕೊಳ್ಳಲೆಂದು ಮಾಲಕಮಂ ನರಗುಂದವನ್ನು ಮುತ್ತಿದ್ದಾನೆ. ದ್ರೋಹಿಗಳು ದ್ರೋಹ ಬಗೆಯಲು ಪ್ರಯತ್ನಿಸಿದ್ದರೆ—ಅಭಿಮಾನಿಗಳು—ಕೋಟೆಯನ್ನು ಉಳಿಸುವ ಪ್ರಯತ್ನದಲ್ಲಿದ್ದಾರೆ. ನರಗುಂದದ ದೊರೆಯು ಶಕ್ತಿಮೀರಿ ಪ್ರಯತ್ನ ನಡಿಸಿದ್ದಾನೆ. ಹೀಗಿರುವಾಗ ಒಂದು ದಿನ—

(ಬೀದಿಯ ದೃಶ್ಯ–ಬನ್ಯಾಬಾಪು, ಕೃಷ್ಣಾಜಿ ಪಂತರು ಪ್ರವೇಶಿಸುವರು.)

ಬನ್ಯಾಬಾಪು — ಕೃಷ್ಣಾಜಿಪಂತ, ನಾವೊಂದನ್ನು ಬಗೆದರೆ—ಕೊನೆಗೆ ನಮ್ಮ ದೈವವು ಬೇರೊಂದನ್ನು ಬಗೆಯಿತು. ಆದ್ದರಿಂದ ನಮ್ಮ ಪಾಲಿಗೆ ಇಂತಹ ಭೀಕರ ಪರಿಸ್ಥಿತಿಯು ಪ್ರಾಪ್ತವಾಗಿರುವದು. ಮೆನ್‌ಸನ್ನನಿಂದ ಬರುವ ಸಮಾಚಾರದ ಓಲೆಯನ್ನು ದ್ರೋಹಿಗಳು ಮಧ್ಯದಲ್ಲಿಯೇ– ತಡೆಹಿಡಿದು, ಆತನ ರುಂಡವನ್ನು ಚೆಂಡಾಡಿದರು. ಆತನ ರುಂಡವು ನರಗುಂದದ ಅಗಸೆಯ ಬಾಗಿಲಿಗೆ ಕಟ್ಟಲ್ಪಟ್ಟಿದೆ. ದೇಹವು ಧಾರವಾಡದ ಬೀದಿಯಲ್ಲಿ ಪ್ರದರ್ಶನಕ್ಕಾಗಿ ಇಡಲ್ಪಟ್ಟಿದೆ. ಅದೋ........ಅದೋ ನೋಡಿರಿ ! ಕೃಷ್ಣಾಜಿಪಂತ........, ರಕ್ತ ಬಸಿಯುತ್ತಿರುವ ಆ ಮೆನ್‌ಸನ್ನನ ರುಂಡವು ಎಷ್ಟೊಂದು ಭೀಕರವಾಗಿ ತೋರುವದು. ನನ್ನಿಂದಂತೂ ಆ ರುಂಡವನ್ನು ನೋಡಲಿಕ್ಕಾಗುವದಿಲ್ಲ. ಕೃಷ್ಣಾಜಿಪಂತ.... ಕೃಷ್ಣಾಜಿಪಂತ.... ಇನ್ನಾದರೂ ನಿಮ್ಮ ಸೇಡಿನ ಸೂಡಿನ ಭಾವನೆಯನ್ನು ಬಿಡಿರಿ. ಮೆನ್‌ಸನ್ನ ಗತಿಯೆ ಹೀಗಾದ ಬಳಿಕ ನಮ್ಮಂಥವರ ಪಾಡೇನು ? ನರಗುಂದದ ದೊರೆಯ ಸೇವಕರಾಗಿ ಉಳಿಯುವದರಲ್ಲಿಯೆ ಲಾಭವಿದೆ.

ಕೃಷ್ಣಾಜಿಪಂತ—ಅಂಜಬೇಡಿರಿ ಬನ್ಯಾಬಾಪು ! ತಾಳ್ಮೆ ವಹಿಸಿರಿ ! ಧೈರ್ಯ ತಾಳಿರಿ.

ಬನ್ಯಾಬಾಪು— ಜೀವ ಹೋಗುವ ಪ್ರಸಂಗದಲ್ಲಿಯೂ ತಾಳ್ಮೆ ವಹಿಸುವದೇ ?

ಕೃಷ್ಣಾಜಿಪಂತ— ಇಂಥ ಪ್ರಸಂಗಗಳಲ್ಲಿಯೆ ನಿಜವಾದ ರಾಜಕಾರಣಿಯ ಸತ್ವಪರೀಕ್ಷೆಯಿರುವದು. ಬನ್ಯಾಬಾಪು, ಪರಿಸ್ಥಿತಿಯು ಸಂಪೂರ್ಣ ಕಲ್ಪನೆ ನನಗಿರುವದು. ಕಿವಿಯ ಕಡೆಗೆ ತುತ್ತು ಒಯ್ಯುವದಿಲ್ಲ ನಾನು ! ಹೀಗೆ ಕೈಕಾಲು ಕಳೆದುಕೊಂಡು ಕುಳಿತುಕೊಂಡರೆ ನಮ್ಮ ಕಾರ್ಯ ಸಾಧನೆ ಎಂದಿಗೂ ಆಗದು.

ಬನ್ಯಾಬಾಪು— ಕಾರ್ಯ ಸಾಧನೆಯಾಗುವಷ್ಟರಲ್ಲಿ ಮೆನ್‌ಸನ್ನನಂತೆ ನಮ್ಮ ಗತಿಯಾದೀತು. ಅದಷ್ಟು ಬೇಗ ನಾವು ಸಾವರಿಸಿಕೊಳ್ಳಬೇಕು ! ಮಹಾರಾಜರಿಗೆ ಮತ್ತು ಅಮಾತ್ಯರಿಗೆ ನಮ್ಮ ಬಗ್ಗೆ ಬಲವಾದ ಸಂಶಯ ಬಂದಿರುವದು ಇಂಥ ಪರಿಸ್ಥಿತಿಯಲ್ಲಿ ನಾವು ಅವರ ಕೈಗೆ ಸಿಕ್ಕರೆ... ಹಿಂದು ಮುಂದಿನ ವಿಚಾರವನ್ನು ಮಾಡದೆ ನೇರವಾಗಿ ನಮ್ಮನ್ನು.... ತೋಫಿನ ಬಾಯಿಗೆ........

ಕೃಷ್ಣಾಜಿಪಂತ— (ವಿಕಟ ಹಾಸ್ಯ ನಕ್ಕು) ಅದು ಅಷ್ಟೊಂದು ಸುಲಭವಲ್ಲ....! ಬನ್ಯಾಬಾಪು. ಈ ಪೆದ್ದ ದೊರೆಯ ತೋಫುಗಳೆ ಹಾರದಂತೆ ಮಾಡೋಣ !

ಬನ್ಯಾಬಾಪು— ಅಂದರೆ—

ಕೃಷ್ಣಾಜಿಪಂತ— ಅದೊಂದು ರಾಜಕಾರಣವಿದೆ. ಆ ಮೇಲೆ ನಿಮಗೆ ಸವಿಸ್ತಾರವಾಗಿ ಎಲ್ಲವನ್ನೂ ಹೇಳುತ್ತೇನೆ. (ವಿಚಾರಿಸಿ) ಹ್ಞಂ....ನಿಮಗೊಂದು ಸಂಗತಿಯನ್ನು ಕೇಳಬೇಕೆಂದಿದ್ದೇನೆ.

ಬನ್ಯಾಬಾಪು— ಯಾವ ವಿಷಯದಲ್ಲಿ ?

ಕೃಷ್ಣಾಜಿಪಂತ— ಕೋಟೆಯಲ್ಲಿ ನಿಮ್ಮದು ಎಲ್ಲೆಡೆಗೆ ಲಕ್ಷವಿದೆಯಲ್ಲವೆ? ಮತ್ತು ನಮ್ಮ ಸಂಚು ಕಂಡು ಬಂದ ಯಾವುದೇ ಘಟನೆ ನಡೆದಿಲ್ಲವಲ್ಲವೆ?

ಬನ್ನ್ಯಾಬಾಪು— ಇಲ್ಲ.

ಕೃಷ್ಣಾಜಿಪಂತ— (ಕೋಪದಿಂದ—) ಬನ್ನ್ಯಾಬಾಪು, ನಡೆದು ಹೋಗಿರಲೇ ಬೇಕು! ಅದ್ದರಿಂದ ಮೆನ್‌ಸನ್ನನಿಂದ ಬಂದ ಕಾಗದ ನಮ್ಮ ಕೈಗೆ ಸಿಗಲಿಲ್ಲ. ಕಾಗದ ಸಿಗದ್ದರಿಂದ ಮೆನ್‌ಸನ್ ಪ್ರಾಣಕ್ಕೆ ಎರವಾದ!

ಬನ್ನ್ಯಾಬಾಪು— ತೆರೆದ ಕಣ್ಣುಗಳಿಂದ ನಾನು ಎಲ್ಲೆಡೆಗೆ ನೋಡುತ್ತಿದ್ದೇನೆ. ನೀವನ್ನುವಂತೆ ಕೋಟೆಯಲ್ಲಿ ನಡೆದು ಹೋಗಿಲ್ಲ.

ಕೃಷ್ಣಾಜಿಪಂತ—ಬನ್ನ್ಯಾಬಾಪು, ನಿಮಗೆ ಅಷ್ಟೊಂದು ದೂರದೃಷ್ಟಿಯಲ್ಲ. ರಾಜಕಾರಣಿಗೆ ಮೈತುಂಬ ಕಣ್ಣುಗಳು ಬೇಕು.

ಬನ್ನ್ಯಾಬಾಪು— ಮಾತು ಮಿಂಚಿ ಹೋಗಿದೆ. ಇನ್ನು ಮೇಲೆ ಚಿಂತಿಸಿ ಫಲವೇನು?

ಕೃಷ್ಣಾಜಿಪಂತ— ಹಾಗೆಂದರಾಗದು! ಹೀಗೆ ಎಚ್ಚರ ತಪ್ಪಿ ನಡೆದರೆ—ಮೆನ್‌ಸನ್ನನ ಗತಿಯೆ ನಮಗೆ ಕಟ್ಟಿಟ್ಟದ್ದೆ. ಇದೆಲ್ಲ ಅಮಾತ್ಯರ ಕಾರಸ್ಥಾನ! ಮುಯ್ಯಕ್ಕೆ ಮುಯ್ಯವನ್ನು ತೀರಿಸಿಕೊಳ್ಳದಿದ್ದರೆ ನಾನು ಕೃಷ್ಣಾಜಿ ಪಂತನೇ ಅಲ್ಲ--!

ಬನ್ನ್ಯಾಬಾಪು— ಕೃಷ್ಣಾಜಿಪಂತ, ನನಗಿಂತ ನೀವೆ ಪರಿಸ್ಥಿತಿಯ ಹಾರವಾಗಿ ಹೋಗುತ್ತಿದ್ದಿರಿ. ಅಲ್ಲದೆ ಇಂದು ಮಂದಿರದಲ್ಲಿ ಅಮಾತ್ಯರು ಭೆಟ್ಟಿಯಾಗಿದ್ದರು.

ಕೃಷ್ಣಾಜಿಪಂತ— ಏನಾದರೂ ಅಂದರೆ?

ಬನ್ನ್ಯಾಬಾಪು— ಏನೂ ಅನ್ನಲಿಲ್ಲ.

ಕೃಷ್ಣಾಜಿಪಂತ— ರಾಜಕಾರಣದಲ್ಲಿ ಅವರು ನನಗೆ ಪ್ರತಿಸ್ಪರ್ಧಿಗಳು! ಆಕಾಶವನ್ನು ಮಾರು ಹಾಕಿ ಎಣಿಸುವ ಮೂಢ ಹಂಬಲ ಅವರದು! ಮುಂಡರಗಿ ಭೀಮರಾಯ, ಸುರಪುರದ ವೆಂಕಟಪ್ಪನಾಯಕ ಇವರು ದೊರೆಯ ಸಹಾಯಕ್ಕೆ ಬರದಂತೆ ವ್ಯವಸ್ಥೆಯನ್ನು ಮಾಡುತ್ತೇನೆಲ್ಲದೆ ನರಗುಂದ ದೊರೆಗೆ ಮಾಲಕಮ್ಮನ ಎದುರು ಓರ್ವನೆ ನಿಲ್ಲುವಂತೆ ಮಾಡುತ್ತೇನೆ.

ಬನ್ನ್ಯಾಬಾಪು— ನಿಮ್ಮ ಈ ಎಲ್ಲ ಹಂಚಿಕೆಗಳು ಕಾರ್ಯರೂಪದಲ್ಲಿ ಬರಬಹುದೆ? ಯಾಕಂದರೆ ಇದು ವರೆಗೆ ಒಂದೂ ಬಂದಿಲ್ಲವೆಂದು ಕೇಳುತ್ತೇನೆ.

ಕೃಷ್ಣಾಜಿಪಂತ— ಇದಕ್ಕೆ ರಾಜಕಾರಣ ಅನ್ನುವರು.

ಬನ್ನ್ಯಾಬಾಪು— ಕೃಷ್ಣಾಜಿಪಂತ, ರೇಶಿಮೆಯ ಹುಳವು ತನ್ನ ಎಳೆಗಳಿಂದ ತಾನೇ ಸುತ್ತಿಕೊಂಡು—ಕೊನೆಗೆ ಸತ್ತು ಹೋಗುವಂತೆ ನಮ್ಮ ರಾಜಕಾರಣವಾಗಬಾರದು. ಅದಿರಲಿ—ಮೆನ್‌ಸನ್ನನ ರುಂಡವನ್ನು ಕೊನೆಗೆ ಚಂಡಾಡಿದವರಾರು?

ಕೃಷ್ಣಾಜಿಪಂತ – ನರಗುಂದದ ದೊರೆಗಳೇ ಚೆಂಡಾಡಿರಬೇಕು.

ಬನ್ನ್ಯಾಬಾಪು— ಸುಳ್ಳು! ದೊರೆಗಳೆಂದಿಗೂ ಹೀಗೆ ಮಾಡರು! ಅಷ್ಟೊಂದು ಹೀನ ಮನೋವೃತ್ತಿಯವರು ಅವರಿಲ್ಲ.

ಕೃಷ್ಣಾಜಿಪಂತ— ದೊರೆ ಮೆನ್ನಸನ್ನನ ರುಂಡವನ್ನು ಚೆಂಡಾಡುವದು ಸುಲಭಕೆಲಸವಲ್ಲ! ದೊರೆಗಳಿಂದಲೆ ಈ ಕಾರ್ಯ ನಡೆದು ಹೋಗಿರಬೇಕು.

ಬನ್ನ್ಯಾಬಾಪು— ಅಂದ ಮೇಲೆ ನಿಮಗೇನೂ ಗೊತ್ತಿಲ್ಲವೆಂದ ಹಾಗಾಯಿತು! ವಿಷ್ಣು ಮೆನ್‌ಸನ್ನನ ರುಂಡವನ್ನು ಚೆಂಡಾಡಿದನಂತೆ.

ಕೃಷ್ಣಾಜಿಪಂತ— ಇದನ್ನಾರು ನಿಮಗೆ ಹೇಳಿದರು?

ಬನ್ನ್ಯಾಬಾಪು— ಹೀಗೆಯೆ ನನಗೆ ತಿಳಿದು ಬಂದಿರುವದು.

ಕೃಷ್ಣಾಜಿಪಂತ— ನಾನು ವಿಶ್ವಾಸವಿಡಲಾರೆ.

ಬನ್ನ್ಯಾಬಾಪು— ನಾನೂ ವಿಶ್ವಾಸವಿಡುತ್ತಿದ್ದಿಲ್ಲ. ಆದರೆ ವಿಶ್ವಾಸವಿಡುವ ಬಾರಿ ಬಂದಿತು. ನಿಮ್ಮ ಭೆಟ್ಟಿಗೆಂದು ಬರುತ್ತಿದ್ದ ಮೆನ್ನಸನ್ನ ಸಾಹೇಬನನ್ನು ಸುರೇಬಾನದ ಹನುಮನ ಮಂದಿರದಲ್ಲಿ ವಿಷ್ಣು ಕೊಂದನಂತೆ! ಒಂದೇ ಒಂದು ಹೊಡೆತಕ್ಕೆ ಆತನ ರುಂಡವನ್ನು ಧಡದಿಂದ ಬೇರೆ ಮಾಡಿದನಂತೆ.

ಕೃಷ್ಣಾಜಿಪಂತ— ಬನ್ನ್ಯಾಬಾಪು, ವಿಷ್ಣು ಇಷ್ಟೊಂದು ಶೂರ ನಿದ್ದಾನೆಯೆ?

ಬನ್ನ್ಯಾಬಾಪು— ಆನೆಯ ಬಲ ಆತನಗಿರುವದು. ಮುಂಡರಗಿ ಭೀಮರಾಯರ ಮತ್ತು ವಿಷ್ಣು ಕುಲಕರ್ಣಿಯ ಹೆಸರನ್ನು ಕೇಳಿದ ಕೂಡಲೇ ಫಿರಂಗಿಗಳು ಆಕಾಶದ ಕಡೆಗೆ ನೋಡುವರು.

ಕೃಷ್ಣಾಜಿಪಂತ— ರಾಜಕಾರಣದ ಗಂಧವಿರದ ಮೂಢರಿವರು. ಮೆನ್ನಸನ್ನನ ರುಂಡವನ್ನು ನರಗುಂದದ ಅಗಸೆಯ ಬಾಗಿಲಿಗೆ ಕಟ್ಟಿ—ಯಾವ ಪುರುಷಾರ್ಥವನ್ನು ಸಾಧಿಸಿದರು? ಮೆನ್ನಸನ್ನನು ಹೋದರೇನಾಯಿತು? ಸಾವಿರಗಟ್ಟಲೆ ಸೈನ್ಯವನ್ನು ತೆಗೆದುಕೊಂಡು ಮಾಲಕಮ್ ಪ್ರಯಾಣದಿಂದ ನರಗುಂದದ ಕೋಟೆಯನ್ನು ಮುತ್ತಿದ್ದಾನೆ! ಓರ್ವ ಫಿರಂಗಿ

ಕೊಂದ ಸೇಡನ್ನು ತೀರಿಸಿಕೊಳ್ಳಲೆಂದು ಬ್ರಿಟಿಶರ ಸೈನ್ಯಪಡೆಗಳೆಲ್ಲ ನರಗುಂದದ ಕಡೆಗೆ ಸಾಗಿವೆಯೆಂಬುದು ಈ ಮೂಢ ದೊರೆಗೆ ಗೊತ್ತಿರುವದಿಲ್ಲ. ರಾಜಕಾರಣಿಗಳು ವರ್ತಮಾನಕ್ಕಿಂತಲೂ ಭವಿಷ್ಯತ್ಕಾಲದ ಕಡೆಗೆ ಹೆಚ್ಚು ಲಕ್ಷವನ್ನು ಕೊಡಬೇಕು.

ಬನ್ಯಾಬಾಪು—ಮೆನ್‌ಸನ್ ಸತ್ತಿದ್ದರಿಂದ ನರಗುಂದದ ದೊರೆಗಳಿಗೆ ಬಲ ಬಂದಿದೆ.

ಕೃಷ್ಣಾಜಿಪಂತ—ಹೌದು. ಮೆನ್‌ಸನ್ ಜೀವದಿಂದ ಇದ್ದಿದ್ದರೆ ನಮ್ಮ ಬಲ ಇಮ್ಮಡಿಗೊಂಡು–ನಮ್ಮ ಮನೀಷೆ ಸಹ ಈಡೇರಿ ಹೋಗುತ್ತಿದ್ದಿತು. ನರಗುಂದದ ಸಿಂಹಾಸನದ ಮೇಲೆ ನನ್ನ ಮಗ ವಿರಾಜಮಾನನಾಗುತ್ತಿದ್ದನು. ಬನ್ಯಾಬಾಪು, ನಾವು ತುಂಬ ಎಚ್ಚರವಹಿಸಿ ವರ್ತಿಸಬೇಕಾದುದು ಕ್ರಮಪ್ರಾಪ್ತವಾಗಿರುವದೆಂಬುದನ್ನು ಮರೆಯಬೇಡಿರಿ.

ಬನ್ಯಾಬಾಪು—ಇದಲ್ಲದೆ ನನಗೆ ಹೀಗೆ ತಿಳಿದು ಬಂದಿದೆ ಮೆನ್‌ಸನ್, ದೊರೆಗಳ ಪಾದಗಳ ಮೇಲೆ ಬಿದ್ದು ಪ್ರಾಣಭಿಕ್ಷೆಯನ್ನು ಬೇಡಿದನಂತೆ. ಹಿಂದು ಅರಸರು ಧೀರರು, ಶೂರರು, ಗೋ-ಬ್ರಾಹ್ಮಣ ಪರಿಪಾಲಕರು, ಶರಣಾಗತರನ್ನು ಸಂರಕ್ಷಿಸುವರು—ಅಂದನಂತೆ! ಅಂಗಲಾಚಿ ಬೇಡಿಕೊಂಡನಂತೆ! ಉದಾರ ಅಂತಃಕರಣದ ದೊರೆಗಳು ಆತನನ್ನು ಕ್ಷಮಿಸಿದರಂತೆ! ಆದರೆ ಮುಂದೆ ಏನಾಯಿತೋ ತಿಳಿಯದು–ಮೆನ್‌ಸನ್ ಓಡಿ ಹೋಗುವಾಗ ದೊರೆಗಳು ಬೇಡವೆಂದರೂ ವಿಷ್ಣು ಅವನ ರುಂಡವನ್ನು ಚೆಂಡಾಡಿದನಂತೆ!

ಕೃಷ್ಣಾಜಿಪಂತ—ಇದನ್ನಾರು ನಿಮಗೆ ಹೇಳಿದರು?

ಬನ್ಯಾಬಾಪು—ಬೇಹುಗರು ಈ ಸುದ್ದಿಯನ್ನು ತಂದಿದ್ದಾರೆ. ಮತ್ತು ಅದು ಸತ್ಯವೂ ಇರುವದು.

ಕೃಷ್ಣಾಜಿಪಂತ—ಓರ್ವ ಫಿರಂಗಿಯನ್ನು ಕೊಂದ ಮಾತ್ರಕ್ಕೆ ವಿಜಯ ಸಂಪಾದಿಸಿದಂತಾಯಿತೆಂದು ನರಗುಂದದ ಮೂಢ ದೊರೆ ತಿಳಿದಿದ್ದಾನೆ. ಇಂತಹ ಸಾವಿರಾರು ಫಿರಂಗಿಗಳ ಜೊತೆಯಲ್ಲಿ ಕಾದುವದು ಕಟ್ಟಿಟ್ಟದೆಯೆಂಬುದು ಈ ಉನ್ಮತ್ತ ದೊರೆಗೆ ತಿಳಿಯದು. (ತೋಫಿನ ಸದ್ದುಗಳು) ಮಾಲಕಮ್ ನರಗುಂದವನ್ನು–ನರಗುಂದದ ಕೋಟೆಯನ್ನು ಮುತ್ತಿದ್ದಾನೆ.

ಬನ್ಯಾಬಾಪು—ಕೃಷ್ಣಾಜಿಪಂತ, ಯುದ್ಧದ ಮಾತನ್ನೇಕೆ ಎತ್ತುವಿರಿ? ಹನಿ ರಕ್ತ ಬೀಳದೆ ನಮ್ಮ ಮನೀಷೆಯನ್ನು ಈಡೇರಿಸಿಕೊಳ್ಳುವದಿದ್ದಿತಲ್ಲ?

ಕೃಷ್ಣಾಜಿಪಂತ—ಹೌದು. ಆದರೆ ಅನಪೇಕ್ಷಿತವಾಗಿ ನಡೆದುಹೋದ ಘಟನೆಯಿಂದ ನಮ್ಮ ಹಂಚಿಕೆಗಳೆಲ್ಲ ಬುಡಮೇಲಾದವು.

ಬನ್ಯಾಬಾಪು—ಹಂಚಿಕೆಗಳು ಬುಡಮೇಲಾದರೆ ಅಡ್ಡಿಯಿಲ್ಲ. ಆದರೆ ನಾವು ಬುಡಮೇಲಾಗದಂತೆ ನೋಡಿ ನೋಡಿಕೊಳ್ಳಬೇಕು.

ಕೃಷ್ಣಾಜಿಪಂತ—ಬನ್ಯಾಬಾಪು, ನಾನು ಜೀವದಿಂದಿರುವ ವರೆಗೆ ನಿಮ್ಮ ಕೂದಲಿಗೆ ಧಕ್ಕೆ ತಗುಲದು. ನೀವು ಅಂಜುವ ಕಾರಣವಿಲ್ಲ.

ಬನ್ಯಾಬಾಪು—ನಡೆದು ಹೋದ ಸಂಗತಿ ಕಂಡು ಅದೇಕೋ ನನಗೆ ತುಂಬ ಭಯನಾಗುತ್ತಿರುವದು. ನಾವು ಹೊತ್ತಿಸಿದ ಕಿಡಿಯು ನಮ್ಮನ್ನೇ ಎಲ್ಲಿ ಸುಡುವದೋ ಎಂದು ಸಂದೇಹ ನನಗೆ.

ಕೃಷ್ಣಾಜಿಪಂತ—ರಾಜಕಾರಣದಲ್ಲಿ ನಿಮಗೆ ಅನುಭವ ಕಡಿಮೆ. ಆದ್ದರಿಂದ ಹೀಗೆ ಅನಿಸುತ್ತಿರುವದು.

ಬನ್ಯಾಬಾಪು—ಸ್ವಕೀಯರನ್ನು ಹಾಳು ಮಾಡುವದಕ್ಕೆ ಹೊರಟ ನಾವು ಎಂತಹ ರಾಜಕಾರಣವನ್ನು ಆಡುತ್ತಿರುವೆವೊ ಇದೇ ನನಗೆ ತಿಳಿಯದು. ಕೃಷ್ಣಾಜಿಪಂತ, ಹೇಗೋ ಮೆನ್‌ಸನ್ ಸತ್ತುಹೋಗಿದ್ದಾನೆ. ನಮ್ಮ ಕಾರಸ್ಥಾನ, ಫಿತೂರಿ ಆತನೊಬ್ಬನಿಗೇ ಗೊತ್ತಿದ್ದಿತು. ಇನ್ನು ಮೇಲೆ ರಾಜ್ಯದ ಮೋಹವನ್ನು ಬಿಟ್ಟುಕೊಟ್ಟು ಮಹಾರಾಜರ ಜೊತೆಗೂಡಿ ಮಾಲಕಮ್ಮನ ಜೊತೆಯಲ್ಲಿ ಯುದ್ಧ ಮಾಡೋಣ.

ಕೃಷ್ಣಾಜಿಪಂತ—(ವಿಕಟ ಹಾಸ್ಯ ನಕ್ಕು) ಬನ್ಯಾಬಾಪು, ರಾಜಕಾರಣದಲ್ಲಿ ಒಮ್ಮೆ ಕುಲಗೆಟ್ಟರೆ ತೀರಿತು ತಿರುಗಿ ಶುದ್ಧವಾಗಲು ಬರುವದಿಲ್ಲ. ಈಗ ನಮ್ಮ ವಿಷಯದಲ್ಲಿ ಮಹಾರಾಜರಿಗೆ ತುಂಬ ಸಂಶಯ ಬಂದಿರುವದು. ಇಂಥ ಸಂದರ್ಭದಲ್ಲಿ ಅವರ ಜೊತೆ ಸೇರಲು ನಾವು ಪ್ರಯತ್ನಿಸಿದರೆ ಅವರೆಂದಿಗೂ ಸಹಕರಿಸರು! ಒಂದು ಉಪಾಯ ಹುಸಿ ಹೋದರೇನಾಯಿತು? ಇನ್ನೊಂದು ಉಪಾಯವನ್ನು ಕೈಕೊಂಡು ನಮ್ಮ ಮನೀಷೆಯನ್ನು ಈಡೇರಿಸಿಕೊಳ್ಳದೆ ಅನ್ಯಗತ್ಯಂತರವಿಲ್ಲ.

ಬನ್ಯಾಬಾಪು—ಅದು ಈಗ ತುಂಬ ಕಠಿಣ. ನೀವು ಗಾಳಿಗೋಪುರ ಕಟ್ಟುತ್ತಿರುವಿರಿ. ಪರಿಸ್ಥಿತಿಯೆಲ್ಲ ತಿರುವು-ಮುರುವಾಗಿ ಹೋಗಿರುವದು. ಈಗ ನಾವು ಕೋಟೆಯ ಹೊರಗೆ ಹೋಗುವಂತಿಲ್ಲ. ಹೋದರೂ ಮಾಲಕಮ್ಮನ ಪರಿಚಯ ವಿರದ್ದರಿಂದ ನಮ್ಮ ಕಾರ್ಯ ಸಾಧನೆಯಾಗುವದು ತುಂಬ

ಕಠಿಣ. ಅವನು ಎಷ್ಟಾದರೂ ಫಿರಂಗಿ. ನಮ್ಮ ಮೇಲೆ ಎಂದಿಗೂ ವಿಶ್ವಾಸವಿಡನು.

ಕೃಷ್ಣಾಜಿಪಂತ—ನೀವು ತುಂಬ ಅಂಜಿಹೋದ್ದರಿಂದ ಇಲ್ಲದ ಸಲ್ಲದ ವಿಚಾರಗಳು ನಿಮ್ಮ ಮನಸ್ಸಿನಲ್ಲಿ ಬರುತ್ತಿರುವವು. ಬನ್ಯಾಬಾಪು, ರಾಜಕಾರಣಿಗಳಿಗೆ ಉಕ್ಕಿನಂತಹ ಎದೆ ಬೇಕು! ನಿರ್ದಯ ಮನಸ್ಸು ಬೇಕು!

ಬನ್ಯಾಬಾಪು—ಅವೆರಡೂ ನನ್ನಲ್ಲಿಲ್ಲ. ನಿಮ್ಮಲ್ಲಿ ಇವೆಯೊ ಇಲ್ಲವೊ ಇದರದಿನ್ನೂ ಪರೀಕ್ಷೆಯಾಗಬೇಕಾಗುವದು.

ಕೃಷ್ಣಾಜಿಪಂತ—ಆಗುವದೇನು? ಆಗಿ ಹೋಗಿದೆಯೆನ್ನಿರಿ.

ಬನ್ಯಾಬಾಪು—ಜಿಜ್ಞಾಸೆಯು ಭೀತಿಗಿಂತ ಪ್ರಭಾವಯುಕ್ತನಾಗಿರುವದು.

ಕೃಷ್ಣಾಜಿಪಂತ—ತಿರುಗಿ ನೀವು ಹೆದರುತ್ತಿರುವಿರಲ್ಲ?

ಬನ್ಯಾಬಾಪು—ನಾನು ಹೆದರುವದಿಲ್ಲ. ಸೇಡಿನ ಭರದಲ್ಲಿ ಸತ್ಯ ಪರಿಸ್ಥಿತಿಯ ಅರಿವು ನಿಮಗಿಲ್ಲ. ಅದನ್ನು ಮಾಡಿ ಕೊಡುವ ಪ್ರಯತ್ನವನ್ನು ಮಾಡುತ್ತಿದ್ದೇನೆ.

ಕೃಷ್ಣಾಜಿಪಂತ-ರಾಜಕಾರದದಲ್ಲಿ ಶಕ್ತಿಗಿಂತ ಯುಕ್ತಿಯ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಳ್ಳಬೇಕಾಗುವದು. ಒಮ್ಮೆ ಕೊಲ್ಹಾಪುರದಿಂದ....ಮೆನ್‌ಸನ್ನನ ಹತ್ತಿರ ಓರ್ವ ಕ್ಯಾಪ್ಟನ್ ಬಂದಿದ್ದುದರ ಜ್ಞಾಪಕವಿದೆಯೆ?

ಬನ್ಯಾಬಾಪು—ಹೌದು ಮುಂದೆ—

ಕೃಷ್ಣಾಪಂತ—ಅವನೇ ಮ್ಯಾಲಕಮ್ಮನ ಜೊತೆಯಲ್ಲಿ ಬಂದಿದ್ದಾನಂತೆ.

ಬನ್ಯಾಬಾಪು—ಇದನ್ನಾರು ನಿಮಗೆ ಹೇಳಿದರು? ಅಲ್ಲದೆ ಅವನದೂ ನಿಮ್ಮದೂ ಒಳ್ಳೆಯ ಪರಿಚಯವಿದೆ.

ಕೃಷ್ಣಾಜಿಪಂತ—ಪರಿಚಯದ ಉಪಯೋಗವನ್ನು ಮಾಡಿಕೊಳ್ಳಬೇಕೆಂದು ನಿರ್ಧರಿಸಿದ್ದೇನೆ. ಇಂದೇ ಅವನ ಭೆಟ್ಟಿಯನ್ನು ತೆಗೆದುಕೊಂಡು ಮುಂದೆ ಮಾಡಬೇಕಾದ್ದನ್ನು ನಿರ್ಧರಿಸಿ ಬಿಡುತ್ತೇನೆ.

ಬನ್ಯಾಬಾಪು—(ವಿಷಾದದಿಂದ ನಕ್ಕು) ನಿಮ್ಮ ಪ್ರಯತ್ನ ಕಂಡು ಮರುಕಪಡಬೇಕೊ, ವಿಷಾದಪಡಬೇಕೊ ಇದೇ ನನಗೆ ತಿಳಿಯದು.

ಕೃಷ್ಣಾಜಿಪಂತ—ಬನ್ಯಾಬಾಪು....(ಕೋಪದಿಂದ)

ಬನ್ಯಾಬಾಪು—ಕೋಟೆಯ ಒಳಹೊರಗೆ ಭದ್ರವಾದ ಕಾವಲು ಇರುವದು. ಇರುವೆ ಹೋಗಿ ಬರುವದಕ್ಕೂ ಅಸಾಧ್ಯವಾದ ಪರಿಸ್ಥಿತಿಯಲ್ಲಿ—ನೀವು ಕಿಲ್ಲೆಯಿಂದ ಹೊರಗೆ ಹೋಗುವ ಬಗೆಯೆಂತು? ಕಿಲ್ಲೆಯನ್ನು ಬಿಟ್ಟು ಹೊರಗೆ ಹೋಗುವಾಗ ಮಿತ್ರರೂ ಶತ್ರುಗಳಾಗುವರೆಂಬುದನ್ನು ಮರೆಯಬೇಡಿರಿ.

ಕೃಷ್ಣಾಜಿಪಂತ—ತುಂಬ ಎಚ್ಚರಿಕೆ ವಹಿಸಿ ಕೆಲಸ ಮಾಡುತ್ತಿದ್ದೇನೆ. ನಾವು ಈ ಕಿಲ್ಲೆಯಿಂದ ಹೊರಗೆ ಹೋಗದಿದ್ದರೆ ಈ ಕಿಲ್ಲೆಯಲ್ಲಿ ಬದುಕುವದೂ ಕಠಿಣವಿರುವದು. ಯಾಕಂದರೆ ಸರ್ವಬಗೆಯ ಯುದ್ಧಸನ್ನಾಹದಿಂದ ಮಾಲಕಮ್ ಕೋಟೆಯನ್ನು ಮುತ್ತಿದ್ದಾನೆ. ಯುದ್ಧವೆಂದರೆ ಮರಣದ ನಿಮಂತ್ರಣವೆಂಬುದನ್ನು ಮರೆಯಬೇಡಿರಿ.

ಬನ್ಯಾಬಾಪು—ಮುತ್ತಲಿ! ಆತನಿಗೆ ನಮ್ಮ ಬೆಂಬಲ ಇಲ್ಲದೆ ಹೋದರೆ ಬಂದ ದಾರಿಯಿಂದ ತಿರುಗಿಹೋಗಬಹುದು. ಒಂದು ವೇಳೆ ಮಹಾರಾಜರೊಂದಿಗೆ ಮಾಲಕಮ್ಮನ ಜೊತೆಯಲ್ಲಿ ಯುದ್ಧಮಾಡುವಾಗ ಮರಣಬಂದರೆ ವೀರಸ್ವಗವು ನಮ್ಮ ಪಾಲಿಗೆ ಕಟ್ಟಿಟ್ಟಿರುವದು.

ಕೃಷ್ಣಾಜಿಪಂತ—ವೀರಸ್ವರ್ಗ! ನನಗಂತೂ ಅದು ಬೇಡ! ನನಗೆ ಅಪಮಾನದ ಸೇಡು ತೀರಿಸಿಕೊಳ್ಳುವದಿದೆ. ನರಗುಂದದ ರಾಜ್ಯವನ್ನು ದೊರೆಸಹಿತ ಬುಡಮೇಲು ಮಾಡುವದಿದೆ....! ನನ್ನ ಮಗ ನರಗುಂದದ ಸಿಂಹಾಸನದ ಮೇಲೆ ಕುಳಿತುಕೊಂಡುದುದನ್ನು ನೋಡುವದಿದೆ ನನಗೆ! ಇದೇ ನನ್ನ ಪಾಲಿಗೆ ಸ್ವರ್ಗ!

ಬನ್ಯಾಬಾಪು—ನೀವಿಟ್ಟುಕೊಂಡ ಭರವಸೆಯೆ ನಿಮ್ಮನ್ನು ಹಾಳುಮಾಡಬಾರದು. ಕೃಷ್ಣಾಜಿಪಂತ, ಹರಿವೆ ಎಷ್ಟೇ ದೊಡ್ಡದಿದ್ದರೂ ಸಾಗರ ಅದರಲ್ಲಿ ಹಿಡಿಸದು!

ಕೃಷ್ಣಾಜಿಪಂತ—ಬನ್ಯಾಬಾಪು....( ಕೋಪದಿಂದ )

ಬನ್ಯಾಬಾಪು—ಅಪಮಾನದ ಮುಯ್ಯವನ್ನು ಅವಿಚಾರದಿಂದ ತೀರಿಸಿಕೊಂಡರೆ ಅದರಲ್ಲಿ ಪಶುತ್ವವುಂಟು! ಸೇಡು ತೀರಿಸಿಕೊಳ್ಳುವ ಹಂಬಲವನ್ನು ಬಿಟ್ಟು ಬಿಡಿರಿ! ನರಗುಂದದ ಸಿಂಹಾಸನವನ್ನು ಮತ್ತು ದೊರೆಯನ್ನು ಸಂರಕ್ಷಿಸುವದಕ್ಕೆ ಮುಂದಾಗಿ ಬನ್ನಿರಿ.

ಕೃಷ್ಣಾಜಿಪಂತ—ನಿಮ್ಮಂತಹ ಪುಕ್ಕರಿಂದ ರಾಜಕಾರಣವೆಂದಿಗೂ ಆಗದು. ರಾಜಕಾರಣಿಗಳಿಗೆ ವಜ್ರದಂತಹ ಹೃದಯಬೇಕು.

ಬನ್ಯಾಬಾಪು—ನಾನು ಅಂಜುತ್ತಿರುವುದು ಈ ಫಿರಂಗಿಗಳಿಗಾಗಿ ಅಲ್ಲ! ನಾವು ಬಗೆಯುತ್ತಿರುವ ದ್ರೋಹಕ್ಕಾಗಿ!

( ಮುಂದುವರಿದುದು )

# ಹಳ್ಳಿಯ ಮಹಿಳೆಯರು ಹಾಗೂ ಉಳಿತಾಯ

**ಲೇ : ಭವಾನಿದೇವಿ. ಎಸ್. ಹೆಗಡೆ ಉಳಿಗೆರೆ**

ನಮ್ಮ ದೇಶದ ಆರ್ಥಿಕ ಪರಿಸ್ಥಿತಿಯು ಸ್ವತಂತ್ರಾನಂತರದ ಹನ್ನೆರಡು ವರ್ಷಗಳಲ್ಲಿ ಹೇಳಿಕೊಳ್ಳುವಷ್ಟು ಸುಧಾರಿಸಿರುವುದಿಲ್ಲ. ನಮ್ಮ ದೇಶ ಹಣಕಾಸಿನ ಒಂದು ವಿಚಾರದಲ್ಲಿ ಶ್ರೀಮಂತ ರಾಷ್ಟ್ರಗಳ ಮರೆ ಹೋಗಬೇಕಾಗಿದೆ. ಇದು ನಮ್ಮ ದೇಶದ ಘನತೆಗೆ ತೀರಾ ಸಣ್ಣತನದ್ದಾದವಿಷಯ. ನಾವು ನಮ್ಮ ಆರ್ಥಿಕ ಪರಿಸ್ಥಿತಿಯಲ್ಲಿ ಸ್ವಾವಲಂಬಿಗಳಾಗಬೇಕು. ನಮ್ಮ ಜೀವನ ಮಟ್ಟ ಸುಧಾರಿಸಬೇಕು. ನಾವು ಕೂಡ ಇತರ ದೇಶದವರ ಹಾಗೆ ಸುಖಸಂತೋಷವಾಗಿ ಬಾಳಬೇಕು. ಅದಕ್ಕಾಗಿ ಉಳಿತಾಯ ಮಾಡಬೇಕು. ನಮ್ಮ ಮಹಾ ಮಹಾ ನಾಯಕರು ಜನತೆಯ ಮುಂದೆ ಹೋದ ಹೋದಲ್ಲಿ " ಉಳಿತಾಯ ಮಾಡಿ" "ಉಳಿತಾಯ ಮಾಡಿ" ಎಂದು ಕೂಗುತ್ತಾರೆ. ಅದಕ್ಕಾಗಿ ವಿಶೇಷ ಅಬ್ಬಂದಿಗಳನ್ನು ನೇಮಿಸಿ ದೇಶದ ಮೂಲೆಯಲ್ಲಿಯೂ ಉಳಿತಾಯ ಯೋಜನೆ ಪ್ರಚಾರ ಕೈಗೊಂಡಿದ್ದಾರೆ. ಪ್ರಸ್ತುತ ನಮ್ಮ ಲೇಖನವು ಹಳ್ಳಿಯ ಮಹಿಳೆಯರು ತಮ್ಮ ನಿತ್ಯ ಜೀವನದಲ್ಲಿ ಉಳಿತಾಯವಮಾಡಬಹುದಾದ ರೀತಿಯನ್ನು ಕುರಿತದ್ದಾಗಿರುತ್ತದೆ.

ಸಾಮಾನ್ಯವಾಗಿ ಹಳ್ಳಿಯ ಮಹಿಳೆಯರು ಉಳಿತಾಯವನ್ನು ಅನೇಕ ರೀತಿಯಲ್ಲಿ ಮಾಡಬಹುದಾದರೂ, ನಾನಿಲ್ಲಿ ಕೇವಲ ಐದು ವಿಷಯ ಕುರಿತು ಬರೆಯುತ್ತೇನೆ.

೧) ವಾಯಿಲ್ ಸೀರೆಗಳು:— ಇಂದು ಫ್ಯಾಶನ್‌ಯುಗ ಫ್ಯಾಶನ್ನಿಗಾಗಿ ಧನಿಕರು, ಮಧ್ಯಮವರ್ಗದವರು, ಬಡವರು, ಪಟ್ಟಣಿಗರು, ಹಳ್ಳಿಗರು, ವಿಪರೀತವಾಗಿ ವೆಚ್ಚಮಾಡುತ್ತಾರೆ. ಮೊನ್ನೆ ಮೊನ್ನೆಯವರೆಗೆ ಕೇವಲ ಪೇಟೆಯಲ್ಲಿದ್ದ ಫ್ಯಾಶನ್ ಈಗೀಗ ಹಳ್ಳಿಗಳತ್ತ ಭರದಿಂದ ಹರಡುತ್ತಿದೆ. ಒಂದು ಕಾಲದಲ್ಲಿ ಉರಟು ಸೀರೆಯನ್ನು ಉಟ್ಟುಕೊಂಡು ಕೆಲಸ ಮಾಡುತ್ತಿದ್ದ ಹಳ್ಳಿಯ ಮಹಿಳೆಯರಿಂದು ವಾಯಿಲ್ ಸೀರೆಗಳನ್ನು ಉಡುತ್ತಾರೆ. ವರ್ಷದಲ್ಲಿ ಅವರು ಎರಡು ಒರಟು ಸೀರೆಯನ್ನು ಉಡುವವರು, ಇಂದು ಭಾರಿ ಬೆಲೆಯ ಆರುವಾರು ವಾಯಿಲ್ ಸೀರೆಗಳನ್ನು ಉಡಲು ತೊಡಗಿದ್ದಾರೆ. ಇಲ್ಲಿ ನಾಲ್ಕು ಸೀರೆಯ ಬೆಲೆಯನ್ನು ಹೆಚ್ಚಾಗಿ ಖರ್ಚು ಮಾಡಿದಂತಾಗುವುದಲ್ಲವೇ ? ಹಾಗಾದರೆ ಅವರು ವಾಯಿಲ್ ಸೀರೆಗಳನ್ನೂ ಉಡಬಾರದೇ ? ಹಾಗೆಂದೂ ನಾನು ಹೇಳುವುದಿಲ್ಲ. ವಿಶೇಷ ಸಭೆ, ಸಮಾರಂಭ, ಹೊರ ಪಯಣಗಳಲ್ಲಿ ಖಂಡಿತ ಉಪಯೋಗಿಸಲಿ, ದಿನವೂ ಉಡುವುದರಿಂದ ವಾಯಿಲ್ " ಧೂಳು " ಆಗುವ ಹೆದರಿಕೆಯಿಂದ, ಮಾಡುವ ಕೆಲಸವೂ ಹಾಗೇ ಉಳಿಯುತ್ತದೆ. ಹಾಗೂ ಖರ್ಚು ವಿಪರೀತ ಬರುತ್ತದಲ್ಲವೇ ?

೨) ಸಾಬೂನುಗಳು:— ಹಳ್ಳಿಯ ಮಹಿಳೆಯರು ಸಾಬೂನಿಗಾಗಿ ವಿಶೇಷವಾಗಿ ಖರ್ಚು ಮಾಡುತ್ತಿದ್ದಾರೆ. ಧನಿಕರಂತೆ ಬಡವರೂ ಹೇರಳವಾಗಿ ಸಾಬೂನಿಗಾಗಿ ಖರ್ಚು ಮಾಡುತ್ತಾರೆ. ಇದಕ್ಕೆ ಎರಡು ಕಾರಣಗಳು ೧) ಸಾಬೂನು ಅಗ್ಗವಾಗಿ ಸಿಗುವುದು. ೨) ಫ್ಯಾಶನೇಬಲ್ ಉಡುವುಗಳು. ವಾಯಿಲ್ ಸೀರೆಗಳನ್ನುಡುವ ನಮ್ಮ ಮಹಿಳೆಯರು ಅದನ್ನು ಚೊಕ್ಕಟವಾಗಿ ಇಟ್ಟುಕೊಳ್ಳಲು ಸಾಬೂನುಗಳನ್ನು ಉಪಯೋಗಿಸುತ್ತಾರೆ. ಎಷ್ಟೇ ಸಾಬೂನುಗಳು ಅಗ್ಗವಾಗಿ ಸಿಗುತ್ತವೆ ಎಂದರೂ, ವರ್ಷದ ಅಂತ್ಯದಲ್ಲಿ ಅದಕ್ಕಾಗಿ ಖರ್ಚಾಗುವದನ್ನೂ ಲೆಕ್ಕವಿಟ್ಟು ನೋಡಿದರೇನೇ ತಿಳಿಯುತ್ತದೆ. ಹಳ್ಳಿಯ ಪ್ರತಿಯೊಂದು ಮನೆಯಲ್ಲಿ ಒಬ್ಬೊಬ್ಬ ಮಹಿಳೆಗೆ ಒಂದೊಂದು ಸಾಬೂನು ಡಬ್ಬಿ ಇರುವದನ್ನೂ ನಾನು ಸಾಮಾನ್ಯ ಎಲ್ಲಾ ಕಡೆಗಳಲ್ಲಿಯೂ ನೋಡುತ್ತೇನೆಂದರೆ ವಾಚಕರು ಆಶ್ಚರ್ಯಪಡಬಹುದು. ನೀವೇ ಈಗ ಯೋಜಿಸಿ, ಖರ್ಚು ಎಷ್ಟು ಬರುವುದು ಎನ್ನುವದನ್ನು. ಈ ಖರ್ಚನ್ನು ಅವರು ಸುರಳೀತವಾಗಿ ಉಳಿಸಬಹುದಾದಉಪಾಯವೆಂದರೆ ಹಳ್ಳಿಗಳಲ್ಲಿ ಸೀಗೆಕಾಯಿ, ಅಂಟಾಳಕಾಯಿ, ಹೇರಳವಾಗಿ ಸಿಗುತ್ತವೆ. ಅವುಗಳನ್ನು ಒಣಗಿಸಿಹಿಟ್ಟು ಮಾಡಿದಿನವೂ ಮೈಗೆ ಹಚ್ಚಿ ಸ್ನಾನಮಾಡಲು, ಬಟ್ಟೆ ಒಗೆಯಲು ಉಪಯೋಗಿಸಬಹುದು. ಸೀಗೆಕಾಯಿ, ಅಂಟಾಳಕಾಯಿಯ ಹಿಟ್ಟನ್ನು ದಿನವೂ ಉಪಯೋಗಿಸುವದರಿಂದ ಸಾಬೂನಿನ ವಿಶೇಷ ಖರ್ಚನ್ನು ಉಳಿಸಿ ಅಗತ್ಯ ಬಿದ್ದಾಗ

ಮಾತ್ರ ಸಾಬೂನನ್ನು ಉಪಯೋಗಿಸುವುದರಲ್ಲಿ ಹೇಳಿಕೊಳ್ಳುವ ಯಾವ ತೊಂದರೆಯೂ ಇಲ್ಲ.

೩) ಟೂತ್‌ಪೇಸ್ಟಗಳು:— ಇಂದು ಹಳ್ಳಿಯ ಆಧುನಿಕ ಆಡಂಬರ ಅಕ್ಕಂದಿರು ತಮ್ಮ ಹಲ್ಲುಗಳನ್ನು ಚೆಂದವಾಗಿ ಇಟ್ಟು ಕೊಳ್ಳಲು ಟೂತ್‌ಪೇಸ್ಟಗಳನ್ನೂ, ಬ್ರಶಗಳನ್ನೂ ಬಳಸುತ್ತಿದ್ದಾರೆ. ಕೆಲವರಂತೂ ದಿನಕ್ಕೆ ಎರಡು ಸಲ ಹಲ್ಲು ಉಜ್ಜಿಕೊಳ್ಳುತ್ತಾರೆ. ಬೆಳಿಗ್ಗೆ ಎದ್ದ ಕೂಡಲೇ ಒಂದು ಸಲ, ಜಳಕ ಮಾಡುವಾಗ ಒಂದು ಸಲ. ಹೀಗಾಗಿ ಒಬ್ಬ ಮಹಿಳೆಗೆ ಒಂದು ಪೇಸ್ಟ ಕೇವಲ ಇಪ್ಪತ್ತು ದಿನಗಳಿಗೆ ಸಾಲುವುದಿಲ್ಲ. ಸರಾಸರಿ ತಿಂಗಳಿಗೊಂದು ಪೇಸ್ಟ ಸಾಲುವದಾದರೂ, ಅದಕ್ಕಾಗಿ ವರುಷಕ್ಕೆ ಹನ್ನೆರಡು ರೂಪಾಯಿಗಳನ್ನು ಖರ್ಚು ಮಾಡಬೇಕಾಗುತ್ತದೆ. ಇನ್ನೂ ಬ್ರಶ್‌ಗಳಿಗೆ ಪ್ರತ್ಯೇಕ! ಈ ಬಾಬಿನ ಖರ್ಚನ್ನು ನಮ್ಮ ಅಕ್ಕಂದಿರು ಧಾರಾಳವಾಗಿ ಉಳಿತಾಯ ಮಾಡಬಹುದು. ಹಳ್ಳಿಗಳಲ್ಲಿ ಹಲ್ಲು ಉಜ್ಜುವುದಕ್ಕೆ ನೈಸರ್ಗಿಕ ಸಾಧನಗಳಿವೆ. ಬೇವಿನ ಮರಗಳು, ಮಾವಿನ ಮರಗಳು, ನೇರಲ ಮರಗಳು ವಿಪರೀತವಾಗಿ ಒಂದಲ್ಲದಿದ್ದರೆ ಒಂದು ಮರ ಸಮೀಪದಲ್ಲಿ ಇದ್ದೇ ಇರುತ್ತದೆ. ಅವುಗಳ ಕಡ್ಡಿಯನ್ನು ಅಗಿದು ಹಲ್ಲು ಉಜ್ಜಿಕೊಳ್ಳಬಹುದು. ಇದರಿಂದ ವಸಡುಗಳೂ ಗಟ್ಟಿಯಾಗಿ, ಹಲ್ಲುಗಳೂ ಬಿಳುಪಾಗಿದ್ದುಕೊಂಡು, ಬಹುಕಾಲ ಗಟ್ಟಿಯಾಗಿರುತ್ತವೆ. ನೈಸರ್ಗಿಕ ಸಾಧನಗಳನ್ನೂ ಉಪಯೋಗಿಸದೆ, ಕೃತಕ ಸಾಧನಕ್ಕೆ ಮಾರುಹೋಗಿ, ಖರ್ಚನ್ನು ಹೆಚ್ಚಿಸಿಕೊಂಡು, ಹಲ್ಲುಗಳನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ ನನ್ನ ಹಳ್ಳಿಯ ಅಕ್ಕಂದಿರು! ನನಗಿದನ್ನು ನಾನು ಓದುತ್ತಿದ್ದಾಗ 'ಪ್ರಪಂಚ ಆರೋಗ್ಯಸಂಸ್ಥೆಯ' ಸಾಗರಡಿವಿಜನ್ನಿನ ಒಬ್ಬ ಇಂಗ್ಲ ಮಹಿಳಾ ಡಾಕ್ಟರರು ಹೇಳಿದ್ದರು. ಅಂದಿನಿಂದ ನಾನು ನೇರಳೇ ಕಡ್ಡಿ, ಮಾವಿನ ಕಡ್ಡಿಯನ್ನೇ ಉಪಯೋಗಿಸುತ್ತಿದ್ದೇನೆ. ಹೀಗಾಗಿ ನನಗೆ ಟೂತ್‌ಪೇಸ್ಟಿನ ಹನ್ನೆರಡು ರೂಗಳ ಉಳಿತಾಯವಾಗಿದೆ. ಎಲ್ಲರಂತೆ ನನ್ನ ಹಲ್ಲುಗಳೂ ಬಿಳುಪಾಗಿ ಗಟ್ಟಿಯಾಗಿವೆ.

೪) ಹೇರ್‌ಪಿನ್ನುಗಳು:— ಹೇರ್‌ಪಿನ್ನುಗಳನ್ನು ಹಾಕುವುದು ಭಾರತ ಸಂಪ್ರದಾಯವಲ್ಲವೆಂದು ನನ್ನ ಅಭಿಪ್ರಾಯ. ಇದು ಪಾಶ್ಚಾತ್ಯ ಪದ್ಧತಿಯ ಒಂದು ಅನುಕರಣದಿಂದ ಬಂದದ್ದು. ಪಾಶ್ಚಾತ್ಯ ಮಹಿಳೆಯರ ತಲೆ ಕೂದಲು ಮೊಟಕು ಮೊಟಕಾಗಿರುತ್ತದೆ. ಅದನ್ನವರಿಗೆ ಹೆರಳು ಹಾಕಿಕೊಳ್ಳುವುದಕ್ಕಾಗಲೀ, ತುರುಬು ಹಾಕಿಕೊಳ್ಳುವುದಕ್ಕಾಗಲೀ ಬರುವುದಿಲ್ಲ. ಹಾಗೇ ಇರಿಸಿಕೊಳ್ಳುವುದರಿಂದ ಅವರಿಗೆ ತೊಂದರೆಯಾಗುತ್ತದೆ. ಅದಕ್ಕಾಗಿ ಆ ತೊಂದರೆಯನ್ನು ತಪ್ಪಿಸಿಕೊಳ್ಳಲು ಈ ಹೇರ್‌ಪಿನ್ನುಗಳನ್ನು ಉಪಯೋಗಿಸುತ್ತಾರೆ. ಅದನ್ನು ನೋಡಿ ನಮ್ಮ ಮಹಿಳೆಯರೂ ಉಪಯೋಗಿಸುತ್ತಿರಬೇಕು. ಆದರದು ನಮಗೆ ಅಗತ್ಯವೇ? ನಾವು ನಮ್ಮ ತಲೆ ಕೂದಲನ್ನು ಹೆರಳುಹಾಕಿಯೇ ತುರುಬು ಹಾಕಿಯೇ ನಿಯಂತ್ರಣದಲ್ಲಿಟ್ಟು ಕೊಳ್ಳಬಹುದು. ಆದರಿದನ್ನು ನನ್ನ ಅಕ್ಕಂದಿರು ಹೇರಳವಾಗಿ ಉಪಯೋಗಿಸುತ್ತಿದ್ದಾರೆ. ಇಷ್ಟೇ ಅಲ್ಲ. ಅದನ್ನು ಉಪಯೋಗಿಸದವರನ್ನು ನಿಕೃಷ್ಟವಾಗಿ ಕಾಣುತ್ತಾರೆ. ಈ ಹೇರ್‌ಪಿನ್ನುಗಳು ಸಣ್ಣ ವಸ್ತುಗಳಾಗಿರುವುದರಿಂದ ಕಳೆದುಹೋಗುವದು ಬಹಳ. ಪುನಃ ಪುನಃ ಹಣಕೊಟ್ಟು ಕೊಳ್ಳಬೇಕಾಗುತ್ತದೆ. ಹೀಗೆ ವರ್ಷದಲ್ಲಿ ಒಬ್ಬೊಬ್ಬ ಮಹಿಳೆ ಹೇರ್‌ಪಿನ್ನುಗಳಿಗಾಗಿ ನಾಲ್ಕಾರು ರೂಗಳನ್ನು ಖರ್ಚು ಮಾಡುತ್ತಾಳೆ. ಈ ಅನುಕರಣ ಪದ್ಧತಿಯನ್ನು ಬಿಟ್ಟುಕೊಡುವುದರಿಂದ ಆ ನಾಲ್ಕಾರು ರೂಗಳನ್ನು ನಮ್ಮ ಹಳ್ಳಿಯ ಮಹಿಳೆಯರು ಉಳಿತಾಯ ಮಾಡಬಹುದಲ್ಲವೇ?

೫) ರಿಬ್ಬನ್ನುಗಳು:— ಹಳ್ಳಿಯ ಮಹಿಳೆಯರಿಂದು ನಗರದ ಮಹಿಳೆಯರಂತೆ ಬಣ್ಣ ಬಣ್ಣದ ರಿಬ್ಬನ್ನುಗಳನ್ನು ಬಳಸಹತ್ತಿದ್ದಾರೆ. ನಗರದ ಮಹಿಳೆಯರಿಗಿದು ಅನಿವಾರ್ಯವಿದೆ. ಏಕೆಂದರೆ ಅವರಿಗೆ ಹೆರಳನ್ನು ಬಿಗಿಯಲು ನಾರು, ಬಳ್ಳಿಯ ಅನುಕೂಲತೆ ಇರವುದಿಲ್ಲ. ಹಳ್ಳಿಯ ಮಹಿಳೆಯರಿಗೆ ಬೇಕಾದ ಹಾಗೆ ತಮ್ಮ ಹೆರಳನ್ನು ಬಿಗಿಯಲು ಅನುಕೂಲವಾಗಿ ನಾರು, ಬಳ್ಳಿ ಸಿಗುತ್ತವೆ. ಆದರೆ ಅವರು ಆ ಬಗೆಯ ಅನುಕೂಲತೆಗಳನ್ನೂ ಉಪಯೋಗಿಸಿಕೊಳ್ಳದೆ ರಿಬ್ಬನ್ನುಗಳನ್ನೂ ಉಪಯೋಗಿಸುತ್ತಾರೆ. ಆಚೆ ಮನೆ ರಂಗಕ್ಕ ದಿನವು ಬಣ್ಣ ಬಣ್ಣದ ರಿಬ್ಬನ್ನು ಹಾಕಿಕೊಳ್ಳುವಳೆಂದು ಈಚೆಮನೆ ಗೋದಕ್ಕನೂ ಬಣ್ಣ ಬಣ್ಣದ ರಿಬ್ಬನ್ನುಗಳನ್ನು ಉಪಯೋಗಿಸುತ್ತಾಳೆ. ನಮ್ಮ ಹಳ್ಳಿ ಮಹಿಳೆಯರು ರಿಬ್ಬನ್ನುಗಳನ್ನು ಹಾಕಿಕೊಳ್ಳಬಾರದೆಂದಲ್ಲ. ವಿಶೇಷಸಭೆ, ಸಮಾರಂಭ, ಹೊರ ಪಯಣದಲ್ಲಿ ಉಪಯೋಗಿಸಲೇ ಬೇಕು. ಅದಿಲ್ಲದೆ ಪ್ರತಿದಿನ ರಿಬ್ಬನ್ನು ಹಾಕಿ ಹೆರಳು ಹಾಕುವದರಿಂದ ವಿಪರೀತ ಖರ್ಚು ಬರುತ್ತದೆ. ಈ ತರದಿಂದ ನಡೆದಲ್ಲಿ ನಮ್ಮ ಗೌರವವೂ ಉಳಿಯುತ್ತದೆ. ಉಳಿತಾಯವೂ ಆಗುತ್ತದಲ್ಲವೇ?

ನಮ್ಮ ಹಳ್ಳಿಗಳ ಮಹಿಳೆಯರ ದೃಷ್ಟಿ ಈಗೀಗ ಅನುಕರಣೆಯತ್ತ ಹರಿಯುತ್ತಿದೆ. ಆದಾದರೂ ಉದಾತ್ತ ಅನುಕರಣೆಯಲ್ಲ. ತಮ್ಮನ್ನೂ ಮಕ್ಕಳನ್ನೂ ಅಧಃಪತನಕ್ಕೇ ಇಳಿಸು

ವಂತಹ ಅನುಕರಣೆ. ಅದರಲ್ಲಿಯೂ ಇಂದಿನ ಸಿನೀಮಾಗಳು ಈ ಹಳ್ಳಿಗಳ ಮುಗ್ಧ ಮಹಿಳೆಯರ ಮೇಲೆ ವಿಪರೀತ ಪರಿಣಾಮ ಮಾಡುತ್ತವೆ. "ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವು" ಎನ್ನುವ ಗಾದೆಮಾತಿನಂತೆ ನಮ್ಮ ಹಳ್ಳಿಯ ಮಹಿಳೆಯರು ಸಿನಿಮಾದಲ್ಲಿಯ ಶೃಂಗಾರ ವೈಭವದ ತಾರೆಯರಂತೆ ಇರಲು ಎಷ್ಟು ಬೇಕೋ ಅಷ್ಟು ಹಣವನ್ನು, ಸಮಯವನ್ನು ಹಾಳುಮಾಡುತ್ತಾರೆ. ಅಂತಾಗಿಯೇ ನಾನು ಮೇಲೆ ಬರೆದ ಐದು ಸಾಧನಗಳಿಗೆ ಹಣವನ್ನು ಖರ್ಚುಮಾಡುವದಲ್ಲದೆ, ಲಿಪಸ್ಟಿಕ್, ಸ್ನೋ, ಹೆರಾಯಿಲ್ಲುಗಳು, ಮುಂತಾದವುಗಳಿಗೂ ಖರ್ಚು ಮಾಡುತ್ತಿದ್ದಾರೆ. ಕೇವಲ ದೇಹಶೃಂಗಾರಕ್ಕೇನೇ ಇಷ್ಟೆಲ್ಲಾ ಭಾರಿ ಬೆಲೆಯ ವಸ್ತುಗಳನ್ನು ಕೊಂಡು ಹಣವನ್ನು ನೀರಿನಂತೆ ಹರಿಸುವದರಲ್ಲಿ ಹೇಳಿಕೊಳ್ಳುವ ಯಾವ ಘನತೆಯೂ ಇಲ್ಲ. ಅದೇ ಹಣವನ್ನು ವಿಧಾಯಕವಾದ ರೀತಿಯಲ್ಲಿ ಅಂದರೆ ತಮ್ಮ ಶಿಕ್ಷಣಕ್ಕಾಗಿಯೇ, ಮಕ್ಕಳಶಿಕ್ಷಣಕ್ಕಾಗಿಯೇ, ಉತ್ತಮವಾದ ಸಾಹಿತ್ಯವನ್ನು ಕಲಿಹಾಕುವದಕ್ಕೋ, ಉಪಯೋಗಿಸಿಕೊಂಡರೆ ಜೀತದ ಮೌಲ್ಯವು ವಿಧಾಯಕವಾದ ರೀತಿಯಲ್ಲಿ ವಿನಿಯೋಗವಾಗಿ, ತಮ್ಮ ಜೀವನವು ಸುಧಾರಿಸಿ ಮುಂದಿನ ಮಕ್ಕಳ ಜೀವನವೂ ಪಾವನವಾಗಿ, ತಮ್ಮ ಉದ್ಧಾರದ ಮುಖೇನ ರಾಷ್ಟ್ರದ ಉದ್ಧಾರ ಮಾಡಬಹುದು. ಇದಕ್ಕೆಲ್ಲ ನಮ್ಮ ಮಹಿಳೆಯರಲ್ಲಿ ಉಳಿತಾಯದ ಮನೋಭಾವನೆ ಮೂಡಬೇಕು. ಆ ಭಾವನೆ ಕಾರ್ಯರೂಪಕ್ಕಿಳಿಯಬೇಕು.

॥ ಸತ್ಯಂ ಶಿವಂ ಸುಂದರಂ ॥

## ಆ ಜೀವಿ

ಲೇಖಕ : ಟಿ. ವೆಂಕಟರಾಮನ್ನ ಕುಮುಠಾ

ಎಳಬಿಸಿಲು ಸುಂಯ ಎಂದು ನಿನಾದ ಮಾಡುತ್ತಮಂದ ಮಾರುತನು ಸಾಗುತ್ತಿದ್ದನು. ಸೂರ್ಯನು ತನ್ನ ಹೆಂಡತಿಯನ್ನು ಕಳ್ಳ ಹಾದಿಯಿಂದ ಹಿಡಿಯ ಲೆತ್ನಿಸುವಂತೆ ಮೋಡಗಳಲ್ಲಿ ಮರೆ ಮಾಡಿ ವೇಗದಿಂದ ಸಾಗಿದ್ದನು. ಕೆನ್ನೀರಲ್ಲಿ ಓಕುಳಿಯಾಡಲು ಹೆಂಡತಿಯನ್ನು ಕರೆತರಲು ನೃತ್ಯ ಮಾಡುತ್ತ ಸಾಗಿದ್ದನು. ಇದನ್ನು ನೋಡಿ ಪುಲಕಿತವಾದ ಸಾಗರವು ಧರೆಗೆ ಆಮಂತ್ರಿಸುವಂತೆ ಉಕ್ಕುಕ್ಕಿ ಮುಂದೆ ಬರುತ್ತಿತ್ತು. ಆದರೆ ಅದರ ಕೂಗಿಗೆ ಯಾರೂ ಓ ಅನ್ನದ್ದರಿಂದ ಕೋಪಗೊಂಡು ಭೋರ್ಗರೆಯುತ್ತ ಹಿಂದೆ ಸಾಗುತ್ತಿತ್ತು. ಅಷ್ಟಮಿಯ ಚಂದ್ರನು ಬೆಳ್ಳಂ ಬೆಳಗಿ ಆಕಾಶವೇರಿದ್ದನು. ಅದೇ ಆಗ ಆ ಕಿರುಗೆಂಪು ಭಾನಿನ ಬೆಳಕಿನಲ್ಲಿ ಒಬ್ಬ ಭಿಕ್ಷುಕಿ ನಡೆದಿದ್ದಳು. ಎಲ್ಲಿಗೆ ? ಏಕೆ.... ? ಗೊತ್ತಿಲ್ಲ.

ಆಕೆಗೆ ಹಿಂದಿನ ದಿನದ ನೆನಪು ಮರುಕಳಿಸುತ್ತಿರಬೇಕು. ಹಾಸಿಗೆ ಹಿಡಿದ ಪತಿ ಇಂದಿಗಾಗಿಯೂ ಅಲ್ಲಿಂದ ಏಳಲಿಲ್ಲ. ಊರ ಸಾಬಿ ಕರಕೊಂಡು ಹೋದ ಮಗನು ಆಕೆಯನ್ನು ಸ್ವರ್ಗದಿಂದಲೋ ನರಕದಿಂದಲೋ ಕರೆಯುತ್ತಿರಬೇಕು.

ಬಾಗಿದ ಬೆನ್ನು, ಸುಕ್ಕು ಬಿದ್ದ ಗಲ್ಲ, ನಡೆಯಲಾರದ ಜೀವ. ಒಳನಟ್ಟ ಕಣ್ಣು, ಕೈಯಲೊಂದು ಕೋಲು, ಮೀನ ಬಲೆಯಂತಿರುವ ಹರಕು ಸೀರೆಯ ತುಂಡು, ಮೋರೆಯ ಮೇಲೆ ಅಸಹನೀಯ ದುಃಖ, ಕೆದರಿದ ಕೂದಲು ಗಾಳಿಗೆ ಓಡುತ್ತಿತ್ತು. ಗುಡ್ಡವು ಹುಚ್ಚೆದ್ದು ಆಕೆಯನ್ನು ಮುಂದೂಡುವಂತಿತ್ತು.

ಆಕೆಯು ತನ್ನ ಮಾನವನ್ನೆಲ್ಲ ಮೂರು ಕಾಸಿಗೆ ಮಾಡಿ ಬೀದಿಯಿಂದ ಬೀದಿಗೆ ಸಾಗುತ್ತಿದ್ದಳು. ಆದರೆ ಆವಳ ದುರ್ದೈವ ಏನೋ ಅರಹೊಟ್ಟೆ. ದಿನಾಲು ಭಿಕ್ಷೆ ನೀಡುವ ಮಲ್ಲಪ್ಪ ಸೆಟ್ಟಿ ಅಂದು ಅಂಗಡಿಯಲ್ಲಿರಲಿಲ್ಲ. ಬಿಕ್ಷುಕಿ "ಬಾಬಾ ಬಿಕ್ಷಾ" ಎಂದಳು ಅಲ್ಲಯವ ಬಿರುಗಣ್ಣಿನಿಂದ ಹುಬ್ಬ ಗಂಟಿಕ್ಕಿ ತನ್ನ ದೃಷ್ಟಿ ಇತ್ತ ಹೊರಳಿಸಿದನು. ಬೆಚ್ಚಿಬಿದ್ದನೋ ಏನೋ "ತೊಲಗಾಚೆ" ಎಂದು ಗದರಿಸಿದನು. ಆ ಭಿಕ್ಷುಕಿ ಹಾರಿ....ಹಾರಿ....ಭಿಕ್ಷಾ ಇಲ್ಲ.......ವೇ ? ಎಂದು ಬಳಿಯಲ್ಲಿಯ ಬಾಗಿದ ಮರವನ್ನಪ್ಪಿದಳು. ಮಗೂ ಬೀರಾ ಹೋದೆಯಾ—ನನ್ನನ್ನೇಕೆ....ತೊ....ಲ....ಗಿ ಹೋ....ಬಿಗಿದು ಬಂದ ಕಂಠದಿಂದ ಭಿಕ್ಷುಕಿ ಏನೋ ಯೋಚಿಸಿದಳು. ಆಕೆ ಪತಿಯನ್ನು ಸ್ಮರಿಸುತ್ತಿರಬೇಕು. ಓ ಅವರೇ ಹಾಸಿಗೆಯಲ್ಲಿ ಐಕ್ಯ. ಭೂತಾಯೇ ನಾನೂ ನಿನಗೆ ಭಾರವಾದೆನೇ ? ಇಲ್ಲ ಇಲ್ಲ ಇಲ್ಲ ನಿನ್ನನ್ನೇ ಸೇರುವೆ. ಎಂದೇ ಗುಡ್ಡದ ತುದಿಯನ್ನು ಮುಟ್ಟಿದಳು. ಆಕೆಗೆ ಆ ಕದಡಿದ ಕರಿಗಪ್ಪು ನೀರಿನಲ್ಲಿ ತನ್ನ ಗಂಡನು ಹಾಸಿಗೆಯಲ್ಲಿ ಹೊರಳುತ್ತ ಏನೋ ಮಾತಾಡಬೇಕೆನ್ನುತ್ತ ಕೈ ಸನ್ನೆ ಮಾಡುತ್ತಿರುವಂತೆ ತೋರಿರಬೇಕು. ಓ ನೀವೇ ನಿಮ್ಮನ್ನೇ ಸೇರುವೆ ಎಂದು ಕೈ ಮುಂದೆ ಚಾಚಿದಳು. ಒಡಕು ಕೋಲು ಕೈ ಜಾರಿತು. ಕಾಲು ಮುಂದೆ ಜಾರಿತು. ಗಾಳಿಯ ವೇಗದಿಂದ ಕೈ ಬೆರಳು ನಡುಗುತ್ತಿದ್ದಂತೆಯೇ ಹಾ........ಅ........ಯ್ಯೋ ಎನ್ನುವಷ್ಟರಲ್ಲಿಯೇ ಭಿಕ್ಷುಕಿ ಸಾಗರದಾಳವನ್ನು ಮುಟ್ಟಿದ್ದಳು.

ಮರುದಿನವೇ ಹೊಟ್ಟೆಯುಬ್ಬಿದ, ಕಣ್ಣು ಮೇಲಕ್ಕೆ ಸಿಕ್ಕಿದ, ಕೈ ಚಾಚಿದ ಹೆಣ. ಕಲ್ಲು ಬಂಡೆಡೆಗೆ ಬಂದು ಅಪ್ಪಳಿಸುತ್ತಿತ್ತು. ಅದೇ ಆ ಜೀವಿ !

 

# ಮದುವೆ ಯಾರದು ?



ಲೇಖಕ: ಎ. ಎನ್. ದೇಸಾಯಿ

ಅಂದು ನಮ್ಮ 'ಬಾಸ್' ರಜೆಯ ಮೇಲಿದ್ದುದರಿಂದ, ಆಫೀಸಿಗೆ ೧೦॥ ಯ ಬದಲು ೧೨ ಘಂಟೆಗೆ—ಯಗ್ಗಳವಾಗಿ ಊಟಮಾಡಿ–ನಿದ್ದೆಯು ತೀವ್ರವಾಗಿ ಬರುತ್ತಿದ್ದರೂ ಝೋಲಿ ಹೊಡೆಯುತ್ತಾ ಆಫೀಸನ್ನು ತಲುಪಿದೆನು. ಕುರ್ಚಿಯ ಮೇಲೆ ಕೂಡುವದೊಂದೇ ತಡ ಟೇಬಲ್ಲಿನ ಮೇಲೆ ಲಗ್ನ ಪತ್ರಿಕೆ ಕಂಡಿತು. ಅದರ ಮೇಲೆ ಸುವರ್ಣಾಕ್ಷರಗಳಿಂದ ಬರೆದ 'ಮದುವೆಯ ಮಮತೆಯ ಕರೆ' ಎಂಬುದು ಕಂಡಿತು. ನನ್ನ ಟೇಬಲ್ಲಿನ ಮೇಲೆ ಅದೂ ಲಗ್ನ ಪತ್ರಿಕೆ ಎಂದು ಕೈಗೆತ್ತಿಕೊಂಡು ಓದಿದೆ. ಮಿತ್ರನೋರ್ವನ ಮಮತೆಯ ಕರೆ. ಮದುವೆ ಆತನ ತಂಗಿಯದು. ಆಮಂತ್ರಣ ಕಳುಹಿದವ ಆತ.

ಬಾಲ್ಯ ಸ್ನೇಹಿತನಾದುದರಿಂದ ಸಲುಗೆ ಇತ್ತು. ಲಗ್ನವೆಂದ ಮೇಲೆ ಬಿಡುವದುಂಟೇ. ಬರೀ ಆ ಕಡೆ ಈ ಕಡೆ ಸಾಲ ಸಹಿತ ಹೊಂದೆ. ಅಂತರವಿಷ್ಟೇ ನಾನು ಸಪತ್ನೀಕನಾಗಿದ್ದಿಲ್ಲ.ಲಗ್ನಪತ್ರಿಕೆಯಲ್ಲಿ ಬರೆದಂತೆ. ಅಕ್ಷೀಕಾಳು ಬಿದ್ದಮೇಲೆ ನಮಗೆ ಕೊಂಚ ಬಿಡುವು ದೊರೆತು ಮಾತನಾಡುತ್ತ ಕುಳಿತೆವು.

ಆತನ ಆಧುನಿಕತೆ ಅದ್ಭುತವಾಗಿತ್ತು. ಹೆಸರು ಬದಲು ಮಾಡಿಸುವದರಲ್ಲಿ ಆತನೊಂದು ಮೇಲುಗೈ. ಅದಕ್ಕೊಂದು ಉದಾಹರಣೆ. ಶ್ರೀ ವಲ್ಲಭ ಅಂತ ಇದ್ದದ್ದು ವಲ್ಲಭನಾಗಿ ವಡಕಣ್ಣನಾಯಿತು. ಸಾಲೆಯಲ್ಲಿ ಇನ್ಸಪೆಕ್ಟರು ಆತನ ಹೆಸರು ಕೇಳಿದಾಗ, ಚುರುಕಾಗಿ ಉತ್ತರವಿತ್ತಿದ್ದ "ಒಡಕ್ಯಾರಿ" ಅಂತ. ನನ್ನ ಗೆಳೆಯನಿಗೆ ಹೆಸರಿನ ಬಗ್ಗೆ ಬಹಳ ಮೋಹ,ಯಾಕೆ ಅಂತ ಕೇಳಿದರೆ ಹನ್ನೆರಡು ಕುಮಾರರ ಹೆಸರು ಹೇಳುತ್ತಾನೆ.

ಅಂದ ಹಾಗೆ ನಾನು ಸಿನೇಮಾ ನೋಡುವದು ಉಗಾದಿಗೆ ಹೋದರೆ ದೀಪಾವಳಿಗೆ ತಪ್ಪದೆ ಹೋಗುವದು. ವರ್ಷಕ್ಕೊಂದು ರೂಪಾಯಿ ಅಂತ ಅನೇಕ ಸಿನೇಮಾ ಭಕ್ತರ ಕೈಯಿಂದ ಮಂಕ್ರೋಚ್ಚಾಟನೆ ಆಗಿದೆ. ನನಗೆ ಯಾವ ನಟನೂ ಗೊತ್ತಿಲ್ಲ. ಅಂದ ಮೇಲೆ ಆತನ ವಯಸ್ಸು ಹೇಳಲು ಹೇಗೆ ಸಾಧ್ಯ. ಗೆಳೆಯರನೇಕರು ಕಡೆಯಿಂದ ದಿಲೀಪ-ಕುಮಾರನ ವಯಸ್ಸೋ, ಮತ್ಯಾರರ ಎರಡನೆಯ ಹೆಂಡತಿಯ ಹುಟ್ಟು ಹಬ್ಬದ ದಿನಾಂಕದ ಬಗ್ಗೆ ನನಗೆ ಕೇಳಿ, ಉತ್ತರ ಸಿಗದೆ ನಿರಾಶರಾಗಿ, ಕ್ರಮೇಣ ಸಿಟ್ಟಿಗೆದ್ದು ಸಾಧ್ಯವಾದಷ್ಟು ಬೈಸಿಕೊಂಡಿದ್ದೇನೆ. ಯಾರ ದೈವವೋ ಗೊತ್ತಿಲ್ಲ. ನನಗೂ ಸಿನೇಮಕ್ಕು ೩೬ ರ ಪರದೆ ನಡುವಿರುವದು ಬಹು ಸತ್ಯವಾದ ಮಾತು.

ಅಂತೂ ಮದುವೆಗೆ ಹೋದೆ. ಮಾತಿಗೆ ಮಾತು ಬಂದಾಗ ವೇಳೆಯು ಅರಿವೇ ಉಳಿಯಲಿಲ್ಲ. ಆತ ಮುಂಬೈಯ ಯಾವುದೋ ಸಿನಿಮಾ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದನೆಂಬುದು ಹಿಂದಿನಿಂದ ಗೊತ್ತಾಯಿತು.

ಆತ ಕೇಳಿದ, "ಈ ಸಲದ ಅವಾರ್ಡ ಯಾರಿಗೆ ಸಿಕ್ಕಿದೆ ಗೊತ್ತಿದೆಯೇನು?" ಎಂದು.

'ನನಗೇನು ಗೊತ್ತು' ಎಂದೆ.

'ಅವಾರ್ಡ ಇದರ ಅರ್ಥವಾದರೂ ಗೊತ್ತಿದೆಯೊ?'

ಅವಾರ್ಡು ಗೊತ್ತಿಲ್ಲವೇ ನನಗೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಯಲ್ಲಿದ್ದಾಗ ಎಷ್ಟೋ ಸಲ ಅದರ ಸಂಬಂಧ ಬಂದಿತ್ತು. ಏಕೆಂದರೆ ನನ್ನ ಅನೇಕ ಸಹಪಾಠಿಗಳಿಗೆ ಸಿಕ್ಕಿತ್ತೆಂದು ಅವರೇ ಹೇಳುತ್ತಿದ್ದರು. ಅದು ಭರ್ಜರಿಯಾಗಿ ಆದರೂ ಯಾವ ಅವಾರ್ಡು ಕೇಳಬೇಕೆಂದು ಕೇಳಿದೆ.

'ಕ್ರಿಕೆಟಿಗೋ, ಹಾಕಿಗೊ..............'

ಇನ್ನೂ ಮಾತು ಬಾಯಿಯಿಂದ ಹೊರಬಿದ್ದಿರಲಿಲ್ಲ ಪೂರ್ಣವಾಗಿ. ಆಗಲೇ ಆತ ಹಚ್ಚುವ ಸಿಗರೇಟನ್ನು ಬಿಟ್ಟು ಕೇಳಿದ.

'ಅಲ್ಲ ರಾಯರೇ, ಅದು ಫಿಲ್ಮಫೇರ ಅವಾರ್ಡ. ನನಗೆ ಗೊತ್ತಿಲ್ಲವೇ?'

'ಊಂ ಹುಂ'

'ಬಹುಶಃ ಹೋದ ಸಲದ ಫಿಲ್ಮಫೇರ ಓದಿರಲಿಕ್ಕಿಲ್ಲ'

ನೋಡಿ, ಮತ್ತೆ ಅದೇ ರಾಗ. ರಾಯರೇ ಅಂತ ಹೇಳಿ ಹೀಗೆ ಅಪಮಾನ ಮಾಡಿಬಿಟ್ಟ. ಆದರೂ ನನ್ನ ಥಡ್ಡತನ ಏಕೆ ತೋರಿಸಿಕೊಡಬೇಕೆಂದು ಸುಮ್ಮನಾದೆ. ಸುಮ್ಮನಿದ್ದುದನ್ನು ನೋಡಿ ಮತ್ತೆ ಕೇಳಿದ,

'ಹೋಗಲಿ, 'ಫಿಲ್ಮಫೇರ' ಅಂದರೇನು ಗೊತ್ತಿದೆಯೇ?' ಎಂಥ ಮೂರ್ಖನಿವನು ಎಂದುಕೊಂಡೆ ಬಾಯಿ

ಯಲ್ಲಿ ಅಡಲಾರದೆ ಅದೇ ನಿಮಿಷದ ಹಿಂದೆ ಆದೊಂದು ಅವಾರ್ಡ ಅಂತ ಹೇಳಿ, ಮತ್ತೆ ನನ್ನನ್ನು ಕೇಳುತ್ತಿದ್ದಾನೆ. ಎಲ್ಲೋ ಈತನಿಗೆ ಸಾಮಾನ್ಯಜ್ಞಾನ ಕಡಿಮೆ ಇರಬೇಕೆಂದು ಹೇಳಿದೆ.

'ಹೋ, ಅದೆ, ಅದೊಂದು 'ಅವಾರ್ಡ' ಅಲ್ಲವೇ'

ತಕ್ಷಣ ಆತನ ಪಿತ್ತ ನೆತ್ತಿಗೇರತೊಡಗಿತು. ಕಣ್ಣು ಕೆಂಪಗೆ ಮಾಡಿದು. ದುರಗಟ್ಟಿ ನೋಡಿ ಕೇಳಿದ,

'ನಿನಗೆ ಗೊತ್ತಿದೆಯಾದರೂ ಏನು?'

ಸಾಮಾನ್ಯ ಪ್ರಶ್ನೆಯೆಂದು ತಿಳಿದುಕೊಂಡು ಉತ್ತರ ಹೇಳಿದೆ.

'ನಿನಗೆ ಗೊತ್ತಿದ್ದ ಕೆಲವು ಸಂಗತಿ ಮತ್ತು ಗೊತ್ತಿಲ್ಲದ ಕೆಲವು ಸಂಗತಿಗಳು'

ಆತ ಸಿಟ್ಟಿಗೆದ್ದುದನ್ನು ನೋಡಿ ನನಗೆ ಕೆಡುಕೆನಿಸಿತು. ಬಹುಶಃ ನನ್ನ ಉತ್ತರ ತಪ್ಪಿರಬಹುದೆಂಬ ಸಿದ್ಧಾಂತಕ್ಕೆ ಬಂದು ವಿಚಾರ ಮಾಡಿ ಗಂಭೀರನಾಗಿ ಹೇಳಿದೆ,

'ಹೋ, ನನಗೆ ಗೊತ್ತಿರಲಿಲ್ಲ. 'ಫಿಲ್ಮಫೇರ' ಅಂದರೆ ಸಿನೆಮಾ-ದರವೆಂದು ಅಲ್ಲವೇ? ಎಷ್ಟು ಕೊಡಬೇಕಾಗುವದು?'

'ಬೇಹುಷಾರಾಗಿಲ್ಲವಷ್ಟೇ ನೀನು' ಎಂದ.

ನನಗೆ ದಿಕ್ಕು ತಪ್ಪಿತು. ಖಂಡಿತವಾಗಿಯೂ ಆ ದಿನ ನಾನು ಚೆನ್ನಾಗಿದ್ದೆ ನನಗೆ ಏನೂ ಆಗಿರಲಿಲ್ಲ. ಅದನ್ನು ಇವನೇ ಏಕೆ ಹೇಳಬೇಕು? ಅದಕ್ಕಾಗಿ ಬೇಗನೇ ಉತ್ತರ ಹೇಳಿದೆ. ತಪ್ಪು ತಿಳಿದುಕೊಳ್ಳಬಾರದೆಂದು.

"ಚೆನ್ನಾಗಿದ್ದೇನೆ. ನನಗೇನಾಗಿದೆ" ಎಂದೆ.

ಆತ ಅರೆಕ್ಷಣ ಬಿಟ್ಟು ಶಾಂತನಾದಂತೆ ಕಂಡು ಬಂತು. ನನ್ನನ್ನು ಮತ್ತೇ ಕೇಳಿದ. ತಾಳ್ಮೆಯ ಅಂಚೇರುತ್ತಿತ್ತು ಅಂತೂ.

"ಇರಲಿ. ಈ ಸಲವಾದರೂ ಓದುವಿಯಾ?"

ನನಗೆ ತಲೆ-ಅಂತ ಇದೆಯಲ್ಲ ದೇವರು ಕೊಟ್ಟಿದ್ದು. ತಲೆಶೂಲೆಯೆದ್ದಿತು. ಚಿಕ್ಕ ಪುಟ್ಟ ಪತ್ರಿಕೆಯನ್ನೋ, ಪುಸ್ತಕಗಳನ್ನೋ ಓದುವದುಂಟು. ಯಾವದೋ ಒಂದು ದರಕ್ಕಾಗಿ ಓದುವದೆಂದರೇನು? ಎಲ್ಲ ಅಸಂಬದ್ಧ ಪ್ರಲಾಪ. ಅದೂ ಒಂದು ಪದ್ಧತಿ ಇರಬಹುದೆಂದು ಸುಮ್ಮನಾದೆ. ಸಮ್ಮತಿ ಸೂಚಕವೇ ಮೌನವೆಂಬಂತಾಯಿತು ನನ್ನ ಸ್ಥಿತಿ.

"ಹೂಂ"

"ಏನೇನು ಓದುವಿ?"

"ನೀನೇ ಹೇಳು" ಎಂದೆ ಉಪಾಯದಿಂದ ಹೇಗಾದರೂ ನನ್ನ ಧಡ್ಡತನ ಮುಚ್ಚಿಕೊಳ್ಳಬೇಕಲ್ಲ.

"Fort night News ಓದು" ಎಂದು.

Film charge ಬಿಟ್ಟು Fort night ಏಕೆ ಜಿಗಿದ ಎಂದು ವಿಚಾರ ಮಾಡಿದೆ. ಇದೆಂಥ ವಿಚಿತ್ರ ಪದ್ಧತಿ ಎಂದುಕೊಂಡೆ. ಕೋಟೆ-ಕತ್ತಲೆ ಎಲ್ಲವೂ ಹೆದರಿಕೆಯಾಗತೊಡಗಿತು. ಕೋಟೆ-ಕೊತ್ತಳ ಎಂದರೆ ಇದು ಕೋಟೆ-ಕತ್ತಲೆಯ ತದ್ಭವವಿರಬಹುದೆಂದು ವಿಚಾರ ತಲೆ ತಿನ್ನಹತ್ತಿತು. ಮೇಲಾಗಿ ಅದನ್ನು ಹೇಗೆ ಓದುವದು? ಎಂದುಕೊಂಡೆ. ತಲೆ ಕೆರೆದುಕೊಂಡೆ. ಕಾಲು ತುರಿಸಿಕೊಂಡೆ. ಮೂಗು ತಿಕ್ಕಿದೆ. ನೋವಾಯಿತೇ ವಿನಾಃ ಏನೂ ಹೊಳೆಯಲಿಲ್ಲ. ಇವರೆಲ್ಲ ಕೋಟೆಯ ಕತ್ತಲಲ್ಲಿ ಮಾತ್ರ ಓದುವರೋ ಹೇಗೆ ಎಂದುಕೊಂಡು ಕೇಳಿದೆ.

"ನನಗೆ ಕೋಟೆ ಓದುವದು ಗೊತ್ತಿಲ್ಲ. ಅಲ್ಲದೆ ಕತ್ತಲೆಯಲ್ಲಿ ಓದುವದನ್ನು ಇಲ್ಲಿಯ ವರೆಗೆ ಯಾರೂ ಹೇಳಿ ಕೊಟ್ಟಿಲ್ಲ.

"Review ಓದುವಿಯಾ"

"ಇಲ್ಲ. ಎಷ್ಟೋ ಕಡೆ ರವ್ಹಿಜನ್ ಮಾಡಿದ್ದೇನೆ."

"Scar ಅಂದರೆ ಏನು ಆದಾದರು ಗೊತ್ತಿದೆಯೆ?"

ಅಯ್ಯೋ ಇವನ ಬುದ್ಧಿಯೇ ಎಂದುಕೊಂಡೆ. Scar ಎಂದರೆ ಚಿಕ್ಕ ಬಾಲಕರು ಕೂಡಾ ಹೇಳುವರು. ಎಂದಾದರೂ ಈತ ಮೇಲೆ ಆಕಾಶವೆಂಬುದೊಂದು ಇರುವದೆಂದೂ ಗೊತ್ತಿದೆಯೋ ಇಲ್ಲವೋ ಅನುಮಾನವಾಯಿತು. ನನಗೇ ಗೊತ್ತಿಲ್ಲವೆಂದು ತಿಳಿದುಕೊಂಡಿದ್ದಾನೆ.

"Star ಅಂದರೆ ನಕ್ಷತ್ರ ಅಲ್ಲವೇ"

'ನಿನ್ನ ತಲೆ' ಎಂದು ಬಿಟ್ಟ. ಆತನ ಬುದ್ಧಿಯ ಆಳತೆ ಗೊತ್ತಿದ್ದುದರಿಂದ ಸುಮ್ಮನಾದೆ. ಮೇಲಾಗಿ ನನ್ನ ಸಮವಯಸ್ಕನಾದುದರಿಂದ ಸುಮ್ಮನಾದೆ.

"ಪ್ರಶ್ನೆ ಪೆಟ್ಟಿಗೆ (Quetion Box)?"

'ನೋಡಿಲ್ಲ. ನಮ್ಮ ಕಡೆಗೆಲ್ಲೂ ಸಿಗುವದಿಲ್ಲ.' ಇದರದೂ ಏನಾದರೂ ಫೇರ ಇರಬಹುದೆಂದು ಕೇಳಿದೆ.

'ನಿಮ್ಮಲ್ಲಿ ಹೇಗೆ ಸಿಗುತ್ತವೆ?'

'ಅಯ್ಯೋ' ಅಂದ.

'ಏನಾಯಿತು'

'ಶುದ್ಧ ಶುಂಠಿ'

'ತಂದು ಕೊಡಲೇ' ಅಂದೆ.

'ನನಗೆ ಬೇಡ. ಇದು ನನ್ನ ಬುದ್ಧಿ.'

'ಇರಬಹುದು' ಎಂದೆ.

'Picture Review.'

'ಯಾವ ಪಿಕ್ಚರ'

'ಸುಮ್ಮನೇ ಹೇಳಬೇಡ ನಿನಗೇನು ಗೊತ್ತಿಲ್ಲ........'

'ಯಾಕೆ ಸುಮ್ಮನೆ ಒದರುತ್ತಿ' ಎಂದೆ.

'ನಿನಗೆ 'Film Fare' ಎಂದರೆ ಏನು ಅನ್ನುವದೇ ಗೊತ್ತಿಲ್ಲ. ಅದರ ತಳಬುಡವೂ ಗೊತ್ತಿಲ್ಲ.'

"ಹೌದು ಅದರ ತಳ ಮತ್ತು ಬುಡ ಎಲ್ಲವನ್ನೂ ಹೇಳಿ ಕೊಡು" ಎಂದೆ.

'ನೀನೊಬ್ಬ ಮೂರ್ಖ ಶಿರೋಮಣಿ. Film Fare ಎಂದರೆ ಯಾವ ಮೂರ್ಖನೂ ಹೇಳುತ್ತಾನೆ.'

'ನಾನು ಮೂರ್ಖನಲ್ಲವೆಂಬುದಕ್ಕೆ ಇದೊಂದು ಪ್ರಬಲ ಸಾಕ್ಷಿ.'

'ಅಲ್ಲ ನೀನು ಮೂರ್ಖರಗಿಂತಲೂ ಮೂರ್ಖ'

'ಅಂತಲೇ ನೀ ನನ್ನ ಗೆಳೆಯ' ಅಂದೆ.

ಗೆಳೆಯನೆಂದಕೂಡಲೆ ಅವನಿಗೊಂದು ಹೊಸ ವಿಚಾರವು ಬಂದಿತು. ನನ್ನ ಮುಂಗೈ ಯರಡನ್ನೂ ಹಿಡಿದು ಗಟ್ಟಿಯಾಗಿ ಅಲುಗಿಸಿ ಮೋರೆ ಎತ್ತರಿಸಿ ಹೇಳಿದ.

'ನಿನಗೆ ಫಿಲ್ಮಲ್ಯಾಂಡ ಬಗ್ಗೆ ಹೇಳಿಕೊಟ್ಟರೆ ಹೇಗೆ?'

'ಎಲ್ಲಿದೆ ಅದು ? ಸಹರಾದ ಹತ್ತಿರವೇ' ಎಂದೆ.

'ಸುಟ್ಟಿತು ನಿನ್ನ ತಲೆ'

ಕೈಯಾಡಿಸಿಕೊಂಡೆ ಸುಟ್ಟಿರಲಿಲ್ಲ. ಮೇಲಾಗಿ ಅದೇ ಎಣ್ಣೆಗಿಂತಲೂ ನೀರಿನ ಪ್ರಮಾಣ ಜಾಸ್ತಿಯಾಗಿತ್ತು. ಹೀಗಾಗಿ ಅದರ ಭಯವೂ ಇರಲಿಲ್ಲ.

'ಸಂತೋಷ! ನಿನ್ನಮಟ್ಟಿಗೆ ನನಗೊಂದು ತಲೆಯಾದರೂ ಇದೆಯಲ್ಲ'

ಸರಿ! ಚಾಲೂ ಆಯಿತು. ಸುಮಾರು ಇಪ್ಪತ್ತು ಮೂವತ್ತುಹೆಸರುಗಳನ್ನು ಹೇಳಿದ. ಅದರಲ್ಲಿ ಮುಕ್ಕಾಲು ಪಾಲು ಕುಮಾರರೂ ಕುಮಾರಿಯರೇ ಇದ್ದರು. ಒಂದೇ ಒಂದು ಸಂಗತಿ ನನಗೆ ಹೊಡೆನಿಸಿತು. ಎಲ್ಲರೂ ಕುಮಾರರೇ ಮತ್ತು ಕುಮಾರಿಯರೇ.

'ಅಲ್ಲ ನಾನೊಂದು ಪ್ರಶ್ನೆ ಕೇಳಲೆ.'

'ಹೋ, ಬೇಕಾದ್ದನ್ನು ಕೇಳು ತಿಳಿದುಕೊಳ್ಳಬೇಕೆಂಬ ವಿಚಾರ ಬಂದಿದೆಯಲ್ಲ. ಅದೇ ಸಂತೋಷ.'

'ಅಂದ ಹಾಗೆ ಈ ಕುಮಾರರು ಆ ಕುಮಾರಿಯರನ್ನು ಮದುವೆಯಾದರೆ ಅಲಕ್ಷಣವೇ ?'

'ಹಾಗೆಲ್ಲ ಬರುವದಿಲ್ಲ. ಅನೇಕ ಕುಮಾರರ ಮದುವೆ ಯಾಗಿದೆ ಅದರಂತೆ ಕುಮಾರಿಯರದೂ ಸಹ.

ನನ್ನ ಬುದ್ಧಿ ಭ್ರಂಶವಾಯಿತು. ಲಗ್ನವಾದರೂ ಹೇಗೆ ಇವರು ಕುಮಾರರಾಗಿ ಉಳಿಯುವರೆಂಬುದು ದೊಡ್ಡ ಸಮಸ್ಯೆ ಯಾಯಿತು ಸರಿ ! ಎಲ್ಲೋ ಚೇಷ್ಟೆ ಮಾಡುತ್ತಿರಬೇಕೆಂಬ ಭಾವನೆ ಬಂತು.

"ನೋಡು ೪೮ ವರ್ಷದ ಅಶೋಕ ಕುಮಾರ Hero ಪಾತ್ರ ಮಾಡುತ್ತಾನೆ ಮೊನ್ನೆ ಆತನ ಮಗಳ ಮದುವೆ ಆಯಿತು.

ನನಗೆ ಈ Film-land ಬಗ್ಗೆ ಜಗತ್ತು ಶೂನ್ಯವಾಯಿತು. ಮೊದಲೇ ಪಿತ್ತ ಪ್ರಕೃತಿ ಏನಿದು ಅನ್ಯಾಯ. ತಂದೆ ಕುಮಾರ ತಾಯಿ ಕುಮಾರಿ ಮಗಳು ಕುಮಾರಿ ಶಾಂತನಾಗಿ ಕೇಳಿದೆ ತಾಳ್ಮೆಯಿಂದ.

"ಅಲ್ಲ ಕುಮಾರನೊಬ್ಬ ಕುಮಾರಿಯನ್ನು ವಿವಾಹವಾಗ ಬಹುದಲ್ಲ."

"ಸಾಧ್ಯವಿಲ್ಲ."

"ಅಯ್ಯೋ ಇದೇನಿದು ವರನೂ ವಧುವೂ ಕುಮಾರ ಕುಮಾರಿಯರಾಗಿರದಿದ್ದರೆ ಏನು ಉಪಯೋಗ. ಮತ್ತೆ ಅದನ್ನೇ ಬೇರೆ ರೂಪದಲ್ಲಿ ಕೇಳಬೇಕು ಎಂದುಕೊಂಡೆ. ಏಕಂದರೆ ಮತ್ತೆ ಮತ್ತೆ ಅದೇ ಪ್ರಶ್ನೆಯಿಂದ ಆತ ಮೇಲಿಂದ ಮೇಲೆ ಸಿಟ್ಟಗೇಳುತ್ತಿದ್ದ. ಅಂತೂ ಕೇಳಿದೆ.

"ಲೋ ನಿನಗೆ ಬೀಜಗಣಿತ ಬರುವದಲ್ಲವೇ"

"ಹೂಂ"

"ನೋಡು ಯಕ + ಮಕ = ಕ (ಯ + ಮ) ಹೌದೆ?"

'ಹೂಂ'

"ಅದರಂತೆ ಕುಮಾರನು ಕುಮಾರಿಯನ್ನು ಮದುವೆ ಯಾಗುವದಕ್ಕೂ "ಕು" ತೆಗೆದ ನಂತರ ಮಾರನು ಮಾರಿಯನ್ನು ಮದುವೆಯಾಗುವದಕ್ಕೂ ಅಂತರವೇನು ?"

"ಮುಂದೆ"

"ಮಾರನಿಗೂ ಮಾರಿಗೂ ಮದುವೆಯಾಗಿ ಮೂರನೆಯ ಮಾರನೋ ಮಾರಿಯೋ........"

"ಥೂ........" ಎಂದ

ಅಲ್ಲಿಗೆ ನನ್ನ ತಾಳ್ಮೆ ತಪ್ಪಿತು. ನನಗೆ ತಿಳಿದ ಮಟ್ಟಿಗೆ ಏನೂ ತಿಳಿಯಲಿಲ್ಲ. ನನಗೆ ಏನೂ ತಿಳಿಯದಂತೆ ಅವನು ಬಹು ಚನ್ನಾಗಿ ವಿವರಿಸಿದ. ಆತನ ದುರ್ದೈವ. ನನಗೇನೂ ತಿಳಿಯ ಲಿಲ್ಲ. ಆತನಿಗೆ ನನ್ನನ್ನು ಬೈಯ್ಯಲೂ ಆಗದು. ಬಿಡಲೂ ಆಗದು. ಕಡೆಗೆ ಸಟಕ್ಕನೆ ಎದ್ದು ಹೋದ.

'ಯಾಕೆ ಏನಾಯಿತು ?' ಎಂದೆ.

'ನಿನ್ನ ತಲೆ' ಎಂದು ಒಂದು 'Film Fair' ನ್ನು ಒಗೆದ.

ನನ್ನ ತಲೆಯ ಮೇಲೆ ಏಕೆ ಈತನ ಕಣ್ಣು ಎಂದುಕೊಂಡು ಕೈಯ್ಯಾಡಿಸಿದೆ. ತಲೆ ಇತ್ತು.

ಅಂದಿನಿಂದ ನನ್ನನ್ನು ಆ ಬಗ್ಗೆ ಎಂದೂ ಯಾರೂ ಕೇಳ ಲಿಲ್ಲ........ಕೇಳಲಾರರು........ ಅದೂ ನನಗನಿಸುವ ಮಟ್ಟಿಗೆ.

ಹೀಗಾಗಿ ಮದುವೆ ಯಾರದಾಯಿತೆಂಬುದೇ ನನಗೆ ಹೊಳೆಯಲಿಲ್ಲ. ಅವಳ ಮದುವೆಯೋ ಅಥವಾ ಆತನ ಮದು ವೆಯೋ ಅಥವಾ ಸ್ವಂತ ನನ್ನ ಮದುವೆಯೋ.

---

 "ವಿಷನಿಮಿಷ" 

ಚಲಿಸಲಿ ಜೀವನ ನೌಕೆಯು ತಾ ।
ಪ್ರೇಮ ಕಡಲಲೀ ಅನವರತಾss ॥
ವಂಚನೆಗೈದಾ ವನಿತೆಯು ತಾ ॥
ಕಂಪಿಸುತಿರುವಳು ಮನದಲಿ ತಾ ॥ ೧ ॥

‡ ‡ ‡ ‡

ಕಟ್ಟಿದ ಕಲ್ಪನೆ ಕನಸಿಲಿ ।
ನನಸಾಯಿತು ತಾ ಬೇಗದಲಿ ॥
ರವಿದಿನದಾs ಆ ನೋಟದಲಿ ।
ಪ್ರೇಮ ಜೀವಿಗಳ ಕೂಟದಲಿ ॥ ೨ ॥

ಸರಿಯಿತು ಕೆಲದಿನ ಸರಸದಲಿ ।
ಮೋಹ ನೌಕೆಯು ನಲುವಿದಲಿ ॥
ಪತ್ರಾಗಮನದ ವಿರಸದಲಿss ।
ಮಾಲೆಯ ಮರೆಸಿತು ಕನಲಿನಲಿ ॥ ॥ ೩ ॥

‡ ‡ ‡ ‡

ಕರೆಯಿತು ಮಾಲೆಯು ಕರುಣಾ ಸ್ವರವು ।
ಕರಗಿತು ಮಾಲಾ ರಮಣನ ಮನವು ॥
ಕಲೆಯಿತು ಮಾಲೆ ಸನಾತರ ತನುವು ।
ಕಂದಿದ ಕಳೆ ತಾತಂದಿತು ವದನವು ॥ ೪ ॥

‡ ‡ ‡ ‡

ನಲಿ ನಲಿಯುತಲಿರುವಾ ss ಮಾಲಾ ।
ಎಸೆದಳು ಇನಿಯನ ಕಂಠಕೆ ಮಾಲಾ ॥
ಸುಖ ದುಃಖದಲಿ ಸರಿಸಮ ಪಾಲೆ ।
ಹಾಕಿರಿ ಎಂದಳು ಅನವರ ತೋಲೆ ॥ ೫ ॥

ಸಾಹಿತ್ಯ ಶಿಸು, ಎಂ. ಎಫ್. ಉಪರಾಳ,
ಪ್ರಧಾನ ಗುರುಗಳು ಜಗಾಪೂರ



# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ ಅಕ್ಕನ ಪೆಟ್ಟಿಗೆ ' ಗೆ ಓಲೆಗಳನ್ನು ಕಳುಹಿಸಬಹುದು; ಮತ್ತು ನೀವೇ ಬರೆದ ಸಣ್ಣ ಕತೆ, ಕವನ, ಆಟ ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ. ನೀವೇ ತೆಗೆದ ಅಂದವಾದ ಚಿತ್ರವಿದ್ದರೆ ಅದನ್ನೂ ಮುಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು ' ಅಕ್ಕನ ಪೆಟ್ಟಿಗೆ'ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲಾ ಬರೆದು, ಪಾಕೇಟಿನಲ್ಲಿ ಹಾಕಿ, ಕಳಿಸಿಬಿಡಿ. ' ಅಕ್ಕನ ಪೆಟ್ಟಿಗೆ'ಗೆ ಈಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರ ವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರದ (ಬ್ಲಾಕ) ಕಳಿಸಿದರೆ,ಅದನ್ನೂ ಅವರ ಪರಿಚಯ ವನ್ನೂ ಸಾಧ್ಯವಾದ ಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

**ಅಕ್ಕನ ಪೆಟ್ಟಿಗೆ**

**ವೀರಮಾತಾ ಕಾರ್ಯಾಲಯ,**

**ವನಿತಾಸೇವಾ ಸಮಾಜ ಧಾರವಾಡ.**

**ಧಾರವಾಡ.**

---

**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು ..................................................

ವಯಸ್ಸು ಮತ್ತು ಓದುತ್ತಿರುವ ತರಗತಿ..................................................

ಅಲ್ಪ ಪರಿಚಯ ..................................................

ಪೂರ್ಣ ವಿಳಾಸ..................................................

..................................................(ಮನೆ ನಂಬರ ಸಹಿತ)..........................

೨ ಆಣೆ ಸದಸ್ಯತ್ವದ ಫೀಯನ್ನು ಕೊಟ್ಟು ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು ಇಂದಿನಿಂದ ನಾನು ಸದಸ್ಯ ನಾ/ಳಾಗಿದ್ದೇನೆ.

ತಾರೀಖು .................... ಸಹಿ

## ಈ ತಿಂಗಳ ಹೊಸ ಸದಸ್ಯರು

೧ ಕೆ. ಆರ್. ನಾಗರಾಜ ವಯ ೧೫ ಓದುವ ತರಗತಿ ೧೧ ವಿಳಾಸ ನಂ. ೮ ತಿಪ್ಪಶೆಟ್ಟಿಮಠ ಗಾಂಧೀನಗರ ಬೆಂಗಳೂರು

---

## ಅಕ್ಕನ ಬಳಗದ ಸದಸ್ಯರಿಗೆ

ಅಕ್ಕನ ಪೆಟ್ಟಿಗೆಯ ವಿಷಯಗಳು ಈ ಸಲ ಸಾಕಷ್ಟು ಬಂದಿಲ್ಲ. ಪರೀಕ್ಷೆಯ ಗಡಿಬಿಡಿಯಲ್ಲಿ, ತಮ್ಮ ತಂಗಿಯರು ಬಿದ್ದಿರಬಹುದು. ಮುಂದಿನ ಸಲವಾದರೂ ಚಿಕ್ಕ ಕತೆ ಕವಿತೆ ಒಗಟ ಸ್ಪರ್ಧೆ ಮೊದಲಾದವುಗಳನ್ನು ಕಳಿಸಬೇಕು. ಮಾರ್ಚ ತಿಂಗಳ ಒಗಟದ ಉತ್ತರವನ್ನು ಯಾರೂ ಕಳಿಸಿಲ್ಲ. ಕಾರಣ ಎಪ್ರಿಲ ೨೦ ರ ಒಳಗಾಗಿ ಮಾರ್ಚ ಹಾಗೂ ಎಪ್ರಿಲ ತಿಂಗಳ ಒಗಟಗಳ ಉತ್ತರವನ್ನು ಕಳಿಸಬೇಕು. ಹೊಸ ಸದಸ್ಯರೂ ಪ್ರತಿ ತಿಂಗಳ ೨೦ ನೇ ತಾರೀಖಿನ ಒಳಗಾಗಿ ಕಳಿಸಬೇಕು.

ನಿಮ್ಮ ಮಮತೆಯ ಹಿರಿಯಕ್ಕ.

## ಫೆಬ್ರುವರಿ ಸಂಚಿಕೆಯಲ್ಲಿಯ ಒಗಟಗಳ ಸರಿಯಾದ ಉತ್ತರ

೧) ವಿಜಯನಗರ ೨) ಶಿವರಾಮ ೩) ಕಮಲಾಕರ ೪) ವನಿತಾ ಸೇವಾ ಸಮಾಜ

ಸರಿಯಾದ ಉತ್ತರ ಕಳಿಸಿದವರು

ಮೀರೂಬಾಯಿ ಉಮಚಿಗಿ

## ಒಗಟಗಳು

೧ ಆರು ಗೀರುಂಟು ಹೀರೆಕಾಯಲ್ಲ
ಮೇಲೆ ಹಸರುಂಟು ಹುಣಸೇಕಾಯಲ್ಲ
ಒಳಗೆ ಹುಳಿಯುಂಟು ನಿಂಬೇಕಾಯಲ್ಲ
ಇದು ಏನು ?

೨ ಒಂದು ಗಿಡದ ಮೇಲೆ ಕುಳಿತಿದ್ದ ಬಿಳಿಯ ಪಕ್ಷಿಯು ಮೇಲೆ ಹಾರಿ ಹೋಗುತ್ತಿದ್ದ ಪಕ್ಷಿಯನ್ನು ನೀವು ಎಷ್ಟು ಜನ ಬಂದಿರುವಿರಿ ಎಂದು ಕೇಳಿತು. ಆಗ ಆ ಪಕ್ಷಿಯು ನಾನು, ನನ್ನಷ್ಟು, ನನ್ನಲ್ಲಿ ಅರ್ಧ, ಅದರಲ್ಲಿ ಅರ್ಧ, ನೀನೂ ಬಂದರೆ ೧೦೦ ಎಂದು ಹೇಳುತ್ತದೆ. ಹಾಗಾದರೆ ಅದು ಎಷ್ಟು ?

೩ ಒಂದು ಚೀಲದಲ್ಲಿ ೧, ೨, ೫ ರೂ. ಗಳ ನೋಟುಗಳು ೨೫ ನೋಟುಗಳಿವೆ. ಒಟ್ಟು ೨೫ ನೋಟುಗಳು ಆಗಬೇಕು. ಮತ್ತು ಅದರ ಬೆಲೆ ೧೦೦ ರೂಪಾಯಿ ಆಗಬೇಕು. ಹಾಗಾದರೆ ೧ ರೂ ದ ನೋಟುಗಳೆಷ್ಟು ? ೨ ರೂ ದ ನೋಟುಗಳೆಷ್ಟು ? ೫ ರೂ ದ ನೋಟುಗಳೆಷ್ಟು ?

ಕಳಿಸಿದವರು : ಕೆ. ಆರ್ ನಾಗರಾಜ



 

# ಆದಿಮಾನವ



ಲೇಖಕ : ಬಿ. ಪುಂಡ್ಲೀಕ ಕಾಮತ

ಈಗ ಕಾಣುತ್ತಿರುವ ಭೂಮಿ ಮೊದಲೂ ಇದ್ದಿಲ್ಲ ಸೂರ್ಯನಿಂದ ಹೊರಟ ಒಂದು ತುಣುಕು ಹಾರಿಬಿದ್ದ ಎಷ್ಟೋ ವರ್ಷಕಾಲ ತಪ್ತಾವಾದ ರಸರೂಪದಲ್ಲಿಯೇ ಉಳಿಯಿತು. ಹೀಗೆ ಅನೇಕ ಕಾಲಗತಿಸಿದ ಮೇಲೆ ಸ್ವಲ್ಪ ಆರುತ್ತ ಬಂದಿತು. ಆ ಮೇಲೆ ಸಂಪೂರ್ಣ ಆರಿತೆಂದು ನಾವಿಂದು ಕಾಣಬಹುದು. ಆದರೂ ಅನೇಕ ಕಡೆ ಸಂಪೂರ್ಣ ಆರದೇ ಇದ್ದುದರಿಂದ ಭೂಮಿಯ ಹೊಟ್ಟೆಯಲ್ಲಿದ್ದ ತಪ್ತಲಾವಾರಸವು ತನ್ನ ಶಕ್ತಿ ಪ್ರದರ್ಶಿಸಲೋಸುಗ "ಜ್ವಾಲಾಮುಖಿ" ಯಿಂದ ಹೊರ ಬರುವದು !

ಪ್ರಿಯ ಓದುಗರೆ ನಾನೀಗ ಬರೆಯುತ್ತಿದ್ದುದು ಸಂಪೂರ್ಣ ಭೂಮಿಯ ಇತಿಹಾಸವೆಂಬ ಕಲ್ಪನೆ ನಿಮ್ಮಲ್ಲಿ ಬಾರದಿರಲಿ ! ಕೇವಲ ಕೆಲವು ಮಹತ್ವದ ಸಂಗತಿಯನ್ನಷ್ಟೇ ಹೇಳಿ ಮುಂದೆ ಸಾಗುತ್ತಿದ್ದೇನೆ. ಕೆಲವರಿಗೆ ಈ ಇತಿಹಾಸವು ಸೇರದೇ ಇರಬಹುದು. ಆದರೂ ನಿಜವಾಗಿಯೂ ಇದೊಂದು ಮಹತ್ವವಾದ ಹಾಗೂ ತಿಳಿದುಕೊಳ್ಳಲು ಮಹತ್ವವುಳ್ಳ ಇತಿಹಾಸವೇ ಆಗಿದೆ ಎಂದರೆ ತಪ್ಪಾಗಲಾರದು.

ಭೂಮಿಯೇನೋ ಅಸ್ಥಿತ್ವದಲ್ಲಿ ಬಂದಿತೆನ್ನಿ ! ಆದರೆ ಯಾವ ಪ್ರಾಣಿಯಾಗಲಿ, ವನಸ್ಪತಿಯಾಗಲಿ, ಇಲ್ಲವೇ ಜೀವಿಯೂ ನಿರ್ಜೀವಿಗಳು ಮೊಟ್ಟ ಮೊದಲು ಇದ್ದಿಲ್ಲ. ಬರ ಬರುತ್ತ ಅಲ್ಲಿ ಇಲ್ಲಿ ಹಾವಸೆ, ಕಾಣಿಸಿಕೊಂಡಿತು. ತದನಂತರ ಏಕ ಜೀವಕಣ ಉಳ್ಳ ಅಮಿಬಾವು ಹುಟ್ಟಿಕೊಂಡಿತು. ಅಲ್ಲಿಂದಲೇ ಜೀವಿಗಳು ಹುಟ್ಟಲಾರಂಭಿಸಿದ್ದು. ಆ ಮೇಲೆ ಅನೇಕ ವರ್ಷ ಕಾಲಗತಿಸಿದವು. ನೈಸರ್ಗಿಕವಾಗಿಯೇ ಬೆಳೆದುಕೊಂಡ ಇತರ ಪ್ರಾಣಿಗಳು, ಭೂಮಿಯ ಮೇಲೆ ತಲೆ ದೋರಿದವು. ಆದರೆ ಅವಕ್ಕೆ ಬುದ್ಧಿ ಇರಲಿಲ್ಲ. ಆದಕ್ಕಂತಲೇ ಸೃಷ್ಟಿ ಕರ್ತನು ಬುದ್ಧಿ ಜೀವಿಯಾದ ಮಾನವನ ನಿರ್ಮಾಣ ಮಾಡಲು ಹಾತೊರೆದ ! ಕೊನೆಗೊಮ್ಮೆ ಕೇವಲ ಬುದ್ಧಿಯಲ್ಲಿ ಬಲಿಷ್ಟನಾದ ಮನುಷ್ಯನ ಹುಟ್ಟೊ ಆಯಿತು ! ಆದರೆ ಈಗಿರುವ ಮನುಷ್ಯನಿಗಿರುವಷ್ಟು ಬುದ್ಧಿ ಆಗಿನ ಮನುಷ್ಯನಲ್ಲಿ ಇರಲಿಲ್ಲವೆಂದು ಹೇಳುವದು ಅವಶ್ಯವಿಲ್ಲ! ಜೀವಿಗಳಿಗೆ ಆಹಾರವು ಅವಶ್ಯ ಉಂಟಷ್ಟೆ! ಪೂರ್ವದಲ್ಲಿ ಮಾನವನ ಆಹಾರ ಕೇವಲ ಗಡ್ಡೆ ಗೆಣಸುಗಳೇ ಆಗಿದ್ದವು. ಒಮ್ಮೆ ಎರಡು ಮರಗಳ ತಿಕ್ಕಾಟದಿಂದ ಬೆಂಕಿ ಉತ್ಪನ್ನವಾಯಿತು. ಈ ಬೆಂಕಿಯಲ್ಲಿ ಸಿಕ್ಕ ಪ್ರಾಣಿಗಳು ಸತ್ತವು. ಮೊಟ್ಟಮೊದಲು ಮಾನವನು ಪ್ರಾಣಿಗಳನ್ನು ಕೊಂದು ಹಸಿ ಮಾಂಸವನ್ನೆ ತಿನ್ನತ್ತಿದ್ದನು. ಆಮೇಲೆ ಬಿಸಿಮಾಂಸವು ಹಸಿಯದಕ್ಕಿಂತ ರುಚಿಕಟ್ಟಾದ್ದರಿಂದ ಮುಂದೆ ಕೊಂದ ಪ್ರಾಣಿಗಳನ್ನು ಕಾಯ್ದಿಟ್ಟ ಬೆಂಕಿಯಲ್ಲಿ ಹಾಕಿ ತಿನ್ನಲಾರಭಿಸಿದನು.

ಅವರ ಉಡಿಗೆ ತೊಡಿಗೆಯೂ ಅಷ್ಟೇ ಕೀಳು ತರಗತಿಯಲ್ಲಿತ್ತು! ಬತ್ತಲೆಯಾಗಿ ತಿರುಗುವ ಮಾನವನಿಗೆ ಚಳಿಬಾಧೆ ತಾಳಲು ಆಗದೆ ಗಿಡದ ಎಲೆಗಳನ್ನೋ ಕೊಂದ ಪ್ರಾಣಿಗಳ ಚರ್ಮಗಳನ್ನೋ ಇಲ್ಲವೇ ಗಿಡದತೊಗಟೆಯನ್ನೋ ಉಡಲಾರಂಭಿಸಿದ. ಹೀಗೆ ಅನೇಕ ವರ್ಷಕಾಲಗತಿಸಿದವು. ಪ್ರಾಣಿಗಳನ್ನು ಕೊಲ್ಲುವದಕ್ಕೆಕೇವಲಶಿಲೆಗಳ ಆಯುಧಗಳನ್ನೇಉಪಯೋಗಿಸುತ್ತಿದ್ದರು. ಆದರ ನಂತರ ಇತರ ಧಾತುಗಳಿಂದ ಮಾಡಿದ ಆಯುಧಗಳುಬಳಕೆಗೆ ಬಂದವು, ಇನ್ನೂ ಆಳವಾಗಿ ಮಾನವನ ಇತಿಹಾಸವನ್ನು ನೋಡಿದರೆ ಈಗಿನ ಸಧಾರಣೆಯು ತುಟ್ಟತುದಿಯನ್ನೇ ಮುಟ್ಟದೆ!

ಈಗ ಆಕಾಶಯಾನ ಜಲಪರ್ಯಟನಗಳುಸುಲಭಸಾಧ್ಯವಾಗಿಬಿಟ್ಟವೆ! ಇಷ್ಟಾಗಬೇಕಾದರೆ ಸುಧಾರಣೆಯು ಎಷ್ಟು ಕಡಿಮೆ ತರಗತಿಯಿಂದ ಸಾಗಿರ ಬೇಕು! ಇಷ್ಟರಲ್ಲಿಯೂ ಮಾನವನ ಸಂಪೂರ್ಣ ಇತಿಹಾಸ ತಿಳಿದಂತಾಗಿರುವದಿಲ್ಲ! ಮಾನವನು ತನ್ನ ಜೀವನವನ್ನು ಕಲ್ಲುಗಳ ಸಹಾಯದಿಂದ ಸಾಗಿಸಿದ್ದಕ್ಕೆ ಆಕಾಲಾವಧಿಗೆ ಶಿಲಾಯುಗ ವೆಂದು ಕರೆಯಲಾಗಿದೆ. ಇನ್ನೂ ಅನೇಕತರದ ಯುಗಗಳು ಇತಿಹಾಸದಲ್ಲಿ ಕಾಣಬಹುದು !

---

# "ಪ್ರಾಯಶ್ಚಿತ್ತ"

ಮೂಲ [ ಹಿಂದಿಯಲ್ಲಿ ] ಅನುವಾದ ಕನ್ನಡದಲ್ಲಿ

ಮೂಲ ಲೇಖಕರು : ಭಗವತೀ ಚರಣವರ್ಮಾ
ಅನುವಾದಕರು : ಮ. ರಾ. ಗುರವ, ಪಿ. ಬಿ. ಹೈಸ್ಕೂಲ ಸ್ಟೂಡಂಟ್ ವರ್ಗ (ಬ)

ಒಂದು ಊರಲ್ಲಿ ರಾಮು ಎಂಬವನು ಇದ್ದನು. ಅತನ ಮದುವೆಯಾಗಿ ೨ ತಿಂಗಳಾಗಿದ್ದವು. ಅದೇ ಮೊದಲನೆಯ ಸಲ ಆತನ ಹೆಂಡತಿಯು ತವರು ಮನೆಯಿಂದ ಅತ್ತೆಯ ಮನೆಗೆ ಬಂದಿದ್ದಳು ಆಕೆಯು ಅತ್ತೆ-ಗಂಡನ ಪ್ರೀತಿಯಪಳಾಗಿದ್ದಳು. ಆಳುಮನುಷ್ಯರೂ ಸಹ ಅವಳಿಗೆ ತಲೆವಾಗಿ ನಡೆಯುತ್ತಿದ್ದರು. ಅವರ ಮೇಲೆ ಆವಳ ಹಕ್ಕು ನಡೆಯುತ್ತಿತ್ತು. ಮನೆಯ ಕೈ ಕೀಲಿಯು ಅವಳ ಕೈಗೆ ಬಂತು. ಮನೆಯಲ್ಲಿ ಅವಳೇ ಮಾಲಕಳಾದಳು. ಅತ್ತೆಯವರು ಮಾಲೆಯನ್ನು ತಕ್ಕೊಂಡರು. ಮತ್ತು ಪೂಜಾಪುನಸ್ಕಾರಗಳಲ್ಲಿ ತೊಡಗಿದರು.

ಆದರೆ ರಾಮೂನ ಹೆಂಡತಿಯು ೧೪ ವರ್ಷದ ಬಾಲಿಕೆಯಾಗಿದ್ದಳು. ಯಾವಾಗಲೂ ಕೋಟಿ ಕೋಣೆಯು ತೆರೆದಿದ್ದರೆ ಒಮ್ಮೊಮ್ಮೆ ಅಲ್ಲಿ ಕೂತು ನಿದ್ದೆ ಮಾಡುತ್ತಿದ್ದಳು. ರಾಮೂನ ಮನೆಯಲ್ಲಿ ಒಂದು ಬೆಕ್ಕು ಇತ್ತು. ಅದಕ್ಕೆ ಇಂಥ (ಮೇಲೆ ಹೇಳಿದ) ಪ್ರಸಂಗ ಸಿಕ್ಕರೆ ಸಾಕು. ಹಾಲು ಮೊಸರುಗಳ ಮೇಲೆ ತನ್ನ ಕೈ ಕೂಡ್ರಿಸುತ್ತಿತ್ತು. ಹೀಗಾಗಿ ರಾಮೂನ ಹೆಂಡತಿಯ ಜೀವ ಸಂಕಟದಲ್ಲಿ ಸಿಲುಕುತ್ತಿತ್ತು. ಬೆಕ್ಕಿಗೆ ಚಲ್ಲಾಟವಾಗುತ್ತಿತ್ತು. ಹಾಲು ಇಟ್ಟರೆ ಇಟ್ಟಲ್ಲಿಂದಲೇ ಮಾಯವಾಗುತ್ತಿದ್ದವು. ಬೆಕ್ಕಿನ ಸಲುವಾಗಿ ಇಲಿ ತರಿಸಲಾಯಿತು. ಆದರೆ ಬೆಕ್ಕು ಅತ್ತ ದೃಷ್ಟಿಯನ್ನೇ ಹಾಕಲಿಲ್ಲ, ಹಾಗೂ ಬೆಕ್ಕನ್ನು ಹಿಡಿಯುವ ಪಂಜರವು ಬಂತು. ಆದರೆ ಅತ್ತ ಕೂಡ ದೃಷ್ಟಿಯನ್ನು ಹಾಕಲಿಲ್ಲ. ಅದು ತನ್ನ ಮೋಸಗಾರಿಕೆಯನ್ನು ತೋರಿಸಿತು. ಈರೀತಿ ಆಗುವದರಿಂದ ರಾಮೂನ ಹೆಂಡತಿಗೆ ಮನೆಯಲ್ಲಿ ಇರುವದು ಕಠಿಣವಾಯಿತು. ಅತ್ತೆಯ ಬೈಗಳ, ಹಾಗೂ ಪತಿದೇವನಿಗೆ ಒಣ ಆಹಾರ.

ಒಂದು ದಿನ ರಾಮೂನ ಹೆಂಡತಿಯು ರಾಮೂನ ಸಲುವಾಗಿ ಖೀರು ಮಾಡಿದಳು. ಬಾದಾಮ, ಮನೂಕ ಹೀಗೆ ತರ ತರದ ಸಾಮಾನುಗಳನ್ನು ಹಾಲಿನಲ್ಲಿ ಅಟ್ಟಿಸಲಾಯಿತು. ಖೀರಿನಿಂದ ತುಂಬಿ ಪಾತ್ರೆಯನ್ನು ಬೆಕ್ಕಿಗೆ ಕಾಣಿಸದಂತೆ ಎತ್ತರದ ಖಿಡಿಕಿಯಲ್ಲಿ ಇಡಲಾಯಿತು. ನಂತರ ರಾಮೂನ ಹೆಂಡತಿಯು ಎಲೆಯನ್ನು ಹಾಕುವದರಲ್ಲಿ ತೊಡಗಿದಳು.

ಅತ್ತ ಕೋಣೆಯಲ್ಲಿ ಬೆಕ್ಕು ಬಂತು. ಕೆಳಗೆನಿಂತು ಬೆಕ್ಕು ಮೇಲೆ ನೋಡಿತು. ವಾಸನೆ ನೋಡಿತು. ಸಾಮಾನು ಛಲೋ ಅದೆ ಎಂದು ಆ ಗೋಡೆಯ ಎತ್ತರವನ್ನು ಅಂದಾಜಾಗಿ ಮಾಡಿತು. ರಾಮೂನ ಹೆಂಡತಿಯು ಎಲೆಯನ್ನು ಹಾಕುವದರಲ್ಲಿ ತೊಡಗಿದ್ದಾಳೆ. ಎಲೆ ಹಾಕಿ ಅವಳು ಅತ್ತೆಗೆ ಕೊಡಲಿಕ್ಕೆ ಹೋದಳು. ಬೆಕ್ಕು ಮೇಲೆ ಜಿಗಿಯಿತು. ಪಂಜೆಯಲ್ಲಿ ಮುಂದಿನ ಎರಡು ಕಾಲುಗಳ ಉಗುರುಗಳು ಸಿಕ್ಕವು. ನಂತರ ಅದಕ್ಕೆ ಮೇಲೆ ಹೋಗಲು ಸಾಧ್ಯವಾಗಲಿಲ್ಲ. ಪಾತ್ರೆಯು ಕೆಳಗೆ ಬಿತ್ತು.

ಆ ಸಪ್ಪಳವು ರಾಮೂನ ಹೆಂಡತಿಗೆ ಕೇಳಿಸಿತು. ಅತ್ತೆಯ ಎದುರಿಗೆ ಎಲೆ ಒಗೆದು ಅವಳು ಓಡಿ ಬಂದಳು. ಬಂದು ನೋಡುತ್ತಾಳೆ ಕಾಜಿನ ಪಾತ್ರೆ ಚೂರು ಚೂರಾಗಿದೆ. ಖೀರು ಫರ್ಶಿಯ ಮೇಲೆ ಬಿದ್ದಿದೆ, ಬೆಕ್ಕು ಅಂಜುತ್ತ ಅಂಜುತ್ತ ಖೀರು ತಿನ್ನ ಹತ್ತಿದೆ. ಅವಳನ್ನು ನೋಡುತ್ತಲೇ ಬೆಕ್ಕು ಅಲ್ಲಿಂದ ಓಡಿ ಹೋಯಿತು.

ರಾಮೂನ ಹೆಂಡತಿಗೆ ಮತ್ತಿಷ್ಟು ಸಿಟ್ಟು ಬಂತು. ರಾಮೂನ ಹೆಂಡತಿಯು ಬೆಕ್ಕಿನ ಹತ್ಯೆಗಾಗಿ ಟೊಂಕಕಟ್ಟಿದಳು. ಇಡೀ ರಾತ್ರಿ ಅವಳಿಗೆ ನಿದ್ರೆಬರಲಿಲ್ಲ. ಯಾವರೀತಿಯಿಂದ ಬೆಕ್ಕು ಕೊಲ್ಲಲಿ? ಮತ್ತೆ ಜೀವ ಉಳಿಯ ಬಾರದು. ಹೀಗೆ ವಿಚಾರಿಸುತ್ತ ಇದ್ದಳು. ಬೆಳಗಾಯಿತು. ನೋಡುತ್ತಾಳೆ ಬೆಕ್ಕು ಹೊರಸಿನ ಮೇಲೆ ಕೂತು ಆಕೆಯ ಕಡೆಗೆ ಪ್ರೇಮದಿಂದ ನೋಡುತ್ತಿದೆ.

ಅವಳು ವಿಚಾರಿಸಿ ಮುಗುಳು ನಗೆ ನಗುತ್ತ ಅಲ್ಲಿಂದ ಎದ್ದಳು. ಅವಳು ಬಂದು ಹಾಲಿನ ಪಾತ್ರೆಯನ್ನು ಹೊರಸಿನ ಮೇಲೆ ಇಟ್ಟು ಹೋದಳು.. ಅದು ಆಳವಾದ ಪಾತ್ರೆ ಇತ್ತು, ಒಂದು ಮಣಿಯನ್ನು ತಂದು ನೋಡುತ್ತಾಳೆ ಬೆಕ್ಕು ಹಾಲು ಕುಡಿಯಹತ್ತಿದೆ. ಸಮಯ ಸಿಕ್ಕಿತೆಂದುತಿಳಿದು ಆ ಮಣಿಯನ್ನು

ಆದರ ಮೇಲೆ ಒಗೆದಳು. ಬೆಕ್ಕು ಅಲುಗಲಿಲ್ಲ ಚೀರಲಿಲ್ಲ ಸತ್ತು ಒಮ್ಮೆಲೆ ಬಿದ್ದು ಬಿಟ್ಟಿತು.

ಈ ಸಪ್ಪಳ ಕೇಳಿ ಕಸ ಗೂಡಿಸುವವಳು ಕಸ ಗುಡಿಸುವದನ್ನು ಬಿಟ್ಟು, ಅಡಿಗೆ ಯವಳು ಅಡಿಗೆಮಾಡುವದನ್ನು ಬಿಟ್ಟು ಆಸ್ಥಳದಲ್ಲಿ ಹಾಜರಾದರು. ರಾಮೂನ ಹೆಂಡತಿಯು ತಲೆ ಕೆಳಗೆ ಮಾಡಿ ಅಪರಾಧಿನಿಯಂತೆ ಅವರು ಮಾತಾಡುವ ಮಾತುಗಳನ್ನು ಕೇಳುತ್ತ ನಿಂತಿದ್ದಾಳೆ.

ಕಸಗೂಡಿಸುವವಳು ಅಂದಳು ಅಮ್ಮನವರೇ ಬೆಕ್ಕಿನ ಹತ್ಯೆಯು ನಿಮ್ಮ ಸೊಸೆಯಿಂದ ಆಯಿತು. ಇದು ಬಹಳ ಕೆಟ್ಟ ಆಯಿತು. ಅಡಿಗೆಯವಳು ಅಂದಳು ಅಮ್ಮನವರೇ, ಬೆಕ್ಕಿನ ಹತ್ಯೆ, ಹಾಗೂ ಮನುಷ್ಯನ ಹತ್ಯೆ ಒಂದೇ ಬಗೆ ಆಗಿವೆ. ಆದ್ದರಿಂದ ನಾನು ಅಡಿಗೆ ಮಾಡಲಾರೆ. ಅತ್ತೆಯವರು ಅಂದರು-- ಹಾಂ ಸರಿ ಎಲ್ಲಿಯು ವರೆಗೆ ನಮ್ಮ ಸೊಸೆಯ ತಲೆಯ ಮೇಲೆ ಪಾಪದ ಹೊರೆ ಇರುವದೋ ಅಲ್ಲಿಯವರೆಗೆ ಯಾರೂ ನೀರು, ಆಹಾರ ಮುಟ್ಟಲಾರರು. ಕಸಗೂಡಿಸುವವಳು ಅಂದಳು— ಹೇಳಿರಿ? ಪಂಡಿತಜೀಯವರನ್ನು ಕರಕೊಂಡು ಬರಲೇ?

ಹಾಂ ಬೇಗನೆ ಪಂಡಿತಜೀಯವರನ್ನು ಕರಕೊಂಡು ಬಾ.

ಬೆಕ್ಕಿನ ಹತ್ಯೆಯ ಸುದ್ದಿಯು ವಿದ್ಯುತ್ತದಂತೆ ಎಲ್ಲ ಕಡೆಗೆ ಹರಡಿತು. ನೆರೆಹೊರೆಯ ಹೆಂಗಸರು ಗುಂಪು ಕಟ್ಟಿಕೊಂಡು ಬಂದರು. ಪಂಡಿತ ಪರಮ ಸುಖರಿಗೆ ಈ ಸುದ್ದಿಯು ಯಾವಾಗ ಮುಟ್ಟಿತೋ ಆವಾಗ, ಅವರು ಪೂಜೆ ಮಾಡುತ್ತಿದ್ದರು. ಸುದ್ದಿ ಮುಟ್ಟುತ್ತಲೇ ಅವರು ಪೂಜೆ ಬಿಟ್ಟು ಎದ್ದರು. ತಮ್ಮ ಹೆಂಡತಿಗೆ ನಗುತ್ತ ಹೇಳಿದರು— ಅಡಿಗೆ ಮಾಡಬೇಡ ಘಾಸೀ ರಾಮುನ ಸೊಸೆಯು ಬೆಕ್ಕನ್ನು ಕೊಂದಿದ್ದಾಳೆ. ಪ್ರಾಯಶ್ಚಿತ್ತ ಆಗುತ್ತದೆ. ಪಕ್ವಾನ್ನಗಳ ಮೇಲೆ ಕೈ ಕೂಡ್ರಿಸೋಣ.

ಪಂಡಿತ ಪರಮ ಸುಖರ ಎತ್ತರ ೪'-೧೦" ಮತ್ತು ಹೊಟ್ಟೆಯ ಅಗಲಳದೆ ೨೮" ಇತ್ತು. ಚೆಹರೆ ಕೆಂಪು, ಗೊಲಾಕಾರ ದೊಡ್ಡ ದೊಡ್ಡ ಮೀಸೆಗಳು, ಕೆಂಪುಬಣ್ಣ ಚಂಡಿಕೆಯು ಟೊಂಕದ ವರೆಗೆ ಬರುತ್ತಿತ್ತು.

ಪಂಡಿತ ಪರಮಸುಖರು ಬಂದರು. ಕೋರಮವು ಪೂರಾ ಆಯಿತು. ಪಂಚಾಯತವು ಕೂಡಿತು. — ೧) ಅತ್ತಿಯವರು ೨) ಅಡಿಗೆಯವಳು ೩) ಕೃಷ್ಣನ ತಾಯಿ ೪) ಛನ್ನೂನನ ಅಜ್ಜ ೫) ಪಂಡಿತ ಪರಮಸುಖರು. ಉಳಿದ ಸ್ತ್ರೀಯರು ಸಹಾನುಭೂತಿಯನ್ನು ಪ್ರಕಟಗೊಳಿಸುತ್ತಿದ್ದರು.

ಕೃಷ್ಣನ ತಾಯಿ ಅಂದಳು— ಪಂಡಿತಜೀಯವರೆ ಬೆಕ್ಕಿನ ಹತ್ಯೆಯಿಂದ ಯಾವ ನರಕವು ಪ್ರಾಪ್ತವಾಗುತ್ತದೆ?

ಪಂಡಿತಜೀ ಅವರು ಪಾನುಗಳನ್ನು ನೋಡಿ ಹೇಳಿದರು. —ಬೆಕ್ಕಿನ ಹತ್ಯೆ ಒಂದರಿಂದಲೇ ನರಕದ ಹೆಸರು ಸಿಗಲಾರದು. ಆ ಮುಹೂರ್ತವು ಬೇಕು.

ಅಡಿಗೆಯವಳೆಂದಳು ಸುಮಾರು ೭ ಗಂಟೆ ಮುಂಜಾನೆ

ಪಂಡಿತ ಪರಮಸುಖರು ಪಾನುಗಳನ್ನು ಎತ್ತುತ್ತ ಎತ್ತುತ್ತ ಬಟ್ಟನ್ನು ಇಟ್ಟು, ಹಣೆಯ ಮೇಲೆ ಕೈಯನ್ನು ಇಟ್ಟು ವಿಚಾರಮಾಡಿ ಒಮ್ಮೆಲೆ, ಅಂದರು ಹರೇಕೃಷ್ಣ ಹರೇಕೃಷ್ಣ ಬಹಳೇ ಕೆಟ್ಟ. ಪ್ರಾತಃಕಾಲದ ಬ್ರಾಹ್ಮ ಮುಹೂರ್ತದಲ್ಲಿ ಬೆಕ್ಕಿನ ಹತ್ಯೆಗೆ, ದೊಡ್ಡ ಕುಂಭೀಪಾಕ ನರಕವು ಸಿಗುತ್ತದೆ.

ರಾಮೂನ ತಾಯಿಯ ಕಣ್ಣಲ್ಲಿ ನೀರು ಬಂದವು— ಆದರೆ ಪಂಡಿತಜೀಯವರೇ ತಾವೇ ಹೇಳಿರಿ ನಾನು ಏನು ಮಾಡಲಿ?

ಪಂಡಿತ ಪರಮಸುಖರು ಮುಗುಳು ನಗೆ ನಗುತ್ತ— ರಾಮೂನ ತಾಯಿಯೇ, ಚಿಂತೆಯನ್ನು ಏಕೆ ಮಾಡುತ್ತೀ? ನಾವು ಪುರೋಹಿತರು ಏಕೆ ಇದ್ದೇವೆ? ನಾವು ನಿಮ್ಮ ಈ ಪಾಪವನ್ನು ಪರಿಹರಿಸುತ್ತೇವೆ. ಶಾಸ್ತ್ರದಲ್ಲಿ ಹೇಳಿದಂತೆ ನೀವು ಈ ಪಾಪಕ್ಕೆ ಪ್ರಾಯಶ್ಚಿತ್ತವನ್ನು ತಕ್ಕೊಳ್ಳಬೇಕು. ಅಂದರೆ ಪಾಪವು ಪರಿಹಾರವಾಗುವದು.

ರಾಮೂನ ತಾಯಿ ಅಂದಳು—ಆದ್ದರಿಂದಲೇ ನಿಮ್ಮನ್ನು ಕರೆಸಿದ್ದೆನು. ಮುಂದೆ ಏನು ಮಾಡಲಿ? ಹೇಳಿರಿ? ಏನು ಮಾಡುತ್ತಿರಿ? ಒಂದು ಬಂಗಾರದ ಬೆಕ್ಕನ್ನು ಮಾಡಿಸಿ ನಿಮ್ಮ ಸೊಸೆಯಿಂದ ದಾನ ಕೊಡಿಸಿರಿ. ಅಲ್ಲಿಯ ವರೆಗೆ ನಿಮ್ಮ ಮನೆಯು ಅಪವಿತ್ರ ಇರುವದು. ಬೆಕ್ಕನ್ನು ದಾನವಾಗಿ ಕೊಟ್ಟ ನಂತರ ೨೧ ದಿನದ ಪಾಠ ಮಾಡಿಸ ಬೇಕು. ಎಂದು ಪಂ. ಜೀಯವರು ಹೇಳಿದರು.

ಛನ್ನೂನ ಅಜ್ಜ— ಹಾಂ ಮತ್ತೇನು ಪಂಡಿತಜೀಯವರೇ ಮೊದಲು ಬೆಕ್ಕನ್ನು ದಾನ ಕೊಡಲಿ ನಂತರ ಪಾಠ ಮಾಡಲಿ.

ರಾಮೂನತಾಯಿ ಕೇಳಿದಳು— ಬೆಕ್ಕು ಎಷ್ಟು ತೊಲೆಯದು ಬೇಕು? ಹೇಳಿರಿ. ಪಂಡಿತ ಪರಮಸುಖರು ನಗುತ್ತ, ತಮ್ಮ ಹೊಟ್ಟೆಯ ಮೇಲೆ ಕೈಯಾಡಿಸುತ್ತ ಹೇಳಿದರು— ಶಾಸ್ತ್ರದಲ್ಲಿ ಹೀಗೆ ಬರೆದಿದೆ ಬೆಕ್ಕಿನ ಭಾರದಷ್ಟು ಭಂಗಾರ ಬೆಕ್ಕನ್ನು ಮಾಡಿಸಬೇಕು. ಆದರೆ ಈಗ ಕಲಿಯುಗ ಬಂದು! ಧರ್ಮ, ಕರ್ಮಗಳ ನಾಶವಾಗಿದೆ. ಈಗ ಶ್ರದ್ಧೆ ಇಲ್ಲ. ಬೆಕ್ಕಿನ ಭಾರದಷ್ಟು ಬೆಕ್ಕು ಏನು ಮಾಡಿಸುತ್ತೀರಿ. ಬೆಕ್ಕು ೨೦-೨೧ ಸೇರದಕ್ಕಿಂತ ಕಡಿಮೆ ಮಾಡಿಸುವಿರೋ! ಹಾಂ ಕಡಿಮೆ ಎಂದರೆ

೨೧ ತೊಲೆಯು ಬೆಕ್ಕನ್ನು ಮಾಡಿಸಿ ದಾನ ಮಾಡಿರಿ. ಮುಂದೆ ತಮ್ಮ ಶ್ರದ್ಧೆ.

ರಾಮೂನ ತಾಯಿಯು ಕಣ್ಣನ್ನು ತೆರೆದು ಪಂಡಿತ ಪರಮಸುಖರನ್ನು ನೋಡಿ ಅಯ್ಯಪ್ಪ! ೨೧ ತೊಲೆ ಬಂಗಾರ! ಪಂಡಿತಜೀಯವರೆ ಇದು ಬಹಳವಾಯಿತು. ೧ ತೊಲೆಯಿಂದ ಸಾಧ್ಯವಾಗಲಾರದೆ?

ಪಂಡಿತರು ನಕ್ಕರು—ರಾಮುನ ತಾಯಿಯೇ ಒಂದು ತೊಲೆಯ ಬೆಕ್ಕು! ಆಕೆ ರೂಪಾಯಿಯ ಲೋಭಿ ಒಳ್ಳೆಯದಲ್ಲ? ನಿಮ್ಮ ಸೊಸೆಗಿಂತ ಹಣ ಹೆಚ್ಚಿನದೇ? ನಿಮ್ಮ ಸೊಸೆಯು ತಲೆಯ ಮೇಲೆ ದೊಡ್ಡ ಪಾಪದ ಹೊರೆ ಇದೆ.

ಬೆಲೆ ಶುರುವಾಯಿತು. ಕೊನೆಗೆ ೧೧ ತೊಲೆಗೆ ಬೆಕ್ಕನ್ನು ಮಾಡಿಸುವದನ್ನು ನಿಶ್ಚಯಿಸಲಾಯಿತು.

ನಂತರ ಪೂಜೆಯ ಬಗ್ಗೆ ಮಾತುಕತೆ ಸುರುವಾದವು. ಪಂಡಿತರು ಅಂದರು- ಅದರಲ್ಲಿ ಏನು ಕಠಿಣವಿದೆ? ನಾನೆ ಪೂಜೆ ಮಾಡುವೆ. ತಾವು ಪೂಜೆಯ ಸಾಮಾನನ್ನು ನಮ್ಮ ಮನೆಗೆ ಕಳಿಸಿರಿ.

"ಪೂಜೆಯ ಸಾಮಾನು ಎಷ್ಟು ಹತ್ತುವವು? ಎಂದು ರಾಮುನ ತಾಯಿ ಕೇಳಿದಳು. ಕಡಿಮೆ ದರದಲ್ಲಿ ನಾನು ಪೂಜೆ ಮಾಡಿ ಕೊಡುವೆ. ದಾನದ ಸಲುವಾಗಿ ಸುಮಾರು ೧೦ ಮಣ ಗೋದಿ, ೧ ಮಣ ಅಕ್ಕಿ, ೧ ಮಣ ಬೇಳೆ, ೧ ಮಣ ಎಳ್ಳು, ೫ ಮಣ ಸೆಜ್ಜೆ, ೫ ಮಣ ಕಡಲೆ, ೪ ಪಂಚ್ಛೆರ ತುಪ್ಪ ಮತ್ತು ೧ ಮಣ ಉಪ್ಪು ಸಾಕು ಇಷ್ಟರಲ್ಲಿ ಆಗುವದು. "ಅಯ್ಯಪ್ಪಾ ಇಷ್ಟು ಸಾಮಾನುಗಳು! ಪಂಡಿತಜೀಯವರೇ ಇಷ್ಟಕ್ಕೆ ನೂರರಷ್ಟು ರೂಪಾಯಿಗಳು ಖರ್ಚಾಗುವವು." ರಾಮೂನ ತಾಯಿಯು ಅಳುವ ಧ್ವನಿಯಲ್ಲಿ ಹೇಳಿದಳು. "ಇದಕ್ಕಿಂತಲೂ ಕಡಿಮೆ ಆಗಲಾರದು! ಬೆಕ್ಕಿನ ಹತ್ಯೆಯು ದೊಡ್ಡ ಪಾಪವಿದೆ. ಖರ್ಚನ್ನು ನೋಡುವದಕ್ಕಿಂತ ನಿಮ್ಮ ಪಾಪದ ಹೊರೆ ನೋಡಿ ಕೊಳ್ಳಿರಿ. ಇದು ಪ್ರಾಯಶ್ಚಿತ್ತವು. ಇದು ನಗುವ ಮಾತಲ್ಲ. ಪಂಡಿತ ಪರಮಸುಖರ ಮಾತುಗಳನ್ನು ಕೇಳಿ ಪಂಚರು ಪ್ರಭಾವಿತರಾದರು. ಕೊನೆಗೆ ೨೧ ದಿನದ ೨೧ ರೂಪಾಯಿ ಎರಡೂ ಹೊತ್ತು ೫ ಜನ ಬ್ರಾಹ್ಮಣರಿಗೆ ಊಟಕ್ಕೆ ಹಾಕುವದು. ಕೊನೆಗೆ ಪಂಡಿತ ಪರಮಸುಖರೆಂದರು- "ಚಿಂತೆ ಮಾಡಬೇಡಿರಿ. ನಾನೊಬ್ಬನೇ ಎರಡು ಹೊತ್ತೂ ಊಟ ಮಾಡುವೆ. ನಾನೊಬ್ಬನೇ ಊಟ ಮಾಡುವದರಿಂದ ೫ ಜನ ಬ್ರಾಹ್ಮಣರ ಫಲ ಸಿಗುವದು."

ಅಡಿಗೆಯವಳೆಂದಳು— "ಮೊದಲು ಪಂಡಿತಜೀಯವರ ಹೊಟ್ಟೆಯನ್ನು ನೋಡಿರಿ. ಹೀಗೆಂದು ವ್ಯಂಗ ಮಾಡಿದಳು.

ಪಂಡಿತ ಪರಮಸುಖರೆಂದರು— "ಒಳ್ಳೆಯದು. ಪ್ರಾಯಶ್ಚಿತ್ತದ ತಯಾರಿ ಮಾಡಿರಿ. ೧೧ ತೊಲೆ ಭಂಗಾರ ತೆಗೆಯಿರಿ. ನಾನು ಅದರ ಬೆಕ್ಕನ್ನು ಮಾಡಿಸಿಕೊಂಡು ೧ ತಾಸಿನಲ್ಲಿ ತರುತ್ತೇನೆ. ಅಲ್ಲಿಯ ವರೆಗೆ ನೀವು ಪೂಜಾ ತಯಾರಿ ಮಾಡಿರಿ." ಪಂಡಿತಜೀಯವರ ಮಾತು ಮುಗಿದಿದ್ದಿಲ್ಲ ಕಸಗೂಡಿಸುವಳು ತೇಕುತ್ತ ಬಂದಳು, ಎಲ್ಲರೂ ಗಾಬರಿಯಾದರು. ರಾಮುನ ತಾಯಿಯು ಗಾಬರಿಯಿಂದ ಕೇಳಿದಳು— ಏನಾಯಿತು? ತೊದಲ್ನುಡಿಯಿಂದ ಹೇಳಿದಳು "ಅಮ್ಮನವರೇ ಬೆಕ್ಕು ಎದ್ದು ಓಡಿ ಹೋಯಿತು. ಆಗ ಪಂಡಿತ ಪರಮಸುಖರ ಮೋತಿಯ ಮೇಲಿನ ಆನಂದದ ಕಳೆ ಮಾಯವಾಯಿತು.

## ಹೋಗಿ ಬಾರಮ್ಮಾ ಮಗಳೆ ಹೋಗಿ ಬಾರಮ್ಮಾ

ಹೋಗಿ ಬಾರಮ್ಮಾ ಮಗಳೆ ಹೋಗಿ ಬಾರಮ್ಮಾ
ಪತಿಯ ಸೇವೆ ಛಂದದಿ ಗೈದು
ಸತಿಪತಿಯರು ಒಟ್ಟಿಗೆ ಕೂಡಿ
ಮಕ್ಕಳನ್ನು ಪಡೆದು ಹಡೆದು
ಸುಖದಿಂದಲಿ ಬಾಳಮ್ಮಾ ಓ ಓ ಸುಖದಿಂದಲಿ ಬಾಳಮ್ಮಾ
ಹೋಗಿ ಬಾರಮ್ಮಾ ಮಗಳೆ ಹೋಗಿ ಬಾರಮ್ಮಾ ||೧||

ಅತ್ತೆ ಮಾವಂದಿರಿಗೆ
ಇದಿರು ಮಾತುಗಳಾಡದೆ
ಇಬ್ಬರ ಸೇವೆ ಛಂದದಿ ಗೈದು
ಹೌದನಿಸಿ ಕೊಳ್ಳಮ್ಮಾ ಓ ಓ ಹೌದನಿಸಿ ಕೊಳ್ಳಮ್ಮಾ
ಹೋಗಿ ಬಾರಮ್ಮಾ ||೨||

ಮಾವನ ಮನೆಗೆ ಹೋದ ಮೇಲೆ
ಓಲೆಗಳನ್ನು ಹಾಕ್ತಿರಬೇಕಮ್ಮಾ
ಅಲ್ಲಿಗೆ ಹೋದ ಮೇಲೆ ನಮ್ಮನ್ನೆಲ್ಲ
ಮರೆಯಲೆ ಬಾರದಮ್ಮಾ ಓ ಓ ಮರೆಯಲೆ ಬಾರದಮ್ಮಾ
ಹೋಗಿ ಬಾರಮ್ಮಾ ಮಗಳೆ ಹೋಗಿ ಬಾರಮ್ಮಾ ||೩||

ಕೃಷ್ಣಾ ಪಂಢರಪೂರ

# ಅಗುಳಿನಮೇಲೆ ಅನ್ನದ ಪರೀಕ್ಷೆ

ಒಂದು ಊರಲ್ಲಿ ಸತೀಶನೆಂಬ ಹೆಸರಿನ ಒಬ್ಬ ವಿದ್ಯಾರ್ಥಿ ಇರುತ್ತಿದ್ದನು ಅವನು ವೈದ್ಯಕೀಯ ಶಿಕ್ಷಣ ಪಡೆಯಲು ಮುಂಬಯಿಗೆ ಹೊರಟನು. ಬೆಳಗಾವಿ ನಿಲ್ದಾಣದಲ್ಲಿ ಉಗಿ ಬಂಡಿ ನಿಲ್ಲುತ್ತಲೆ ಜನರ ಗದ್ದಲ ಹೆಚ್ಚಾಯಿತು. ಈ ಗದ್ದಲ ದಿಂದ ಸತೀಶನಿಗೆ ಆರಾಮು ಎನಿಸದಂತಾಯಿತು. ಅವನು ಸರಿ ಸರಿದು ಒಬ್ಬೊಬ್ಬರಿಗೆ ಸ್ಥಳವನ್ನು ಮಾಡಿ ಕೊಟ್ಟನು. ಪಕ್ಕದಲ್ಲಿ ಬಂದು ಕುಳಿತ ಸಂಜೀವನೂ ಮುಂಬಯಿಗೆ ಇದೇ ಶಿಕ್ಷಣವನ್ನು ಪಡೆಯುವದಕ್ಕಾಗಿ ಹೊರಟವನು. ಇಬ್ಬರಿಗೂ ಮಾತಿಗೆ ಆರಂಭವಾಗಿ ಇಬ್ಬರೂ ಒಂದೇ ಬಗೆಯ ಶಿಕ್ಷಣಕ್ಕಾಗಿ ಹೊರ ಟಿರುವರೆಂಬ ಭಾವನೆ ಬೆಳೆದು, ಇಬ್ಬರಲ್ಲಿಯೂ ಗೆಳೆತನವು ಆರಂಭವಾಯಿತು. ಇಬ್ಬರ ಚರ್ಚೆಯಲ್ಲಿ ಅಂದಿನ ರಾತ್ರಿಯು ನಿರಾಯಾಸವಾಗಿ ಕಳೆಯಿತು.

ಗಾಡಿಯಲ್ಲಾದ ಗೆಳೆತನದಿಂದ ಇಬ್ಬರೂ ಒಂದೇ ಕಡೆಗೆ ಇರಹತ್ತಿದರು. ಯಾವಾಗಲೂ ಕೂಡಿಯೇ ಅಭ್ಯಾಸ ಮಾಡು ತ್ತಿದ್ದರು. ವಿಷಯದಲ್ಲಿ ತಮಗೆ ಬಂದ ಸಂಶಯಗಳನ್ನು ಚರ್ಚಿ ಸುತ್ತಿದ್ದರು. ಸತೀಶನು ಸರಳ ಹೃದಯಿ. ಸಂಜೀವನೊಡನೆ ನಿರ್ಮಲವಾದ ಸಖ್ಯದ ಪ್ರೇಮವನ್ನಿಟ್ಟು ಅವನ ಸಲುವಾಗಿ ಬೇಕಾದ್ದನ್ನು ಮಾಡಲು ಸಿದ್ಧನಾಗಿದ್ದನು. ಆದರೆ ತದ್ವಿರುದ್ಧ ವಾಗಿ ಸಂಜೀವನು ಸ್ವಾರ್ಥಿ, ಹೇಗಾದರೂ ಮಾಡಿ ಸತೀಶ ನನ್ನು ಹಿಂದೂಡಿ ತಾನು ಮುಂದೆ ಹೋಗಲು ಹವಣಿಸುದ್ದನು ಆದರೆ ಇದನ್ನು ಬಹಿರಂಗವಾಗಿ ತೋರ್ಪಡಿಸುತ್ತಿದ್ದಿಲ್ಲ.

ಅಂದು ೩ ತಿಂಗಳ ಪರೀಕ್ಷೆ ಪ್ರಯೋಗ ಶಾಲೆಗಳಲ್ಲಿ ಪ್ರಯೋಗಗಳು ನಡೆದಿವೆ. ಸತೀಶ ಹಾಗು ಸಂಜೀವರು ಒಂದೆ ಡೆಯಲ್ಲಿಯೇ ನಿಂತು ಪ್ರಯೋಗ ನಡೆಸಿದ್ದಾರೆ ಸತೀಶನು ತನ್ನ ಪ್ರಯೋಗದ ಟಿಪ್ಪಣಿಗಳನ್ನು ಬರೆದಿಡುವದಕ್ಕಾಗಿ ಕೋಟಿನ ಕಿಶೆಗೆ ಕೈ ಹಾಕಿದನು. ಪೆನ್ನು ಇದ್ದಿದ್ದಿಲ್ಲ. ಗಾಬರಿಯಾಗಿ ಹತ್ತರ ಇದ್ದ ಸಂಜೀವನನ್ನು ಪೆನ್ನು ಕೇಳಿದನು. ಸಂಜೀವನು ತಾನು ಬರೆಯುವದಲ್ಲದೆ ಬೇರೊಂದು ಪೆನ್ನು ಇದ್ದರೂ ಕೂಡ ಅದು ಮುರಿದಿದೆ. ನಿರುಪಯೋಗಿ ಎಂದು ಹೇಳಿದನು. ಇದರಿಂದ ಸತೀಶನು ಗಾಬರಿಗೊಂಡು ಬೇರೆಯವರ ಪೆನ್ನು ಕೇಳಿ ಬರೆದು ಮುಗಿಸುವಷ್ಟರಲ್ಲಿ ಗಂಟೆಯಾಯಿತು. ಪ್ರಯೋಗ ಪೂರ್ಣವಾಗ ಲಿಲ್ಲ. ಆದ್ದರಿಂದ ಸತೀಶನಿಗೆ ವಿಷಾದವಾಯಿತು. ಸಂಜೀವನು ವಿಷಾದವನ್ನು ವ್ಯಕ್ತ ಪಡಿಸದೆ ಒಳಗೊಳಗೆ ಹಿಗ್ಗಿದನು. ಸತೀ ಶನು ಸಂಜೀವನನ್ನು ಬೇರೆಯವರಿಂದ ಆಂತರಿಕವಾಗಿ ತಿಳಿದು ಕೊಂಡು "ಅನ್ನವನ್ನು ಅಗುಳಿನಲ್ಲಿಯೇ ಪರೀಕ್ಷಿಸಬೇಕೆಂ" ದು ಕೊಂಡು ಅತನೊಡನೆ ಇರುವದನ್ನು ಬಿಟ್ಟು ಬೇರೆ ಕಡೆಗೆ ಇದ್ದು ಅಭ್ಯಾಸ ಮಾಡತೊಡಗಿದನು.

---

## ಚುಟುಕುಗಳು

ನನ್ನ ತಮ್ಮ ರಂಗ
ಅವನ ಗೆಳೆಯ ಸಂಗ.
ರಂಗ ಸಂಗ ಕೂಡಿಕೊಂಡು,
ಹಿಡಿದರೊಂದು ಮಂಗ.

ನನ್ನ ಗೆಳೆಯ ಕಲ್ಲಾ,
ಅವನ ತಮ್ಮ ಮಲ್ಲಾ,
ಕಲ್ಲಾ ಮಲ್ಲಾ ಕೂಡಿಕೊಂಡು
ಕದ್ದರೆರಡು ಕರಣಿ ಬೆಲ್ಲಾ.

## ನಗೆಹನಿ

ಗುರು: ಕಮಲಾ! ಇಂದು ಶಾಲೆಗೆ ಇಷ್ಟೇಕೆ ತಡ ವಾಗಿ, ಬಂದೆ ?

ಕಮಲಾ: ನಾನೇನು ಮಾಡಲಿ ಗುರುಗಳೇ! ನಾನು ಬರುವದರೊಳಗಾಗಿಯೇ ಗಂಟೆಯಾಗಿ ಹೋಗಿದೆ.

### ಬೀಜ ಪ್ರಶ್ನೆ

ಯಾವನಾದರೊಬ್ಬ ಮನುಷ್ಯನು ನನಗೆ ಮೈಯಲ್ಲಿ ಆರಾಮ ಇಲ್ಲ ಎಂದು ಡಾಕ್ಟರರಿಗೆ ಹೇಳಿದರೆ, ಅವರು ಕೂಡಲೇ ನಾಲಿಗೆಯನ್ನೇ ಏಕೆ ಪರೀಕ್ಷೆ ಮಾಡುತ್ತಾರೆ ? ದಯವಿಟ್ಟು ನನಗೆ ಪತ್ರದ ಮುಖಾಂತರ ಈ ಪ್ರಶ್ನೆಯ ಉತ್ತರ ವನ್ನು ಕಳಿಸಬೇಕಾಗಿ ನನ್ನ ನಮ್ರ ಬಿನ್ನಹ.

To, S. T. Kulkarni
C/o M. D. Tabib. Tabib Wade Fort
New Hubi

# ಚಲನ ಚಿತ್ರ

ಲೇಖಕ : ಭೀಮು. ಕೃ. ರಾಣೆಬೆನ್ನೂರ, ಸೆಂಟ್ರಲ್ ಸ್ಕೂಲ, ಧಾರವಾಡ

ನಮಗೆ ಆಯಾ ಚಲನ ಚಿತ್ರಗಳಿಂದ ಆಯಾ ಮಾತುಗಳು ತಿಳಿಯುತ್ತದೆ. ಹಾಗೆಯೇ ಫಿಲ್ಮ "ದೋಆಂಖೆ ಬಾರಾಹಾಥ" ದಿಂದ ನಾವು ಕಲಿಯುವಂತಹ ಗುಣಗಳು ಅಡಕವಾಗಿವೆ. ಆದುದರಿಂದ ಅದು ನನ್ನ ಮನಸ್ಸಿಗೆ ಸೇರಿದೆ.

ಯಾವದೇ ಚಲನ ಚಿತ್ರವಾಗಲಿ ಅದರಲ್ಲಿ ಸಮಾಜಕ್ಕೆ ಕಲ್ಯಾಣವಾಗುವಂತಹ ಮಾತುಗಳಿರಬೇಕು. ಅಲ್ಲದೇ ಆ ಚಲನ ಚಿತ್ರವು ಮನಸ್ಸನ್ನು ಕೆರಳಿಸುವಂಥಹದ್ದಿರಬೇಕು. ಅದನ್ನು ನೋಡಿದ ಕೂಡಲೇ "ನಾವು ಏನಾದರೂ ಮಹತ್ವದ ಕಾರ್ಯ ಮಾಡಬೇಕೆಂದು" ಅನ್ನಿಸುವಂಥಹದಿರಬೇಕು. ಅಂದರೆ ಆ ಚಲನ ಚಿತ್ರವು ಒಳ್ಳೆಯದು. ಎಂದು ಹೇಳಲು ಅಡ್ಡಿಯಿಲ್ಲ.

ಈಗ ನಾನು ಮೇಲೆ ಹೇಳಿದ ಸಂಗತಿಗಳು ಈ "ದೋ ಆಂಖೆ ಬಾರಹ ಹಾಥ" ದಲ್ಲಿ ಬಂದಿವೆ. ಆದ್ದರಿಂದಲೇ ಇದು ಒಳ್ಳೆಯದೆಂದು ನಾನುಕೈಕೊಟ್ಟು ಹೇಳಬಲ್ಲೆ.ಅದು ಹೀಗೆಇದೆ.

" ಏಳು ಜನರು ತುಡುಗರಿರುತ್ತಾರೆ." (ಕೊಲೆಗಡಕ) ಅವರನ್ನು ಬಂದೀಖಾನೆಯಲ್ಲಿಡುತ್ತಾರೆ. ಆದರೂ ಅವರು ತಮ್ಮ ಗುಣಗಳನ್ನು ಬಿಡುವದಿಲ್ಲ; ಕಡೆಗೆ ಅಲ್ಲಿಯ ಒಬ್ಬ ಸಿಪಾಯಿಯೇ ತನ್ನ ಆತ್ಮ ಬಲ ಸಾಹಸದಿಂದ ಮತ್ತು ಮಾನಸಿಕ ದೃಷ್ಟಿಯಿಂದ ಅವರನ್ನು ಒಳ್ಳೆಯ ನಾಗರಿಕರನ್ನಾಗಿ ಮಾಡುತ್ತಾನೆ. ನೋಡಿರಿ ! ಅವನು ಬೇರೆಯವಗನ್ನು ಸುಧಾರಿಸಲಿಕ್ಕೆ ಎಷ್ಟು ಕಷ್ಟಪಟ್ಟನು. ಅಲ್ಲದೇ ಎಷ್ಟು ಹೆಣಗಾಡಿದನು. ಇದು ಸೇವೆಯಲ್ಲವೆ ? ಮತ್ತು ವಿದ್ಯಾರ್ಥಿಗಳು ಗುರುಗಳು ಕಲಿಯ ಬೇಕಾದುದು ಏನೆಂದರೆ ?ದಡ್ಡರನ್ನು ಹೇಗೆ ಸುಧಾರಿಸುವದು ಎಂಬುದು ಇದರಲ್ಲಿ ಬಂದಿದೆ. ಆ ಸಿಪಾಯಿಯು ಅವರನ್ನು ಮಾನಸಶಾಸ್ತ್ರದಿಂದ ಮುಂದೆ ತಂದನು. ಇದರಿಂದ ನಮಗೆ ಮಾನಸಶಾಸ್ತ್ರದ ಅರಿವೂ ಮೂಡುತ್ತದೆ. ಇಷ್ಟೇ ಅಲ್ಲದೇ ಇದು ಹೃದಯಂಗಮ ಕಥೆಯೂ ಅಗಿದೆ. ಇದು ಈಗಿನ ರೀತಿಯಿಂದಲೂ ಒಳ್ಳೆಯ ಪ್ರಸಿದ್ಧ ಕಥೆಯೂ ಆಗಿದೆ.

ಈ ಚಲನಚಿತ್ರದ ಮಹಿಮೆಯು ಇಡೀ ಜಗತ್ತಿನ ತುಂಬ ಹಬ್ಬಿದೆ. ರಶಿಯಾ ದೇಶವು ಇದಕ್ಕೆ ಬಹಳ ಬೆಲೆಕೊಟ್ಟಿದೆ. ಅಲ್ಲದೆ ತಮ್ಮ ದೇಶದಲ್ಲಿ ಇದನ್ನು ತರಿಸಿಕೊಂಡಿದ್ದಾರೆ. ಅಲ್ಲದೇ ಇದು ? ಐವತ್ತುಎಂಟನೆಯ ಇಸ್ವಿಯ ಪ್ರಸಿದ್ಧ ಚಿತ್ರವೆಂದು ಮನಗಾಣಿಸಲಾಗಿದೆ. ಅಲ್ಲದೇ ಇದಕ್ಕೆ ನಮ್ಮ ರಾಷ್ಟ್ರಾಧ್ಯಕ್ಷರ ಅಮೃತಹಸ್ತದಿಂದ ಇದು ೧ನೆಯ ನಂಬರ ಫಿಲ್ಮೆಂದು. ಇದಕ್ಕೆ ಸುವರ್ಣ ಪದಕವನ್ನು ಕೊಡಲಾಗಿದೆ.

ಈ ರೀತಿಯಿಂದ ನಾನು ಇದನ್ನು ಧೈರ್ಯಗೊಟ್ಟು ಹೇಳುತ್ತೇನೆ ಎಂಬುದರ ಅರ್ಥ ತಮಗೆ ಈಗಲಾದರೂ ತಿಳಿಯದೇ ಇರಲಾರವು.

ನಾವು ಇದರಿಂದ ಸಮಾಜಸೇವೆ, ಧೈರ್ಯ, ಸಾಹಸ, ಆತ್ಮಬಲ, ಹಿಡಿದ ಕೆಲಸವನ್ನು ಪೂರ್ಣವಾಗುವ ತನಕ ಬಿಡದೇ ಇರುವ ಹಟ, ಆತ್ಮವಿಶ್ವಾಸ ಮುಂತಾದ ಗುಣಗಳನ್ನು ಕಲಿಯುವೆವು

# ಫೋನೋ

[ ಗೋಕಾಕರ " ರೇಡಿಯೊ " ಓದಿ ]

ಏನೋ ಏನಕೇನೋ.
ಹೇಳಿ ತಂದೆಫೋನೋ.
ನೀನೇ ನನ್ನ ಅಳಿಯನು.
ಬಾ ಹೀಗಿದೆ ಆಸನು.
ಹಾಡು ಹಾಡು ಸುಂದರ ಹಾಡು.
ತಿನ್ನುವಂತಿರಲಿ ಸವಿಲಾಡು.
ವಿಕಾಸವಾಗಲಿ ನಿನ್ನಯ ಬಾಳು.
ಕೆಡವ ಬೇಡ ಅದನು ಪಾಳು.
ಮಧುಮತಿ ನಯಾದೌರ ಅನಾಡಿ.
ಮನವ ತಣಿಸು ಕೂಡಿ ಹಾಡಿ.
ಬಗುರಿಯ ಹಾಗೇ ತಿರುಗುತಿರು.
ತಿರುಗುತ ತಿರುಗುತ ಹಾಡುತಿರು.
ಹುಟ್ಟಿಸಿದನಿನ್ನನ್ನು ಥಾಮಸ್ ಅಲ್ವಾ ಏಡಿಸನ್ನು
ಬಾ ರಂಜಿಸೆನ್ನ ಮನವನ್ನು.
ಕೈತಿರುವಿ ಹಾಕುವರು ನಿನಗೆ ಕೂಳು.
ಕೋಪಿಸಿಕೊಳ್ಳಬೇಡ ಸ್ವಲ್ಪ ತಾಳು.
ನಮಪಿನ್ನ ಬೇಕೆ ಚಾವಿ ಬೇಕೆ ಹೇಳು.
ನಿನಗೆ ಪೂರೈಸುವವನೇ ನಮ್ಮ ಆಳು.
ನೀನು ಹಾಡಿ ತಣಿಸುವದೇ ಧರ್ಮ.
ಕೇಳಿ ತಲೆದೂಗುವದೇ ನಮ್ಮ ಕರ್ಮ !
ನೀನು ಬಲ್ಲೆ ಎಲ್ಲ ಬಾಸೆ.
ಎಂಥಹ ಹಿರಿಭಾರಿ ಹಿರಿಯಾಸೆ !
ಕಾವ್ಯ ಪಾಕ ಬಿಡಿಸುವೆ ನೀನು.
ನಿನಗೆ ತಿಳಿಯದ ಸಂಗೀತವಿವುದೇನು.
ಸರಿಯಿತಯ್ಯೋ ನಿನ್ನ ನಾಟಿ.
ಸಾಕಿನ್ನು ಹೊಡೆ ತಮಟಿ.

ಸಂಗಮೇಶ

## ಸೂಚನೆ

* ಲೇಖನಗಳು, ಅಸ್ಪಷ್ಟ ರೀತಿಯಲ್ಲಿ ಬರೆದವು ಬರುತ್ತಿದ್ದು, ಮುದ್ರಣ ಕಾರ್ಯಕ್ಕೆ ತುಂಬಾ ತೊಂದರೆಯಾಗುತ್ತದೆ. ಲೇಖಕರು ಸುಸ್ಪಷ್ಟ ರೀತಿಯಲ್ಲಿ ಬರೆದ ಲೇಖನಗಳನ್ನು ಸಂಪಾದಕರ ವಿಳಾಸಕ್ಕೆ ಕಳುಹಿಸಬೇಕು.

* ಇನ್ನೂ ವರೆಗೂ ಚಂದಾ ಹಣವನ್ನು ಕಳಿಸದ ಚಂದಾ ದಾರರು ಆದಷ್ಟು ಕೂಡಲೆ ಕಾರ್ಯದರ್ಶಿ 'ವೀರಮಾತೆ' ವನಿತಾ ಸೇವಾ ಸಮಾಜ, ಧಾರವಾಡ. ಈ ವಿಳಾಸಕ್ಕೆ ಚಂದಾಹಣವನ್ನು ಕಳುಹಿಸಿಕೊಡಬೇಕು.

* ಚಂದಾದಾರರು, ತಮ್ಮ ವಿಳಾಸ ಬದಲಾದಲ್ಲಿ, ಹಾಗೆ ತಿಳಿಸಿದರೆ, 'ವೀರಮಾತೆ' ಯು ತ್ವರಿತವಾಗಿ ಮುಟ್ಟು ವಂತೆ ದಕ್ಷತೆ ವಹಿಸಲಾಗುವದು.

* ಲೇಖಕರು ಅಥವಾ ವಾಚಕರು, ಲೇಖ ಕಳಿಸುವದಾಗಲಿ ಉಳಿದ ಯಾವದೇ ಪತ್ರವ್ಯವಹಾರ ಮಾಡುವಾಗ ತಮ್ಮ ವಿಳಾಸವನ್ನು ಸ್ಪಷ್ಟ ರೀತಿಯಲ್ಲಿ ಬರೆದು ತಿಳಿಸಲು ಮರೆಯಬಾರದು.

* ಹೊಸದಾಗಿ ಚಂದಾದಾರರಾಗಬಯಸುವವರು, ಚಂದಾ ಹಣವನ್ನು ಮೊದಲು ಕೊಟ್ಟು, ಕಳಿಸಿದರೆ, ಮಾಸಿಕವನ್ನು ಅವರ ವಿಳಾಸಕ್ಕೆ ಕಳಿಸುವತ್ತ ಗಮನಿಸಲಾಗುವದು.

* ಸೋದರ, ಸೋದರಿಯರು, ಅಕ್ಕನಟ್ಟಿಗೆಯ ವಿಭಾಗ ದಲ್ಲಿ ಬರುವ ಸ್ಪರ್ಧೆಗಳಿಗೆ ಉತ್ತರಗಳನ್ನು ಪ್ರತಿತಿಂಗಳ ೧೦ ನೇ ತಾರೀಖಿನ ಒಳಗಾಗಿ ಕಳುಹಿಸಬೇಕು.

* * * * * *

---

ಬಟವಡೆಯಾಗದಿದ್ದರೆ ಹಿಂದಿರುಗಿಸಿರಿ

ಕಳಿಸಿದವರ ವಿಳಾಸ:—
"ವೀರಮಾತೆ" ಕಾರ್ಯಾಲಯ
ವನಿತಾ ಸೇವಾ ಸಮಾಜ
ಶುಕ್ರವಾರ ಪೇಟ
ಧಾರವಾಡ ೧

ADDRESS

To,
ಶ್ರೀ.
C/o


ಮುದ್ರಕರು : ಶ್ರೀಯುತ ಕುಲಕರ್ಣಿ ರಾಮರಾಯರು
ಸ್ಥಳ : ವನಿತಾ ಪ್ರಿಂಟಿಂಗ ಪ್ರೆಸ್, ಧಾರವಾಡ
ಪ್ರಕಾಶಕರು : ಶ್ರೀ. ಲ. ರಂ. ಪುರಾಣಿಕ
ಸ್ಥಳ : ವನಿತಾ ಸೇವಾ ಸಮಾಜದಲ್ಲಿಯ ಕಾರ್ಯಾಲಯ, ಧಾರವಾಡ




ಸಂಪುಟ ೮ ] ಮೇ ೧೯೬೦ [ ಸಂಚಿಕೆ ೧೨

# 'VEERAMATE' WOMEN'S VOICE

The Largest Circulated

KANNADA MONTHLY

---

ರಜಿಸ್ಟ್ರೇಶನ್ ಆಫ್ ನ್ಯೂಜ ಪೇಪರ್ಸ (ಸೆಂಟ್ರಲ್) ರೂಲ್ಸ ೧೯೫೬ರ ೮ನೇ ನಿಯಮಕ್ಕೆ ಸಂಬಂಧಿಸಿದಂತೆ "ವೀರಮಾತೆ" ಮಾಸಪತ್ರಿಕೆಯ ಸ್ವಾಮಿತ್ವ ಮತ್ತು ಇತರ ವಿಷಯಗಳ ಬಾಬತ ವಿವರ:—

| | | |
|---|---|---|
| ೧. | ಪ್ರಕಾಶನ ಸ್ಥಳ— | ವನಿತಾ ಸೇವಾ ಸಮಾಜ ಧಾರವಾಡ. |
| ೨. | ನಿಯಮಿತ ಕಾಲಿಕತೆ— | ಮಾಸಪತ್ರಿಕೆ |
| ೩. | ಮುದ್ರಕರ ಹೆಸರು— | ರಾಮರಾವ ಕುಲಕರ್ಣಿ |
| | ರಾಷ್ಟ್ರೀಯತೆ— | ಭಾರತೀಯ |
| | ವಿಳಾಸ— | ವೀರಮಾತೆ ಕಾರ್ಯಾಲಯ ಧಾರವಾಡ |
| ೪. | ಪ್ರಕಾಶಕರ ಹೆಸರು— | ಲ. ರಂ. ಪುರಾಣಿಕ |
| | ರಾಷ್ಟ್ರೀಯತೆ— | ಭಾರತೀಯ |
| | ವಿಳಾಸ -- | ವನಿತಾ ಸೇವಾ ಸಮಾಜ ಧಾರವಾಡ |
| ೫. | ಸಂಪಾದಕರ ಹೆಸರು— | ಸರೋಜಿನಿ ಮಹಿಷಿ ಎಮ್. ಎ. ಎಲ್‌ಎಲ್. ಬಿ. |
| | ರಾಷ್ಟ್ರೀಯತೆ— | ಭಾರತೀಯ |
| | ವಿಳಾಸ— | ಲೈನಬಝಾರ ಧಾರವಾಡ |
| ೬. | ಪತ್ರಿಕಾ ಸ್ವಾಮಿತ್ವ ವಿಳಾಸ— | ಕಾರ್ಯಕಾರಿ ಮಂಡಳ |
| | ಮತ್ತು ಬಂಡವಾಳದಲ್ಲಿ ನೂರಕ್ಕೆ ೧ಕ್ಕಿಂತ ಹೆಚ್ಚು ಹಣ ಹಾಕಿದವರ ವಿವರ — | ವನಿತಾ ಸೇವಾ ಸಮಾಜ ಧಾರವಾಡ |

ಕಾರ್ಯಕಾರಿ ಮಂಡಳದ ಕಾರ್ಯದರ್ಶಿಯಾದ ಲ. ರಂ. ಪುರಾಣಿಕನಾದ ನಾನು ಮೇಲಿನ ವಿವರಗಳಲ್ಲಿಯ ಎಲ್ಲ ವಿಷಯಗಳು ನನಗೆ ತಿಳಿದ ಮಟ್ಟಿಗೆ ಸತ್ಯವೆಂದು ಈ ಮೂಲಕ ಘೋಷಿಸುತ್ತೇನೆ.

ಲ. ರಂ. ಪುರಾಣಿಕ.

# ಪರಿವಿಡಿ

## “ ವೀರಮಾತೆ ” ಚಂದಾದಾರರಲ್ಲಿ

### ಕೃತಜ್ಞತೆಯ ಅಭಿನಂದನೆ.

ಮಾನ್ಯರೇ ಚಂದಾ ಹಣದ ಬಗೆಗೆ ನಾವು ಕೇಳಿದ ಮುದ್ರಿತ ಕಾರ್ಡಿನ ಮೇರೆಗೆ ಚಂದಾ ಹಣವನ್ನು ಕಳುಹಿಸಿದ್ದಕ್ಕೆ ನಾವು ತುಂಬಾ ಕೃತಜ್ಞರಾಗಿದ್ದೇವೆ. ನಿಮ್ಮ ಅನುವು ಆಪತ್ತುಗಳನ್ನು ಬದಿಗಿರಿಸಿ ಹೆಣ್ಣುಮಕ್ಕಳ ಕಲ್ಯಾಣಕ್ಕಾಗಿ ಮೂವತ್ತು ವರುಷಗಳಿಂದ ಹೆಣಗುವ ವನಿತಾ ಸೇವಾಸಮಾಜಕ್ಕೆ ಪತ್ರಿಕೆಯ ಚಂದಾಹಣದ ರೂಪದಿಂದ ಸಹಾಯ ಸಲ್ಲಿದ್ದಕ್ಕೆ ನಿಮಗೆ ಆಯುರಾರೋಗ್ಯ ಧನದಾನ್ಯಗಳನ್ನು ದೇವರು ದಯಪಾಲಿಸಲೆಂದು ಅನನ್ಯಭಾವದಿಂದ ದೇವರಲ್ಲಿ ಪ್ರಾರ್ಥನೆ ಅದೆ.

ಕಾಲವು ಕಠಿಣವಿದ್ದ ಮೂಲಕ ಒಮ್ಮೆಲೆ ಕಳಿಸಲಾಗದವರು ವರುಷಾವಧಿಯಲ್ಲಿ ಕಂತಿನಿಂದ ಮುಟ್ಟಿಸಬಹುದು. ಸಾಧ್ಯವಿದ್ದಷ್ಟು ಮುಟ್ಟಿಸಿ ಹಿಂದಿನ ಬಾಕಿಯನ್ನು ಮುಟ್ಟಲು ತಿಳಿಸಿ ಮುಂದಿನ ಚಂದಾ ಹಣವನ್ನು ಯೋಗ್ಯ ರೀತಿಯಲ್ಲಿ ಸಲ್ಲಿಸುತ್ತ ಹೋಗಬಹುದು. ಪತ್ರಿಕೆಯು ಬರುವನ್ನು ನಿರಾಕರಿಸದಿದ್ದರೆ ತಾವು ಅಪೇಕ್ಷಿಸಿದ ಸವಲತ್ತನ್ನು ಸಲ್ಲಿಸಲು ವೀರಮಾತೆಯು ಸಿದ್ಧಳಿರುವಳು.

ಪತ್ರವನ್ನು ಕಳುಹಿಸಿದವರಲ್ಲಿ ಸ್ವಲ್ಪು ಜನರಿಂದ ಮಾತ್ರ ಉತ್ತರಗಳು ಬಂದಿವೆ. ಅವರ ಆಕ್ಷೇಪಣೆಯ ಬಹು ಭಾಗದ ಉತ್ತರವು ಇದರಲ್ಲಿಯೂ ಹಿಂದಿನ ಎಪ್ರೇಲ ಸಂಚಿಕೆಯಲ್ಲಿಯೂ ಅಡಕವಾಗಿದೆ. ಪ್ರತ್ಯೇಕವಾಗಿಯೂ ಕೆಲವರಿಗೆ ಉತ್ತರ ಹಾಕುತ್ತೇವೆ. ವ್ಹಿ. ಪಿ. ಮಾಡುವ ಅವಧಿಯನ್ನು ೧ ತಿಂಗಳು ಮುಂದುವರಿಸಿದ್ದೇವೆ. ಕಾರಣ ಮೇ ತಿಂಗಳ ಕೊನೆಯ ವರೆಗೂ ಚಂದಾ ಹಣದ ಬಗೆಗೆ ಪತ್ರವ್ಯವಹಾರ ಮಾಡುವದು ಇದ್ದರೆ ದಯವಿಟ್ಟು ಮಾಡಬೇಕು. ಬರೆಯುವಾಗ್ಯೆ ರೂ. ಗಳನ್ನು M. O ಮಾಡುವಾಗ್ಯೆ ನಿಮಗೆ ಬರುವ ಪತ್ರಿಕೆಯ ನಂಬರನ್ನು ಮರೆಯದೇ ನಮೂದಿಸಬೇಕಾಗಿ ಪ್ರಾರ್ಥನೆ.

ವ್ಯವಸ್ಥಾಪಕ **“ ವೀರಮಾತೆ ”**

# ವೀರಮಾತೆ



ಕೇವಲ ಹೆಣ್ಣು ಮಕ್ಕಳ ವಿಕಾಸಕ್ಕಾಗಿ ಮೀಸಲಾದ
ಕನ್ನಡ ಮಾಸಪತ್ರಿಕೆ

ಸಂಪುಟ ೮ | ಮೇ | ಸಂಚಿಕೆ ೧೨

## ಸಂಪಾದಕೀಯ

### ಮಹಿಳೆಯರು ಹಾಗೂ ಚಿಕ್ಕ ಉಳಿತಾಯ ಯೋಜನೆ

ಕೋಟ್ಯಾವಧಿ ರೂಪಾಯಿಗಳ ನಿಧಿಯು ನಮ್ಮ ದೇಶದಲ್ಲಿ ಬೆಳ್ಳಿ-ಬಂಗಾರಗಳ ಆಭರಣಗಳ ರೂಪದಲ್ಲಿ ಕಂಡು ಬರುತ್ತದೆ. ರಾಷ್ಟ್ರದ ಅಭಿವೃದ್ಧಿಗೆ ಧನ ಬೇಕಾಗಿರುವಾಗ, ಒಂದೆಡೆಯಲ್ಲಿ ಹಣ ಈ ರೂಪದಲ್ಲಿ ಕೂಡಿಬಿದ್ದಿರುವದು ನಮ್ಮ ದುರ್ದೈವವೇ ಸರಿ. ನಾವು ಹಣವನ್ನು ಉಳಿಸಬೇಕು, ಉಳಿಸಿದ ಹಣವನ್ನು ರಾಷ್ಟ್ರದ ಆರ್ಥಿಕ ಪ್ರಗತಿಯ ಕಾರ್ಯಗಳಲ್ಲಿ ತೊಡಗಿಸಬೇಕು.

ಬೇರೊಂದು ದಾರಿ ತೋರದೆಂದು ಚಿಕ್ಕ ಉಳಿತಾಯ ಯೋಜನೆಯನ್ನು ಕೈಕೊಳ್ಳಬೇಕು. ಎನ್ನುವದು ಸರಿಯೆನಿಸುವ ಮಾತಲ್ಲ. ಚಿಕ್ಕ ಉಳಿತಾಯ ವಿಧಾಯಕವಾದ ಒಂದು ಕಾರ್ಯ. ಮಧ್ಯಮವರ್ಗದ ಮಹಿಳೆಯರನ್ನುದ್ದೇಶಿಸಿ ಮಾತನಾಡುತ್ತಿದ್ದಾಗ ಅವರೊಂದು ಸಲ ಕೇಳಿದರು, "ಜೀವನಕ್ಕೇ ಹಣ ಸಾಕಾಗದೆಯಿದ್ದಾಗ ಉಳಿತಾಯವನ್ನು ಹೇಗೆ ಮಾಡುವದು?" ಎಂದು. ಜೀವನದ ಮಟ್ಟ ಇಂಥದೇ ಎಂಬ ನಿರ್ಧಾರ ಎಲ್ಲಿಯಾದರೂ ಇದೆಯೇ? ಒಬ್ಬರಿಗೆ ತೀರ ಅವಶ್ಯಕವಾದ ವಸ್ತುವೆಂದು ಕಂಡುಬಂದದ್ದು ಇನ್ನೊಬ್ಬರಿಗೆ ಉಪಭೋಗದ ವಸ್ತುವಾಗಿ ಕಾಣಬಹುದು. ಬದುಕುವ ಹೋರಾಟ ಮುಗಿದು ಒಳ್ಳೆಯ ರೀತಿಯಲ್ಲಿ ಬದುಕಲು ಹೋರಾಟ ನಡೆಯಬೇಕಾದ ಇಂದಿನ ಸಂದರ್ಭದಲ್ಲಿ ಉಸಿರಿಟ್ಟುಕೊಂಡು ಬದುಕುವದೇ ನಮ್ಮ ಜೀವನಮಟ್ಟ ಸಾಗಿಸಕೂಡದು. ಒಳ್ಳೆಯ ಜೀವನಮಟ್ಟಕ್ಕಾಗಿ ಒಟ್ಟು ಪರಿಶ್ರಮ ಪಡುವದು ಅಗತ್ಯವಿದೆ. ಉಳಿತಾಯದ ಶಕ್ತಿ ಹಾಗು ಸಮಯಗಳ ಉಪಯೋಗ ಮಾಡಿಕೊಂಡಲ್ಲಿ ಜೀವನಮಟ್ಟವೂ ಒಳ್ಳೆಯದಾದೀತು ಹಣವೂ ಉಳಿತಾಯವಾದೀತು. ದೇಶದಲ್ಲಿ ಹಣವನ್ನು ಕೂಡಿಸಲು ಮಾತ್ರಾವುದು ಸಾಧನವಿಲ್ಲೆಂದು ಚಿಕ್ಕ ಉಳಿತಾಯವನ್ನು ಕುರಿತು ಇಷ್ಟೊಂದು ಪ್ರಯಾಸ ಪಡುತ್ತಿದ್ದೇವೆ ಎನ್ನುವ ವಿಚಾರವೂ ತಪ್ಪು. ಒಂದೆಡೆಗೆ ವಸ್ತುಗಳ ಏರುತ್ತಿರುವ ಬೆಲೆ, ಇನ್ನೊಂಡೆಗೆ ಚಿಕ್ಕ ಉಳಿತಾಯ; ಎರಡನ್ನೂ ಹೊಂದಿಸಲು ಸಾಧ್ಯವೆ? ಎಂಬ ಪ್ರಶ್ನೆಯೂ ಬರಹುದು. ಇವೆರಡೂ ಪ್ರಶ್ನೆಗಳಿರುವಾಗಲೇ ಇವುಗಳೊಡನೆ ಹೊಂದಿಕೊಂಡು ಇನ್ನೂ ಕೆಲವು ಪ್ರಶ್ನೆಗಳೂ ಇವೆ; ದೇಶದಲ್ಲಿ ಆಭರಣಗಳ ರೂಪದಲ್ಲಿ ಹಣ ಬಿದ್ದಿದೆಯಲ್ಲ? ಅಲ್ಲದೆ ನಮ್ಮ ದಾರಿದ್ರ್ಯಕ್ಕೆ ಉಪಯುಕ್ತ ವಸ್ತುಗಳ ಕೊರತೆ, ಕೊಳ್ಳುವ

ಶಕ್ತಿಯ ಅಭಾವ ಇವೆರಡೇ ಕಾರಣಗಳಲ್ಲ, ಅಜ್ಞಾನ ಆಲಸ್ಯಗಳೂ ಬಹು ಮುಖ್ಯ ಕಾರಣಗಳಾಗಿವೆ. ದುಡಿಯುವದು ಅಗೌರವ ಎಂಬ ಕುರುಡು ನಂಬಿಗೆಯೂ ಜೊತೆಗಿದೆ. ಉಳಿತಾಯದ ಸಮಯವನ್ನು ಸುಲಭವಾಗಿಯೇ ದುಡಿಮೆಯಲ್ಲಿ ಪರಿವರ್ತಿಸಿ ಹಣ ಪಡೆಯಬಹುದು. ಚಿಕ್ಕ ಚಿಕ್ಕ ಕೈಗಾರಿಕೆಗಳನ್ನು ಮಾಡುವದರಿಂದ ಕುಟುಂಬದ ಆರ್ಥಿಕ ಸ್ಥಿತಿಯೂ ಒಳ್ಳೆಯದಾಗುತ್ತದೆ, ರಾಷ್ಟ್ರದ ಉತ್ಪನ್ನವೂ ಹೆಚ್ಚುತ್ತದೆ.

ಸಿರಿವಂತ ವರ್ಗದ ಮಹಿಳೆ ತಾವು ಸಿರಿವಂತರಾಗಿರುವದು ಹಿಂದಿನ ಜನ್ಮದ ಪುಣ್ಯ ಎಂದು ತಿಳಿದರೆ, ದುಡಿಮೆಯ ಪ್ರಶ್ನೆ, ಉಳಿತಾಯದ ಪ್ರಶ್ನೆಗಳು ಅವಳೆದುರು ನಿಲ್ಲುವದೇ ಇಲ್ಲ. ಮಧ್ಯಮ ವರ್ಗದ ಮಹಿಳೆ ದುಡಿಯುವದು ಅಗೌರವವೆಂದು ತಿಳಿಯುವ ಕಾಲ ಇದೀಗ ಮರೆಯಾಗುತ್ತಲಿದೆ. ಶ್ರಮಜೀವಿ ಮಹಿಳೆ, ಅಲ್ಪ ಸ್ವಲ್ಪ ಉಳಿಸಿದ್ದನ್ನೂ, ಅವಳ ಕುಟುಂಬದ ಜನ ತಮ್ಮ ಚಟಗೋಸುಗ ವೆಚ್ಚಮಾಡುತ್ತಾರೆ. ಆದರೆ ಅವಳು ಗಟ್ಟಿಗಳಾದರೆ, ಮಹಿಳೆ ಮನಸ್ಸು ಮಾಡಿದರೆ, ಮನೆಯ ವೆಚ್ಚದಲ್ಲೇ ಹಣ ಉಳಿಸಬಹುದು. ಬಟ್ಟೆ ಸ್ವಲ್ಪ ಹರಿದಿರುವಾಗಲೇ ಹೊಲಿದರೆ ಇನ್ನೂ ನಾಲ್ಕೈಪ್ಪತ್ತು ಬಂದೀತು ಎಂಬುದನ್ನು ಯೋಚಿಸಿ ಮಾಡುವವಳು ಮಹಿಳೆ. ಪುನಃ ಈ ಉಳಿತಾಯದ ಹಣವೂ ಮತ್ತೆ ಉದ್ಯೋಗದಲ್ಲೇ ತೊಡಗಿಸಲ್ಪಡುವದು. ಯೋಜನೆಯ ಮೇರೆಗೆ ನಡೆಯಬೇಕಾದ ನೀರಾವರಿ, ಒಕ್ಕಲತನ, ಕೈಗಾರಿಕೆಗಳು ಹಣವಿಲ್ಲದೆ ನಡೆಯಲಾರವು. ಉತ್ಪಾದನೆ ಹೆಚ್ಚಲು ಹಣವೂ ಬೇಕು, ಮಾನವಬಲವೂ ಬೇಕು. ಚಿಕ್ಕ ಉಳಿತಾಯವೆಂದು ಪುಡಿಕಾಸು ನಾವು ಮಾನವಶಕ್ತಿಯನ್ನು ಎಷ್ಟು ಮಟ್ಟಿಗೆ ಉಪಯೋಗಿಸಿಕೊಳ್ಳುತ್ತಿದ್ದೇವೆ. ಯಾವುದೇ ಪರಿಶ್ರಮವಿಲ್ಲದೆ ವೆಚ್ಚವಾಗಿ ಹೋಗುವ ಮಾನವ ಬಲವನ್ನು ಸರಿಯಾಗಿ ಉಪಯೋಗಿಸಿಕೊಂಡಲ್ಲಿ ರಾಷ್ಟ್ರದಲ್ಲಿ ದೊಡ್ಡ ಉಳಿತಾಯವಾದೀತು!

---

# ಗುಲಾಬಿ ಹೂವು

ಏನು ಅಂದ! ಎಷ್ಟು ಚಂದ!! ಈ ಗುಲಾಬಿ ಹೂವಿದು.
ಸಾನುರಾಗದಿಂದ ನಲಿದು! ನಲಿವ ಚೆಡಗ ಪೇಳ್ವುದು
॥ ಪ ॥

ಬಣ್ಣವೆನಿತು ಮೋಹಕರವು ರೂಪು ಚಲುವಿನಾಗರ!
ಕಣ್ಣು ಹಬ್ಬ ಮಧುರವಾಸನೆಯದು ಎಷ್ಟು
ರುಚಿಕರ ॥೧॥

ಭಾಮೆಯರಿಗೆ ಮುಡಿವಪೇಕ್ಷೆ ಭಾವಿಕರಿಗೆ ಬೇಕಿದು।
ದೇವ ಮಾನವರೊಳು ಪ್ರೇಮ ಬೆಳೆಸುವಂಥ ಹೂವಿದು
॥೨॥

ಮುಳ್ಳು ಮೈಯ್ಯೊಳುದಿಸಿದಂಥ ಕುಸುಮವೆಮ್ಮ
ಬಾಳ್ವೆಗೆ!
ಒಳ್ಳೆ ಮಾರ್ಗ ತೋರುವಂಥ ದೇವನಿಟ್ಟ ದೀವಿಗೆ
॥೩॥

ಹೊರಗೆ ಸುಖವ ಕೊಡವ ತೆರದಿ, ಸೇವಿಸಲ್ಕಿದು।
ಬರುವುದೂಷ್ಣ ಪಿತ್ತದೊಳಗೆ, ಸರಸ ಸುಖವ ನೀವುದು
॥೪॥

ಎಲ್ಲ ಸೊಬಗು ಒಣಕಲಾಗಿ ಪೋದರಿದನು ಕಸದಲಿ।
ಚಲ್ಲಲಾರರೆಮ್ಮ ವೈದ್ಯರೆನಿತು ಪ್ರೇಮವಿದರಲಿ ॥೫॥

—ಆರ್. ಕೆ. ಹಾನಗಲ್ಲ

# ಗಾಂಧೀಜಿ ಜೀವನದ ಕೆಲವು ಘಟನೆಗಳು

ಲೇಖಕ: ಎಸ್. ಎಸ್. ಭೂಸರಡ್ಡಿ, ಕೊಣ್ಣೂರ (ನರಗುಂದ)

೧

ಗಾಳಿಯು ಮೆಲ್ಲನೆ ಸುಳಿಯುತ್ತಿತ್ತು- ಅಸ್ತಂಗತ ಸೂರ್ಯನ ಕೆಂಗದಿರುಗಳು ಗಿಡಮರಗಳ ಮೇಲೆ ಸೂಸಿದ್ದವು. ಪಡವಣ ದಿಗಂಗನೆಯು ಕೆನ್ನೆ ಲಜ್ಜೆಯಿಂದ ಕೆಂಪಾದಂತಿತ್ತು. ಸಂಧ್ಯಾಸಮಯ ಬಹು ಮನೋಹರ ಹಾಗೂ ಉಲ್ಹಾಸದಾಯಕವಾಗಿತ್ತು. ನಿತ್ಯದಂತೆ ಗಾಂಧೀಜಿ ವಿಹಾರಕ್ಕೆಂದು ಹೊರಟಿದ್ದರು. ದೇಶ ಕಲ್ಯಾಣ ಸಾಧನೆ ಸಿದ್ಧಿಗಳ ವಿಚಾರಗಳಲ್ಲಿ ಆಸಕ್ತಿಯಿಂದ ಚಿಂತಿಸುತ್ತ ಸಾಗಿದ್ದರು. ನಾಡಿನ ದರಿದ್ರ–ನಾರಾಯಣರ ಸೇವೆ ಎಷ್ಟು ಮಾಡಿದರೂ ಅವರಿಗೆ ಸಾಕಿರಲಿಲ್ಲ. ಮೇರುಗಿರಿಯ ಏರು ಹಣೆಯಲ್ಲಿ ನಾಡಿನ ಸಮಸ್ತ ಕುಲದ ಕಲ್ಯಾಣದ ದಿವ್ಯ ಪ್ರಕಾಶ ತುಂಬಿತ್ತು, ವಿಶ್ವದಗಲದ ನಗೆಯಲ್ಲಿ ಕರುಣಾ ಗಂಗೆ ಹರಿಯುತ್ತಿದ್ದಳು. ಬಾನಿನಗಲದ ಎದೆಯಲ್ಲಿ ಶಾಂತಿ–ಸತ್ಯ–ಅಹಿಂಸೆಗಳ ಗಭೀರ ಸಾಗರವಿತ್ತು; ವಾಣಿಯು ವಿಶ್ವವಾಣಿಯಾಗಿತ್ತು; ಮಾನವ ಕುಲದ ಮಿತ್ರತೆ ಸುತ್ತು ಬಳಸಿಕೊಂಡಿತ್ತು.

ಸಾಯಂಕಾಲದ ವಿಹಾರ ಸಾವಧಾನವಾಗಿ ಸಾಗಿತ್ತು. ಮೂರ್ತಿ ಮತ್ತು ಪುಣ್ಯ ತೇಜದ ರಥವೇ ಸಾಗಿ ಬರುವಂತಿತ್ತು. ಗಾಂಧೀಜಿಯವರ ವಿಹಾರಗಮನ! ದಾರಿಯಲ್ಲಿ ಸಾಗಿದ ಗಾಂಧೀಜಿಯವರು ಅತ್ತಿತ್ತ ನೋಡಿ ತಡೆದರು. ಅವರ ದೃಷ್ಟಿ ಒಂದು ಗುಡಿಸಿಲಿನ ಕಡೆಗೆ ಹರಿಯಿತು. ಅದು ಬಡತನ ದೈನ್ಯಗಳ ಬೀಡಾಗಿತ್ತು. ಮನೆಯೊಳಗೆ ಮನೆಯೊಡೆಯನಿದ್ದನೋ ಇಲ್ಲವೋ ಎಂದು ಭಾಸವಾಗುತ್ತಿತ್ತು. ಆ ಮುರಕ ಗುಡಿಸಲಿನ ಮುಂದೆ ಬಡಕಲು ದೇಹದ ಮುದುಕಿಯೊಂದು ಕುಳಿತಿತ್ತು. ಜೀವ ಕಣ್ಣಲ್ಲಿದ್ದಂತಿತ್ತು. ಮೈ ನಿರಿಗೆ ಕಟ್ಟಿದಂದಿತ್ತು. ತೇಜೋಹೀನವಾಗಿತ್ತು. ನಾಡಿನ ಸಮಸ್ತದೈನ್ಯವು ಒಟ್ಟು ಗೂಡಿ ಅವಳ ಕಣ್ಣಲ್ಲಿ ಮೂಡಿನಿಂತಿತ್ತು. ಭಾರತ ಮಾತೆಯ ಆ ದರಿದ್ರ ಪುತ್ರಿಯು ಕರುಣೆಯ ಪ್ರತಿ ಮೂರ್ತಿಯಾಗಿದ್ದಳು. ಗಾಂಧೀಜಿ ಗುಡಸಲಿನ ಕಡೆಗೆ ಬಂದಾಗ ಮುದಕಿ ಮುಖವೆತ್ತಿ ಅವರನ್ನೊಮ್ಮೆ ನೋಡಿದಳು. ಶಬರಿಯ ಮನೆಗೆ ಶ್ರೀ ರಾಮಚಂದ್ರ ಬಂದಂತೆ ಗಾಂಧೀಜಿ ಬಂದಿದ್ದರು. ಆದರೆ ಇವರಿಗೆ ಕೊಡಲಿಕ್ಕೆ "ಬೋರೆ" ಹಣ್ಣುಗಳಿರಲಿಲ್ಲ. ಸುದಾಮನು ಶ್ರೀಕೃಷ್ಣನಗಿತ್ತ ಅವಲಕ್ಕಿಗಳೂ ಇರಲಿಲ್ಲ. ಮೃದು ಮಾತು ಮಾತ್ರ ಅವಳ ಸರ್ವಸ್ವವಾಗಿತ್ತು. "ಬಾ ಅಪ್ಪ ತಾವು ಯಾರು ?" "ನಾನೊಬ್ಬ ನಿಮ್ಮ ಮಗ ಅಮ್ಮ" ತುಂಬಿದ ಹೃದಯದಿಂದ ಗಾಂಧೀಜಿ ನುಡಿದರು.

ಮುದುಕಿ ಅವಕ್ಕಾಯಿತು. ಬಡನೆತ್ತಿ ಮಸಗಲ್ಲ ಮೇಲೆ ಐಸಿರಿಗತ್ತಿ ಮಸೆದಾಡಿ ಸ್ವಾರ್ಥವನ್ನೇ ಪೊನೆಗೊಳಿಸಿದ ಅನೇಕ ದುರಂತ ಘಟನೆಗಳನ್ನು ನೋಡಿದ ಅವಳಿಗೆ ‘ ಅಮ್ಮ ’ ಶಬ್ದವು ಅಮೃತ ಪಾನ ಮಾಡಿದಷ್ಟು ಸಂತಸ ತಂದಿತ್ತು.

"ಏನಮ್ಮ ಹೀಗೆ ಕೂತಿದ್ದೀಯಾ ? ಮೈಯ ಈ ಅರಿವೆಗಳು ಎಷ್ಟು ಹೊಲಸಾಗಿವೆ ?" ಗಾಂಧೀಜಿ ಪ್ರಶ್ನಿಸಿದರು.

"ಹೌದಪ್ಪ, ಬಡವರ ಗತಿಯೇ ಇಷ್ಟು, ಉಣ್ಣುವ ಆಶೆಯಿದೆ. ತುತ್ತು ಅನ್ನವಿಲ್ಲ. ಉಡಬೇಕೆನ್ನುವೆ ಬಟ್ಟೆಗಳಿಲ್ಲ." ಒಳ್ಳೇ ಮಾರ್ಮಿಕವಾಗಿ ನುಡಿದಳು ಆ ಮುದುಕಿ. ಗಾಂಧೀಜಿಯವರ ಹೃದಯದಲ್ಲಿ ತಳಮಳವೆದ್ದಿತು. "ಹೊಸಬಟ್ಟೆಗಳಿಲ್ಲದಿದ್ದರೂ, ಇದ್ದ ಬಟ್ಟೆಗಳನ್ನೇ ತೊಳೆದು ಮಡಿ ಮಾಡಿಕೊಳ್ಳಬಹುದಿತ್ತಲ್ಲಮ್ಮ ?" ಪುನಃ ಕೇಳಿದರು ಗಾಂಧೀಜಿ. "ಅಯ್ಯೋ ದರಿದ್ರತನವೇ.........ನನ್ನ ಅರಿವೆ ಮಾಸಿದ್ದು ಗೊತ್ತಿದೆಯಪ್ಪ. ಈ ಉಟ್ಟ ಬಟ್ಟೆ ಬಿಟ್ಟು ಬೇರೆ ಬಟ್ಟೆಗಳೇ ಇಲ್ಲದಾಗ ಹೇಗೆ ತೊಳೆದುಕೊಳ್ಳಬೇಕಪ್ಪ" ಎಂದಳು ಆ ಮುದಕಿ.

ಗಾಂಧೀಜಿಯವರ ಕರಳು ಚುರ್ ಎಂದಿತು. ತುತ್ತು ಕೂಳು ತುಂಡು ಅರಿವೆಗೆ ಗೋಳಿಡುವ ಭಾರತದ ದೀನ ಜನತೆಯ ಸಮಗ್ರದರ್ಶನ ಅವರಿಗೆ ಕಂಡು ಬಂತು.

"ಬರಿದೋ ಬರಿದೋ ಬಡವರ ಬಗ್ಗರ ತುತ್ತಿನ ಚೀಲ.
ತೆರದೋ ತೆರದೊ ದೀನರ ಒಡಲು" ಎಂದುಕೊಂಡರು.

ಹೃದಯದಾಳದಿಂದ ಜ್ಞಾನದ ಕಿಡಿಯೊಂದು ತೂರಿ ಬಂತು. "ಭಾರತದ ಸಾಮಾನ್ಯ ಪ್ರಜೆಗೂ ಉಡಲು ಮೈತುಂಬ ಬಟ್ಟೆ ಸಿಗುವವರೆಗೆ ನಾನು ಅರೆನಗ್ನನಾಗಿರುವೆ." ಎಂದು ಪ್ರತಿಜ್ಞೆ ಮಾಡಿದರು. ಮೈ ತುಂಬ ಬಟ್ಟೆ ತೊಡಲಿಲ್ಲ. ಲಂಡ ಪಂಜೆ, ಬೊಕ್ಕ ತಲೆ, ಬರಿಮೈಯಿಂದ ಇರುವದು ಅವರ ಜೀವನದ ಇರುವಿಕೆಯಾಯ್ತು. ಬಡವರ ಭಾಗ್ಯ ವಿಧಾತನೆಂಬ ಅಭಿನಾಮವು ಸಾರ್ಥಕವೆನಿಸಿತು.

೨

ಆಗ ಗಾಂಧೀಜಿಯವರು ದಕ್ಷಿಣ ಆಫ್ರಿಕೆಯಲ್ಲಿದ್ದರು. ಬಿಳಿಯರ ವಿರುದ್ಧ ನಡೆದ ಗಲಭೆಗಳು ನಾಗರಿಕತೆಯ ರಕ್ಷಣೆಗಾಗಿ, ನಡೆದ ನ್ಯಾಯುವಾದ ಹೋರಾಟಗಳು ನಿರಂತರ ಸಾಗಿದ್ದವು. ಬಿಳಿಯರ ವರ್ಣೀಯ ದ್ವೇಷದ ಕಪಿಮುಷ್ಟಿಯಲ್ಲಿ ಅಜ್ಞ ಜನತೆ ರೋಸಿ ಹೋಗಿತ್ತು. ಮನುಷ್ಯ ಮನುಷ್ಯನನ್ನು ನಡೆಯಿಸಿಕೊಳ್ಳುವ ರೀತಿಯನ್ನು ನೋಡಿದರೆ, ಸೃಷ್ಟಿವಿಧಾತನಿಗೂ ಕೂಡ ಎರಡು ಬಗೆಯದೆ ಬಿಡಲಿಕ್ಕಿಲ್ಲ. ಮಾನವ ಜಾತಿ ಎಂದು ಅನಿಸುವಂತಿತ್ತು. ದ್ವಿಮುಖ ಧೋರಣೆಯ ಅನಿಷ್ಟ ಪ್ರವಾಹದಲ್ಲಿ, ಜನಕಲ್ಯಾಣ ರಸ ತಳಕ್ಕೆ ಬಿದ್ದು ಹೋಗಿತ್ತು. ಸಮುದ್ರದ ಗರ್ಭದಿಂದ ವಡವಾಗ್ನಿ ತೂರಿ ಬರುವಂತೆ ಕಾಲನ ಗರ್ಭದಿಂದ ಜನತೆಯ ರೋಷಾಗ್ನಿ ಸಿಡಿದು ಬಂದಿತ್ತು. ಕಿಡಿ ಹೊತ್ತಿಸಿದ ಚೇತನ ಶಕ್ತಿ ಗಾಂಧೀಜಿಯಾಗಿದ್ದರು. ಆಫ್ರಿಕೆಯ ಹಿಂದೀಯರಿಗೆ ಕರಿಯರಿಗೆ ಇವರು ಕತ್ತಲೆಯ ದಾರಿ ದೀಪವಾಗಿದ್ದರು.

ಗಾಂಧೀಜಿಯವರ ಸೇವಾ ಕ್ಷೇತ್ರ ಬೆಳೆಯುತ್ತನಡೆದಿತ್ತು. ಟಾಲಸ್ಟಾಯ್, ಗೋಖಲೆ, ಲೋಕಮಾನ್ಯ ಟಿಳಕ ಮುಂತಾದ ಪ್ರತಿಭಾನ್ವಿತ ವ್ಯಕ್ತಿಗಳ ಅಮೂಲ್ಯ ಅನುಭವದ ದರ್ಶನ ಅವರ ಕಣ್ಣೆದುರು ಇತ್ತು. ಆತ್ಮ ಶಕ್ತಿಯ ಅತುಲಬಲ ಅವರಿಗೆ ಬೆಂಗಾಲವಾಗಿತ್ತು. ಗಾಂಧೀಜಿಯನ್ನು ಪೂಜ್ಯರಾಗಿ ಕಂಡು ಅನೇಕ ಜನ ಅವರ ಭೆಟ್ಟಿಗಾಗಿ ಬಂದು ಹೋಗುತ್ತಿದ್ದರು. ಬಂದ ಅತಿಥಿಗಳಿಗೆ ಯೋಗ್ಯ ಸತ್ಕಾರ ಮಾಡದೆ ಕಳಿಸುತ್ತಲೇ ಇರಲಿಲ್ಲ. ಗಾಂಧೀಜಿಯವರ ಚಟುವಟಿಕೆಗಳಿಗೆ "ಕಸ್ತೂರ ಬಾ" ಆಪ್ತ ಕಾರ್ಯದರ್ಶಿಯಂತಿದ್ದಳು. ಮನೆಯ ಎಲ್ಲ ಯಜಮಾನಿಕೆ ಅವಳದು. ಅಡಿಗೆ, ಊಟ, ತಾಟು, ಕಸಕಡ್ಡಿ ಬಳಿಯುವವರೆಗೂ ಅವರ ಪಾಲಿಗೆ ಸ್ವಾವಲಂಬನದ ಮೊದಲನೇ ಪ್ರಯೋಗವನ್ನು ಗಾಂಧೀಜಿ ತಮ್ಮಲ್ಲಿಯೇ ಮಾಡಿಕೊಂಡಿದ್ದರು. ದಿನದಿನವೂ ಅತಿಥಿಗಳು ಗಾಂಧೀಜಿಯವರಿದ್ದೆಡೆಗೆ ಬರುವವರೇ !

ಒಂದು ದಿನ ಒಬ್ಬ ಕ್ರೈಸ್ತ ಸಭ್ಯ ಗ್ರಹಸ್ಥ ಗಾಂಧೀಜಿಯವರ ಭೆಟ್ಟಿಗೆ ಬಂದನು. ಆಗ ಊಟದ ಸಮಯ. ಗಾಂಧೀಜಿ ಅವರನ್ನು ಬಿಡಲಿಲ್ಲ. ಊಟಕ್ಕೂ ಕೂಡಿಸಿದರು. ಊಟ ಮುಗಿಸಿ ಹೊರಬಂದು ಮಾತುಕತೆಯಾಡಿ ಅವರನ್ನು ಕಳಿಸಿ "ಕಸ್ತೂರ ಬಾ" ಳಿಗೆ ಮೇಲಿನ ಕೋಣೆಯಲ್ಲಿಯ ಟೇಬಲ್ ಮೇಲಿನ ತಾಟುತೆಗೆದು ಸ್ವಚ್ಛಮಾಡು ಎಂದುಹೇಳಿದರು. "ನಿಮ್ಮೊಡನೆ ಊಟಮಾಡಿದ ಅವರಾರು" ಸಹಜ ಪ್ರಶ್ನಿಸಿದರು ಕಸ್ತೂರಬಾ. "ಅವರೊಬ್ಬ ಕ್ರೈಸ್ತ ಸಭ್ಯ ಗ್ರಹಸ್ಥ" ಎಂದರು ಗಾಂಧೀಜಿ. ಕಸ್ತೂರಿ ಬಾ ಅವರು ಹುಬ್ಬ ಗಂಟಿಕ್ಕಿದ್ದರು. "ಅವರನ್ನು ಮೇಲ್ಭಾವಣಿಗೆ ಕರೆದೊಯ್ದು ಒಂದೇ ಟೇಬಲ್ಲಿನ ಮೇಲೆ ಊಟ ಮಾಡಿದಿರಾ ?" ಕೋಪ ತುಂಬಿದ ನುಡಿಯಲ್ಲಿ ಕೇಳಿದರು ಕಸ್ತೂರಬಾ. "ಮಾಡಬಾರದೆಂದು ನಿಯಮವಿದೆಯೇ ?" ಪ್ರಶ್ನಿಸಿದರು ಗಾಂಧೀಜಿ.

"ಮ್ಲೇಂಛನೊಡನೆ ಬಳಸುವದು ನನಗೆ ಸರಿ ಎನಿಸಲಾರದು." ಕಸ್ತೂರಿಬಾ ನುಡಿದರು.

"ನಿನಗನಿಸಿದ್ದಲ್ಲಿ ನೀನು ಬಿಡಬಹುದು. ನನಗೆ ಎಲ್ಲರೂ ಒಂದೇ, ಕ್ರೈಸ್ತ ಮುಸ್ಲಿಂ—ಹಿಂದೂ ಎಂಬ ಬೇಧ ಭಾವನೆಗಳಿಲ್ಲ." ಗಂಭೀರವಾಗಿ ನುಡಿದರು ಗಾಂಧೀಜಿ.

"ಹೊರಗೆ ನೀವು ಏನೂ ಮಾಡಿಕೊಳ್ಳಿ, ಮನೆಯಲ್ಲಿಯೂ ಹೀಗೆ ಅಂದರೆ..................." ಅರ್ಧಕ್ಕೆ ತಡೆದರು ಕಸ್ತೂರಬಾ.

ಗಾಂಧೀಜಿಯವರು ಸರ್ವಧರ್ಮ ಸಮಾನ ತತ್ವದ ಸತ್ವ ಪರೀಕ್ಷೆಯನ್ನು ಇಲ್ಲಿಂದಲೇ ಎದುರಿಸಬೇಕಾಯ್ತು.
"ನಿನಗೊಂದು ಹುಚ್ಚು. ಈ ಜಗತ್ತೆ ಒಂದು ದೊಡ್ಡ ಮನೆ ಇರುವಾಗ ನಿನ್ನ ಮನೆ, ನನ್ನ ಮನೆ ಎಂದರೆ ಹೇಗಾದೀತು. ಮಾನವ ಕೋಟಿಯೇ ಒಂದು ಕುಟುಂಬದವರಿರುವಾಗ ಹೆಚ್ಚು ಕಡಿಮೆ ಎಲ್ಲಿಂದ ಬಂತು ? ಹೋಗು........ಸ್ವಚ್ಛಮಾಡಿ ಬಾ ಎಂದರು ಗಾಂಧೀಜಿ.

"ಮ್ಲೇಂಛನ ತಾಟನ್ನು ನಾನು ಮುಟ್ಟಲಾರೆ ಬಳಿಯಲಾರೆ" ಖಂಡಿತವಾಗಿ ಉತ್ತರಿಸಿದಳು, ಕಸ್ತುರಿ ಬಾ. ಗಾಂಧೀಜಿಯವರ ಒಡಲು ಕಂಪಿಸಿತು. ಸತ್ಯದ ಸಾಧನೆಯ ಹಟಯೋಗಿಗಳು ಅವರಾಗಿದ್ದರು. ರೋಷದಿಂದ ಅಷ್ಟೇ ಖಂಡಿತವಾಗಿ ಕೂಗಿದರು.

"ನೀನು ತಾಟುಗಳನ್ನು ತೊಳೆಯಲೇ ಬೇಕು, ಹಾಗಿಲ್ಲದೆ ನಾನು ಬಿಡುವದಿಲ್ಲ" ಕಸ್ತೂರಬಾರವರೂ ಬಿಟ್ಟ ಬಾಣದಂತೆ—

"ನನ್ನಿಂದ ಸರ್ವಥಾ ಶಕ್ಯವಿಲ್ಲ" "ನೀವೇನಾದರೂ ಮಾಡಿಕೊಳ್ಳಿ" ಎಂದು ನೆಲಕ್ಕೆ ಕುಸಿದರು. ಗಾಂಧೀಜಿಗೆ ಕೋಪ ಬಂತು

"ನೀನು ನನ್ನ ಬಳಿ ಇರುವದೇ ಬೇಡ. ನಿನ್ನ ತವರಿಗೆ ಹೊರಟು ಹೋಗು" ಎಂದು ಅರ್ಭಟಿಸಿದರು. ಕೈ ಹಿಡಿದು ದರದರ ಎಳೆಯುತ್ತ ಬಾಗಿಲ ಕಡೆಗೆ ನಡೆದರು. ಮುಚ್ಚಿದ ಬಾಗಿಲು ತೆರೆದು ಹೊರದೂಡಲು ಯತ್ನಿಸಿದರು. ಆಗ

ಕಸ್ತೂರಬಾರವರ ಹೃದಯ ಕಂಪಿಸಿತು. ಕಣ್ಣಲ್ಲಿ ನೀರುಓಕಳಿಯಾಡಿದವು. ಗಾಂಧೀಜಿಯವರನ್ನು ದೈನ್ಯ ದೃಷ್ಟಿಯಿಂದ ನೋಡಿ " ನನ್ನ ಒಂದು ಮಾತು ಕೇಳಿ. ನಿಮ್ಮ ಬಳಿ ಬಿಟ್ಟು ಹೊರಟ ನನ್ನನ್ನು ತವರವರು ಕರೆದು ಕೊಳ್ಳುವರೇ ? ಹುಟ್ಟಿದ ಮನೆ, ಜನ್ಮವೆತ್ತ ಭೂಮಿ, ಉಣಿಸಿ ತಿನಿಸಿದ ಕೈಗಳನ್ನು ಮರೆತು ನಿಮ್ಮ ಸೇವೆಗಾಗಿ ಬಂದ ನನ್ನನ್ನು ಹೊರಗೆ ದೂಡಿದರೆ ಈ ಅಪರಿಚಿತ ನಾಡಿನಲ್ಲಿ ನಿಮ್ಮೊಬ್ಬರನ್ನುಳಿದು ನನ್ನವರೆನ್ನುವ ಯಾರೂ ಇಲ್ಲದ ಸ್ಥಳದಲ್ಲಿ ನಾನು ಹೋಗುವದಾದರೂ ಎಲ್ಲಿಗೆ ? ನನಗಾರು ಆಶ್ರಯ ! ನಮ್ಮ ಈ 'ರಂಭಾಟ' ನೋಡಿ ಜನರು ಏನಂದಾರು ? ತಾಟು ತೋಳೆಯುವೆ ಕೈ ಬಿಡಿರಿ........! ಎಂದು ಅಂಗಲಾಚಿದಳು.

ಗಾಂಧೀಜಿಯವರ ಹೃದಯ ಉಕ್ಕಿ ಬಂತು. ಕಣ್ಣುಗಳಿಂದ ನೀರು ಬಳ ಬಳ ಮುತ್ತುಗಳಂತೆ ಉದುರಿದವು. ಬಾಗಿಲ ಮುಚ್ಚಿ ಕಸ್ತೂರಬಾಳನ್ನು ಅಪ್ಪಿ ಮಕ್ಕಳಂತೆ ಅತ್ತರು. ಭಾರತ ನಾರಿಯ ನಿಷ್ಕಲ್ಮಿಷ ಪ್ರೇಮದ ಹೃದಯ ಕಂಡು ಮಂತ್ರ ಮುಗ್ಧರಾದರು. ಕಸ್ತೂರಬಾ ಅವರು ಗಾಂಧೀಜಿಯವರ ಬಾಳಿನ ಒಂದು ಆಶಾ ಜ್ಯೋತಿಯಾಗಿ ಜೀವನ ಪರಿಯಂತ್ಯದವರೆಗೂ ನಿದರ್ಶನವಾಗಿ ಉಳಿದರು.

೩

ಯಾವಾಗಲೂ ಜನತೆಯ ಕೂಗಿನಲ್ಲಿ ಸತ್ಯಾಂಶವಿರುತ್ತದೆಂದು ಹೇಳಲು ಬರುವಂತಿಲ್ಲ. ಅವರು ನಾಯಕನ ನಡೆನುಡಿಗಳನ್ನು ಅನುಸರಿಸಿ ಅವ ಹೇಳಿದಂತೆ ಕೇಳಿ ಕೂಗಾಡುವ ಜನರ ಮಾತು ಸತ್ಯಕ್ಕೆ ದೂರವೆನಿಸುತ್ತದೆ. ನಿಜ ಶಕ್ತಿಯ ಸಾತ್ವಿಕತೆಯ ಅರಿವಾದಾಗ ನ್ಯಾಯ ಅನ್ಯಾಯ, ಧರ್ಮ–ಅಧರ್ಮ ನೀತಿ–ಅನೀತಿಗಳ ಸ್ಪಷ್ಟ ಕಲ್ಪನೆ ಬರುವದುಂಟು.

ಗಾಂಧೀಜಿಯವರು ತಾವರೆಯ ಲತೆ ಇದ್ದಂತೆ. ನೀರಲ್ಲಿದ್ದರೂ ನೀರನ್ನು ಗ್ರಹಿಸದ ಅದರ ಗುಣದಂತೆ ಅನೇಕ ಜನ ಹೆಂಗಳೆಯರೊಡನೆ ಕೂಡಿ ನಗೆಯಾಡುತ್ತಿದ್ದರೂ ದುಷ್ಟ ಭಾವನೆಗಳಿಗೆ ಅವರಲ್ಲಿ ಅವಕಾಶವೇ ಇರಲಿಲ್ಲ. ಹೆಣ್ಣುಮಕ್ಕಳನ್ನು ಪ್ರತ್ಯಕ್ಷ ಶಕ್ತಿಯಂದೇ ತಿಳಿದಿದ್ದರು. ರಾಮನ ರಾಜ್ಯದಲ್ಲಿ ರಜಕನಂತಹ ನಿಂದಕರಿದ್ದಂತೆ, ಹಿಗೂ ಇಲ್ಲದೇ ಇರಲಿಲ್ಲ. ಗಾಂಧೀಜಿಗೆ ವಯಸ್ಸಾಗುತ್ತ ಬಂದಿದ್ದರೂ ಅವರಲ್ಲಿ ಇಂದ್ರಿಯ ಚಾಪಲ್ಯತೆಯಿದೆ. ಉಳಿದ ಹೆಣ್ಣು ಮಕ್ಕಳೊಡನೆ ಅದೆಂಥ ಚೇಷ್ಟೆ ಎಂದು ಗಾಂಧೀಜಿಗೆ ಆಗದವರು, ಅವರನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದವರು, ಆಡಿಕೊಳ್ಳುತ್ತಿದ್ದರು. ಅದನ್ನು ಕೇಳಿದ ಅವರ ಒಬ್ಬ ಎದುರಾಳಿ ಗ್ರಹಸ್ಥ ಅವರಲ್ಲಿ ಬಂದನು. ಆಗ ಗಾಂಧೀಜಿ ಹೆಣ್ಣು ಹುಡಿಗೆಯರೊಡನೆ ಆಲದ ಮರದ ನೆರಳಲ್ಲಿ ಕುಳಿತು ವಿನೋದ ಮಾಡುತ್ತಿದ್ದರು. ಬಂದವರಿಗೆ ಕೂಡಲು ಹೇಳಿ ಕುಶಲ ಸಮಾಚಾರವನ್ನು ನಡೆಯಿಸಿದ. ವಿದೇಶಿ ಸಭ್ಯ ಗ್ರಹಸ್ಥ ಮಾತಿನ ಸುಳಿಯನ್ನು ಹೊರಳಿಸುತ್ತ, ತನ್ನ ಸಂಶಯ ನಿವಾರಣೆಯ ಉದ್ದೇಶದತ್ತ ತಿರುವಿದನು. "ಸತ್ಯ ಸಾಧನೆಯ ಮಾರ್ಗದಲ್ಲಿ ಸ್ತ್ರೀಯೊಬ್ಬಳು ದೊಡ್ಡ ಆತಂಕ ಎಂದು ಹೇಳುತ್ತಾರಲ್ಲ ಗಾಂಧೀಜಿಯವರೇ ?" "ಅದ ಸರಿಯಲ್ಲ. ಅವರವರ ಮನಸ್ಸಿನ ಆಶೆಗಳು ಆತಂಕವೆನಿಸುವವಲ್ಲದೇ ಸ್ತ್ರೀಯಲ್ಲ; ಸಾಧನೆ ಸಿದ್ಧಿಗಾಗಿ ಅವಳು ಪೋಷಕಳು, ಅವಳು ಪ್ರತ್ಯಕ್ಷ ಮಹಾ ಶಕ್ತಿ."

ಸಲೀಲವಾಗಿ ನುಡಿದರು ಗಾಂಧೀಜಿ.

"ನಿಮ್ಮ ದೃಷ್ಟಿಯಲ್ಲಿ ಹಾಗೆ ಕಾಣುತ್ತಿರಬಹುದು. ಬಹಳ ಜನರ ದೃಷ್ಟಿಯಲ್ಲಿ ಹೆಣ್ಣಿನ ಸಾನಿಧ್ಯ ಅಂದರೆ ಉಡಿಯಲ್ಲಿ ಬೆಂಕಿ ಹಾಕಿಕೊಂಡು ಜೀವಿಸುತ್ತೇನೆ ಎಂದು" ಮತ್ತೆ ಪ್ರಶ್ನಿಸಿದನು ಆ ಗ್ರಹಸ್ಥ. "ರಾಯರೇ ! ವಿನಾಶದ ದಾರಿ ಯಾವಾಗಲೂ ಅಗಲವಿರುವದಂತೆ ಅಲ್ಲಿ ಹೋಗುವವರ ಸಂಖ್ಯೆಯೂ ಬಹಳ. ಜ್ಞಾನಿಗಳ ದೃಷ್ಟಿಯಲ್ಲಿ ಕಂಡ ಸತ್ಯ ಸಿದ್ಧಾಂತವನ್ನು ನಾನು ನಿಮಗೆ ತಿಳಿಸುವೆ."

ಇದೋ ನೋಡಿ ಇವರೆಲ್ಲಾ ನನ್ನ ಭೆಟ್ಟಿಗಾಗಿ ಬಂದಿದ್ದಾರೆ. ನಾನಿವರೊಡನೆ ಹರಟೆ ಹೊಡೆಯುವೆ. ಆದರೆ ತಂದೆ ಮಕ್ಕಳೊಡನೆ ಆಡುವ ರೀತಿಯಲ್ಲಿ. ಇವರಲ್ಲಿ ಆದಿ ಶಕ್ತಿಯ ರೂಪವನ್ನು ನಾನು ಕಂಡುಕೊಳ್ಳುತ್ತಿರುವೆ. ಭಾರತ ಸಂಸ್ಕೃತಿಯು ಅಷ್ಟು ಕೀಳು ಮಟ್ಟದ್ದಿಲ್ಲ" ಎಂದರು.

ಗೃಹಸ್ಥನಿಗೆ ಸಾಕು ಬೇಕಾಯಿತು. ಜನತೆಯ ಕೆಲವು ಜೊಳ್ಳು ಮಾತುಗಳು ವಿನಾಶ ಮಾರ್ಗದತ್ತ ಎಳೆಯುವಂಥವು ಇರುತ್ತವೆ.

" ನೋಡುವ ಕಣ್ಣಿಗೆ ಕಾಮಣಿ ರೋಗ ಆದರೆ, ಜಗತ್ತ ತಾನೇ ತಾನಾಗಿ ಹಳದಿ ಕಾಣುತ್ತದೆ" ಎಂಬ ಮಾತನ್ನು ಅಲ್ಲಿ ಪ್ರತ್ಯಕ್ಷ ಕಂಡರು.

---

# ಸತಿ

ಅನು:— ದೇವದಾಸ ಕನವಳ್ಳೀ

ರೈಲು ವಾಯುವನ್ನು ಛೇದಿಸಿಕೊಂಡು ರಭಸದಿಂದ ಝುಕ್ ಝುಕ್ ಸಪ್ಪಳ ಮಾಡುತ್ತಾ ಓಡುತ್ತಿತ್ತು. ಇಂಟರ ಕ್ಲಾಸು ಡಬ್ಬಿಯಲ್ಲಿ ನಮ್ಮಿಬ್ಬ ಮಿತ್ರರನ್ನು ಹಿಡಿದುಕೊಂಡು ಎಂಟು ಮಂದಿ ಪ್ರಯಾಣಿಕರಿದ್ದೆವು. ದುರ್ಗಾ ಪೂಜೆಯ ನಿಮಿತ್ತವಾಗಿ ಲಾಹೋರದ ಕಡೆಗೆ ಹೊರಟಿದ್ದೆವು.

ನನ್ನ ಗೆಳೆಯನಾದ ಗಿರೀಶನ ಜೊತೆಯಲ್ಲಿ ಕುಳಿತಿದ್ದೆನು. ನಮ್ಮಿಬ್ಬರಲ್ಲಿ ಪಾಪ ಪುಣ್ಯದ ವಿಷಯವಾಗಿ ಚರ್ಚ ನಡೆದಿತ್ತು.

ಪಾಪವು ಕೆಟ್ಟದು ಆಗದಿದ್ದರೆ ಸ್ವರ್ಗ–ನರಕದ ಭೇದ ಉಳಿಯುತ್ತಿರಲಿಲ್ಲ. ಪುಣ್ಯದ ಮಹಿಮೆಯನ್ನೇಕೆ ವರ್ಣನೆ ಮಾಡಬೇಕಿತ್ತು ? ಎಂದು ಗಿರಿಶ ಅನ್ನುತ್ತಿದ್ದ.

ಪಾಪ ಮತ್ತು ಪುಣ್ಯವನ್ನು ಹಳಿಯುವದು ಇಲ್ಲಿಯವರೆಗಲ್ಲ. ಅದು ಹಾಗೆಯೇ ಮುಂದುವರೆಯುವದು. ಪಾಪವು ಮಾತ್ರ ದೇಶ, ಕಾಲ ಮತ್ತು ಪಾತ್ರದ ಮೇಲಿದೆ.

ಎದುರಿನ ಬೆಂಚಿನ ಮೇಲೆ ಕುಳಿತ ಮುದುಕನೊಬ್ಬ ಸ್ಮಿತಹಾಸ್ಯದಿಂದ ಅಂದನು. ಅಲ್ರೀ ಆಗಿನ ಪರಿಸ್ಥಿಯ ಮೇಲಿಯೇ ಪಾಪವು ಹೆಚ್ಚಾಗಿ ಪುಣ್ಯದ ಅರ್ಥವನ್ನು ಅವಲಂಬಿಸಿರುತ್ತದೆ.

ಕೇವಲ ಪರಿಸ್ಥಿತಿಯ ಮೇಲಿಯೇ ? ದೇಶ, ಕಾಲ, ಪಾತ್ರದ ಮೇಲೆ ಅಲ್ಲವೇ?

ಆದರೆ ದೇಶದಲ್ಲಿ ಸಮಾಜ ವಿಶೇಷವಾಗಿ ಬೇರೆ ಬೇರೆಯಾಗಿ ಇರುವದಿಲ್ಲವೇ ? ಸಮಾಜದಲ್ಲಿಯ ಮೊದಲಿನಿಂದಲೂ ನೆಲಸಿಕೊಂಡು ಬಂದಿರುವ ರೂಢಿಗಳು ಪಾತ್ರ ಪರಿಸ್ಥಿತಿಯಲ್ಲಿ ಪುಟಗೊಳ್ಳುತ್ತಿರುತ್ತವೆ. ನಾನು ಸತ್ಯ ಘಟನೆಯೊಂದನ್ನು ನೋಡಿದ್ದೇನೆ. ಅದನ್ನು ಕೇಳಿದ ನಂತರ ನೀವೇ ಸ್ವತಃ ನಿರ್ಣಯವನ್ನು ಕೊಡಬಲ್ಲಿರಿ. ಹೇಳಲೇ ?

' ಅವಶ್ಯವಾಗಿ ಹೇಳಿರಿ ' ನಾವಿಬ್ಬರೂ ಅಂದೆವು.

ಆಗಲಿ ಹಿಂದು ಧರ್ಮಿಸ್ಥರ ಮನೆಯಲ್ಲಿ ಜನ್ಮವೆತ್ತ ಹುಡುಗಿ ತನ್ನ ಆತ್ಮಹತ್ಯವನ್ನು ಪಾಪವೆಂದು ತಿಳಿಯುವದಿಲ್ಲ. ಪುಣ್ಯವೆಂದು [illegible]ುತ್ತಾಳೆ. ನೀವು ಇದಕ್ಕೆ ಎನೆನ್ನುವಿರಿ?

' ಹುಚ್ಚಿ ' ನಾವಿಬ್ಬರೂ ಒಮ್ಮೆಲೆ ಅಂದೆವು.

ಆದರೆ ನಾನು ಅನ್ನುವೆನು ಅವಳ ದೃಷ್ಟಿಕೋನದ ಪ್ರಕಾರ ಅದು ಪುಣ್ಯ. ಮುಗಳ್ನಗುತ್ತ ಅಂದಿತು ಆ ವ್ಯಕ್ತಿ.

ಪುಣ್ಯ ?

ಹೌದು. ಸ್ವಲ್ಪ ಕೇಳಿರಲ್ಲ. ಜಬಲಪುರದ ಒಂದು ಘಟನೆ. ನನ್ನ ಮನೆ ರಸ್ತೆಗೆ ಹೊಂದಿಕೊಂಡಿದೆ. ಆದಕ್ಕೆ ಸಮೀಪದಲ್ಲಿ ಒಬ್ಬ ಬಡಿಗನಿರುತ್ತಾನೆ.

' ಇದ್ದಾನೆ ' ಮುಂದೆ ಹೇಳಿರೆಂದು ನಡುವೆ ಬಾಯಿ ಹಾಕಿದೆನು. ರಾಮದೀನ ಹೆಸರಿನ ಬಡಿಗನಿಗೆ ಅತಿ ಚಲುವೆಯಾದ ಮಗಳಿದ್ದಾಳೆ. ನಾನು ನನ್ನ ಮನೆಯಲ್ಲಿ ಕುಳಿತುಕೊಂಡು ದಿನಾಲು ನೋಡುತ್ತಿದ್ದೆನು. ಅವಳು ಪ್ರತಿದಿನ ತನ್ನ ತಾಯಿಯ ಜೊತೆಗೆ ಮಾವಿನ ಗಿಡದ ನೆರಳಿನಲ್ಲಿ ಹೋಗಿ ಸತಿಯುಗಟ್ಟೆಗೆ ಪ್ರದಕ್ಷಿಣೆ ಹಾಕುತ್ತಿದ್ದಳು. ಆ ಮಾವಿನ ಗಿಡದಡಿಯಲ್ಲಿ ಸತಿ ಕಟ್ಟೆಯಿದೆ. ಯಾವಳೊಬ್ಬ ಪತಿವ್ರತೆ ಸ್ತ್ರೀ ಗಂಡನನ್ನು ಸುಡುವ ಅಗ್ನಿಯಲ್ಲಿ ತನ್ನ ಪ್ರಾಣವನ್ನು ತೆತ್ತರೆ, ಅವಳ ನೆನಹಿಗಾಗಿ ಅಲ್ಲಿಯೇ ಒಂದು ಕಟ್ಟೆಯನ್ನು ಕಟ್ಟುತ್ತಿದ್ದರು. ಮಣ್ಣಿನದನ್ನಾದರೂ ಮಾಡುತ್ತಿದ್ದರು ಇಲ್ಲವೆ ಸಿಮೆಂಟಿನದು. ಇದು ಅವರ ಆರ್ಥಿಕ ಸ್ಥಿತಿಯ ಮೇಲೆ ಇತ್ತು.

ಹಬ್ಬ ಹುಣ್ಣಿವೆ ದಿನಗಳಲ್ಲಿ ಸಾವಿರಾರು ಸ್ತ್ರೀಯರು ಸತಿಕಟ್ಟೆಗೆ ಹಣ್ಣು, ಹೂವು, ಕುಂಕುಮ ಇಟ್ಟು ಪೂಜೆಮಾಡಿ ಪ್ರದಕ್ಷಣೆ ಹಾಕುತ್ತಿದ್ದರು. ಅದರ ಓಣೆಯ ಜನರು ಕಟ್ಟೆಯನ್ನು ತೊಳೆಯುವದು ಬಳೆಯುವದನ್ನು ಮಾಡುತ್ತಿದ್ದರು.

ಈ ಮಗು ಪಾರ್ವತಿ ದಿನಾಲು ಆ ಸತಿಗಟ್ಟೆಗೆ ಪ್ರದಕ್ಷಣೆ ಹಾಕುವದೇ ಅವಳ ನಿತ್ಯದ ಕೆಲಸದಲ್ಲೊಂದಾಗಿತ್ತು. ತಾಯಿ ಕಟ್ಟೆಯನ್ನು ಸಾರಿಸುವದರಲ್ಲಿ ಸಹಾಯವಾಗುತ್ತಿದ್ದಳು. ಅಲ್ಲಿಯೇ ಕುಳಿತುಕೊಂಡು ಸತಿಯ ಕಥೆಯನ್ನು ಕೇಳುತ್ತಿದ್ದಳು.

ಬರುಬರುತ್ತ ಪಾರ್ವತಿ ದೊಡ್ಡವಳಾಗಿ ಶಾಲೆಗೆ ಹೋಗಲಿಕ್ಕೆಹತ್ತಿದಳು. ಆಗ ಅವಳು ಯಾವಾಗಲೂ ಮನೆಗೆ ತನ್ನ ಜೊತೆಗೆ ಒಂದು ಪುಸ್ತಕವನ್ನು ತರುತ್ತಿದ್ದಳು. ಒಂದು ದಿನ

ಕುತೂಹಲದಿಂದ ಕೇಳಿದೆ. ಪಾರ್ವತಿ ಈ ಪುಸ್ತಕದಲ್ಲೇನಿದೆ ? ಇದು ನನಗೆ ಇನ್ನು ನೆನಪು ಇದೆ. ಒಳ್ಳೇ ಶ್ರದ್ಧೆಯಿಂದ ಉತ್ತರಿಸಿದ್ದಳು. ಅಜ್ಜಾ! ಇದರಲ್ಲಿ ಪತಿವ್ರತಾ ಮಹಿಮಾ ಬರೆದಿದ್ದಾರೆ ಓದುವಿರಾ?

ಕಾರ್ಯನಿಮಿತ್ತ ಆ ವರುಷ ನಾನು ಊರಿಂದ ಹೊರಟು ಹೋಗಿದ್ದೆ. ನನಗೆ ಪಕ್ಕಾ ನೆನಪಿದೆ. ನಾನು ತಿರುಗಿ ಬಂದಾಗ ಆ ಘಾತ ವರುಷದ ಒಂದು ದಿನ ಬಡಿಗನ ಮನೆಯಿಂದ ಮಂಗಳವಾದ್ಯಗಳ ಸುಮಧುರ ಧ್ವನಿ ಕೇಳಿಬರುತ್ತಿತ್ತು.

ಸ್ನಾನ ಊಟವಾದ ನಂತರ ಕಿಡಕಿಯ ಕಡೆಗೆ ಹೋಗಿ ನೋಡಿದೆ. ರಾಮದೀನನ ಮನೆಗೆ ಬೀಗರು ಬಂದಿದ್ದರು. ಪಾರ್ವತಿ ಮದುಮಗಳಾಗಿದ್ದಳು. ಮದುಮಗನ ಜೊತೆಗೆ ಡೋಲಿಯಲ್ಲಿ ಕುಳಿತುಕೊಂಡು ಅತ್ತಿಯ ಮನೆಗೆ ಹೋದಳು.

ಬಡಿಗನ ಚಿಕ್ಕಮಗಳು ಏಕನಿಷ್ಠ ಸತಿಯ ಆರಾಧ್ಯಕಳು ಗಂಡನ ಮನೆಗೆ ಹೋದಳು. ಕಟ್ಟೆಯೊಳಗಿದ್ದ ಸತಿಗೆ ಪಾರ್ವತಿಯ ಅಭಾವವೆನಿಸುತ್ತಿತ್ತು. ಅಥವಾ ಹಾಗೇನು ಅನಿಸುತ್ತಿರಲಿಕ್ಕಿಲ್ಲ. ಅದು ಅವಳಿಗೆ ಗೊತ್ತು. ನನಗೆ ಮಾತ್ರ ಸತಿಯು ಕರಿದೆನಿಸಿದಂತೆಯಾಗುತ್ತಿತ್ತು. ಪಾರ್ವತಿಯನ್ನು ಆದ್ದರಿಂದ ಅಲ್ಲಿಯ ಕಿಡಕಿಗಳನ್ನು ಮುಚ್ಚಿದೆನಷ್ಟೇ ಅಲ್ಲ. ಅತ್ತ ಕಡೆಗೆ ಸಹ ನೋಡಲಿಲ್ಲ. ಆ ಸಣ್ಣ ಮಗುವಿನ ಅಗಲಿಕೆಯಿಂದ ನನ್ನ ಮುದಿಯ ನಿಃಸಂಗ ಮನಕ್ಕೆ ಒಂದು ತರದ ದುಃಖವೇ ಆಯಿತು. ಅವಳು ನನಗಾಗಿ ಹೊಸವಸ್ತು ಹೊಸ ಅನುಭವ ಕಾರಿಯಾಗಿದ್ದಳು.

ಕೆಲವು ವರುಷಗಳು ಗತಿಸಿದವು. ಮೊದಲಿನಂತೆ ವೇದ ವೇದಾಂತ ಗ್ರಂಥಗಳ ವಿಚಾರದಲ್ಲಿ ಆಧ್ಯಾತ್ಮಕ್ಕಾಗಿ ಇಡ ತೊಡಗಿದೆ.

ಆ ದಿನ ಬಹಳ ಶೆಕೆಯಿತ್ತು. ಚಂದ್ರನು ಮೂಡಿದ್ದನು. ದೀಪಕ್ಕೆ ಬತ್ತಿಯಿಲ್ಲದೆ ಪಲಂಗದ ಮೇಲೆ ಬಿದ್ದಿತ್ತು. ತೆರೆದ ಬಾಗಿಲಿನಲ್ಲಿ ಚಂದ್ರನ ಕಿರಣಗಳು ಹೊಕ್ಕು ಕೋಣೆಯ ತುಂಬ ಬೆಳಕನ್ನುಂಟು ಮಾಡಿದ್ದವು.

ಹನ್ನೆರಡು ಮತ್ತೆ ಒಂದು ರಾತ್ರಿ ಗಂಟೆ ಹೊಡೆಯಿತು. ಶೆಕೆಯುದ್ದುದರಿಂದ ನಿದ್ದೆ ಬರುತ್ತಿಂಲಿಲ್ಲ. ಆಗ ನನಗೆ ಪಲ್ಲಂಗದ ಮೇಲೆ ಮಲಗುವಂತೆ ಆಗಲಿಲ್ಲ. ಆದ್ದರಿಂದ ಎದ್ದು ಹೋಗಿ ಕಿಡಕಿಯ ಬಾಗಿಲನ್ನು ತಗೆದೆನು. ಎಷ್ಟೋ ವರುಷದಿಂದ ಕಿಡಕಿ ಮುಚ್ಚೇ ಇತ್ತು. ತೆಗೆಯುವದೇನು ಬರೋಬರಿ ಇದೆ. ಯಾರಿಗಾಗಿ ಯಾಕೆ ತಗೆದೆ ಎಂಬುದನ್ನು ಹೇಳುವದು ಸ್ವಲ್ಪ ಕಠಿಣವಿದೆ. ನನ್ನ ಕಣ್ಣುಗಳು ನೇರವಾಗಿ ಸತಿಯ ಕಟ್ಟೆಯ ಕಡೆಗೆ ಹೋದವು.

ಒಮ್ಮೆಲೆ ಬೆಚ್ಚಿಬಿದ್ದೆ ಯಾರೋ ಕಟ್ಟೆಯ ಮೇಲೆ ಹಣೆಯನ್ನಿಟ್ಟು ಕುಳಿತುಕೊಂಡಿದ್ದರು. ಬಹುಶಃ ಅವಳು ಹೆಂಗಸು. ಆದರೂ ಸಂಶಯವುಳ್ಳವನಾದೆ. ಈ ರಾತ್ರಿಯಲ್ಲಿ ಯಾರು ಸತಿಕಟ್ಟೆಯ ಹತ್ತಿರ ಕುಳಿತುಕೊಳ್ಳುತ್ತಾರೆ ?

ಪಾರ್ವತಿ ಮನೆಗೆ ನಡೆ. ನಿನ್ನ ಪತಿಯ ಹೊಟ್ಟೆಯ ನೋವು ಜೋರಾಗಲಿಕ್ಕೆ ಹತ್ತಿದೆ. ಎಂದು ಯಾರೋ ಅಂದಿದ್ದು ನನಗೆ ಕೇಳಿಸಿತು.

ಪಾರ್ವತಿ? ದುಃಖ ಒತ್ತರಿಸಿ ಬಂದಿತು. ಭಯಭೀತನಾಗಿ ವಿಚಾರಿಸಕ್ಕೆ ಹತ್ತಿದೆ. ಆ ಸಣ್ಣ ಪಾರ್ವತಿ ಈಗ ಇಷ್ಟು ದೊಡ್ಡವಳಾಗಿದ್ದಾಳೆಯೇ? ಆದರೆ ಇಂತಹ ಕಗ್ಗತ್ತಲೆಯಲ್ಲಿ ಯಾವ ಮಹಾತ್ವಾಕಾಂಕ್ಷೆಯನ್ನು ಇಟ್ಟುಕೊಂಡು ಸತಿಯ ಸಮಾಧಿಯ ಹತ್ತಿರ ಬಂದಿದ್ದಾಳೇ ?

ಬೆಳಗಾದ ಕೂಡಲೇ ಸೀದಾ ಬಡಿಗನ ಮನೆಗೆ ಹೋದೆ. ಪಾರ್ವತಿ ನನ್ನ ಪಾದ ಸ್ಮರಿಸಿ ನಮಸ್ಕರಿಸಿದಳು. ಅತ್ತ ಕಡೆಗೆ ಹೊರಳಿಸಿ ನೋಡುತ್ತೇನೆ. ಎಲುಬಿನ ಹಂದರವಾಗಿ ಸತ್ತ ಹೆಣದಂತೆ ಮುಖವಿದ್ದ ರೋಗಿಯೊಬ್ಬನು ಹಾಸಿಗೆಯ ಮೇಲೆ ಮಲಗಿಕೊಂಡು ಮುಲುಗುತ್ತಿದ್ದನು. ಪಾರ್ವತಿಯ ತಾಯಿ ಅಳಿಯನ ತಲೆಯ ಹತ್ತಿರ ಕುಳಿತುಕೊಂಡು ಕಣ್ಣೀರು ಸುರಿಸುತ್ತಿದ್ದಳು. ತಂದೆ ಅನ್ಯಮನಸ್ಕತನಾಗಿ ಚಿಲುಮೆಯನ್ನು ತುಂಬುತ್ತಿದ್ದನು.

ಆದರೂ ಇದರಲ್ಲಿ ಮಹಾದಾಶ್ಚರ್ಯವಿದೆ. ಪಾರ್ವತಿಯ ಪತಿಗಾಗಿ ಎಲ್ಲರೂ ದುಃಖಿಸುತ್ತಿದ್ದರು. ಚಿಂತಾಗ್ರಸ್ಥರಾಗಿದ್ದರು. ಆದರೆ ಪಾರ್ವತಿಗೆ ಮಾತ್ರ ಉದಾಸೀನತೆ ಇರಲಿಲ್ಲ. ದುಃಖವು ಇರಲಿಲ್ಲ. ಅವಳ ಪ್ರತಿಯೊಂದು ಅಂಗುಲವು ನಿಃಚಿಂತೆಯನ್ನು ವ್ಯಕ್ತಪಡಿಸುತ್ತಿದ್ದವು.

ಮತ್ತೆ ರಾತ್ರಿಯನ್ನು ಕಳೆಯುವದು ಚಿಂತಾಜನಕವಾಗಿತ್ತು. ಮಾತಾಡು ಮಾತಾಡುವಷ್ಟರಲ್ಲಿ ಬಡಿಗನ ಮನೆಯಿಂದ ಹೆಣ್ಣುಮಕ್ಕಳ ಅಳುವದು ಕೇಳಿಸಿತು. ಅನ ನನಗೆ ಶಕ್ತಿಯೇ ಇಲ್ಲದಂತಾಗಿತ್ತು.

ಅಜ್ಜಾ, ಅಮ್ಮಾ ಕರೆಯಲಿಕ್ಕೆ ಹತ್ತಿದ್ದಾರೆ.

ಕರೆಯುವದನ್ನು ಕೇಳಿದಾಗ ಸಂಪೂರ್ಣವಾಗಿ ನನಗೆ ಗೊತ್ತಾಯಿತು. ಪಾರ್ವತಿಯ ಚಿಕ್ಕ ತಮ್ಮ ಬಾಗಿಲಿನಲ್ಲಿ ನಿಂತಿದ್ದನು. ವಿಧವಾ ಪಾರ್ವತಿಗೆ ಇನ್ನ ಮೇಲೆ ನನ್ನಿಂದ ಇಂತಹ ಸಹಾಯದ ಆವಶ್ಯಕತೆ ಎಲ್ಲಿ ಬೀಳುತ್ತಿದೆ. ಎಂದು ನನಗೆ ಆಶ್ಚರ್ಯವಾಗಿತ್ತು. ಮೆಲ್ಲನೆ ಎದ್ದು ಪಾರ್ವತಿಯ ಮನೆಗೆ ಹೋದೆ.

ಆ ಸಣ್ಣ ಹುಡುಗಿ ನನ್ನ ಕಣ್ಣು ಮುಂದೆಯೇ ದೊಡ್ಡವಳಾದಳು. ಸುಮಂಗಲೆಯಾದಳು. ಇದೇ ಕಣ್ಣು ಮುಂದೆಯೇ ವಿಧವೆಯಾದಳು. ಮತ್ತೆ ಪಾರ್ವತಿ ವೈಧವ್ಯವನ್ನು ನೋಡಲಿಕ್ಕೆ ಕರೆದಿದ್ದರು. ಇಂತಹ ಭಾವನೆಯಲ್ಲಿ ತನ್ಮಯನಾಗಿ ಸತ್ತವರ ಮನೆಯನ್ನು ಮುಟ್ಟಿದೆನು. ಅಲ್ಲಿ ಏನೂ ಗೊತ್ತಾಗಲಿಲ್ಲ.

ಒಂದು ವೇಳೆ ಬಾಗಿಲನ್ನು ಹಿಡಿಯದಿದ್ದರೆ ತಲೆಯು ನಿಜವಾಗಿ ಗೋಡೆಗೆ ಬಡೆಯುತ್ತಿತ್ತು. ವಸ್ತ್ರ, ಆಭರಣಗಳಿಂದ ಅಲಂಕೃತಳಾಗಿ ಪಾರ್ವತಿ ಪತಿಯ ಸಮೀಪದಲ್ಲಿ ಕುಳಿತಿದ್ದಳು. ಮದರಂಗಿ, ಕುಂಕುಮ, ಕಾಡಿಗೆ, ಹಣೆಯ ಮೇಲಿನ ಬಿಂದು ಯಾವದೂ ಸ್ವಲ್ಪ ಮಾಸಿರಲಿಲ್ಲ. ಇದೇನು ಭ್ರಮೆಯಲ್ಲ. ಪ್ರತ್ಯಕ್ಷ ನೋಡಿದ್ದು. ಅವಳ ಕಣ್ಣಿನಲ್ಲಿ ದುಃಖವಿದ್ದಿಲ್ಲ. ಸಂತೋಷ ತುಂಬಿತ್ತು. ಇದೇ ಪಡುವ ಸುಖವಾಗಿತ್ತು. ಹುಡುಕುವ ದುಃಖವಾಗಿರಲಿಲ್ಲ. ಅವಳ ತಂದೆ ತಾಯಿ ಮುಂತಾದವರು ಹೆಣವನ್ನು ಸುತ್ತುಹಾಕಿ ಹಣೆಗೆ ಮುದ್ದು ಕೊಡುತ್ತಿದ್ದರು.

ನಾನು ಹೆಣ–ಜನರಿಂದ ಖೊಟ್ಟಿಯಾದೆ. ಈ ಮದು ಮಗಳು ಹೋದನಂತರ ನಾನು ಯಾರಿಗಾಗಿ ಜೀವಿಸಲಿ? ಮದುಮಗನಂತೂ ಹೋದ. ಈಗ ಪಾರ್ವತಿಯ ಧರ್ಮವು ಯಾಕೆ ಕೆಡುತ್ತಿದೆ? ಅವಳ ಪತಿಯ ಜೊತೆಗೆ ಸತಿಗಮನ ಮಾಡಲಿಕ್ಕೆ ತಯಾರ ಆಗಿ ಕುಳಿತಿದ್ದಾಳೆ. ಹೇಗೆ ತಡಿಸಲಿ? ಅವಳು ಪತಿಯ ಚಿತೆಯ ಮೇಲೆ ಹೋಗಿ ಕುಳಿತುಕೊಳ್ಳುವಾಗ ನಾವೆಲ್ಲರೂ ಒಮ್ಮೆಲೆ ಹಿಡಿದುಕೊಂಡು ಬಿಡುತ್ತೇವೆ. ಎಂದು ಅನ್ನುತ್ತಾರೆ. ಸರಕಾರದ ಸಮ್ಮತಿಯಿಲ್ಲ. ನಾಡಾ ಸರಕಾರಕ್ಕೆ ಒಂದು ವಿಜ್ಞಾಪನೆಯನ್ನು ಕಳಿಸಿರಿ. ನಮ್ಮ ಮಗಳು ಸತಿ ಗಮನ ಮಾಡಲಿಕ್ಕೆ ಹತ್ತಿದ್ದಾಳೆಂದು. ಅಲ್ಲಿಯ ವರೆಗೆ ನಾವು ಹೇಗಾದರೂ ಮಾಡುತ್ತೇವೆ.

ಸತ್ತವನ ಜೊತೆಯಲ್ಲಿ, ಜೀವಇದ್ದವರ ಹತ್ಯವೇ? ಇಲ್ಲ. ನನ್ನ ಸಭ್ಯ ಮನಸ್ಸಿಗೆ ಇದು ಸರಿ ಬರಲಿಲ್ಲ.

ಆಗ ಓದು-ಬರೆಹ ಬಲ್ಲ ಒಬ್ಬನು ಮುಂದೆ ಬಂದನು. ವಿಜ್ಞಾಪನೆಯೊಂದನ್ನು ಬರೆದುಕೊಂಡು ಹೋದನು. ಎಲ್ಲ ಜನರು ಪಾರ್ವತಿ ಮತ್ತು ಹೆಣವನ್ನು ಸುತ್ತುಹಾಕುತ್ತಿದ್ದರು. ನೋಡಲಿಕ್ಕೆ ಸಾವಿರಾರು ಜನರು ನೆರೆದಿದ್ದರು.

ಸಂಜೆಯಾಯಿತು. ಅಗ್ನಿಯು ಸಂಜೆಯನ್ನು ಪರಿಹಾಸ್ಯ ಮಾಡುತ್ತಿರುವದೇನೋ ಎಂಬಂತೆ ತೋರುತ್ತಿತ್ತು.

ಚಿತೆಯನ್ನು ಏಳುಸಾರೆ ಪ್ರದಕ್ಷಣೆ ಹಾಕಿದ ನಂತರ ಪಾರ್ವತಿ ಚಿತೆಯಲ್ಲಿ ಹಾರಲಿಕ್ಕೆ ತಯಾರ ಆದಳು. ಆಗ ನನ್ನ ಕಣ್ಣುಗಳು ತಾವೇ ಅವಳ ಮೇಲೆ ಹೋಗಿ ಬಿದ್ದವು. ನಾನು ಆಶ್ಚರ್ಯಚಕಿತನಾಗಿ ನೋಡಿದೆ. ಅವಳ ಮುಖದ ಮೇಲೆ ಅಪೂರ್ವ ಜ್ಯೋತಿಯಿತ್ತು. ದೇವಿ ಅವತಾರೆಂಬಂತೆ ಜ್ಯೋತಿರ್ಮಯಳಾಗಿದ್ದಳು. ಪ್ರಯತ್ನದಿಂದ ಕಣ್ಣು ಮುಚ್ಚಿದೆ. ಚಿತ್ಕಾರವನ್ನ ಕೇಳಿದಾಕ್ಷಣ ಮತ್ತೆ ಕಣ್ಣು ತೆರೆದೆ.

ಇಲ್ಲ. ಅವಳು ಪತಿಯ ಜೊತೆಗೆ ತನ್ನ ಕಲ್ಪಿತ ಸ್ವರ್ಗಕ್ಕೆ ಹೋಗಿರಲಿಲ್ಲ. ಆ ಸಮಯದಲ್ಲಿ ಪೋಲೀಸ ಅಧಿಕಾರಿಗಳು ಅವಳನ್ನು ಹಿಡಿದಿದ್ದರು.

ಆ ದಿನ ನ್ಯಾಯಾಲಯ ಜನರಿಂದ ಕಿಕ್ಕಿರಿದ್ದಿತು. ಅಪ ರಾಧನಿ ಪಾರ್ವತಿಯ ವಿಚಾರಣೆ. ಆತ್ಮಹತ್ಯದ ಅಪಾಧನೆ ಯಿಂದಲೇ ಅವಳು ಅಪರಾಧಿಯಾಗಿದ್ದಳು.

ತಾವು ಆತ್ಮಹತ್ಯಮಾಡಿಕೊಳ್ಳಲಿಕ್ಕೆ ಹೋಗಿದ್ದೀರಿ. ಈ ಮಾತನ್ನು ಒಪ್ಪುವಿರಾ? ಎಂದು ಸರಕಾರಿ ವಕೀಲನು ಕೇಳಿದನು.

ಆತ್ಮಹತ್ಯವಲ್ಲ! ನಾನು ಪತಿಯ ಜೊತೆಗೆ ಸತಿಗಮನ ಮಾಡುತ್ತಿದ್ದೆ.

ಇದು ಆತ್ಮಹತ್ಯವಲ್ಲವೇ? ಆತ್ಮಹತ್ಯ ಮಹಾಪಾಪಸೀವು ಆದರ ಅಪರಾಧನಿ ಇದ್ದೀರಿ.

ಪಾರ್ವತಿ ಕೆರಳಿದ ಸಿಂಹಣಿಯಂತೆ ಗರ್ಜನೆ ಮಾಡುತ್ತ ಅತ್ತಿದ್ದರಿಂದ ಜನತೆಯುಆಶ್ಚರ್ಯಚಕಿತಳಾಗಿಅವಳ ಮಾತನ್ನು ಕೇಳುತ್ತಿತ್ತು.

ನಾನಲ್ಲ! ನ್ಯಾಯಾಲಯ ಮಹಾಪಾಪಿಯಿದೆ. ಅಪ ರಾಧಿಯಿದೆ. ಒಬ್ಬ ಸತಿ ತನ್ನ ಪತಿಯ ಜೊತೆಗೆ ಸತಿಗಮನ ಮಾಡಿದರೆ ಅದು ಹತ್ಯವೇ? ಸತಿಯ ಧರ್ಮಕ್ಕಿಂತ ಹೆಚ್ಚಿನ ಧರ್ಮ ಯಾವದಿದೆ. ನ್ಯಾಯಾಲಯ ಪಾಪಿಯಿದೆ. ಪತಿಯ ಜೊತೆಯಲ್ಲಿ ಸತಿ ಹೋಗುವ ನನ್ನನ್ನು ತಡೆಯುವವನು ಯಾವ ನಿದ್ದಾನೆ. ನಾನೂ ಮನುಷ್ಯಳಿದ್ದೇನೆ. ನನಗೂ ಹಕ್ಕು ಗಳಿವೆ. ನನ್ನ ಹಕ್ಕು ಇಚ್ಛೆಯ ವಿರುದ್ಧ ನಡೆಯುವವನು ಯಾವನಿದ್ದಾನೆ?

ನ್ಯಾಯಾಲಯ ಸ್ತಂಭವಾಗಿ ಬಿಟ್ಟಿತ್ತು. ಮುದುಕ ಸುಮ್ಮನಾಗಿ ಬಿಟ್ಟ. ನಾವಿಬ್ಬರೂ ನಿದ್ದೆಯಿಂದ ಎಚ್ಚರಾದವ ರಂತೆ ಎದ್ದೆವು. ಮತ್ತೆ ಆ ಹುಚ್ಚುತನಕ್ಕೆ ನ್ಯಾಯಾಲಯ ಬಿಟ್ಟಿರಬಹುದು ಎಂದೆ ನಾನು.

ಹೌದು ಹುಚ್ಚಿಯೆಂದು ನ್ಯಾಯಾಲಯ ಅವಳನ್ನು ಬಿಟ್ಟಿತು. ನೀವು ಅವಳಿಗೆ ಹುಚ್ಚಿ ಎನ್ನುವಿರಾ? ಆ ವ್ಯಕ್ತಿ ನನ್ನನ್ನು ಕೇಳಿದ.

ಅವಳು ಹುಚ್ಚಿಯಾಗಿ ಬಿಟ್ಟಿದ್ದಳು ! ನಾನೆಂದೆ.

ಇಲ್ಲ. ಅದಾದನಂತರ ಅವಳು ೮ ದಿನದ ವರೆಗೆ ಜೀವಂತಳಿದ್ದಳು. ಹುಚ್ಚಿನ ಲಕ್ಷಣ ಎಳ್ಳಷ್ಟೂ ಇರಲಿಲ್ಲ.

ಅವಳು ಹುಚ್ಚಿಯಾಗಿರಲಿಲ್ಲವೆಂದು ಹೇಳಬಲ್ಲಿರಾ ?

ಅವಳ ದೃಷ್ಟಿಕೋನದಲ್ಲಿ ಸತಿಗಮನವೇ ಮಹಾಪುಣ್ಯವಾಗಿತ್ತು.

ಅವಳು ಸ್ವಲ್ಪ ಇದ್ದಿದ್ದರೆ ಎಲ್ಲಿ ಹುಚ್ಚಿಯಾಗಿರುತ್ತಿದ್ದಳೊ ಇಷ್ಟು ದಿನ ಇದ್ದಿದ್ದೇ ಹೆಚ್ಚಿನ ಮಾತು.

ಆದಾದ ನಂತರ? ಗಿರಿಶ ಕೇಳಿದನು.

೮ ನೆಯ ದಿನದ ಮುಂಜಾನೆ ಪಾರ್ವತಿ ಸತಿಕಟ್ಟೆಯ ಹತ್ತಿರ ಕುಳಿತಿದ್ದಳು. ಮೊದಲಿನಂತೆ ಅಲಂಕೃತಳಾಗಿದ್ದಳು. ಪತಿಯ ಚಿತ್ರವನ್ನು ತೊಡೆಯ ಮೇಲೆ ತೆಗೆದುಕೊಂಡು ಅವನ ಜನ್ಮಕ್ಕಾಗಿ ಬಹಳ ದಿನದ ನಿದ್ರಾದೇವಿಯನ್ನು ಅಲಂಗಿಸಿದ್ದಳು. ತಾಯಿ ಎಷ್ಟು ಅಲುಗಾಡಿಸಿದರೂ ಎಚ್ಚರಿಸಿದರೂ ಏಳಲಿಲ್ಲ.

ಅಪೂರ್ವ ಸತಿ ! ಗಿರಿಶ ನಿಟ್ಟುಸಿರು ಬಿಟ್ಟ.

ಬಿಲ ಪಾವರ. ಅಂಥ ವಿಶ್ವಾಸ ನಾನು ನಗುತ್ತ ನಗೆ ಚೇಷ್ಟೆ ಮಾಡಿದೆ. ನನ್ನ ನಗು ಒಳಗೇ ಏಕೆ ಸತ್ತಹೋಯಿತೆಂಬುದು ತಿಳಿಯಲಿಲ್ಲ.

ಕಥೆಯು ಮುಗಿಯಿತು. ಮುದುಕ ಪ್ರಯಾಣಿಕ ಕಿಡಕಿಯ ಹೊರಗೆ ನೋಡುತ್ತಿದ್ದನು. ಕಂಪಾರ್ಟಮೆಂಟಿನ ಎಲ್ಲ ಪ್ರಯಾಣಿಕರು ಗಂಭೀರ್ಯವದನರಾಗಿ ಕುಳಿತಿದ್ದರು.

ರೈಲು ಮೊದಲಿನಂತೆ ಝುಕ್, ಝುಕ್, ಝುಕ್, ಝುಕ್ ಎಂದು ಸಪ್ಪಳಮಾಡುತ್ತ ಓಡುತ್ತಿತ್ತು.

---

## ಪ್ರಕೃತಿ

ಬನದಲಿ ಸೊಬಗಿದು ಶೋಭಿಸುತಿಹುದು।
ದಿನ ದಿನ ಸೌಂದರ್ಯ ಹೆಚ್ಚುತಲಿಹುದು ॥ ಪ॥
ಅಚೆಗೆ ಅರಳಿವೆ ಬಣ್ಣ ಬಣ್ಣದ ಹೂವು।
ಕಂಪನು ಬೀರುತ ಸ್ವಾಗತಿಸುವವು॥
ರವಿಯ ಕಿರಣಗಳು ಸೂಸುತಲಿಹವು।
ಬಣ್ಣದ ಹೂಗಳನರಳಿಸಲೂ ॥೧॥

ಇಲ್ಲಿ ಕೇಳುತಲಿದೆ ಝುಂಕಾರದನಾದ।
ಕೋಗಿಲೆ ಗಿಳಿಗಳ ಸುನಾದದಿಂಚರ।
ಹೆಜ್ಜೆ ಹೆಜ್ಜೆಗೂ ತೋರುತ ಬರುತಿದೆ।
ಸೃಷ್ಟಿಯ ಸೌಂದರ್ಯದ ಸೊಬಗೂ ॥೨॥

ಜಗಕಿದು ತರುತಿದೆ ದಿವ್ಯ ಪ್ರಭಾತ।
ಜನರಲಿ ತುಂಬುತ ನವೀನ ಚರಿತ।
ಸೃಷ್ಟಿಯಲಿ ಹೊಸ ದೃಷ್ಟಿಯ ತೋರುತ।
ಹರುಷವ ಜನಕೆಲ್ಲ ತರುತಿಹುದು ॥೩॥

—ಶ್ರೀಮತಿ ಸಾವಿತ್ರಿ ಜೋಶಿ

# ವರಶೋಧ ಒಂದು ಸಮಸ್ಯೆ

ಲೇಖಕರು: ಎಸ್. ಜಿ. ಉಳಿಗೆರೆ ತಲವಾಟ

ಒಂದು ಕಾಲದಲ್ಲಿ ತೀರಾ ಸರ್ವ ಸಾಮಾನ್ಯವಾಗಿದ್ದ ವರಶೋಧ ಇಂದು ಒಂದು ಜಟಿಲ ಸಮಸ್ಯೆಯಾಗಿದೆ. ಕನ್ಯಾರ್ಥಿಗಳಾಗಿ ಬಂದವರ ಕೂಡೆ ಕನ್ಯಾ ಮಾತಾ ಪಿತೃಗಳು, "ನಮ್ಮ ಹುಡುಗಿಯನ್ನು ನಿಮ್ಮ ಮಗನಿಗೆ ಕೊಡಲೇನೂ ಅಡ್ಡಿ ಇಲ್ಲ. ಆದರೆ ಸಾವಿರ ರೂಪಾಯಿ ಇಡಬೇಕು. ನೂರಾ ಐವತ್ತು ರೂಪಾಯಿ ಜರದ ಸೀರೆಯನ್ನು ಇಡಬೇಕು." ಎಂದು ವರ ಪಿತೃಗಳನ್ನೂ ಕೇಳುವ ಕಾಲ ಬಂದಿತ್ತು. ಆದರಿಂದು ಕನ್ಯಾಪಿತೃಗಳಿಗೆ ಹೆಣ್ಣುಮಕ್ಕಳೆಂದರೆ ತಲೆ ತಿನ್ನುವ ಸಮಸ್ಯೆಯಾಗಿರುವದು ಕಂಡು ಬರುತ್ತದೆ. ಮನೆಯಲ್ಲಿ ಬೆಳೆದು ನಿಂತ ಹುಡುಗಿಯ ಲಗ್ನಮಾಡುವದೆಂದರೆ ಒಂದು ಮಹಾ ಯಜ್ಞ ಮಾಡಿದಂತಾಗುತ್ತದೆ. ಇದಕ್ಕೆಲ್ಲಾ ಇಂದಿನ ವರರು ವಧುಶೋಧನೆಯಲ್ಲಿ ಅನುಸರಿಸುವ ಧೋರಣೆಯೇ ಕಾರಣವಾಗಿದೆ. ಅವರಿಗೆ ವಧು ಶೋಧನೆಗೆ ನಿಶ್ಚಿತವಾದ ಒಂದು ಗೊತ್ತುಗುರಿಗಳಿಲ್ಲ. ಒಬ್ಬೊಬ್ಬರ ಭಾವನೆ ಒಂದೊಂದು ರೀತಿಯಲ್ಲಿ ಹರಿಯುತ್ತಿದೆ. ಕೆಲವು ವರರು, ಹುಡುಗಿ ಹೇಗಿದ್ದರೂ ಚಿಂತೆಯಿಲ್ಲ ಚೆನ್ನಾಗಿ ವರದಕ್ಷಿಣೆ ಸಿಕ್ಕರೆ ಸಾಕು ಎಂದಿದ್ದರೆ,ಕೆಲವರು ಹುಡುಗಿ ರೂಪವತಿಯಾಗಿದ್ದು, ಚೆನ್ನಾಗಿ ಓದಿದ್ದು, ಕಸೂತಿ, ನೂಲುವುದು, ನೇಯ್ಗೆಯಲ್ಲಿ ಸಾಕಷ್ಟು ಪರಿಚಿತಳಾಗಿರಬೇಕೆನ್ನುತ್ತಾರೆ. ಇನ್ನು ಕೆಲವರು ಏನೋ ನಾಲ್ಕು ಇಯತ್ತೆ ಓದಿದ ಬಡ ಕುಟುಂಬದ ರೂಪ ಗುಣ ಶೀಲ ಹುಡುಗಿಯಾದರೆ ಚೆನ್ನಾಗಿ ಇರುತ್ತದೆ ಎನ್ನುತ್ತಾರೆ. ಅಂತೂ ಹೆಣ್ಣು ಆರಿಸುವಲ್ಲಿ ವಿಪರೀತ ಭಿನ್ನತೆ ಕಂಡು ಬಂದರೂ, ಚೆನ್ನಾಗಿ ವರದಕ್ಷಿಣೆ ಸಿಗುವ ಹೆಣ್ಣನ್ನು ಹಾಗೂ ಚೆನ್ನಾಗಿ ಓದಿದ ಹೆಣ್ಣನ್ನು ಆರಿಸುವುದರಲ್ಲಿ ಇಂದಿನ ವರರು ಅಷ್ಟೊಂದು ಆಸಕ್ತಿಯನ್ನು ತೋರಿಸುವುದು ಕಂಡು ಬರುವುದಿಲ್ಲ. ಏಕೋ ! ಏನೋ ಅವರ ಬಗ್ಗೆ ಒಂದು ತರಹದ ಜಿಗುಪ್ಸೆಯನ್ನು ಇಂದಿನ ವರರು ತೋರಿಸುತ್ತಾರೆ. ಇದಕ್ಕೆ ಕಾರಣವೂ ಇಲ್ಲದಿಲ್ಲ ಕನ್ಯಾ ಪಿತೃವು ಸಾಕಷ್ಟು ವರದಕ್ಷಿಣೆ ಕೊಟ್ಟು ಮದುವೆ ಮಾಡಿ ಕೊಡುತ್ತಾನೆಂದರೆ ಅವನಿಗೆ ಸಾಕಷ್ಟು ಪತ್ತು ಇರಲೇಬೇಕು. ವರದಕ್ಷಿಣೆ ಕೊಟ್ಟು ಮದುವೆ ಮಾಡಿ ಕೊಟ್ಟ ನಂತರ ಅದೇ ಒಂದು ಹಂಗಿನಾಧಾರದ ಮೇಲೆ ಆ ಸಂಸಾರದಲ್ಲಿ ಕನ್ಯಾ ಪಿತೃವಿನ ಹಸ್ತಕ್ಷೇಪ ನಡೆದೇ ಇರುತ್ತದೆ. ಹೆಣ್ಣನ್ನು ನಡೆಯಿಸಿಕೊಳ್ಳುವುದರಲ್ಲಿ ಸ್ವಲ್ಪ ಎಡವಿದರೂ ಸಾಕು, "ನಿನಗೆ ನನ್ನ ಹುಡುಗಿಯನ್ನು ಪುಕ್ಕಟೆಯಾಗಿ ಮದುವೆ ಮಾಡಿ ಕೊಟ್ಟಿಲ್ಲ. ಐದು ಸಾವಿರ ವರದಕ್ಷಿಣೆ ತೆತ್ತಿದ್ದೇನೆ. ಹುಡುಗಿಯನ್ನು ಸರಿಯಾಗಿ ನಡೆಸಿಕೊ" ಎನ್ನುತ್ತಾರೆ. ಹೆಣ್ಣಾದರೂ ಸರಿ. " ನನ್ನನ್ನು ನೀವು ಪುಕ್ಕಟೆಯಾಗಿ ತಂದುಕೊಳ್ಳಲಿಲ್ಲ. ಐದು ಸಾವಿರ ರೂಪಾಯಿಗಳನ್ನು ಏಕಗಂಟಿನಲ್ಲಿ ತಂದಿದ್ದೀರಿ." ಎಂದು ಆಗಾಗ ಹಂಗಿಸುತ್ತಿರುತ್ತಾರೆ. ಹಾಗೆ ವರದಕ್ಷಿಣೆ ತೆಗೆದುಕೊಂಡು ಕನ್ಯಾಪಿತೃವಿನ ಹಾಗೂ ಹೆಣ್ಣಿನ ಹಂಗು ಜೀವನದಲ್ಲಿರುವದನ್ನು ಇಂದಿನ ವರರು ಅಷ್ಟೊಂದು ಆಸಕ್ತಿಯಿಂದ ಸ್ವಾಗತಿಸುವುದಿಲ್ಲ ಹಾಗಂತ ವರದಕ್ಷಿಣೆ ಸಂಪ್ರದಾಯ ಪೂರ್ಣವಾಗಿ ಸಮಾಜದಿಂದ ಹೊರದೂಡಲ್ಪಟ್ಟಿಲ್ಲ. ಈ ಮೇಲಿನ ಭಾವನೆ ಕೆಲಕೆಲವು ಸುಧಾರಿಸಿದ ವರರಲ್ಲಿ ಮಾತ್ರ ಕಂಡು ಬರುತ್ತದೆ. ಹಾಗೇನೇ ಚೆನ್ನಾಗಿ ಓದಿದ ಹುಡುಗಿಯರನ್ನು ಇಂದಿನವರರು ಚುನಾಯಿಸಲು ಹಿಂದೇಟು ಹಾಕುತ್ತಾರೆ. ಹಾಗೇನೇ ಚೆನ್ನಾಗಿ ಓದಿದ ಹೆಣ್ಣು ಸ್ವೇಚ್ಛೆಯಾಗಿ ವರ್ತಿಸಬಹುದು, ತನ್ನ ಮೇಲೆ ಅಧಿಕಾರ ಚಲಾಯಿಸಬಹುದು, ಮಕ್ಕಳ ಲಾಲನೆ ಪಾಲನೆ ನೋಡಿಕೊಳ್ಳದಿರಬಹುದೆನ್ನುವ ಹೆದರಿಕೆ ಅವರನ್ನೂ ಕಾಡುತ್ತಿದೆ. ನಾನು ಈ ಕುರಿತು ಹಲವಾರು ವರದ ಅಭಿಪ್ರಾಯವನ್ನು ಕಲೆ ಹಾಕಿದಾಗ ಬಹು ಸಂಖ್ಯಾಕರ ಅಭಿಪ್ರಾಯ," ಬಡ ಕುಟುಂಬದ,ನಾಲ್ಕು ಇಯತ್ತೆ ಓದಿದ, ರೂಪಗುಣ ಶೀಲಯುಕ್ತ ಹೆಣ್ಣನ್ನೇ ಆರಿಸುವದು ಯೋಗ್ಯ" ಎನ್ನುವವರೇ ಕಂಡು ಬಂದರು. ಎಲ್ಲಾ ವರರಿಗೂ ಅವರವರ ಭಾವನೆಯಂತೆ ಹೆಣ್ಣು ಸಿಗುತ್ತವೆ ಎನ್ನುವದೇನೂ ಇಲ್ಲ ಅನುಕೂಲವಾಗಿಯೂ ಸಿಗಬಹುದು ಪ್ರತಿಕೂಲವಾಗಿಯೂ ಸಿಗಬಹುದು. ಆದರಿಷ್ಟೆ ತನ್ನ ಭಾವನೆಗನುಕೂಲವಾದ ಹೆಣ್ಣನ್ನು ಆರಿಸುವಲ್ಲಿ ಕೆಲವಂದು ವರ್ಷಗಳ ಶೋಧನೆಯನ್ನು ಇಂದಿನ ವರರು ನಡೆಸಿಯೇ ನಡೆಸುತ್ತಾರೆನ್ನುವದು ನಿರ್ವಿವಾದ. ವರರ ಈ ರೀತಿಯ ಅಭಿಪ್ರಾಯದಿಂದಾಗಿ, ನೇರವಾದ ಶೋಧದಿಂದಾಗಿ ಅದೆಷ್ಟೋ

ಕನ್ಯಾ ಪಿತೃಗಳಿಗೆ ವರಶೋಧ ಒಂದು ಮಹಾ ಸಮಸ್ಯೆಯಾಗಿ ಪರಿಣಮಿಸಿದೆ. ಅಲ್ಲದೆ ಹೆಣ್ಣುಗಳು ಕೂಡಾ ಮಾರು ಕಟ್ಟೆಯ ವಸ್ತುಗಳಂತಾಗಿವೆ. ವರರು ಬರುವದು, ನೋಡುವದು ಹೋಗುವದು ನಡೆದೇ ಇದೆ. ಅಲ್ಲೊಂದು ಹೆಣ್ಣಿದೆ ಎಂದಾಗ ವರು ಅದನ್ನು ನೋಡಲು ಹೋಗುತ್ತಾರೆ. ಅವನಿಗೆ ಬಾಕಿ ಎಲ್ಲಾ ಸರಿಹೋಗಿರುತ್ತದೆ. ಆದರೆ "ಅವಳೆಲ್ಲಿಯೋ ಎಸ್. ಎಸ್. ಎಲ್. ಸಿ. ಮಾಡಿದ ಹುಡುಗಿ ಅವಳನ್ನು ತಂದು ಕೊಂಡು ನಮ್ಮ ಮನೆಯಲೇನೂ ಸಾಲೆ ತೆರೆಯಬೇಕಿಲ್ಲ" ಎಂದು ತಿರಸ್ಕರಿಸಿದರೆ, ಮತ್ತೊಬ್ಬನಿಗೆ ಅವಳ ರೂಪವೇ ಸರಿ ಬರುವುದಿಲ್ಲ ಮುಗದೊಬ್ಬನಿಗೆ ವರದಕ್ಷಿಣೆಯೇ ಕಮ್ಮಿಯಾಗಿ ಕಾಣುತ್ತದೆ. ಹೀಗೆಲ್ಲಾ ಒಬ್ಬೊಬ್ಬರು ಒಂದೊಂದು ಕಾರಣ ಕೊಟ್ಟು ಬೇಡ ಅನ್ನುತ್ತಾರೆ. ಅವರಿಗೂ ಗೊತ್ತು ಹೆಣ್ಣಿಗೇನೂ ಬರಗಾಲವಿಲ್ಲ ಎಂದು. ಇನ್ನೂ ಹತ್ತಾರು ಕಡೆ ನೋಡೋಣ ಎಂದಿರುತ್ತಾರೆ. ಆದರೆ ಹೀಗೆಲ್ಲಾ ಒಂದು ಹೆಣ್ಣನ್ನು ನೋಡಿ ಬಿಡುವುದರಿಂದ, ಬೆಳೆದು ನಿಂತ ಆ ಹೆಣ್ಣಿನ ಮನಸ್ಸಿನ ಮೇಲಾಗುವ ಪರಿಣಾಮವನ್ನು ಯಾರೂ ಅರಿಯುವುದಿಲ್ಲ. ಮಾರು ಕಟ್ಟೆಯ ವಸ್ತುವಿನ ಹಾಗೆ ನೋಡಬಂದವರ ಎದುರಿಗೆ ನಿಂತು ಕೊನೆಗೊಮ್ಮೆ ಬೇಡ ಅನ್ನಿಸಿಕೊಳ್ಳುವದನ್ನು ಯಾವಸಾಮಾನ್ಯ ಮಹಿಳೆಯೂ ಸಹಿಸುವ ವಿಚಾರವಲ್ಲ. ಅವಳಲ್ಲಿಯೂ ವಿಚಾರಿಸುವ ಶಕ್ತಿ ಇರುತ್ತದೆ, ಮನುಷ್ಯತ್ವ ಇರುತ್ತದೆ. ಒಂದೆರಡು ವರರ ಮುಂದೆ ನಿಂತು ಕೊಳ್ಳಬಹುದು. ಕೊನೆಗವಳಿಗದು ಹೇಸಿಕೆಯಾಗಿ ಕಾಣುತ್ತದೆ. ವರರ ಬಗ್ಗೆ ತಿರಸ್ಕಾರ ಮೂಡುತ್ತದೆ. ಕೊನೆಗವಳು ಮದುವೆಯೇ ಬೇಡ ಎನ್ನುವ ಅಭಿಪ್ರಾಯಕ್ಕೆ ಇಳಿಯುತ್ತಾಳೆ. ಇದಕ್ಕೆ ನನ್ನ ಸ್ವಾನುಭವದ ಒಂದು ಕರುಣಾ ಪೂರಿತ ಉದಾಹರಣೆಯನ್ನು ಈ ಸಂದರ್ಭದಲ್ಲಿ ವಾಚಕರ ಮುಂದಿಡುತ್ತೇನೆ. ನನ್ನ ಮಿತ್ರ "ಪರದೇಶಿ" ಎನ್ನುವವರ ಜೊತೆಯಲ್ಲಿ ತೀರ್ಥಹಳ್ಳಿ ಸಮೀಪದ ಒಂದು ಹಳ್ಳಿಗೆ ಹೆಣ್ಣು ನೋಡಲು ಹೋಗುವ ಅವಕಾಶ ನನಗೆ ಬಂತು. ಹೆಣ್ಣು ಎಸ್. ಎಸ್. ಎಲ್. ಸಿ. ಪಾಸು ಮಾಡಿಕೊಂಡಿತ್ತು. ಸಂಗೀತ ಹಾಗೂ ಹಸ್ತ ಕೌಶಲ್ಯಗಳಲ್ಲಿಯೂ ಸಾಕಷ್ಟು ಪರಿಣಿತವಾಗಿತ್ತು. ಆದರೆ ರೂಪ ಮಾತ್ರ ಅಷ್ಟೊಂದು ಹೇಳಿಕೊಳ್ಳುವಂತಿರಲಿಲ್ಲ. ಉದ್ದಕ್ಕೆ ಸಪುರ ಮೈ ಕಟ್ಟಿನವಳಾಗಿ, ಸ್ವಲ್ಪ ಉದ್ದ ಮುಖದ್ದಾಗಿ ಬೆಳ್ಳಗಿತ್ತು. ನನ್ನ ಮಿತ್ರರು ಒಂದರಲ್ಲಿ ಮಾತ್ರಾ ತೆಗೆದು ಹಾಕಬೇಕಾಗಿ ಬಂತು. ಅವಳು ಅವರಿಗಿಂತ ಒಂದು ಮುಷ್ಟಿ ಎತ್ತರವಾಗಿದ್ದುದೇಕಾರಣ ಅದರೂ "ಹೌದೋ ಅಲ್ಲವೋ ನೋಡಿಬಿಡೋಣ" ಎಂದಾಗ ಅವಳಿಗೂ ಹೇಗೂ ನಾನು ಉದ್ದ. ಅದರಿಂದ ಅವರು ನನ್ನನ್ನು ಬೇಡ ಎಂದು ಹೇಳಿಯೇ ಹೇಳುತ್ತಾರೆಂದು ತಿಳಿದಿರಬೇಕು. ಅವಳಾದವುದಕ್ಕೂ ಸಮ್ಮತಿಸದೆ "ನನಗೆ ಮದುವೆಯೇ ಬೇಡ. ನೌಕರಿ ಮಾಡಿಕೊಂಡು ಜೀವನಮಾಡುತ್ತೇನೆ ಏನೋ ವಿಧಿಬರೆದಂತಾಗಲಿ" ಎಂದು ಕಣ್ಣೀರು ಸುರಿಸಿದಳು. ಒಂದು ಹೆಣ್ಣಿನ ಅವಸ್ಥೆ ಇಲ್ಲಿಯವರೆಗೆ ಖಂಡಿತವಾಗಿಯೂ ಬರಬಾರದೆಂದು ನನಗೆ ವಿಪರೀತ ಪಶ್ಚಾತ್ತಾಪವಾಯಿತು. ಅವಳು ಈ ಅಭಿಪ್ರಾಯಕ್ಕೆ ಬರಲು ಕಾರಣ ಎಂದರೆ, ಅವಳ ತಂದೆ ಹಲವಾರು ಕಡೆ ಅವಳ ಫೋಟೋ ಕಳಿಸಿದ್ದರು. ಫೋಟೊ ನೋಡಿದವರಾದರು "ನಿಮ್ಮ ಹುಡುಗಿ ಮನಸ್ಸಿಗೆ ಬಂದಿಲ್ಲ" ಎಂದು ಬರೆದಿದ್ದರು. ನಾಲ್ಕಾರು ವರರು ಬಂದು ನೋಡಿ "ಬೇಡ" ಎಂದು ಹೋಗಿದ್ದರೆಂದು ನಮಗೆ ಹಿಂದಿನಿಂದ ತಿಳಿದು ಬಂತು. ಫೋಟೋ ಕಳಿಸಿದವರಿಂದಲೂ ನಿರಾಶೆಯ ಪತ್ರಗಳು. ನೋಡ ಬಂದವರಿಂದಲೂ ನಿರಾಶೆಯ ನುಡಿ. ಇದನ್ನೆಲ್ಲಾ ನೋಡಿ ಅವಳಿಗೆ ಮದುವೆಯೇ ಬೇಡ ಎನ್ನಿಸಿರಬೇಕು ಪಾಪ! ವರರ ನೋಡಿ ಬಿಡುವ ಧೋರಣೆಗೆ ಬೇಸತ್ತು ಕೆಲವು ಹೆಣ್ಣುಮಕ್ಕಳು ಸರ್ಕಾರಿ ನೌಕರಿಯ ಬೆನ್ನು ಹತ್ತುತ್ತಿದ್ದಾರೆ. ಕೆಲವರು ಔದ್ಯೋಗಿಕ ಶಾಲೆಯನ್ನು ಸೇರಿ ಉದ್ಯೋಗ ಕಲಿತು ಸ್ವಾವಲಂಬನ ಮಾರ್ಗಕ್ಕಿಳಿಯುತ್ತಿದ್ದಾರೆ. ಇನ್ನು ಅನೈತಿಕ ಕಾರ್ಯಕ್ಕಿಳಿಯುತ್ತಿದ್ದಾರೆ. ತಂದೆ ತಾಯಿಗಳಿಗೆ ಹೊರೆಯಾಗಿ, ಅವರ ಕಣ್ಣೀರು ಹರಿಸುವದನ್ನೂ ಅದೆಲ್ಲಿಯವರೆಗೆ ನೋಡಿಕೊಂಡಿರಲು ಸಾಧ್ಯ ? ಏನಾದರೊಂದು ಕೆಲಸ ಹುಡುಕಿಕೊಂಡು ಜೀವನ ಮಾಡುವ ದುರ್ಧರ ಪ್ರಸಂಗ ಹೆಣ್ಣು ಮಕ್ಕಳಿಗೆ ಒದಗಿ ಬಂದಿದೆ. ಇಂದು ಈ ಬಗೆಯ ಪ್ರಸಂಗ ಅಲ್ಲೆರಡು, ಇಲ್ಲೆರಡು ಕಂಡು ಬಂದರೂ ನಾಳೆ ಇದು ವ್ಯಾಪಕವಾಗಿ ಹರಡಬಹುದು. ಹೀಗೆಲ್ಲಾ ಆಗುವುದರಿಂದ ಸಮಾಜ ಸ್ವಾಸ್ಥ್ಯ ಕಡಮೆಯಾಗಿ ಸಮಾಜ ಅಧಃಪತಕ್ಕಿಳಿಯಬಹುದು. ಅದಕ್ಕಾಗಿ ಇಂದಿನ ನಾಡಿನ ಅವಿವಾಹಿತ ಪುರುಷರು ಹೆಣ್ಣು ಸಿರಿವಂತರದಿರಲಿ, ಬಡಕುಟುಂಬದವಳಿರಲಿ, ಚೆನ್ನಾಗಿ ಓದಿರಲಿ ಓದಿಲ್ಲದೆ ಇರಲಿ ಇದಾವುದಕ್ಕೂ ಬೆಲೆ ಕೊಡದೆ ಹಿಂದೇಟು ಹಾಕದೆ ಹೆಣ್ಣನ್ನು ಆರಿಸುವದನ್ನು ಅನುಸರಿಸಬೇಕು. ಹೆಣ್ಣಿನ ರೂಪ, ಗುಣಗಳು ಕೂಡಿ ಬರುವಂತಿವೆಯೇ ಎಂದು ಗಮನಿಸಬೇಕು. ಹಾಗೂ ಹೆಣ್ಣಿನಲ್ಲಿ ದಾಂಪತ್ಯ ಜೀವನದ ಅತ್ಯಮೂಲ್ಯ ಗುಣಗಳಿವೆಯೇ ? ಅವಳು ತನ್ನ ಮುಂದಿನ ಜೀವನದ ಜವಾಬ್ದಾರಿಯನ್ನು ನಿರ್ವಹಿಸಲು ಸಮರ್ಥಳೇ ಎನ್ನುವದನ್ನೂ ವಿಚಾರಿಸಬೇಕು. ಹೆಣ್ಣುಗಳಿಗೇನೂ ಬರಗಾಲವಿಲ್ಲ

ವೆಂದು, ಇನ್ನೂ ಹತ್ತಾರು ಕಡೆ ನೋಡಿದರಾಯಿತೆಂದೂ ಹೆಣ್ಣನ್ನು ನೋಡಿ ಬಿಡುವುದರಿಂದ ಆದರ ಮನಸ್ಸಿದ ಮೇಲೆ ಆಗುವ ಪರಿಣಾಮವನ್ನು ಚೆನ್ನಾಗಿ ವಿಚಾರ ಮಾಡಬೇಕು.

ಇಷ್ಟೆಲ್ಲಾ ಸಮಸ್ಯೆಯನ್ನು ಕೇವಲ ವರರೇ ತಂದೊಡ್ಡುವರೆಂದು ಹೇಳಲು ಬರುವುದಿಲ್ಲ. ಕೆಲಮಟ್ಟಿಗೆ ಅವಿವಾಹಿತ ಮಹಿಳೆಯರೂ ಕಾರಣರೆಂದು ನಾನಿಲ್ಲಿ ಅನಿವಾರ್ಯವಾಗಿ ಹೇಳಬೇಕಾಗಿದೆ. ಸಿರಿವಂತರ ಹೆಣ್ಣುಮಕ್ಕಳು, ಚೆನ್ನಾಗಿ ಓದಿದ ಹೆಣ್ಣುಮಕ್ಕಳು ಇಂದು ತೀರಾ ಸಣ್ಣ ಸಣ್ಣ ವಿಷಯಗಳಿಗಾಗಿ ವರರನ್ನು ತಿರಸ್ಕರಿಸಿದ ಹತ್ತಾರು ಉದಾಹರಣೆಗಳನ್ನು ನಾನು ಕಲೆ ಹಾಕಿದ್ದೇನೆ. ಅವರಿಗೆ ತಾವು ಸಿರಿವಂತರ ಮಕ್ಕಳೆಂದೂ, ಚೆನ್ನಾಗಿ ಓದಿದವರೆಂದೂ, ಮಿತಿಮೀರಿದ ಮನೋಭಾವನೆ ಅವರಿಗಿರುತ್ತದೆ. ಹೀಗೆ ವಿಪರೀತ ಮನೋಭಾವನೆಯಿಂದ ವರ್ತಿಸುವದು ಸರಿ ಅಲ್ಲವೇ ಅಲ್ಲ ಬಂದ ವರರನ್ನು ಸಣ್ಣಪುಟ್ಟ ವಿಷಯಗಳಿಗಾಗಿ ತಿರಸ್ಕರಿಸದೆ, ಅವರಲ್ಲಿರುವ ಗುಣಶೀಲವನ್ನೂ ಪರಿಶೀಲಿಸಬೇಕು. ತನ್ನ ಮುಂದಿನ ಜೀವನವನ್ನು ಪ್ರತಿನಿಧಿಸಲು ಯೋಗ್ಯನೋ ಅಯೋಗ್ಯನೋ ಎನ್ನುವದನ್ನು ವಿಚಾರಿಸಬೇಕು. ವರರ ಅಜೂಬಾಜಿನವರಲ್ಲಿ ಆ ಕುರಿತು ವಿಚಾರ ಮಾಡಬೇಕು ಅಂದರೆ ಮಾತ್ರ ತಮ್ಮ ಬುದ್ಧಿ ಶಕ್ತಿಯ ಉಪಯೋಗ ಮಾಡಿಕೊಂಡಂತಾಗಿ, ತನ್ಮೂಲಕ ತಮ್ಮ ಮುಂದಿನ ಜೀವನವನ್ನು ಪಾವನವಾಗಿ ರೂಪಿಸಿಕೊಂಡು ಹೋಗಲು ಸಾಧ್ಯ.

---

## " ವಿಶ್ವದಲಿ ನಡೆ "

ಸಂಸಾರ ಸಾಗರವ ದಾಟಬೇಕಾದೊಡೆ
ನೀತಿಯು ನಾವು ನೀ ಕಟ್ಟು ಮರುಳೆ
ಶೀಲದ ಹರಿಗೋಲು ಕೈಯಲ್ಲಿ ಪಿಡಿದು।
ಮೋಹದ ಜಲವನ್ನು ಬದಿಗೊತ್ತು ಮರುಳೆ.
ನಿನ್ನ ಜೀವನವಿದು ನೀರಿನ ಗುರುಳೆ
ನೋಡು ನೋಡುತ್ತಲೇ ಮಾಯವಾಗುವದು
ಇಂದು ನಾಳೆನ್ನದೆ ನಿನ್ನ ಕಾಯಕ ಮಾಡು
ಕಾಯಕವೇ ಕೈಲಾಸ ಅರಿಯಿದನು ಮರುಳೇ
ಜನರಲ್ಲಿ ಬಿರುನುಡಿಯ ಬಿರುಗಾಳಿ ಬಿಡಬೇಡ
ಅವರಾಡಿದರೆ, ನೀನು ಕಿವುಡಾಗಿ ಮುಂದೆ ನಡೆ
ಪರವಸ್ತು ನೋಡಿ ಮೋಹ ಜನಿಸಲು
ಕಣ್ಣುಗಳ ಮೇಲೆ ಕೈಯಿಡು ಮರುಳೇ
ಕೂಡಿಸಿದ ಸ್ವಾರ್ಥದ ದುಡ್ಡಿನ ಗಂಟು
ಹೇರಿಕೊಂಡೊಯ್ಯುಲಿಯ ಸತ್ತಾಗ ಆ ಗಂಟು
ಸಂಗಾತಿಯಾಗಿಹುದು ನೀತಿಯು ಆ ಗಂಟು
ದಾನಧರ್ಮವದೂ ಮುಕ್ತಿಯು ಆ ಗಂಟು
ಬಡತನವು ಬಂದಾಗ ಯಾರಿಗೂ ಯಾರಿಲ್ಲ
ನೆರಳೂ ಕತ್ತಲೆಯಲಿ ಕೈ ಬಿಡುವದು ಮರುಳೆ
ಸ್ವರ್ಗ ನರಕಗಳು ಅಲ್ಲಲ್ಲಿ ಎಲ್ಲಿಲ್ಲ
ಪರಮಾತ್ಮ ತೃಪ್ತಿಯೇ ಸ್ವರ್ಗ ನರಕಾಗಿಹವು
ಇಂತು ಸಮರಸ ನೀನು " ವಿಶ್ವಧಲಿ ನಡೆ "ದರೆ
ಕೊನೆಗೆ ನಿನ್ನಾತ್ಮ ಲೀನ ಪರಮಾತ್ಮನಲಿ

ಎಮ್. ಕೇ. ನೇಸರಗಿ

# ಅನುಭವ

ಲೇಖಕ : ಗೋಪಾಲ, ಭಟ್ಟ ಸುಗಾವಿ. ಧಾರವಾಡ

ಈ ಜಗತ್ತಿನಲ್ಲಿ ಜನ್ಮವೆತ್ತ ಪ್ರತಿಯೊಬ್ಬ ವ್ಯಕಿಯೂ ದಿನವು ಕಳೆದ ಹಾಗೆ ತನ್ನ ಅನುಭವವನ್ನು ಹೆಚ್ಚಿಸಿಕೊಳ್ಳುತ್ತ ಹೋಗವದು ಒಂದು ಸೃಷ್ಟಿಯ ನಿಯಮವೇ ಆಗಿರುತ್ತದೆ. ಅನುಭವ ಎನ್ನುವದನ್ನು ಅನುಭವಿಸಿಯೇ ತಿಳಿದುಕೊಳ್ಳಬೇಕು. ಒಬ್ಬರು ಜೇಳುವದನ್ನು ಕೇಳಿದರೆ ನಿಮ್ಮ ಜೀವನವನ್ನು ಸುಖಮಯವನ್ನಾಗಿ ಮಾಡಿಕೊಳ್ಳಲು ಸಹಾಯವಾಗಬಹುದು! ಆದರೆ ಸ್ವತಃ ಕಹಿಯನ್ನು ಉಂಡು ಪಡೆದ ಅನುಭವದಷ್ಟು ಶಕ್ತಿಯನ್ನು ಪಡೆಯಲಾರದು. ನಮ್ಮ ಜೀವನದಲ್ಲಿ ಇಂಥ ಅನೇಕ ಪ್ರಸಂಗಗಳನ್ನು ಅನುಭವಿಸಿ ನಮ್ಮ ನಡತೆಯನ್ನು ಸುಧಾರಿಸಿಕೊಂಡು ಸುಖಿಗಳಾಗ ಬಲ್ಲೆವು. ಅನುಭವಿಗಳಾಗಬಲ್ಲೆವು.

ಇಂದು ಹುಟ್ಟಿದ ಮಗವಿಗೆ ಜಗತ್ತಿನಲ್ಲಿಯ ಯಾವ ವಸ್ತುಗಳ ಪರಿಚಯವು ಇರುವದಿಲ್ಲ. ಆ ಮಗುವು ಸ್ವಲ್ಪ ಬೆಳೆಯಿತೆಂದರೆ ತನ್ನ ತಾಯಿ ಯಾರು ಎಂಬುದನ್ನು ಗುರುತಿಸುತ್ತದೆ. ತಾಯಿಯನ್ನು ಕಂಡಾಗಲೆಲ್ಲಾ ಮೊಲೆಹಾಲನ್ನು ಕುಡಿಯುವ ಹೇತುವಿನಿಂದ ರೋಧಿಸಲಾರಂಭಿಸುತ್ತದೆ. ನಂತರ ಕರುಣಾಳುವಾದ ತಾಯಿಯು ಆ ಮಗುವಿನ ಇಚ್ಛೆಯನ್ನು ಪೂರ್ತಿ ಮಾಡುತ್ತಾಳೆ. ಆದರೆ ಇಷ್ಟರಿಂದಲೇ ಆ ಮಗುವಿನ ಇಚ್ಛೆಯು ಪೂರ್ತಿಯಾಗಲಾರದು. ದೂರದಲ್ಲಿ ಉಜ್ವಲವಾಗಿ ಪ್ರಕಾಶಿಸುತ್ತಿರುವ ದೀಪವನ್ನು ಕಂಡಾಕ್ಷಣ ಅದನ್ನು ಹಿಡಿಯ ಹೋಗಿ ಸುಟ್ಟುಕೊಳ್ಳುತ್ತದೆ. ಆಗ ಅದಕ್ಕೆ ಇದನ್ನು ಮುಟ್ಟಿದರೆ ತನಗೆ ಅಪಾಯವಾಗುತ್ತದೆ ಎನ್ನುವದು ಅನುಭವವಾಗುತ್ತದೆ. ಇನ್ನೊಮ್ಮೆ ಆ ದೀಪವನ್ನು ಮುಟ್ಟುವ ಸಾಹಸಕ್ಕೆ ಆ ಮಗುವು ಮನಸ್ಸು ಮಾಡುವದಿಲ್ಲಾ. ಇದೇ ಅನುಭವ! ಸ್ವಾನುಭವ!!

ಪ್ರತಿಯೊಬ್ಬನ ಜೀವನದಲ್ಲಿಯು ಇಂಥಹ ಅನೇಕ ಘಟನೆಗಳು ಘಟಿಸುತ್ತಿರುತ್ತವೆ. ಒಬ್ಬ ಸುವಿಚಾರಿಯು ಅವಿಚಾರಿಯ ಸಹವಾಸಕ್ಕೆ ಬಿದ್ದು ಅಪರಿಮಿತವಾದ ಹಾನಿಯನ್ನು ಹೊಂದಬಹುದು. ಇದರ ಪರಿಣಾಮ ಹಿಂದುಂಟಾದ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸುತ್ತಿರವಾಗ, ಅವನಿಗೆ ತನ್ನ ಪೂರ್ವ ಜೀವನದ ಸವಿನೆನಹುಗಳ ವಿಚಾರವು ಮಿಂಚಿನಾಕಾರವಾಗಿ ಮಿಂಚಿ ಮಾಯರಾಗುತ್ತದೆ. ಸಮಾಜದಲ್ಲಿಯ ಸುಜನರನ್ನು ಕಂಡು ತನ್ನ ನಡತೆಯ ಬಗ್ಗೆ ಹೇಸಿಕೆ ಪಟ್ಟುಕೊಳ್ಳಲು ಆರಂಭಿಸುತ್ತಾನೆ. ಆಗ ಆತನಿಗೆ ತಾನು ಈ ದುಷ್ಟನ ಸಹವಾಸಮಾಡಿದ್ದು ಸರ್ವಥಾ ತಪ್ಪೆಂದು ತಿಳಿಯುತ್ತದೆ. ಇದು ಅನುಭವ. ಆತನು ಇನ್ನೊಮ್ಮೆ ಇಂಥ ವ್ಯಕ್ತಿಗಳ ಸಹವಾಸವನ್ನು ಸರ್ವಥಾ ಮಾಡಲು ಪ್ರೇರೇಪಿತನಾಗಲಾರನು. ಕೆಟ್ಟವರ ಸಹವಾಸ, ದುಷ್ಟಚಟಗಳು ವಿಷದಂತೆ ಕೂಡಲೇ ಪ್ರಸಾರವಾಗುತ್ತವೆ. ಆದರೆ ಸಜ್ಜನರ ಸಹವಾಸ, ಒಳ್ಳೆಯ ಅಭ್ಯಾಸನಮ್ಮನ್ನು ಕೂಡಲೇ ಆಕರ್ಷಿಸಲಾರವು. ದುರ್ಜನರ ಸಹವಾಸವಾಗಿ ಸರ್ವನಾಶವಾದಾಗಲೇ, ಸಜ್ಜನರ ಒಡನಾಟವನ್ನು ಮಾಡಲು ಮನಸ್ಸು ಹಾತೊರೆಯುತ್ತದೆ. ಇದೇ ಸ್ವಾನುಭವವು; ಪ್ರತ್ಯಕ್ಷಾನುಭವವು.

ಆದರಕ್ಕೆ ಕಹಿ ಇದರಕ್ಕೆ ಸಿಹಿ ಎನ್ನುವಂತೆ ಮೊಟ್ಟಮೊದಲು ಸಜ್ಜನರ ವಚನಗಳು ನಮಗೆ ಸವಿಯಾಗಿ ಅನಿಸುವದಿಲ್ಲ; ಆದರೆ ಅದರಲ್ಲಿ ಅಡಕವಾಗಿರುವ ತತ್ವವನ್ನು ಯೋಗ್ಯರೀತಿಯಿಂದ ವಿಚಾರಿಸಿ ಚಂಚಲ ಮನಸ್ಸು ಅಪೇಕ್ಷಿಸುತ್ತಿಲ್ಲವಾದರೂ ಕೂಡಾ' ಬಲಾತ್ಕಾರವಾಗಿ ಕೊನೆಗೆ ಅಮೂಲ್ಯವಾದ ಲಾಭವನ್ನು ಪಡೆಯುತ್ತೇವೆ. ಕೊನೆಗೆ ಮಹಾವ್ಯಕ್ತಿಗಳಾಗಿ ಮೆರೆಯಲಾರಂಭಿಸುತ್ತೇವೆ. ಇದು ಅನುಭವದ ಒಂದು ಪ್ರಕಾರ.

ತಕ್ಕಮಟ್ಟಿಗೆ ವಿದ್ಯೆಯನ್ನು ಕಲಿತ ಒಬ್ಬ ಸಾಮಾನ್ಯ ವ್ಯಕ್ತಿಯು ಶ್ರೇಷ್ಟಸಾಹಿತಿಗಳ ಸಾಹಿತ್ಯವನ್ನು ಓದಿ ಆಕರ್ಷಿಸಲ್ಪಟ್ಟನೆಂದರೆ, ತಾನೂ ಒಬ್ಬ ಸಾಹಿತಿಯಾಗಬೇಕೆಂಬ ಬಲವಾದ ಅಪೇಕ್ಷೆಯನ್ನು ಪಡಬಹುದು. ಆದರೆ "**कर्तव्येणहि सिध्यंति कार्याणि न मनोरथैः**" ಎನ್ನುವಂತೆ ಬರಿಯ ಆಶೆಯನ್ನು ಮಾಡಿದ ಮಾತ್ರದಿಂದ ಕಾರ್ಯವು ಕೈಗೂಡಲಾರವು. ಸಾಹಿತ್ಯದ ಅಭ್ಯಾಸವನ್ನು ನಾನಾಮುಖಗಳಿಂದ ಮಾಡಬೇಕು. ಅಂದರೆ ಜೇಡಹುಳದಂತೆ, ಪ್ರಥಮದಲ್ಲಿ ಯಶಸ್ಸು ಸಿಗಲಿಲ್ಲವಾದರೂ ಶತಪ್ರಯತ್ನ ಮಾಡಬೇಕು. ಈ ರೀತಿಯ ಚಿಕ್ಕ ಚಿಕ್ಕ ಲೇಖನಗಳನ್ನು ಬರೆಯುತ್ತ, ಉತ್ಕೃಷ್ಟ ಹಾಗೂ ಅನುಕರಣೀಯವಾದಂಥ ಕಥೆ ಕಾದಂಬರಿಗಳನ್ನು ಓದುತ್ತ ಹೋದ ಹಾಗೆ ನಮ್ಮ ಅನುಭವವು ಬೆಳೆಯುತ್ತಾ ಹೋಗುತ್ತದೆ. ಕೊನೆಗ ನಮ್ಮ ಹಸ್ತದಿಂದ ಅನೇಕಾನೇಕ, ಜನರನ್ನು ಎಚ್ಚರಿಗೊಳಿಸುವಂಥ ಸಾಹಿತ್ಯರಚನೆಯಾಗಲೂ ಬಹುದು. ನಂತರ ನಾವೂ ಒಬ್ಬ ಭಾರತದ "ಅಂಬಿಕಾತನಯ ದತ್ತ"ರಾಗಬಹುದು. Practeece makes a man perfect ಎನ್ನುವಂತೆ ಪ್ರಯತ್ನವನ್ನು ಮಾಡುತ್ತಾ ಹೋಗಬೇಕು. ಅಂದರೆ ಅನುಭವವೂ ಕೂಡಾ ಬೆಳೆಯುತ್ತಾ ಹೋಗುತ್ತದೆ.

ಈ ಪ್ರಕಾರವಾಗಿ ಮಾನವನು ಜೀವನದಲ್ಲಿ ಅನೇಕಾನೇಕ ಸಂದರ್ಭಗಳನ್ನು ಅನುಭವಿಸಿ ಪರಿಪಕ್ವವಾಗುತ್ತಾನೆ. ತನ್ನ ಜೀವನವನ್ನು ಸುಖಮಯವನ್ನಾಗಿ ಮಾಡಿಕೊಳ್ಳುತ್ತಾನೆ. ಎರಡನೆಯವರಿಗೆ ಉಪಕಾರವನ್ನು ಮಾಡುತ್ತಾ ತನ್ನ ಉದ್ದೇಶವನ್ನು ಪೂರ್ತಿಗೊಳಿಸುತ್ತಾನೆ. ಇದೇ ಅನುಭವವು. ಅನುಭವಾಮೃತವು.

# ಸ್ತ್ರೀ-ಶಿಕ್ಷಣ ವಿಕಾಸ

**ಲೇಖಕ : ಶಾಂತಾ ನೆಂ. ಜೋಶಿ, ಗದಗ**

ಯಾಕುಂದೇಂದು ತುಷಾರ ಹಾರ ಧವಲಾ ಯಾ ಶುಭ್ರ ವಸ್ತ್ರಾವೃತಾ
ಯಾ ವೀಣಾ ವರದಂಡಮಂಡಿತ ಕರಾ ಯಾ ಶ್ವೇತ ಪದ್ಮಾಸನಾ ।
ಯಾ ಬ್ರಹ್ಮಾಚ್ಯುತ ಶಂಕರ ಪ್ರಭೃತಿಭಿರ್ದೇವೈ: ಸದಾವಂದಿತಾ
ಸಾ ಮಾಮ್ ಪಾತು ಸರಸ್ವತೀ ಭಗವತೀ ನಿಃಶೇಷಜಾಡ್ಯಾಪಹಾ ॥

ವಿದ್ಯೆಯ ಅಧಿದೇವತೆಯಾದ ದೇವಾದಿದೇವತೆಗಳಿಂದ ಸತತವು ಪೂಜಿಸಿಕೊಳ್ಳುತ್ತಲಿರುವ ಆ ವೀಣಾಧರೆ ಸರಸ್ವತಿ ದೇವಿ ಸ್ತ್ರೀಯಲ್ಲವೇ? ಅಂದ ಮೇಲೆ ಅವಳ ಪುತ್ರಿಯರು ಕೂಡ ಎಲ್ಲ ತರದ ಶಿಕ್ಷಣವನ್ನು ಕಲಿಯಲು ಅರ್ಹರಲ್ಲವೇ? "ತೊಟ್ಟಿಲ ತೂಗುವ ಕೈ ಜಗತ್ತನ್ನೆ ತೂಗಬಲ್ಲದು. ಸ್ತ್ರಿಯು ನಿಜವಾಗಿ ಅಬಲೆಯಲ್ಲ ಅವಳು ಪ್ರಬಲೆ ಕ್ಷಾತ್ರ ತೇಜಸ್ಸಿದೆ. ಜಗತ್ತನ್ನೆ ಆಳುವ ಸಾಮರ್ಥ್ಯ ಅವಳ ಕರದಲ್ಲಿದೆ. ಇದಕ್ಕೆ ನಿದರ್ಶನಗಳು ನಮಗೆ ಬೇಕಾದಷ್ಟು ಚಿತ್ರಪಟಗಳು ಸಹಿತ ವಿಷಯಗಳು ದೊರೆಯುತ್ತವೆ. ಸುಪ್ತದಲ್ಲಿ ಅಡಗಿದ ಅವರ ಕ್ಷಾತ್ರತೇಜಸ್ಸು, ವೀರವೃತ್ತಿ, ಸಮಾಜ, ದೇಶ, ರಾಷ್ಟ್ರದಲ್ಲಿ ತೋರಬೇಕಾದರೆ ಬೆಳೆಯುವ ಸಸಿಗೆ ಪೌಷ್ಟಿಕ ಆಹಾರ ದೊರೆವಂತೆ ವಿದ್ಯೆ ಶಿಕ್ಷಣವೆಂಬ ಸಮಗ್ರ ಆಹಾರವನ್ನು ಮಹಿಳೆಯರಿಗೆ ಪೂರೈಸಬೇಕು. ಅಂದರೆ ಅದರಿಂದ ಸಜೀವರಾಗಿ ತಮ್ಮ ಪ್ರಚಂಡ ಶಕ್ತಿಯಿಂದ ಜಗತ್ತನ್ನು ಮೆರೆಯಿಸಬಲ್ಲರು. ಅವರ ಶಿಕ್ಷಣ ಎಲ್ಲದರಲ್ಲಯೂ ನಿಮಿಷ ನಿಮಿಷಕ್ಕೆ ದಿನದಿನಕ್ಕೆ ವಿಕಾಸವಾಗುತ್ತ ಹೋದರೆ ಸಮಾಜದಲ್ಲಿ ಸುಸಿಕ್ಷಿತ ಮಹಿಳೆಯರ ಬಳಗ ಹೆಚ್ಚುವದು" ಮಹಿಳೆಯರ ಉದ್ಧಾರವೇ ಸಮಾಜದ ಉದ್ಧಾರ ಎಂಬ ಬಸವಣ್ಣನವರ ಉಕ್ತಿಯಂತೆ ಹೆಣ್ಣುಮಕ್ಕಳು ಕಲಿತು ಸುಸಿಕ್ಷಿತೆಯರಾದಲ್ಲಿ ಸಮಾಜವು ಕೂಡಾ ಸುಧಾರಿಸುವದು. ನಂತರ ದೇಶ ರಾಷ್ಟ್ರಗಳು ಕೂಡಾ ಮುಂದೆ ಬರುವವು. ಆದರೆ ಪುರುಷರು ತಮ್ಮ ಸಂಕುಚಿತ ಮನೋಭಾವನೆಯಿಂದ ಸ್ತ್ರೀಯರನ್ನು ಕೈಯೊಳಗಿನ ಸೂತ್ರದ ಗೊಂಬೆಯಂತೆ ಕುಣಿಸುತ್ತ ಅಡಿಗೆಮನೆಯ ಅಧಿಕಾರಿಯಂತೆ ನೋಡುತ್ತಿದ್ದರೆ ಅವರಿಗೆ ಬಾಹ್ಯ ಜಗತ್ತಿನ ಆಗುಹೋಗುಳ ಜ್ಞಾನ ಆಗುವದೆಂತು? ಸ್ತ್ರೀಯರಿಗೆ ಇತರ ಶಿಕ್ಷಣದ ಅವಶ್ಯಕತೆ ಇಲ್ಲ. ಕೇವಲ ಅವರಿಗೆ ಗೃಹಕೃತ್ಯಗಳಷ್ಟೆ ಬಂದರೆ ಮುಗಿಯಿತು ಎಂದು ಕೆಲವರ ತರ್ಕ. ಆದರೆ ಅಂಥವರ ಶುಷ್ಕ ತರ್ಕ ಸರ್ವಥಾ ತಪ್ಪೆಂದು ಖಂಡಿಸ ಬಹುದು. ರಥಸಾಗ ಬೇಕಾದರೆ ಅದಕ್ಕೆ ಪುರುಷ ಸ್ತ್ರೀ ಎಂಬ ಗಾಲಿಗಳು ಅಷ್ಟೇ ಶಕ್ತಿದಾಯಕವಾಗಿರಬೇಕು. ಅಂದಮೇಲೆ ಅವರಿಗೂ ಕೂಡಾ ಶಿಕ್ಷಣ ಕೊಡುವದೇ ಉಚಿತವೆನಿಸುವದು. ನಿತ್ಯದಲ್ಲಿ ಅವರಿಗೆ ಕೆಲವು ಶಿಕ್ಷಣ ಉಪಯೋಗ ಬೀಳದಿದ್ದರೂ ಪ್ರಸಂಗವಶಾತ ಒಮ್ಮೆ ಅವಶ್ಯವಾಗಿ ಬೇಕಾಗುತ್ತವೆ. ಸಮಾಜಕ್ಕೆ ದೇಶಕ್ಕೆ ರಾಷ್ಟ್ರಕ್ಕೆ ಬರುವ ಎಲ್ಲ ಗಂಡಾಂತರಗಳನ್ನು ಪುರುಷನೊಬ್ಬನೇ ಎದರಿಸಲಾರನು. ಆಗ ಸ್ತ್ರಿಯು ಕೂಡಾ ಅದರಲ್ಲಿ ಬಾಗವಹಿಸ ಬೇಕಾಗುತ್ತದೆ. ಗಾರ್ಗಿ ಮೈತ್ರೆಯರು ಆಧ್ಯಾತ್ಮದಲ್ಲಿ ಮಾರ್ಗದರ್ಶಿಗಳಾಗಿದ್ದರೆ. ಝಾಂಸಿ ಲಕ್ಷ್ಮೀಬಾಯಿ ಮಲ್ಲಮ್ಮ ಮೊದಲಾದ ವೀರಾಗ್ರಣಿಗಳು ರಣರಂಗದಲ್ಲಿ ರಣಚಂಡಿಗಳಂತೆ ಪುರುಷವೀರರನ್ನು ಹಿಮ್ಮೆಟ್ಟ ಹೋರಾಡಿದ್ದಾರೆ, ಪುಥಳಿಬಾಯಿ, ಭುವನೇಶ್ವರಿದೇವಿ ಮೊದಲಾದವರು ಜಗತ್ತಿಗೆ ಪೂಜ್ಯ ವ್ಯಕ್ತಿಗಳೆಂದು ಪ್ರಸಿದ್ಧಿ ಪಡೆದವರೂ ಸತ್ಕುಲಪ್ರಸೂತರಾಗಿರುವರು. ಅಂದಮೇಲೆ ಅಬಲೆಯರ ಪ್ರಭುತ್ವವು ಕಡಿಮೆಯಾಯಿತೇ ಪ್ರಾಚೀನ ಕಾಲದ ಆರ್ಯ ಸ್ತ್ರೀಯರನ್ನು ನೋಡಿದರೆ ಅವರು ಎಲ್ಲದರಲ್ಲಿಯೂ ಮುಂದುವರೆದವರಾಗಿದ್ದರು ಪುರುಷರಷ್ಟೇ ತಾವು ವೇದಾಧ್ಯಯನವನ್ನು ಅಭ್ಯಾಸ ಮಾಡುತ್ತಿದ್ದರು. ರಾಜಕೀಯ ಸಾಮಾಜಿಕ ಕಾರ್ಯಗಳಲ್ಲಿ ತಮ್ಮ ವಿಚಾರವನ್ನು ಸೂಚಿಸುತ್ತಲಿದ್ದರು. ಒಟ್ಟಾರೆ ಅವರು ತಮ್ಮ ಪತಿಗಳ ಸಂಗಡ ಎಲ್ಲಿ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದುದು ಕಂಡು ಬರುತ್ತದೆ. ಮನಸ್ಸಿನಿಂದ ವಿಚಾರ ಮಾಡಿನೋಡಿದರೆ ಜಗತ್ತಿನ ಆಧಾರವೇ ಸ್ತ್ರೀ ಎಂದು ಹೇಳಬಹುದು. ಅವರು ಸುಸಿಕ್ಷಿತೆಯ

ರಾದಲ್ಲಿ ಅವರಿಂದ ಜನಿಸುವ ಮಕ್ಕಳಾದರೂ ಚಿಕ್ಕಂದಿನಿಂದಲೇ ಉತ್ತಮಗುಣಗಳ ಖಣಿಗಳಾಗುವರು. ಜೀಜಾಬಾಯಿ ಮೊದಲಾದ ವೀರವನಿತೆಯರು ತಮ್ಮ ಚಿಕ್ಕಮಕ್ಕಳಿಗೆ ಒಳ್ಳೊಳ್ಳೆ ವೀರವೃತ್ತಿಯ ಕಥೆಗಳನ್ನು ಹೇಳಿ ಮಕ್ಕಳಲ್ಲಿ ವೀರಬುದ್ಧಿ ಧೈರ್ಯಗಳನ್ನು ತುಂಬುತ್ತಿದ್ದರು. ಅಂತಲೆ ಶಿವಾಜಿ ಚಿಕ್ಕಂದಿನಲ್ಲಿಯೂ ತಾಯಿಯ ಪಾಠದಿಂದ ಧೈರ್ಯಶಾಲಿಯಾಗಿ ವೀರತನದಿಂದ "ಶಿವಾಜಿ ಛತ್ರಪತಿ ಎಂಬ ಬಿರುದನ್ನು ಪಡೆದನು. ಇಂದಿನ ತಾಯಿಯಿಂದ ಪಾಲನೆ ಹೊಂದುವ ಬಾಲಕರೇ ನಾಳಿನ ರಾಷ್ಟ್ರಪಥದಲ್ಲಿ ಮುನ್ನುಗ್ಗುವ ಉತ್ತಮ ನಾಗರಿಕರಾಗುವರು" ಕುಪುತ್ರೋ ಜಾಯತ್ ಕ್ವಚಿದ್ ಅಪಿ ಕುಮಾತಾನ ಭವತಿ " ಕೆಟ್ಟ ಮಕ್ಕಳು ಜನಿಸಬಹುದು. ಆದರೆ ಜನನಿ ಕೆಟ್ಟವಳಿರಲು ಸಾಧ್ಯವಿಲ್ಲ. ಮಕ್ಕಳು ಎಷ್ಟೇ ದುರ್ಗುಣಿಗಳಿದ್ದರೂ ಕೂಡಾ ಅವರನ್ನು ನಾಗರಿಕರನ್ನಾಗಿ ಮಾಡುವ ಭಾರ ಸ್ತ್ರೀಯರ ಮೇಲೆ ಇದೆ. ಅಂದ ಮೇಲೆ ಅವರಿಗೆ ಬಾಹ್ಯ ಜಗತ್ತಿನ ಶಿಕ್ಷಣದ ಜ್ಞಾನ ಆಗಲೇಬೇಕು. ಎಲ್ಲಿದರಲ್ಲಿಯೂ ಅವರಿಗೆ ಸ್ಥಾನಮಾನಗಳನ್ನು ಕೊಡಬೇಕು. ಸಂಸ್ಕೃತ, ಸಾಹಿತ್ಯ, ಇತಿಹಾಸ ಮೊದಲಾದವಿಷಯಗಳ ಜ್ಞಾನಮಾಡಿಕೊಳ್ಳುವದು ಅತ್ಯವಶ್ಯವು. ಅಂದರೆ ಅವಳು ತನ್ನ ಗೃಹಕೃತ್ಯಗಳನ್ನು ಬಿಡಬೇಕೆಂಬ ಅರ್ಥವಲ್ಲ ಅದರೊಂದಿಗೆ ಇತರ ವಿಷಯಗಳನ್ನು ಗೃಹಿಸಿಕೊಳ್ಳಬೇಕು. ಶಿಸ್ತು, ಶಾಂತಿ, ಸೌಹಾರ್ದ ಸದ್ಗುಣಗಳ ಪಾಠ ಕೊಡಬೇಕು. ಸ್ತ್ರೀಯರು ಸ್ವಭಾವತಃ ಸಹನಶೀಲಮೂರ್ತಿಗಳು. ಕಾರಣ ಅವರು ಎಂತಹ ಕಷ್ಟಗಳು ಬಂದರೂ ಕೂಡ ಅದರಿಂದ ಪಾರಾಗುವ ಶಕ್ತಿ ಅವರಲ್ಲಿ ಸುಪ್ತದಲ್ಲಿ ಅಡಗಿರುತ್ತದೆ.

ಮಹಿಳೆಯರ ಶಿಕ್ಷಣ ವಿಕಾಸವು ಹೆಚ್ಚಾದಂತೆ ತಮ್ಮ ಶೀಲ' ಚಾರಿತ್ರಗಳಬಗ್ಗೆ ಅವರಿಗೆ ಸಾಕಷ್ಟು ಲಕ್ಷ್ಯವಿರಬೇಕು. ಶಿಕ್ಷಣದಲ್ಲಿ ಹೆಚ್ಚೆಚ್ಚು ಪ್ರಗತಿಹೊಂದಿದರೂ ಕೂಡ ಶೀಲ. ನೀತಿಗಳನ್ನು ಉಳಿಸಿಕೊಳ್ಳುವದೇ ಅವರ ಶಿಕ್ಷಣ ವಿಕಾಸಕ್ಕೆ ಶೋಭೆ. ಯಾವದೇ ಸಮಾಜ, ರಾಷ್ಟ್ರ, ರಾಜ್ಯಗಳು ಸದ್ವಿಚಾರದಿಂದ ಬಾಳಿ ಬೆಳಗಬೇಕಾದರೆ ಅದಕ್ಕೆ ಮೂಲ ಕಾರಣ ಸ್ತ್ರೀ ಎಂದು ಹೇಳಬಹುದು. " ಶೀಲಂ ಸರ್ವತ್ರಸಾಧನಂ " ಎಂಬಂತೆ ಮಹಿಳೆಯರಿಗೆ ಶೀಲವು ಮುಕುಟವಿದ್ದಂತೆ. ಎಷ್ಟೇ ಗಂಡಾಂತರಗಳು ಬಂದರೂ ಕೂಡಾ ತಮ್ಮ ಶೀಲದ ಕಡೆಗೆ ಹೆಚ್ಚು ಮಹತ್ವಕೊಟ್ಟು ಪ್ರಾಣಕ್ಕೆ ಪಣಹಚ್ಚಿ ಅದನ್ನು ಗೆಲ್ಲಬೇಕು. ಗತಕಾಲದ ವೀರ ಸ್ತ್ರೀಯರ ಎಂಥಾಥ ದುರ್ಧರ ಪ್ರಸಂಗಗಳಲ್ಲಿಯೂ ಕೂಡಾ ತಮ್ಮ ಶೀಲವನ್ನು ತ್ಯಜಿಸಲಿರುವ, ಹಾಗೂ ಅದಕ್ಕಾಗಿ ಪ್ರಾಣಗಳನ್ನರ್ಪಿಸಿರುವ ಪ್ರಸಂಗಗಳನ್ನು ಓದಿದರೆ ಮೈಮೇಲೆ ರೋಮಾಂಚನಗಳೇಳುವವು. ಸ್ತ್ರೀ ನಡತೆ, ನೀತಿಯಲ್ಲಿ ಕುಂಠಿತಳಾದರೆ ಇಡೀ ರಾಷ್ಟ್ರವೇ ಹಾಳಾಗುವ ಪ್ರಸಂಗ ಬರುವದು. ಕಾರಣ ನಾರಿಯರು ಗತಕಾಲದ ಸೀತೆ, ದ್ರೌಪದಿ, ತಾರೆಯರಂತೆ ಆಗಬೇಕು. ಅವರು ನೀತಿ, ನಡತೆಗಳ ಬಗ್ಗೆ ಲಕ್ಷಗೊಡಬೇಕು ಎಂದು ಕೆಲವರು ಹೇಳುವರು. ಇದು ಸರಿ; ಆದರೆ ಪುರುಷರಿಗೆ ಮಾತ್ರ ಯಾವ ಶೀಲ, ನೀತಿ, ಕಟ್ಟಳೆಗಳು ಇಲ್ಲವೇನು? ಸ್ತ್ರೀಯರ ಶೀಲದ ಕಡೆಗೆ ಲಕ್ಷಗೊಡುವ ಪುರುಷವರ್ಗವು ಮೊದಲು ತನ್ನನ್ನು ತಾವೇ ಸುಧಾರಿಸಿಕೊಳ್ಳಬೇಕು. ತದನಂತರ ಪರರ ವಿಚಾರಮಾಡಬೇಕು. ಪುರುಷರು ಮೊದಲು ರಾಮ, ಧರ್ಮರಾಜರಂತೆ ಆದರೆ ಜೀವನ ರಥವು ಪ್ರಗತಿಪಥದಲ್ಲಿ ಕ್ರಮಿಸುವದು. ಸಮಾಜ ಭದ್ರತೆಗಾಗಿ ಸ್ತ್ರೀಯರು ನೀತಿಯನ್ನು ಆಧಾರವಾಗಿಟ್ಟುಕೊಂಡರೆ, ಸಮಾಜ ರಕ್ಷಣೆಯ ಭಾರನನ್ನು ಪುರುಷರು ಮರೆಯಬಾರದು. ನಿಸರ್ಗದ ಬಾಧೆಯನ್ನು ತಡೆಯಲು ಶರೀರಕ್ಕೆ ಚರ್ಮದ ರಕ್ಷಾಕವಚವು ಹೇಗೆ ಇರುವದೋ ಅದೇ ಪ್ರಕಾರ ಪುರುಷನ ನೀತಿ, ಶೀಲ, ಚಾರಿತ್ರ್ಯಗಳು ಸ್ತ್ರೀ ನೀತಿ, ಚಾರಿತ್ರ್ಯಗಳ ರಕ್ಷಾಕವಚವಾಗಬೇಕು. ಅಂದರೆ ಸ್ತ್ರೀ-ಪುರುಷರು ನಾಣ್ಯ'ದ ಎರಡು ಮುಖಗಳಂತೆ ಪರಸ್ಪರ ಪೋಷಕರಾಗಬೇಕು. ಪರಸ್ಪರ ನೀತಿಶೀಲಗಳ ಬಗ್ಗೆ ಇಬ್ಬರೂ ಗಮನ ಕೊಟ್ಟಾಗ ಮಾತ್ರ ಸಮಾಜ ಮುಂದಿನ ಮಾರ್ಗ ಅನುಕ್ರಮಣ ಮಾಡಬಲ್ಲದು. ಸಮಾಜ ರಾಷ್ಟ್ರಕ್ಕೆ ಸ್ತ್ರೀಯರ ಶೀಲವೇ ಮುಖ್ಯ ಕಾರಣವೆನ್ನುವ ಮಾತು ಸಟಿಯಾದುದು. ಆದರೆ ಪುರುಷ ವರ್ಗವೆಲ್ಲ ದುರ್ಯೋಧನ, ರಾವಣರಾದರೆ ಅವರ ಚಾರಿತ್ರ್ಯ ಉಳಿಯುವದೆಂತು? ಪುರುಷರು ಕೂಡಾ ಸಹೋದರ ಭಾವನೆಯಿಂದ ಹೆಣ್ಣುಮಕ್ಕಳಿಗೆ ಶಿಕ್ಷಣದ ವಿಕಾಸಕ್ಕಾಗಿ ಪ್ರೋತ್ಸಾಹನ ಕೊಡುತ್ತಲಿರಲೇಕು. ಅವರ ಶಿಕ್ಷಣ ವಿಕಾಸಕ್ಕಾಗಿ ಶಿಕ್ಷಣ ತರಬೇತಿಯನ್ನು ಏರ್ಪಡಿಸಬೇಕು.

ಸ್ತ್ರೀಯರಿಗೆ ಗೃಹೋದ್ಯೋಗಗಳೊಂದಿಗೆ ಬಾಹ್ಯ ಶಿಕ್ಷಣದ ಹೆಚ್ಚಳವು ಆದಂತೆ ಅವರಿಗೆ ಸಮಾಜದಲ್ಲಿ ಸ್ಥಾನಮಾನಗಳನ್ನು ಕೊಡಬೇಕು. ಸಮಾಜದ ಹಿತವೇ ತಮ್ಮದೆಂದು ತಿಳಿದು ಸಾಮಾಜಿಕ, ರಾಜಕೀಯ ಮೊದಲಾದ ಕಾರ್ಯಗಳನ್ನು ಮನಮುಟ್ಟಿ ಕೆಲಸಮಾಡಲು ಸ್ತ್ರೀಯರು ಉದಾರ ಮನಸ್ಸಿನಿಂದ ಮುಂದೆ ಬರಬೇಕು. ಅಂದರೆ ಅವರಲ್ಲಿರುವ ಸಂಕುಚಿತ ಮನೋವೃತ್ತಿ ತಪ್ಪು ಭಾವನೆಗಳು ಅಡಗಿ, ಸಾಂಘಿಕ ಜೀವನದಿಂದ ಮನಸ್ಸು, ಬುದ್ಧಿ ಉತ್ಕೃಷ್ಟವಾಗಿ ಬೆಳೆಯುವವು. ಆಗ

ಮಾತ್ರ ಅವರಿಗೆ ಸಾಹಿತ್ಯ, ಸಂಗೀತ, ಇತಿಹಾಸ, ಕಲೆ ಯಾವದೇ ವಿಷಯಗಳ ತರಬೇತಿ ಕೊಟ್ಟದ್ದಾದರೆ ಅದನ್ನು ಉತ್ತಮ ರೀತಿಯಿಂದ ವಿಕಾಸಮಾಡಿಕೊಳ್ಳುವರು. ನಿಜವಾಗಿ ನೋಡಿದರೆ ಭಾರತೀಯ ಸ್ತ್ರೀಯರು ಜನ್ಮತಃ ಬುದ್ಧಿಶಾಲಿಗಳು. ಮೇಲಾಗಿ ಅವರಿಗೆ ಶಿಕ್ಷಣ ತರಬೇತಿ ಕೊಟ್ಟರೆ, ಅವರ ಸುಧಾರಣೆ ತೀವ್ರಗತಿಯಿಂದ ಸಾಗಿ ಸಮಾಜ ಮುಂದುವರೆಯುವದು. ಹೀಗೆ ಅವರು ನಾಲ್ಕು ಜನರಲ್ಲಿ ಸರಿಬೆರಕೆಯಾಗಬೇಕಾದರೆ ಅವರಿಗೆ ಸ್ವಾತಂತ್ರ ಕೊಡುವದು ಮುಖ್ಯವಾದದ್ದು. 'ನ ಚ ಸ್ತ್ರೀ ಸ್ವಾತಂತ್ರಂ ನಃ ಅರ್ಹತಿ' ಎಂದು ಕೆಲವರು ಹೇಳುವರು. ಆದರೆ ಅವರಿಗೆ ಕೊಡುವ ಸ್ವಾತಂತ್ರವು ವೈಶ್ಯಾವೃತ್ತಿಯ ಸ್ವೇಚ್ಛಾ ಸ್ವಾತಂತ್ರವಲ್ಲ. ಸಮಾಜದ ಯಾವದೇ ಚಟುವಟಿಕೆಯಲ್ಲಿ ಭಾಗವಹಿಸಲು ಬರುವ ಸ್ವಾತಂತ್ರ ಕೊಡಬೇಕು. ಕೆಲವೆಡೆ ನೋಡಲಾಗಿ ಎಷ್ಟೋ ಸ್ತ್ರೀಯರು ಪಂಜರದ ಗಿಳಿಯಂತೆ ಸದಾ ಅಡಿಗೆಯಮನೆಯ ಸೆರೆಯಾಳಿನಂತೆ ಯಾದರೆ ಅವರಿಗೆ ಬಾಹ್ಯ ವಾತಾವರಣದ ಜ್ಞಾನ ಆಗುವದೆಂತು ? ಮೇಲಾಗಿ ಕೆಲವರಿಗೆ ನಮ್ಮ ಭಾರತಕ್ಕೆ ಸ್ವತಂತ್ರ ಸಿಕ್ಕ ಸುದಿನವೂ ಕೂಡಾ ಗೊತ್ತಿರುವದಿಲ್ಲ. ಇದನ್ನು ನೋಡಿದಾಗ ಸ್ತ್ರೀವರ್ಗಕ್ಕೆ ಹೀನಾಸ್ಪದವೂ, ಜ್ಞಾನದ ಬಗ್ಗೆ ಇರುವ ಅಲ್ಪ ತಿಳುವಳಿಕೆಗೆ ಅಪಾರ ನೇದನೆಯಾಗುತ್ತದೆ. ಇದಕ್ಕೆಲ್ಲ ಕಾರಣ ತಿಳಿಯದ ಆ ಸ್ತ್ರೀಯರ ತಪ್ಪಲ್ಲ. ಅವರನ್ನು ಹೊರಗಿನ ಜಗತ್ತಿನೊಡನೆ ಸಂಬಂಧ ಬೆಳೆಯಿಸದಂತೆ ಅಡಗೀಮನೆಯಲ್ಲಿ ಅಡಗಿಸಿರುವ ಅವರ ಪಾಲಕರ ತಪ್ಪೆನ್ನಬಹುದು. ಕಾರಣ ಸುಜ್ಞರಾದ ಪಾಲಕರು ತಮ್ಮ ಮಕ್ಕಳು ಸುಶೀಲವಂತರಾಗಿ, ಶಿಕ್ಷಣ ವಿಕಾಸಮಾಡಿಕೊಂಡು, ಸಮಾಜ, ರಾಷ್ಟ್ರದಲ್ಲಿ ಹೊಂದಿಕೊಂಡು, ಸತಿ ಪುತ್ರರಿಗೆ ಜನನಿ ಎಂದು ಹೆಸರು ಪಡೆಯಬೇಕಾದರೆ ಅವರಿಗೆ ಸ್ವಾತಂತ್ರ್ಯವನ್ನು ಕೊಡಬೇಕು.

ಹೀಗೆ ಸ್ತ್ರೀಯರಿಗೆ ಎಲ್ಲ ರೀತಿಯಿಂದಲೂ ಎಲ್ಲ ವಿಷಯಗಳ ಬಗ್ಗೆ ಶಿಕ್ಷಣ ತರಬೇತಿಯನ್ನು ಸರಕಾರದವರು ಒಳ್ಳೆ ಸುಜ್ಞರಿಂದ ಕೊಡಿಸುತ್ತ ಹೋದರೆ ನಮ್ಮ ಭಾರತ ಮಹಿಳೆಯರು ಕೂಡಾ ತಮ್ಮ ಅಜ್ಞಾನ ತಿಮಿರವನ್ನು ಕಳೆದುಕೊಂಡು ಜ್ಞಾನವೆಂಬ ಪ್ರಕಾಶದಿಂದ ಬೆಳಗಿ ತಮ್ಮ ಸಮಾಜಕ್ಕೆ, ದೇಶಕ್ಕೆ ಸಲ್ಲಿಸಬೇಕೆಂಬ ತಮ್ಮ ಉದಾತ್ತ ಧ್ಯೇಯವೆಂಬ ಬತ್ತಿಯನ್ನೆ ಹೃದಯದ ಅಂತಃಕರುಣ ರಕ್ತವೆಂಬ ತೈಲದಲ್ಲಿ ಭಾರತಾಂಬೆಗೆ ನಂದಾದೀಪವನ್ನು ಹಚ್ಚುವರು. ತದನಂತರ ಪುರಾತನ ಕಾಲದಿಂದಲೂ ವಿದ್ಯೆಯ, ಜ್ಞಾನಾರ್ಜನೆಯ ತವರೂರು ಎಂದು ಪ್ರಸಿದ್ಧಿ ಪಡೆದ ಈ ಭಾರತ ಅಸಂಖ್ಯ ಹಿಂದೂ ಸ್ತ್ರೀ-ಪುರುಷರ ಜ್ಞಾನದಿಂದ ಬೆಳೆದು ದೆಸೆದಿಸೆಗೂ ಅದರ ಫಲವನ್ನು ಕೊಡುವಂತಾಗುವದರಲ್ಲಿ ಯಾವ ಸಂದೇಹವೂ ಇಲ್ಲ ಎಂದು ಧಾರಾಳವಾಗಿ ಹೇಳಬಹುದು.

---

# ತಾವರೆ ಹೂವು

ಹಿಗ್ಗುವಿ ಏತಕೆ ಪರಿಮಳ ಹೂವೆ ।
ಕಡಗೀ ರೂಪಕೆ ಗತಿ ಮಣ್ಣೆ ॥ ಪಲ್ಲ ॥
ಸ್ವಾರ್ಥವ ತ್ಯಜಿಸಿ ।
ಪರಹಿತ ಬಯಸಿ ।
ದೇಹವ ಬೆಳಸಿದ ತಾವರೆ ಹೂವೆ ॥ ೧ ॥
ನಿನ್ನೀ ಅಂದವು ಚಿನ್ನದ ಚಂದವು ।
ಜನರನು ಜಯಿಸದೆ ।
ಊರನು ಬಯಸದೆ ।
ಕಾಡೊಳು ಬೆಳೆದಾತಾವರೆ ಗಿಡವೇ ॥ ೨ ॥

ಜನರೊಳು ಸೇರಿದ ।
ಪರಿಮಳ ಹೂವ್ಗಳು ।
ಹಿಗ್ಗುತ ಮೆರೆದು ।
ಕುಗ್ಗುತ ಸೇರ್ವವು ಸೆರೆಯನ್ನು ॥ ೩ ॥
ತಮ್ಮಯ ಆತ್ಮವ ಹೊಗಳುತಲಿರುವ ।
ಹೂವುಗಳ ಮುಡಿಯನು ದೇವಾತ್ಮ ॥ ೪ ॥
ಅಂತೆಯೆ ಸೇರ್ವವು ತಾವರೆ ಹೂವು ।
ಈಶ ಪಾದಪದ್ಮ ॥ ೫ ॥

ಲೇ:—ಆರ್. ಸೀ. ಪಾಟೀಲ, ಅಸುಂಡಿ.



## ಮೂರನೆಯ ಅಂಕು (ಐತಿಹಾಸಿಕ ನಾಟಕವು)

ಬರೆದವರು : ರತ್ನಾಶಾಸ್ತ್ರಿ

[ ಎಪ್ರಿಲ ತಿಂಗಳ ಸಂಚಿಕೆಯಿಂದ ಮುಂದುವರೆದದ್ದು. ]

ಕೃಷ್ಣಾಜಿಪಂತ—ದ್ರೋಹ....! ದ್ರೋಹ! ಬನ್ಯಾಬಾಪು, ನಾವು ಯಾರಿಗೆ ದ್ರೋಹವನ್ನು ಬಗೆಯುತ್ತಿದ್ದೇವೆಂದು ನಿಮ್ಮ ಅಭಿಪ್ರಾಯ ?

ಬನ್ಯಾಬಾಪು— ಹಿಂದೂಧರ್ಮ-ಸಂಸ್ಕೃತಿಗೆ, ಭಾರತ ಮತ್ತು ನರಗುಂದದ ಅಧಿಪತಿಗಳಿಗೆ—

ಕೃಷ್ಣಾಜಿಪಂತ—(ವಿಕಟ ಹಾಸ್ಯ) ಭಾರತಮಾತೆಗೆ, ನರಗುಂದದ ಅಧಿಪತಿಗಳಿಗೆ! ಬನ್ಯಾಬಾಪು, ನರಗುಂದದ ಅಧಿಪತಿಗಳ ಆಯುಷ್ಯ ಮುಗಿಯುತ್ತ ಬಂದಿರುವದು. ಆಯುಷ್ಯದ ಕೊನೆಯ ಕ್ಷಣಗಳನ್ನು ಒಂದೊಂದಾಗಿ ಅವರು ಎಣಿಸುತ್ತಿರಬೇಕು.

ಬನ್ಯಾಬಾಪು—ಸೇಡಿನ ಭರದಲ್ಲಿ ನೀವು ಇಷ್ಟೊಂದು ಹೇಸಿತನಕ್ಕೆ ಹೋಗಿ ಮುಟ್ಟಬಹುದೆಂದು ನನಗೆ ಅನಿಸಿರಲಿಲ್ಲ. ಕೃಷ್ಣಾಜಿಪಂತ, ನಿಮ್ಮ ಮಗನೆಂದಿಗೂ ನರಗುಂದದ ಗದ್ದುಗೆಯ ಮೇಲೆ ನಾನಿರುವ ವರೆಗೆ ಕುಳಿತುಕೊಳ್ಳಲಾರ.

ಕೃಷ್ಣಾಜಿಪಂತ—ಇನ್ನು ಮೇಲೆ ನಿಮಗೆ ಏನು ಅನಿಸಿದರೂ ಪ್ರಯೋಜನವಿಲ್ಲ. ಹಲ್ಲಲ್ಲಿ ನಾಲಿಗೆಯನ್ನಿರಿಸಿ ಸುಮ್ಮನೆ ಕುಳಿತುಕೊಳ್ಳಿರಿ ಇಲ್ಲದಿದ್ದರೆ........

ಬನ್ಯಾಬಾಪು—ನಿಮ್ಮ ಅಂತರಂಗ ಈಗ ಬಹಿರಂಗಕ್ಕಿಳಿಯಿತು. ನರಗುಂದದ ದೊರೆಗಳಲ್ಲಿ ಕೈಯ್ಯಾಳೆಂದು ಇದ್ದರೂ ಸರಿಯೆ-ಆದರೆ ನಿಮ್ಮ ರಾಜ್ಯದಲ್ಲಿ ರಾಜಪದವಿಯೂ ನನಗೆ ಬೇಡವಾಗಿರುವದು ! ಕೃಷ್ಣಾಜಿಪಂತ, ಬಲಾತ್ಕಾರದ ಹೊಟ್ಟೆಯುಳ್ಳಿಂದ ಮೋಸತನವೆ ಜನ್ಮಕ್ಕೆ ಬರುವದು.

ಕೃಷ್ಣಾಜಿಪಂತ— ( ಖಡ್ಗಕ್ಕೆ ಕೈಯಿಕ್ಕಿ ) ಚುಪ್ ! ( ಸುತ್ತಲು ನೋಡಿ ) ಯಾರೋ ಬಂದಂತೆ ತೋರುವದು. ಇಲ್ಲಿಂದ ಹೋಗೋಣ ನಡೆಯಿರಿ. (ಹೋಗುವರು)

( ಬೀದಿಯ ದೃಶ್ಯ ಮಾಲಕಮ್ ಮತ್ತು ಕ್ಯಾಪ್ಟನ್ ಪ್ರವೇಶಿಸುವರು.

ಮಾಲಕಮ್—ಕ್ಯಾಪ್ಟನ್

ಕ್ಯಾಪ್ಟನ್—ಯಸ್ ಸರ್ ! ಬಟ್ ಸರ್....!

ಮಾಲಕಮ್—ಇಫ್ ಯು ಆಸ್ಕಮಿ ಇಟ್ ಇಜ್ ಅವರ್ ಗ್ರೇಟ್ ಇನ್ ಸಲ್ಟ ! ( If you ask me itis our great insult ! )

ಕ್ಯಾಪ್ಟನ್—ಯಸ್ ಸರ್ ! ಬಟ್ ಸರ್....!

ಮಾಲಕಮ್—ವಾಟ್ ( What ? )

ಕ್ಯಾಪ್ಟನ್—ನಥಿಂಗ್ ಸರ್ ! ಬಟ್ ಸರ್

ಮಾಲಕಮ್—ಜನರತ್ತ ನೋಡಿ ಕ್ಯಾಪ್ಟನ್ನನ ಕಡೆಗೆ ನೋಡುವನು. )

ಕ್ಯಾಪ್ಟನ್—ಸಾರೀ ಸರ್

ಮಾಲಕಮ್—ಡೋಂಟ್ ಬಿ ಸೋರೀ ಕ್ಯಾಪ್ಟನ್ ! ( ದುರ್ಬೀನಿನಲ್ಲಿಂದ ) ನರಗುಂದದ ಕೋಟೆಯ ಕಡೆಗೆ ನೋಡುತ್ತ....

ಕ್ಯಾಪ್ಟನ್—ಯಸ್ ಸರ್ ! ಬಟ್ ಸರ್ !

ಮಾಲಕಮ್—( ಕ್ಯಾಪ್ಟನ್ನನ್ನು ನೋಡುವನು. )

ಕ್ಯಾಪ್ಟನ್—ಸಾರೀ ಸರ್!

ಮಾಲಕಮ್—ನರಗುಂದದ ಬಾಬಾಸಾಹೇಬ ಇದೇ ಕೋಟೆಯಲಿ ರಾಜ್ಯವಾಳುವನಲ್ಲವೆ?

ಕ್ಯಾಪ್ಟನ್—ಯಸ್ ಸರ್ !

ಮಾಲಕಮ್— ( ದುರ್ಬೀನಿನಲ್ಲಿಂದ ನೋಡುತ್ತ ) ಗುಡ್ ! ವ್ಹೇರಿಗುಡ್ ! ಬ್ಯೂಟಿಫುಲ್ ಫೋರ್ಟ ! ಭಾರತದ ರಾಜರು ಜಾಣರು ! ಚಾಣಾಕ್ಷರು ! ಧೀರರು ! ಶೂರರು ! ಆದರೆ ದ್ವೇಷ, ಮತ್ಸರ ಮಾಡುವದರಲ್ಲಿ ಹಾಳಾದರು. ರಾಮು

ದುರ್ಗದ ರಾಮರಾಯ ನರಗುಂದದ ಬಾಬಾಸಾಹೇಬನ ಬ್ರದರ್! ನಮಗೆ ಸಹಾಯವನ್ನು ಮಾಡುತ್ತಿದ್ದಾನೆ! ತಮ್ಮ ಹಾಳಾದರೆ ಅವನಿಗೆ ಆನಂದ....! ಬಟ್....ಕ್ಯಾಪ್ಟನ್....!

ಕ್ಯಾಪ್ಟನ್—ಯಸ್ ಸರ್! ಬಟ್ ಸರ್!

ಮಾಲಕಮ್—(ದುರ್ಬೀನಿನಲ್ಲಿಂದ ನೋಡುತ್ತ) ಈ ಕೋಟೆಯನ್ನು ನೀನು ನೋಡಿರುವಿಯಲ್ಲವೆ?

ಕ್ಯಾಪ್ಟನ್—ಯಸ್ ಸರ್!

ಮಾಲಕಮ್—ರೆಸಿಡೆಂಟ್ ಮೆನ್‌ಸನ್ನನ ಸಂಗಡ ನೋಡಿರಬಹುದು.

ಕ್ಯಾಪ್ಟನ್—ಯಸ್ ಸರ್!

ಮಾಲಕಮ್—ವ್ಹೇರಿಗುಡ್! ಅಂದ ಮೇಲೆ ಈ ಕೋಟೆಯ ಮೇಲೆ ನಿನ್ನ ಪರಿಚಯ ಹೆನ್ ಯಾರಾದರೂ ಇರಬಹುದು.

ಕ್ಯಾಪ್ಟನ್—ಯಸ್ ಸರ್! ಬಟ್ ಸರ್! (ತೋಫಿನ ಸದ್ದು)

ಮಾಲಕಮ್—ಹಾಗೆಯೆ ಈ ಕೋಟೆಯನ್ನು ಎಷ್ಟು ದಿನ ಮುತ್ತುವದು. ಮುತ್ತಿಗೆಯಿಂದ ಏನೂ ನಿಷ್ಪನ್ನವಾಗುವ ಲಕ್ಷಣ ತೋರುವದಿಲ್ಲ!

ಕ್ಯಾಪ್ಟನ್—ಯಸ್ ಸರ್....

ಮಾಲಕಮ್—ಕ್ಯಾಪ್ಟನ್, ಆದಷ್ಟು ಬೇಗ ಕೋಟೆಯನ್ನು ವಶಪಡಿಸಿಕೊಳ್ಳಬೇಕು.

ಕ್ಯಾಪ್ಟನ್—ಯಸ್ ಸರ್! ಬಟ್ ಸರ್ ಇಟ್ ಇಜ್ ವ್ಹೇರಿ ಡಿಫಿಕಲ್ಟ್‌ಟಾಸ್ಕ....!

ಮಾಲಕಮ್—ಯಸ್ ಯೆಸ್....! ಆಯ್ ನೊ ದೆಟ್! ಆಯ್ ಕ್ಯಾನ್ ಅಂಡರ್‌ಸ್ಟಾಂಡ ಯುವರ್ ಡಿಫಿಕಲ್ಟೀಜ್ ಕ್ಯಾಪ್ಟನ್! ಬಟ್ ಕ್ಯಾಪ್ಟನ್....

ಕ್ಯಾಪ್ಟನ್—ಯಸ್ ಸರ್....

ಮಾಲಕಮ್—ನರಗುಂದದ ಬಾಬಾಸಾಹೇಬನ ಜೊತೆಯಲ್ಲಿ ಯುದ್ಧವನ್ನು ಮಾಡುತ್ತಿದ್ದೇವೆಂಬುದನ್ನು ಮರೆಯಬೇಡಿರಿ! ಯುಕ್ತಿಯಿಂದ ಯುದ್ಧ ಮಾಡಬೇಕು! ಶಕ್ತಿಯಿಂದಲ್ಲ! ಯು ಅಂಡರ್ ಸ್ಟಂಡ್ ಧಿಸ್....?

ಕ್ಯಾಪ್ಟನ್—ಯಸ್ ಸರ್!

ಮಾಲಕಮ್—ಅಂಡ್ ಕ್ಯಾಪ್ಟನ್....ಇವರ ಜನರನ್ನು ಇವರ ಜೊತೆಯಲ್ಲಿ ಯುದ್ಧಕ್ಕೆ ನಿಲ್ಲಿಸಬೇಕು! ಆವರಿಗೆ we must help them....! ಅಂದರೆ ನಾವು ಈ ಕೋಟೆಯನ್ನು ಗೆಲ್ಲುವದಕ್ಕೆ ಸಾಧ್ಯವಿದೆ!

ಕ್ಯಾಪ್ಟನ್—ಆಯ್ ಅಂಡರ್ ಸ್ಟ್ಯಾಂಡ್ ಸರ್....! ಹಾಗೆ ಪ್ರಯತ್ನ ನಡಿಸಿದ್ದೇನೆ.

ಮಾಲಕಮ್—ಕ್ಯಾಪ್ಟನ್, ಇವರಲ್ಲಿ ಒಡಕು ಹುಟ್ಟಿಸಬೇಕು; ಜಗಳ ಹಚ್ಚಬೇಕು; ದುಡ್ಡಿನ ಆಶೆ ತೋರಿಸಬೇಕು; ಅಧಿಕಾರದ ಲಾಲಸೆ ಹುಟ್ಟಿಸಬೇಕು....! ಜಾತಿ-ಜಾತಿಗಳಲ್ಲಿ, ಧರ್ಮ-ಧರ್ಮಗಳಲ್ಲಿ ಜಗಳ ಹಚ್ಚಬೇಕು, ಇವರ ದೇಶದ ಬಗ್ಗೆ....ಧರ್ಮದ ಬಗ್ಗೆ ವಿಪರೀತ ಕಲ್ಪನೆ ಮಾಡಿ ಕೊಡಬೇಕು! ಅಂದರೆ ನಾವು ಹೇಳಿದ್ದನ್ನು ಇವರು ಮಾಡುತ್ತಾರೆ. ಒಮ್ಮೆ ಶರೀರದಿಂದ, ಮನಸ್ಸಿನಿಂದ ನಮ್ಮ ಗುಲಾಮರಾದರೆಂದರೆ ತೀರಿತು. ನಮ್ಮ ರಾಜ್ಯ ಈ ದೇಶದಲ್ಲಿ ನಡೆಯುವದು! ಸ್ಥಿರವಾಗುವದು! ಗೊತ್ತಾಯಿತಲ್ಲವೆ ಹೇಗೆ ಕೆಲಸ ಮಾಡುವದು....?

ಕ್ಯಾಪ್ಟನ್—ಯಸ್ ಸರ್!

ಮಾಲಕಮ್—(ತೆರೆಯೆಡೆಗೆ ದುರ್ಬೀನಲ್ಲಿಂದ ನೋಡುತ್ತ-who is this man?

ಕ್ಯಾಪ್ಟನ್—ಈತನು ನಮ್ಮ ಮನುಷ್ಯನಿದ್ದಾನೆ.

ಮಾಲಕಮ್—Let us go...! (ಹೋಗುವರು ತೋಫಿನ ಸದ್ದು)

(ತೆರೆ ಮೇಲಾಗುವದು. ರಾಜವಾಡೆಯ ದೃಶ್ಯ-)

ಸಾವಿತ್ರಿ—ಅತ್ತೆಯವರೆ, ಎಷ್ಟೊಂದು ವಿಚಿತ್ರ ಪರಿಸ್ಥಿತಿಯು ನಮ್ಮ ಪ್ರಜೆಗಳಿಗೆ ಪ್ರಾಪ್ತವಾಯಿತು? ಫಿರಂಗಿಗಳ ಮಹತ್ವಾಕಾಂಕ್ಷೆಯು ನಮ್ಮ ದೇಶವನ್ನು ಹಾಳುಮಾಡಿತು! ಹೂವುಗಳಲ್ಲಿ ಆರಿಸಿದ ಸ್ಥಳದಲ್ಲಿ ಕಲ್ಲುಗಳನ್ನು ಆರಿಸುವ ಪ್ರಸಂಗ ಬಂದಿತು.

ಯಮುನಾಬಾಯಿ—ಎಲ್ಲವೂ ಕಾಲಗತಿಯ ಪ್ರಭಾವ! ನೀನು ಇಷ್ಟೇಕೆ ನೊಂದುಕೊಂಡಿರುವೆ! ನೀನು ವೀರಪತ್ನಿ! ವೀರಮಾತೆಯಿರುವಿ!

ಸಾವಿತ್ರಿ—ಆದರೂ ಮಾನವಳೆ ಇದ್ದೇನೆ ನರಗುಂದದ ದುರವಸ್ಥೆಯನ್ನು ನನ್ನಿಂದ ನೋಡುವದಕ್ಕಾಗುವದಿಲ್ಲ. ಈ ದುರವಸ್ಥೆಯನ್ನು ನೋಡುವದಕ್ಕಿಂತಲೂ....

ಯಮುನಾಬಾಯಿ—ಸಮಾಧಾನಹೊಂದು! ನೈಜ ವಿಪತ್ತಿಗಿಂತ ಕಾಲ್ಪನಿಕ ವಿಪತ್ತು ಭಯಂಕರವಾಗಿರುವದು. ಕಾಲಗತಿಯಲ್ಲಿ ಹೊನ್ನು ಮಣ್ಣಿನಲ್ಲಿ ಬಿದ್ದರೇನಾಯಿತು? ಅದು ಹೊನ್ನೇ! ತನ್ನ ಬೆಲೆಯನ್ನೆಂದಿಗೂ ಅದು ಕಳೆದುಕೊಳ್ಳುವದಿಲ್ಲ.

ಸಾವಿತ್ರಿ—ಸುಖವನ್ನು ಮರೆತು ದುಃಖವನ್ನು ನೆನೆಯುವದು ಮಾನವನ ಸ್ವಭಾವ ಧರ್ಮ! ಆದ್ದರಿಂದ ಹೀಗೆ ಮಾತಾಡಿದೆ.

ಯಮುನಾಬಾಯಿ—ನಾಳಿನ ವಿಷಯದಲ್ಲಿ ನಮಗೆ ಏನು ಗೊತ್ತಿದೆಯೆಂದು ಅದರ ವಿಷಯದಲ್ಲಿ ನಾವು ವಿಚಾರವನ್ನು ಮಾಡಬೇಕು? ಅದಕ್ಕಾಗಿ ಕೊರಗುವದು ಮೂರ್ಖತನ! ಬರಲಿರುವ ದಿನವನ್ನು ನಗುಮುಖದಿಂದ ಸ್ವಾಗತಿಸುವದು ನಮ್ಮ ಕರ್ತವ್ಯ.

ಸಾವಿತ್ರಿ—ಕುಲಸ್ವಾಮಿ ವೆಂಕಟೇಶ ನಮ್ಮ ಮೇಲೆ ಇಷ್ಟೇಕೆ ಕೋಪಗೊಂಡಿರುವನೋ ತಿಳಿಯದು. ಅತ್ತೆಯವರೆ, ನಿನ್ನೆಯಿಂದ ಆಗುವ ಅಪಶಕುನಗಳನ್ನು ಕಂಡು ನನ್ನ ಧೈರ್ಯ ಕುಸಿದುಬೀಳುತ್ತಿರುವದು. ಇಂದಿನ ಬೆಳಗಿನ ಜಾವದಲ್ಲಿ ಕಂಡ ಕನಸಿನಿಂದಂತೂ ನನ್ನ ಜೀವ ತೀರ ಅಂಜಿಹೋಗಿದೆ.

ಯಮುನಾಬಾಯಿ—ಕನಸಿನ ಮೇಲೆ ಅಷ್ಟೊಂದು ವಿಶ್ವಾಸವಿಡಬಾರದು.

ಸಾವಿತ್ರಿ—ಹಾಗಾದರೆ ಯಾರ ಮೇಲೆ ವಿಶ್ವಾಸವಿಡಬೇಕು ನಾವು? ಎಲ್ಲರೂ ದ್ರೋಹಿಗಳೆ! ವಂಚಕರೆ!

ಯಮುನಾಬಾಯಿ— ಈ ಪ್ರಪಂಚದಲ್ಲಿ ಒಬ್ಬರನ್ನೊಬ್ಬರು ವಂಚಿಸಬಹುದು. ಆದರೆ ದೈವವನ್ನು ಯಾರಿಂದಲೂ ವಂಚಿಸುವದಕ್ಕೆ ಸಾಧ್ಯವಿಲ್ಲ. ಆದ್ದರಿಂದ ದೈವದ ಮೇಲೆ ಭರವಸೆಯಿಟ್ಟು ಮಾನವ ನಡೆಯಬೇಕು.

ಸಾವಿತ್ರಿ--ದೈವದ ಮೇಲೆ ಭರವಸೆಯಿಡುವದು ಹೇಡಿತನವೆಂದು ನನ್ನ ಅಭಿಪ್ರಾಯ! ಫಿರಂಗಿಗಳ ಜೊತೆಯಲ್ಲಿ ನಾವು ಯುದ್ಧಮಾಡಬೇಕು.

ಯಮುನಾಬಾಯಿ—ಕಲ್ಲಿಗೆ ಹುರಮಂಜು ಹಚ್ಚುವದಕ್ಕೆ ಹೆಚ್ಚು ಸಮಯ ಹತ್ತುವದಿಲ್ಲ. ಆದರೆ ಅದನ್ನು ಒರಿಸುವದು ಕಠಿಣ....! ಅದರಂತೆಯೆ ಯುದ್ಧದ ಸ್ಥಿತಿಗತಿಯಿರುವದು. ಬಾಬಾ ಹೇಳುತ್ತಿದ್ದ ಈ ಕೋಟೆಯಲ್ಲಿ ರಾಜದ್ರೋಹಿ ಮತ್ತು ದೇಶದ್ರೋಹಿಗಳ ತಂಡ ಬೆಳೆಯುತ್ತಿರುವದಂತೆ! ಆ ತಂಡಗಳಿಗೆ ರಾಜ್ಯದ ಆಧಾರಸ್ತಂಭರೆನ್ನುವವರು ಮುಂದಾಳಾಗಿದ್ದರಂತೆ! ಆದ್ದರಿಂದ ಯಾವ ಸಮಯದಲ್ಲಿ ಏನು ಸಂಭವಿಸೀತೆಂಬುದನ್ನು ಯಾರಿಂದಲೂ ಹೇಳಲಿಕ್ಕಾಗುವದಿಲ್ಲವಂತೆ! ಎಲ್ಲ ಬಗೆಯಿಂದ ನಾವು ಸಹ ಎಚ್ಚರ ವಹಿಸಬೇಕಂತೆ! ( ತೋಫಿನ ಸದ್ದು )

ಸಾವಿತ್ರಿ—( ಕಂಬನಿ ಸುರಿಸುತ್ತ ) ಅತ್ತೆಯವರೆ.... -ತ್ತೆಯವರೆ....! ಎಂತಹ ದುರ್ದಶೆ ನಮಗೊದಗಿತು? ನಮ್ಮ ದೇಶದ ಜನರು ಇಷ್ಟೊಂದು ಹೀನ ಮನೋವೃತ್ತಿಯವರಾದರೆ? ಸ್ವಕೀಯರಾರು? ಪರಕೀಯರಾರು? ಎಂಬುದು ಸಹ ತಿಳಿಯದಷ್ಟು ಮೂಢರಾದರೆ? ತಮ್ಮ ಧರ್ಮ-ಸಂಸ್ಕೃತಿಗಳನ್ನು ಕಾಲ ಬುಡದಲಿ ಮೆಟ್ಟಿ ನಿಲ್ಲುವಷ್ಟು ಪಶುಗಳಾದರೆ! ಹೀಗಾದರೆ ನರಗುಂದದ ಸಿಂಹಾಸನದ ಪುಣ್ಯ ಮುಗಿಯಿತು!

ಯುಮುನಾಬಾಯಿ—ನನಗೂ ಹಾಗೆಯೆ ಅನಿಸುವದು. ನಮ್ಮ ಪ್ರಜೆಗಳು ತಮ್ಮ ಮೇಲೆ ತಾವೇ ಕಲ್ಲುಹಾಕಿಕೊಳ್ಳುತ್ತಿದ್ದಾರೆ! ಕುಹಕ ಫಿರಂಗಿಗಳು ಕುತ್ಸಿತ ಬುದ್ಧಿಯಿಂದ ಅದನ್ನು ನೋಡುತ್ತಿದ್ದಾರೆ. ರಾಜಪರಿವಾರದವರೆ ರಾಜ್ಯ ಮಾಡುಗಕ ಮುಖಂಡರಾಗಿದ್ದಾರೆ.

ಸಾವಿತ್ರಿ—ಇದನ್ನಾರು ನಿಮಗೆ ಹೇಳಿದರು?

(ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಧಾವಿಸುತ್ತ ಬಾಬಾಸಾಹೇಬ ಪ್ರವೇಶಿಸುವನು.... )

ಬಾಬಾಸಾಹೇಬ—ಅಮಾತ್ಯರೆಲ್ಲಿದ್ದಾರೆ?

ಯಮುನಾಬಾಯಿ—ನಾವರಿಯೆವು. ವಿಷ್ಣುವಿನ ಹೇಳಿಕೆಯ ಮೇರೆಗೆ ನಿಮ್ಮ ಬರವನ್ನೆ ಕಾದುಕೊಂಡು ಕುಳಿತುಕೊಂಡಿದ್ದೇವೆ.

ಬಾಬಾಸಾಹೇಬ—ಅಮಾತ್ಯರನ್ನು ಆದಷ್ಟು ಬೇಗ ಕಾಣಬೇಕು ನಾನು!

ಸಾವಿತ್ರಿ—ಏನಾದರೂ ವಿಶೇಷವೆ?

ಬಾಬಾಸಾಹೇಬ—ಇನ್ನು ಮುಂದೆ ನಾವು ಇಲ್ಲಿದ್ದು ಪ್ರಯೋಜನವಿಲ್ಲ. ಸರ್ವಸ್ವದ ಘಾತವಾಯಿತು. ನರಗುಂದದ ಸಿಂಹಾಸನವನ್ನು ಸಂರಕ್ಷಿಸುವದಕ್ಕೆ ಕೊನೆಗೆ ನಾವು ಅಸಮರ್ಥರಾಗಿ ಹೋದೆವು.

ಯಮುನಾಬಾಯಿ—ಬಾಬಾ .... ಬಾಬಾ .... ಏನನ್ನು ಮಾತಾಡುತ್ತಿರುವಿ?

ಬಾಬಾಸಾಹೇಬ— ಹೌದಮ್ಮ....ಫಿರಂಗಿಗಳ ಕೈಯಲ್ಲಿಂದ ಕೋಟೆಯನ್ನು ಉಳಿಸಿಕೊಳ್ಳುವದು ಕಠಿಣವಿದೆ.

ಯಮುನಾಬಾಯಿ—ಮುಂಡರಗಿ ಭೀಮರಾಯ, ಸುರಪುರದ ವೆಂಕಟಪ್ಪನಾಯಕ ತಮ್ಮ ಸೈನ್ಯವನ್ನು ತೆಗೆದುಕೊಂಡು ಸಹಾಯಕ್ಕೆ ಬರುವದಿಲ್ಲವೆ?

ಬಾಬಾಸಾಹೇಬ—ಇದುವರೆಗೆ ಬಂದಿಲ್ಲ. ಏನಾದರೂ ಮೋಸ ನಡೆದುಹೋಗಿದೆ. ಆದ್ದರಿಂದಲೆ ಅವರು ಬಂದಿಲ್ಲ....! ಇನ್ನು ಮೇಲೆ ಬಂದೂ ಪ್ರಯೋಜನವಿಲ್ಲ.

ಸಾವಿತ್ರಿ—ನಾವೂ ಮತ್ತು ನಮ್ಮ ಸೈನಿಕರು ಫಿರಂಗಿಗಳ ಜೊತೆಯಲ್ಲಿ ಯುದ್ಧಮಾಡೋಣ.

ಬಾಬಾಸಾಹೇಬ—ದೇವಿ, ಗಾಳಿಯಲ್ಲಿ ಧೂಳ ತೂರಿ ಹೋದಂತೆ ನಮ್ಮ ಸೈನ್ಯದ ಪರಿಸ್ಥಿತಿಯಾದೀತು.

(ರಾಮರಾಯ ಧಾವಿಸುತ್ತ ಧಾವಿಸುತ್ತ ಪ್ರವೇಶಿಸುವನು.)

ರಾಮರಾಯ— ರಾಜಮಾತಾ ....ಮ ಹಾ ರಾ ಜ ರು ಎಲ್ಲಿದ್ದಾರೆ?

ಬಾಬಾಸಾಹೇಬ—ಅಮಾತ್ಯರೆ ಇಲ್ಲಿಯೆ ಇದ್ದೇನೆ! (ತೋಫಿನ ಸದ್ದು) ಇಷ್ಟೇಕೆ ಅಂಜುವಿರಿ?

ರಾಮರಾಯ—ಮಹಾರಾಜ, ಆಯಕಟ್ಟಿನ ಸ್ಥಳಗಳೆಲ್ಲ-ಶತ್ರುಗಳಿಗೆ ಸೊತ್ತಾಗಿ ಹೋಗಿರುವವು. ಶತ್ರುಗಳು ಕೋಟೆಯಲ್ಲಿ ಪ್ರವೇಶಿಸಿದ್ದಾರೆ! ಇನ್ನು ಮೇಲೆ ನಾವು ಕೋಟೆಯಲ್ಲಿ ಇರುವದೂ ಕಠಿಣ! ರಾಜಮಾತೆ ಸಹಿತರಾಗಿ ನೀವಿಲ್ಲಿಂದ ಆದಷ್ಟು ಬೇಗ ಹೊರಟು ಹೋಗಬೇಕು.

ಯಮುನಾಬಾಯಿ— ನಿಮ್ಮನ್ನು, ನರಗುಂದವನ್ನು ಬಿಟ್ಟು ನಾವು ಎಲ್ಲಿಯೂ ಹೋಗಲಿಕ್ಕೆ ಸಿದ್ಧರಿಲ್ಲ.

ರಾಮರಾಯ—ಫಿರಂಗಿಗಳ ಕೈಯಲ್ಲಿ ಸಿಕ್ಕು ಪ್ರಯೋಜನವಿಲ್ಲ. ಹೊರಟುಹೋಗುವದೊಂದೇ ಮಾರ್ಗ ಉಳಿದಿದೆ. ಇಲ್ಲದಿದ್ದರೆ ಫಿರಂಗಿಗಳ ಕ್ರೂರ ಬಲಾತ್ಕಾರಕ್ಕೆ ಗುರಿಯಾಗಬೇಕಾದೀತು!

ಬಾಬಾಸಾಹೇಬ—ಅದೆಂದಿಗೂ ಆಗದು.

ರಾಮರಾಯ— ನರಗುಂದದ ರಾಜಮನೆತನದ ಮರ್ಯಾದೆ ಉಳಿಸುವದಿದ್ದರೆ ಇಲ್ಲಿಂದ ಹೊರಟುಹೋಗಿರಿ. ಮುಂದಿನದನ್ನು ನಾನು ನೋಡಿಕೊಳ್ಳುತ್ತಿದ್ದೇನೆ. ಮಹಾರಾಜ....ನೀವೊಬ್ಬರೆ ನನ್ನ ಮನೀಷೆಯನ್ನು ತಿಳಿದುಕೊಳ್ಳಲಿಕ್ಕೆ ಸಮರ್ಥರು.

ಬಾಬಾಸಾಹೇಬ—ಅಮಾತ್ಯರೆ....ಅಮಾತ್ಯರೆ...,

ರಾಮರಾಯ— ಮಹಾರಾಜ........ನೀವು ಹೊರಟು ಹೋಗುವದು ಕ್ರಮಪ್ರಾಪ್ತ! ಸಮಯ ವಿಲಂಬಮಾಡಬೇಡಿರಿ.

ಸಾವಿತ್ರಿ—ಸಕಲೈಶ್ವರ್ಯದಿಂದ ತುಂಬಿ ತುಳುಕುತ್ತಿರುವ ನರಗುಂದವನ್ನು ಬಿಟ್ಟು ನಾವು ಹೋಗಲಾರೆವು. ಇಲ್ಲಿಯೆ ನಮಗೆ ಮರಣ ಬರಲಿ!

ಯಮುನಾಬಾಯಿ—ಸಾವಿತ್ರಿ....ಸಹನೆ ತಾಳು!

ರಾಮರಾಯ—ವೇಳೆ ಕಳೆಯಬೇಡಿರಿ! ಬೇಗನೆ ಹೊರಟುಹೋಗಿರಿ!

ಬಾಬಾಸಾಹೇಬ—ಅಮಾತ್ಯರೆ ರಾಜಮಾತೆ ಮತ್ತು ನರಗುಂದದ ಮಹಾರಾಣಿಯರನ್ನು ಮೊದಲು ಪಾರುಮಾಡೋಣ. ಆ ಮೇಲೆ ಬಂದುದಕ್ಕೆ ನಾವು ಎದುರಾಗಿ ನಿಲ್ಲೋಣ.

ರಾಮರಾಯ—ಒಳ್ಳೇದು ಮಹಾರಾಜ!

ಬಾಬಾಸಾಹೇಬ—ದೇವಿ, ರಾಜಮಾತೆಯನ್ನು ಕರೆದುಕೊಂಡು ನೀವು ಇಲ್ಲಿಂದ ಎಲ್ಲಿಯಾದರೂ ಹೊರಟುಹೋಗಿರಿ. ಇದೊಂದೇ ಕೊನೆಯ ದಾರಿ ನಿಮ್ಮ ಪಾಲಿಗೆ ಉಳಿದಿದೆ.

ಸಾವಿತ್ರಿ—ಪ್ರಭು, ನೀವು ಚಿಂತಿಸದಿರಿ! ನಿಮ್ಮ ಆಜ್ಞೆಯನ್ನು ಕಾರ್ಯರೂಪದಲ್ಲಿ ತರುತ್ತೇನೆ. (ಕಣ್ಣಲ್ಲಿ ಕಂಬನಿ ತರುವಳು.)

ಬಾಬಾಸಾಹೇಬ—ದೇವಿ, ಕಣ್ಣಲ್ಲಿ ಕಂಬನಿಗಳೇಕೆ?

ಸಾವಿತ್ರಿ—ಪ್ರಭು, ಇವು ದುಃಖದ ಕಂಬನಿಗಳಲ್ಲ. ಆನಂದ ಭಾಷ್ಪಗಳು! ಇದು ವರೆಗೆ ಸುಖದಿಂದ ಇದ್ದ ನಾವು ಅದೃಷ್ಟವಶಾತ್ ಒಬ್ಬರಿಂದೊಬ್ಬರು ದೂರಾಗುತ್ತಲಿದ್ದೇವೆ. ಮುಂದಿನ ಜನ್ಮದಲ್ಲಿಯೂ ನೀವೆ ಪತಿಯಾಗಿ ದೊರೆಯಬೇಕೆಂದು ವೆಂಕಟರಮಣನಿಗೆ ಬೇಡಿಕೊಳ್ಳುತ್ತೇನೆ. (ನಮಸ್ಕರಿಸುವಳು.) ಇಬ್ಬರೂಕೂಡಿ ಯಮುನಾಬಾಯಿಯವರಿಗೆ ನಮಸ್ಕರಿಸುವರು.

ಯಮುನಾಬಾಯಿ—ನಾವು ನಮ್ಮ ಪರಿಯಿಂದ ಕರ್ತವ್ಯ-ಕರ್ಮಗಳನ್ನು ನೆರವೇರಿಸುವದಕ್ಕೆ ಪ್ರಯತ್ನಿಸಿದ್ದೇವೆ. ನಮ್ಮ ಪ್ರಯತ್ನವು ಕೈಗೂಡಲಿಲ್ಲವೆಂದು ದುಃಖಿಸದೆ ಮುಂದಿನ ಜನ್ಮದಲ್ಲಿ ಪೂರ್ಣ ಮಾಡುವದಕ್ಕೆ ಈ ದೇಶದಲ್ಲಿಯೆ ಹುಟ್ಟಿ ಬರೋಣ! ಅಮಾತ್ಯರೆ ನಾವು ಹೋಗುತ್ತೇವೆ. ನಮ್ಮ ವಿಷಯದಲ್ಲಿ ನೀವು ಚಿಂತಿಸಬೇಡಿರಿ. ನಮ್ಮ ಎದುರು ಸೀತಾ, ದ್ರೌಪತಿಯರ ಆದರ್ಶವಿದೆ. ಯುದ್ಧಮಾಡಿರಿ! ಸಮರಾಂಗಣದಲ್ಲಿಂದ ಕಾಲ್ದೆಗೆಯಬೇಡಿರಿ! ಹೋಗುತ್ತೇವೆ.

ರಾಮರಾಯ—ಯಾರಿದ್ದಾರೆ ಅಲ್ಲಿ....? (ದೂತ ಬರುವನು) ಇವರ ಜೊತೆಯಲ್ಲಿ ನೀನು ಹೋಗು! (ಎಲ್ಲರೂ ಹೋಗುವರು.)

ಬಾಬಾಸಾಹೇಬ—ದೊಡ್ಡ ಹೊಣೆಯಿಲ್ಲಿಂದ ದೂರಾದೆವು. ವಿಷ್ಣು ಎಲ್ಲಿ ಹೋಗಿದ್ದಾನೆ?

ರಾಮರಾಯ—ಆತನ ಪತ್ತೆಯೆ ಇಲ್ಲ.

ಬಾಬಾಸಾಹೇಬ—ಕಾಲಗತಿಯ ಪ್ರಭಾವ ಎಷ್ಟೊಂದು ಭಯಂಕರವಾಗಿದೆ. ನಮ್ಮವರೂ ನಮ್ಮಿಂದ ದೂರಾಗುತ್ತಿದ್ದಾರೆ. (ತೋಫಿನ ಸದ್ದು)

—ಮುಂದುವರೆಯುವದು)

# ತಾಯಿಯ ಕೊನೆ

ಲೇಖಕ : ಬ. ಭೀ. ಕುಲಕರ್ಣಿ, ಉ। ಗುರು ಹುಕ್ಕೇರಿ

ಲಕ್ಷ್ಮೀಬಾಯಿ ಹಾಸಿಗೆ ಹಿಡಿದು ಒಂದೂವರೆ ತಿಂಗಳಾಯಿತು. ಐವತ್ತೈದು--ಐವತ್ತಾರರ ವಯಸ್ಸು. ಬೇನೆ ಗುಣವಾಗುವ ಲಕ್ಷಣಗಳು ಇಲ್ಲ. ತಾನು ಬದುಕಲಾರೆ ಎಂದು ಅವಳಿಗೆ ಅನಿಸಿರಬಹುದು. ಅದಕ್ಕಾಗಿಯೇ ಮಗ ಬಿಂದುಮಾಧವನನ್ನು ಸನಿಯಕ್ಕೆ ಕರೆದಳು. ಮಮತೆ ಪೂರಿತ ತನ್ನ ಕೈಯನ್ನು ಮಗನ ಮೈ ಮೇಲೆ ಕೈಯಾಡಿಸಹತ್ತಿದಳು. ಕಣ್ಣಲ್ಲಿ ನೀರು ತುಂಬಿತು. ತಡವರಿಸುತ್ತಲೆ........

"ಮಗು ನಾನಿನ್ನು ಈ ಬೇನೆಯಿಂದ ಬದುಕಲಾರೆ. ನಿನ್ನನ್ನು ನಡುನೀರಿನಲ್ಲಿಯೇ ಕೈಬಿಟ್ಟು ಹೊರಟೆ. ನಿನಗಾಗಿ ಇಷ್ಟು ಕಷ್ಟ ಸಹಿಸಿದೆ. ಆದರೆ ನಿನ್ನ ಸುಖದ ದಿನಗಳನ್ನು ಕಾಣುವ ಭಾಗ್ಯ ಈ ಹತಭಾಗಿನಿಗೆ ಇಲ್ಲ. ಪರಮಾತ್ಮನಿಗೆ ಇನ್ನೂ ಕರುಣೆಯಿಲ್ಲ. ಇನ್ನು ನನ್ನನ್ನು ಹೀಗೆ ಬಿಟ್ಟು ಎಲ್ಲಿಯೂ ಅಲೆಯಬೇಡಪ್ಪ." ಎಂದರು.

ತಾಯಿಯ ಅಶ್ರುಪೂರಿತ ವಾತ್ಸಲ್ಯದ ನುಡಿಗಳನ್ನು ಕೇಳಿ ಬಿಂದುಮಾಧವನ ಕಂಠವೂ ಬಿಗಿಯಿತು. ಮಾತು ಬರಲಿಲ್ಲ. ಕಣ್ಣಲ್ಲಿ ನೀರು ತುಂಬಿತು. ತಾಯಿಗೆ ತನ್ನ ಅಶ್ರುಪೂರಿತ ಮುಖವನ್ನು ತೋರಬಾರದೆಂದು ಮುಖ ತಿರಿಗಿಸಿದ. ಮೇಲೆ ನೋಡಹತ್ತಿದ. ಮಗನ ಮನಸ್ಸಿನ ನೋವು ತಾಯಿಗೆ ಅರಿವಾಗದಿರಲಿಲ್ಲ. ಕೂಡಲೆ

"ಹುಚ್ಚು! ಹೀಗೆ ಕಣ್ಣೀರು ಹಾಕುವೆಯಾ? ನಾನೇನೂ ಬೇಗನೆ ಸಾಯುಲಾರೆ. ನನಗೇನೂ ಆಗುವದಿಲ್ಲ. ಸುಮ್ಮನಾಗಪ್ಪ." ಎಂದು ನಗಲುಯತ್ನಿಸುತ್ತ ಮಾತಾಡಿದರು.

ಅವಳ ಸಾಂತ್ವನದ ಈ ನುಡಿಗಳು ಮತ್ತಿಷ್ಟು ಹೃದಯ ಸ್ಪರ್ಶಿಯಾದವು. ಬಿಂದುಮಾಧವನಿಗೆ ತಾಯಿಯ ಎದೆಯಲ್ಲಿ ಮುಖವಿಟ್ಟು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ. ತಾಯಿಗೂ ಮಗನನ್ನು ಹೇಗೆ ಸಮಾಧಾನ ಮಾಡಬೇಕು ತಿಳಿಯದಾಯಿತು. ಅವಳ ಕಣ್ಣಿನಿಂದಲೂ ನೀರು ಧಾರೆಯಾಗಿ ಹರಿಯಲಾರಂಭಿಸಿತು. ಹೀಗೆ ಎಷ್ಟು ವೇಳೆ ಕಳೆಯಿತೊ ಗೊತ್ತಿಲ್ಲ. ಕೊನೆಗೆ ಲಕ್ಷ್ಮೀಬಾಯಿಯೇ ದುಃಖದ ಒತ್ತಡ ಕಡಿಮೆಯಾಗಲು

"ಮಾಧವಾ, ನನ್ನ ಕೊನೆಯ ಆಶೆಯನ್ನು ಪೂರೈಸುವೆಯಾ?" ಎಂದರು ಮುಖದಲ್ಲಿ ನಗೆಯನ್ನು ತರಲು ಯತ್ನಿಸುತ್ತ.

"ಹೂಂ ನಮ್ಮಾ!" ಎಂದು ತಲೆಯಾಡಿಸಿದ.

"ಮತ್ತೆ ನಿಲ್ಲಪ್ಪ ನನ್ನನ್ನು ಬಿಟ್ಟು ಎಲ್ಲಿಯೂ ಹೋಗಬೇಡಪ್ಪ." ಎಂದು ಉಸಿರುಗರೆದರು.

"ಅಮ್ಮಾ! ಸುಮ್ಮನೆ ತ್ರಾಸ ಮಾಡಿಕೊಳ್ಳಬೇಡಮ್ಮ. ನಿನ್ನನ್ನು ಬಿಟ್ಟು ಕ್ಷಣವೂ ಅಗಲಿರಲಾರೆ. ಏನೋ ಇಷ್ಟು ದಿವಸ ತಿರುಗಿದೆ. ಆದಕ್ಕಾಗಿ ಕ್ಷಮಿಸಮ್ಮ!" ಎಂದು ಪಶ್ಚಾತ್ತಾಪದಿಂದ ನುಡಿದ.

ಲಕ್ಷ್ಮೀಬಾಯಿ ವಾತ್ಸಲ್ಯ ಪೂರಿತ ನೇತ್ರಗಳಿಂದ ಮಗನನ್ನು ಒಮ್ಮೆ ನೋಡಿದಳು. ಮಾನಸಿಕ ತ್ರಾಸದಿಂದ ಕಣ್ಣು ಸೋತಂತಾಗಿದ್ದವು. ಮುಚ್ಚಲಾರಂಭಿಸಿದವು. ತಾಯಿಗೆ ಮಲಗಲು ಹೇಳಿದ. ಹೊದಿಕೆ ನೀಟಾಗಿ ಹೊದಿಸಿದ. ಅಲ್ಲಿಯೇ ಕುಳಿತು ತಾಯಿಯ ಕಾಲುಗಳ ಮೇಲೆ ಕೈಯಾಡಿಸಹತ್ತಿದ.

ಲಕ್ಷ್ಮಿಬಾಯಿಗೆ ಬಿಂದುಮಾಧವ ಒಬ್ಬನೇ ಮಗ. ಲಕ್ಷ್ಮೀಬಾಯಿ ತನ್ನ ಮಗನನ್ನು ಕರೆದುಕೊಂಡು ತನ್ನ ತವರು ಮನೆಯಲ್ಲಿಯೇ ಇದ್ದಳು. ಗಂಡನ ಊರೂ ಅದೆ. ಮನೆತನದ ನ್ಯಾಯದಲ್ಲಿ ತನ್ನ ಮಾವನ ಅಂದರೆ ಲಕ್ಷ್ಮೀಬಾಯಿಯ ತಂದೆಯ ಜೋಡಿ ಭೀಮರಾಯರು ಜಗಳಾಡಿದ್ದರು. ಈ ಕಾರಣಕ್ಕಾಗಿಯೇ ಲಕ್ಷ್ಮೀಬಾಯಿಗೂ ತೊಂದರೆ ಕೊಡಲಾರಂಭಿಸಿದರು ಭೀಮರಾಯ. ಇದರಿಂದ ಲಕ್ಷ್ಮೀಬಾಯಿಯು ಕೆಲವು ವರ್ಷ ಗಂಡನ ಮನೆಯಲ್ಲಿ ಕೆಲವು ವರ್ಷ ತವರುಮನೆಯಲ್ಲಿ ಕಳೆಯಬೇಕಾಯಿತು. ಕೊನೆಗೆ ಬಿಂದುಮಾಧವನ ನಾಲ್ಕನೆಯ ವರುಷದಿಂದಲೆ, ತವರು ಮನೆಯಲ್ಲಿಯೇ ಇರಬೇಕಾಯಿತು.

ಭೀಮರಾಯರೂ ಸಾವಿತ್ರಿಬಾಯಿಯನ್ನು ಮೂರನೆಯ ಹೆಂಡತಿಯನ್ನಾಗಿ ಮಾಡಿ ತಂದಿದ್ದರು. ಸಾವಿತ್ರಿಬಾಯಿಯ ಹೊಟ್ಟೆಯಿಂದಲೂ ರಾಮಚಂದ್ರನೊಬ್ಬನೆ ಮಗ. ರಾಮಚಂದ್ರನು ಬಿಂದುಮಾಧವನಿಗಿಂತ ೩-೪ ವರುಷ ಚಿಕ್ಕವ. ಭೀಮರಾಯರ ಪ್ರೇಮವೆಲ್ಲವು ಸಾವಿತ್ರಿಬಾಯಿ ಮತ್ತು ರಾಮ

ಚಂದ್ರನ ಮೇಲೆ. ಭೀಮರಾಯರು ಬಿಂದುಮಾಧವನನ್ನು ಸೇರುತ್ತಿರಲಿಲ್ಲ. ಇದಕ್ಕಾಗಿ ಲಕ್ಷ್ಮೀಬಾಯಿಯು ಮಗನನ್ನು ಅತ್ತ ಕಳಿಸುತ್ತಿರಲಿಲ್ಲ.

ಬಿಂದುಮಾಧವನು ತನ್ನ ಪ್ರಾಥಮಿಕ ಶಿಕ್ಷಣ ಮುಗಿದ ನಂತರ ತಾನಾಗಿಯೇ ತಂದೆಯ ಹತ್ತರ ಹೋದ. ಇಂಗ್ಲಿಷ ಕಲಿಯುವ ಇಚ್ಛೆ ತನಗಿದೆ ಎಂದು ತಿಳಿಸಿದ. ಆದರೆ ತಂದೆ ಯಿಂದ ಅಪೇಕ್ಷೆಯಂತೂ ಈಡೇರಲಿಲ್ಲ. "ನೀನಾರು ?" ಎಂಬ ಪ್ರಶ್ನೆ ಆತನ ಕಿವಿಯಲ್ಲಿ ಕಬ್ಬಿಣ ಕಾಸಿ ಸುರಿದಂತಾಯಿತು. ಒಮ್ಮೆಲೆ ಸಿಡಿದೆದ್ದ. ಕೊಡುವ ಉತ್ತರ ಕೊಟ್ಟು ತಿರುಗಿಬಂದೂ ತಾಯಿಗೆ ತಿಳಿಸಿದ. "ಅಯ್ಯೋ! ದೇವರೆ ನೀನೇಗತಿ!" ಎಂದು ಕಿವಿಮುಚ್ಚಿ ದೇವರ ಮೇಲೆ ಹೊಣೆ ಹಾಕಿದಳು.

ಇದೆಲ್ಲ ಈಗ ನೆನಪಾಗಿ ಮಗನನ್ನು ಸನಿಯಕ್ಕೆ ಕೂಡಿಸಿ ಕೊಂಡು ಮೈಯನ್ನು ತಡವರಿಸಿದ್ದಳು.

ಬಿಂದುಮಾಧವನು ಆ ಹೊತ್ತಿನಿಂದ ಚಾಚೂ ತಪ್ಪದೆ ತಾಯಿಯ ಸೇವೆಯನ್ನು ಮನಮುಟ್ಟಿ ಮಾಡಹತ್ತಿದ. ಒಂದು ದಿನ ಕಳೆಯಿತು. ಮರುದಿನ ಮೇಲಿಂದ ಮೇಲೆ ಎಚ್ಚರ ತಪ್ಪ ತೊಡಗಿತು. ಇನ್ನು ತಾಯಿ ಬದುಕಲಾರಳು ಎಂದು ಅನಿಸಿ ತವನಿಗೆ. ಮಾಧವನು ವಿವೇಕಾನಂದ ರಾಮತೀರ್ಥ ಮೊದಲಾ ದವರ ಕೆಲವು ಉಪನ್ಯಾಸಗಳ ಗ್ರಂಥಗಳನ್ನು ಓದಿದ್ದ. ಕಾರಣ ಗಟ್ಟಿ ಮನಸ್ಸು ಮಾಡಿ ದೇವರಲ್ಲಿ ಪ್ರಾರ್ಥಿಸಹತ್ತಿದ.

"ದೇವಾ! ಮುದುಕಿಯ ಜೀವ ನನಗಾಗಿ ಪರಿತಪಿಸು ತ್ತಿದೆ. ಅವಳು ತನ್ನ ತಪಶ್ಚರ್ಯದ ಫಲ ಕಾಣಲಿಲ್ಲವೆಂದು ಮರಗುತ್ತಿರುವಳು. ಮರುಗಿಸದೆ ಅವಳನ್ನು ಬೇಗನೆ ಮುಕ್ತಮಾಡಪ್ಪ!"

ಸಾಯಂಕಾಲ ೬ ಗಂಟೆಯಾಗಿರಬಹುದು. ಲಕ್ಷ್ಮೀ ಬಾಯಗೆ ಹೆಚ್ಚಾಗಿದೆ. ಎಂದು ಸುದ್ದಿ ಊರಲ್ಲಿ ಹರಡಿತು. ಕೂಡಲೆ ಅವಳ ಗೆಳತಿಯರು ಒಬ್ಬೊಬ್ಬರೆ ಬಂದು ಮಾತನಾ ಡಿಸಹತ್ತಿದರು. ಅವರೆಲ್ಲರ ಜೊತೆಗೆ ಸರಿಯಾಗಿ ಮಾತನಾ ಡಿದಳು. ಎಲ್ಲರೂ ತಿರುಗಿ ಹೋದರು. ೯ರ ಸುಮಾರಿಗೆ ಮಾತು ನಿಂತವು. ಕಣ್ಣು ಅರೆ ಮುಚ್ಚಿದವು. ಗಂಟಲಿನಿಂದ ಗೊಂ್‌........ಗೊಂ್‌........ಶಬ್ದ ಕೇಳಿಸಹತ್ತಿತು ತಾಯಿಯ ಪ್ರಾಣ ಹೊರಟಿದೆ ಎಂಬ ಅರಿವು ಬಿಂದುಮಾಧವನಿಗಾಯಿತು. ದೇವರನ್ನು ನೆನೆಯುತ್ತ ಚಮಚೆಯಿಂದ ನೀರು ಹಾಕಹತ್ತಿದ. ಕೊನೆಗೆ ಬೆಳಗಿನ ೩-೩೦ಕ್ಕೆ ತೊಳಲಾಡುವ ಜೀವ ಶರೀರ ದಿಂದ ಬಿಡುಗಡೆಯಾಯಿತು.

"ಅವ್ವಾ! ನನ್ನನ್ನು ತಬ್ಬಲಿ ಮಾಡಿ ಹೋದೆಯಾ! ಎಂದು ಕಣ್ಣೀರು ಹಾಕಿದ.

ಬೆಳಗಾದಂತೆ ಜನರು ಬಂದು ಮಾತನಾಡಿಸಹತ್ತಿದರು. ತಾಯಿಯ ಪ್ರಾಣ ಬೇಗನೆ ಹೋಗಲಿ ಎಂದು ಪ್ರಾರ್ಥಿಸುವ ಆತನು ಜನರು ಮಾತನಾಡಿಸಿದಂತೆ ತನ್ನ ಅಪಾರ ನಿಧಿಯನ್ನು ಕಳೆದು ಕೊಂಡೆನಲ್ಲ ಎಂದು ದುಃಖಿಸಿದ. ಶವ ಸಂಸ್ಕಾರ ಕಾಲದಲ್ಲಿ ಅಂತೂ ತಾನೂ ತಾಯಿಯ ಜೊತೆಗೆ ಅರ್ಪಿಸಿ ಕೊಳ್ಳಬೇಕೆಂದು ಅನಿಸಿತು. ಆದರೆ ಅವಳ ಆತ್ಮ ಶಾಂತಿ ಗಾಗಿ ತಾನು ಬದುಕಲೇ ಬೇಕು. ತಾನು ಸುಖಪಟ್ಟಿದ್ದನ್ನು ಅವಳು ಅಂತರಿಕ್ಷದಲ್ಲಿದ್ದುಕೊಂಡು ನೋಡುವಂತೆ ಮಾಡು ವದು ತನ್ನ ಕರ್ತವ್ಯವು. ಎಂದು ಸಮಾಧಾನ ಮಾಡಿಕೊಂಡ.

ತಾಯಿಯ ಆತ್ಮಕ್ಕೆ ಶಾಂತಿ ಸಿಗಲಿ!

ಓಂ ಶಾಂತಿಃ! ಶಾಂತಿಃ!! ಶಾಂತಿಃ!!!

---

# ಪತಿನಿರೀಕ್ಷೆ

ಲೇಖಕ : ರಾ. ಕುಲಕರ್ಣಿ ಧಾರವಾಡ

"ಮೇಲುಗಾಡಿ ಬಂದಿತೇ?"

ತಿರುಗಿ ನೋಡಿದೆ.

ಅವಳೋರ್ವ ಕೃಶದೇಹದ ಮಹಿಳೆ. ಅಷ್ಟು ಸುಂದರಿಯಲ್ಲದಿದ್ದರೂ ಅಸುಂದರಿಯಲ್ಲ. ಅಚ್ಚುಕಟ್ಟಾಗಿ ವೇಷ ಧರಿಸದಿದ್ದರೂ ಅವಳೊಬ್ಬ ಮುಗ್ಧೆಯಂತೆ ಕಾಣುತ್ತಿದ್ದಳು.

"ಇಲ್ಲ ತಾಯಿ, ಇಂದು ಎರಡೂವರೆ ತಾಸು ಲೇಟು ಇದೆ."

"ಅಯ್ಯೋ, ಎರಡೂವರೆ ತಾಸು ಲೇಟೇ? ಈ ಮೇಲುಗಾಡಿ ಎಂದೂ ವೇಳೆಗೆ ಸರಿಯಾಗಿ ಬರುವದಿಲ್ಲ."

"ಅದೇಕೆ ಇಂದಷ್ಟೇ ತಡವಾಗಿರಬಹುದು. ದಿನವೂ ಹೀಗಾಗಲಿಕ್ಕಿಲ್ಲ."

"ಏಕೆ ಆಗಲಾರದು. ನಾನು ೧೩ ವರ್ಷಗಳಿಂದ ನೋಡುತ್ತಿದ್ದೇನೆ. ಎಂದೂ ಸರಿಯಾಗಿ ಬರುತ್ತಿಲ್ಲ."

"ಹಾಂ! ೧೩ ವರ್ಷಗಳಿಂದ ನೋಡುತ್ತಿರುವಿರಾ?"

"ಹೌದು. ನನಗೆ ಸರಿಯಾಗಿ ನೆನಪಿದೆ. ಇಂದಿಗೆ ಸರಿಯಾಗಿ ೧೩ ವರ್ಷಗಳಾಗಿವೆ. ಒಂದು ದಿನವೂ ಸ್ಟೇಶನ್ನಿಗೆ ಬರುವದನ್ನು ತಪ್ಪಿಸಿಲ್ಲ."

"ಪ್ರತಿದಿನ! ಪ್ರತಿದಿನ ಏಕೆ ಬರುತ್ತಿರುವಿರಿ?"

ನನ್ನ ಪ್ರಶ್ನೆಗೆ ಉತ್ತರ ಬರುವ ಮೊದಲೇ "ಹಲೋ, ರಾಮು ನೀನು ಇಲ್ಲಿ?" ಎಂಬ ಸ್ವರ ಕೇಳಿಬಂದಿತು.

ನಾನು ತಿರುಗಿ ನೋಡಿದೆ. ನನ್ನ ಬಾಲ್ಯಮಿತ್ರ ಮನೋಹರ S. S. C. ಯ ವರೆಗೆ ಕೂಡಿಯೇ ಕಲಿತಿದ್ದೆವು. ಅನಂತರ ನಾನು ಬೆಂಗಳೂರಿನಲ್ಲಿ ಇನ್‌ಕಮ್ ಟ್ಯಾಕ್ಸ ಆಫೀಸಿನಲ್ಲಿದ್ದೆ. ಮನೋಹರ ತಮ್ಮ ತಂದೆಯ ಸಂಗಡ ಮುಂಬಯಿಗೆ ಹೋಗಿದ್ದರಿಂದ ನಮ್ಮಲ್ಲಿ ಪತ್ರವ್ಯವಹಾರವೂ ಬಂದಾಗಿತ್ತು. ಭೆಟ್ಟಿಯು ಇರಲಿಲ್ಲ "ಹಲೋ ಮನೋಹರ್, ಬೆಂಗಳೂರಿಗೆ ಹೊರಟಿದ್ದೇನೆ." ಎಂದು ಸಂತೋಷದಿಂದ ಅವನಕೈ ಕುಲಿಕಿದೆ.

"ಮತ್ತೇನು, ನೀನು ಇಲ್ಲಿ?"

"ನಾನು ಈಗ ಇಲ್ಲಿ ಅಸ್ಸಿಂಟ ಸ್ಟೇಶನ್ ಮಾಸ್ತರ ಇದ್ದೇನೆ."

"ಹೋ, ಹಾಗಾದರೆ ನೀನೇ Lucky."

"ಸರಿ, ಬಾ ಮನೆಗೆಹೋಗಿ ಚಹಾ ಕುಡಿದುಬರೋಣವಂತೆ. ಮೇಲು ಬಹಳ ಲೇಟು ಇದೆ."

"ಎಷ್ಟು ತಾಸು ಲೇಟು ಇದೆ ಮಾಸ್ತರರೆ?" ಆ ಮಹಿಳೆ ಪ್ರಶ್ನಿಸಿದಳು.

ಆಗ ಮನೋಹರ ಅವಳನ್ನೊಮ್ಮೆ ಕರುಣಾಪೂರಿತ ದೃಷ್ಟಿಯಿಂದ ನೋಡಿ ನುಡಿದ. "ಸರಳಾ, ನಿನ್ನೆ ಡಾವಣಗೆರೆಯ ಹತ್ತಿರ ಆ್ಯಕ್ಸಿಡೆಂಟ ಆಗಿದೆ. ಗಾಡಿ ನಾಳೆಬರಬಹುದು. ನೀನು ಆಗ ಬಾ." ನಾನು ಈ ಉತ್ತರದಿಂದ ಆಶ್ಚರ್ಯಚಕಿತನಾಗಿ ಬಾಯಿ ತೆಗೆಯುವವನಿದ್ದೆ. ಆದರೆ, ಮನೋಹರ ನನ್ನ ಕಡೆಗೆ ನೋಡಿ ಕಣ್ಣು ಮಿಟುಕಿಸಿ ಸುಮ್ಮನಿರುವಂತೆ ಸೂಚಿಸಿದ. ನನಗೆ ಮತ್ತಷ್ಟು ಆಶ್ಚರ್ಯವಾಯಿತು.

"ಆಗಲಿ ಮಾಸ್ತರರೇ, ನಾಳೆಯಾದರೂ ಗಾಡಿಯು ಬರುವದೋ ಇಲ್ಲವೋ? ನಾನು ದಿನಾಲು ಅಪಘಾತವಾದುದನ್ನೇ ಕೇಳುತ್ತಿರುವೆ. ಎಂದು ಈ ಅಪಘಾತಗಳು ನಿಂತು ಪ್ರಯಾಣಿಕರು ಸುಖವಾಗಿ ಬರುವರೋ? ಆಗಲಿ, ನಾಳೆ ಬರುವೆ ನಮಸ್ಕಾರ."

ಅವಳು ರೈಲ್ವೆ ಗೇಟು ದಾಟಿ ಹೊರಗೆ ಹೋಗುವದನ್ನು ನಾನೂ ಮನೋಹರನೂ ಮೂಕರಾಗಿ ನೋಡುತ್ತಿದ್ದೆವು.

"ರಾಮು," ಮನೋಹರ ನನ್ನನ್ನು ವಿಚಾರ ಸಮಾಧಿಯಿಂದ ಎಚ್ಚರಿಸುತ್ತ ನುಡಿದ. "ಏನು ವಿಚಾರಿಸುತ್ತಿರುವೆ."

"ಅದೇಕೆ ಮನೋಹರ್, ನೀನು ಈ ವರೆಗೆ ಗಾಡಿ ಬಿದ್ದಿದೆಯೆಂದು ಹೇಳಿದೆ?"

ಮನೋಹರ ಒಮ್ಮೆ ದೀರ್ಘವಾದ ನಿಟ್ಟುಸಿರು ಬಿಟ್ಟು ನುಡಿದ.

"ಅದೊಂದು ದೊಡ್ಡ ಕರುಣಾಪೂರಿತ ಕಥೆ, ರಾಮು. ಅವಳನ್ನು ನೋಡಿದವರಿಗೆ ಕಥೆ ಕೇಳದ ಹೊರತು ಸಮಾಧಾನವಾಗಲಾರದು. ಇರಲಿ, ಬಾ ಚಹಾ ಕುಡಿದ ನಂತರ ಆ ಕಥೆಯನ್ನು ಹೇಳುವೆ."

ನಾವೀರ್ವರೂ ಮನೆಗೆ ಹೊರಟೆವು.

“ನಾನೂ ಹೊಸದಾಗಿ ಸ್ಟೇಶನ್ನಿಗೆ ಬಂದಾಗ ನಿನ್ನಂತೆಯೇ ಅಚ್ಚರಿಗೊಂಡಿದ್ದೆ ರಾಮು.” ಎಂದು ಚಹದ ಕಪ್ಪನ್ನು ಕೆಳಗಿಡುತ್ತ ಮನೋಹರ ನುಡಿದ. “ಪ್ರಥಮ ಬಾರಿ ಅವಳು “ಮೇಲು ಗಾಡಿ ಬಂದೀತೆ?” ಎಂಬ ಪ್ರಶ್ನೆಗೆ ಸರಿಯಾದ ಉತ್ತರವನ್ನು ಕೊಟ್ಟೆ. ಮರುದಿನವೂ ಬಂದಳು. ಹೀಗೆಯೇ ಐದಾರು ದಿನಗಳು ಕಳೆದವು. ನನಗೆ ಇವಳು ದಿನಾಲು ಬರುವದನ್ನು ಕಂಡು ಅಚ್ಚರಿಯಾಯಿತು. ನಾನು ಪೋರ್ಟರ ಹಸನ್‌ನನ್ನು ಕೇಳಿದಾಗ ಅವನು ಅವಳಕಥೆಯನ್ನು ಹೇಳಿದ.”

ಆತ ಮೌನಿಯಾದ. ಬಹುಶಃ ಪೋರ್ಟರ ಹಸನ್ನ ಹೇಳಿದ ಕಥೆಯನ್ನು ಸ್ಮರಿಸಿಕೊಳ್ಳುತ್ತಿರಬಹುದು. ಅಕಸ್ಮಾತ್ ಕೇಳಿದ. “ಅವಳು ದಿನಾಲು ಏಕೆ ಬರುತ್ತಿದ್ದಾಳೆಂಬುದರ ಬಗೆಗೆ ಊಹಿಸಿದ್ದೀಯಾ ?”

ನಾನು ನಿರುತ್ತರನಾದೆ. ಇಂಥ ಪ್ರಸಂಗ ನಿರೀಕ್ಷಿಸಿರಲಿಲ್ಲವಾದ್ದರಿಂದ ಕೆಲ ಕ್ಷಣ ವಿಚಾರ ಮಾಡಿದೆ. ಏನೂ ಹೊಳೆಯಲಿಲ್ಲ. ಮನೋಹರನನ್ನೇ ನಾನು ನೇರವಾಗಿ ಪ್ರಶ್ನಿಸಿದೆ. “ನಾನು ಊಹಿಸಲಾರೆ. ದಯವಿಟ್ಟು ನೀನೇ ಹೇಳಿಬಿಡು.”

ಶೇಖರ ಒಂದು ಕ್ಷಣ ಸುಮ್ಮನಿದ್ದು ನಂತರ ಸಾವಧಾನವಾಗಿ ನುಡಿದ. “ಅವಳು ದಿನಾಲು ತನ್ನ ಪತಿಯನ್ನು ಸ್ವಾಗತಿಸುವದಕ್ಕಾಗಿ ಬರುತ್ತಾಳೆ.”

“ಹಾಂ! ಹಾಗಾದ್ರರೆ ೧೩ ವರ್ಷಗಳಿಂದೇಕೆ ನಿರೀಕ್ಷೆ ಮಾಡುತ್ತಿದ್ದಾಳೆ. ಅವಳ ಪತಿ ಬಂದೇ ಇಲ್ಲವೋ ಮನೋಹರ, ಇದೊಂದು ಜಟಿಲ ಕಥೆಯಾಗಿದೆಯಲ್ಲ.”

“ಅದೇ ರಾಮು, ಎಲ್ಲರೆದುರಿಗೂ ಬರುವ ಪ್ರಶ್ನೆ. ಅವಳ ಪತಿ ಈಗ ೧೩ ವರ್ಷಗಳ ಹಿಂದೆ ಫೌಜದಾರನಿದ್ದ. ಬಂಡುಗಾರರೊಡನೆ ಕಾದಾಡುವಾಗ ಆತ ಮರಣ ಹೊಂದಿದ. ಪೋಲೀಸಿನವರು ಇವಳಿಗೆ ತಿಳಿಸಿದರು. ಅಂದಿನಿಂದ ಅವಳು ಹುಚ್ಚಿಯಾಗಿಬಿಟ್ಟಿದ್ದಾಳೆ. ರಾಮು, ಅವಳ ಪತಿಪ್ರೇಮವನ್ನು ನೀನು ಅರಿಯೆ. ಊರು ಇಲ್ಲಿಂದ ೫–೬ ಮೈಲು ದೂರದಲ್ಲಿದೆ. ಕಲ್ಲು ಮುಳ್ಳಿನಿಂದ ತುಂಬಿದ ಕಾಡಿನ ದಾರಿ. ಅಲ್ಲಿಯೇ ಅವಳ ಒಂದು ಮುರುಕ ಗುಡಿಸಲು ಇದೆ. ಪೋಲೀಸಿನವರು ಅವಳ ಪತಿ ಡ್ಯೂಟಿಯ ಸಮಯದಲ್ಲಿಯೇ ಮರಣಹೊಂದಿದ್ದರಿಂದ ಅವಳಿಗೆ ಪರಿಹಾರ ಧನವನ್ನು ಕಳಿಸುತ್ತಾರೆ. ದಿನಾಲು ಮೇಲುಗಾಡಿಯ ವೇಳೆಗೆ ಬಂದು ಹೋಗುತ್ತಾಳೆ. ಪತಿ ಬರುತ್ತಾನೆ ಎಂದು ಊಟವನ್ನು ಸಹ ಮಾಡದೆ ಹಾದಿ ಕಾಯ್ದು ಅವನನ್ನು ಸ್ವಾಗತಿಸುವದಕ್ಕಾಗಿ ದಿನಾಲು ಇಲ್ಲಿ ಬರುತ್ತಾಳೆ. ಆದರೆ ಪತಿ ಬರದ್ದನ್ನು ಕಂಡು ನಿರಾಶೆಗೊಂಡು ಕಂಬನಿ ಸುರಿಸುತ್ತ ಮರಳಿ ಹೋಗುತ್ತಾಳೆ. ನಾಲ್ಕು ತುತ್ತು ಉಣ್ಣುತ್ತಾಳಂತೆ. ಸರಿಯಾದ ಊಟ ನಿದ್ರೆ ಇಲ್ಲದೆ ಕೃಶಳಾಗಿದ್ದಾಳೆ. ಹೀಗೆಯೇ ಇನ್ನು ಅವಳು ಬಹಳ ದಿನ ಬದುಕಲಾರಳು” ಎಂದು ಮನೋಹರ ನುಡಿಯುತ್ತ “ನೀನೆಂದಾದರೂ ಇಂಥ ಪತಿ ಪ್ರೇಮವನ್ನು ಕಂಡೆರುವೆಯಾ?” ಎಂದು ಪ್ರಶ್ನಿಸಿದೆ. ನಾನು ದಿಗ್ಭ್ರಾಂತನಾಗಿ ಏನೂ ಮಾತನಾಡುವದಕ್ಕೂ ತಿಳಿಯದೆ ಸುಮ್ಮನಾಗಿ ಕುಳಿತು ಬಿಟ್ಟೆ.

ಮನೋಹರ ಏನೋ ಮಾತನಾಡಬೇಕೆಂದು ಬಾಯಿ ತೆಗೆಯುವಷ್ಟರಲ್ಲಿ ಓರ್ವ ಓಡುತ್ತ ಬಂದನು. “ಯಾಕೆ ಹಸನ್” ಎಂದು ಮನೋಹರ ಪ್ರಶ್ನಿಸಿದ.” ಅನಾಹುತ. ಸರಳೆಗೆ ಹಾವು ಕಚ್ಚಿದೆ. ಕೆಟ್ಟ ಜಾತಿಯ ಹಾವು.” ನಮಗೆ ಮಿಂಚು ಹೊಡೆದಂತಾಗಿ ಅವನ ಸಂಗಡಲೇ ಓಡಿದೆವು. ಅರ್ಧ ಮೈಲಿನ ಹಾದಿಯ ನಂತರ ಜನ ಕೂಡಿತ್ತು. ನಾವು ಅಲ್ಲಿಗೆ ಹೋದೆವು. ಅಲ್ಲಿಯ ಜನರನ್ನು ಸರಿಸಿ ಮುಂದುವರೆದವು. ಅಲ್ಲಿಯೇ ಕಲ್ಲಿನ ಮೇಲೆ ಆ ಮುಗ್ಧೆ ಮಲಗಿಕೊಂಡಿದ್ದಾಳೆ. ಮುಖದ ಮೇಲೆ ಇನ್ನೂ ಕಾತರದ ಕಳೆಯಿದೆ. ಮೈ ಹಸುರಾಗಿದೆ. ಅವಳು ತನ್ನ ಪತಿಯ ಪಾದಾರವಿಂದವನ್ನು ಸೇರಿಬಿಟ್ಟಿದ್ದಳು.

ನನಗರಿಯದಂತೆಯೇ ನನ್ನ ಕಣ್ಣಿನಿಂದ ಎರಡು ಹನಿ ನೀರು ಉದುರಿದವು.

---

# ಪುಸ್ತಕ ಪ್ರಪಂಚ

ಬರೆದವರು: ಪಿ. ಎಮ್. ಕಾಮತ, ಕ್ಯಾನರಾ ಕಾಲೇಜ ಕುಮಟಾ

ಪುಸ್ತಕ ಪ್ರಪಂಚವೆಂದೊಡನೆ ನಮ್ಮ ಕಣ್ಮುಂದೆ ನಿಲ್ಲುವದು ಆ ಪುಸ್ತಕ ರಾಶಿ! ನಮಗೆ ಆನಂದ ಅನೇಕ ರೀತಿಯಿಂದ ದೊರಕುತ್ತಿದೆ. ಮಿತ್ರರೊಡನೆ ಕೂಡಿರುವಾಗ ಅವರೊಡನೆ ಕೂಡಿ ಮಾತಾಡುವದು ಆನಂದವಾದರೆ-ವಿಶಾಲವಾದ ಮೈದಾನದಲ್ಲಿ ಕುಳಿತು ನಮ್ಮ ದೃಷ್ಟಿ ಗೋಚರವಾಗುವವರೆಗಿನ ಸೃಷ್ಟಿ ಸೌಂಧರ್ಯವನ್ನು ಕಣ್ಣಾರೆ ಕಂಡು ಆನಂದ ಪಡಬಹುದು. ಅತಿಸುಲಭವಾಗಿ ಆನಂದ ಪಡುವದೆಂದರೆ ಅದೇ ಆ ಪುಸ್ತಕಗಳ ರಾಯನ್ನ ಓದಿ! ಎಷ್ಟು ಸುಂದರವಾಗಿ ಬರೆಯುತ್ತಾರಲ್ಲ! ವೆಂದು ಓದಿಯೂದ ಮೇಲೆ ಆ ಬರೆಹಗಾರನ ಬಗ್ಗೆ ಒಳ್ಳೆಯ ಅಭಿಪ್ರಾಯ ವ್ಯಕ್ತಪಡಿಸುತ್ತೇವೆ.

ನಮ್ಮ ಸುತ್ತಮುತ್ತಲೂ ಅಸಂಖ್ಯಾತ ಪುಸ್ತಕಗಳ ರಾಶಿಯೇ ತುಂಬಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಆದರೆ ಅವೆಲ್ಲವೂ ಎಲ್ಲರಿಂದಲೂ ಪುರಸ್ಕರಿಸಲ್ಪಡುತ್ತವೆಂಬ ನಿರ್ಧಾರವಿಲ್ಲ. ಒಬ್ಬನು ಲಲಿತಸಾಹಿತ್ಯವನ್ನು ಮೆಚ್ಚುತ್ತಿದ್ದರೆ ಇನ್ನೊಬ್ಬನು ಅವು ಅಷ್ಟಚೆನ್ನಾಗಿರುವದಿಲ್ಲ! ವೇಶ್ಯೆಯರ ಜೀವನವನ್ನು ಕೊಡಬಲ್ಲ ಸಾಹಿತ್ಯವೇ ಹೆಚ್ಚು ಆದರಣೀಯ. ಪ್ರೇಮಿಗಳಿಬ್ಬರ ಚಿತ್ರಣಕೊಡುವ ಕಾದಂಬರಿಯು ಹೆಚ್ಚು ಪ್ರಿಯವಾಗಿರುತ್ತದೆ ಎಂದು ಇನ್ನೊಬ್ಬನು ಹೇಳುತ್ತಾನೆ. ಓದುಗರ ಅಭಿರುಚಿ ಭಿನ್ನ ಭಿನ್ನವಾದಂತೆ ಬರೆಹಗಾರರು ಅವರ ಮೆಚ್ಚುಗೆಇದ್ದಂಥವಿಷಯುಗಳನ್ನು ಬರೆಯುತ್ತಾರೆ.

ಉತ್ತಮ ಕಾದಂಬರಿಕಾರರಲ್ಲೊಬ್ಬರಾದ ಅನಕೃಷ್ಣರಾಯರು ಇಂದು ಎಷ್ಟ ಕಾದಂಬರಿಗಳನ್ನು ಬರೆದಿಲ್ಲ! ಅವುಗಳಲ್ಲಿ ಎಷ್ಟುಕಾದಂಬರಿಗಳಲ್ಲಿ ಕೇವಲ ವೇಶ್ಯೆಯರ ಜೀವನ ಎರಡು ಪ್ರೇಮಿಗಳ ಚಿತ್ರಣ ಕಾದಂಬರಿಯುದ್ದಕ್ಕೂ ಬೆಳೆಸಿ ಓದುಗರ ಕುತೊಹಲತೆಯನ್ನು ಕೆರಳಿಸಿ ಮುಂದೇನು ಅವರ ಪಾಡು ಎಂಬದನ್ನು ತೋರಿಸಿ ಮುಕ್ತಯ ಗೊಳಿಸುತ್ತಾರೆ. ಆದರಂತೆ "ಪತ್ತೇದಾರಿ ಕಾದಂಬರಿಗಳು ಅಷ್ಟೇ. ಪತ್ತೆದಾರನ ಪರಾಜಯ" ಎಂಬ ಪುಕ್ತಕ ಆರಿಸಿಕೊಳ್ಳಿ. ಓದಲಾರಂಭಿಸಿದಾಗಲೇ ನಮ್ಮ ಕುತುಹಲ ಕೆದರಿ ತುಟ್ಟತುದಿಯನ್ನು ಮುಟ್ಟುವದು. ಒಂದರ ಹಿಂದೇ ಅನೇಕ ಕೊಲೆಗಳು ಸಂಭವಿಸುವವು. ಎಲ್ಲವೂ ಧನದಾಶೆಗಾಗಿಯೇ! ಆ ಮೇಲೆ ಎಲ್ಲರೂ ದೊರಕುವರು. ಪತ್ತೇದಾರನನ್ನು ಪರಾಜಯಗೊಳಿಸಿದಂತೆ ಮಾಡಿ ಕಾದಂಬರಿಯ ಕೊನೆಯನ್ನು ಮುಟ್ಟಿದೆ" ಎಷ್ಟು ಸ್ವಾರಸ್ಯಮಯವಾಗಿದೆ? ನಿಜವಾಗಿಯು ಜ್ಞಾನವನ್ನು ದೊರಕಿಸಿಕೊಳ್ಳುವದಕ್ಕೆ ಕೇವಲ ಪ್ರಯೋಗ ಒಂದೇಯಾಗಿದ್ದರೆ ಎಲ್ಲವೂ ಅಸಾಧ್ಯವಾಗುತ್ತಿತ್ತು. ಈ ಪುಸ್ತಕಗಳನ್ನು ಯಾರು ಕೊಳ್ಳುತ್ತಿದ್ದಿಲ್ಲ. ನಾವು ಅನೇಕ ತರಹದ ಜ್ಞಾನ ತೃಷೆಯನ್ನು ಈ ಪುಸ್ತಕ ಪ್ರಪಂಚದಿಂದಲೇ ಹಿಂಗಿಸಿಕೊಳ್ಳಬಹುದು.

ಯಾರೊಬ್ಬನಿಗೆ ಗೆಳೆಯರು ಯಾರೂ ಇಲ್ಲವೆಂದರೆ ಪುಸ್ತಕ ಗೆಳೆಯನೊಬ್ಬನಿಷ್ಟೇ ಇರುತ್ತಾನೆ. ದೂರ ಪ್ರಯಾಣ ಮಾಡುವಾಗ ದಾರಿಯುದ್ದಕ್ಕೂ ನಮ್ಮ ಸಂಗಾತಿ ಎಂದು ಹತ್ತರದ ಅಂಗಡಿಯಿಂದ ಒಂದು ಕಾದಂಬರಿಯನ್ನು ಕೊಂಡುಕೊಳ್ಳುತ್ತೇವೆ. ಎಷ್ಟು ಸುಲಭವಾಗಿ ನಮ್ಮ ಸಂಗಾತಿಗಳು ದೊರಕುತ್ತಾರಲ್ಲ !!

ಪುಸ್ತಕ ಪ್ರಪಂಚದ ಮಹತ್ವವೇನೆಂಬುದು ಯಾರಿಂದಲೂ ಅಳೆಯುವದು ಸಾಧ್ಯವಿಲ್ಲ. ಹೇಗೆ ಆಕಾಶ ಅಳೆಯಲು ಯಾವ ಅಳತೆಗೋಲು ನಮಗೆ ದೊರಕುವದಿಲ್ಲವೊ ಅದರಂತೆ ನಮ್ಮೀ ಸಾಹಿತ್ಯ. ಈ ಪುಸ್ತಕಗಳ ರಾಶಿ ! ಜ್ಞಾನ ತೃಷೆಯನ್ನು ಹಿಂಗಿಸಲು ಸಿದ್ಧವಾಗಿರುವ ಜ್ಞಾನಭಂಡಾರ; ಅದೇ ಆ ಪುಸ್ತಕ ಪ್ರಪಂಚ.

---

# ಕವಿವರ್ಯ ರವೀಂದ್ರನಾಥರ

## ಗೀತಾಂಜಲಿಯ ಕೆಲವು ವಚನಗಳ ಅನುವಾದ.

೨೨) ಶ್ರಾವಣ ಮಳೆಯಲ್ಲಿ ಕರಿಮೋಡದ ಕತ್ತಲೆಯಲ್ಲಿ ಎಲ್ಲರ ಕಣ್ಣು ತಪ್ಪಿಸಿ, ಕಾಲು ಸಪ್ಪಳ ಮಾಡದೆ, ರಾತ್ರಿಯಂತೆ ಸದ್ದಿಲ್ಲದೆ ನೀನು ನಡೆದಿರುವಿ.

ಈ ದಿನ ಪೂರ್ವದಿಂದ ಬರುವ ವಾಯುವು ಅಬ್ಬರದಿಂದ ಮೇಲಿಂದ ಮೇಲೆ ಒಂದೇಸವನೆ ಒದರುತ್ತಿದ್ದಾಗ್ಯೂ, ಉಷಾದೇವಿಯು ಇನ್ನೂ ಕಣ್ಣು ತೆರೆದಿಲ್ಲ. ಮತ್ತು ಯಾವಾಗಲೂ ಜಾಗೃತವಿರುವ ನೀಲವರ್ಣದ ಆಕಾಶವು ದಟ್ಟವಾದ ಉಸುಕಿನಲ್ಲಿ ಅಡಗಿಹೋಗಿದೆ.

ಅರಣ್ಯವೆಲ್ಲವೂ ನಿಶ್ಶಬ್ದವಾಗಿರುವದು. ಮತ್ತು ಎಲ್ಲ ಮನೆಗಳ ಬಾಗಿಲುಗಳು ಮುಚ್ಚಿರುವವು. ಈ ಸದ್ದಿಲ್ಲದ ಓಣಿಯಲ್ಲಿ ನೀನೊಬ್ಬನೇ ನಡೆದಿರುವಿ. ಎಲೈ ನನ್ನ ಒಬ್ಬನೇ ಒಬ್ಬನಾದ ಗೆಳೆಯನೇ, ಪ್ರಿಯತಮನೇ, ನನ್ನ ಮನೆಯ ಬಾಗಿಲುಗಳು ತೆರೆದಿರುವವು. ದಾಟಿ ಮುಂದಕ್ಕೆ ಹೋಗಬೇಡ. ಕನಸು ಕಂಡಂತೆ ಮಾಡಬೇಡ.

೨೩) ಎಲೈ ಗೆಳೆಯನೇ, ಈ ಬಿರುಗಾಳಿಯ ರಾತ್ರಿಯಲ್ಲಿ ಪ್ರಿಯಕರರ ಭೆಟ್ಟಿಗಾಗಿ ಹೊರಟಿರುವೆಯಾ? ಆಕಾಶವು ನಿರಾಶೆಯಿಂದ ನರಳುತ್ತಿರುವಂತೆ ಅಬ್ಬರ ಮಾಡುತ್ತಿರುವದು.

ನನಗೆ ಈ ರಾತ್ರಿ ನಿದ್ರೆ ಇಲ್ಲ. ಎಲೈ ಗೆಳೆಯನೇ, ಮೇಲಿಂದ ಮೇಲೆ ಮನೆಯ ಬಾಗಿಲು ತೆಗೆದು ಹೊರಗೆ ಕತ್ತಲೆಯಲ್ಲಿ ಹಣಕಿಹಾಕಿ ನೋಡುತ್ತೇನೆ.

ನನಗೇನೂ ಕಾಣಿಸವಲ್ಲದು. ನೀನು ಯಾವ ಕಡೆಯಿಂದ ಬರುತ್ತೀಯೋ ನಾನರಿಯೆ. ಗೆಳೆಯನೇ, ನನಗೋಸ್ಕರ ನೀನು ಮಸಿಯಂತೆ ಕಪ್ಪಗೆ ಹರಿಯುವ ನದಿಯ ಮಾರ್ಗದಿಂದ ದೂರ ಮಸಕಾಗಿ ಕಾಣುವ ದಂಡೆಯಿಂದ ಹೊರಟಿರುವಿಯಾ? ಅಥವಾ ಯಾವ ಘೋರಾರಣ್ಯದಲ್ಲಿ ಹಾಯ್ದು ಎಷ್ಟು ದೂರ ದೂರದಿಂದ ಬರಬೇಕಾಗಿದೆ? ಅಥವಾ ಮತ್ಯಾವ ಅಂಕುಡೊಂಕು ಹಾದಿಯಿಂದ ಹಾಯ್ದು ಈ ಕಾರ್ಗತ್ತಲೆಯಲ್ಲಿ ಬರುತ್ತಿರುವಿ?

೨೪) ದಿವಸವು ಮುಗಿದಿದ್ದರೆ, ಪಕ್ಷಿಗಳು ಹಾಡುವದನ್ನು ಬಿಟ್ಟಿದ್ದರೆ, ಗಾಳಿಯು ಬೀಸಿ ದಣಿದು ಸ್ತಬ್ಧವಾಗಿದ್ದರೆ ಯಾವ ಪ್ರಕಾರ ನೀನು ಪೃಥ್ವಿಯನ್ನು ನಿದ್ರೆಯ ಹೊದಿಕೆಯಿಂದ ಮುಚ್ಚುವಿಯೋ ಮತ್ತು ಕಂದಿದ ಕಮಲದ ಪಕಳಿಗಳನ್ನು ಸಂಜೆಯಾದೊಡನೆ ಹೇಗೆ ಜೋಕೆಯಿಂದ ಮುಚ್ಚುವಿಯೋ ಹಾಗೆಯೇ ಈ ದಟ್ಟವಾದ ಕತ್ತಲೆಯ ಮುಸುಕನ್ನು ನನಗೆ ಹಾಕಿಬಿಡು.

ಜಲಪರ್ಯಟನವು ಮುಗಿಯುವ ಮುಂಚೆಯೇ ಅನ್ನ ಸಾಮುಗ್ರಿಗಳು ತೀರಿಹೋದಂಥಾ, ಮೈಮೇಲಿನ ಬಟ್ಟೆಗಳು ಹೊಲಸಾಗಿ ಹರಿದುಹೋದಂಥಾ ಮತ್ತು ಶಕ್ತಿಯು ಕುಂದಿದಂಥಾ ಈ ಪ್ರಯಾಣಿಕನ ನಾಚಿಕೆಯನ್ನೂ, ಬಡತನವನ್ನೂ ದೂರ ಮಾಡು ಮತ್ತು ಕಾರುಣ್ಯದಿಂದ ರಾತ್ರಿಯ ಮುಸುಕಿನಲ್ಲಿ ಹೂವಿಗೆ ಪುನರ್ಜೀವವನ್ನು ಕೊಡುವಂತೆ ಇವನಿಗೂ ಹೊಸ ಜೀವನವನ್ನು ದಯಪಾಲಿಸು.

೨೫) ದುಡಿದು ದಣಿದು ರಾತ್ರಿಯಲ್ಲಿ ಹೆಚ್ಚಿನ ಹವ್ಯಾಸಕ್ಕೆ ಹೋಗದೆ ನಿನ್ನ ಮೇಲೇ ವಿಶ್ವಾಸವಿಟ್ಟು ಸ್ವಸ್ಥವಾಗಿ ನಿದ್ರೆಮಾಡುವದೇ ಒಳ್ಳೆಯದು. ಉತ್ಸಾಹವು ಕಡಿಮೆಯಾಗುತ್ತಾ ನಡೆದಾಗ್ಗೆ ಮನಸ್ಸನ್ನು ಒತ್ತಾಯದಿಂದ ಹೇಗಾದರೂ ಮಾಡಿ ನಿನ್ನ ಪೂಜೆಗೆ ಹಚ್ಚುವದು ಬೇಡ.

ಹಗಲೆಲ್ಲ ದುಡಿದು ದಣಿದ ಕಣ್ಣಿಗೆ ರಾತ್ರಿಯ ಹೊದಿಕೆಯನ್ನು ಹೊದಿಸಿ, ಎದ್ದುಕೂಡಲೇ ಹೊಸ ಆನಂದದಿಂದ ನೋಡುವ ಶಕ್ತಿಯನ್ನು ಕೊಡುವವನು ನೀನೇ.

೨೬) ಅವನು ಬಂದು ನನ್ನ ಹತ್ತಿರ ಕುಳಿತರೂ ನನಗೆ ಎಚ್ಚರವಾಗಲಿಲ್ಲ. ಅಯ್ಯೋ ದುರ್ದೈವಿಯೇ! ಇದೆಂಥ ಘೋರವಾದ ನಿದ್ರೆ ಇದು?

ಅವನು ರಾತ್ರಿಯು ಸ್ತಬ್ಧವಾಗಿದ್ದಾಗ ಬಂದನು. ಮತ್ತು ಅವನ ಕೈಯ್ಯಲ್ಲಿ ವೀಣೆ ಇತ್ತು. ಕನಸಿನಲ್ಲೆಲ್ಲಾ ಅವನ ಮಂಜುಳಗಾನದ ಧ್ವನಿಯೇ ತುಂಬಿಹೋಗಿತ್ತು.

ಅಯ್ಯೋ. ನನ್ನ ರಾತ್ರಿಗಳೆಲ್ಲ ಹೀಗೆಕೆ ವ್ಯರ್ಥವಾಗಿ ಹೋಗುವವು? ನಾನು ನಿದ್ರೆಯಲ್ಲಿದ್ದಾಗ್ಗೆ ಅವನ ಶ್ವಾಸವು ನನಗೆ ತಗಲುತ್ತಿದ್ದಾಗ್ಯೂ ಅವನು ನನ್ನ ದೃಷ್ಟಿಗೆ ಎಂದೂ ಯಾಕೆ ಕಾಣುವದಿಲ್ಲವೋ?

೨೭) ದೀಪವೇ, ದೀಪವೆಲ್ಲಿದೆ? ಕಾಮದಹನದ ಉರಿಯಿಂದ ದೀಪವನ್ನು ಹಚ್ಚಿಕೊ! ಪಮೆ ಇದೆ. ಆದರೆ ಅದರೊಳಗೆ ಉರಿಯುವ ಬತ್ತಿ ಇಲ್ಲ. ಅಯ್ಯೋ ಹೃದಯವೇ, ಇದೇ ನಿನ್ನ ಗತಿಯೇ? ಇದಕ್ಕಿಂತ ಸಾವೇ ಲೇಸಲ್ಲವೇ ನಿನಗೆ?

ದುಃಖಾತಿರೇಕವೇ ನಿನ್ನ ಬಾಗಿಲಿಗೆ ಬಂದು "ನಿನೊಡೆಯನು ಎಚ್ಚತ್ತಿರುವನು, ಮತ್ತು ನಿನ್ನನ್ನು ರಾತ್ರಿಯ ಕತ್ತಲೆಯಲ್ಲಿ ತನ್ನ ಪ್ರೇಮಮಂದಿರಕ್ಕೆ ಕರೆದಿರುವನು" ಎಂದು ಹೇಳುವದು ನೋಡು.

ಆಕಾಶವು ಮೋಡಗಳಿಂದ ಮುಸುಕಿರುವದು ಮತ್ತು ಮಳೆಯು ಒಂದೇ ಸಮನೆ ಸುರಿಯುತ್ತಿರುವದು.

ನನ್ನಲ್ಲಿ ಇದು ಯಾತರ ಸುಳಿದಾಟವೋ ನಾನರಿಯೆ. ಇದರ ಅರ್ಥವೂ ತಿಳಿದಿಲ್ಲ.

ಒಂದು ನಿಮಿಷದ ಮಿಂಚಿನ ಹೊಳಪಿನಿಂದ ಕತ್ತಲೆಯು ಹೆಚ್ಚಾಗಿ ಕಣ್ಣಿಗೆ ಏನೂ ಕಾಣದಹಾಗಾಗುತ್ತದೆ. ಮತ್ತು ನನ್ನ ಹೃದಯವು ರಾತ್ರಿಯ ಗಾನವು ನನ್ನನ್ನು ಕರೆಯುವಲ್ಲಿಗೆ ಹೋಗಲಿಕ್ಕೆ ಕತ್ತಲೆಯಲ್ಲಿಯೇ ದಾರಿಯನ್ನು ಹುಡುಕುತ್ತದೆ.

ದೀಪವೇ, ದೀಪವೆಲ್ಲಿದೆ? ಕಾಮದಹನದ ಉರಿಯಲ್ಲಿ ದೀಪವನ್ನು ಹಚ್ಚಿಕೊ.

ಆಕಾಶದಲ್ಲಿ ಗುಡುಗುತ್ತದೆ ಮತ್ತು ಗಾಳಿಯು ಅಬ್ಬರದಿಂದಲೂ ಜೋರಿನಿಂದಲೂ ಬೀಸಲಾರಂಭಿಸಿದೆ. ರಾತ್ರಿಯು ಕರ್‍ರನ್ನ ಕಲ್ಲಿನಂತೆ ಅಂಧಃಕಾರಮಯವಾಗಿದೆ. ಕತ್ತಲೆಯಲ್ಲಿ ವ್ಯರ್ಥವಾಗಿ ವೇಳೆ ಕಳೆಯಬೇಡ. ನಿನ್ನ ಜೀವನವನ್ನು ಅರ್ಪಿಸಿ ಭಕ್ತಿ ದೀಪವನ್ನು ಹಚ್ಚಿಕೋ.

೨೮) ಬಂಧನಗಳು ಸಹಜವಾಗಿ ಹೋಗುವದಿಲ್ಲ. ಆದರೆ ಅವನ್ನು ಮುರಿಯಲಿಕ್ಕೆ ಪ್ರಯತ್ನ ಮಾಡುವದೂ ಮನಸ್ಸಿಗೆ ದುಃಖವೆನಿಸುತ್ತದೆ.

ನನಗೆ ಬೇಕಾದದ್ದು ಮೋಕ್ಷವು ಮಾತ್ರ, ಆದರೆ ಅದನ್ನು ಆಶೆಮಾಡಲು ನನಗೆ ನಾಚಿಕೆ ಬರುತ್ತದೆ.

ನಿನ್ನಲ್ಲಿ ಅಮೌಲ್ಯವಾದ ದ್ರವ್ಯರಾಶಿಯು ಇದೆ ಎಂಬುದನ್ನು ನಾನು ಪೂರಾ ಬಲ್ಲೆ. ಮತ್ತು ನೀನು ನನಗೆ ಪರಮ ಆಪ್ತನೆಂಬದೂ ನನಗೆ ಗೊತ್ತಿದೆ. ಆದರೂ ನನ್ನ ಕೋಣೆಯೊಳಗಿನ ತಗಡಿನ ಪಾತ್ರೆಯನ್ನು ಹೊರಗೆ ಒಗೆಯಲಿಕ್ಕೆ ನನಗೆ ಮನಸ್ಸಾಗುವದಿಲ್ಲ.

ನನ್ನ ಮೇಲಿನ ಆಚ್ಛಾದನವು ಮಣ್ಣಿನದೂ ಮರಣದ್ದೂ ಇದೆ ಅದು ನನ್ನ ವೈರಿ ಆದರೂ ಅದನ್ನು ನಾನು ಪ್ರೀತಿಯಿಂದ ಎದೆಗೆ ಅವಚಿಕೊಳ್ಳುತ್ತೇನೆ.

ನನ್ನ ಋಣಗಳು ಬಹಳ, ನನ್ನಲ್ಲಿಯ ದೋಷಗಳೂ ದೊಡ್ಡವು. ಅಂತರಂಗದಲ್ಲಿ ಪಾಪರಾಶಿಯು ತುಂಬಿದೆ. ಆದಾಗ್ಯೂ ನನ್ನ ಹಿತದ ಬಗ್ಗೆ ಕೇಳಲು ಬಂದಾಗ್ಗೆ ನಾನು ಬೇಡಿದ್ದನ್ನು ಎಲ್ಲಿ ಕೊಟ್ಟುಬಿಡುವಿಯೋ ಎಂದು ಹೆದರಿ ನಡುಗುತ್ತೇನೆ.

೨೯) ನನ್ನ ಈ ಹೆಸರನ್ನು ಯಾರಿಗೆ ಇಟ್ಟಿರುವದೋ ಅವನು ಈ ಕತ್ತಲೆಯ ಕೋಣೆಯಲ್ಲಿ ಅಳುತ್ತಾ ಕುಳಿತಿರುವನು. ನಾನು ಈ ಗೋಡೆಯನ್ನು ಅವನ ಸುತ್ತುಮುತ್ತಲು ಕಟ್ಟುವದರಲ್ಲಿಯೇ ಯಾವಾಗಲೂ ತೊಡಗಿರುತ್ತೇನೆ. ಮತ್ತು ಈ ಗೋಡೆಯು ಮೇಲಕ್ಕೆ ಹೋದಹಾಗೆಲ್ಲಾ ಅದರ ಕರಿ ನೆರಳಲ್ಲಿ ನನ್ನ ನಿಜಸ್ವರೂಪವು ಮರೆಯಾಗಿ ಕಾಣದಂತಾಗುತ್ತದೆ.

ಈ ದೊಡ್ಡ ಗೋಡೆಯಲ್ಲಿ ನನಗೆ ಅಭಿಮಾನ ಬಹಳ. ಅದರಲ್ಲಿ ಒಂದು ಸಣ್ಣ ತೂತುಸಹ ಉಳಿಯಬಾರದೆಂದು ನಾನು ಅದಕ್ಕೆ ಮಣ್ಣಿನಿಂದಲೂ, ಗಚ್ಚಿನಿಂದಲೂ ಗಿಲಾಯಿ ಮಾಡುತ್ತೇನೆ. ಮತ್ತು ಅದರ ಬಗ್ಗೆ ನಾನು ಹೇಗೆ ಹೇಗೆ ಹೆಚ್ಚು ಹೆಚ್ಚು ಲಕ್ಷ ತೆಗೆದುಕೊಳ್ಳುತ್ತೇನೋ ಹಾಗೆ ಹಾಗೆ ನನ್ನ ನಿಜಸ್ವರೂಪವು ನನಗೆ ಮರೆಯಾಗುತ್ತ ಹೋಗುತ್ತದೆ.

---



# ಕುಂದು

ಬರೆದವರು: **ಪ್ರಭಾಕರ ಬೆಳಗಾವಿ.**

—ಚಂದ್ರ ಹೊಳೆಯುತ್ತಿದ್ದ.
—ತಾರೆಗಳು ನಗುತ್ತಿದ್ದವು.
—ಗಿಡಗಳು ಅಲಗಾಡುತ್ತಿದ್ದವು.

ಎಲ್ಲ ಕಡೆಗೆ ದೃಷ್ಟಿ ಬೀರುತ್ತ ಅವನು ನಡೆದಿದ್ದ. ಅವನೊಬ್ಬ ವೇದಾಂತಿ. ಸಕಲ ವಿದ್ಯೆಗಳು ಅವನ ಹಸ್ತಗತವಾಗಿದ್ದವು. ಎಲ್ಲ ಕಲೆಗಳಲ್ಲಿ ಅವನಿಗೆ ಪಾಂಡಿತ್ಯ ಸಿಕ್ಕಿತ್ತು. ತಾನೋರ್ವ ಪರಿಪೂರ್ಣ ವ್ಯಕ್ತಿ ಎಂಬ ಕಲ್ಪನೆ ಅವನಿಗೆ ಬಂದಿತ್ತು. ಆ ಭ್ರಮೆಗೆ ಸಿಲುಕಿ ಅವನು ಸಾಮಾನ್ಯ ಜನರನ್ನು ಬಿಟ್ಟು ದೂರ ಬಹು ದೂರ ಹೊರಟಿದ್ದ. ತಾನು ಕುಂದು ಇರದೆ ಇದ್ದ ವ್ಯಕ್ತಿ ಎಂಬ ಹೆಮ್ಮೆ ಅವನ ಹೃದಯವನ್ನು ಹಿಗ್ಗಿಸುತ್ತಿತ್ತು.

ಕಾಲುಗಳು ಬಹು ವೇಗದಿಂದ ಪಥಕ್ರಮಣ ಮಾಡುತ್ತಿದ್ದವು.

ಒಮ್ಮೆಲೇ ಅವನ ಕಾಲಿಗೆ ಮುಳ್ಳೊಂದು ನಟ್ಟಿತು.

ಎಲ್ಲಿಲ್ಲದ ಸಿಟ್ಟು ಬಂದಿತು ಅವನಿಗೆ. ನಿಂತುಕೊಂಡೇ ಮುಳ್ಳನ್ನು ತೆಗೆದು ಒಗೆದ.

"ಥೂ ಪಾಪಿ ಕಂಟಕ...."

ಬಯ್ದು ಮುನ್ನಡೆದ.

ಯಾರೋ ಹಿಂದೆ ಕೇಕೆ ಹಾಕಿ ನಕ್ಕಂತಾಯಿತು.

ತಿರುಗಿ ನೋಡಿದ.

ಮುಳ್ಳು ನಗುತ್ತಿತ್ತು.

ಅವನಿಗೆ ಆಶ್ಚರ್ಯವಾಯಿತು.

"....ಮೂರ್ಖ! ನಿನ್ನನ್ನು ಪರಿಪೂರ್ಣ ವ್ಯಕ್ತಿ ಎಂದು ತಿಳಿದಿರುವಿಯಾ? ಈ ವಿಶ್ವದಲ್ಲಿ ಪರಿಪೂರ್ಣ ವ್ಯಕ್ತಿ ಯಾರೂ ಇಲ್ಲ. ಸೃಷ್ಟಿಯ ಪ್ರತಿಯೊಂದು ವಸ್ತುವಿನಲ್ಲಿ ಕುಂದು ಇದೆ. ಹೊಳೆಯುತ್ತಿರುವ ಚಂದ್ರನಲ್ಲಿ ಕಲೆ ಇದೆ. ತಾರೆಗಳು ಮಿನುಗುತ್ತವೆ. ಗಿಡಗಳು ಅಲಗಾಡುತ್ತವೆ. ನಾನು ಚುಚ್ಚುತ್ತೇನೆ. ಪ್ರತಿಯೊಂದು ವಸ್ತುವಿನಲ್ಲಿ ಕುಂದು ಇದೆ!........ಜಗತ್ತಿಗೆ ಹಿಂತಿರಗು–! ಕುಂದಿಲ್ಲದ ವಸ್ತುವಿಲ್ಲ–!"

ಮುಳ್ಳಿನ ಹೂ ಮುಖದಿಂದ ಬರುವ ನುಡಿಗಳನ್ನು ಕೇಳುತ್ತ ವೇದಾಂತಿಗೆ ಮೂರ್ಛೆ ಬರುವಂತಾಯಿತು.

"ಕುಂದಿಲ್ಲದ ವಸ್ತುವಿಲ್ಲ—!"

ಅವನ ತಲೆಯಲ್ಲಿ ಅದೇ ಧ್ವನಿ ಪ್ರತಿಧ್ವನಿಸತೊಡಗಿತು!!

---

# ಜೀವಂತ ಸಾವು

[ಎಸ್. ಜಿ. ಉಳಿಗೆರೆ, ತಲನಾಟ.]

ಶಾರದೆಯ ಕೋಣೆಯಲಿ ಮಿಣುಮಿಣುಕು ದೀಪ!
ಜಗವ ತಮ ತುಂಬಿ, ಹಾಡುತಿದೆ ನೀರವದ ಗೀತ!!
"ಹಾಂ, ಪೋದೆಯಾ! ಬಾಳಸೂರೆಗೈದೆಯಾ!!
ದೇಹಮನಗಳೊಂದಾದ, ಪ್ರೇಮದೇಗುಲದಿಂದ
ನನ್ನಗಲಿ ನೀನತ್ತಲಾದೆಯಾ"!
ಕೇಳಿ ಬರುತಿದೆ ಎದೆ ಕೊರೆವ ಆರ್ತನಾದ
ಜಗವು ಸುಖನಿದ್ರೆಯಲಿ ಪವಡಿಸಿದೆ ಶಾರದೆಗೆ?
ನಿದ್ರೆಯೇ ಇಲ್ಲ! ಅದು ಬರುವುದೂ ಇಲ್ಲ.
ಅವಳ ಬಯಕೆಯು ನಿದ್ರೆ ಎಚ್ಚರಾಗದ ನಿದ್ರೆ!
ಸಾ........ವು! ಮರಣ!!
ಊಹುಂ! ಅವಳಿಗಿಲ್ಲ ಆ ಮರಣ
ಆಗಬೇಕು ಅವಳ ಮರಣ! ಜೀವ
ವಿದ್ದಂತೆ ದಹನ! ಸಹಗಮನ!!
ನಸುಬೆಳಕು ಹರೆಯುತಿದೆ, ಅಪಾರ
ತಾರೆಗಳು ಮರಳಿ ಮನೆ ಸೇರುತಿವೆ
ಆ ದಿಶೆಯಲಿನ್ನೂ ಆ ಬೆಳ್ಳಿ ಬೆಳಗುತಿದೆ
ಸೂ! ಸೂ! ತಂಗಾಳಿ ಸೂಸಿ ಬರುತಲಿದೆ
ಆದರೇಂ....? ಶಾರದೆಗೆ ಶಾಂತಿ ಇಲ್ಲ! ಸಹನೆ ಇಲ್ಲ!!
ಅಮವೆ ಮಧ್ಯರಾತ್ರಿ ಅವಳ ಪತಿ ನಡೆದಿದ್ದ
ಪರಲೋಕ ಸಾರಿ, ಈ ಲೋಕ ದೂರಿ
ಶಾರದೆಯ ಮನದಲ್ಲಿ ಗಾಢಾಂಧಕಾರ ಬೀರಿ!
ಆ ಶಾಸ್ತ್ರಕಾರ....? ಅವಗಿಲ್ಲಹೃದಯ
ಗಂಡಿಗೊಂದು ಶಾಸ್ತ್ರ, ಹೆಣ್ಣಿಗೊಂದು ಶಾಸ್ತ್ರ
ಗಂಡಿಗುಪಕಾರ, ಹೆಣ್ಣಿಗಪಕಾರ!
"ಗಂಡ ಸತ್ತರೆ ಮಡದಿ ಆ ಚಿತೆಯ ಹಾರಿ
ಸಾಯಬೇಕು ಅವನೊಡನೆ ಬೇಯಬೇಕು"
ಇದವನ ಉಪದೇಶ? ಉಪದೇಶ ಆದರೆ!
ಮಡದಿ ಸತ್ತರೆ....? ಊಹುಂ, ಪುರುಷನಿಗೆ
ಸಹಗಮನವಿಲ್ಲ!
ಬೇರೊಂದು ಮದುವೆ ಆಗಬಹುದು, ಕೂಡಾಡ
ಬಹುದು
ಅದು ಪಾಪವಲ್ಲ, ಅದರಲ್ಲಿ ನರಕವಿಲ್ಲ!
ಇದವನ ಶಾಸ್ತ್ರ! ಭೇದಶಾಸ್ತ್ರ!!

ಆಗುತಿದೆ ಶಾರದೆಗೆ ಶೃಂಗಾರ
ಹಸಿರು ಸೀರೆಯ ಉಡಿಸಿ, ಜರಿಯ ಕುಪ್ಪಸ ತೊಡಿಸಿ
ಉದ್ದ ಕುಂಕುಮ ಹಚ್ಚಿ, ಮೇಗ ಲೊದಿಕೆಯಬಿಡಿಸಿ
ತುಂಬು ತುರುಬಿಗೆ ಮಂದಾರ ಮಲ್ಲಿಗೆಯ
ದೊಡ್ಡ ದಂಡೆಯ ಮುಡಿಸಿ ಮಾಡುವರು ಶೃಂಗಾರ
ಜೀವಂತ ಆ ಹೆಣಕೆ, ಅದೇಕೋ ಶೃಂಗಾರ?
ಸಾಗುತಿದೆ ಶೃಂಗಾರ, ಶಾರದೆಯ ಮನ ಬೇಯುತಿದೆ
ಮೂಢ ಜನ! ಮೂಢ ನಡೆ!!
ಬೇಯುವಾ ಶಾರದೆಗೆ ಶೃಂಗಾರವೇಕೋ?
ಏರುತಿದೆ ಬಿಸಿಲು, ಜಾರುತಿದೆ ಸಮಯ
ಸಾಗುತಿದೆ ಮಸಣಕ್ಕೆ, ಪ್ರೇತ ದಂಡಿಗೆ!
ಗಡಿಗೆಯಲಿ ಉರಿ ಬೆಂಕಿ! ಪಾಪ....ಶಾರದೆ?
ನಡೆಯಲಾರಳು ಮೂಢ ಜನ ಬಿಡಲಾರರು
"ಸತಿ ಹೋಗಬೇಕು, ಪತಿ ಪಾದ ಸೇರಬೇಕು
ಇಲ್ಲದಿರೆ ಪಾಪ, ಘನಘೋರ ನರಕ"
ಎಂದವರ ಉಪದೇಶ ಅವರೇನು ಬಲ್ಲರು?
ಶಾರದೆಯ ಹೃದಯಾದಾ ಘೋರ ತಪಿತ!
ಉರಿಯುತಿದೆ ಬೆಂಕಿ! ಬೇಯುತಿದೆ ಭೂಮಿ!!
ಉಗುಳುತಿದೆ ಧೂಮ! ಚಟ್....ಚಟ್....ಚಟಾರೆಂದು
ಕೇಳಬರುತಿದೆ ಕಿವಿಯ ಹರಿಯುವ ಶಬ್ದ
"ಶಾರದೆ....? ಹುಂ....ಚಿತೆ ಹೋಗಬಹುದು"
ಎಂದನಾ ಬೂದಿಬಡುಕ, ಎದೆಯಲ್ಲಿ ಕಲ್ಲಿದ್ದ ಕಟುಕ!
ಅಯ್ಯೋ....ಬೇಯುತಿದೆ ಶಾರದೆಯ ಹೃದಯ.
ಪತಿ ಸತ್ತ ದುಃಖ, ಸುತರಗಲುವಿಕೆ ದುಃಖ ಮೇಲಿಂದ
ಚಿತೆ ಹೋಗುವದು....? ಊಹುಂ....ಅವಳ
ಆ ದುಃಖ, ಆ ನೋವ, ಕೇಳುವರು ನೋಡುವರು ಇಲ್ಲ
ಯಮದೂತರವರೆಲ್ಲ, ಮಾನವರು ಅಲ್ಲ!
ಹೆಣ್ಣುಜನ್ಮ ಯಾರಿಗೂ ಬೇಡ, ಜೀವಂತ
ಸಾಯುವದು ಬೇಡ
ಧಿಕ್ಕಾರ ಈ ಹೆಣ್ಣು ಜನ್ಮಕ್ಕೆ, ಧಿಕ್ಕಾರ ಆ ವೇಧಶಾಸ್ತ್ರಕ್ಕೆ
ಧಿಕ್ಕಾರ ಈ ಮೂಢಜನ ನಂಬಿಗೆಗೆ ಎಂದವಳು
ಹಾರಿದಳು ಚಿತೆಯಲ್ಲಿ.
ಅವಳಿಗಾಯಿತು "ಜೀವಂತ ಸಾವು."

# ಅಕ್ಕನ ಪೆಟ್ಟಿಗೆ

ನನ್ನ ಚಿಕ್ಕ ಸೋದರ ಸೋದರಿಯರೆ! ಹದಿನಾರು ವರುಷದೊಳಗಿನ ನೀವುಗಳೆಲ್ಲ ಅಕ್ಕನ ಪೆಟ್ಟಿಗೆ ’ಗೆ ಓಲೆಗಳನ್ನು ಕಳುಹಿಸಬಹುದು; ಮತ್ತು ನೀವೇ ಬರೆದ ಸಣ್ಣ ಕತೆ, ಕವನ, ಆಟ ನೋಟ ಇವುಗಳನ್ನೂ ನಾವು ಆದರದಿಂದ ಬರಮಾಡಿಕೊಳ್ಳುತ್ತೇವೆ. ನೀವೇ ತೆಗೆದ ಅಂದವಾದ ಚಿತ್ರವಿದ್ದರೆ ಅದನ್ನೂ ಮೂಡಿಸುತ್ತೇವೆ. ಆದರೆ ನೋಡಿ, ಮೊದಲು ನೀವು ಎರಡಾಣೆ ಕೊಟ್ಟು ‘ ಅಕ್ಕನ ಪೆಟ್ಟಿಗೆ’ಗೆ ಮೆಂಬರ ಆಗಿಬಿಡಿ; ಅದಕ್ಕಾಗಿ ಎರಡಾಣೆಯ ಅಂಚೆಯ ತಿಕೀಟು ಇಟ್ಟು ಕೆಳಗೆ ಇದ್ದ ಮಾದರಿಯ ಫಾರ್ಮಿನಲ್ಲಿ ನಿಮ್ಮ ಹೆಸರು ವಿಳಾಸಗಳನ್ನೆಲ್ಲಾ ಬರೆದು, ಪಾಕೇಟಿನಲ್ಲಿ ಹಾಕಿ, ಕಳಿಸಿಬಿಡಿ. ‘ ಅಕ್ಕನ ಪೆಟ್ಟಿಗೆ’ಗೆ ಈಗಲೇ ಎಷ್ಟೋ ತಮ್ಮ ತಂಗಿಯರು ಸದಸ್ಯರಾಗಿರವರು. ಈ ಸಾರೆ ಸಹ ಎಷ್ಟೋ ಜನರು ಸದಸ್ಯರಾಗಿದ್ದಾರೆ. ಅವರ ಪರಿಚಯವನ್ನು ಮುಂದೆ ಮಾಡಿಕೊಟ್ಟಿದೆ. ಸದಸ್ಯರು ತಮ್ಮ ಭಾವಚಿತ್ರದ (ಬ್ಲಾಕ) ಕಳಿಸಿದರೆ,ಅದನ್ನೂ ಅವರ ಪರಿಚಯವನ್ನೂ ಸಾಧ್ಯವಾದ ಮಟ್ಟಿಗೆ ಅಚ್ಚುಹಾಕಿಸುತ್ತೇವೆ. ಸರಿಯಾದ ಪ್ರಶ್ನೆಗಳನ್ನು ಕೇಳಿದರೆ ಉತ್ತರಗಳನ್ನೂ ಪೂರೈಸಬಹುದು.

**ಅಕ್ಕನ ಪೆಟ್ಟಿಗೆ**

**ವೀರಮಾತಾ ಕಾರ್ಯಾಲಯ,**

ವನಿತಾಸೇವಾ ಸಮಾಜ ಧಾರವಾಡ.

**ಧಾರವಾಡ.**

**ಪ್ರವೇಶಪತ್ರದ ಮಾದರಿ.**

ಸದಸ್ಯನ/ಳ ಪೂರ್ಣ ಹೆಸರು ..........................................................

ವಯಸ್ಸು ಮತ್ತು ಓದುತ್ತಿರುವ ತರಗತಿ..............................................

ಅಲ್ಪ ಪರಿಚಯ ..........................................................................

ಪೂರ್ಣ ವಿಳಾಸ...........................................................................

..........................................(ಮನೆ ನಂಬರ ಸಹಿತ)..........................

೨ ಆಣೆ ಸದಸ್ಯತ್ವದ ಫೀಯನ್ನು ಕೊಟ್ಟು ಅಕ್ಕನ ಪೆಟ್ಟಿಗೆಯ ನಿಯಮಗಳನ್ನು ಒಪ್ಪಿಕೊಂಡು ಇಂದಿನಿಂದ ನಾನು ಸದಸ್ಯ ನಾ/ಳಾಗಿದ್ದೇನೆ.

ತಾರೀಖು ...................... ಸಹಿ

# ಈ ತಿಂಗಳ ಹೊಸ ಸದಸ್ಯರು

೧) ಮೋಹನ ಚನ್ನಪ್ಪ ಭದ್ರಾಪೂರ ವಯಸ್ಸು ೧೫ ಓದುವ ತರಗತಿ ೧೦ ಅಡ್ರೆಸ್ ಹುಲಕೋಟಿ ಚಾಳ ಹುಬ್ಬಳ್ಳಿ.

೨) ಶೋಭಾಬಾಯಿ ಎಸ್. ಭಟ್ಟ ಒಕ್ಕಳ ವಯಸ್ಸು ೧೪. ವಿಳಾಸ c/o ಒಕ್ಕಳ. ಸುಬ್ರಾಯ.

೩) ನಿರ್ಮಲಾ ಬಿ. ಅಂಗಡಿ. ವಯಸ್ಸು ೧೦ ಓದುವ ತರಗತಿ ೫. ರಾಣೆಬೆನ್ನೂರ. ಅಲ್ಪ ಪರಿಚಯ, ಕತೆ-ಕವನ ಚುಟುಕುಗಳನ್ನು ಬರೆಯುವದರಲ್ಲಿ ಆಸಕ್ತಿ.

೪) ಮನಮೋಹನ ರಾಮರಾವ ಮುತಾಲಿಕ ದೇಸಾಯಿ ವಯಸ್ಸು ೧೪. ಓದುವ ತರಗತಿ ೧೦. ಅಡ್ರೆಸ್ ಓತಾರಿಗಲ್ಲಿ ಚಿಕ್ಕೋಡಿ.

## ಸದಸ್ಯರ ಪತ್ರಕ್ಕೆ ಉತ್ತರ

೧) ಪಿ. ಎಮ್. ಕಾಮತ ತಮ್ಮಾ-ಗೆಳೆಯರೊಂದಿಗೆ ನೀನು ಮಾಡುತ್ತಿರುವ ಸಾಹಿತ್ಯ ಚಟುವಟಿಕೆಯು ಸ್ತುತ್ಯವಾಗಿದೆ. ದಿನದಿನಕ್ಕೆ ಅಭಿವೃದ್ಧಿಯನ್ನು ಹೊಂದುತ್ತ ನಿಮ್ಮ ಸಂಸ್ಥೆಯು ಮುಂದಾಗಲೆಂದು ಮಾತೆಯ ಹಾರೈಕೆ.

ಮಮತೆಯ ಅಕ್ಕ.

೨) ಶೋಭಾಬಾಯಿ ಭಟ್ಟ. ತಂಗೀ ನಿನ್ನ ಇಚ್ಛೆಯು ನೇರಿಗೆ ಸದಸ್ಯಳನ್ನಾಗಿ ಮಾಡಿಕೊಂಡು ನೀನು ಕಳಿಸಿದ ಒಗಟಗಳನ್ನು ಮುದ್ರಿಸಿದೆ. ಹೀಗೆ ಪ್ರಯತ್ನಪಡುವದು ನಿನ್ನ ಪ್ರಗತಿಯ ದ್ಯೋತಕವಾಗಿದೆ.

ನಿನ್ನ ಹಿರಿಯಕ್ಕ.

## ಅಕ್ಕನಬಳಗದ ಸದಸ್ಯರಿಗೆ

ತಮ್ಮ, ತಂಗಿಯರು ಕಳೆದ ಎರಡು ತಿಂಗಳ ಸಂಚಿಕೆಯಲ್ಲಿಯ ಒಗಟಗಳಿಗೆ ಉತ್ತರವನ್ನೇ ಕಳಿಸಿಲ್ಲ. ಅವೇನು ಅಷ್ಟೊಂದು ಬಿಗಿಯಾಗಿವೆಯೇ ಹಾಗೇನೂ ಇಲ್ಲ. ಈ ಸಲವಾದರೂ ವಿಚಾರಿಸಿ ಕಳಿಸಿದಲ್ಲಿ ಅವರ ಹೆಸರನ್ನು ಪ್ರಸಿದ್ಧಿಸುತ್ತೇವೆ. ಹೀಗೆ ನಿರುತ್ಸಾಹಿಗಳಾಗಿ ಕೂಡುವದು ಚಿಕ್ಕ ಪ್ರಾಯದ ನಿಮಗೆ ಭೂಷಣವಲ್ಲ. ಹೆಚ್ಚು ಚಟುವಟಿಕೆಯಿಂದ ಕೆಲಸ ಮಾಡಿ ಮುಂದುವರಿಯಬೇಕೆಂದು ನಿಮ್ಮ ಹಿರಿಯಕ್ಕನ ಅಪೇಕ್ಷೆ.

ಮಮತೆಯ ಹಿರಿಯಕ್ಕ

## ಒಗಟಗಳು.

೧+೨ ಕೂಡಿಸಿದರೆ ಶೂರ ಎಂದು.
೨+೩ ಕೂಡಿಸಿದರೆ ಸ್ತ್ರೀ ನಾಮ ಎಂದು.
೩+೪ ಕೂಡಿಸಿದರೆ ತಾಯಿ ಎಂದು.

೧+೨+೩+೪ ಕೂಡಿಸಿದರೆ ಒಂದು ಸಂಚಿಕೆಯ ಹೆಸರು ಎಂದು ಆಗುತ್ತದೆ. ಹಾಗಾದರೆ ನಾಲ್ಕು ಅಕ್ಷರದ ಶಬ್ದವಾವುದು.

-ವ್ಹಿ. ಎಸ್. ಭಟ್ಟ

೧+೨ ಅಕ್ಷರ ಕೂಡಿಸಿದರೆ ಕೈ ಯೆಂದು ಆಗುತ್ತದೆ.
೨+೩ ಅಕ್ಷರ ಕೂಡಿಸಿದರೆ ಸೂರ್ಯಯೆಂದು ಆಗುತ್ತದೆ.
೩+೪ ಕೂಡಿಸಿದರೆ ಶೂರ ಎಂದು ಆಗುತ್ತದೆ.
೧-೩ ಕೂಡಿಸಿದರೆ ಕವಿ ಎಂದು ಆಗುತ್ತದೆ.

೧+೨+೩+೪ ಕೂಡಿಸಿದರೆ ಹೂವಿನ ಹೆಸರು ಎಂದು ಆಗುತ್ತದೆ. ಹಾಗಾದರೆ ನಾಲ್ಕು ಅಕ್ಷರದ ನಾನು ಯಾರು.

ಶೋಭಾಬಾಯಿ ಎಸ್. ಭಟ್ಟ

೧) ಆರು ಅಕ್ಷರಗಳಿಂದ ಕೂಡಿದ ಭಾರತದ ಮಹಾಪುರುಷ ಮುಖ್ಯ ವ್ಯಕ್ತಿಗಳಲ್ಲಿಯ ಒಬ್ಬರ ಹೆಸರು. ಅದರಲ್ಲಿ

೧-೬ ಅಕ್ಷರ ಕೂಡಿದರೆ ನೀರು ಎಂದು
೨-೪ ,, ,, ಏಳು ದಿವಸಗಳು (ಯಾರ್ಡ) ಎಂದು
೩-೪ ,, ,, ಈಶ್ವರ ಎಂದು
೫-೨ ,, ,, ಜ್ವಾಲಾಮುಖಿಯಿಂದ ಹೊರಡುವ ರಸವೆಂದು ಅರ್ಥ.

ಪಿ. ಎಮ್. ಕಾಮತ

# ಪ್ರತಾಪನ ಪ್ರತಿಜ್ಞೆ

ಒಂದಾನೊಂದು ಕಾಲದಲ್ಲಿ ಒಬ್ಬ ರಾಜನಿದ್ದನು. ಅವನಿಗೆ ಮೂವರು ಗಂಡು ಮಕ್ಕಳಿದ್ದರು. ಅವನಿಗೆ ಕನಸಿನಲ್ಲಿ ಬಹಳ ನಂಬಿಕೆ. ತನ್ನ ರಾಜ್ಯದಲ್ಲಿ ಯಾರಿಗಾದರೂ ಕನಸು ಬಿದ್ದಲ್ಲಿ ಅದು ನಿಜವಾಗಿಯೂ ಇರುವದೆಂದು ಆವನು ತಿಳಿದು ಕೊಂಡಿದ್ದನು. ಅದರಂತೆ ಅವನು ಪ್ರತಿನಿತ್ಯದ ಮುಂಜಾನೆ ತನ್ನ ಮಕ್ಕಳನ್ನು ಕರೆದು ಕನಸನ್ನು ಕೇಳುವ ರೂಢಿಯಾಗಿದ್ದಿತು.

ಆ ರಾತ್ರಿ ಹುಡುಗರೆಲ್ಲರಿಗೂ ಒಂನೊಂದು ಕನಸಾಯಿತು. ಮರುದಿನ ಬೆಳಗ್ಗೆ ನಿತ್ಯ ಹೇಳುವಂತೆ ಹಿರಿಯವನು ತನ್ನ ಕನಸನ್ನು ಹೇಳತೊಡಗಿದನು. ನನ್ನ ದೊಡ್ಡ ಪಟ್ಟಾಭಿಷೇಕ ಸಮಾರಂಭವನ್ನು ನಾನು ಒಳ್ಳೆ ವಿಜ್ರಂಭಣೆಯಿಂದ ನೆರವೇರಿಸುತ್ತಿದ್ದುದನ್ನು ನಾನು ಕಂಡೆ ಆಗ ನಾನೇ ಎಲ್ಲ ರಾಜರಲ್ಲಿ ಶ್ರೇಷ್ಠನೆಂದು ತಿಳಿದು ಕೊಂಡಿದ್ದ ಎಲ್ಲ ಪ್ರಜಾಜನರು ಬಹಳ ಸಂಭ್ರಮ ದಿಂದ ಈ ಕಾರ್ಯಕ್ರಮವನ್ನು ಸಾಂಗ ಗೊಳಿಸುತ್ತಿದ್ದರು ಎಂದನು.

ರಾಜನು ಭೇಷ್ ಒಳ್ಳೇ ಕನಸು. ಎಂದನು ಹಿರಿಯ ಮಗನಾದದ್ದರಿಂದ ಎಂದಾದರೊನ್ಮೆ ನನ್ನ ತರುವಾಯ ರಾಜನಾಗಬೇಕಲ್ಲವೆ? ಇದರಲ್ಲೇನು ಅಶ್ಚರ್ಯ ನೀನು ರಾಜನಾಗುವದು ನಿಜ ಎಂದು ಹೇಳಿದನು.

ಬಳಿಕ ಎರಡನೆಯವನು ತನ್ನ ಕನಸನ್ನು ವರ್ಣಿಸತೊಡಗಿದನು. ನಾನು ಒಬ್ಬ ಭಾರಿ ಶ್ರಿ ಮಂತನಾಗಿದ್ದೆ. ಮತ್ತು ಎಲ್ಲ ಜದರು ನನ್ನನ್ನೆ ಮುಂದಾಳುವಾಗಬೇಕೆಂದು ತಲೆಬಾಗಿ ನಮಸ್ಕರಿಸಿ ಬಹಳ ದೈನ್ಯತೆಯಿಂದ ಬೇಡಿಕೊಳ್ಳತಿ ದ್ದರು. ಎಲ್ಲರಿಗೂ ಅವರವರ ಇಚ್ಛೆಗಳನ್ನು ಪೂರೈಸಿ ಕೊಡುತ್ತಿದ್ದೆ. ಎಂದು ಹೇಳಿದನು. ಆಗ ಅರಸನು "ಒಳ್ಳೇದು ನಿನ್ನ ಕನಸು ನಿಜವಾಗಬಹುದು ನಿನ್ನ ಇಚ್ಛೆಯಂತೆ ಎಲ್ಲ ಪ್ರಜೆಗಳು ಎಲ್ಲರೂ ತಲೆ ಬಾಗುವರು" ಇದರಲ್ಲೇನು ಆಶ್ಚರ್ಯ ಎಂದು ಅಂದನು.

ಆಗ ಮೂರನೆಯವನು ಅಂದನು. ರಾಜನೇ ನನ್ನ ಕನಸನ್ನು ಹೇಳಲಿಕ್ಕೆ ನನಗೆ ಇಷ್ಟವಿಲ್ಲವೆಂದನು ಆದರೆ ರಾಜನ ವಿರುದ್ಧ ಮಾತಾಡಲು ಅವನಿಗೆ ಧೈರ್ಯವಿರಲಲ್ಲ. ಆದರೂ ಶಕ್ಯವಾದಷ್ಟು ಧೈರ್ಯ ತಂದುಕೊಂಡು ರಾಜನ ಅಪ್ಪಣೆಯ ಮೇರೆಗೆ ತನ್ನ ಕನಸನ್ನು ನಿಧಾನವಾಗಿ ಹೇಳತೊಡಗಿದನು. ತಂದೆಯೆ ನಾನೊಬ್ಬ ದೊಡ್ಡ ಸಾಧುವಾಗಿದ್ದೆ. ನನ್ನ ಪಾದಪೂಜೆ ಮಾಡಲು ನೀನು ಸಿದ್ಧನಾದಾಗ ಕಾಲ ತೊಳೆದ ನೀರು ಆವಾಗ್ಗೆ ನನ್ನ ಅಣ್ಣ ನನ್ನ ಕೈಕೆಳಗೆ ನೀರು ಬೀಳಲು ಏನಾದರೊಂದು ತಟ್ಟೆ ಹಿಡಿದುಕೊಂಡಂತೆ ಮತ್ತು ನನ್ನ ತಾಯಿಯು ನನಗೊಂದು ಕೈಕಾಲು ಒರೆಸಿಕೊಳ್ಳಲು ಒಂದು ಬಟ್ಟೆಯನ್ನು ಹಿಡಿದುಕೊಂಡು ನಿಂತಂತೆ ಮತ್ತು ನೀನು ಒಂದು ಚಿನ್ನದ ಚೊಂಬನ್ನು ಹಿಡಿದುಕೊಂಡು ನನ್ನ ಪಾದಪೂಜೆ ಮಾಡುವದನ್ನು ಕಂಡೆ. ಇದೆ ನನ್ನ ಕನಸು ಎಂದು ನಿಧಾನವಾಗಿ ಮಾತನ್ನು ನಿಲ್ಲಿಸಿದನು.

ಆ ಮಾತನ್ನು ಕೇಳುತ್ತಲೆ ರಾಜನಿಗೆ ತಡೆಯಲಾರದಷ್ಟು ಸಿಟ್ಟು ಬಂದುಬಿಟ್ಟಿತು. ಏನು? ನಾನು ಇಷ್ಟು ದೊಡ್ಡ ರಾಜನಾಗಿ ನಿನಗೆ ಪಾದಪೂಜೆ ಮಾಡುವಾಗ ನೀರನ್ನು ಸುರಿಯುತ್ತಿದ್ದೇನೆ, ಎಂದು ಝುಗ್ಗನೆ ತನ್ನ ಸಿಂಹಾಸನದ ಮೇಲಿಂದ ಕೆಳಗಿಳಿದು ಬಂದು, "ಇವತ್ತಿನಿಂದ ನೀನು ನನ್ನ ರಾಜ್ಯದಲ್ಲಿರುವುದು ಬೇಡ ನನ್ನ ರಾಜ್ಯವನ್ನು ಬಿಟ್ಟು ಆಗಲೆ ಹೊರಡು" ಎಂದು ಅವನನ್ನು ನಿಮಿಷ ಮಾತ್ರವೂ ನಿಲ್ಲದಂತೆ ಮಾಡಲು ಭಟರಿಗೆ ಆಜ್ಞಾಪಿಸಿದನು. ಆವನ ತಾಯಿ ಬಹಳ ಪರಿಯಿಂದ ಅಂಗಲಾಚಿ ಬೇಡಿಕೊಂಡಳು. ಆದರೆ ರಾಜನು ಅವಳ ಮಾತಿಗೆ ಕಿವಿಗೊಡಲಿಲ್ಲ! ರಾಜಭಟರಿಗೆ ಏನು ಮಾಡಬೇಕು ತಿಳಿಯದಾಯಿತು. ಒಂದು ಕಡೆಗೆ ರಾಜನ ಕಠೋರ ಆಜ್ಞೆ, ಇನ್ನೊಂದುಕಡೆಗೆ ತಾಯಿಯ ವಾತ್ಸಲ್ಯದ ಮಾತುಗಳು, ಅವರ ಕರಳನ್ನು ಹಿಸುಕಿದಂತಾಗುತ್ತಿತ್ತು. ಆದರೆ! ಮಾಡುವದೇನು ಅವರು ಕಡೆಗೆ ಒಂದು ಘೋರವಾದ ಅಡವಿಯಲ್ಲಿ ಅವನನ್ನು ಬಿಟ್ಟುಬಂದರು.

ರಾಜಕುಮಾರನಿಗೆ ಏನು ಮಾಡಬೇಕು ತಿಳಿಯದಾಯಿತು. ಒಂದು ಕಡೆಗೆ ಸಿಂಹದ ಗರ್ಜನೆ ಒಂದು ಕಡೆಗೆ ಆನೆಗಳ ಗುಂಪಿನ ಒದರಾಟ. ಇನ್ನೊಂದು ಕಡೆ ಹುಲಿಗಳ ಕೂಗಾಟ, ಬೇಟೆಗಾರರ ವಿಕಾರವಾದ ಕೂಗುಗಳನ್ನು ಇವೆಲ್ಲವು ನೋಡಿ, ಅವನಿಗೆ ತನ್ನ ತಂದೆಗೆ ಈ ಕನಸನ್ನು ಸತ್ಯವಾಗಿ ಕಾಣಿಸಿಕೊಡಬಾರದೆಂದು ಧೈರ್ಯವನ್ನು ತಂದುಕೊಂಡನು. ಅರಣ್ಯವನ್ನು ದಾಟಿ ಹಾಗೆ ಮುಂದೆ ಹೊರಟನು. ಬಿಸಿಲಿನ

ತಾಪದಿಂದ ಹೊಟ್ಟೆಯಲ್ಲಿ ಅವನಿಗೆ ಕಳವಳವಾಗಿ ಕಾಲುಗಳು ಉರಿಯತೊಡಗಿದವು. ಇದಲ್ಲದೆ ಅವನಿಗೆ ಹಸಿವು ಆಗಿ ಮತ್ತಷ್ಟು ಶಕ್ತಿಹೀನನನ್ನಾಗಿ ಮಾಡಿತು. ಹಾಗೆ ಭಾರವಾದ ಹೆಜ್ಜೆಗಳನ್ನಿಕ್ಕುತ್ತ ಬರುವಲ್ಲಿ ಅವನಿಗೊಂದು ತಪ್ಪಲು ಕಾಣಿಸಿಕೊಂಡಿತು. ಅದನ್ನು ಹಾಗೆ ಏರುತ್ತಿರಲು ಒಂದು ಗವಿ ಕಾಣಿಸಿತು. ಅವನು ಅಲ್ಲಿ ಏನಿರುವದು ಸ್ವಲ್ಪ ವಿಶ್ರಾಂತಿಯನ್ನಾದರೂ ತೆಗೆದುಕೊಂಡು ಮುಂದೆ ಸಾಗುವಾ ಎಂ ು ವಿಚಾರವಮಾಡಿ ಒಳಗೆ ಹೋದನು. ಅಲ್ಲಿ ಎದುರಿಗೆ ಮೊದಲು ಬೆಂಕಿ ಉರಿಯುತ್ತಿದ್ದುದು ಕಾಣಿಸುತ್ತಿತ್ತು ಆದ್ದರಿಂದ ಗವಿಯಲ್ಲಿ ಅಷ್ಟು ಕತ್ತಲೆಗೆ ಅವಕಾಶವಿರಲ್ಲ. ಬೆಂಕಿಯ ಮೇಲೆ ಒಂದು ಗಡಿಗೆಯನ್ನಿಟ್ಟಿದ್ದು ಅದರಲ್ಲಿ ಬೇಳೆ ಕಾಳುಗಳು ಕುದಿಯುತ್ತಿತ್ತು. ಅದನ್ನು ನೋಡಿದ ಕೂಡಲೆ ಅವನಿಗೆ ಬಿಸಿ ಇದೆ ಎಂದು ವಿಚಾರ ಮಾಡದೆ ಬೇಗನೆ ಹೋಗಿ ಅದನ್ನು ಗಬ ಗಬನೆ ತಿನ್ನತೊಡಗಿದನು. ಅವು ಹೇಗೆ ತೀರಿ ಹೋದವೋ ತಿಳಿಯಲಿಲ್ಲ. ಅಷ್ಟರಲ್ಲಿ ಹೊರಗಡೆ ಏನೋ ಸಪ್ಪಳವಾಯಿತು. ಅವನು ಮೊದಲು ಗಾಬರಿಯಾಗಿ ಗವಿಯ ಒಂದು ಮೂಲೆಯಲ್ಲಿ ಅಡಗಿ ನಿಂತನು. ಒಂದು ದೊಡ್ಡ ಹಾದಿಯ ಮೇಲೆ ಕುಳಿತುಕೊಂಡು ಒಬ್ಬ ಮುದುಕ ಬಂದನು ಅವನ ಹಿಂದೆ ಐದಾರು ಹಂದಿಗಳು ಹಿಂಬಾಲಿಸಿದ್ದವು. ಆ ಮುದುಕನಿಗೆ ಕಿವಿ ಕೇಳಿಸುತ್ತಿರಲಿಲ್ಲ. ಅವನು ನಿತ್ಯದಂತೆ ಬಂದು ತನ್ನ ಗಡಿಗೆಯನ್ನು ಎತ್ತಿ ನೋಡಿದನು. ಅದರಲ್ಲಿ ಏನೂ ಇರಲಿಲ್ಲ. ಅವನಿಗೆ ಬಹಳ ಸಿಟ್ಟು ಬಂದು ಜೋರಿನಿಂದ ಗರ್ಜನೆ ಮಾಡಿದನು. ಯಾರಲ್ಲಿ ನನ್ನ ಕಾಳುಗಳನ್ನು ತಿಂದವರು ಎಂದು !

ಆಗ ಆ ರಾಜಕುಮಾರ ಬಹಳ ಹೆದರಿದ. ಬರಬರುತ್ತ ಮುದಕನ ಗರ್ಜನೆ ಹೆಚ್ಚಾಗತೊಡಗಿತು. ಅವನಿಗೂ ಓಡಿ ಹೋಗಲು ಅವಕಾಶ ಉಳಿಯಲಿಲ್ಲ. ಹೊರಗೆ ನೋಡಿದರೆ ಜೋರಾಗಿ ಮಳೆ ಬರುತ್ತದೆ. ಗುಡುಗು ಸಿಡಿಲು ಅಬ್ಬರವನ್ನು ನೋಡಿ ರಾಜಕುಮಾರನು ತಾನು ಎಲ್ಲಿರುವನೊ ಎಂದು ಹೆದರಿಕೊಂಡು ಆ ಮುದಕನ ಹತ್ತಿರ ಹೋಗಿ ತನ್ನ ತಪ್ಪನ್ನು ಒಪ್ಪಿಕೊಂಡು ಅವನ ಕ್ಷಮೆ ಕೇಳಿಕೊಂಡನು. ಮುದುಕನ ಸಿಟ್ಟು ಮೊದಲು ಇಳಿಯಲಿಲ್ಲ. ಆದರೆ ಅವನ ವೇಷಭೂಷಣಗಳನ್ನು ನೋಡಿ ಇವನೊಬ್ಬ ರಾಜಕುಮಾರನೆಂದು ತಿಳಿದು ಸ್ವಲ್ಪ ಸಮಾಧಾನ ತಂದುಕೊಂಡನು. ನಂತರ ಕುಮಾರನು ತಾನು ಇಲ್ಲಿಗೆ ಬಂದ ಹಾಗೂ ತನಗೆ ಕೆಟ್ಟ ಪರಿಸ್ಥಿತಿ ಉಂಟಾದ ಕಾರಣವನ್ನು ತಿಳಿಸಿದನು. ಆಗ ಮುದುಕನು ರಾಜಕುಮಾರನಿಗೆ ಉಪದೇಶ ಮಾಡಿತೊಡಗಿದನು. ತಮ್ಮಾ ಇಷ್ಟೇಕೆ ಚಿಂತಿಸುವಿ ಹತ್ತಿರದ ರಾಜ್ಯವಾದ ಹೇಮವತಿ ನಗರದಲ್ಲೊಬ್ಬ ರಾಜನಿದ್ದಾನೆ. ಅವನಿಗೆ ಒಬ್ಬ ಮಗಳಿದ್ದಾಳೆ. ಅವಳು ನಿನ್ನನ್ನು ( ದೊರಕುವ ) ಲಗ್ನವಾಗುವಂತೆ ಒಂದು ಉಪಾಯವನ್ನು ಹೇಳುವೆನು. ನಂತರ ಅವಳನ್ನು ಮದುವೆಯಾದೆಯೆಂದರೆ ಸ್ವಲ್ಪ ದಿನಗಳ ನಂತರ ನಿನ್ನ ತಂದೆಯ ರಾಜ್ಯದ ಸಮೀಪಕ್ಕೆ ಸಾಧು ವೇಶದಿಂದ ಹೋಗು. ಅಂದರೆ ನಿನ್ನ ಕಾರ್ಯವು ಸಾಧಿಸುವದು ಎಂದು ಹೇಳಿದನು. ರಾಜಕುಮಾರನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ತನ್ನ ಕನಸು ಈಗಲೆ ನಿಜವಾಯಿತೆಂದು ಕುಣಿದಾಡತೊಡಗಿದನು.

ಅಹುದು ಅಜ್ಜ, ನೀನೇನೊ ಇಷ್ಟೆಲ್ಲ ಹೇಳಿದಿ ಆದರೆ ಆ ಹೇಮವತಿ ರಾಜಧಾನಿಗೆ ಹೋಗಿ ರಾಜಕುಮಾರಿಯನ್ನು ಲಗ್ನ ವಾಗುವ ಬಗೆ ಹೇಗೆ?

ಇಷ್ಟೇನೆ ಅದಕೆ ಅಷ್ಟೋಂದು ಚಿಂತೆ ಏಕೆ ನೀನು ಹೋಗಿ ಅವನ ರಾಜಧಾನಿಯ ಹತ್ತರಿರುವ ಉದ್ಯಾನದಲ್ಲಿ ಹಾಯಾಗಿ ಮಲಗಿ ಕೊಂಡಿರು ಅಲ್ಲಿ ರಾಜನ ಮಗಳು ತನ್ನ ಸಖಿಯರೊಂದಿಗೆ ನಿತ್ಯದಂತೆ ಅಲ್ಲಿ ಕ್ರಿಡಿಸಲು ಬರುವಳು. ನಿನ್ನನ್ನು ನೋಡಿ ಅವಳಿಗೆ ತಾನೇ ಅಪೇಕ್ಷೆಯುಂಟಾಗುವದು. ಅವಳು ನಿನ್ನನ್ನು ತನ್ನ ತಂದೆಯ ಮಂತ್ರಿಯುಕಡೆಯಿಂದಲೆ ಕರೆಕಳುಹಿ ಮದುವೆ ಯಾಗುವಳು ಎಂದು ಹೇಳದನು. ಆದರೆ ಜೋಕೆ. ನೀನು ಮಾತ್ರ ಯಾವ ನಿನ್ನ ಸ್ವರೂಪವನ್ನು ಹೇಳಬೇಡ. ಮತ್ತು ಮಂತ್ರಿಯು ಕರೆದುಕೊಂಡು ಹೋಗುವ ವರೆಗೆ ಆ ಸ್ಥಳವನ್ನು ಬಿಟ್ಟು ಕದಲಬೇಡ ಎಂದು ಹೇಳಿದನು.

ರಾಜಕುಮಾರನು ಮುದುಕನಿಗೆ ಮತ್ತೆಮ್ಮೆ ನಮಸ್ಕರಿಸಿ ಅಜ್ಞೆ ತೆಗೆದುಕೊಂಡು ಹೊರಟನು ಆ ಮುದುಕನು ಹೇಳಿದಂತೆಯೆ ಮೊದಲು ಹೋಗಿ ಕುದುರೆಯನ್ನು ಕಟ್ಟಿ ಆತೊಟದಲ್ಲಿ ಹಾಯಾಗಿ ಮಲಗಿಕೊಂಡನು. ಪ್ರತಿನಿತ್ಯದಂತೆ ರಾಜಕುಮಾರಿಯು ಬಂದು ರಾಜಕುಮಾರನನ್ನ ನೋಡಿ ಇವನ ರೂಪಲಾವಣ್ಯಗಳಿಗೆ ಮನಸೋತು ತನ್ನ ತಂದೆಗೆ ಇವನನ್ನು ಮದುವೆ ಯಾಗುವೆನೆಂದು ಹೇಳಿದಳು. ಅವಳ ಇಚ್ಛೆಯಂತೆ ಅವನನ್ನು ಕರೆದು ಕೊಂಡು ಬಂದರು. ಅರಸನ ಅಪ್ಪಣೆಯಾದರೆ ತಡವೆ? ಆಕ್ಷಣದಲ್ಲಿ ಎಲ್ಲ ಸಿದ್ಧತೆಗಳನ್ನು ಮಾಡಿದರು. ಅಗ್ನದ ಸಮಾರಂಭವು ನೆರವೇರಲ್ಪಟ್ಟಿತು. ಮುಂದೆ ಕೆಲವು ದಿನಗಳ ನಂತರ ತಾನು ಬಂದ ಕೆಲಸದ ನಿಮಿತ್ತವಾಗಿ ತನ್ನ ಊರಿಗೆ ಹೋಗಿ ಬೇಗಬರುವೆನೆಂದು (ಪ್ರತಾಪ) ರಾಜಕುಮಾರ ತನ್ನ ಹೆಂಡತಿಗೆ

ಹೇಳಿದನು. ಅವಳು ತಾನೂ ಬರುವೆನೆಂದು ಹಟ ಹಿಡಿದಳು. ಆದರೆ ಆವಳನ್ನು ಕರೆದುಕೊಂಡು ಹೋದರೆ ತನ್ನ ಕೆಲಸವು ಆಗುವದಿಲ್ಲವೆಂದು ತಿಳಿದು ವಿಚಾರ ಮಾಡಿದನು. ಬೇಡ ಕುಮುದಿನಿ ನಾನು ಇನ್ನು ಒಂದು ತಿಂಗಳ ನಂತರ ಖಂಡಿತ ಬರುವೆ ನೀನೇನು ಚಿಂತಿಸಬೇಡ ಎಂದು ಸಮಾಧಾನ ಮಾಡಿದನು. ತನಗೆ ಹೋಗಲು ಅಪ್ಪಣೆ ಕೊಡೆಂದು ಕೇಳಿಕೊಂಡು ಮಾವನ ಸಮ್ಮತಿಯನ್ನು ತೆಗೆದುಕೊಂಡು ಹೊರಟನು. ಮುಂದೆ ಎಂಟು ದಿನಗಳ ವರೆಗೆ ಪ್ರವಾಸ ಮಾಡಿ ಮುದುಕನ ಅಪ್ಪಣೆಯ ಪ್ರಕಾರ ತನ್ನ ತಂದೆಯ ರಾಜ್ಯದ ಸಮೀಪದಲ್ಲಿ ಒಂದು ಗುಡಿಸಲನ್ನು ಹಾಕಿದನು. ತಾನೊಬ್ಬ ಸಾಧುವಿನ ವೇಷ ಧರಿಸಿದನು. ಬರಬರುತ್ತ ಸಾಧುವಿನ ಪ್ರಚಾರವಾಗ ತೊಡಗಲು ದೊಡ್ಡ ಸಾಧುವು ಬಂದಿರುವನು ಎಂದು ಊರು ತುಂಬೆಲ್ಲ ಹರಡಿತು. ಈ ಸುದ್ದಿಯು ಅರಸನ ಕಿವಿಯ ವರೆಗೂ ಮುಟ್ಟಿತು. ರಾಜನು ಸಾಧುವನ್ನು ಕರೆಯಿಸಬೇಕೆಂದು ವಿಚಾರ ಮಾಡಿ ರಾಣಿಗೆ ಕೇಳಿದನು ಅವಳೂ ಸಮ್ಮತಿಯಿತ್ತಳು. ಕೂಡಲೆ ಕೇಳುವದೇನು, ಪಲ್ಲಕ್ಕಿ ಮಂಗಲವಾದ್ಯ ಸಮೇತನಾಗಿ ತನ್ನ ಪರಿವಾರದೊಂದಿಗೆ ಸಾಧುವನ್ನು ಕರೆಯಲು ಹೊರಟನು. ಆ ಗುಡಿಸಲಕ್ಕೆ ಬಂದಾಗ್ಗೆ ಆ ಸಾಧುವು ಜಪಮಾಡುತ್ತ ಕುಳಿತಿದ್ದನು. ಅರೆಗಣ್ಣಿನ ನೋಟದಿಂದ ತನ್ನ ತಂದೆ, ಪರಿವಾರದೊಂದಿಗೆ ಬಂದಿರುವನೆಂದು ತಿಳಿಯಿತು. ಆದರೆ ತನ್ನ ಪೂರ್ಣವಾಗುವ ವರೆಗೆ ಗುಟ್ಟು ರಟ್ಟಾಗಬಾರದೆಂದು ಸುಮ್ಮನೆ ಮತ್ತೆ ಜಪ ಮಾಡುವವನ ನಟನೆ ಮಾಡುತ್ತ ಕುಳಿತನು. ರಾಜನು ಸಾಧುವಿನ ಸಮೀಪಕ್ಕೆ ಬಂದು ಕೈಜೋಡಿಸಿ ನಮಸ್ಕಾರ ಸಾಧು ಪ್ರಭುಗಳಿಗೆ ಎಂದನು. ಆಗ್ಗೆ ಸಾಧು " ಜಯವಾಗಲಿ " ಎಂದನು.

ಅನೇಕ ತರಹದ ಹಣ್ಣು ಹಂಪಲಗಳ ತಟ್ಟೆಯನ್ನು ತಂದಿದ್ದ ರಾಜನ ಪರಿವಾರ ಸಾಧುವಿಗೆ ಅರ್ಪಿಸಿದರು.

" ಕುಳಿತಕೋ ರಾಜ, ಏನು ಬಂದ ಸಮಾಚಾರವನ್ನು ಎಂದು ಕೇಳಿದ ಸಾಧು.

ಸಾಧುಗಳೆ ನಮ್ಮ ಅರಮನೆಗೆ ದಯಮಾಡಿಸಬೇಕು. ಅಲ್ಲಿ ಸ್ವಲ್ಪ ದಿನ ಇರಬೇಕೆಂದು ನಮ್ಮ ಇಚ್ಛೆ ಇದೆ ಎಂದು ರಾಜ.

ಆಗಲಿ.

ಕೂಡಲೆ ಪಲ್ಲಕ್ಕಿಯಲ್ಲಿ ಸಾಧುವನ್ನು ಕುಳ್ಳಿರಿಸಿಕೊಂಡು ವಾದ್ಯಗಳೊಂದಿಗೆ ಅರಮನೆಗೆ ಹೊರಟರು.

ಗುಪ್ತವೇಶದ ಸಾಧುವಿಗೆ ಒಳಗೊಳಗೆ ನಗೆ ಬರುತ್ತಿತ್ತು. ಆದರೆ ಇನ್ನು ಸ್ವಲ್ಪ ವೇಳೆ ತಾಳಬೇಕು ಎಂದ.

ಅರಮನೆಯಲ್ಲಿ ತಲುಪುತ್ತಲೆ ಸಾಧುವನ್ನು ಒಳಗೆ ಕರೆದುಕೊಂಡು ಹೋಗಿ ಉಚಿತವಾದ ಆಸನದ ಮೇಲೆ ಕುಳ್ಳಿರಿಸಿದರು. ಅಷ್ಟರಲ್ಲಿ ರಾಜನು ಚಿನ್ನದ ಚೊಂಬನ್ನು ಹಿಡಿದುಕೊಂಡು ಸಾಧುವಿನ ಪಾದ ಪೂಜೆ ಮಾಡಲು ನೀರು ಹಾಕಲು ಸುರುಮಾಡಿದನು. ರಾಣಿಯು ಒಂದು ರೇಶಿಮೆಯ ಬಟ್ಟೆಯಿಂದ ಸಾಧುವಿನ ಪಾದ ಒರೆಯಿಸಿದಳು. ಅಷ್ಟರಲ್ಲಿ ನೀರು ಕೆಳಗೆ ಬೀಳದ ಹಾಗೆ ರಾಜನ ಹಿರಿಯ ಮಗನು ಚಿನ್ನದ ತಟ್ಟೆಯನ್ನು ಹಿಡಿದುಕೊಂಡು ಬಂದನು. ಪಾದ ಪೂಜೆ ಸಾಧುವಿಗೆ ಅಭಿಷೇಕ ನಡೆದು ಭೋಜನ ಸಮಾರಂಭವು ನೆರವೇರಿತು. ಇಷ್ಟಾದರೂ ಅರಸನಿಗೆ ಹೇಗೆ ತಿಳಿದೀತು. ಸಾಧುವು ಮಾತ್ರ ಭೋಜನದ ನಂತರ ತನಗಾಗಿ ಸಿದ್ಧಪಡಿಸಿದ ಗುಡಿಸಿಲಿನಲ್ಲಿ ಹೋದನು. ಅರಸನು ಅವನ ಜೊತೆಗೆ ಹೊರಟನು. ಸಾಧುವು ರಾಜನಿಗೆ ಮೆಲ್ಲಗೆ ಮಾತಿಗೆ ಆರಂಭಿಸಿದ. ರಾಜನೆ ನಿನಗೆ ಮೂರು ಜನ ಗಂಡುಮಕ್ಕಳಿಲ್ಲವೆ ? ರಾಜ ಅಹುದು ! ಎಂದ ರಾಜ ಆಶ್ಚರ್ಯದಿಂದ.

ತನ್ನ ಮೂರನೆ ಮಗನನ್ನು ಹೊರಗಟ್ಟಿದ್ದು ಆಗಲೆ ಅವನನ್ನು ಪಶ್ಚಾತ್ತಾಪವನ್ನುಂಟು ಮಾಡಿತ್ತು. ಅವನು ಹೇಗಾದರೂ ಮನೆಗೆ ಬಂದರೆ ಸಾಕೆಂದು ತಿಳಿದುಕೊಂಡಿದ್ದ.

ರಾಜನೆ ಆ ನಿನ್ನ ಮೂರನೆ ಮಗನನ್ನು ಸಣ್ಣ ಕಾರಣದಿಂದ ಅವನನ್ನು ಮನೆಬಿಟ್ಟು ಓಡಿಸಿದಿಯಲ್ಲವೆ? ಇಷ್ಟು ಸಣ್ಣ ತಪ್ಪಿಗೆ ಏನೂ ವಿಚಾರಿಸದೆ ಹೀಗೆ ಮಾಡುವದೆ ಎಂದು ಪ್ರಶ್ನಿಸಿದ ಸಾಧು.

ರಾಜನಿಗೆ ದುಃಖ ತುಂಬಿ ಬಂತು ನಿಜವಾಗಿಯೂ ಮೂರನೆ ಮಗನಲ್ಲಿ ಇರುವ ಬುದ್ಧಿ ಅವನಲ್ಲಿರುವ ವಿದ್ಯೆ ಉಳಿದಿಬ್ಬರಲ್ಲಿ ಇರಲಿಲ್ಲ. ತನ್ನ ತಪ್ಪಿಗಾಗಿ ಕ್ಷಮೆ ಕೇಳಿಕೊಂಡು ಸಾಧುಗಳೆ ಹೇಗಾದರೂ ನನ್ನ ಮಗನು ತಿರುಗಿ ಬರುವಂತೆ ವರವನ್ನು ದಯಪಾಲಿಸಬೇಕು ಎಂದು ಕೇಳಿಕೊಂಡ.

ಸಾಧುವಿಗೆ ನಗು ಬಂದಿತು. ಜೋರಾಗಿ ನಗತೊಡಗಿದ.

ರಾಜನಿಗೆ ಹೀಗೆಕೆ ಸಾಧುವು ನಗುತ್ತಿರುವನೆಂದು ತಿಳಿಯಲಿಲ್ಲ. ಅವನಿಗೆ ನಿಜವಾಗಿ ಗಾಬರಿಯಾಯಿತು.

ಆ ಕ್ಷಣದಲ್ಲಿ ತನ್ನ ಕಪಟನಾಟಕವನ್ನು ತೆಗೆದೊಗೆದು ರಾಜನ ಮುಂದೆ ನಿಂತನು. ರಾಜನೆ ಈಗಲಾದರೂ ದಿಟ್ಟಿಸಿ ನೋಡು ನಾನಾರು ಎಂಬುದು ಗುರುತುಸಿಗಲಿಲ್ಲವೆ ?

ರಾಜನಿಗೆ ಏನೂ ತಿಳಿಯುಲಿಲ್ಲ. ಸುಮ್ಮನೆ ಗಾಬರಿಯಾಗಿ ನಿಂತುಕೊಂಡನು.

ನೋಡು ಚನ್ನಾಗಿ ನೋಡು ನಾನೇ ನಿನ್ನ ಮೂರನೆಮಗ ಪ್ರತಾಪ.

ರಾಜನಿಗೆ ಆನಂದಾಶ್ರುಗಳು ಸುರಿಯ ತೊಡಗಿದವು. ಅವನನ್ನು ಒಮ್ಮೆಲೆ ಅಪ್ಪಿಕೊಂಡನು. ರಾಣಿಯ ಕಿವಿಯವರೆಗೂ ಈಸುದ್ಧಿ ಮುಟ್ಟಿತು ಅವಳೂ ಕೂಡ ತನ್ನ ಮಗನೆಂದು ತಿಳಿದು ಅಲ್ಲಿಗೆ ಬಂದಳು ಆ ತಾಯಿಯನ್ನು ನೋಡಿ ಪ್ರತಾಪನು ಮೊದಲು ನಮಸ್ಕಮಾಡಿದ ತಾಯಿಯು ಅವನನ್ನು ಅಪ್ಪಿಕೊಂಡು ಆನಂದಾಶ್ರುಗಳನ್ನು ಸುರಿಸಿದಳು. ಹಿಂದಕ್ಕೆ ಮನೆಬಿಟ್ಟು ಹೋದಂಥ ಚಿಕ್ಕದೊರೆಯು ಬಂದಿರುವನೆಂದು ಊರಜನರು ಅವನ ದರ್ಶನಕ್ಕೆ ಬರಹತ್ತಿದರು.

ಅವರೆಲ್ಲರಿಗೂ ಸಮಾಧಾನ ಮಾಡಿದ ಪ್ರತಾಪ.

ರಾಜನೆ—ನನ್ನನ್ನು ಯಾವ ಕಾರಣದಿಂದ ನೀನು ಈ ಮನೆಯಿಂದ ಹೊರಗಟ್ಟಿದ್ದಿಯೋ ಆ ಯತ್ನ ಆ ಕನಸು ಇಂದಿಗೆ ಸಫಲವಾಯಿತು; ನಾನಿನ್ನು ಬರುವೆ ಎಂದ ಪ್ರತಾಪ.

ಎಲ್ಲಗೆ ಹೊರಡುವೆ ಪ್ರತಾಪ ಎಂದ ರಾಜ

ನನ್ನ ಊರಿಗೆ

ಯಾವ ಊರಿಗೆ ಹೋಗುವೆ?

ನನ್ನ ಹೆಂಡತಿ ಇರುವ ಹೇಮವತಿ ಎಂಬ ಪಟ್ಟಣಕ್ಕೆ

ರಾಜನು ಅವನಿಗೆ ಎಷ್ಟು ಬೇಡವೆಂದರೂ ಕೇಳಲಿಲ್ಲ. ಕಡೆಗೆ ಅವರೆಲ್ಲರೂ ಪ್ರತಾಪನಜೊತೆಗೆ ಹೇಮವತಿ ರಾಜಧಾನಿಗೆ ಬಂದರು.

ಅಲ್ಲಿಯ ಅರಸ ಮಾಣಿಕವರ್ಮ ತನ್ನ ಮಗಳು ಕುಮುದಿನಿಯ ಸಮೇತ ತನ್ನ ಅಳಿಯನನ್ನು ಸ್ವಾಗತಿಸಲು ಊರ ಹೊರಗೆ ಬಂದನು

ಪ್ರತಾಪ ತನ್ನ ತಂದೆಗೆ ತನ್ನ ಮಾವನ ಪರಿಚಯಮಾಡಿ ಎರಡೂ ರಾಜ್ಯಗಳು ಸ್ನೇಹದಿಂದ ಇರಬೇಕೆಂದು ಕೇಳಿಕೊಂಡನು. ಬಳಿಕ ಕುಮುದಿನಿಯು ತನ್ನ ಅತ್ತೆಮಾವಂದಿರಿಗೆ ನಮಸ್ಕರಿಸಿದಳು. ತನ್ನ ಅನುರೂಪಳಾದ ಸೊಸೆಯನ್ನು ನೋಡಿ ರಾಜರಾಣಿಯರಿಗೆ ಬಹಳ ಸಂತೊಷವಾಯಿತು.

ಒಬ್ಬರಿಗೊಬ್ಬರು ಉಡುಗೊರೆಗಳನ್ನು ಕೊಟ್ಟ ನಂತರ ಮಗ ಸೊಸೆಯೊಂದಿಗೆ ಧೀಮಂತರಾಜನು ತನ್ನ ರಾಜ್ಯಕ್ಕೆ ಮರಳಿ ಬಂದನು.

---

## ಕಥೆ

ಲೇ:- ವ್ಹಿ. ಎಸ್. ಭಟ್ಟ ಒಕ್ಕಳ

ಸತ್ಯಕ್ಕೆ ಸಾವಿಲ್ಲ ಸುಳ್ಳಿಗೆ ಸುಖವಿಲ್ಲ. ಎಂಬ ಗಾದೆ ಮಾತಿನ ಮೇಲಿಂದ ಒಂದು ಕಥೆ

ಒಂದು ಹಳ್ಳಿಯಲ್ಲಿ ಕಳ್ಳ ಪಕ್ಯಾ ಎಂಬ ಒಬ್ಬ ಹುಡುಗನು ಇದ್ದನು. ಅವನಿಗೆ ತಂದೆ ತಾಯಿ ಯಾರು ಇರಲಿಲ್ಲ. ಅವನು ಯಾವುದೊ ಒಂದು ವೆಶ್ಯೆಗೆ ಹುಟ್ಟಿ ಅವಳು ಸಮಾಜದ ಧರ್ಮಕ್ಕೆ ಹೆದರಿ ನವಮಾಸ ತನ್ನ ಉಡಿಯಲ್ಲಿ ಹೊತ್ತು ಹೆತ್ತ ಪಿಂಡವನ್ನು ಹೊಳೆಯಲ್ಲಿ ಹಾಕಿ ಹೋಗಿದ್ದಳು. ಆ ಹೊಳೆಯ ಹತ್ತಿರ ಒಂದು ಮುದುಕಿಯ ಮನೆಯು ಇತ್ತು. ಹೊಳೆಯಲ್ಲಿ ಎಳೆ ಕೂಸಿನ ಅಳುವ ಧ್ವನಿಯನ್ನು ಕೇಳಿ ಅವಳು ಆ ಮಗುವನ್ನು ಎತ್ತಿ ಕೊಂಡು ಬಂದು ಸಾಕಿದಳು. ಅವನಿಗೆ ಕಳ್ಳ ಪಕ್ಯಾ ಎಂಬ ನಾಮವನ್ನು ಇಟ್ಟಳು. ಅವನು ದೊಡ್ಡವನಾಗಿ ತನ್ನ ಉಪಜೀವನಕ್ಕಾಗಿ ಆ ಊರಿನ ಕುರಿಗಳನ್ನು ಕಾಯುವ ಕೆಲಸವನ್ನು ಮಾಡ ಹತ್ತಿದನು.

ಒಂದು ದಿನ ಕಳ್ಳ ಪಕ್ಯಾನು ಒಕ್ಕಲಿಗರಿಗೆ ತಮಾಶೆ ಮಾಡಬೇಕೆಂದು. ಕುರಿಯನ್ನು ತಿನ್ನಲು 'ತೊಳ ಬಂತಲೆ ತೊಳ' ಎಂದು ಒದರಿದನು. ಆಗ ಗದ್ದೆಯಲ್ಲಿ ಕೆಲಸ ಮಾಡುವ ಒಕ್ಕಲಿಗರು ಇವನ ಕುರಿಗಳನ್ನು ತೊಳದ ಆಹಾರ ಮಾಡಬಾರದೆಂದು. ಕೈಯಲ್ಲಿ ಇದ್ದ ಕತ್ತಿ' ಹಾರೆ, ಕೊಡಲಿ ಬಡಿಗೆಗಳನ್ನು ತೆಗೆದು ಕೊಂಡು ಓಡಿ ಬಂದರು. ಆ ಕಳ್ಳ ಪಕ್ಯಾನು ನಾನು ಚೇಷ್ಟೆಗೆಂದು ಮಾಡಿದ್ದು ಎಂದನು. ಇನ್ನೊಂದು ದಿನ ಸತ್ಯವಾಗಿ ತೊಳವು ಬಂದು ಬಿಟ್ಟಿತ್ತು. ಆಗ ಅಂದು ಹೇಳಿ ದಂತೆ 'ತೋಳ ಬಂತು ತೋಳ' ಎಂದು ಹೇಳಿದನು. ಆಗ ಒಕ್ಕಲಿಗರು ಅವನು ಸುಳ್ಳು ಹೇಳುತ್ತಾನೆ. ಎಂದು ಹೋಗಲೆ ಇಲ್ಲಾ. ಆದ್ದರಿಂದ. ಸತ್ಯಕ್ಕೆ ಸಾವಿಲ್ಲ ಸುಳ್ಳಿಗೆ ಸುಖವಿಲ್ಲ ಎಂದು ಹೇಳುವ ಗಾದೆಮಾತು ಸುಳ್ಳುಅಲ್ಲ. ಎಂದು ಅವನ ಸಾಕಿದ ತಾಯಿಯು ಹೇಳಿದಳು ಅಂದಿನಿಂದ ಅವನು ಸುಳ್ಳು ಹೇಳುವದನ್ನು ಬಿಟ್ಟು ಬಿಟ್ಟನು.

# " ಅವ್ವ ಮತ್ತು ಅಪ್ಪ "

## [ ನಾಟಕ ]

ಲೇ:-ಬಿ. ವ್ಹಿ. ಡಂಬಳ B. A. ರೋಣ.

[ ಚಿಕ್ಕಮಕ್ಕಳ Programme ದಲ್ಲಿ ಅಥವಾ ಹೆಣ್ಣುಮಕ್ಕಳ ಕಾರ್ಯಕ್ರಮದಲ್ಲಿ ಮಾಡುವಂತಹ ನಾಟಕ ]

**ಪಾತ್ರ ಪರಿಚಯ :**

೧) ಮಗು ( ೫ ವರ್ಷದ ಬಾಲಕ )

೨) ತಂದೆ

೩) ತಾಯಿ

[ ಸಮಯ ಮುಂಜಾನೆ ೯ ಗಂಟೆ. ಗಂಡನಿಗೆ ಊಟಕ್ಕೆ ನೀಡಿ ಹೊಲಕ್ಕೆ ಹೊಗಬೇಕೆಂದು ಸೋಮವ್ವ; ಆಗ ಗಂಡನು ಅದೇ ಓಣಿಯಲ್ಲಿಯ ದ್ಯಾಮವ್ವನ ಗುಡಿಯ ಕಟ್ಟಿಗೆ ಕುಳಿತು ನಾಲ್ಕು ಜನ ಸಹೋದ್ಯೋಗಿಗಳೊಡನೆ ಏನೋ ಮಾತಾಡುತ್ತಾ ಕುಳಿತಿರುವನು. ಆಗ ಮಗುವನ್ನು ಕೊಟ್ಟು ಕರೆಕಳಿಸುವಳು. ]

ತಾಯಿ:—( ಮನೆಯಲ್ಲಿ ಅಡುಗೆ ಮಾಡುತ್ತಾ ) ಮಗು, ಈ ಮನೆಯ ಹಿರಿಯನನ್ನು ಕರೆದುಕೊಂಡು ಬಾ.

ಮಗು:—ಮನೆಯ ಹಿರಿಯ ಅಂದರೆ ಆರವ್ವಾ?

ತಾಯಿ:—ಈ ಮನೆಯ ಯಜಮಾನರು.

ಮಗು:—ಅವರಾರೆಂಬುದನ್ನು ನಾನರಿಯನವ್ವಾ; ಅವರ ಹೆಸರು ಹೇಳಿದರೆ ಮಾತ್ರ ನಾನು ಕರೆದುಕೊಂಡು ಬರುವೆನು.

ತಾಯಿ:—ನಿನ್ನ ಹಡೆದವರನ್ನು ಕರೆ.

ಮಗು:— ನೀನು ನನ್ನನ್ನು ಹಡೆದಿಲ್ಲವೇನು? ಹೀಗೇಕೆ ಅನ್ನುವಿ?

ತಾಯಿ:—ಮಗು ನೀನು ಹೀಗೆ ಉದ್ಧಟತನವನ್ನು ತೋರಿಸದೆ, ಅವನನ್ನು ಕರೆದುಕೊಂಡು ಬಾ.

ಮಗು:—ಅವ, ಇವ ಅಂದರೆ ನನಗೆ ಗೊತ್ತಾಗುವದಿಲ್ಲವ್ವಾ.

ತಾಯಿ:—ಅವ, ಇವ ಅಂದರೆ ನಿನ್ನ ಅಪ್ಪ. ಮತ್ಯಾರೂ ಇಲ್ಲ.

ಮಗು:—ನನ್ನ ಅಪ್ಪ ಯಾಕೆ ಅವ್ವಾ, ನಿನ್ನ ಅಪ್ಪ ಅಲ್ಲವೇನು?

ತಾಯಿ:—ಮೂರ್ಖಾ ಹೋಗು, ಹೋಗು, ಅಪ್ಪನನ್ನು ಕರೆದುಕೊಂಡು ಬಾ. ಈಗಲಾದರೂ ತಿಳಿಯಿತೇ? ಹೀಗೆ ಮಾತಾಡಿದರೆ ದೇವರು ನಿನಗೆ ರೊಟ್ಟಿಯನ್ನು ಕೊಡುವದಿಲ್ಲ.

ಮಗು:—ದೇವರು ರೊಟ್ಟಿ ಕೊಡುವದು ಬೇಡ; ದೇವರಿಗೆ ನೀನು ಈಗ ಮಾಡುವ ಹಾಗೆ ರೊಟ್ಟಿ ಮಾಡಲು ಬರುವದಿಲ್ಲ ಮತ್ತು ಅವನು ಇನ್ನೂ ವರೆಗೂ ರೊಟ್ಟಿ ಕೊಟ್ಟಿಲ್ಲ. ಮತ್ತು ನನಗೂ ಕೊಡುವದಿಲ್ಲ.

ತಾಯಿ:—ಮತ್ತಾರು ಕೊಡುತ್ತಾರೆ?

ಮಗು:—ದಿನಾಲು ನೀನೆ ಕೊಡುತ್ತಿಯಲ್ಲವ್ವಾ.

ತಾಯಿ:—ನೀನು ಹೀಗೆ ವಾದಿಸಿದರೆ ದೇವರು ನಿನ್ನನ್ನು ದೊಡ್ಡವನನ್ನಾಗಿ ಮಾಡುವದಿಲ್ಲ.

ಮಗು:—ದೇವರೇನು ದೊಡ್ಡವನನ್ನಾಗಿ ಮಾಡುವನು? ನೀನು ದಿನಾಲು ಕೊಡುವ ರೊಟ್ಟಿಯನ್ನು ತಿನ್ನುತ್ತಾ ಹೋದರೆ ನಾನೇ ಬರಬರುತ್ತಾ ದೊಡ್ಡವನಾಗುವೆನು.

ತಾಯಿ:—ನೀನು ದೇವರಿಗೆ ಹೀಗೆಂದರೆ ನಿನ್ನ ಮೂಗು ಕೊಯ್ಯುವನು.

ಮಗು:— ( ಅವಸರದಿಂದ ) ಅವನ ಹತ್ತರ ಚೂರಿ ಇರ್ತದೇನವ್ವಾ? ಇದ್ದರೆ ಯಾವಾಗ ಕೊಯ್ಯಾನ. ಕೊಯ್ದು ತನ್ನ ಮೂಗಿಗೆ ಹಚಿಗೊಂತಾನೇನು?

ತಾಯಿ:— ( ಸಿಟ್ಟಿನಿಂದ ) ಅವ ಬಂದ ಕೂಡಲೇ ಚನ್ನಾಗಿ ಥಳಿಸಲು ಹೇಳುತ್ತೇನೆ. ಸ್ವಲ್ಪ ತಡಮಾಡು.

ಮಗು:—ಅಪ್ಪ ಬಂಧ ಕೂಡಲೇ ನಾನು ನಿನಗಿಂತಲೂ ಮೊದಲು ಹೋಗಿ ಅವ್ವ ನನಗೆ ಇಂದು ರೊಟ್ಟಿ ಕೊಟ್ಟಿಲ್ಲ ಎಂದು ಸುಳ್ಳು ಹೇಳಿ ಬಿಡತೀನಿ. ಇಗ ನಿನಗs ಚಾಣಿ ( ಹೊಡೆತ ) ಬೀಳ ತಾವು ನೋಡು.

ತಾಯಿ:— ( ಸಿಟ್ಟಿನಿಂದ ಮಗುವನ್ನು ಬಡಿಯುವಳು ) ಹೋಗು.

ಮಗು:— ( ದುಃಖಿಸುತ್ತಾ ) ಬಡಿಯಬೇಡವ್ವಾ, ಕರೆದುಕೊಂಡು ಬರುತ್ತೇನೆ. ( ತಂದೆಯಲ್ಲಿಗೆ ಹೋಗುವನು )

ಅಪ್ಪs.... ಅಪ್ಪಾs...." ಅವ್ವ ಅಪ್ಪನನ್ನು ಕರೆದುಕೊಂಡು ಬಾ ಎಂದು ಹೇಳಿದಳು "

ಸಹೋಧ್ಯೋಗಗಳು:— ( ನಗುತ್ತ ) ಮಗು, ಹೀಗೆ ಹೇಳಿಕಳಿಸಿದಳೇ ?

ಮಗು:— ಹೀಗೆ ಅಂದಳಲ್ಲದೆ, ಬಡೆದುಕಳಿಸಿದಳು. 'ಅಪ್ಪನನ್ನು ಕರೆದುಕೊಂಡು ಬಾ ಎಂದು'

ಸ:—ನಿಮ್ಮ ಅವ್ವನ ಹಸರೇನೋ ?

ಮ:—(ಸಹಜವಾಗಿ) ಅವ್ವ

ಸ:—ನಿಮ್ಮ ಅಪ್ಪನ ಹೆಸರೇನೋ?

ಮ:—ಅಪ್ಪ

( ಎಲ್ಲರೂ ನಗುವ ಸ್ವರ ಕೇಳಿಸುವದು )

ತಂದೆ:— ( ಅವಸರದಿಂದ ನಗುತ್ತ ) ಮಗು, ನಡೆ, ಬೇಗ ನಡೆ. ಬರುತ್ತೇನೆಂದು ಆಕೆಗೆ ಹೇಳು.

ಮಗು:—ಆಕೆ, ಈಕೆ ಅಂದರೆ ನನಗೇನೂ ಗೊತ್ತಾಗುವದಿಲ್ಲ. ಅವ್ವನು ಅವನಿಗೆ ಇವನಿಗೆ ಕರೆದುಕೊಂಡು ಬಾ ಎಂದು ಹೇಳಿ ಬಡಿದು ಕಳಿಸಿದಳು. ನೀನೂ ಆಕೆಗೆ ಹೇಳು, ಈಗೆಕೆ ಹೇಳು ಅಂತೀದಿ. ನೀವಿಬ್ಬರೂ ಹೀಗೇಕೆ ಮಾತಾಡತಿರಿ. ನಾನೂ ಯಾರಿಗೂ ಹೇಳದೆ ಇಲ್ಲೇ ಕುಳಿತುಬಿಡುತ್ತೇನೆ. ( ಕುಳಿತುಕೊಳ್ಳುವನು. )

ತಂದೆ:—ಎ, ಹುಚ್ಚಾ, ( ಏನು ತಿಳಿಯದೆ ) ನಡೆ. ಅವ್ವನಿಗೆ ಹೇಳು ಅಪ್ಪನು ಬರುತ್ತಾನೆಂದು ಈಗಲಾದರೂ ಚನ್ನಾಗಿ ತಿಳಿಯ್ತೆ. ಮೂರ್ಖ ಮಗು.

ಮಗು: — ( ಏಳುತ್ತಾನೆ, ಅಳುತ್ತಾ ಸುಮ್ಮನಾಯಿತು ) ಈಗ ನಿನಗ ಚನ್ನಾಗಿ ಮಾತಾಡಲಿಕ್ಕೆ ಬಂತು ನೋಡಪ್ಪ. ಮೊದಲೆ ಇಷ್ಟು ಹೇಳಿದ್ದರೇನಾಗುತ್ತಿತ್ತಪ್ಪ. ನೀವಿಬ್ಬರೂ ನನ್ನನ್ನು ಹೀಗೆ ಕಾಡಿಸಲಿಕ್ಕೆ ಹಡೆದಿರುವಿರೇನು?

---

## ಜೈ-ಭಾರತಮಾತೆ

ಜಯ ಜಯ ಭಾರತ ಮಾತೇ,! ಬಾಗಿ ಎರಗು-
ವೆ ಜ್ಯೋತೆ ! ನವವಿಧ ಭಕ್ತಿ ಭಾವೆ !
ತೋರು ಕರುಣದಿ ತಾಯೆ ||೧||

ಹಿಂದ ದೇಶ ಹಿಂದ ಪುತ್ರ ! ದಿಂದಲೊಪ್ಪಿ-
ಯನ್ನ ಮಾತ್ರ, ಸತ್ಯ ಜ್ಞಾನ ಬೋಧ
ಮೂರ್ತಿ ! ತತ್ವಜ್ಯೋತಿ ಸಾರು ಮಿತ್ರ ||೨||

ಸಹ್ಯ ವಿಂಧ್ಯ ದ್ರೋಣ ಗಿರಿಯ ! ಗಂಗೆ-
ಯಮುನೆ ತುಂಗ ನದಿಯ ಜಲ್ಲು ಜಲ್ಲು-
ನೀರು ತೆರೆಯ ! ಮುಂದ ಮುಂದ ಪೋದ ಪರಿಯ||೩||

ಗರ್ವದಿಂದ ಭೂಮಿಗಿಳಿದ ಶಿವನ-
ಜಡೆಗಳಿಂದ ಸುಳಿದ ! ಮಂದಹಾಸ
ದಿಂದ ಬಿಗಿದ ! ಧನ್ಯ ಗಂಗೆ ಲೋಕವಂದ್ಯೆ ||೪||

---

# ಹಂಜಿಯ ಪದ್ಯ

( ತಾಳ ದಾದರಾ:- ರಾಗ ಮಿಶ್ರ ಕಾಪಿ )

ಭಾರತ ಮಾತೆಯ । ಬಾಲಬಾಲೆಯರೇ !
ಕೇಳಿರಿ ನನ್ನಯ ಚರಿತೆಯನು ॥ ಪ ॥
ಅಪ್ಪರೈತನು ತಾನು । ಕಪ್ಪು ಭೂಮಿಯಲಿ ।
ಒಪ್ಪಾಗಿ ನನ್ನನು । ಬೆಳಸಿರುವನು ।
ಹಚ್ಚ ಹಸುರಿನಿಂದೆ । ಪುಟ್ಟ ಗಿಡದಲ್ಲಿ ।
ಥಟ್ಟನೆ ಕಾಯಾಗಿ । ನಿಂತಿಹೆನು ॥ ೧ ॥

ಬೆಳ್ಳನ್ನ ಮುದ್ದಿ ನೋಡಿ । ಎಲ್ಲ ಬಾಲೆಯರು ಕೂಡಿ ।
ಮೆಲ್ಲನೆ ನನ್ನನು ತಂದಿಹರು ।
ಮೂಲೋದ್ಯೋಗ ಶಾಲೆಯಲಿ । ಮೊದಲಿಗೆ ಬೇಕೆಂದು
ಅಲ್ಲೇ ಜತನವ ಮಾಸ ಇಟ್ಟಿಹರು ॥ ೨ ॥
ಹರುಷದಿಂದಲಿ ಹೊಲದ । ಕಸ ಕಡ್ಡಿ ತೆಗೆದು ।
ಚಲುವಾಗಿ ನನ್ನನ್ನು ಮಾಡಿದಿರಿ ।

ಅರೆವ ಘಳಿಯ ಮೇಲೆ । ಹರವೀ ಸಳಿಯಿಂದ ಅರೆದು ।
ನನ್ನಲ್ಲಿ ಕಾಳು ತೆಗೆಯುವಿರಿ ॥೩॥

ಬಿಲ್ಲಿನಿಂದೆ ಹೊಡೆದು । ಚೆಲ್ವಿಕೆ ಹೆಚ್ಚಿಸಿ ।
ಬಿದಿರು ಕಡ್ಡಿಗೆಯನ್ನ ಸುತ್ತಿದಿರಿ ।
ಒಂದಾಣೆ ತೂಕ । ಆರಿಂಚು ಉದ್ದ ।
ಚಂದಾದ ಸುರಳಿಯ । ಮಾಡಿದಿರಿ ॥ ೪ ॥

ಹೊಸ ರೂಪಕೊಪ್ಪುವಂತೆ । ಹೆಸರಿಟ್ಟು ಹಂಜಿಯೆಂದು
ಕುಶಲ ಬಾಲರೆ ನೀವು ಮಾಡಿದಿರಿ ।
ತಾತ ಗಾಂಧೀಜಿಯ । ಮಾತನು ಆಲಿಸಿ ।
ನೂತು ಮಾಡಿರಿ । ಜಗದ ಉದ್ಧಾರಾ ॥ ೫ ॥

ಹೊಸ ರಾಟೆಯ ಮೇಲೆ । ಹಸನಾದ ನೂಲು ತೆಗೆದು ।
ಹೊಸ ಬಟ್ಟೆ ಮಾಡಿರಿ । ಮಗ್ಗದಲಿ ।
ಅನ್ನ ವಸ್ತ್ರಕೆ ಮೂಲ ನಾನೇ ಆಧಾರಾ ।
ಆ ಘನ್ನ ಕಾರ್ಯಕೆ ನೀವು ಆಧಾರ । ॥ ೬ ॥

—ಇಂ. ಮಾ. ಹೊಸೂರ

---

# ಸತ್ಪಥದಲಿ ಸಾಗಿಸು

ಬಾರೆ ಜನನಿ ! ನಲಿದು ಬಾರೆ
ಕನ್ನಡಿಗರ ತಾಯಿಯೆ
ತೋರೆ ನಿನ್ನ ವದನವನ್ನು
ಓ ಮಹಾಮಾಯೆಯೆ !
ವೀರ ರಮಣಿಯರನು ಹೆತ್ತ
ವೀರಮಾತೆ ನೀನಹೆ
ಅವರ ಸಹೋದರಿಯು ಆಗ-
ಲೆಂದು ಬಯಸಿ, ನಾನಿಹೆ
ಕರ್ಮ ಮಾರ್ಗವನ್ನು ತೋರು
ಸತ್ಪಥಲಿ ಸಾಗಿಸು

ಧರ್ಮವು ಹಾಳಾಗದಂತೆ
ಎನ್ನನಲ್ಲಿ ಬಾಗಿಸು !
ಸಂಚಿಯು ಹೊನ್ನಮ್ಮನನ್ನು
ಅಮ್ಮನಾಗಿ ಪಡೆದೆವು
ಅಕ್ಕ ಮಹಾದೇವಿಯನ್ನು
ಅಕ್ಕನಾಗಿ ನೆನೆದೆವು.
ಕನ್ನಡಿಗರ ಸಂಸಾರವೆ
ಕವಿಯಾಗಲಿ—ಎಂದು
ಚೆನ್ನುಡಿಯಿಂದಲಿ ನಮ್ಮನು
ಹರಸು ತಾಯಿ—ಯಿಂದು ॥

—ಬಿ. ನಳಿನಿಕುಮಾರಿ ಕಾಸರಗೋಡು.

## ಸೂಚನೆ

ಲೇಖನಗಳು, ಅಸ್ಪಷ್ಟ ರೀತಿಯಲ್ಲಿ ಬರೆದವು ಬರುತ್ತಿದ್ದು, ಮುದ್ರಣ ಕಾರ್ಯಕ್ಕೆ ತುಂಬಾ ತೊಂದರೆಯಾಗುತ್ತದೆ. ಲೇಖಕರು ಸುಸ್ಪಷ್ಟ ರೀತಿಯಲ್ಲಿ ಬರೆದ ಲೇಖಗಳನ್ನು ಸಂಪಾದಕರ ವಿಳಾಸಕ್ಕೆ ಕಳುಹಿಸಬೇಕು.

* ಇನ್ನೂ ವರೆಗೂ ಚಂದಾ ಹಣವನ್ನು ಕಳಿಸದ ಚಂದಾದಾರರು ಅದನ್ನು ಕೂಡಲೆ ಕಾರ್ಯದರ್ಶಿ 'ವೀರಮಾತೆ' ವನಿತಾ ಸೇವಾ ಸಮಾಜ, ಧಾರವಾಡ. ಈ ವಿಳಾಸಕ್ಕೆ ಚಂದಾಹಣವನ್ನು ಕಳುಹಿಸಿಕೊಡಬೇಕು.

* ಚಂದಾದಾರರು, ತಮ್ಮ ವಿಳಾಸ ಬದಲಾದಲ್ಲಿ, ಹಾಗೆ ತಿಳಿಸಿದರೆ, 'ವೀರಮಾತೆ' ಯು ತ್ವರಿತವಾಗಿ ಮುಟ್ಟುವಂತೆ ದಕ್ಷತೆ ವಹಿಸಲಾಗುವದು.

* ಲೇಖಕರು ಅಥವಾ ವಾಚಕರು, ಲೇಖ ಕಳಿಸುವದಾಗಲಿ ಉಳಿದ ಯಾವದೇ ಪತ್ರವ್ಯವಹಾರ ಮಾಡುವಾಗ ತಮ್ಮ ವಿಳಾಸವನ್ನು ಸ್ಪಷ್ಟ ರೀತಿಯಲ್ಲಿ ಬರೆದು ತಿಳಿಸಲು ಮರೆಯಬಾರದು.

* ಹೊಸದಾಗಿ ಚಂದಾದಾರರಾಗಬಯಸುವವರು, ಚಂದಾ ಹಣವನ್ನು ಮೊದಲು ಕೊಟ್ಟು ಕಳಿಸಿದರೆ, ಮಾಸಿಕವನ್ನು ಅವರ ವಿಳಾಸಕ್ಕೆ ಕಳಸುವತ್ತ ಗಮನಿಸಲಾಗುವದು.

* ಸೋದರ, ಸೋದರಿಯರು, ಅಕ್ಕನಟ್ಟಿಗೆಯ ವಿಭಾಗದಲ್ಲಿ ಬರುವ ಸ್ಪರ್ಧೆಗಳಿಗೆ ಉತ್ತರಗಳನ್ನು ಪ್ರತಿತಿಂಗಳ ೧೦ ನೇ ತಾರೀಖಿನ ಒಳಗಾಗಿ ಕಳುಹಿಸಬೇಕು.

* * * * * *

---

'ಸಮಾನಾಧಿಕಾರ' ಕೃತಿಯಲ್ಲಿ ಬರಬೇಕಿದ್ದರೆ
ಮಹಿಳೆಯರ 'ಬೌದ್ಧಿಕ ಉನ್ನತಿ' ಅತ್ಯವಶ್ಯವಾದುದು
ಜ್ಞಾನ, ಮನೋರಂಜನೆಗಾಗಿ ವಿವಿಧ ಲೇಖಗಳಿದ್ದ
ಪ್ರಗತಿಪರ ವಿಚಾರಗಳಿಂದೊಡಗೂಡಿದ
ಮಹಿಳೆಯರ ಮಾಸಪತ್ರಿಕೆ

# ವೀರಮಾತೆ

ಇಂದೇ ಚಂದಾದಾರರಾಗಿರಿ

ಸಂಪಾದಕರು :— ಪ್ರೊ. ಸರೋಜನಿ ಮಹಿಷಿ,
ಎಂ. ಎ., ಎಲ್ ಎಲ್. ಬಿ

ಸ್ತ್ರೀಯರ ವಿಕಾಸಕ್ಕಾಗಿ ಮೀಸಲಾಗಿಟ್ಟ
ಮಾಸಪತ್ರಿಕೆ

ವಾರ್ಷಿಕ ಚಂದಾಹಣ ೫ ರೂಪಾಯಿ
ಬಿಡಿಸಂಚಿಕೆ ೩೭ ನ.ಪೈ. ಮಾತ್ರ

ಮನೆಮನೆಯಲ್ಲಿಯೂ ಸುಖಸಂತೋಷಗಳನ್ನು
ಬೀರಬಲ್ಲ ಕನ್ನಡ ಮಾಸಪತ್ರಿಕೆ

[ ಮುಂಬಯಿ, ಮೈಸೂರು ಮತ್ತು ಮದ್ರಾಸ
ಸರಕಾರಗಳಿಂದ ಮಾನ್ಯತೆ ದೊರೆತಿದೆ.]

ವಿಳಾಸದಾರರು ದೊರೆಯದಿದ್ದಲ್ಲಿ
ಕಳುಹಿಸಬೇಕಾದ ವಿಳಾಸ :—
" ವೀರಮಾತೆ " ಕಾರ್ಯಾಲಯ
ವನಿತಾ ಸೇವಾ ಸಮಾಜ
ಪುರಾಣಿಕ ರೋಡ
ಧಾರವಾಡ

ADDRESS

ಶ್ರೀ.

ಮುದ್ರಕರು : ಶ್ರೀಯುತ ಕುಲಕರ್ಣಿ ರಾಮರಾಯರು
ಸ್ಥಳ : ವನಿತಾ ಪ್ರಿಂಟಿಂಗ ಪ್ರೆಸ್, ಧಾರವಾಡ
ಪ್ರಕಾಶಕರು : ಶ್ರೀ. ಲ. ರಂ. ಪುರಾಣಿಕ
ಸ್ಥಳ : ವನಿತಾ ಸೇವಾ ಸಮಾಜದಲ್ಲಿಯ ಕಾರ್ಯಾಲಯ, ಧಾರವಾಡ

